ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ–೭೭

ಪ್ರಧಾನ ಸಂಪಾದಕ

ಡಾ॥ ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್

# ಪ್ರವಾಸಿ ಕಂಡ ಇಂಡಿಯಾ

(ಸಂಪುಟ [illegible])

ಎಚ್. ಎಲ್. ನಾಗೇಗೌಡ





೧೯೭೫

ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಕನ್ನಡ ಗ್ರಂಥಮಾಲೆ–೭೭

ಪ್ರಧಾನ ಸಂಪಾದಕರು
ಡಾ. ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ಪ್ರವಾಸಿ ಕಂಡ ಇಂಡಿಯಾ

(ಐದನೆಯ ಸಂಪುಟ)

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೭೭

ಪ್ರಧಾನ ಸಂಪಾದಕ

ಡಾ॥ ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್

# ಪ್ರವಾಸಿ ಕಂಡ ಇಂಡಿಯಾ

(ಸಂಪುಟ ೫)

ಎಚ್. ಎಲ್. ನಾಗೇಗೌಡ




೧೯೭೫

PRAVASI KANDA INDIA : Fifth volume by Sri H. L. Nagegowda, first published in 1975 by the Director, Prasaranga, University of Mysore, Manasagangotri, Mysore-570012.

Demy Octavo pp. xvi+530

*Price :* Ordinary Rs. 18-00 Special Rs. 25-00





ಬೆಲೆ :

ಸಾಧಾರಣ ಪ್ರತಿ : ರೂ. 18-00

ಉತ್ತಮ ಪ್ರತಿ : ರೂ. 25-00



ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ
ಮಾನಸ ಗಂಗೋತ್ರಿ, ಮೈಸೂರು-೫೭೦೦೦೬

ಮುದ್ರಕರು
ಶ್ರೀ ಮೀರಾ ಪ್ರಿಂಟರ್ಸ್
ಶಿವರಾಂಪೇಟೆ, ಮೈಸೂರು-೫೭೦೦೦೧

# ಮುನ್ನುಡಿ

ಪ್ರಾಚ್ಯ ಪಾಶ್ಚಾತ್ಯ ಶಿಕ್ಷಣತಜ್ಞರು ಕೂಲಂಕಶವಾಗಿ ವಿಚಾರ ನಡೆಸಿ ಪ್ರಾದೇಶಿಕ ಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು ಎಂದು ಒಮ್ಮತದ ತೀರ್ಮಾನ ನೀಡಿರುವುದು ಸರ್ವ ವಿದಿತವಾಗಿದೆ. ಈ ನಿರ್ಧಾರವನ್ನು ಕೈಗೊಳ್ಳುವುದರಿಂದ ಮಾತ್ರವೇ ವಿದ್ಯಾಭ್ಯಾಸಕ್ಕೆ ಉಜ್ವಲವಾದ ಭವಿಷ್ಯವಿದೆ. ಎಂಬುದನ್ನು ಮನಗಂಡ ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ನಿಟ್ಟಿನಲ್ಲಿ ದಿಟ್ಟತನದಿಂದ ಹೆಜ್ಜೆಯಿಡುತ್ತಿವೆ. ಕೇಂದ್ರ ಸರಕಾರವು ಪ್ರಾದೇಶಿಕ ಭಾಷೆಗಳಲ್ಲಿ ಪಠ್ಯಪುಸ್ತಕಗಳು, ಸಹಾಯಕ ಗ್ರಂಥಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾಗಲಿ ಎಂಬ ಆಶಯದಿಂದ ಪ್ರತಿಯೊಂದು ರಾಜ್ಯ ಸರಕಾರದ ಮೂಲಕವೂ ಅಲ್ಲಿನ ವಿಶ್ವವಿದ್ಯಾನಿಲಯಗಳಿಗೆ ಒಂದು ಕೋಟಿ ರೂಪಾಯಿಗಳ ಸಹಾಯ ಧನವನ್ನು ನೀಡುವ ತೀರ್ಮಾನವನ್ನು ಕೈಗೊಂಡಾಗಿದೆ. ಆ ಹಣದ ವಿತರಣ ಕಾರ್ಯವೂ ಪ್ರಾರಂಭವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯ ಕಳೆದ ಅನೇಕ ದಶಕಗಳಿಂದಲೂ ಈ ದಿಕ್ಕಿನಲ್ಲಿ ಗಣನೀಯವಾದ ಸಾಧನೆ ನಡೆಸಿದೆ. ಇಲ್ಲಿನ ಅನೇಕ ಕಾಲೇಜುಗಳಲ್ಲಿ ಅನೇಕ ವರ್ಷಗಳ ಹಿಂದೆಯೆ ಕನ್ನಡ ಮಾಧ್ಯಮ ತೆರೆಯಲಾಯಿತು. ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡ ಮಾಧ್ಯಮ ಆರಿಸಿಕೊಂಡು ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳಿಗಿಂತ ಉನ್ನತ ಮಟ್ಟದ ಪರಿಣತಿ ಪಡೆಯುವುದು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಮೈಸೂರಿನ ಒಂದು ಕಾಲೇಜಿನಲ್ಲಿ ಕನ್ನಡ ಮಾಧ್ಯಮವನ್ನು ಪ್ರಾರಂಭಿಸಿದ ವರ್ಷವೇ ಅದನ್ನು ಆರಿಸಿಕೊಂಡವರಲ್ಲಿ ನೂರಕ್ಕೆ ನೂರು ಜನ ತೇರ್ಗಡೆ ಹೊಂದಿದರು ಎಂಬುದನ್ನು ನೆನೆಯುವುದರಲ್ಲಿ ಹೆಚ್ಚಿನ ವಿವೇಕವಿದೆ. ಅದರ ಮರುವರ್ಷದಿಂದಲೂ ಆ ಕಾಲೇಜಿನ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಶೇಕಡಾ ೯೦ಕ್ಕೆ ಕಡಮೆಯಿಲ್ಲದಂತೆ ತೇರ್ಗಡೆ ಹೊಂದುತ್ತಲೆ ಬಂದಿದ್ದಾರೆ. ಅದೇ ಕಾಲೇಜಿನಲ್ಲಿ ಇಂಗ್ಲಿಷ್ ಮಾಧ್ಯಮ ಆರಿಸಿಕೊಂಡವರು ಶೇಕಡಾ ಮೂವತ್ತು ಮೂವತ್ತೈದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ತೇರ್ಗಡೆ ಹೊಂದುತ್ತಿಲ್ಲ ಎಂಬುದೂ ಗಮನಿಸಬೇಕಾದ ವಿಷಯ.

ಈಗಂತೂ ವಿಶ್ವವಿದ್ಯಾನಿಲಯದ ಮೊದಲನೆಯ ತರಗತಿಯಿಂದ ಹಿಡಿದು ಎಂ.ಎ., ಎಂ.ಎಸ್‌ಸಿ., ಮುಂತಾದ ಸ್ನಾತಕೋತ್ತರ ತರಗತಿಯವರೆಗೂ ಪರೀಕ್ಷೆಗಳಲ್ಲಿ ವಿದ್ಯಾರ್ಥಿ

ಗಳು, ಅವರು ಯಾವುದೇ ಭಾಷೆಯ ಮೂಲಕ ಶಿಕ್ಷಣ ಪಡೆದಿದ್ದರೂ, ಕನ್ನಡದಲ್ಲಿ ಉತ್ತರ ಬರೆಯಬಹುದು ಎಂದು ವಿಶ್ವವಿದ್ಯಾನಿಲಯು ಅಪ್ಪಣೆ ಹೊರಡಿಸಿದೆ. ಅದರ ಪ್ರಕಾರ ಕೆಲವು ವಿದ್ಯಾರ್ಥಿಗಳು ಸ್ನಾತಕೋತ್ತರ ಪರೀಕ್ಷೆಗಳಲ್ಲೂ ಕನ್ನಡದಲ್ಲೆ ಉತ್ತರ ಬರೆದು ಪ್ರಶಂಸನೀಯವಾದ ಫಲಿತಾಂಶಗಳನ್ನು ತೋರಿಸುತ್ತಿದ್ದಾರೆ.

ಪಠ್ಯಪುಸ್ತಕಗಳ ಅಭಾವ ಎಂಬುದು ಹಳಸಿದ ಮಾತಾಗಿ ಪರಿಣಮಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ತನ್ನ ಪ್ರಸಾರಾಂಗದ ಮೂಲಕ ಅನೇಕ ಪಠ್ಯಪುಸ್ತಕಗಳನ್ನು ವಿದ್ವಾಂಸರಿಂದ ಬರೆಸಿ ಪ್ರಕಟಿಸಿದೆ. ಈ ಮಹೋನ್ನತ ಕಾರ್ಯದಲ್ಲಿ ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳು ಹಿಂದೆಂದೂ ಕಾಣದ ಭವ್ಯ ಪ್ರಮಾಣದಲ್ಲಿ ಕಾರ್ಯೋನ್ಮುಖವಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಈಗಾಗಲೇ ನೂರಾರು ಸ್ನಾತಕ ಮತ್ತು ಸ್ನಾತಕೋತ್ತರ ಮಟ್ಟದ ಪಠ್ಯ ಪುಸ್ತಕಗಳನ್ನೂ ಸಹಾಯಕ ಗ್ರಂಥಗಳನ್ನೂ ನೂರಾರು ಜನ ಘನ ವಿದ್ವಾಂಸರ ನೆರವಿನಿಂದ ಸೃಷ್ಟಿಸುತ್ತಿದೆ. ಇತರ ವಿಶ್ವವಿದ್ಯಾನಿಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳು ಇಂತಹ ಒಂದು ಶ್ಲಾಘನೀಯವಾದ ಉದ್ಯಮದಲ್ಲಿ ತೊಡಗಿವೆ. ಬೆಂಗಳೂರಿನ ಕೃಷಿ ವಿಶ್ವ ವಿದ್ಯಾನಿಲಯವೂ ಈ ನಿಟ್ಟಿನಲ್ಲಿ ಕಾರ್ಯವನ್ನು ಪ್ರಾರಂಭಿಸಿರುವುದು ಸ್ವಾಗತಾರ್ಹವಾಗಿದೆ.

ಮಹಾತ್ಮಾ ಗಾಂಧೀಜಿಯವರು—ಭಾರತದ ಜನಕೋಟಿಯೊಂದಿಗೆ ಮತ್ತು ಅವರ ಸಮಸ್ಯೆಗಳೊಂದಿಗೆ ಅವರಷ್ಟು ನಿಕಟವಾದ ಪರಿಚಯವನ್ನು ಹೊಂದಿ, ಅವರಿಗಾಗಿಯೇ ಬಾಳಿದ ಶಿಕ್ಷಣತಜ್ಞರು ಮತ್ತೊಬ್ಬರಿರಲಾರರು—ತಮ್ಮ ಖಡ್ಗ ತೀಕ್ಷ್ಣವೂ ತಕತಬದ್ಧವೂ ಆದ ವಾಣಿಯಲ್ಲಿ ಸಾರಿ ಸಾರಿ ಹೇಳಿದರು, ದೇಶ ಭಾಷೆಗಳು ಶಿಕ್ಷಣ ಮಾಧ್ಯಮ ವಾದಾಗಲೇ ಭಾರತದಲ್ಲಿ ವಿದ್ಯಾಭ್ಯಾಸ ಅರ್ಥಪೂರ್ಣವಾಗುತ್ತದೆ ಎಂದು. ಅವರ ಈ ಕೆಲವು ಮಾತುಗಳನ್ನು ಪರಿಭಾವಿಸಬೇಕು.

"....ಗಣಿತ ರೇಖಾಗಣಿತ, ಬೀಜರೇಖಾಗಣಿತ, ರಸಾಯನಶಾಸ್ತ್ರ, ಖಗೋಳ ಶಾಸ್ತ್ರ—ಈ ವಿಷಯಗಳಲ್ಲಿ ಎಷ್ಟನ್ನು ನಾನು ನಾಲ್ಕು ವರ್ಷಗಳಲ್ಲಿ ಕಲಿತೆನೋ ಅಷ್ಟನ್ನೂ ಒಂದು ವರ್ಷದಲ್ಲಿ ಕಲಿಯಬಹುದಾಗಿತ್ತು, ಇಂಗ್ಲಿಷಿನ ಮೂಲಕವಾಗಿಯೇ ಕಲಿಯದೆ ಗುಜರಾತಿಯ ಮೂಲಕ ಕಲಿತಿದ್ದರೆ, ಎಂದು ನಾನು ಈಗ ತಿಳಿದುಕೊಂಡಿದ್ದೇನೆ. ನಾನು ಆ ವಿಷಯಗಳನ್ನು ಗ್ರಹಿಸುವುದು ಇನ್ನೂ ಸುಲಭವಾಗಿರುತ್ತಿತ್ತು, ವಿಶದ ವಾಗಿರುತ್ತಿತ್ತು. ನನ್ನ ಗುಜರಾತಿ ಶಬ್ದಭಂಡಾರ ಇನ್ನೂ ವಿಪುಲವಾಗಿರುತ್ತಿತ್ತು. ನಾನು ಆ ಜ್ಞಾನವನ್ನು ಮನೆಯಲ್ಲಿ ಉಪಯೋಗಿಸಿಕೊಳ್ಳಬಹುದಾಗಿತ್ತು. ಈ ಇಂಗ್ಲಿಷ್ ಮಾಧ್ಯಮ ನನಗೂ ಇಂಗ್ಲಿಷ್ ಶಾಲೆಗಳಲ್ಲಿ ಓದದೆ ಇದ್ದ ನನ್ನ ಮನೆಯ ವರಿಗೂ ನಡುವೆ ದಾಟಲಾಗದ ಅಡ್ಡಗೋಡೆಯನ್ನು ಹಾಕಿತು............ನನ್ನ ಮನೆ ಯಲ್ಲಿಯೇ ನಾನು ಬಲುಬೇಗನೆ 'ಪರಕೀಯ'ನಾಗುತ್ತಲಿದ್ದೆ.

"............ಶಿಕ್ಷಣ ಮಾಧ್ಯಮವನ್ನು ಕೂಡಲೇ, ಎಷ್ಟೇ ವೆಚ್ಚವಾಗಲಿ, ಬದಲಾ

ಯಿಸಿ ಪ್ರಾಂತೀಯ ಭಾಷೆಗಳಿಗೆ ಸರಿಯಾದ ಸ್ಥಾನವನ್ನು ಕೊಡಬೇಕು. ಇದರಿಂದ ಉನ್ನತ ಶಿಕ್ಷಣದಲ್ಲಿ ಸಂಭವಿಸುತ್ತದೆ ಎಂದು ಹೇಳಲಾಗುತ್ತಿರುವ ತಾತ್ಕಾಲಿಕ ಗೊಂದಲ ವನ್ನು ಕೂಡ, ಪ್ರತಿದಿನವೂ ಅಧಿಕವಾಗುತ್ತಿರುವ ದೋಷಯುಕ್ತ ಅಪವ್ಯಯಕ್ಕೆ ಬದ ಲಾಗಿ, ಸ್ವಾಗತಿಸುತ್ತೇನೆ."

ಮಹಾತ್ಮಾ ಗಾಂಧಿಯವರ ಅನೇಕ ರಾಷ್ಟ್ರಹಿತ ಯೋಜನೆಗಳನ್ನು ಮೂಲೆಗುಂಪು ಮಾಡಿ ದೇಶಕ್ಕೆ ಹಾನಿಯನ್ನು ತರುತ್ತಿರುವ ವಿದ್ರೋಹಿಗಳಾದ ಅನೇಕರು ಅವರ ಈ ದೇಶಭಾಷಾ ಮಾಧ್ಯಮದ ಯೋಜನೆಯನ್ನು ಮೂಲೆಗೊತ್ತರಿಸಿದ್ದಾರೆ. ಅದಕ್ಕೆ ಅವರು ಒಡ್ಡುವ ವಾದಗಳು ಹಾಸ್ಯಾಸ್ಪದವಾಗಿವೆ. "ದೇಶಭಾಷೆಗಳಲ್ಲೇ ಶಿಕ್ಷಣ ದೊರಕಿದರೆ ನಮಗೆ ಪರ ಪ್ರಾಂತಗಳಲ್ಲಿ ಕೆಲಸ ಸಿಕ್ಕುವುದು ಹೇಗೆ ?" ಇದು ಅಂಥವರ ಪ್ರಶ್ನೆಗಳಲ್ಲಿ ಒಂದು. ಇಲ್ಲಿಂದ ಪರಪ್ರಾಂತಗಳಿಗೆ ಹೋಗಿಯೋ, ಪರಪ್ರಾಂತಗಳಿಂದ ಇಲ್ಲಿಗೆ ಬಂದೋ ಹಿಂದೆ ಉದ್ಯೋಗ ದೊರಕಿಸಿಕೊಂಡವರು ಹಲವರು. ಆದರೆ ಅವರಿಗೆ ಉದ್ಯೋಗ ಸಿಕ್ಕಿದ್ದು ಅವರ ಇಂಗ್ಲಿಷ್ ಜ್ಞಾನಕ್ಕಾಗಿಯಲ್ಲ, ಅವರಿಗಿದ್ದ ತಾಂತ್ರಿಕ ಮತ್ತಿತರ ವಿಶೇಷ ಜ್ಞಾನಕ್ಕಾಗಿ ಎಂಬುದನ್ನು ಅಂಥವರು ಮರೆಯುತ್ತಾರೆ. ಆಗಲೂ ಇವರು ತಮ್ಮ ಮೇಲಧಿಕಾರಿಗಳೊಂದಿಗೂ, ಕೈಕೆಳಗಿನ ಅಧಿಕಾರಿಗಳೊಂದಿಗೂ ವ್ಯವ ಹಾರಕ್ಕಾಗಿ ಬಳಸುತ್ತಿದ್ದ ಭಾಷೆ ಇಂಗ್ಲಿಷ್ ಅಲ್ಲ ಎಂಬುದನ್ನು ಮರೆಯಬಾರದು. ಯಾವ ಪ್ರಾಂತ್ಯದಲ್ಲಿ ಇವರು ಕೆಲಸ ಮಾಡುತ್ತಿದ್ದರೋ ಆ ಪ್ರಾಂತ ಭಾಷೆಯನು ಮಾತಾಡುವಷ್ಟಾದರೂ ಇವರು ಕಲಿಯಲೇಬೇಕಾಗಿತ್ತು. ಹಾಗೆ ಅವರು ಕಲಿತ ಭಾಷೆಗಳಿಂದಲೇ ಅವರ ದಿನನಿತ್ಯದ ವ್ಯವಹಾರ ಸಾಗುತ್ತಿರುವುದು. ಮತ್ತು ಅವರ ತಾಂತ್ರಿಕಜ್ಞಾನದ ಸರಿಯಾದ ವಿನಿಯೋಗವೂ ನಡೆಯುತ್ತಿರುವುದು. ಇಷ್ಟಾದರೂ ಹೀಗೆ ಹೊರಗೆ ಹೋದ ಜನ ದೇಶಭಾಷಾ ಮಾಧ್ಯಮದ ವಿರುದ್ಧವಾಗಿ ಮಾತನಾಡು ತ್ತಿರುವುದು ಅತ್ಯಂತ ಆಶ್ಚರ್ಯಕರವಾಗಿದೆ.

ಇಷ್ಟಕ್ಕೂ ಹೀಗೆ ಹೊರಗೆ ಹೋಗುತ್ತಿರುವ ತಜ್ಞರ ಸಂಖ್ಯೆಯಾದರೂ ಎಷ್ಟು ? ಬಹುಶಃ ಶೇಕಡಾ ಒಂದಕ್ಕಿಂತಲೂ ಕಡಮೆ. ಹೀಗೆ ನೂರರಲ್ಲಿ ಒಬ್ಬ "ಪ್ರತಿಭಾವಂತ"ನ ಸಲುವಾಗಿ ತೊಂಬತ್ತೊಂಬತ್ತು ಜನರಿಗೆ ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಸ ಬೇಕು ಎಂಬುದು ಖಂಡನಾರ್ಹ.

ಈ ಸಂದರ್ಭದಲ್ಲಿಯೇ ಇನ್ನೂ ಕೆಲವು ಸಂದೇಹಗಳನ್ನು ನಿವಾರಿಸುವುದು ಅಗತ್ಯ. ತ್ರಿಭಾಷಾ ಸೂತ್ರ ಎಂಬುದು, ನಾನು ಹಿಂದೆಯೇ ಅನೇಕ ಕಡೆ ಹೇಳಿರುವಂತೆ, ಭಾರತೀಯ ರಿಗೆ ತ್ರಿಶೂಲಪ್ರಾಯವಾಗುತ್ತದೆ. ಎಲ್ಲರಿಗೂ ಎಲ್ಲ ಭಾಷೆಗಳೂ ಬೇಕಾಗಿಲ್ಲ. ಎಂದರೆ, ಎಲ್ಲರೂ ಇಂಗ್ಲಿಷನ್ನಾಗಲಿ ಹಿಂದಿಯನ್ನಾಗಲಿ ಕಲಿಯಬೇಕಾದದ್ದು ಏಕೆ ? ಯಾರಿಗೆ ಅಗತ್ಯವಿದೆಯೋ ಅಂಥವರು ಅವರಿಗೆ ಅಗತ್ಯವಿರುವ ಭಾಷೆಯನ್ನು ಕಲಿಯ ಬಹುದು. ಇಂತಹ ಭಾಷೆಗಳನ್ನು ಶೀಘ್ರವಾಗಿ ಸಾಹಿತ್ಯದೃಷ್ಟಿಯಿಂದಲ್ಲದ ಭಾಷಾದೃಷ್ಟಿ

ಯಿಂದ ಬೋಧಿಸುವ ಕಾರ್ಯಕ್ಕಾಗಿ ಭಾಷಾ ಸಂಸ್ಥೆಗಳ ಸ್ಥಾಪನೆಯಾಗಿದೆ. ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಆಗಲಿದೆ. ಅಲ್ಲದೆ ತ್ರಿಭಾಷಾಸೂತ್ರವೇ ಏಕೆ ? ಭರತ ಖಂಡಕ್ಕೀಗ ಬೇಕಾಗಿರುವುದು ಬಹುಭಾಷಾಸೂತ್ರ. ನಮ್ಮ ಜನ ಕಲಿಯಬೇಕಾದದ್ದು ಇಂಗ್ಲಿಷ್ ಭಾಷೆಯೊಂದನ್ನು ಮಾತ್ರವಲ್ಲ. ರಷ್ಯನ್, ಜಪಾನೀ, ಜರ್ಮನ್, ಫ್ರೆಂಚ್ ಮುಂತಾದ ಅನೇಕ ಪ್ರೌಢಭಾಷೆಗಳನ್ನು ವೈಜ್ಞಾನಿಕ ಆವಶ್ಯಕತೆಗಳಿಗಾಗಿ ಕಲಿಯ ಬೇಕಾಗಿದೆ.

ತ್ರಿಭಾಷಾ ಸೂತ್ರದ ಅಪಾಯ ಇಷ್ಟಕ್ಕೇ ಸೀಮಿತವಾಗಿಲ್ಲ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ರಾಜಕೀಯ ಕಾರಣಗಳಿಗಾಗಿ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ ವೈಭವವನ್ನು ಏನೂ ಅರಿಯದ ನಮ್ಮ ಹಸುಳೆಗಳ ಮುಂದೆ ವರ್ಣಿಸಿ ಅವರ ಮನಸ್ಸನ್ನು ಅವುಗಳ ಕಡೆಗೇ ಎಳೆದು ದೇಶಭಾಷೆಗಳ ಅಧ್ಯಯನವನ್ನು ಹಿಂದಕ್ಕೊತ್ತರಿಸುವ ಪ್ರಯತ್ನವನ್ನೂ ಮಾಡುತ್ತಿರುವವರು ಅನೇಕರಿದ್ದಾರೆ.

ನನ್ನ ವಾದ ಇದು. ತ್ರಿಭಾಷಾ ಸೂತ್ರ ಎಂಬುದು ಭರತಖಂಡಕ್ಕೆ ಅತ್ಯಂತ ಅಪಾಯಕಾರಿಯಾದದ್ದು. ಅದರ ಸ್ಥಾನದಲ್ಲಿ ಬರಬೇಕಾದದ್ದು ದ್ವಿಭಾಷಾ ಸೂತ್ರ. ಭರತಖಂಡದ ಯಾವ ವಿದ್ಯಾರ್ಥಿಯ ಮೇಲೂ ಯಾವ ಭಾಷೆಯನ್ನೂ ಬಲವಂತ ವಾಗಿ ಹೇರಬಾರದು ಎಂಬುದು ನನ್ನ ವಾದದ ಸಾರಾಂಶ. ಮೇಲೆ ಸೂಚಿಸಿದಂತೆ ಪ್ರಪಂಚದಲ್ಲಿ ನಡೆಯುತ್ತಿರುವ ವಿಜ್ಞಾನ ಮತ್ತು ತಾಂತ್ರಿಕ ಪ್ರಗತಿಯ ಅರಿವಿಗೆ ಇಂಗ್ಲಿಷ್ ಭಾಷೆಯ ಜ್ಞಾನವೊಂದೇ ಸಾಲದು. ಜರ್ಮನ್, ರಷ್ಯನ್ ಮುಂತಾದ ಭಾಷೆಗಳನ್ನೂ ನಮ್ಮ ವಿದ್ಯಾರ್ಥಿಗಳು ಕಲಿಯಬೇಕಾದದ್ದು ಅಗತ್ಯ, ಆದ್ದರಿಂದ ಅನೇಕ ಭಾಷೆಗಳನ್ನು ವಿದ್ಯಾರ್ಥಿಗಳ ಮುಂದೆ ಇಟ್ಟು, ಅವರು ಯಾವುದಾದರೂ ಎರಡು ಭಾಷೆಗಳನ್ನು ಆರಿಸಿಕೊಳ್ಳುವ ಅವಕಾಶವನ್ನು ಅವರಿಗೆ ನೀಡಬೇಕು.

ಶೈಕ್ಷಣಿಕ ದೃಷ್ಟಿಯಿಂದ ಮಾತ್ರವಲ್ಲದೆ ರಾಜಕೀಯವಾಗಿಯೂ ದ್ವಿಭಾಷಾ ಸೂತ್ರವು ತ್ರಿಭಾಷಾ ಸೂತ್ರಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಪ್ರದೇಶ ಪ್ರದೇಶಗಳ ನಡುವಣ ಸ್ವಭಾಷಾಭಿಮಾನಜನ್ಯವಾದ ಭಾಷಾ ಸಮಸ್ಯೆಯನ್ನು ಪರಿಹರಿಸುವುದರಲ್ಲಿ ಸಹಾಯವಾಗುತ್ತದೆ. ಯಾವುದಾದರೂ ಎರಡು ಭಾಷೆಗಳನ್ನು ಆರಿಸಿಕೊಳ್ಳಬಹುದು ಎನ್ನುವುದರಿಂದ ಹಿಂದಿ ಬೇಡ ಎನ್ನುವವರಿಗೆ, ಇಂಗ್ಲಿಷ್ ಬೇಡ ಎನ್ನುವವರಿಗೆ ಅವುಗಳನ್ನು ಬಲಾತ್ಕಾರವಾಗಿ ಹೇರಿದಂತಾಗುವುದಿಲ್ಲ ; ನಿಷೇಧಿಸಿದಂತೆಯೂ ಆಗುವು ದಿಲ್ಲ. ಮಹಾಜನರೇ ಕಾಲಕ್ರಮೇಣ, ತಮ್ಮ ತಮ್ಮ ಅಭಿರುಚಿ ಆವಶ್ಯಕತೆಗಳಿಗೆ ತಕ್ಕಂತೆ, ಹಿಂದಿ ಇಂಗ್ಲಿಷ್ ರಷ್ಯನ್ ಸಂಸ್ಕೃತ ಮೊದಲಾದ ಭಾಷೆಗಳನ್ನು ಯಾವ ಶೇಕಡಾವಾರು ಪ್ರಮಾಣದಲ್ಲಿ ಕಲಿಯಬೇಕೆಂಬುದನ್ನು ತಮಗೆ ತಾವೇ ಗೊತ್ತುಮಾಡಿ ಕೊಳ್ಳುತ್ತಾರೆ.

ಹಿಂದಿಯನ್ನಾದರೂ ಐವತ್ತು ಕೋಟಿ ಭಾರತೀಯರು ಕಲಿಯಬೇಕು ಎನ್ನುವ

ವಾದದಲ್ಲಿ, ಸಾಮ್ರಾಜ್ಯಶಾಹಿಯ ದಬ್ಬಾಳಿಕೆಯ ಮನೋಧರ್ಮವೊಂದನ್ನು ಬಿಟ್ಟರೆ, ಬೇರೆ ಅರ್ಥವಿಲ್ಲ. ಶೇಕಡ ಒಂದರಷ್ಟು ಜನಕ್ಕೆ ಅರ್ಧಂಬರ್ಧ ಇಂಗ್ಲಿಷ್ ಕಲಿಸಿ ಬ್ರಿಟಿಷರು ಇನ್ನೂರು ವರ್ಷಕ್ಕೂ ಮೇಲೆ ಸಮರ್ಥವಾಗಿ ರಾಜ್ಯಭಾರ ನಡೆಸಲಿಲ್ಲವೇ ?

ಆದ್ದರಿಂದ "ಬಹುಭಾಷೆಗಳಲ್ಲಿ ದ್ವಿಭಾಷಾ" ಎಂಬುದೇ ನಮಗಿಂದು ಕ್ಷೇಮಕರ ಸೂತ್ರವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯವು ದ್ವಿಭಾಷಾ ಸೂತ್ರವನ್ನು ಅಂಗೀಕರಿಸಿ, ಇಡೀ ಭಾರತಕ್ಕೆ ಮಾರ್ಗದರ್ಶನ ನೀಡಿ, ಅಗ್ರೇಸರ ಸ್ಥಾನದಲ್ಲಿ ನಿಂತಿರುವುದು ನಮಗೆಲ್ಲ ಅಭಿಮಾನದ ಸಂಗತಿ.

ಅಧಿಕೃತ ರಾಷ್ಟ್ರಭಾಷೆಯ ಪ್ರಶ್ನೆ ಬರುತ್ತದೆ. ಅಖಂಡ ಭಾರತಕ್ಕೆ ಒಂದು ರಾಷ್ಟ್ರಭಾಷೆ ಅಗತ್ಯ. ಬಹುಜನರು ಯಾವುದು ರಾಷ್ಟ್ರಭಾಷೆಯೆಂದು ತೀರ್ಮಾನಿಸುತ್ತಾರೋ ಅದನ್ನು ವ್ಯವಹಾರಮಟ್ಟಗೆ, ಎಲ್ಲರೂ ಅಲ್ಲ, ಅವಶ್ಯವಿದ್ದಷ್ಟು ಜನರು ಅವರೇ ನಿರ್ಣಯಿಸಿಕೊಂಡರೆ, ಕಲಿಯುವುದು ಸೂಕ್ತ. ಆದರೆ ಅದನ್ನು ಕೂಡ ವಿದ್ಯಾರ್ಥಿಗಳ ಆಯ್ಕೆಗೆ ಬಿಡಬೇಕೆಂಬುದೇ ನನ್ನ ಅಭಿಪ್ರಾಯ.

ಇನ್ನೊಂದು ವಾದವನ್ನು ಮುಂದೊಡ್ಡುವ ಜ್ಞಾನಿಗಳ ಒಂದು ಗುಂಪಿದೆ. ಅದು ಒಂದು ಪ್ರಾಂತದ ವಿಶ್ವವಿದ್ಯಾನಿಲಯ ಮತ್ತೊಂದು ಪ್ರಾಂತದ ವಿಶ್ವವಿದ್ಯಾನಿಲಯದ ಅಧ್ಯಾಪಕರನ್ನು ನೇಮಕಮಾಡಿಕೊಳ್ಳುವ ವಿಷಯ. ನನ್ನ ವಿಶ್ವವಿದ್ಯಾನಿಲಯದ ಸೇವೆಯ ದೀರ್ಘ ಇತಿಹಾಸದಲ್ಲಿ ಹೊರಗಿನ ವಿಶ್ವವಿದ್ಯಾನಿಲಯಗಳಿಂದ ಇಲ್ಲಿಗೆ ಆಹ್ವಾನಿಸಿದ ಪ್ರತಿಭಾಪುರುಷರ ಸಂಖ್ಯೆ ಕೈಬೆರಳುಗಳಲ್ಲಿ ಎಣಿಸಬಹುದಾದಷ್ಟು. ಇಲ್ಲಿಂದ ಬೇರೆ ವಿಶ್ವವಿದ್ಯಾನಿಲಯಗಳಿಗೆ ಹೋದವರ ಸಂಖ್ಯೆಯೂ ಇದಕ್ಕಿಂತ ಹೆಚ್ಚಿನದಾಗಿರಲಾರದು. ಈಗಂತೂ ಪ್ರತಿಯೊಂದು ಪ್ರಾಂತವೂ ತನ್ನಲ್ಲಿಯ ಪ್ರತಿಭಾಶಾಲಿಗಳಿಗೇ ಉದ್ಯೋಗ ಒದಗಿಸಲು ಅಸಮರ್ಥವಾಗಿರುವಾಗ ಇನ್ನು ಹೊರ ಪ್ರಾಂತಗಳಿಂದ ಪ್ರತಿಭಾವಂತರನ್ನು ಸ್ವಾಗತಿಸಿ ಅವರನ್ನು ಪೀಠಗಳಲ್ಲಿ ಪ್ರತಿಷ್ಠಾಪಿಸುವ ಮಾತು ಎಲ್ಲಿಂದ ಬಂತು ? ಒಂದು ವೇಳೆ ಅಂತಹ ಪ್ರಸಂಗ ಒದಗಿದರೆ ಹೀಗೆ ತಮ್ಮ ತಮ್ಮ ವಿಷಯಗಳಲ್ಲಿ 'ವಿಶೇಷ ಪ್ರತಿಭಾವಂತ'ರಾಗಿರುವರು ಬೇರೆ ಪ್ರಾಂತದ ಭಾಷೆಯನ್ನು ವ್ಯವಹಾರದ ಮಟ್ಟಿಗಾದರೂ ಶೀಘ್ರವಾಗಿ ಕಲಿತುಕೊಳ್ಳುವ ಶಕ್ತಿಯನ್ನೂ ಪಡೆದೇ ಇರುತ್ತಾರೆ. ಆದುದರಿಂದ ಇಂತಹ ಅಪೂರ್ವ ಪ್ರಸಂಗಗಳನ್ನು ಎದುರಿಸಲು, ಅಂದರೆ ಲಕ್ಷದಲ್ಲಿ ಒಬ್ಬರಿಗೆ ಅನುಕೂಲ ಮಾಡಿಕೊಡಲು, ಲಕ್ಷಾಂತರ ಜನರನ್ನು ಇಂಗ್ಲಿಷಿನ ಬಲಿಪೀಠದ ಮೇಲೆ ವಧೆ ಮಾಡುವುದು ಸರಿಯಲ್ಲವೆಂಬುದು ಸ್ಪಷ್ಟ.

ಅಲ್ಲದೆ ಈಗ ವಾದಮಾಡುತ್ತಿರುವವರಲ್ಲಿ ಅನೇಕರದು ಅರ್ಧ ಶತಮಾನದ ಹಿಂದಿನ ಜ್ಞಾನ. ಐವತ್ತು ವರ್ಷಗಳ ಹಿಂದೆ ನಾವೆಲ್ಲ ವಿದ್ಯಾರ್ಥಿಗಳಾಗಿದ್ದಾಗ ಕೂಡ ಜ್ಞಾನದ ಪ್ರಮುಖ ಶಾಖೆಗಳಿಗೆಲ್ಲ ಪ್ರವೇಶವಿದ್ದದ್ದು ಇಂಗ್ಲಿಷ್ ಭಾಷೆಯ ಮೂಲಕವೇ. ಈಗ

ಹಾಗಲ್ಲ. ನನಗೆ ತಿಳಿದಂತೆ ಕನ್ನಡದ ಮೂಲಕವಾಗಿ ಜ್ಞಾನದ ಯಾವ ಶಾಖೆಯನ್ನಾದರೂ ಪರಿಚಯ ಮಾಡಿಕೊಳ್ಳುವಂತೆ ಗ್ರಂಥರಚನೆ ಕನ್ನಡದಲ್ಲಿ ನಡೆದಿದೆ. ಮೈಸೂರು ವಿಶ್ವ ವಿದ್ಯಾನಿಲಯ ತನ್ನ ಪ್ರಸಾರಾಂಗದ ಮೂಲಕ ಪ್ರಕಟಿಸಲಿರುವ "ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿ" ಹೊರಬಂದಾಗ ಈ ಮಾತಿನ ಅರ್ಥ ಮನದಟ್ಟಾದೀತು.

ಮಹಾತ್ಮಾ ಗಾಂಧೀಜಿಯವರು ಸಾರಿ ಸಾರಿ ಹೇಳಿದಂತೆ, ಇತರ ಶಿಕ್ಷಣತಜ್ಞರು ತರ್ಕಬದ್ಧವಾಗಿ ಮಂಡಿಸಿ ಪ್ರತಿಪಾದಿಸಿದಂತೆ, ದೇಶಭಾಷೆಗಳಲ್ಲಿ ಶಿಕ್ಷಣ ದೊರೆಯದಿದ್ದರೆ, ಈಗಾಗುತ್ತಿರುವಂತೆ, ವಿದ್ಯಾಭ್ಯಾಸ ಮರಳಿನಮೇಲೆ ಕಟ್ಟಿದ ಸೌಧವಾಗುತ್ತದೆ. ವಿಜ್ಞಾನ ವನ್ನೂ ತಾಂತ್ರಿಕ ಜ್ಞಾನವನ್ನೂ ಕನ್ನಡದಲ್ಲಿ ಹೇಳಲಾಗುವುದಿಲ್ಲ ಎಂಬುದು ಮಂದಮತಿ ಗಳ, ಆಲಸ ದುರ್ಬಲರ ಮತ್ತು ವಿದ್ಯಾದ್ರೋಹಿಗಳ ಕನವರಿಕೆ ಮತ್ತು ಅತ್ಯಂತ ಹಾಸ್ಯಾಸ್ಪದವಾದ ತಲೆಹರಟೆ ಎಂಬುದನ್ನು ನಮ್ಮ ವಿದ್ವಾಂಸರು ತಮ್ಮ ಕನ್ನಡ ವೈಜ್ಞಾನಿಕ ಮತ್ತು ಮಾನವಿಕ ಗ್ರಂಥಗಳ ಮೂಲಕ ಸಾರಿ ಹೇಳಿದ್ದಾಗಿದೆ. ಪಾರಿಭಾಷಿಕ ಪದಗಳ ಅಭಾವವೇ ಪಠ್ಯಪುಸ್ತಕ ರಚನೆಗೆ ಮತ್ತು ಪ್ರಾದೇಶಿಕ ಭಾಷೆಗಳಲ್ಲಿ ವಿದ್ಯೆಯನ್ನು ಬೋಧಿಸು ವುದಕ್ಕೆ ಇರುವ ದೊಡ್ಡ ಅಡ್ಡಿ ಎಂಬ ಪೇಲವವಾದ ಹೇಳಿಕೆಗಳನ್ನು ಇನ್ನು ಮುಂದೆ ಗಮನಕ್ಕೆ ತೆಗೆದುಕೊಳ್ಳಬೇಕಾದದ್ದೇ ಇಲ್ಲ. ಅದಷ್ಟುಮಟ್ಟಿಗೆ ಅಂತರರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಹಾಗೆಯೇ ಉಳಿಸಿಕೊಳ್ಳುವುದು ಸಾಧ್ಯ ಎಂಬುದನ್ನು, ಅವಕ್ಕೆ ತದ್ಭವ-ತತ್ಸಮಗಳನ್ನು ಸ್ವಲ್ಪ ಶ್ರಮದಿಂದ ಸೃಷ್ಟಿಸುವುದೂ ಸಾಧ್ಯ ಎಂಬುದನ್ನು ನಮ್ಮ ವಿಜ್ಞಾನ ಲೇಖಕರು ತೋರಿಸಿಕೊಟ್ಟಿದ್ದಾರೆ. ಪ್ರಬುದ್ಧ ಕರ್ಣಾಟಕವು ತನ್ನ ಚಿನ್ನದ ಹಬ್ಬದ ಸಂದರ್ಭದಲ್ಲಿ ಪ್ರಕಟಿಸಿರುವ ೧೬೦೦ ಪುಟಗಳ ವಿಜ್ಞಾನ ವಿಶೇಷಾಂಕ ಇಂತಹ ಎಲ್ಲ ಸಮಸ್ಯೆಗಳಿಗೂ ಸಶಕ್ತವೂ ಸಚಿತ್ರವೂ ಆದ ಪರಿಹಾರ ರೂಪವಾಗಿ ನಿಂತಿದೆ.

ತನ್ನ ಅನೇಕ ಮಾಲಿಕೆಗಳ ಮೂಲಕ ಪ್ರಸಾರಾಂಗ ವಿಶ್ವವಿದ್ಯಾನಿಲಯದ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಅನೇಕ ಸಹಾಯಕ ಗ್ರಂಥಗಳನ್ನು ಒದಗಿಸುವುದರ ಜೊತೆಗೆ ಜನಸಾಮಾನ್ಯರ ಜ್ಞಾನತೃಷೆಯನ್ನು ಪೂರೈಸುವುದಕ್ಕಾಗಿ ಕೂಡ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಿದೆ.

ಈಗ ಹೊರಬರುತ್ತಿರುವ ಶ್ರೀ ಎಚ್. ಎಲ್. ನಾಗೇಗೌಡರ "ಪ್ರವಾಸಿ ಕಂಡ ಇಂಡಿಯಾ" ಕೃತಿಯ ಐದನೆಯ ಸಂಪುಟವು ಓದುಗರಿಗೆ ತುಂಬ ಪ್ರಿಯವಾಗುತ್ತದೆಂದು ಆಶಿಸುತ್ತೇನೆ.

ಕೆ. ವಿ. ಪುಟ್ಟಪ್ಪ
ಪ್ರಧಾನ ಸಂಪಾದಕ

# ಪ್ರಸ್ತಾವನೆ

ಇದು 'ಪ್ರವಾಸಿ ಕಂಡ ಇಂಡಿಯಾ'ದ ಐದನೇ ಸಂಪುಟ. ಮೊಗಲ್ ಚಕ್ರವರ್ತಿಗಳಾದ ಷಾಜಹಾನ ಕಾಲವಾದನಂತರ ಮತ್ತು ಔರಂಗಜೇಬನ ಆಳ್ವಿಕೆಯ ಆರಂಭದಲ್ಲಿ ಈ ದೇಶಕ್ಕೆ ಬಂದುಹೋದ ಬೆರ್‌ನ್ಯೇ ಮತ್ತು ಟಾವೆರ್‌ನ್ಯೇ ಎಂಬಿಬ್ಬರು ಫ್ರೆಂಚ್ ಪ್ರವಾಸಿಗಳ ಅಮೂಲ್ಯ ಕಥನಗಳು ಈ ಸಂಪುಟದಲ್ಲಿ ಬರುತ್ತವೆ. ಈ ಇಬ್ಬರು ಪ್ರವಾಸಿಗಳು ಫ್ರೆಂಚ್ ಪ್ರವಾಸಿಗಳಲ್ಲಷ್ಟೇ ಅಲ್ಲ, ಇಡೀ ಪ್ರವಾಸಿಗರ ತಂಡದಲ್ಲೇ ಬಹು ಮುಖ್ಯರೆಂದು ಪರಿಗಣಿಸಲ್ಪಟ್ಟವರಾಗಿದ್ದಾರೆ.

ಬೆರ್‌ನ್ಯೇ ವೈದ್ಯನಾಗಿ ಈ ದೇಶಕ್ಕೆ ೧೬೫೮ರಲ್ಲಿ ಬಂದು ೧೬೬೭ರಲ್ಲಿ ಸ್ವದೇಶಕ್ಕೆ ಹಿಂದಿರುಗಿದ. ಟಾವೆರ್‌ನ್ಯೇ ವಜ್ರ ವ್ಯಾಪಾರಿಯಾಗಿ ೧೬೪೧ ರಿಂದ ೧೬೬೬ರೊಳಗೆ ಈ ದೇಶಕ್ಕೆ ಆರು ಸಲ ಬಂದು ವಾಪಸಾದ. ಇಬ್ಬರೂ ಷಾಜಹಾನ ಮುದುಕನಾದ ಮೇಲೆ ಸಿಂಹಾಸನಕ್ಕೆ ಅವನ ನಾಲ್ಕು ಮಕ್ಕಳಲ್ಲಿ ಆದ ಹೋರಾಟದ ವರ್ಣನೆ ಮಾಡುತ್ತಾರೆ. ಅಷ್ಟೇ ಅಲ್ಲದೆ ಅವರು ಷಾಜಹಾನನಿಗಿಂತ ಹಿಂದಿನ ಮೊಗಲ್ ಚಕ್ರವರ್ತಿಗಳ ಇತಿಹಾಸವನ್ನೂ ಸಂಕ್ಷೇಪವಾಗಿ ಹೇಳುತ್ತಾರೆ. ಔರಂಗಜೇಬನು ಚಕ್ರವರ್ತಿಯಾಗಿ ಸಿಂಹಾಸನವನ್ನೇರಿದುದನ್ನೂ, ಅವನ ಕಾಲದಲ್ಲಿ ಬಂದ ಪರದೇಶದ ರಾಯಭಾರಿಗಳ ವಿಚಾರವನ್ನೂ ವರ್ಣಿಸುತ್ತಾರೆ. ಜೊತೆಗೆ ಆ ಕಾಲದ ಅನೇಕ ಸಂಗತಿಗಳನ್ನು, ಅಂದರೆ ಆರ್ಥಿಕ ಪರಿಸ್ಥಿತಿ, ಹಣಕಾಸಿನ ವಿಚಾರ, ತೂಕ ಅಳತೆಗಳ ವಿಷಯ–ಇವೆಲ್ಲವನ್ನೂ ಹೇಳುತ್ತಾರೆ. ಬೆರ್‌ನ್ಯೇ ಔರಂಗಜೇಬನೊಡನೆ ಕಾಶ್ಮೀರಕ್ಕೂ ಹೋಗಿಬರುತ್ತಾನೆ. ಟಾವೆರ್‌ನ್ಯೇ ತನ್ನ ರತ್ನಪಡಿ ವ್ಯಾಪಾರಕ್ಕಾಗಿ ವಜ್ರದ ಗಣಿಗಳನ್ನು ಹುಡುಕಿಕೊಂಡು ಕೊಲ್ಲೂರು ಮತ್ತು ಗಂಗಾ ನದಿಯ ಪ್ರದೇಶಗಳಿಗೆ ಭೇಟಿಕೊಡುತ್ತಾನೆ. ಬೆರ್‌ನ್ಯೇ ತಾನು ಬರೆದ ಪತ್ರವೊಂದರಲ್ಲಿ ಭೂಮಾಲಿಕತ್ವದ ವಿಚಾರವನ್ನು ದೀರ್ಘವಾಗಿಯೇ ಚರ್ಚಿಸಿ ತನ್ನ ಖಚಿತ ಅಭಿಪ್ರಾಯ ಸೂಚಿಸುತ್ತಾನೆ. ಒಟ್ಟಿನಲ್ಲಿ ಇವರ ಪ್ರವಾಸ ಕಥನಗಳು ಬಹು ಸ್ವಾರಸ್ಯವಾಗಿವೆ ಹಾಗೂ ಉಪಯುಕ್ತವಾಗಿವೆ.

* * * *

ಇಲ್ಲಿಯವರೆಗೆ ಪ್ರಕಟವಾದ ನಾಲ್ಕು ಸಂಪುಟಗಳು ಸರ್ವರ ಮೆಚ್ಚಿಕೆಗೆ ಪಾತ್ರವಾಗಿವೆಯೆಂಬ ಸಂಗತಿ ಕೇಳಿ ತುಂಬ ಹರ್ಷವಾಗಿದೆ; ಮನಸ್ಸಿಗೆ ತೃಪ್ತಿಯೂ ಆಗಿದೆ.

ಮುಂದಿನ ಸಂಪುಟಗಳನ್ನು ಆದಷ್ಟು ಬೇಗ ಓದುಗರ ಮುಂದಿಡಬೇಕೆಂಬ ತವಕವೂ ಹೆಚ್ಚಾಗಿದೆ. ಇತ್ತೀಚಿನ ಕಾಲಕ್ಕೆ ಬಂದಂತೆ ಪ್ರವಾಸಿಗಳ ಸಂಖ್ಯೆಯೂ ಅವರ ಕಥನದ ವಿವರಗಳೂ ಹೆಚ್ಚಾಗುತ್ತಾ ಹೋಗುತ್ತವೆ. ಒಬ್ಬೊಬ್ಬ ಪ್ರವಾಸಿಯದೇ ಒಂದೊಂದು ಸಂಪುಟವಾಗುವ ಸಂಭವವುಂಟು. ಉದಾಹರಣೆಗೆ, ಮುಂದಿನ ಸಂಪುಟ ಇಟಲಿ ದೇಶದ ಪ್ರವಾಸಿ ಮನೂಚಿಯ ಕಥನಕ್ಕಷ್ಟೇ ಮೀಸಲಾಗುತ್ತದೆ. ಇಂಗ್ಲಿಷ್ ಮೂಲದಲ್ಲಿ ಐದು ಸಂಪುಟಗಳಲ್ಲಿರುವುದನ್ನು ೫೦೦–೬೦೦ ಪುಟಗಳ ಒಂದೇ ಒಂದು ಸಂಪುಟದಲ್ಲಿ ತರಲು ಪ್ರಯತ್ನಿಸಿದೆ. ಆದರೂ ಸಂಪಾದಿಸಿ ಸ್ವಾರಸ್ಯ ಕೆಡದಂತೆ ಉಪಯುಕ್ತವಾದ ಎಲ್ಲ ಸಂಗತಿಗಳು ಬರುವಂತೆ ನಡೆದಿದೆ. ಅಂತೆಯೇ ಮುಂದಿನ ನಾಲ್ಕು ಸಂಪುಟಗಳು. ಇವೆಲ್ಲ ಬಹುಮಟ್ಟಿಗೆ ಸಿದ್ಧವಾಗಿವೆ. ಮುದ್ರಣವು ತ್ವರಿತವಾಗಿ ನಡೆದರೆ ಇನ್ನು ಒಟ್ಟು ಐದಾದರೂ ಸಂಪುಟಗಳನ್ನು ಐದು ವರ್ಷಗಳಲ್ಲಿ ಮುಗಿಸಿ ಕನ್ನಡ ಸಾಹಿತ್ಯವಾಹಿನಿಯಲ್ಲಿ ಕೂಡಿಸಿ ಕೃತಾರ್ಥನಾಗಬೇಕೆಂದಿದ್ದೇನೆ. ಸಂಬಂಧಪಟ್ಟವರೆಲ್ಲರು ನನ್ನಂತೆ ಕಾತುರ ಪಟ್ಟರೆ ಅದು ಸಾಧ್ಯವಾದೀತು.

* * * *

ಈ ಬೃಹದ್ಮಾಲೆಯ ಐದನೇ ಸಂಪುಟವನ್ನು ಪ್ರಕಟಿಸುತ್ತಿರುವ ಮೈಸೂರು ವಿಶ್ವ ವಿದ್ಯಾನಿಲಯ ಹಾಗು ಪ್ರಸಾರಾಂಗದ ಸಮಸ್ತರಿಗೂ ನನ್ನ ಕೃತಜ್ಞತೆಗಳು.

ಹಸ್ತಪ್ರತಿಯನ್ನು ಸಿದ್ಧಪಡಿಸಿಕೊಟ್ಟ ಕುಮಾರ ಎ. ಬಿ. ರಾಮಚಂದ್ರ ಅವರಿಗೂ, ಮೊದಲಿಂದ ಕೊನೆಯವರೆಗೂ ಹಸ್ತಪ್ರತಿಯನ್ನು ಪರಿಷ್ಕರಿಸಿ ಪ್ರೂಫ್ ನೋಡಿ ಉಪಕರಿಸಿದ ಶ್ರೀ ವಿ. ಜಿ. ಕೃಷ್ಣಮೂರ್ತಿಯವರಿಗೂ, ಮುದ್ರಿಸಿಕೊಟ್ಟಿರುವ ಶ್ರೀ ಮೀರಾ ಪ್ರಿಂಟರ್ಸ್‌ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರಿಗೂ, ಉಳಿದೆಲ್ಲ ಸಹೃದಯರಿಗೂ ನನ್ನ ವಂದನೆಗಳು.

'ಶ್ರೀಪಾದ ನಿಲಯ' ಎಚ್. ಎಲ್. ನಾಗೇಗೌಡ
೮, ಕುಮಾರಾ ಪಾರ್ಕ್ ಪಶ್ಚಿಮ, ಬೆಂಗಳೂರು-೨೦.

# ಪರಿವಿಡಿ



# ಚಿತ್ರಗಳು

# ಫ್ರಾನ್‌ಸ್ವಾಸ್ ಬೆರ್‌ನ್ಯೇ

## (ಪರಿಚಯ)

ಮೊಗಲ್ ಚಕ್ರವರ್ತಿ ಔರಂಗಜೇಬನ ಆಡಳಿತದ ಆರಂಭಕಾಲದಲ್ಲಿ ಇಂಡಿಯಾ ದೇಶಕ್ಕೆ ಬಂದ ಫ್ರಾನ್ಸಿನ ಪ್ರವಾಸಿಗರಲ್ಲಿ ಫ್ರಾನ್‌ಸ್ವಾಸ್ ಬೆರ್‌ನ್ಯೇ (Francois Bernier) ಬಹು ಮುಖ್ಯವಾದವನು. ಇವನೂ, ಇನ್ನೊಬ್ಬ ಹೆಸರಾಂತ ಪ್ರವಾಸಿಗ ಟಾವೆರ್‌ನ್ಯೇ (Tavernier) ಎಂಬುವನೂ ಸಮಕಾಲೀನರು ; ಅಲ್ಲದೆ, ಒಮ್ಮೆ ಇಬ್ಬರೂ ಜೊತೆಯಾಗಿ ಪ್ರವಾಸಮಾಡಿದವರು.

ಫ್ರಾನ್‌ಸ್ವಾಸ್ ಬೆರ್‌ನ್ಯೇ ಹುಟ್ಟಿದ್ದು ಫ್ರಾನ್ಸಿನ ಆನ್‌ಷೂ (Anjau) ಪ್ರಾಂತದ ಗೋನೊರ್ (Gonnord) ಎಂಬ ಊರಿನ ಬಳಿ ಇರುವ ಷೂವ್ (Joue) ಎಂಬಲ್ಲಿ. ಹುಟ್ಟಿದ ತಾರೀಖು ಕ್ರಿ.ಶ. ೧೬೨೦ರ ಸೆಪ್ಟೆಂಬರ್ ೨೫ ಅಥವಾ ೨೬. ಆಗ ಫ್ರಾನ್ಸಿನಲ್ಲಿ ೧೩ನೇ ಲುಯಿ, ಇಂಗ್ಲೆಂಡಿನಲ್ಲಿ ಜೇಮ್ಸ್ ಸ್ಟ್ಯುವರ್ಟ್, ಹಿಂದೂಸ್ಥಾನದಲ್ಲಿ ಜಹಾಂಗೀರ್ ರಾಜ್ಯವಾಳುತ್ತಿದ್ದರು. ಬೆರ್‌ನ್ಯೇ ತನ್ನ ಇಪ್ಪತ್ತೇಳನೆ ವಯಸ್ಸಿನಲ್ಲಿಯೇ ಅಡ್ಡಾಡುವ ಚಟವನ್ನು ಬೆಳೆಸಿಕೊಂಡಿದ್ದ. ೧೬೪೭ ರಿಂದ ೧೬೫೦ರವರೆಗೆ ಉತ್ತರ ಜರ್ಮನಿ, ಪೋಲೆಂಡ್, ಸ್ವಿಟ್ಜರ್‌ಲೆಂಡ್ ಮತ್ತು ಇಟಲಿ ದೇಶಗಳಲ್ಲಿ ಸುತ್ತಾಡಿಕೊಂಡುಬಂದ. ಹೀಗೆ ಸುತ್ತಾಡಿಕೊಂಡುಬಂದ ಅನಂತರ ಆತ ತನ್ನ ವಿದ್ಯಾಭ್ಯಾಸದ ಕಡೆ ಗಮನ ಹರಿಸಿದ. ಶರೀರವಿಜ್ಞಾನ ಪರೀಕ್ಷೆಗೆ ಕುಳಿತು, ಅದರಲ್ಲಿ ಉತ್ತೀರ್ಣನಾದ. ಮ್ಹೊಪೇಲ್ಯೇರ್ (Montepellier) ವಿಶ್ವವಿದ್ಯಾನಿಲಯದಿಂದ ಮೆಟ್ರಿಕುಲೇಷ್ ಪರೀಕ್ಷೆಗೆ ಕಟ್ಟಿ ಅದರಲ್ಲಿಯೂ ಉತ್ತೀರ್ಣನಾದ. ಅದೇ ವರ್ಷ ಔಷಧ ವೈದ್ಯ (medicine) ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಸನ್ನದು ಪಡೆದ. ಅಷ್ಟೇ ಅಲ್ಲದೆ, ಅದೇ ವರ್ಷ 'ಡಾಕ್ಟರ್ ಆಫ್ ಮೆಡಿಸನ್' ಪದವೀಧರನೂ ಆದ.

ಈ ರೀತಿ ಶಿಕ್ಷಣ ಪಡೆದ ಬೆರ್‌ನ್ಯೇ ಬಹುಶಃ ತನ್ನ ಹುಟ್ಟುಗುಣಕ್ಕನುಗುಣವಾಗಿ ಪ್ರವಾಸ ಆರಂಭಿಸಿದ. ಪದವೀಧರನಾದ ಮೇಲೆ ಎರಡು ವರ್ಷಗಳು ಪ್ಯಾರಿಸ್ ನಗರ ದಲ್ಲಿದ್ದು, ೧೬೫೪ರಲ್ಲಿ ಪ್ಯಾಲಸ್ಟೈನ್ ಮತ್ತು ಸಿರಿಯಾ ದೇಶಗಳಿಗೆ ಹೋಗಿಬಂದ. ಮೂರನೆಯ ವರ್ಷ, ಅಂದರೆ ೧೬೫೫ರಲ್ಲಿ, ಆತನ ಶಸ್ತ್ರವೈದ್ಯ ವಿದ್ಯಾಗುರುವೂ ತತ್ತ್ವ ಜ್ಞಾನಿಯೂ ಆದ ಗಸ್ಸೇಂಡಿ (Gassendi) ಕಾಲವಾದನು. ತನ್ನ ಗುರುವಿನ ಅಂತ್ಯ ಕಾಲದಲ್ಲಿ ಬೆರ್‌ನ್ಯೇ ಆತನ ಬಳಿ ಇದ್ದು ಶುಶ್ರೂಷೆಮಾಡಿದನು. ಮತ್ತೆ ಬೆರ್‌ನ್ಯೇ ತಿರುಗಾಡಲು ಹೊರಟ. ೧೬೫೬ರಲ್ಲಿ ಈಜಿಪ್ಟಿಗೆ ಹೋದ. ಆ ದೇಶದ ರಾಜಧಾನಿಯಾದ ಕೈರೋದಲ್ಲಿ ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ನಿಂತು, ಸೂಯೆಜ್ ಬಂದರಿನಲ್ಲಿ ಹಡಗು ಏರಿ ಜಿಡ್ಡಾಕ್ಕೆ ಹೊರಟ. ಅಲ್ಲಿ ಐದು ವಾರಗಳು ಇದ್ದು, ಅಲ್ಲಿಂದ ಮೋಖಾಕ್ಕೆ

ಹೊರಟನು. ಹದಿನೈದು ದಿನಗಳ ಸಮುದ್ರಯಾನ ಆತನನ್ನು ಮೋಖಾಕ್ಕೆ ಕರೆತಂದಿತು. ಇಲ್ಲಿಂದ ಅಬಿಸೀನಿಯಾಕ್ಕೆ ಹೋಗುವುದು ಆತನ ಉದ್ದೇಶವಾಗಿತ್ತು. ಆದರೆ ಏಕೋ ಏನೋ ಅವನು ಆ ಉದ್ದೇಶವನ್ನು ಕೈಬಿಟ್ಟು, ಇಂಡಿಯಾದೇಶದ ಹಡಗೊಂದರಲ್ಲಿ ಕುಳಿತು ಸೂರತ್ತಿಗೆ ಹೊರಟ. ಇಂಡಿಯಾದ ವರ್ಣನೆಯನ್ನು ಅಲ್ಲಿಗೆ ಹೋಗಿಬಂದವರಿಂದ ಕೇಳಿರಬಹುದಾದ ಆತ ಅಬಿಸೀನಿಯಾಕ್ಕೆ ಹೋಗುವ ಬದಲು ಇಂಡಿಯಾಕ್ಕೆ ಹೋಗುವುದೊಳ್ಳೆಯದೆಂದು ನಿರ್ಧರಿಸಿರಬೇಕು. ಹಡಗಿನಲ್ಲಿ ಹೊರಟ ಅವನು ದೀರ್ಘ ಸಮುದ್ರ ಯಾನಮಾಡಿ, ೧೬೫೮ರ ಅಂತ್ಯದಲ್ಲಿಯೋ ಅಥವಾ ೧೬೫೯ರ ಆರಂಭದಲ್ಲಿಯೋ ಸೂರತ್ ನಗರವನ್ನು ತಲುಪಿದ.

ಬೆರ್‌ನ್ಯೇ ಸೂರತ್ ನಗರವನ್ನು ತಲುಪಿದವನು ಮೊಗಲ್ ಚಕ್ರವರ್ತಿಯ ಆಸ್ಥಾನವಿದ್ದ ಆಗ್ರಾನಗರಕ್ಕೆ ಹೊರಟ. ಇಷ್ಟರಲ್ಲಿ ಇಂಡಿಯಾದ ಮೊಗಲ್ ಸಿಂಹಾಸನಕ್ಕೆ ಹೋರಾಟ ಆರಂಭವಾಗಿತ್ತು. ಜಹಾಂಗೀರ ಕಾಲವಾದ ಮೇಲೆ ೧೬೨೭ರಲ್ಲಿ ಷಾಜಹಾನ ಸಿಂಹಾಸನವನ್ನೇರಿದ್ದ. ಮೂವತ್ತು ವರ್ಷಗಳ ಕಾಲ ರಾಜ್ಯವಾಳಿದ ಷಾಜಹಾನನ ಕೊನೆಗಾಲ ಖಚಿತವೆಂದು ತಿಳಿದುಕೊಂಡ ಆತನ ಮಕ್ಕಳಲ್ಲಿ ಸಿಂಹಾಸನಕ್ಕೆ ಹೋರಾಟ ಆರಂಭವಾಯಿತು. ಅವರಲ್ಲಿ ಹಿರಿಯವನಾದ ದಾರಾನಿಗೂ ಮೂರನೆಯವನಾದ ಔರಂಗಜೇಬನಿಗೂ ಅಜ್ಮೀರದ ಸಮೀಪದಲ್ಲಿ ೧೬೫೯ರ ಏಪ್ರಿಲ್ ೨೦ರಂದು ಯುದ್ಧ ನಡೆದು, ಯುದ್ಧದಲ್ಲಿ ದಾರಾ ಸೋತು, ಅಹಮದಾಬಾದಿಗೆ ತನ್ನ ಸಂಸಾರ ಹಾಗೂ ಅನುಯಾಯಿಗಳ ಸಮೇತ ಓಡಿಬರುತ್ತಿದ್ದ. ಹೀಗೆ ಓಡಿಬರುವಾಗ ದಾರಾನಿಗೂ ನಮ್ಮ ಪ್ರವಾಸಿ ಬೆರ್‌ನ್ಯೇಗೂ ಭೇಟಿಯಾಯಿತು. ತನ್ನನ್ನು ಹಿಮ್ಮೆಟ್ಟಿ ಬರುತ್ತಿದ್ದ ಔರಂಗಜೇಬನ ಕಡೆಯವರಿಂದಾಗಿ ದಾರಾ ಬಹಳ ಕಷ್ಟದಲ್ಲಿ ಸಿಕ್ಕಿಬಿದ್ದಿದ್ದ. ಆತನ ಹೆಂಡತಿ ಏನೋ ಒಂದು ವ್ರಣದಿಂದ ನರಳುತ್ತಿದ್ದಳು. ವೈದ್ಯ ಸೌಕರ್ಯವಿಲ್ಲದೆ ಒದ್ದಾಡು ತ್ತಿದ್ದಾಗ ವೈದ್ಯನಾದ ಬೆರ್‌ನ್ಯೇ ಸಿಕ್ಕಿದ. ಈತನನ್ನು ತನ್ನೊಡನೆ ಕರೆದುಕೊಂಡು ದಾರಾ ಅಹಮದಾಬಾದಿಗೆ ಹೋಗುತ್ತಿರುವಾಗ ಅಲ್ಲಿಯ ಗೌರ್ನರ್, ಅಂದರೆ ತನ್ನ ಆಡಳಿತಕ್ಕೆ ಸೇರಿದ್ದ ಪ್ರಾಂತದ ರಾಜಧಾನಿಯಾದ ಅಹಮದಾಬಾದಿನ ಗೌರ್ನರ್, ಬಗೆದ ದ್ರೋಹದಿಂದಾಗಿ ಅಲ್ಲಿಗೆ ಹೋಗುವುದನ್ನು ಬಿಟ್ಟು, ಸಿಂಧೂ ದೇಶದ ಕಡೆಗೆ ಹೋಗಬೇಕಾಯಿತು. ಆದರೆ ಬೆರ್‌ನ್ಯೇ ಅಲ್ಲಿಗೆ ಹೋಗಲು ಒಪ್ಪದೆ, ದಾರಾನಿಂದ ಬೀಳ್ಕೊಂಡು, ಅರ್ಧ ದಾರಿಯಿಂದಲೇ ಅಹಮದಾಬಾದಿಗೆ ಹಿಂದಿರುಗಿದನು. ದಾರಿಯಲ್ಲಿ ಕಳ್ಳಕಾಕರ ತೊಂದರೆಗೆ ಸಿಕ್ಕಿ ತಾಪತ್ರಯಪಡಬೇಕಾಯಿತು.

ಅಹಮದಾಬಾದಿನಿಂದ ದಿಲ್ಲಿಗೆ ಮೊಗಲ್ ಸರದಾರನೊಬ್ಬ ಹೊರಟಿದ್ದ. ಆತನ ಪರಿಚಯ ಪಡೆದು, ಬೆರ್‌ನ್ಯೇ ಆತನನ್ನು ಕೂಡಿಕೊಂಡು, ಬಹು ದೂರ ಹಾದಿ ಸವೆದು ದಿಲ್ಲಿ ತಲುಪಿದ. ಔರಂಗಜೇಬ ತನ್ನೆಲ್ಲ ಮೋಸ ಕುತಂತ್ರ ಹಾಗೂ ಚಾಣಕ್ಯತನದ ವಿಧಾನಗಳನ್ನು ಅನುಸರಿಸಿ, ಅಣ್ಣ ತಮ್ಮಂದಿರನ್ನು ಕೊಂದು ಅಥವಾ ಬಂಧನದಲ್ಲಿರಿಸಿ, ಹೆತ್ತ

ತಂದೆಯನ್ನು ಆಗ್ರಾ ಕೋಟೆಯಲ್ಲಿ ಸೆರೆಯಿಟ್ಟು, ದಿಲ್ಲಿಯಲ್ಲಿ ೧೬೫೮ರ ಜುಲೈ ೨೧ ರಿಂದ ರಾಜ್ಯಭಾರಮಾಡಲಾರಂಭಿಸಿದ್ದ. ಆದ್ದರಿಂದ ಬೆರ್ನ್ಯೇ ಆಗ್ರಾಕ್ಕೆ ಹೋಗುವ ಬದಲು ದಿಲ್ಲಿಗೆ ಹೋದ. ಆತ ಆ ನಗರವನ್ನು ಯಾವಾಗ ತಲುಪಿದ ಎಂಬುದು ಗೊತ್ತಾಗುವುದಿಲ್ಲ. ಅಂತೂ ೧೬೫೯ರ ಜುಲೈ ತಿಂಗಳಿನಲ್ಲಿ ಅಲ್ಲಿದ್ದನೆಂಬುದು ಖಚಿತ. ಏಕೆಂದರೆ, ಆತನ ಒಂದು ಪತ್ರವು ಆ ತಾರೀಖಿನಲ್ಲಿ ಅಲ್ಲಿಂದ ಬರೆದದ್ದಾಗಿದೆ. ಬೆರ್ನ್ಯೇ ಅಲ್ಲಿಂದ ಒಂದು ವರ್ಷದ ಅನಂತರ ಔರಂಗಜೇಬನೊಡನೆ ಕಾಶ್ಮೀರಕ್ಕೆ ಹೊರಡುತ್ತಾನೆ. ಅಲ್ಲಿಗೆ ಹೋಗಿ ೧೬೬೫ರಲ್ಲಿ ಹಿಂದಿರುಗಿದ ಮೇಲೆ ತನ್ನ ಬಂಗಾಳ ಪ್ರವಾಸವನ್ನು ಆರಂಭಿಸುತ್ತಾನೆ. ಈ ಪ್ರವಾಸದಲ್ಲಿಯೇ ಆತನಿಗೂ ಇನ್ನೊಬ್ಬ ಪ್ರಸಿದ್ಧ ಪ್ರವಾಸಿಗ ಟಾವೆರ್ನ್ಯೆಗೂ ಭೇಟಿಯಾಗುವುದು. ಇಬ್ಬರೂ ರಾಜಮಹಲ್‌ವರೆಗೆ ಹೋಗಿ, ಆಮೇಲೆ ಬೇರೆ ಬೇರೆ ದಾರಿ ಹಿಡಿಯುತ್ತಾರೆ. ಬೆರ್ನ್ಯೇ ಕಾಸಿಂಬಜಾರಿಗೆ ಹೋಗಿ, ಅಲ್ಲಿ ತನ್ನ ಕೆಲಸ ಮುಗಿಸಿಕೊಂಡು ಮಸುಲಿಪಟ್ಟಣಕ್ಕೆ ಹೋಗುತ್ತಾನೆ. ಆ ಪಟ್ಟಣ ಗೋಲ್ಕೊಂಡಾ ರಾಜನಿಗೆ ಸೇರಿತ್ತು. ಆತನ ರಾಜಧಾನಿ (ಹೈದರಾಬಾದ್ ಸಮೀಪದ) ಗೋಲ್ಕೊಂಡಾವೇ ಆಗಿತ್ತು. ಬೆರ್ನ್ಯೇ ಇಲ್ಲಿದ್ದಾಗ ಬಂಧನದಲ್ಲಿದ್ದ ಷಾಜಹಾನ್ ಕಾಲವಾದನೆಂಬ ಸುದ್ದಿ ಗೊತ್ತಾಯಿತು.[1] ಬೆರ್ನ್ಯೇ ಗೋಲ್ಕೊಂಡಾದಲ್ಲಿ ೧೬೬೭ರವರೆಗೂ ಇದ್ದು ಸೂರತ್ತಿಗೆ ಹೊರಡುತ್ತಾನೆ. ಸೂರತ್ತಿನಲ್ಲಿ ಇನ್ನೊಬ್ಬ ಪ್ರವಾಸಿಗ ಸರ್‌ಜಾನ್ ಷಾರ್‌ಡ್ಞಾ (Sir John Chardian 1665–77) ಎಂಬುವನ ಭೇಟಿಯಾಗುತ್ತದೆ.

ಇಲ್ಲಿಗೆ ಫ್ರಾನ್ಸ್ವಾಸ್ ಬೆರ್ನ್ಯೇನ ಇಂಡಿಯಾ ಪ್ರವಾಸ ಮುಗಿಯುತ್ತದೆ. ಆಮೇಲೆ ಆತ ಪರ್ಷಿಯಾ ಮುಖಾಂತರ ತನ್ನ ಸ್ವದೇಶಕ್ಕೆ ಮರುಪ್ರಯಾಣವನ್ನು ಆರಂಭಿಸಿ, ಷಿರಾಜನ್ನು ನೋಡಿಕೊಂಡು, ಮೆಡಿಟರೇನಿಯನ್ ಸಮುದ್ರಯಾನಮಾಡಿ, ಫ್ರಾನ್ಸಿನ ಮಾರ್ಸೇಲ್ಸ್‌ನಗರವನ್ನು ಮುಟ್ಟುತ್ತಾನೆ. ಅಲ್ಲಿಂದ ಫ್ರಾನ್ಸಿನ ರಾಜಧಾನಿ ಪ್ಯಾರಿಸ್‌ಗೆ ಹೋಗುತ್ತಾನೆ. ಅಲ್ಲಿ ಆತ ತನ್ನ ಪ್ರವಾಸ ಕಥನದ ಪ್ರಕಟಣೆಯ ವಿಚಾರವನ್ನು ಕುರಿತು ಆಲೋಚನೆಮಾಡುತ್ತಾನೆ. ಪುಸ್ತಕ ಪ್ರಕಟಿಸಲು ಆಗ ರಾಜನ ಅನುಮತಿ ಬೇಕಿತ್ತು. ಅದಕ್ಕಾಗಿ ಅವನು ಒಂದು ಮನವಿ ಸಲ್ಲಿಸಿದ. ಈ ಮನವಿಯನ್ನು ಫ್ರಾನ್ಸಿನ ದೊರೆ (೧೪ನೇ ಲುಯಿ) ಮನ್ನಿಸಿ ೧೬೭೦ರಲ್ಲಿ ಪ್ರಕಟಣೆಗೆ ಅನುಮತಿ ನೀಡಿದ. ಈ ಅನುಮತಿಯನ್ನು ಪಡೆದ ಅನಂತರ ಬೆರ್ನ್ಯೇ ತನ್ನ ಪುಸ್ತಕದ ಪ್ರಕಟಣೆಯ ಸ್ವಾಮ್ಯವನ್ನು ಕ್ಲಾಡ್ ಬರ್‌ಬ್ಯಾಞ (Claude Barbian) ಎಂಬುವನಿಗೆ ವಹಿಸಿಕೊಟ್ಟಂತೆ ಪ್ಯಾರಿಸಿನ 'ಪುಸ್ತಕ ವ್ಯಾಪಾರಿಗಳು ಮತ್ತು ಮುದ್ರಣಕಾರರು' ಎಂಬ ವಹಿಯಲ್ಲಿ (ರಿಜಿಸ್ಟರಿನಲ್ಲಿ) ದಾಖಲೆ ಇರುವುದು ಕಂಡುಬರುತ್ತದೆ.

ಅಲ್ಲಿಯವರೆಗೆ ಬೆರ್ನ್ಯೇ ಇಂಗ್ಲೆಂಡಿಗೆ ಹೋಗಿಬಂದಂತೆ ಕಾಣುವುದಿಲ್ಲ. ತರುವಾಯ

---

[1] ಷಾಜಹಾನ್ ಕಾಲವಾದದ್ದು ೧೬೬೬ರ ಜನವರಿ ೨೨ ರಂದು.

೧೬೮೫ರಲ್ಲಿ ಅಲ್ಲಿಗೂ ಹೋಗಿಬಂದ. ಅದೇ ವರ್ಷ ಎರಡನೇ ಜೇಮ್ಸ್ ಇಂಗ್ಲೆಂಡ್ ಸಿಂಹಾಸನವನ್ನೇರಿದ್ದು. ಬೆರ್‍ನೈೇ ಇಂಗ್ಲೆಂಡಿನಿಂದ ಪ್ಯಾರಿಸ್ಸಿಗೆ ಹಿಂದಿರುಗಿ, ಮೂರು ವರ್ಷಗಳ ಕಾಲ ಅಲ್ಲಿಯೇ ಇದ್ದು, ೧೬೮೮ರ ಸೆಪ್ಟೆಂಬರ್ ೨೨ನೆ ತಾರೀಖು ತನ್ನ ಇಹಲೋಕ ಪ್ರವಾಸವನ್ನು ಮುಗಿಸಿದ.

ಬೆರ್‍ನೈೇ ಸಾಯುವಾಗ ಸುಮಾರು ೬೮ ವರ್ಷ ವಯಸ್ಸಾಗಿತ್ತು. ಆತನ ಭ್ರಾತ್ರೀಯ (nephew) ಫಿಲೀಪ್ ಬೂರಿಗೋಲ್ಟ್ (Philippe Bourigault) ಎಂಬುವನು ಅವನ ಉತ್ತರಕ್ರಿಯಾದಿಗಳನ್ನು ನೆರವೇರಿಸಿದನೆಂದು ಕಂಡುಬರುತ್ತದೆ. ಹಾಗಿದ್ದರೆ ಬೆರ್‍ನೈೇ ಮದುವೆಯಾಗಿರಲಿಲ್ಲವೆ? ಆಗಿರಲಾರ. ಏಕೆಂದರೆ, ಆತ ಸಾಯುವುದಕ್ಕೆ ನಾಲ್ಕು ದಿನಗಳ ಮುಂಚೆ ಬರೆದ ಉಯಿಲಿನಲ್ಲಿ ಹೆಂಡತಿ ಮಕ್ಕಳ ವಿಚಾರ ಏನೂ ಹೇಳುವುದಿಲ್ಲ. ಅದರ ಬದಲು, ತನ್ನ ಆಸ್ತಿಪಾಸ್ತಿಯನ್ನೆಲ್ಲಾ ಮೇಲೆ ಹೇಳಿದ ಭ್ರಾತ್ರೀಯನಿಗೂ, ತನ್ನ ವ್ಯವಹಾರ ನೋಡಿಕೊಳ್ಳುತ್ತಿದ್ದ ಇನ್ನೊಬ್ಬ ಮನುಷ್ಯನಿಗೂ, ಒಬ್ಬ ಮಠಾಧಿಪತಿಗೂ, ಮತ್ತು ಇಬ್ಬರು ಸೇವಕಿಯರಿಗೂ ಬರೆದಿಟ್ಟು ಹೋಗಿದ್ದಾನೆ. ಹೆಂಡತಿ ಮಕ್ಕಳಿದ್ದರೆ ಅವರಿಗೆ ಏನನ್ನೂ ಕೊಡದೆ ಇರಲಾಗುತ್ತಿರಲಿಲ್ಲ.

ಇಂಡಿಯಾಕ್ಕೆ ಬಂದ ಯುರೋಪಿನ ಪ್ರವಾಸಿಗರಲ್ಲಿ ಬೆರ್‍ನೈೇ ಬಹು ಮುಖ್ಯವಾದವನು. ಉಳಿದ ಪ್ರವಾಸಿಗರ ಕಥನಗಳಿಗಿಂತ ಈತನ ಕಥನ ಹೆಚ್ಚು ಜನಪ್ರಿಯವಾಗಿದೆ. 'His account is one of the most readable of traveller's accounts ever written' ಎಂದು ಒಬ್ಬರು ಹೇಳಿದ್ದಾರೆ. ಸಾಕಷ್ಟು ವಿದ್ಯಾವಂತನಾಗಿದ್ದ ಈತ ಎಲ್ಲವನ್ನೂ ಬಹು ಸೂಕ್ಷ್ಮವಾಗಿ ಪರಿಶೀಲಿಸಿ ಬರೆದಿದ್ದಾನೆ. ದಿಲ್ಲಿಯಲ್ಲಿದ್ದಾಗ ಒಬ್ಬ ಮನ್ಸಬ್ದಾರನ (ಸೈನ್ಯಾಧಿಕಾರಿಯ) ಬಳಿ ನೌಕರಿಗೆ ಸೇರಿಕೊಂಡು ಅವನ ಮೂಲಕ ಆಸ್ಥಾನದ ಎಲ್ಲ ವಿಚಾರಗಳನ್ನು ತಿಳಿಯುವ ಅವಕಾಶ ದೊರೆಕಿಸಿಕೊಂಡಿದ್ದ. ಅನೇಕ ವಿಚಾರಗಳನ್ನು ಇತರರಿಂದ ಕೇಳಿ ತಿಳಿದುಕೊಂಡಿದ್ದ. ಈ ದೇಶದಲ್ಲಿ ನೆಲೆಸಿದ್ದ ಹಳಬರಾದ ವಿದೇಶಿ ವರ್ತಕರನ್ನು ಕಂಡು ಕೇಳಿ ಎಷ್ಟೊ ವಿಚಾರಗಳನ್ನು ಸಂಗ್ರಹಿಸಿಕೊಂಡಿದ್ದ. ಅವೆಲ್ಲವುಗಳನ್ನು ಕೂಡಿಹಾಕಿ ಅವನು ಬಹು ಸ್ವಾರಸ್ಯವಾದ ದಾಖಲೆಯನ್ನು ಬರೆದಿಟ್ಟುಹೋಗಿದ್ದಾನೆ. ಮೊಗಲ್ ಚಕ್ರವರ್ತಿ ಔರಂಗಜೇಬನ ಕಾಲದ ಇತಿಹಾಸವನ್ನು ತಿಳಿಯುವುದಕ್ಕೆ ಅವನ ಪ್ರವಾಸ ಕಥನ ತುಂಬಾ ಸಹಾಯಕವಾಗಿದೆ.

ಬೆರ್‍ನೈೇ ತನ್ನ ಪ್ರವಾಸ ಕಥನವನ್ನು ತನ್ನ ಮಾತೃಭಾಷೆಯಾದ ಫ್ರೆಂಚ್ ಭಾಷೆಯಲ್ಲಿಯೇ ಪ್ರಕಟಿಸಿದನು. ಇದು ಆಮೇಲೆ ಇಂಗ್ಲಿಷ್, ಜರ್ಮನ್, ಡಚ್, ಇಟಾಲಿಯನ್ ಭಾಷೆಗಳಿಗೆ ಅನುವಾದವಾಯಿತು. ಅವನ ಜೀವಿತಕಾಲದಲ್ಲಿಯೇ ಇಷ್ಟೆಲ್ಲ ಆಯಿತು. ಆತನು ಸತ್ತನಂತರ ಮತ್ತೆ ಆ ಭಾಷೆಗಳಲ್ಲಿ ಹಲವಾರು ಬಾರಿ ಮುದ್ರಣಗಳಾದುವು. ಇನ್ನೊಂದು ಒಳ್ಳೆಯ ಕೆಲಸ ಮಾಡಿದ ಬೆರ್‍ನೈೇ. ಆತ ತನ್ನ ಕಥನದಲ್ಲಿ ಅನೇಕ ಉಪಯುಕ್ತ ಚಿತ್ರಗಳನ್ನೂ, ನಕಾಸೆಗಳನ್ನು ಬರೆದು ಸೇರಿಸಿದ.

ಪ್ರವಾಸ ಕಥನದ ಇಂಗ್ಲಿಷ್ ಅನುವಾದಗಳಲ್ಲಿ ಒಂದರ ಮುದ್ರಣ ೧೮೨೬ರಲ್ಲಿ ಕಲ್ಕತ್ತೆಯ ಬಾಪ್ಟಿಸ್ಟ್ ಮಿಷನ್ ಪ್ರೆಸ್‌ನಲ್ಲಿ ಆದ ವಿಚಾರ ಇಲ್ಲಿ ಉಲ್ಲೇಖಿಸಬೇಕಾಗಿದೆ. ಈ ಅನುವಾದ ಮಾಡಿದವನು ಈಸ್ಟ್ ಇಂಡಿಯಾ ಕಂಪೆನಿಯ ಕಚೇರಿಯಲ್ಲಿ ನೌಕರನಾಗಿದ್ದ ಜಾನ್ ಸ್ಟೂಯರ್ಟ್ (John Stewart) ಎಂಬುವನು. ಈ ಅನುವಾದದಲ್ಲಿ ತುಂಬಾ ತಪ್ಪುಗಳಿವೆಯೆಂದು ಹೇಳುತ್ತಾರೆ. ಪುಸ್ತಕವು ಇನ್ನೂ ಮುದ್ರಣವಾಗುತ್ತಿರುವಾಗಲೇ ಅದನ್ನು ನೋಡಿ ತಪ್ಪುಗಳನ್ನು ಸಹಿಸದ ಕೆಲವರು 'ಇಂಡಿಯಾ ಗೆಜೆಟ್' ಎಂಬ ಪತ್ರಿಕೆಯ ಸಂಪಾದಕರಿಗೆ ಬರೆದ ಪತ್ರದ ಮೂಲಕ ತಮ್ಮ ಅಸಂತೋಷ ಸೂಚಿಸಿದರಂತೆ. ಇದಕ್ಕೆ ಉತ್ತರವಾಗಿ ಒಬ್ಬರು ಅದೇ ಪತ್ರಿಕೆಯಲ್ಲಿ ಹೀಗೆ ಬರೆದರು : "ಸಂಪಾದಕ ಮಹಾಶಯರೆ, ಬಹುತೇಕ ವಿಮರ್ಶಕರು ಬೇಟೆ ಆರಂಭವಾಗುವವರೆಗಾದರೂ ಕಾಯುವ ಕೃಪೆ ಮಾಡುತ್ತಾರೆ. ಆರಂಭವಾದ ಮೇಲೆ ತಮ್ಮ ಅಭಿಪ್ರಾಯ ತಿಳಿಸುತ್ತಾರೆ. ಆದರೆ ವಿಮರ್ಶೆಯ ಕ್ಷೇತ್ರದಲ್ಲಿ ಕಳ್ಳಬೇಟೆಯಾಡಲಿಚ್ಛಿಸುವ ಈ ಬೇಟೆಗಾರ ಬೆದರಿದ ಹಕ್ಕಿ ಇನ್ನೇನು ಹಾರಬೇಕು, ಅಷ್ಟರಲ್ಲಿಯೇ ಅದಕ್ಕೆ ಗುರಿ ಇಡಲು ಹೊರಟಿದ್ದಾನೆ !"

ಇನ್ನೊಂದು ಇಂಡಿಯಾ ಮುದ್ರಣ ಬೊಂಬಾಯಿನ 'ಸಮಾಚಾರ' ಮುದ್ರಣಾಲಯದಲ್ಲಿ ಆಯಿತು. ಬಹುಶಃ ಅದರ ಸಂಪಾದಕ ಆ ಮುದ್ರಣಾಲಯದ ಮಾಲೀಕರೇ ಇರಬೇಕು. ಇದು ಮೊಟ್ಟಮೊದಲಿನ (೧೬೭೧) ಇಂಗ್ಲಿಷ್ ಅನುವಾದದ ಪುನರ್ ಮುದ್ರಣವಾಗಿತ್ತು, ಅಷ್ಟೆ. ಬೊಂಬಾಯಿ ಗೌರ್ನರ್ ಅವರಿಗೆ ಈ ಪುಸ್ತಕವನ್ನು ಅರ್ಪಿಸಲಾಗಿತ್ತು. ಈ ಪುನರ್ಮುದ್ರಣದ ವೇಳೆಗೆ ಬೆರ್‌ನೈೕನ ಪುಸ್ತಕದ ಪ್ರತಿ ಸಿಕ್ಕುವುದು ತುಂಬಾ ದುರ್ಲಭವಾಗಿತ್ತೆಂದೂ, ಬಹಳ ಕಷ್ಟಪಟ್ಟು ಹನ್ನೊಂದು ವರ್ಷಗಳ ಕಾಲ ಹುಡುಕಿ ೧೬೭೧ರಲ್ಲಿ ಪ್ರಕಟವಾದ ಪುಸ್ತಕದ ಪ್ರತಿಯನ್ನು ಪಡೆಯಲಾಯಿತೆಂದೂ, ಆ ಅಮೂಲ್ಯವಾದ ಪುಸ್ತಕ ಎಲ್ಲರ ಬಳಿಯೂ ಇರಬೇಕೆಂಬ ಉದ್ದೇಶದಿಂದ ಮತ್ತೆ ಮುದ್ರಣ ಮಾಡುತ್ತಿರುವುದಾಗಿಯೂ, ಈ ಪುಸ್ತಕವನ್ನು 'ಸಮಾಚಾರ' ಪತ್ರಿಕೆಯ ಚಂದಾದಾರರಿಗೆ ೧೫ ರೂಪಾಯಿನಂತೆ ಮತ್ತು ಬೇರೆಯವರಿಗೆ ೨೦ ರೂಪಾಯಿನಂತೆ ಒದಗಿಸುವುದಾಗಿಯೂ ಸಂಪಾದಕರು ಪುಸ್ತಕಕ್ಕೆ ೧೮೨೦ರ ಜನವರಿ ೧೫ರಂದು ಬರೆದುಕೊಂಡ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಇಂಡಿಯಾದಲ್ಲಿ ಅಲ್ಲದೆ ಇತರ ದೇಶಗಳಲ್ಲಿಯೂ ಬೆರ್‌ನೈೕನ ಪ್ರವಾಸ ಕಥನ ಹಲವಾರು ಭಾಷೆಗಳಲ್ಲಿ ಮತ್ತೆ ಮತ್ತೆ ಮುದ್ರಣವಾಯಿತು. ಆತನ ಬಗ್ಗೆ ಮತ್ತು ಆತನ ಕಥನದ ಬಗ್ಗೆ ಹಲವಾರು ಲೇಖನಗಳೂ ವಿಮರ್ಶಾಗ್ರಂಥಗಳೂ ಹೊರಬಂದುವು. ೧೮೮೫ರಲ್ಲಿ ಕರ್ನಲ್ ಹೆನ್ರಿ ಮೋರ್ (Colonel Henry Moore) ಎಂಬುವರು ಅದನ್ನು ಉರ್ದು ಭಾಷೆಗೂ ಸಹ ಅನುವಾದಮಾಡಿದರೆಂಬುದು ವಿಶೇಷದ ಸಂಗತಿಯಾಗಿದೆ.

ಬೆರ್‌ನೈೕ ಫ್ರೆಂಚ್ ಭಾಷೆಯಲ್ಲಿ ಮೊಟ್ಟಮೊದಲಿಗೆ ಬರೆದ ಕಥನ ಇಂಗ್ಲಿಷ್

ಭಾಷೆಗೆ ಅನುವಾದ ಆದಕೂಡಲೇ ಅದನ್ನು ಓದಿದ ಇಂಗ್ಲಿಷ್ ಕವಿ ಹಾಗೂ ನಾಟಕಕಾರ ಜಾನ್ ಡ್ರೈಡನ್ (John Dryden ೧೬೩೧-೧೭೦೦) ಔರಂಗಜೇಬನ ಬಗ್ಗೆ ಒಂದು ನಾಟಕವನ್ನೇ ಬರೆದ. ಈ ನಾಟಕ ಅವನ ಕೃತಿರತ್ನವಂತೆ. ೧೬೭೫ರಲ್ಲಿ ಈ ನಾಟಕವನ್ನು ರಂಗಮಂಟಪದ ಮೇಲೆ ಆಡಲಾಯಿತು. ನಾಟಕವನ್ನು ನೋಡಿದ ಹೆಸರಾಂತ ಇಂಗ್ಲಿಷ್ ಸಾಹಿತಿ ಡಾ॥ ಸಾಮ್ಯುಯಲ್ ಜಾನ್‌ಸನ್ (೧೭೦೯-೮೪) "ಸದ್ಯ, ಈ ನಾಟಕ ಆಡಿದ ನಮ್ಮ ದೇಶ ಔರಂಗಜೇಬನಿಗೆ ಸೇರಿರದಿದ್ದುದು ಒಳ್ಳೆಯದೇ ಆಯಿತು. ಹಾಗೇನಾದರೂ ಸೇರಿದ್ದರೆ, ಆತ ನಾಟಕದಲ್ಲಿ ತನ್ನ ಪಾತ್ರದ ಸೃಷ್ಟಿಯನ್ನು ನೋಡಿ ನಮ್ಮ ವ್ಯಾಪಾರ-ಸಾಪಾರವನ್ನೆಲ್ಲ ಮಣ್ಣುಪಾಲುಮಾಡಿಬಿಡುತ್ತಿದ್ದ!" ಎಂದು ಹೇಳಿದನಂತೆ.

ಈ ಅಮೂಲ್ಯ ಪ್ರವಾಸ ಕೃತಿಯನ್ನು ಬಹು ಶ್ರಮವಹಿಸಿ ಇಂಗ್ಲಿಷ್ ಭಾಷೆಯಲ್ಲಿ ಸಂಪಾದಿಸಿದವರು ಆರ್ಚಿಬಾಲ್ಡ್ ಕಾನ್‌ಸ್ಟೇಬಲ್ (Archibald Constable) ಎಂಬುವರು. ೧೮೯೧ರಲ್ಲಿ ಪ್ರಕಟವಾದ ಆ ಪುಸ್ತಕ ಮತ್ತೆ ೧೯೧೪ರಲ್ಲಿ ಪುನರ್ಮುದ್ರಣವಾಯಿತು. ಇದನ್ನು ನೋಡಿದರೆ ಪ್ರವಾಸ ಸಾಹಿತ್ಯದಲ್ಲಿ ಈ ಪುಸ್ತಕದ ಸ್ಥಾನ ಎಷ್ಟೆಂಬುದು ಸ್ಪಷ್ಟವಾಗುತ್ತದೆ.

# ಫ್ರಾನ್ಸ್ವಾಸ್ ಬೆರನ್ಯೇ ಪ್ರವಾಸ

ಪ್ರಪಂಚವನ್ನು ನೋಡಬೇಕೆಂಬ ಆಸೆ ನನ್ನನ್ನು ಪ್ಯಾಲೆಸ್ಟೈನಿಗೂ ಈಜಿಪ್ಟಿಗೂ ಕೊಂಡೊಯ್ಯಿತು. ಅದೇ ಆಸೆ ನನ್ನ ಪ್ರವಾಸವನ್ನು ಮುಂದುವರಿಸಿ ಕೆಂಪು ಸಮುದ್ರವನ್ನೂ ಕಾಣುವಂತೆ ಮಾಡಿತು. ನಾನು (ಈಜಿಪ್ಟಿನ) ಮಹಾ ಕೈರೋದಿಂದ ಹೊರಟು ಸೂಯೆಜ್‌ಗೆ ಹೋದೆ. ಅಲ್ಲಿಂದ ಕೈದಿಗಳು ನಡೆಸುವ ಒಂದಂತಸ್ತಿನ ಹಡಗೊಂದರಲ್ಲಿ (galley) ಕುಳಿತು, ಹದಿನೇಳು ದಿನಗಳ ಯಾನಮಾಡಿ, ಮೆಕ್ಕಾಕ್ಕೆ ಸಮೀಪದಲ್ಲಿರುವ ಜಿಡ್ಡಾ ಎಂಬ ಸ್ಥಳಕ್ಕೆ ಹೋದೆ. ಕೆಂಪು ಸಮುದ್ರದ ಮೇಲೆ ನಿಯಂತ್ರಣ ಹೊಂದಿದ್ದ 'ಬೇಗ್'[1] ನನ್ನನ್ನು ಜಿಡ್ಡಾದಲ್ಲಿ ಇಳಿಸುವುದಿಲ್ಲ ಎಂದು ಮಾತುಕೊಟ್ಟಿದ್ದ. ಆದರೆ ಈಗ ಮಾತಿಗೆ ತಪ್ಪಿದ ಆತ ನನ್ನನ್ನು ಮುಹಮ್ಮದನ ಪವಿತ್ರಸ್ಥಾನವೆಂದು ಕರೆಯಲ್ಪಡುತ್ತಿದ್ದ ಆ ಸ್ಥಳದಲ್ಲಿ ಇಳಿಸಿಬಿಟ್ಟ. ಗುಲಾಮರಾದ ಕ್ರೈಸ್ತರ ವಿನಃ ಬೇರೆ ಕ್ರೈಸ್ತರಾರೂ ಅಲ್ಲಿಗೆ ಕಾಲಿಡುವ ಧೈರ್ಯ ಮಾಡುವುದಿಲ್ಲ.

ಜಿಡ್ಡಾದಲ್ಲಿ ನನ್ನನ್ನು ಐದು ವಾರಗಳ ಕಾಲ ಬಂಧನದಲ್ಲಿಟ್ಟಿದ್ದರು. ಬಿಡುಗಡೆಯಾದಮೇಲೆ ನಾನು ಇಥಿಯೋಪಿಯಾದ ರಾಜಧಾನಿ ಗೊಂಡೆರ್ (Gonder)[2] ಎಂಬಲ್ಲಿಗೆ ಹೋಗಬೇಕೆಂದಿದ್ದೆ. ಆದರೆ ಅಲ್ಲಿ ಕ್ರೈಸ್ತರಿಗೆ ಕ್ಷೇಮವಿಲ್ಲವೆಂದು ತಿಳಿದುಬಂದ ಕಾರಣ ಅಲ್ಲಿಗೆ ಹೋಗುವ ಉದ್ದೇಶವನ್ನು ಕೈಬಿಟ್ಟು, ಇಂಡಿಯಾದ ಹಡಗೊಂದರಲ್ಲಿ ಹೊರಟು, ಇಪ್ಪತ್ತೆರಡು ದಿನಗಳ ಕಾಲ ಸಮುದ್ರಯಾನಮಾಡಿ, ಮೊಗಲ್

---

[1]ಬೇಗ್ : ಈತ ಒಂದು ಪ್ರಾಂತದ ಮೇಲಿನ ಆಡಳಿತ ನಡೆಸುತ್ತಿದ್ದ ಒಬ್ಬ ಮುಖ್ಯಾಧಿಕಾರಿ. ಕೆಂಪು ಸಮುದ್ರದ ಬೇಗ್ ಬಹಳ ಪ್ರಮುಖನಾಗಿದ್ದ. 'ಜಿಡ್ಡಾ ಮುಖಾಂತರ ಮೆಕ್ಕಾಕ್ಕೆ ಹೋಗಿಬರುತ್ತಿದ್ದ ಯಾತ್ರಿಕರ ಮೇಲೆ ಹತೋಟಿ ಇಟ್ಟುಕೊಳ್ಳುವುದು ಇವನ ಕೆಲಸಗಳಲ್ಲಿ ಒಂದಾಗಿತ್ತು.

[2]ಗೊಂಡೆರ್ (Gonder) ; ಗೊಂಡಾರ್ : ಆಗ್ಗೆ ಅಬಿಸೀನಿಯಾದ ರಾಜಧಾನಿ. (ಈಗ ಅಡಿಸ್ ಅಬಾಬ ರಾಜಧಾನಿ). ಹಿಂದೆ ಅಬಿಸೀನಿಯಾ ದೇಶಕ್ಕೂ ಇಂಡಿಯಾ ದೇಶಕ್ಕೂ ನಡುವೆ ಬಹಳಷ್ಟು ವ್ಯಾಪಾರ ನಡೆಯುತ್ತಿತ್ತೆಂದು ಗೊತ್ತಾಗುತ್ತದೆ. ಗೊಂಡಾರದಲ್ಲಿರುವ ದೊಡ್ಡ ಕೋಟೆಯನ್ನು ಕಟ್ಟಲು (16ನೇ ಶತಮಾನದಲ್ಲಿ) ಇಂಡಿಯಾದ ಜನರನ್ನು ಕರೆಸಿಕೊಳ್ಳಲಾಗಿತ್ತಂತೆ.

ಚಕ್ರವರ್ತಿಯ ಸಾಮ್ರಾಜ್ಯವಾದ ಹಿಂದೂಸ್ಥಾನಕ್ಕೆ[1] ಸೇರಿದ ಸೂರತ್ ನಗರವನ್ನು ಮುಟ್ಟಿದೆ.

ಆಗ ಷಾಜಹಾನ್ ಚಕ್ರವರ್ತಿ ಹಿಂದೂಸ್ಥಾನವನ್ನು ಆಳುತ್ತಿದ್ದ. ಈತ ಜಹಾಂಗೀರನ ಮಗ ಮತ್ತು ಅಕ್ಬರನ ಮೊಮ್ಮಗ. ಇವರ ಪೂರ್ವಜನಾದ ತೈಮೂರ್ ಲಂಗನಿಂದ ಲೆಕ್ಕಹಾಕಿದರೆ ಆ ವಂಶಾವಳಿಯಲ್ಲಿ ಷಾಜಹಾನ್ ಹತ್ತನೆಯವನು. ಪರ ರಾಷ್ಟ್ರಗಳನ್ನು ಗೆದ್ದು ಜಯಭೇರಿ ಹೊಡೆಯುವುದರಲ್ಲಿ ಕೀರ್ತಿವೆತ್ತ ತೈಮೂರ ಮಹಾ ಟಾರ್ಟರ್ ದೇಶದ 'ಮೊಗಲ್'[2] ಎಂಬ ಜನಗಳ ರಾಜನ ಒಬ್ಬಳೇ ಮಗಳನ್ನು ಮದುವೆ ಯಾದ.[3] ಈಗ 'ಇಂದೂಸ್ಥಾನ'ವನ್ನು (Industan) ಆಳುವ ಪರದೇಶದವರಿಗೆ 'ಮೊಗಲರು' ಎಂಬ ಹೆಸರಿಟ್ಟಿದ್ದಾರೆ. 'ಇಂದೂಸ್ಥಾನ' ಎಂದರೆ 'ಇಂಡೌ'ಗಳ ನಾಡು (The Country of Indous) ಅಥವಾ 'ಇಂಡಿಯನ'ರ ನಾಡು. ಇಂದೂಸ್ಥಾನ ವನ್ನು ಮೊಗಲರು ಆಳುತ್ತಿದ್ದಾರೆ ಎಂದ ಮಾತ್ರಕ್ಕೆ ರಾಜ್ಯದ ಹಿರಿಯ ಅಧಿಕಾರಿಗಳೂ ಸೇನಾಧಿಕಾರಿಗಳೂ ಮೊಗಲ್ ಬುಡಕಟ್ಟಿಗೆ ಸೇರಿದವರೆಂದು ಭಾವಿಸಬಾರದು. ಈ ಅಧಿಕಾರಗಳಲ್ಲಿ ಮೊಗಲರಷ್ಟೇ ಇರದೆ ಇತರ ದೇಶದ ಜನರೂ ಇದ್ದಾರೆ. ಹೆಚ್ಚಾಗಿ ಪರ್ಷಿಯಾ, ಅರಬ್ ಮತ್ತು ತುರ್ಕಿ ದೇಶದವರನ್ನು ಕಾಣಬಹುದು. 'ಮೊಗಲ್' ಎಂದು ಕರೆಸಿಕೊಳ್ಳಬೇಕಾದರೆ, ಮುಖ ಬೆಳ್ಳಗಿದ್ದು ಮಹಮ್ಮದೀಯ ಮತವನ್ನು ಅವಲಂಬಿಸಿದ್ದರೆ ಸಾಕು. ಮೊಗಲರಿಗೆ ಪ್ರತಿಯಾಗಿ ಯೂರೋಪಿನ ಕ್ರೈಸ್ತರನ್ನು 'ಫರಂಗಿ' (Frangui=Farangi) ಗಳೆಂದೂ, ಕಂದುಬಣ್ಣದ (brown) 'ಇಂಡೌ' (Indou)ಗಳನ್ನು 'ಜೆಂಟೈಲ್'ರೆಂದೂ (Gentile)[4] ಕರೆಯುತ್ತಾರೆ.

---

[1]ಹಿಂದೂಸ್ಥಾನ (Hindustan) : ಬೆರ್ನ್ಯೇ ಒಮ್ಮೆ 'ಹಿಂದೂಸ್ಥಾನ' ಎಂದೂ ಇನ್ನೊಮ್ಮೆ 'ಇಂದೂಸ್ಥಾನ' (Industan) ಎಂದೂ ಹೇಳುತ್ತಾನೆ. ಗ್ರಂಥದಲ್ಲಿ ಹೇಗೆ ಹೇಳಿದೆಯೋ ಹಾಗೆಯೇ ಇಲ್ಲಿಯೂ ಹೇಳಲಾಗಿದೆ. ಆದರೆ 'ಹಿಂದೂಸ್ಥಾನ' ಎಂಬ ಪದವನ್ನು ಆತ ಉಪಯೋಗಿಸಿರಲಾರ. ಬಹುಶಃ ಆತನ ಗ್ರಂಥವನ್ನು ಪರಿಷ್ಕರಿಸಿದವರು ಆ ಪದವನ್ನು ಉಪಯೋಗಿಸಿರಬೇಕು. 'ಇಂದೂಸ್ಥಾನ' ಎಂಬ ಹೆಸರೇಕೆ ಬಂತೆಂದು ಮುಂದೆ ಬೆರ್ನ್ಯೇ ಹೇಳುವ ವಿವರಣೆಯಿಂದ, 'ಹಿಂದೂಸ್ಥಾನ' ಎಂಬ ಪದವನ್ನು ಆತ ಉಪಯೋಗಿಸಿರಲಾರ ಎಂದು ಖಚಿತ ವಾಗಿ ಹೇಳಬಹುದು.

[2]ಮೊಗಲ್ (Mogul) : ಇದು 'ಮುಘಲ್' (Mughal) ಎಂದಿರಬೇಕು. ಆದರೆ ಸಾಮಾನ್ಯವಾಗಿ ಮೊಗಲ್ ಎಂಬ ಪದವೇ ಬಳಕೆಯಲ್ಲಿರುವುದರಿಂದ ಅದನ್ನೇ ಪಾಠದಲ್ಲಿ ಉಳಿಸಿ ಕೊಳ್ಳಲಾಗಿದೆ.

[3]ತೈಮೂರ್ ಲಂಗನು ಹುಟ್ಟಿದ್ದು ಕ್ರಿ. ಶ. ೧೩೩೬ರಲ್ಲಿ. ಕಾಲವಾದದ್ದು ೧೪೦೫ ರಲ್ಲಿ. ಈತ ಮದುವೆಯಾದದ್ದು ಖುರಸಾನ್ ದೇಶದ ರಾಜಧಾನಿಯಾದ ಬಾಲ್ಖ್ ಎಂಬ ಊರಿನ ಅಧಿಪತಿ ಅಮೀರ್ ಹುಸೇನ್ ಎಂಬುವನ ಮಗಳನ್ನು.

[4]ಜೆಂಟೈಲ್ : ಪೋರ್ಚುಗೀಸ್ ಭಾಷೆಯ 'ಜೆಂಟಿಯೋ' ಎಂಬ ಪದದ ಅಪಭ್ರಂಶ. ಆ ಭಾಷೆಯಲ್ಲಿ 'ಜೆಂಟಿಯೋ' ಎಂದರೆ ಮಹಮ್ಮದೀಯನಲ್ಲದ ಹಿಂದೂ,

ನಾನು ಸೂರತ್ತನ್ನು ತಲುಪಿದಾಗ ಕೇಳಿ ತಿಳಿದುಕೊಂಡೆ, ಷಾಜಹಾನನಿಗೆ ಎಪ್ಪತ್ತು ವರ್ಷ ವಯಸ್ಸಾಗಿದೆ ಎಂದು. ಅಲ್ಲದೆ, ಆತನಿಗೆ ನಾಲ್ಕು ಜನ ಗಂಡುಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಇದ್ದಾರೆಂದು ಗೊತ್ತಾಯಿತು. ಗಂಡುಮಕ್ಕಳ ಹೆಸರು ದಾರಾ ಅಥವಾ ಡೇರಿಯಸ್, ಸುಲ್ತಾನ್ ಸೂಜ, ಔರಂಗಜೇಬ್ ಮತ್ತು ಮುರಾದ್ ಭಕ್ಷ. ಹೆಣ್ಣುಮಕ್ಕಳ ಹೆಸರು, ಬೇಗಂ ಸಾಹೇಬ್ ಮತ್ತು ರೋಷೆನಾರಾ ಬೇಗಂ ಎಂದು.[1] ಚಕ್ರವರ್ತಿ ತನ್ನ ನಾಲ್ಕು ಜನ ಗಂಡುಮಕ್ಕಳನ್ನು ನಾಲ್ಕು ಪ್ರಾಂತಗಳಿಗೆ ಸುಬೇದಾರರುಗಳನ್ನಾಗಿ (ವೈಸರಾಯರನ್ನಾಗಿ) ನೇಮಿಸಿ ಹಲವು ವರುಷಗಳಾಗಿದ್ದವು. ಹೀಗಿರುವಲ್ಲಿ, ಆತನಿಗೆ ಯಾವುದೊ ವ್ಯಾಧಿ ಪ್ರಾಪ್ತವಾಗಿ ಹನ್ನೆರಡು ತಿಂಗಳುಗಳ ಕಾಲ ಅವನನ್ನು ನರಳಿಸಿತು ; ಉಳಿಯುವುದೇ ಕಷ್ಟ ಎಂಬ ಸುದ್ದಿ ಹಬ್ಬಿತು. ಈ ಸುದ್ದಿ ಸಿಂಹಾಸನದ ಬಗ್ಗೆ ಆತನ ನಾಲ್ಕು ಮಕ್ಕಳ ಆಸೆಯನ್ನು ಕೆರಳಿಸಿತು. ಇದರ ಕಾರಣವಾಗಿ ಆ ಸಹೋದರರಲ್ಲಿ ಐದು ವರ್ಷಗಳ ಅಂತರ್ಯುದ್ಧ ನಡೆಯಿತು. ಆ ಯುದ್ಧದ ಮುಖ್ಯಾಂಶಗಳನ್ನು ನಾನು ಕಂಡಂತೆ ವರ್ಣಿಸಲು ಪ್ರಯತ್ನಮಾಡುತ್ತೇನೆ.

ಎಂಟು ವರ್ಷಗಳ ಕಾಲ ನನಗೂ ಮೊಗಲ್ ಆಸ್ಥಾನಕ್ಕೂ ನಿಕಟ ಸಂಪರ್ಕ ಬೆಳೆಯಿತು. ಈ ದೇಶಕ್ಕೆ ಕಾಲಿಟ್ಟಾಗ ಕಳ್ಳಕಾಕರ ಕೈಗೆ ಸಿಕ್ಕಿ ನಾನು ನಿರ್ಗತಿಕನಾಗಿ ಬಿಟ್ಟಿದ್ದೆ. ಸೂರತ್ತಿನಿಂದ ಆಗ್ರಾ ಹಾಗೂ ದಿಲ್ಲಿ ಪಟ್ಟಣಗಳಿಗೆ ಮಾಡಿದ ಏಳು ವಾರಗಳ ಪ್ರಯಾಣದಲ್ಲಿ ಅಪಾರ ಖರ್ಚುವೆಚ್ಚಗಳಾದುವು. ಈ ಎಲ್ಲ ಕಾರಣಗಳಿಂದ ನಾನು ಮೊಗಲ್ ಚಕ್ರವರ್ತಿಯ ವೈದ್ಯನಾಗಿ (Physician) ಸಂಬಳಕ್ಕೆ ಸೇರಬೇಕಾಯಿತು. ಅನಂತರ ಅಕಸ್ಮಾತ್ತಾಗಿ ದನೇಷ್–ಮಂಡ್–ಖಾನ್[2] ಎಂಬ ಹೆಸರಾಂತ ಅಮೀರನ

---

[1]ಷಾಜಹಾನ್‌ನ ಹೆಂಡತಿ ಮುಮತಾಜ್ ಮಹಲಳ (ತಾಜ್‌ಮಹಲಳ) ಹೊಟ್ಟೆಯಲ್ಲಿ ಹುಟ್ಟಿದ್ದು ಒಟ್ಟು ಹದಿನಾಲ್ಕು ಮಕ್ಕಳು. ಈ ಹದಿನಾಲ್ಕು ಮಕ್ಕಳಲ್ಲಿ ಎಂಟು ಗಂಡು ಮತ್ತು ಆರು ಹೆಣ್ಣು. ಕೆಲವು ಮಕ್ಕಳು ಸತ್ತು, ಉಳಿದುಕೊಂಡ ಮಕ್ಕಳ ಸಂಖ್ಯೆ ಏಳು. ಬದುಕಿದ ಏಳು ಮಕ್ಕಳಲ್ಲಿ ಒಂದು ಏಳನೇ ವರ್ಷದಲ್ಲಿಯೇ ಸತ್ತುಹೋಯಿತು. ಕೊನೆಗೆ ಉಳಿದವರು, ನಾಲ್ಕು ಗಂಡುಮಕ್ಕಳು ಮತ್ತು ಎರಡು ಹೆಣ್ಣುಮಕ್ಕಳು. ಗಂಡುಮಕ್ಕಳಲ್ಲಿ ಹಿರಿಯವನೇ ದಾರಾ ; ಹೆಣ್ಣುಮಕ್ಕಳಲ್ಲಿ ಹಿರಿಯವಳೇ ರೋಷನಾರಾ ಬೇಗಂ.

[2]ದನೇಷ್–ಮಂಡ್–ಖಾ : ಈತ ಪರ್ಷಿಯಾ ದೇಶದಿಂದ ವರ್ತಕನಾಗಿ ಈ ದೇಶಕ್ಕೆ ಬಂದ. ಈತನ ಹುಟ್ಟುಹೆಸರು ಮಹಮದ್ ಷಫಿ ಅಥವಾ ಮುಲ್ಲಾ ಷಫಿ ಎಂದು. ಕ್ರಿ. ಶ. ೧೬೪೬ರಲ್ಲಿ ಸೂರತ್ತಿಗೆ ಬಂದ ಈತನನ್ನು ಷಾಜಹಾನ್ ದಿಲ್ಲಿಗೆ ಕರೆಸಿಕೊಂಡು, ಮೂರುಸಾವಿರ ಸೈನ್ಯದ ಮನ್ಸಬ್‌ದಾರನಾಗಿ ನೇಮಿಸಿದನು. ಅಲ್ಲದೆ, ಸೇನೆಯ ಸಂಬಳ ಬಟವಾಡೆ ಮಾಡುವ ಭಕ್ಷಿಯಾಗಿಯೂ ನೇಮಿಸಿದನು. 'ದನೇಷ್–ಮಂಡ್–ಖಾನ್' ಎಂಬುದು ಚಕ್ರವರ್ತಿ ಕೊಟ್ಟ ಬಿರುದು. ಇವನು ಔರಂಗಜೇಬನ ಕಾಲದಲ್ಲಿ ಮತ್ತಷ್ಟು ಪ್ರವರ್ಧಮಾನಕ್ಕೆ ಬಂದು, ಷಾಜಹಾನಬಾದಿನ, ಅಂದರೆ ಹೊಸ ದಿಲ್ಲಿಯ, ರಾಜ್ಯಪಾಲನಾಗಿ ನೇಮಿಸಲ್ಪಟ್ಟನು. ಅಲ್ಲಿಯೇ ಈತ ೧೬೭೦ರಲ್ಲಿ ಕಾಲವಾದನು.

ಪರಿಚಯವಾಯಿತು. ಇವನು ಹಿಂದೆ ಚಕ್ರವರ್ತಿಯ ಬಳಿ ಅಶ್ವದಳದ 'ಭಕ್ಷಿ' ಯಾಗಿದ್ದ. ಇಡೀ ಏಷ್ಯಾದಲ್ಲಿಯೇ ಮಹಾ ವಿದ್ವಾಂಸನೆಂದು ಖ್ಯಾತಿಪಡೆದಿದ್ದ ಈತ ಬಹಳ ಪ್ರಭಾವಶಾಲಿಯೂ ಆಗಿದ್ದ. ಇಂಥವನ ಬಳಿ ನಾನು ಕೆಲಸಕ್ಕೆ ಸೇರಿಕೊಂಡೆ.

ಷಾಜಹಾನನ ಪಟ್ಟಮಹಿಷಿಯ ಹೆಸರು ತಾಜ್‌ಮಹಲ್[1] ಎಂದು. ಈಕೆ ಸೌಂದರ್ಯಕ್ಕೆ ಹೆಸರಾಗಿದ್ದಳು. ಈಕೆಯು ಕಾಲವಾದನಂತರ ಈಕೆಯ ಹೆಸರಿನಲ್ಲಿ ಕಟ್ಟಿಸಿರುವ ಭವ್ಯ ಸಮಾಧಿಭವನವು (ತಾಜ್‌ಮಹಲ್) ಈಜಿಪ್ಟಿನ ಆಕಾರವಿಲ್ಲದ ಮುದ್ದೆ ಮುದ್ದೆಯಾಗಿ ಗುಡ್ಡೆಹಾಕಿದ ಕಲ್ಲುಗಳಂತೆ ಇರದೆ, ಪ್ರಪಂಚದ ಆಶ್ಚರ್ಯವೆನಿಸಿ ಕೊಳ್ಳುವಷ್ಟು ಸುಂದರವಾಗಿದೆ.

ಬಹಳ ಕಾಲ (೧೬೦೫–೧೬೨೭) ರಾಜ್ಯವಾಳಿದ ಜಹಾಂಗೀರನ ಪಟ್ಟಮಹಿಷಿಯ ಹೆಸರು ನೂರ್‌ಮಹಲ್ ಎಂದು. ಗಂಡನು ಕುಡಿತ ಮತ್ತು ಸ್ತ್ರೀವ್ಯಸನಗಳಲ್ಲಿ ಮಗ್ನನಾದ ಕಾರಣದಿಂದಾಗಿ ರಾಜ್ಯದ ಸೂತ್ರಗಳು ಅವನ ಕೈಯಿಂದ ಸಡಿಲವಾಗಿ ಹೆಂಡತಿಯ ಕೈ ಸೇರಿದವು. ಆಕೆಯೇ ರಾಜ್ಯದ ಅಧಿಕಾರಗಳನ್ನು ಚಲಾಯಿಸಿದಳು. ಆಕೆಯೇ ಅನಂತರ ನೂರ್‌ಜಹಾನ್ ಬೇಗಂ ಎಂದರೆ ಪ್ರಪಂಚದ ಪ್ರದೀಪ ಎಂಬ ಹೆಸರಿನಲ್ಲಿ ಮೆರೆದವಳು.[2]

---

[1]ತಾಜ್‌ಮಹಲ್ : ಈಕೆಯ ಹುಟ್ಟುಹೆಸರು ಮುಮತಾಜ್ ಮಹಲ್ ಎಂದು. ಈಕೆ ಜಹಾಂಗೀರನ ಹೆಂಡತಿಯ ಸಹೋದರ ಅಸಫ್‌ಖಾನನ ಮಗಳು. ೧೫೯೩ರಲ್ಲಿ ಹುಟ್ಟಿದ ಈಕೆ, ತನ್ನ ಇಪ್ಪತ್ತನೆಯ ವರ್ಷದ ವಯಸ್ಸಿನಲ್ಲಿ ಷಾಜಹಾನನ್ನು ಮದುವೆಯಾದಳು. ೧೬೩೧ರಲ್ಲಿ ರೋಷನಾರ ಬೇಗಮಳು ಹುಟ್ಟಿದಾಗ ಸತ್ತುಹೋದಳು.

[2]ಪಶ್ಚಿಮ ಟಾರ್ಟರಿಯ ಘಿಯೂಸ್‌ಬೇಗ್ ಎಂಬ ಸಾಮಾನ್ಯನೊಬ್ಬ ಜೀವನ ಸಾಗಿಸುವುದಕ್ಕಾಗಿ ತನ್ನ ಹೆಂಡತಿ ಸಮೇತ ಇಂಡಿಯಾಕ್ಕೆ ಹೊರಟ. ಹೆಂಡತಿ ಗರ್ಭಿಣಿ. ದಾರಿಯಲ್ಲಿ ಅವರು ಭಿಕ್ಷೆ ಬೇಡಿ ಹೊಟ್ಟೆಹೊರೆದುಕೊಳ್ಳುತ್ತಿದ್ದರು. ಮೂರು ದಿನಗಳ ಕಾಲ ಹೊಟ್ಟೆಗಿಲ್ಲದೆ ಹಸಿದು ಕಂಗಾಲಾಗಿದ್ದ ವೇಳೆ ಹೆಂಡತಿ ಹೆಣ್ಣುಮಗುವೊಂದನ್ನು ಹಡೆದಳು. ಇರಲು ತಲೆಯ ಮೇಲೊಂದು ಸೂರಿಗೂ ಗತಿಯಿಲ್ಲದಿರುವಾಗ ಆ ಮಗುವನ್ನು ತೊರೆದುಬಿಡುವುದೇ ಒಳ್ಳೆಯದೆಂದು ಯೋಚಿಸಿ, ಅವರು ಅದನ್ನು ಅಲ್ಲೊಂದು ಕಡೆ ಮಲಗಿಸಿ ಮುಂದೆ ಬಂದರು. ಆದರೆ ಹೆತ್ತ ಕರುಳು ಸುಮ್ಮನಿದ್ದೀತೆ ? ತಾಯಿ ಓಡಿಹೋಗಿ ಮತ್ತೆ ಮಗುವನ್ನು ಎತ್ತಿಕೊಂಡು ಬಂದಳು. ಹೇಗೋ ಲಾಹೋರಿಗೆ ಬಂದರು. ಅಲ್ಲೊಬ್ಬ ಪರಿಚಯಸ್ಥ ಸಿಕ್ಕಿದ. ಆತನಿಂದಾಗಿ ಘಿಯಾಸ್‌ಬೇಗ್ ಅಕ್ಬರನ ಆಸ್ಥಾನದಲ್ಲಿ ಒಳ್ಳೆಯ ಹುದ್ದೆ ದೊರಕಿಸಿಕೊಂಡ. ಅರಮನೆಯ ಭಕ್ಷಿ ಆದ. ಆತನ ಮಗಳಿಗೆ ಮೆಹೆರುನ್ನೀಸಳೆಂದು ಹೆಸರು. ಬೆಳೆದ ಆಕೆಯನ್ನು ಒಬ್ಬ ಪರ್ಷಿಯನ್ ಅಮೀರನಿಗೆ ಕೊಟ್ಟು ಮದುವೆಮಾಡಿದ. ಆದರೆ ಆಕೆ ತನ್ನ ಅಂದಚೆಂದಗಳಿಂದ ಜಹಾಂಗೀರನ ಮನಸೆಳೆದುಬಿಟ್ಟಿದ್ದಳು. ಈ ಕಾರಣವಾಗಿಯೇ ಜಹಾಂಗೀರ ಆಕೆಯ ಗಂಡನನ್ನು ಉಪಾಯದಿಂದ ಕೊಲ್ಲಿಸಿ, ವಿಧವೆಯಾದ ಆಕೆಯನ್ನು ಮದುವೆಯಾದ. ಈ ರೀತಿ ಬೇಡವೆಂದು ಕಾಡಿನಲ್ಲಿ ಬಿಸಾಡಲ್ಪಟ್ಟ ಆ ಹೆಣ್ಣುಕೂಸು ಚಕ್ರವರ್ತಿಯ ಕೈ ಹಿಡಿದು ಇಡೀ ಮೊಗಲ್ ಸಾಮ್ರಾಜ್ಯವನ್ನು ಆಳುವಂತೆ ಆದದ್ದು ಒಂದು ಅಪೂರ್ವ ಘಟನೆಯೇ ಸರಿ!

ಷಾಜಹಾನನ ಹಿರಿಯ ಮಗ ದಾರಾನಲ್ಲಿ ಒಳ್ಳೆಯ ಗುಣಗಳಿಗೆ ಅಭಾವವಿರಲಿಲ್ಲ. ಮಾತಿನಲ್ಲಿ ನಯವಿನಯವಿತ್ತು ; ವಾದದಲ್ಲಿ ಸಿದ್ಧ ಚತುರ; ಮೇಲಾಗಿ ಬಹು ಉದಾರಿ. ಆದರೆ ಆತ ತನ್ನ ಬಗ್ಗೆ ತಾನೇ ಬಹಳ ಹೆಮ್ಮೆಪಟ್ಟುಕೊಳ್ಳುತ್ತಿದ್ದ. ತನ್ನ ಬುದ್ಧಿ ಶಕ್ತಿಯಿಂದಲೇ ಸರ್ವಸ್ವವನ್ನೂ ಸಾಧಿಸಬಲ್ಲೆನೆಂದು ಜಂಭಕೊಚ್ಚಿಕೊಳ್ಳುತ್ತಿದ್ದ. ತನಗೆ ಬುದ್ಧಿ ಹೇಳುವ ಶಕ್ತಿವಂತರಾರೂ ಇಲ್ಲವೆಂದೇ ಆತನ ಭಾವನೆಯಾಗಿತ್ತು. ಯಾರಾದರು ಹಿತವನ್ನು ಹೇಳಲು ಹೋದರೆ ಅವರನ್ನು ತುಚ್ಛವಾಗಿ ಕಾಣುತ್ತಿದ್ದ. ಹೀಗಾಗಿ, ಅವನ ತಮ್ಮಂದಿರು ಮಾಡುತ್ತಿದ್ದ ಕುತಂತ್ರಗಳನ್ನು ತಿಳಿಸುವುದಕ್ಕೆ ಅವನ ಹಿತೈಷಿಗಳಿಗೆ ಅವಕಾಶವೇ ಸಿಗುತ್ತಿರಲಿಲ್ಲ. ಒಮ್ಮೊಮ್ಮೆ ಸಿಟ್ಟಗೆದ್ದರೆ ಅಮೀರರುಗಳನ್ನೂ ಬೈಯ್ದುಬಿಡುತ್ತಿದ್ದ. ಆದರೆ ಆತನ ಸಿಟ್ಟು ಕೇವಲ ಕ್ಷಣಿಕವಾದದ್ದಾಗಿರುತ್ತಿತ್ತು. ಹುಟ್ಟುವಾಗಲೇ ಮುಹಮ್ಮದೀಯನಾಗಿ ಹುಟ್ಟಿದ್ದುದರಿಂದ ಆತ ಹೊರ ಪ್ರಪಂಚಕ್ಕೆ ತನ್ನ ಮತದ ಆಚರಣೆಯನ್ನು ಬಿಟ್ಟವನಂತೆ ಕಾಣುತ್ತಿರಲಿಲ್ಲ. ಆದರೆ ಆತ ತನ್ನ ಏಕಾಂತ ಜೀವನದಲ್ಲಿ ಕ್ರೈಸ್ತರೊಡನೆ ಕ್ರೈಸ್ತನಂತೆಯೂ, ಜೆಂಟೈಲರೊಡನೆ ಜೆಂಟೈಲರಂತೆಯೂ ಇದ್ದುಬಿಡುತ್ತಿದ್ದ. ಅವನ ಸುತ್ತುಮುತ್ತ ಜೆಂಟೈಲ್ 'ಪೆಂಡೆತ್'ರು (Pendeth : ಪಂಡಿತರು) ಇರುತ್ತಿದ್ದರು. ಅವರುಗಳಿಗೆ ಕೈತುಂಬ ಸಂಭಾವನೆಗಳನ್ನು ಕೊಡುತ್ತಿದ್ದ. ಹೀಗಾಗಿ ತಾನು ಮುಹಮ್ಮದೀಯ ಮತಕ್ಕೆ ವಿರುದ್ಧವಾದ ಬೋಧನೆಗಳಿಗೊಳಗಾಗಿಬಿಟ್ಟರು ವನೆಂಬ ಅಭಿಪ್ರಾಯಕ್ಕೆ ಎಡೆಮಾಡಿಕೊಟ್ಟಿದ್ದ. 'ಇಂದೂ' ಅಥವಾ ಜೆಂಟೈಲರ ಮತಧರ್ಮವನ್ನು ಕುರಿತು ನಾನು ಆಮೇಲೆ ಏನು ಹೇಳಲಿದ್ದೇನೆಯೋ ಅದರಿಂದ ಮೇಲ್ಕಂಡ ಮಾತು ಸ್ಪಷ್ಟವಾಗುವುದು. ಜೆಸೂಯಿಟ್ ಫಾದರ್ ಬೂಜೇ (Buzee) ಹೇಳಿದ ಮಾತುಗಳಿಗೂ ಕಿವಿಗೊಡುತ್ತಿದ್ದನೆಂದು ಹೇಳುತ್ತಾರೆ.

ಇದೊಂದು ಅಭಿಪ್ರಾಯವಾದರೆ, ಇನ್ನೊಂದು ಅಭಿಪ್ರಾಯ ದಾರಾನಿಗೆ ಯಾವ ಮತಧರ್ಮದಲ್ಲಿಯೂ ನಂಬಿಕೆಯಿರಲಿಲ್ಲವೆಂದೂ, ಕೇವಲ ಕುತೂಹಲಕ್ಕಾಗಿ ಆ ಮತ ಈ ಮತಗಳ ಬಗ್ಗೆ ತಿಳಿದುಕೊಳ್ಳಲೆತ್ನಿಸುತ್ತಿದ್ದನೆಂದೂ ಹೇಳುತ್ತಾರೆ. ಇನ್ನೂ ಒಂದು ಅಭಿಪ್ರಾಯವಿದೆ. ಅದೇನೆಂದರೆ, ಆತ ಒಮ್ಮೆ ಕ್ರೈಸ್ತನಾಗಿ, ಮತ್ತೊಮ್ಮೆ ಜೆಂಟೈಲನಾಗಿ ಇರುತ್ತಿದ್ದ ಎಂದು. ಇದಕ್ಕೆ ಕಾರಣ ಸೈನ್ಯದ ಗೋಲಂದಾಜ ಪಡೆಯಲಿದ್ದ ಕ್ರೈಸ್ತರ ಹಾಗೂ ರಾಜ್ಯದ ಜೆಂಟೈಲ್ ರಾಜರುಗಳಾದ 'ರಾಜ'ರುಗಳ ಸಹಾನುಭೂತಿ ಪಡೆಯುವ ಉದ್ದೇಶವಾಗಿತ್ತು. ಆಧರೆ ಇವನ ಈ ನಟನೆ ಯಾವ ಉಪಯೋಗಕ್ಕೂ ಬರಲಿಲ್ಲವೆಂಬುದು ಮುಂದೆ ನಾನು ಹೇಳಲಿರುವ ಸಂಗತಿಗಳಿಂದ ತಿಳಿದುಬರುವುದು. ಔರಂಗಜೇಬ ಇವನ ತಲೆಯನ್ನು ಕಡಿಸುವುದಕ್ಕೆ ಕೊಟ್ಟ ಕಾರಣವೇನೆಂದರೆ, ಈತ 'ಕಾಫರ್' ಆಗಿದ್ದನೆಂಬುದೇ ಆಗಿತ್ತು.

ಚಕ್ರವರ್ತಿಯ ಎರಡನೇ ಮಗ ಸುಲ್ತಾನ್ ಸೂಜ ಅನೇಕ ವಿಚಾರಗಳಲ್ಲಿ ಅಣ್ಣ ನನ್ನು ಹೋಲಿದರೂ ಅವನಿಗಿಂತ ಹೆಚ್ಚು ವಿವೇಕಿಯೂ, ಹೆಚ್ಚು ಮನೋದಾರ್ಢ್ಯವುಳ್ಳ

ವನೂ, ನಡೆನುಡಿಗಳಲ್ಲಿ ಹೆಚ್ಚು ವಿನಯವುಳ್ಳವನೂ ಆಗಿದ್ದ. ಒಳತಂತ್ರದಲ್ಲಿ ಬಹು ಚತುರನಾಗಿದ್ದ. ಅಮೀರರುಗಳಿಗೂ ರಾಜರುಗಳಿಗೂ ಗುಟ್ಟಾಗಿ ಬಹುಮಾನಗಳನ್ನಿತ್ತು, ಅವರನ್ನು ತನ್ನ ಕಡೆ ಒಲಿಸಿಕೊಳ್ಳುವ ವಿಧಾನವನ್ನು ತಿಳಿದಿದ್ದ. ಜಸವಂತ್‌ಸಿಂಗನಂತಹ ಬಲಾಢ್ಯ ರಾಜನ ಸ್ನೇಹ ಗಳಿಸಿದ್ದ. ಆದರೆ ಈತ ಸ್ತ್ರೀವ್ಯಸನಗಳಿಗೆ ಗುಲಾಮನಾಗಿ ಬಿಟ್ಟಿದ್ದ. ಅಸಂಖ್ಯಾತ ಸ್ತ್ರೀಯರನ್ನೊಳಗೊಂಡ ಅಂತಃಪುರವನ್ನು ಒಮ್ಮೆ ಸೇರಿಬಿಟ್ಟ ಎಂದರೆ ಹಗಲೂ ರಾತ್ರಿ ಕುಣಿಯುವುದು, ಹಾಡುವುದು ಮತ್ತು ಕುಡಿಯುವುದರಲ್ಲಿ ಮಗ್ನನಾಗಿಬಿಡುತ್ತಿದ್ದ. ತನಗೆ ಬೇಕಾದವರಿಗೆ ಕೊಡುವುದೆಂದರೆ ಆತನಿಗೆ ಅಡೆ ತಡೆಯೇ ಇರಲಿಲ್ಲ. ಅವರಿಗೂ ಇಂಥವನೇ ಬೇಕಾಗಿದ್ದುದರಿಂದ ಅದಕ್ಕೆ ಅವರು ಅಡ್ಡಿಬರಲಿಲ್ಲ. ಹೀಗಾಗಿ, ರಾಜ್ಯದ ಆಡಳಿತ ಸಡಿಲವಾಯಿತು. ಜನಗಳ ಪ್ರೀತಿ ಬಹುಮಟ್ಟಿಗೆ ಕುಂದಿ ಹೋಯಿತು. ಅಣ್ಣ ತಮ್ಮಂದಿರು ಮತ್ತು ತಂದೆಯು ತುರುಕರ (Turks) ಸುನ್ನಿ ಪಂಥವನ್ನು ಆಚರಿಸಿದರೆ ಈತ ಪರ್ಷಿಯನರ ಷಿಯಾ ಪಂಥವನ್ನು ಆಚರಿಸುತ್ತಿದ್ದ.

ಮಹಮ್ಮದೀಯ ಮತವು ಹಲವು ಪಂಥಗಳಾಗಿ ಒಡೆದುಹೋಗಿದೆ. ಇದನ್ನು ಕಂಡೇ ಗುಲಿಸ್ಥಾನದ ಹೆಸರಾಂತ ಕವಿ ಷೇಕ್ ಸಾದಿ ಹೀಗೆ ಹಾಡುತ್ತಾನೆ :

> ಕುಡಿದು ಬೀಳುವ ಫಕೀರ ನಾನು ;
> ಮತವೆಂಬ ನಿಯಮವಿಲ್ಲೆನಗೆ ;
> ಪಂಥಗಳೆಪ್ಪತ್ತೆರಡೂ ಬಲ್ಲವು ನನ್ನ. [1]

ಹೀಗೆ ಹಲವಾರು ಪಂಥಗಳಲ್ಲಿ ಒಂದಾದ ಪರ್ಷಿಯನರ ಪಂಥವನ್ನು ಸುಲ್ತಾನ್ ಸೂಜ ಆಚರಿಸುತ್ತಿದ್ದ ಕಾರಣವೇನೆಂದರೆ, ದೊಡ್ಡ ದೊಡ್ಡ ಅಧಿಕಾರಿಗಳಲ್ಲಿಯೂ ಮೊಗಲ್ ಆಸ್ಥಾನದಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿದ್ದ ಪರ್ಷಿಯನರನ್ನು ಒಲಿಸಿಕೊಳ್ಳುವುದಕ್ಕಾಗಿ.

ಮೂರನೆಯ ಮಗನಾದ ಔರಂಗಜೇಬನಲ್ಲಿ ಅಣ್ಣ ದಾರಾನಲ್ಲಿದ್ದ ಸುಸಂಸ್ಕೃತ ವರ್ತನೆಯಾಗಲಿ, ಆಕರ್ಷಕ ವ್ಯಕ್ತಿತ್ವವಾಗಲಿ ಇರಲಿಲ್ಲ. ಆದರೆ ಆತನಲ್ಲಿ ಹೆಚ್ಚು ವಿವೇಕವೂ, ತನಗೆ ಬೇಕಾದವರನ್ನು ಆರಿಸಿಕೊಳ್ಳುವುದರಲ್ಲಿ ಹೆಚ್ಚು ವಿಚಕ್ಷಣೆಯೂ ಇದ್ದುವು. ಉದಾರವಾಗಿಯೇನೋ ಕೊಡುತ್ತಿದ್ದ. ಆದರೆ ತನಗೆ ಬೇಕಾದವರಿಗೆ

---

[1] I am a drinking Derviche ;
I am apparently without religion ;
I am known by the seventy two sects.

ಮಾತ್ರ. ಹೆಚ್ಚು ಮಾತಿಲ್ಲ. ಇನ್ನೊಬ್ಬರ ಹಿಡಿತಕ್ಕೆ ಸಿಕ್ಕದಂತಹ ಸೂಕ್ಷ್ಮ ಬುದ್ಧಿ. ಕಪಟಕಲೆಯಲ್ಲಿ ಸಂಪೂರ್ಣ ಪಾಂಡಿತ್ಯ. ತಂದೆಯ ಆಸ್ಥಾನದಲ್ಲಿರುವ ತನಗೆ ಪ್ರಪಂಚದ ಗೋಜೇ ಬೇಡ ಎನ್ನುವಂತೆ ವರ್ತಿಸುತ್ತಿದ್ದ. ಆದರೆ ಒಳಗೊಳಗೇ ತನ್ನ ಮುಂದಿನ ಮಾರ್ಗಕ್ಕೆ ಸನ್ನಾಹ ಮಾಡಿಕೊಳ್ಳುತ್ತಿದ್ದ. ಈತನನ್ನು ಷಾಜಹಾನ್ ಡೆಕನಿನ ಸುಬೇದಾರ ನನ್ನಾಗಿ (ವೈಸ್‌ರಾಯ್ ಆಗಿ) ನೇಮಿಸಿದಾಗ ತಾನು ಎಲ್ಲವನ್ನೂ ಬಿಟ್ಟ ಫಕೀರನಾಗಲು ಇಚ್ಛಿಸುವುದಾಗಿ ನಟಿಸಿದ. ಆದರೆ ಅವನ ಇಡೀ ಜೀವನವೆಲ್ಲ ಕುತಂತ್ರ ಹಾಗೂ ಕಪಟನಾಟಕಗಳ ರಾಜತಂತ್ರದಲ್ಲಿ ಅದ್ದಿಹೋಗಿದೆ. ಅವುಗಳಲ್ಲಿ ಎಷ್ಟು ಪರಿಣತನಾಗಿದ್ದ ನೆಂದರೆ, ದಾರಾನನ್ನು ಬಿಟ್ಟು ಬೇರೆಯವರಿಗೆ ಅವು ಗೊತ್ತಾಗುತ್ತಲೇ ಇರಲಿಲ್ಲ. ಷಾಜಹಾನನು ತನ್ನ ಮೂರನೆಯ ಮಗ ಔರಂಗಜೇಬನ ಬಗೆಗೆ ಹೊಂದಿದ್ದ ಒಳ್ಳೆಯ ಅಭಿಪ್ರಾಯ ದಾರಾನ ಮನಸ್ಸಿನಲ್ಲಿ ತಮ್ಮನ ಬಗೆಗೆ ಅಸೂಯೆಯನ್ನು ಹುಟ್ಟಿಸಿತ್ತು. ಅದನ್ನು ದಾರಾ ಆಗಾಗ್ಗೆ ತನ್ನ ಆಪ್ತರಲ್ಲಿ ಹೇಳಿಕೊಳ್ಳುತ್ತಿದ್ದ. 'ನಮಾಜು ಮಾಡು ವಂತೆ ನಟಿಸುವ ಆ ಫಕೀರನ ಬಗೆಗೆ ನನಗಂತೂ ತುಂಬಾ ಅನುಮಾನ' ಎಂದು ತನ್ನ ಸಂದೇಹವನ್ನು ವ್ಯಕ್ತಪಡಿಸುತ್ತಿದ್ದ.

ಮೊಗಲ್ ಚಕ್ರವರ್ತಿಯ ಕಿರಿಯ ಮಗ ಮುರಾದ್ ಬಕ್ಷನು ತನ್ನ ಮೂರು ಜನ ಅಣ್ಣಂದಿರಿಗಿಂತ ಬುದ್ಧಿಯಲ್ಲಿಯೂ ಮಾತುಕತೆಯಲ್ಲಿಯೂ ಕೀಳು. ಅವನ ಒಂದೇ ಒಂದು ಯೋಚನೆಯೆಂದರೆ, 'ನಾನು ಹೇಗೆ ಸುಖ ಪಡಲಿ !' ಎಂಬುದು. ಊಟ ಮತ್ತು ಬೇಟೆ –ಇವುಗಳಲ್ಲಿ ಆತ ಸದಾ ತಲ್ಲೀನನಾಗಿರುತ್ತಿದ್ದ. ಆದರೂ ಉದಾರಿ ಹಾಗೂ ವಿನಯಶೀಲ. ತನ್ನಲ್ಲಿ ಗುಟ್ಟೆಂಬುದೇ ಇಲ್ಲವೆಂದು ಜಂಭಕೊಚ್ಚಿಕೊಳ್ಳುತ್ತಿದ್ದ. ಮಂತ್ರಿ ಮಂಡಲದ ಒಳಸಂಚುಗಳೆಂದರೆ ಅಲ್ಲಗಳೆಯುತ್ತಿದ್ದ. ಆತನಿಗೆ ನೆಚ್ಚಿಕೆಯಿದ್ದದು ಒಂದೇ ಒಂದರಲ್ಲಿ : ಭುಜಬಲ ಪರಾಕ್ರಮದಲ್ಲಿ. ಆತ ಧೈರ್ಯಶಾಲಿಯೇನೋ ಸರಿ. ಆದರೆ ಧೈರ್ಯದೊಡನೆ ಕೊಂಚ ವಿವೇಕವೂ ಸೇರಿದ್ದರೆ ಆತ ಮೂವರು ಅಣ್ಣಂದಿರನ್ನು ಮೀರಿಸಿ ಹಿಂದೂಸ್ಥಾನದ ಚಕ್ರಾಧಿಪತಿಯಾಗುತ್ತಿದ್ದ.

ಷಾಜಹಾನನ ಹಿರಿಯ ಮಗಳಾದ ಬೇಗಂ ಸಾಹೇಬಳು ಬಹು ರೂಪವತಿ. ಅಪ್ಪ ನಿಗೆ ಅಚ್ಚುಮೆಚ್ಚು. ಈ ಅಚ್ಚುಮೆಚ್ಚು ಎಲ್ಲಿಯವರೆವಿಗೆ ಹೋಗಿತ್ತೆಂದರೆ, ಜನಗಳು ನಂಬಲಾರದಂತಹ ಒಂದು ಸುದ್ದಿಯನ್ನೇ ಹಬ್ಬಿಸಿಬಿಟ್ಟರು. ತನ್ನ ಮಗಳ ಬಗ್ಗೆ ತನ್ನ ಅತಿಶಯವಾದ ಪ್ರೀತಿ ಸರಿಯೇ ತಪ್ಪೇ ಎಂಬುದನ್ನು ಮುಲ್ಲಾಗಳೇ ಯೋಚಿಸಿ ತೀರ್ಮಾ ನಿಸಲಿ ಎಂದು ಷಾಜಹಾನ ಹೇಳಿದನಂತೆ. ಮುಲ್ಲಾಗಳ ಅಭಿಪ್ರಾಯ ಏನಿತ್ತು ಗೊತ್ತೆ ? 'ಸ್ವತಃ ನೆಟ್ಟ ಮರದ ಹಣ್ಣಿನ ರುಚಿ ನೋಡುವುದರಲ್ಲಿ ಏನೂ ಅಭ್ಯಂತರವಿಲ್ಲ !'

ಮಗಳ ಮೇಲೆ ತಂದೆಗೆ ಅಪಾರ ನಂಬಿಕೆ. ಮಗಳೂ ತಂದೆಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದಳು. ಆಕೆಯ ಮೇಲುಸ್ತುವಾರಿಯಲ್ಲಿ ತಯಾರಾಗದ

ಯಾವ ಭಕ್ಷ್ಯಭೋಜ್ಯವೂ ಚಕ್ರವರ್ತಿಯ ಬಳಿಗೆ ಹೋಗುತ್ತಿರಲಿಲ್ಲ: ಈ ಕಾರಣ ಗಳಿಂದ ಆಕೆಯ ಪ್ರಭಾವ ಆತನ ಮೇಲೆ ಅಪಾರವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಈ ಪ್ರಭಾವದಿಂದಾಗಿ ಆಕೆ ಅನೇಕ ವಿಧಗಳಲ್ಲಿ ಅಪಾರ ಐಶ್ವರ್ಯವನ್ನೂ ಗಳಿಸಿದಳು. ಅಣ್ಣ ದಾರಾನ ಬಗ್ಗೆ ತನ್ನ ಅಭಿಮಾನವನ್ನು ಬಹಿರಂಗವಾಗಿ ವ್ಯಕ್ತಪಡಿಸುತ್ತಿದ್ದಳು. ದಾರಾ ಕೂಡ ತಂಗಿಯನ್ನು ಬಹು ಪ್ರೀತಿಯಿಂದ ಕಾಣುತ್ತಿದ್ದ. ತಾನು ಚಕ್ರವರ್ತಿ ಯಾದರೆ ತಂಗಿಯ ಮದುವೆಗೆ ಅನುಮತಿ ನೀಡುವುದಾಗಿ ಹೇಳುತ್ತಿದ್ದನೆಂದು ಜನಗಳು ಮಾತಾಡುತ್ತಾರೆ. ಏಕೆಂದರೆ, ಹಿಂದೂಸ್ಥಾನದಲ್ಲಿ ರಾಜಕುಮಾರಿಯರು ಮದುವೆ ಯಾಗುವುದೇ ಅಪರೂಪ. ಅವರಿಗೆ ಅನುರೂಪರಾದ ವರಗಳು ಇಲ್ಲವೆಂದೇ ಚಕ್ರವರ್ತಿಗಳ ಭಾವನೆ. ಎಲ್ಲಿಯಾದರೂ ಅನುರೂಪನಾದವನೊಬ್ಬ ಇದ್ದು, ಅವನನ್ನು ರಾಜಕುಮಾರಿ ಮದುವೆಯಾದರೆ ಅವಳ ಗಂಡನೆಲ್ಲಿ ತಮ್ಮ ಮೇಲೆ ಕೈಮಾಡಿಬಿಡುವನೋ ಆದರಿಂದ ಸಿಂಹಾಸನಕ್ಕೆಲ್ಲಿ ಧಕ್ಕೆ ಬರುವುದೋ ಎಂಬ ಭೀತಿ ಚಕ್ರವರ್ತಿಗಳಿಗೆ.

ಮದುವೆ ಇಲ್ಲದ ಬೇಗಂ ಸಾಹೇಬಳು ಏನು ಮಾಡಿಯಾಳು ? ರಹಸ್ಯ ಪ್ರಣಯಕ್ಕೆ ಕೈಹಾಕಿದಳು. ಅದಕ್ಕೆ ಸಂಬಂಧಿಸಿದ ಎರಡು ಪ್ರಸಂಗಗಳನ್ನು ನಾನು ಇಲ್ಲಿ ಹೇಳ ಬಯಸುತ್ತೇನೆ. ಇವನ್ನು ಕೇಳಿ ನಾನು ಪ್ರಣಯ ಕಥೆಗಳಿಗೆ ವಸ್ತುವನ್ನು ಒದಗಿಸು ತ್ತಿದ್ದೇನೆಂದು ಭಾವಿಸಬಾರದು. ನಾನು ಹೇಳುತ್ತಿರುವುದು ಚರಿತ್ರೆಯ ದೃಷ್ಟಿಯಿಂದಲೇ ಹೊರತು ಬೇರೆಯಲ್ಲ. ಈ ಜನಗಳ ನಡೆನುಡಿಗಳನ್ನು ಹೇಳುವುದೇ ನನ್ನ ಉದ್ದೇಶ. ಪ್ರಣಯ ಸಾಹಸಗಳಿಗೆ ಏಷ್ಯಾದಲ್ಲಿರುವಷ್ಟು ಅಪಾಯ ಯೂರೋಪಿನಲ್ಲಿ ಇಲ್ಲ. ಫ್ರಾನ್ಸಿನಲ್ಲಿ ಇಂಥವುಗಳನ್ನು ಕೇವಲ ತಮಾಷೆಯ ಪ್ರಸಂಗಗಳೆಂದು ಹೇಳಿ ನಕ್ಕು ಮರೆತು ಬಿಡುತ್ತಾರೆ. ಆದರೆ ಪ್ರಪಂಚದ ಈ ಭಾಗದಲ್ಲಿ ಅವು ಒಂದಲ್ಲ ಒಂದು ಅನಾಹುತದಲ್ಲಿ ಸಮಾಪ್ತಿಯಾಗದೆ ಇರುವುದಿಲ್ಲ.

ಅಂತಃಪುರದಲ್ಲಿಯೇ ಇದ್ದು ಸದಾ ಊಳಿಗದ ಅವ್ವೆಯರಿಂದ ಸುತ್ತುವರಿಯಲ್ಪಟ್ಟಿದ್ದ ಬೇಗಂ ಸಾಹೇಬಳ ಮನಸ್ಸು ಒಬ್ಬ ಯುವಕನ ಮೇಲೆ ಬಿದ್ದಿತು. ಆತ ಅಂತಹ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದವನಲ್ಲ. ಆದರೂ ಆತ ಆಕೆಯ ಮೆಚ್ಚುಗೆಗೆ ಪಾತ್ರ ನಾಗಿದ್ದ. ಆಗಾಗ್ಗೆ ಆತ ಅಂತಃಪುರಕ್ಕೆ ಬಂದುಹೋಗುತ್ತಿದ್ದ. ಅಸೂಯೆಯ ಕಣ್ಣು ಗಳಿಂದ ಈ ಗುಪ್ತಪ್ರಣಯವನ್ನು ಬಚ್ಚಿಡಲು ಸಾಧ್ಯವೇ ಹೇಳಿ ! ಆ ಸುದ್ದಿ ಅವರಿವರಿಂದ ಹಾದು ಚಕ್ರವರ್ತಿಯ ಕಿವಿಗೂ ಬಿತ್ತು. ಇದನ್ನು ಪರೀಕ್ಷೆಮಾಡಿಯೇಬಿಡಬೇಕೆಂದು ನಿರ್ಧರಿಸಿದ ತಂದೆ ಒಂದು ದಿನ ಅನಿರೀಕ್ಷಿತವಾಗಿ ಮಗಳ ನಿವಾಸದ ಕಡೆಗೆ ಧಾವಿಸಿದ. ತಂದೆ ಬರುತ್ತಿರುವನೆಂದು ಕೇಳಿದ ಮಗಳು ತನ್ನ ಪ್ರಿಯತಮನನ್ನು ಬಚ್ಚಿಡಲು ಪರದಾ ಡಿದಳು. ಬೇರೆ ಯಾವ ಗುಪ್ತ ಸ್ಥಳವೂ ಕಾಣದೆಹೋಯಿತು. ತನ್ನ ಸ್ನಾನಕ್ಕೆ ನೀರು ಕಾಯಿಸಲು ಇದ್ದ ದೊಡ್ಡ ಹಂಡೆಯೊಂದನ್ನೇ ಪ್ರಿಯತಮನ ಗುಪ್ತ ಸ್ಥಳವಾಗಿ ಉಪಯೋಗಿಸಿದಳು. ತಂದೆ ಕೋಣೆಗೆ ಬಂದ. ಆಶ್ಚರ್ಯವನ್ನಾಗಲೀ ಅಸಮಾಧಾನ

ವನ್ನಾಗಲಿ ತೋರಿಸಲಿಲ್ಲ. ಮಗಳೊಡನೆ ಅದೂ ಇದೂ ವಿಚಾರ ಮಾತನಾಡುತ್ತ, ವೈಶುಚಿಯ ಬಗ್ಗೆ ಮಗಳು ಅಷ್ಟು ಗಮನ ಕೊಟ್ಟಿಲ್ಲವೆಂದು ಹೇಳಿದ. ಇಷ್ಟು ಹೇಳಿ ಹೊರಟುಹೋಗದೆ, ಮಗಳ ಸ್ನಾನಕ್ಕೆ ಆಗಲೇ ನೀರು ಕಾಯಿಸುವಂತೆ ಖೋಜಾಗಳಿಗೆ ಆಜ್ಞೆಮಾಡಿದ. ರಾಜಾಜ್ಞೆಯನ್ನು ಮೀರಲಾದೀತೆ ? ಹಂಡೆಗೆ ಉರಿಹಾಕಿದರು. ಮಗಳ ಪ್ರಿಯತಮನು ಬೆಂದು ಸತ್ತುಹೋದನೆಂದು ಖಚಿತಮಾಡಿಕೊಳ್ಳುವವರೆಗೆ ತಂದೆ ಅಲ್ಲಿಂದ ಕದಲಲಿಲ್ಲ.

ಈ ದುರಂತ ಪ್ರಣಯಪ್ರಸಂಗದಿಂದ ಚೇತರಿಸಿಕೊಂಡಮೇಲೆ ಬೇಗಂಸಾಹೇಬಳು ಮತ್ತೊಂದು ಪ್ರಸಂಗಕ್ಕೆ ಕೈಹಾಕಿದಳು. ಅದಕ್ಕೂ ಇದೇ ಗತಿಯಾಯಿತು! ತನ್ನ ಕುದುರೆಗಳ ಮೇಲ್ವಿಚಾರಕನಾಗಿ ಆಕೆ ನಜರ್‌ಖಾನ್ ಎಂಬ ಪರ್ಷಿಯಾ ದೇಶದ ಯುವಕನನ್ನು ನೇಮಿಸಿಕೊಂಡಳು. ಆತ ಯುವಕನಷ್ಟೇ ಅಲ್ಲದೆ, ಒಳ್ಳೆ ಮನೆತನದವನೂ ಆಗಿದ್ದ. ಮೆಚ್ಚಬೇಕಾದ ನಡತೆಯೂ ಬುದ್ಧಿಚಾತುರ್ಯಗಳೂ ಅವನಲ್ಲಿದ್ದುವು. ಕೆಚ್ಚೆದೆ ಹಾಗೂ ಹಿರಿಯಾಸೆಗಳ ಆತ ಇಡೀ ಆಸ್ಥಾನಕ್ಕೆ ಅಚ್ಚುಮೆಚ್ಚಿನವನಾಗಿದ್ದ. ಔರಂಗ ಜೇಬನ ಕಕ್ಕ ಷೈಸ್ತಾಖಾನನಿಗಂತೂ ಅವನ ಬಗ್ಗೆ ಬಹಳ ಅಭಿಮಾನ. ಬೇಗಂ ಸಾಹೇಬಳನ್ನು ಈ ಯುವಕನಿಗೆ ಕೊಟ್ಟು ಮದುವೆಮಾಡಬೇಕೆಂಬ ಸಲಹೆಯನ್ನು ಆತ ಚಕ್ರವರ್ತಿಯ ಮುಂದಿಟ್ಟ. ಆದರೆ ಅದು ಚಕ್ರವರ್ತಿಗೆ ಹಿಡಿಸಲಿಲ್ಲ. ಮಗಳಿಗೂ ಆತನಿಗೂ ಆಗಲೇ ಸಂಬಂಧ ಬೆಳೆದಿದೆಯೆಂಬ ಅನುಮಾನ ಅವನಿಗೆ ಹೇಗೋ ಗೊತ್ತಾಗಿತ್ತು. ಹೀಗಿರುವಾಗ ತಾನೇನು ಮಾಡಬೇಕೆಂಬುದರ ಬಗ್ಗೆ ಆತ ಹೆಚ್ಚು ಆಲೋಚಿಸಬೇಕಾದ ಆವಶ್ಯಕತೆಯಿರಲಿಲ್ಲ. ಒಂದು ದಿನ ಚಕ್ರವರ್ತಿ ಆ ಯುವಕನನ್ನು ತುಂಬಿದ ರಾಜ ಸಭೆಗೆ ಕರೆದು ವೀಳೆಯವನಿತ್ತು ಗೌರವಿಸಿದ. ಕೊಟ್ಟ ವೀಳೆಯವನ್ನು ನಿಂತ ಹೆಜ್ಜೆಯಲ್ಲಿಯೇ ಸೇವಿಸಬೇಕಾದುದು ಸಭಾಮರ್ಯಾದೆಯಾಗಿತ್ತು. ಹಸನ್ಮುಖನಾದ ಚಕ್ರವರ್ತಿ ಕರಾಳ ವಿಷವನ್ನು ನೀಡಿದನೆಂದು ಆ ನಿರ್ಭಾಗ್ಯ ಪ್ರೇಮಿ ಹೇಗೆ ಭಾವಿಸಿಯಾನು ! ಕೊಟ್ಟ ವೀಳೆಯವನ್ನು ಈಸಿ ಆಗಲೇ ಸೇವಿಸಿದವನು, ಭಾವಿ ಸುಖದ ಕನಸು ಕಾಣುತ್ತ ಹೊರಗೆ ಬಂದು ಪಲ್ಲಕ್ಕಿಯನ್ನೇರಿ ಮನೆಯನ್ನು ಮುಟ್ಟುವುದೇ ತಡ, ಸಾವಿನ ನನಸನ್ನು ಕಾಣಬೇಕಾಯಿತು !

ಚಕ್ರವರ್ತಿಯ ಕಿರಿಯ ಮಗಳು ರೋಷನಾರ ಬೇಗಮಗಳು ಅಕ್ಕನಷ್ಟು ಅಂದ ಚೆಂದದವಳಲ್ಲ. ಅಲ್ಲದೆ, ಅಷ್ಟೇನು ಬುದ್ಧಿವಂತಳೂ ಅಲ್ಲ. ಆದರೆ ಲಲ್ಲೆಗಳಾಡುತ್ತ ಸುಖದ ಆರಾಧನೆಯಲ್ಲಿ ಅಕ್ಕನಿಗೇನೂ ಕಡಿಮೆಯಿರಲಿಲ್ಲ. ಈಕೆ ಔರಂಗಜೇಬನ ಪಕ್ಷ ವಹಿಸಿ ದಾರಾ ಮತ್ತು ಬೇಗಂಸಾಹೇಬಳ ಮೇಲೆ ತನಗಿದ್ದ ವೈಮನಸ್ಸನ್ನು ಬಹಿರಂಗ ಮಾಡಿಕೊಂಡಳು. ಆ ಕಾರಣವೇ ಇರಬೇಕು, ಈಕೆ ಅಕ್ಕನಷ್ಟು ಶ್ರೀಮಂತಳಾಗಿಲ್ಲದೆ ಇದ್ದುದಕ್ಕೆ. ಸಾರ್ವಜನಿಕ ವಿಷಯಗಳಲ್ಲಿಯೂ ಆಕೆ ಅಷ್ಟು ಆಸಕ್ತಿ ವಹಿಸುತ್ತಿರಲಿಲ್ಲ.

ಆದರೂ ಅಂತಃಪುರದಲ್ಲಿದ್ದ ಆಕೆಗೆ ಅನೇಕ ವಿಚಾರಗಳು ತಿಳಿದುಬರುತ್ತಿದ್ದುವು. ಅವನ್ನು ಗೂಢಚಾರರ ಮೂಲಕ ಔರಂಗಜೇಬನಿಗೆ ತಿಳಿಸುತ್ತಿದ್ದಳು.

ಚಕ್ರವರ್ತಿಯ ಗಂಡುಮಕ್ಕಳೆಲ್ಲ ಮದುವೆಯಾಗಿ ಮಕ್ಕಳನ್ನೂ ಪಡೆದಿದ್ದರು. ಆದರೆ ಅವರಲ್ಲಿ ಪರಸ್ಪರ ಸಹೋದರ ಭಾವನೆ ಶೂನ್ಯವಾಗಿತ್ತು. ಒಬ್ಬರ ಮೇಲೊಬ್ಬರು ಕತ್ತಿ ಮಸೆಯುತ್ತಾ ಸಿಂಹಾಸನಕ್ಕೆ ಪೈಪೋಟಿ ನಡೆಸುತ್ತಿದ್ದರು. ಇವರ ಈ ವೈಷಮ್ಯ ದಿಂದಾಗಿ ಮೊಗಲ್ ಆಸ್ಥಾನ ಒಡೆದ ಹಾಲಾಗಿತ್ತು. ತನ್ನೀ ಮೊಂಡ ಬುದ್ಧಿಯ ಮಕ್ಕಳನ್ನು ಅಭೇದ್ಯವಾದ ಗ್ವಾಲಿಯರ್ ಕೋಟೆಯಲ್ಲಿ ಕೂಡಿಡುವುದು ಸಾಧ್ಯವಾಗಿದ್ದರೆ ಅದಕ್ಕಿಂತ ಹೆಚ್ಚಿನ ಸಂತೋಷ ಷಾಜಹಾನನಿಗೆ ಬೇರೊಂದಿರಲಿಲ್ಲವಾಗಿತ್ತು. ಆದರೆ ಬಹು ಬಲಾಢ್ಯರಾಗಿಬಿಟ್ಟಿದ್ದ ಅವರನ್ನು ಅಷ್ಟು ಸುಲಭವಾಗಿ ಬಗ್ಗಿಸುವಂತಿರಲಿಲ್ಲ. ಯಾವಾಗ ಅಂದರೆ ಆಗ ಅವರು ಸ್ವತಂತ್ರರಾಗಿ ತಮ್ಮ ತಮ್ಮ ರಾಜ್ಯಗಳನ್ನು ಸ್ಥಾಪನೆಮಾಡಿ ಕೊಂಡುಬಿಡುವರೋ ಅಥವಾ ರಾಜಧಾನಿಯನ್ನೇ ರಣರಂಗವಾಗಿ ಪರಿವರ್ತಿಸಿಬಿಡುವರೋ ಎಂಬ ಭೀತಿ ಷಾಜಹಾನನಿಗೆ ಇತ್ತು.

ಒದಗಬಹುದಾದ ಅಪಾಯವನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಆತ ತನ್ನ ನಾಲ್ಕು ಮಕ್ಕಳನ್ನು ನಾಲ್ಕು ದೂರದ ಪ್ರಾಂತಗಳಿಗೆ ಕಳುಹಿಸಿಬಿಟ್ಟ. ಬಂಗಾಳಕ್ಕೆ ಸುಲ್ತಾನ್ ಸೂಜನನ್ನೂ, ಡೆಕನಿಗೆ (ದಖನ್ ಅಥವಾ ದಕ್ಷಿಣಕ್ಕೆ) ಔರಂಗಜೇಬನನ್ನೂ, ಗುಜರಾತಿಗೆ ಮುರಾದ್ ಭಕ್ಷನನ್ನೂ ಮತ್ತು ಕಾಬೂಲು ಮುಲ್ತಾನ್‌ಗಳಿಗೆ ದಾರಾ ನನ್ನೂ ಸುಬೇದಾರರುಗಳನ್ನಾಗಿ (ವೈಸರಾಯ್‌ಗಳನ್ನಾಗಿ) ನೇಮಿಸಿದನು. ದಾರಾನನ್ನು ಬಿಟ್ಟು ಉಳಿದ ಮಕ್ಕಳು ಅವರವರ ರಾಜ್ಯಗಳಿಗೆ ಹೊರಟುಹೋದರು. ಹೋದಮೇಲೆ ಅವರು ಸ್ವತಂತ್ರರೆಂಬಂತೆ ವರ್ತಿಸಿದರು. ರಾಜ್ಯವನ್ನು ದಂಗೆ ದರೋಡೆಗಳಿಂದ ಕಾಪಾಡ ಬೇಕೆಂಬ ಮತ್ತು ಪರಕೀಯರ ಧಾಳಿಯನ್ನು ಎದುರಿಸಬೇಕೆಂಬ ನೆಪ ಹೂಡಿ ಭಾರಿ ಸೈನ್ಯಗಳನ್ನು ಕಟ್ಟಿದರು. ಬಂದ ಆದಾಯವನ್ನೆಲ್ಲಾ ತಾವೇ ಉಪಯೋಗಿಸಿಕೊಂಡು ಬಿಟ್ಟರು. ಹಿರಿಯ ಮಗ ದಾರಾ ತಾನೇ ಸಿಂಹಾಸನಕ್ಕೆ ಉತ್ತರಾಧಿಕಾರಿಯೆಂದು ಭಾವಿಸಿ ಚಕ್ರವರ್ತಿಯ ಆಸ್ಥಾನವನ್ನು ಬಿಟ್ಟು ಹೋಗಲೇ ಇಲ್ಲ. ಅವನೀ ಭಾವನೆಗೆ ಉತ್ತೇಜನ ಕೊಡುತ್ತಿರುವನೋ ಎಂಬಂತೆ, ಚಕ್ರವರ್ತಿ ಮಗನು ರಾಜಾಜ್ಞೆಗಳನ್ನು ಹೊರಡಿಸುವು ದಕ್ಕೂ ಮತ್ತು ತನ್ನ ಸಿಂಹಾಸನದ ಕೆಳಗೆ ಇಡಲ್ಪಟ್ಟಿದ್ದ ಪುಟ್ಟ ಸಿಂಹಾಸನವನ್ನೇರುವು ದಕ್ಕೂ ಅವಕಾಶಮಾಡಿಕೊಟ್ಟನು. ಹೀಗಾಗಿ, ಇಬ್ಬರು ಚಕ್ರವರ್ತಿಗಳು ಒಂದೇ ಅಧಿಕಾರ ವನ್ನು ಚಲಾಯಿಸುತ್ತಿರುವಂತೆ ಕಂಡಿತು. ಹಾಗಿದ್ದರೂ, ತಂದೆ ಮಗನ ಬಗ್ಗೆ ಮನಸ್ಸಿನಲ್ಲಿ ಬೇರೆ ಭಾವನೆ ಹೊಂದಿದ್ದನೆಂದು ಹೇಳುವುದಕ್ಕೆ ಕಾರಣವಿತ್ತು. ಮಗನು ತಂದೆಯ ಬಗ್ಗೆ ಎಷ್ಟೊಂದು ರೀತಿಯ ಪ್ರೀತಿ ವಿಶ್ವಾಸಗಳನ್ನು ತೋರಿಸುತ್ತಿದ್ದನೋ ಅಷ್ಟರಮಟ್ಟಿಗೆ ತಂದೆ ಮಗನ ಬಗ್ಗೆ ತೋರಿಸುತ್ತಿರಲಿಲ್ಲ. ಯಾವ ಗಳಿಗೆಯಲ್ಲಿ ಮಗನು ತನಗೆ ವಿಷಹಾಕು ವನೋ ಎಂಬ ಭೀತಿಯಲ್ಲಿದ್ದನು. ಸಿಂಹಾಸನಕ್ಕೆ ಯೋಗ್ಯನಾದವನು ಔರಂಗಜೇಬನೇ

ಎಂಬ ಭಾವನೆ ಆತನಲ್ಲಿ ಇದ್ದು, ಆ ಮಗನೊಡನೆ ಗುಟ್ಟಾಗಿ ಪತ್ರವ್ಯವಹಾರ ನಡೆಸುತ್ತಿದ್ದನೆಂದು ಜನಗಳು ಭಾವಿಸಿದರು.[1]

ಷಾಜಹಾನ ಮತ್ತು ಅವನ ಗಂಡುಮಕ್ಕಳನ್ನು ಕುರಿತ ಈ ಸೂಕ್ಷ್ಮ ಪರಿಚಯವು ನಾನು ಮುಂದೆ ಹೇಳಲಿರುವ ಇತಿಹಾಸಕ್ಕೆ ಸಹಾಯಕವಾದೀತೆಂದು ಭಾವಿಸಿ ಇಷ್ಟೆಲ್ಲಾ ಹೇಳಿದ್ದೇನೆ. ಅಂತೆಯೇ ಮುಂದಿನ ದುರಂತದಲ್ಲಿ ಪ್ರಮುಖ ಪಾತ್ರ ವಹಿಸಲಿರುವ ಇಬ್ಬರು ಹೆಣ್ಣುಮಕ್ಕಳ ವಿಚಾರವನ್ನು ಸ್ಥೂಲವಾಗಿ ಹೇಳಿದ್ದೇನೆ. ಇಂಡಿಯಾ ದೇಶದಲ್ಲಾಗಲಿ, ಕಾನ್‌ಸ್ಟಾಂಟಿನೋಪಲ್ ಅಥವಾ ಬೇರೆ ಕಡೆಗಳಲ್ಲಾಗಲಿ ಸ್ತ್ರೀಯರ ಪ್ರಭಾವದಿಂದ ಬಹು ಪ್ರಧಾನವಾದ ಘಟನೆಗಳು ಜರುಗುತ್ತವೆ. ಆದರೆ ಇವು ಜನರಿಗೆ ತಿಳಿಯದೆ ನಡೆದ ಘಟನೆಗಳಿಗೆ ಏನೇನೊ ಊಹಾಪೋಹ ಕಾರಣಗಳನ್ನು ಕೊಡುತ್ತಾರೆ.

ಇದೇ ಸಂದರ್ಭದಲ್ಲಿ ಗೋಲ್ಕೊಂಡ ರಾಜ ಮತ್ತು ಅವನ ವಜೀರ ಮೀರ್‌ಜುಮ್ಲಾ ಇವರನ್ನು ಕುರಿತು ಹೇಳುವುದೂ ಸೂಕ್ತವಾಗಿದೆ. ಅದರಿಂದ ಈ ಚರಿತ್ರೆಯ ನಾಯಕನೂ ಮುಂದೆ ಚಕ್ರವರ್ತಿಯಾಗಲಿರುವವನೂ ಆದ ಔರಂಗಜೇಬನ ವರ್ತನೆ ಹಾಗೂ ಬುದ್ಧಿವಂತಿಕೆಗಳನ್ನು ಅರಿಯಲು ಸಹಾಯವಾಗುವುದು.

ಔರಂಗಜೇಬ ಡೆಕನ್ (ದಕ್ಷಿಣ) ರಾಜ್ಯದ ಆಡಳಿತವನ್ನು ವಹಿಸಿಕೊಂಡಾಗ

---

[1] ಈ ಭಾವನೆಗೆ ಆಧಾರವಿಲ್ಲವೆಂದು ಇತಿಹಾಸ ಗ್ರಂಥಗಳಿಂದ ತಿಳಿದುಬರುತ್ತದೆ. ಷಾಜಹಾನನು ೧೬೫೭ ರಂದು ಮೂತ್ರಕಟ್ಟುರೋಗ (stranguary) ಮತ್ತು ಮಲಬದ್ಧತೆಗಳಿಂದ ಹಾಸಿಗೆ ಹಿಡಿದನಷ್ಟೆ. ಆಗ ನಿತ್ಯದ ದರ್ಬಾರು ನಡೆಯಲಿಲ್ಲ. ದಾರಾ ತಂದೆಯ ಬಳಿ ಇದ್ದು ಒಂದೇ ಸಮನೆ ಶುಶ್ರೂಷೆ ಮಾಡಿದ. ಕೆಲವು ದಿನಗಳ ಅನಂತರ ಷಾಜಹಾನನ ಕಾಯಿಲೆ ಸ್ವಲ್ಪ ಗುಣಮುಖವಾದುದು ಕಂಡುಬಂದಾಗ ಅವನು ದಾರಾನ ಮೇಲೆ ಶ್ರೀಮಂತಿಕೆಯನ್ನೇ ಹೇರಿದ. ಎರಡೂವರೆ ಲಕ್ಷ ಬೆಲೆಯ ಉಡುಗೊರೆಗಳನ್ನು ಕೊಟ್ಟ. ಒಂದು ಕೋಟಿ ರೂಪಾಯಿ ಹಣ ಮತ್ತು ೩೪ ಲಕ್ಷ ರೂಪಾಯಿ ಬೆಲೆಯ ಆಭರಣಗಳನ್ನು ಇತ್ತು ತನ್ನ ಪ್ರೀತಿ ತೋರಿಸಿದ. ಮೇಲಾಗಿ, ದಾರಾನ ಸ್ಥಾನವನ್ನು ಆರು ಸಾವಿರ ಕುದುರೆಗಳ ಸರದಾರನ ಮಟ್ಟಕ್ಕೆ ಏರಿಸಿದನು. ಇಷ್ಟು ಸಾಲದೆಂಬಂತೆ, ದಾರನ ಹಿರಿಯ ಇಬ್ಬರು ಮಕ್ಕಳನ್ನು ೧೬ ಸಾವಿರ ಮತ್ತು ೧೦ ಸಾವಿರ ಕುದುರೆಗಳ ಸರದಾರರ ಸ್ಥಾನಕ್ಕೆ ಏರಿಸಿದನು. ತನ್ನ ಹಿರಿಯ ಅಧಿಕಾರಿಗಳನ್ನು ಕರೆದು ಅವರ ಸಂಮುಖದಲ್ಲಿ ಶಾಸನ ಬರೆದು ಇನ್ನು ಮುಂದೆ ಎಲ್ಲ ರೀತಿಗಳಲ್ಲೂ ದಾರಾನ ಆಜ್ಞೆಗಳನ್ನು ಪಾಲಿಸಬೇಕೆಂದು ತಿಳಿಸಿದನು. ಮಗನಿಗೆ 'ದೇವರನ್ನು ಮೆಚ್ಚಿಸು, ಜನಸಾಮಾನ್ಯರನ್ನು ಚೆನ್ನಾಗಿ ಕಾಣು, ರೈತಾಪಿ ಜನ ಹಾಗೂ ಸೈನಿಕರು ಇವರ ಯೋಗಕ್ಷೇಮ ನೋಡಿಕೊ' ಎಂದು ಬುದ್ಧಿ ಹೇಳಿದನು.

ಇದರಿಂದ ಸ್ಪಷ್ಟವಾಗುತ್ತದೆ, ತಂದೆಯು ಮಗ ದಾರಾನ ಬಗ್ಗೆ ಯಾವ ಅನುಮಾನವನ್ನೂ ಇಟ್ಟುಕೊಂಡಿರಲಿಲ್ಲ ಎಂಬುದು. ಆತನ ಅನುಮಾನ ಇದ್ದದ್ದು ಔರಂಗಜೇಬನ ಮೇಲೆ. ಅದು ಅವರಿಬ್ಬರ ಮಧ್ಯೆ ನಡೆದ ಪತ್ರವ್ಯವಹಾರಗಳಿಂದ ಸ್ಪಷ್ಟಪಡುತ್ತದೆ.

ಮೀರ್ ಜುಮ್ಲಾ ಎಂಬುವನನ್ನು ಗೋಲ್ಕೊಂಡ ರಾಜ ತನ್ನ ವಜೀರನನ್ನಾಗಿ, ಅಂದರೆ ಮುಖ್ಯ ಮಂತ್ರಿಯನ್ನಾಗಿ, ನೇಮಿಸಿಕೊಂಡಿದ್ದನು. ಮೀರ್ ಜುಮ್ಲಾ ಹುಟ್ಟಿನಲ್ಲಿ ಪರ್ಷಿಯಾ ದೇಶದವನಾದರೂ ಹಿಂದೂಸ್ಥಾನದಲ್ಲೆಲ್ಲಾ ಹೆಸರಾದ ವ್ಯಕ್ತಿಯಾಗಿಬಿಟ್ಟಿದ್ದ. ಅವನ ಹುಟ್ಟೇನೂ ದೊಡ್ಡದಾಗಿರಲಿಲ್ಲ.[1] ಆದರೆ ಬುದ್ಧಿಚಾತುರ್ಯ ಹಾಗೂ ರಾಜಕಾರ್ಯ ನಿರ್ವಹಣೆಗಳಲ್ಲಿ ಎತ್ತಿದ ಕೈಯಾಗಿಬಿಟ್ಟಿದ್ದ. ಶ್ರೀಮಂತ ರಾಜ್ಯವೊಂದರ ಮುಖ್ಯಮಂತ್ರಿಯಾಗಿದ್ದ ಆತ, ಪ್ರಪಂಚದ ನಾನಾ ಭಾಗಗಳೊಡನೆ ನಡೆಸುತ್ತಿದ್ದ ವ್ಯಾಪಾರದಿಂದಲೂ, ಬೇನಾಮಿ ಹೆಸರುಗಳ ಮೇಲೆ ನಡೆಸುತ್ತಿದ್ದ ವಜ್ರದ ಗಣಿಗಳ ವಹಿವಾಟಿನಿಂದಲೂ ಅಪಾರ ಐಶ್ವರ್ಯವನ್ನು ಗಳಿಸಿದ್ದ. ಅದೆಷ್ಟು ಎಂದು ಹೇಳಿದವರೇ ಇಲ್ಲ. ವಜ್ರದ ಗಣಿಗಳನ್ನು ಒಂದೇ ಸಮನೆ ಶೋಧಿಸಿ ಸಿಕ್ಕಿದ ವಜ್ರಗಳನ್ನೆಲ್ಲಾ ಶೇಖರಿಸುತ್ತಿದ್ದ. ಅವನ ಬಳಿಯಿದ್ದ ವಜ್ರಗಳ ಲೆಕ್ಕವನ್ನು ಒಂದು ಎರಡೆಂದು ಎಣಿಸದೆ, ಇಷ್ಟು ಭರ್ತಿ ಚೀಲಗಳೆಂದು ಲೆಕ್ಕಹಾಕುತ್ತಿದ್ದರಂತೆ ! ಅವನ ರಾಜಕೀಯ ಪ್ರಭಾವವೂ ಹೇಳಿಕೊಳ್ಳುವಷ್ಟಿತ್ತು. ರಾಜನ ಸೈನ್ಯವಲ್ಲದೆ ಆತ ತಾನೇ ಸ್ವಂತವಾಗಿ ಫರಂಗಿಯವರ ಸೈನ್ಯ ಕಟ್ಟಿದ್ದ. ಫರಂಗಿಯವರ ಬಲವಾದ ಗೋಲಂದಾಜ ಪಡೆ ಅವನ ಅಧೀನದಲ್ಲಿತ್ತು. 'ಕರ್ನಾಟಕ್'[2] ರಾಜ್ಯದ ಮೇಲೆ ಧಾಳಿಮಾಡುವುದಕ್ಕೆ ಒಂದು ಕುಂಟುನೆವ ಹೂಡಿ, ಅದರ ಮೇಲೆ ಬಿದ್ದು, ಅಲ್ಲಿಯ ಗುಡಿಗೋಪುರಗಳನ್ನು ಕೊಳ್ಳೆಹೊಡೆದು, ಅವುಗಳಲ್ಲಿದ್ದ ಅಪಾರ ಭಂಡಾರವನ್ನು ಸೂರೆಮಾಡಿದ್ದನು.

---

[1]ಮೀರ್ ಜುಮ್ಲಾ : ಇಸ್ಫಹಾನಿನ ಎಣ್ಣೆ ವರ್ತಕನೊಬ್ಬನ ಮಗ.

[2]ಕರ್ನಾಟಕ್ : ವಿಜಯನಗರ ಸಾಮ್ರಾಜ್ಯದ ಪತನದ ಅನಂತರ ಕೃಷ್ಣಾನದಿಯಿಂದ ಕಾವೇರಿಯಿಂದಾಚೆ ತಂಜಾವೂರುವರೆಗೆ ಇದ್ದ ಪೂರ್ವಘಟ್ಟಗಳ ಕೆಳಗಿನ ತಗ್ಗು ಪ್ರದೇಶಕ್ಕೆ ಪೋರ್ಚುಗೀಸರೂ ಇಂಗ್ಲಿಷರೂ ಇಟ್ಟಿದ್ದ ಹೆಸರು. ಈ ಪ್ರದೇಶದ ರಾಜರುಗಳು, ಅಂದರೆ ನವಾಬರು, ಪರಸ್ಪರ ಕಡಿದಾಟ ಕಚ್ಚಾಟಗಳಲ್ಲಿ ತೊಡಗಿದ್ದರು. ಈ ಪ್ರದೇಶಕ್ಕೆ ನೆಪಮಾತ್ರಕ್ಕೆ ರಾಜರಾಗಿದ್ದವರಲ್ಲಿ ಹೆಚ್ಚು ಕಾಲ ಅಂದರೆ ೩೬ ವರ್ಷಗಳ ಕಾಲ ಆಳಿದ ರಾಜನೆಂದರೆ ಶ್ರೀರಂಗ ರಾಜ. ಈತನಿಗೆ ಮೊದಲು, ಹಲವು ವರ್ಷಗಳ ಕಾಲ, ರಾಜ್ಯವಾಳಿದವನು ಪೆದ್ದ ವೇಂಕಟಪತಿ ರಾಯ. ಈತನೇ ೧೬೩೯ರಲ್ಲಿ ಮದರಾಸ್ ನಗರವನ್ನು ಕಟ್ಟಲು ಇಂಗ್ಲಿಷರಿಗೆ ಜಾಗ ಕೊಟ್ಟವನು. ೧೬೪೨ರಿಂದ ಶ್ರೀರಂಗರಾಜನು ರಾಜ್ಯವಾಳಿದನು. ಈತನನ್ನೇ ಮಹಮ್ಮದೀಯ ಇತಿಹಾಸಕಾರರು 'Sri Ranga Rayal, Zamindar of Karnataka' (ಶ್ರೀರಂಗ ರಾಯಲ್, ಕರ್ನಾಟಕದ ಜಮೀನ್‌ದಾರ) ಎಂದು ತಿರಸ್ಕಾರದಿಂದ ಕರೆದಿರುವುದು. ಭವ್ಯ ವಿಜಯನಗರ ಸಾಮ್ರಾಜ್ಯದ ಕೊನೆಯ ರಾಜನಿಗೆ ಬಂದ ಬಿರುದು ಇದು. ಶ್ರೀರಂಗಪಟ್ಟಣ ಶ್ರೀರಂಗನ ಕೊನೆಯ ರಾಜಧಾನಿಯಾಗಿತ್ತು. ಆಮೇಲೆ ಅದೂ ಮೈಸೂರು ರಾಜನಿಗೆ ಸೇರಿ ಹೋದ ಕಾರಣ, ಆತ ಕೊನೆಗೆ ತನ್ನ ಅಧೀನ ರಾಜನಾದ ಬಿದನೂರು ರಾಜನ ಆಶ್ರಯ ಪಡೆದು ೧೬೭೮ರಲ್ಲಿ ಕಾಲವಾದನೆಂದು ಗೊತ್ತಾಗುತ್ತದೆ.

ಇವೆಲ್ಲ ಕಾರಣಗಳಿಂದ ಗೋಲ್ಕೊಂಡ ರಾಜನಿಗೆ ತನ್ನ ವಜೀರನ ಮೇಲೆ ಅಸೂಯೆ ಹುಟ್ಟಿದ್ದು ನ್ಯಾಯವಾಗಿಯೇ ಇತ್ತು. ಆತನನ್ನು ಹೇಗೆ ಉಪಾಯದಿಂದ ತೊಲಗಿಸ ಬೇಕೆಂಬ ಆಲೋಚನೆ ಮಾಡಿ, ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದ. ವಯಸ್ಸಾಗಿ ದ್ದರೂ ಇನ್ನೂ ಸೌಂದರ್ಯವನ್ನು ಕಳೆದುಕೊಳ್ಳದಿದ್ದ ರಾಜಮಾತೆಗೂ ಮೀರ್ ಜುಮ್ಲಾ ನಿಗೂ ಇದ್ದ ಅನೀತಿಯ ಸಂಬಂಧ ತಿಳಿದಾಗ ರಾಜ ತನ್ನ ಮನಸ್ಸಿನ ಉದ್ವೇಗವನ್ನು ಬಹಿರಂಗಪಡಿಸಿಯೇ ಬಿಟ್ಟ. ಇದು ಆಗ ಕರ್ನಾಟಕದಲ್ಲಿದ್ದ ಮೀರ್ ಜುಮ್ಲಾನ ಕಿವಿಗೆ ಬಿತ್ತು. ಇದರಿಂದ ತನಗೆ ಅಪಾಯ ತಪ್ಪಿದ್ದಲ್ಲವೆಂದು ಭಾವಿಸಿದ ಆತ, ಆಸ್ಥಾನದಲ್ಲಿದ್ದ ತನ್ನ ಮಗ ಮಹಮದ್ ಅಮೀರ್‌ಖಾನ್ ಎಂಬುವನಿಗೆ ಇದರ ಅರಿವು ಮಾಡಿಕೊಟ್ಟು, ಏನಾದರೂ ಉಪಾಯಮಾಡಿ ರಾಜನ ಹಿಡಿತದಿಂದ ತಪ್ಪಿಸಿಕೊಂಡು ಬರುವಂತೆ ಹೇಳಿ ಕಳುಹಿಸಿದನು. ಆದರೆ ಅದು ಅಮೀರ್‌ಖಾನನಿಗೆ ಸಾಧ್ಯವಾಗಲಿಲ್ಲ. ಆಗ ಮೀರ್ ಜುಮ್ಲಾ ಧೈರ್ಯಪೂರ್ಣವೂ ಹಾಗೂ ನವೀನ ರೀತಿಯದೂ ಆದ ಒಂದು ಉಪಾಯ ಹೂಡಿದ. ಈ ಉಪಾಯದ ಉರುಳಿನಿಂದ ತಪ್ಪಿಸಿಕೊಳ್ಳುವುದು ಗೋಲ್ಕೊಂಡ ರಾಜ ನಿಗೆ ಕಷ್ಟವಾಯಿತು. ಯಾರು ತನ್ನ ಇಂಗಿತವನ್ನು ತನ್ನಲ್ಲಿಯೇ ಇಟ್ಟುಕೊಳ್ಳಲಾರನೊ ಆತ ತನ್ನ ಕಿರೀಟವನ್ನೂ ಉಳಿಸಿಕೊಳ್ಳಲಾರ !

ಆಗ್ಗೆ ದೌಲತಾಬಾದ್(ದೇವಗಿರಿ)ನಲ್ಲಿದ್ದ ಔರಂಗಜೇಬನಿಗೆ ಮೀರ್ ಜುಮ್ಲಾ ಒಂದು ಪತ್ರ ಬರೆದು ಕಳುಹಿಸಿದ. ಅದರ ಒಕ್ಕಣೆ ಹೀಗಿತ್ತು : "ನಾನು ಗೋಲ್ಕೊಂಡ ರಾಜನಿಗೆ ಅಮೋಘ ಸೇವೆಯನ್ನು ಸಲ್ಲಿಸಿರುವೆ. ಇದಕ್ಕಾಗಿ ರಾಜ ಕೃತಜ್ಞನಾಗಿರುವ ಬದಲು ಕೃತಜ್ಞಹೀನನಾಗಿರಲು ಯೋಚಿಸಿದ್ದಾನೆ. ನನ್ನ ಸಂಸಾರವನ್ನು ಹಾಳು ಮಾಡಬೇಕೆಂಬ ಸನ್ನಾಹದಲ್ಲಿದ್ದಾನೆ. ಆದಕಾರಣ ನಾನು ತಮ್ಮ ರಕ್ಷಣೆಯ ಭಿಕ್ಷೆ ಬೇಡುತ್ತಿದ್ದೇನೆ. ನೀವು ತೋರಿಸಬಹುದಾದ ಕೃಪಾಕಟಾಕ್ಷಕ್ಕೆ ಪ್ರತಿಯಾಗಿ ಗೋಲ್ಕೊಂಡ ರಾಜನೂ ಅವನ ರಾಜ್ಯವೂ ನಿಮ್ಮ ವಶವಾಗುವಂತೆ ಮಾಡುವೆ. ಅದಕ್ಕೊಂದು ಉಪಾಯ ಹೇಳುತ್ತೇನೆ. ಒಳ್ಳೆಯ ಯೋಧರ ನಾಲ್ಕೈದು ಸಾವಿರ ಸೈನ್ಯದೊಡಗೂಡಿ ನೀವು ಗೋಲ್ಕೊಂಡ ಕಡೆಗೆ ಹೊರಟುಬನ್ನಿ. ಎಡೆಬಿಡದೆ ನಡೆದರೆ ಹದಿನೈದು ದಿವಸದ ಹಾದಿ, ಗೋಲ್ಕೊಂಡ. ನೀವು ಷಾಜಹಾನನ ಕಡೆ ರಾಯಭಾರಿ; ನಿಮ್ಮ ಸೈನ್ಯ ರಾಯಭಾರಿಯ ರಕ್ಷಣೆಗಾಗಿ–ಇಷ್ಟು ನಟನೆ ಮಾಡಿದರೆ ಸಾಕು. ಯಾವ ವಿಷಯವೇ ಆಗಲಿ, ರಾಜನಿಗೆ ತಿಳಿಯುವುದು ಅವನ 'ದಬೀರ'ನ ಮೂಲಕ. ಈತ ನನ್ನ ಸಂಬಂಧಿ ; ಅಲ್ಲದೆ, ನನ್ನ ಕೈಗೊಂಬೆ. ನಂಬಿಕೆಗೂ ಅರ್ಹನಾಗಿದ್ದಾನೆ. ನೀವು ಮಾಡಬೇಕಾದ್ದು ಇಷ್ಟೆ : ಆದಷ್ಟು ಜಾಗ್ರತೆ ಹೊರಟು ಭಾಗನಗರ (ಭಾಗ್ಯನಗರ=ಹೈದರಾಬಾದ್) ಮುಟ್ಟುವುದು ಮತ್ತು ಷಾಜಹಾನನ ರಾಯಭಾರಿಯಲ್ಲದೆ ಬೇರೆ ಯಾರೂ ಅಲ್ಲವೆಂಬಂತೆ ನಟಿಸುವುದು. ಪದ್ಧತಿಯ ಪ್ರಕಾರ ರಾಜ ನಿಮ್ಮ ಪರಿಚಯ ಪತ್ರಗಳನ್ನು ಈಸಿಕೊಳ್ಳುವುದಕ್ಕೆ ಮುಂದೆ ಬಂದಾಗ ಅವನನ್ನು

ಹಿಡಿದು, ಆಮೇಲೆ ಅವನ ಇಡೀ ರಾಣೀವಾಸವನ್ನು ಬಂಧಿಸಿ, ನಿಮ್ಮ ಇಚ್ಛೆ ಬಂದಂತೆ ಶಿಕ್ಷೆಗೆ ಗುರಿಪಡಿಸಬಹುದು. ಭಾಗನಗರದಲ್ಲಿರುವ ರಾಜನ ಅರಮನೆಗೆ ಕೋಟೆಯಾಗಲಿ ಕೊತ್ತಳವಾಗಲಿ ಇಲ್ಲ. ಆದ್ದರಿಂದ ಅದರ ಆಕ್ರಮಣ ಸುಲಭ. ಈ ನಿಮ್ಮ ದಂಡಯಾತ್ರೆಯ ಖರ್ಚೆಲ್ಲ ನನ್ನದೆ. ಅಲ್ಲದೆ ದಂಡಯಾತ್ರೆ ಎಷ್ಟು ದಿನಗಳು ಸಾಗುವುದೋ ಅಷ್ಟು ದಿನಗಳಿಗೆ ದಿನಕ್ಕೆ ಐವತ್ತು ಸಹಸ್ರ ರೂಪಾಯಿ ಕೊಡಲು ನನ್ನ ಒಪ್ಪಿಗೆ ಇದೆ".

ಕೈಗೆ ಬಂದ ತುತ್ತನ್ನು ಬಾಯಿಗೆ ಹಾಕಿಕೊಳ್ಳದಿರುವ ದಡ್ಡನಲ್ಲ, ಔರಂಗಜೇಬ. ಮೀರ್ ಜುಮ್ಲಾನ ಪತ್ರ ಬಂದಕೂಡಲೇ ಆತ ಸೈನ್ಯ ಸಮೇತ ಗೋಲ್ಕೊಂಡ ರಾಜ್ಯದ ಕಡೆಗೆ ಹೊರಟೇಬಿಟ್ಟ. ಗೋಲ್ಕೊಂಡ ರಾಜನಿಂದ ಹಿಡಿದು ಎಲ್ಲರೂ ಆ ಸೈನ್ಯ ಷಾಜಹಾನನ ರಾಯಭಾರಿಯ ರಕ್ಷಣೆಗಾಗಿ ಬಂದಿದೆಯೆಂದೇ ಭಾವಿಸಿದರು. 'ರಾಯಭಾರಿ' ಭಾಗನಗರವನ್ನು ಸಮೀಪಿಸುತ್ತಲೇ ಅವನನ್ನು ಎದುರುಗೊಳ್ಳಲು ಸೂಕ್ತ ವ್ಯವಸ್ಥೆಗಳಾದುವು. ಅರಮನೆಯ ಬಳಿ ಇದ್ದ ತೋಟದಲ್ಲಿ ರಾಯಭಾರಿಯ ಪರಿಚಯಪತ್ರಗಳನ್ನು ರಾಜನು ಸ್ವೀಕರಿಸುವ ಏರ್ಪಾಡಾಯಿತು. ವೇಷದ ರಾಯಭಾರಿಯ ಬಳಿಗೆ ರಾಜ ಹೆಜ್ಜೆ ಇಡುತ್ತಿದ್ದಂತೆ ಹತ್ತು ಹನ್ನೆರಡು ಜಾರ್ಜಿಯನ್ ಗುಲಾಮರು ಆತನನ್ನು ಹಿಡಿದುಬಿಡಬೇಕೆಂಬ ಒಳಸಂಚು ನಡೆದಿತ್ತು. ಇನ್ನೇನು ಹಾಗೆ ಆಗಬೇಕು, ಆಗ ಆ ಒಳಸಂಚಿನಲ್ಲಿ ಸೇರಿಕೊಂಡಿದ್ದ ಅಮೀರನೊಬ್ಬನಿಗೆ ತಾನು ಎಸಗುತ್ತಿದ್ದ ದುಷ್ಕೃತ್ಯದ ಅರಿವಾಯಿತು. ಆತ ಕೂಡಲೇ 'ದೊರೆಯೇ, ಸರ್ವನಾಶವಾಯಿತು ! ಓಡಿಹೋಗಿ ನೀವು ಇಲ್ಲಿಂದ ! ಇವನು ರಾಯಭಾರಿಯಲ್ಲ, ಆ ವೇಷದಲ್ಲಿರುವ ಔರಂಗಜೇಬ !' ಎಂದು ಕೂಗಿಕೊಂಡ. ರಾಜನಿಗಾದ ದಿಗ್ಭ್ರಮೆ ಊಹಿಸಲಸದಳವಾಗಿತ್ತು. ಆ ಜಾಗದಿಂದ ಓಡಿದವನೇ ಕೈಗೆ ಸಿಕ್ಕಿದ ಕುದುರೆಯನ್ನೇರಿ ದೌಡಾಯಿಸಿ, ಭಾಗನಗರದಿಂದ ಒಂದು ಹರಿದಾರಿ ದೂರದಲ್ಲಿರುವ ಗೋಲ್ಕೊಂಡ ಕೋಟೆಯನ್ನು ಸೇರಿಕೊಂಡ.

ಬೇಟೆ ತನ್ನ ಬಲೆಗೆ ಬೀಳದೆ ತಪ್ಪಿಸಿಕೊಂಡುದಕ್ಕಾಗಿ ಔರಂಗಜೇಬ ಅಧೀರನಾಗಲಿಲ್ಲ. ಬೇರೊಂದು ಉಪಾಯ ಹುಡುಕಿದ. ಅರಮನೆಯನ್ನು ಕೊಳ್ಳೆಹೊಡೆದ; ಬೆಲೆಯಾದುದನ್ನೆಲ್ಲಾ ಸೂರೆಮಾಡಿದ. ಸೆರೆಸಿಕ್ಕ ಅಂತಃಪುರದ ಸ್ತ್ರೀಯರನ್ನು ಮಾತ್ರ ಪೂರ್ವಪದ್ಧತಿಗನುಸಾರ ರಾಜನ ಬಳಿಗೆ ಕಳುಹಿಸಿಕೊಟ್ಟ. ಇಷ್ಟು ಮಾಡಿ, ಗೋಲ್ಕೊಂಡ ಕೋಟೆಗೆ ಮುತ್ತಿಗೆಹಾಕಿದ. ಆದರೆ ಅವನಲ್ಲಿ ಸಾಕಷ್ಟು ಮದ್ದುಗುಂಡುಗಳು ಇರಲಿಲ್ಲ. ಈ ಕಾರಣ ಮುತ್ತಿಗೆ ಎರಡು ತಿಂಗಳುಗಳ ಕಾಲ ಎಳೆಯಿತು. ಇಷ್ಟರಲ್ಲಿ ಷಾಜಹಾನನಿಂದ ಆಜ್ಞೆ ಬಂದಿತು, ಮುತ್ತಿಗೆಯನ್ನು ನಿಲ್ಲಿಸಿ ಡೆಕನಿಗೆ ಹಿಂದಿರುಗಬೇಕೆಂದು. ಈ ಆಜ್ಞೆಗೆ ಬೇಗಂ ಸಾಹೇಬಳೇ ಕಾರಣಳೆಂದು ಔರಂಗಜೇಬನಿಗೆ ಗೊತ್ತಿದ್ದರೂ, ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಿದನು. ಗೋಲ್ಕೊಂಡ ಔರಂಗಜೇಬನ ವಶವಾದರೆ ಅವನ ಶಕ್ತಿ ಇನ್ನೂ ಹೆಚ್ಚಿಬಿಡುವುದಲ್ಲ ಎಂದು ಅವರಿಬ್ಬರ ಅಸೂಯೆ.

ಗೋಲ್ಕೊಂಡ ಮುತ್ತಿಗೆಯನ್ನು ಅಷ್ಟಕ್ಕೇ ನಿಲ್ಲಿಸಿ ಹಿಂದಿರುಗಿದ ಔರಂಗಜೇಬನು

ಮೀರ್ ಜುಮ್ಲಾನಿಂದ ತಾನು ಮಾಡಿದ ಖರ್ಚುವೆಚ್ಚಗಳನ್ನೆಲ್ಲಾ ಪಡೆದುದಲ್ಲದೆ, ಮುಂದೆ ಗೋಲ್ಕೊಂಡದಲ್ಲಿ ಟಂಕಿಸಬೇಕಾದ ನಾಣ್ಯಗಳನ್ನು ಷಾಜಹಾನನ ಹೆಸರಿನಲ್ಲಿ ಟಂಕಿಸಬೇಕೆಂಬ ಷರತ್ತು ವಿಧಿಸಿದನು. ಇಷ್ಟಲ್ಲದೆ, ತನ್ನ ಮಗ ಸುಲ್ತಾನ್ ಮಹಮುದನಿಗೆ ಗೋಲ್ಕೊಂಡ ರಾಜನ ಹಿರಿಯ ಮಗಳನ್ನು ತಂದು ಮದುವೆಮಾಡಿ ಸಿಂಹಾಸನಕ್ಕೆ ತನ್ನ ಮಗನೇ ಉತ್ತರಾಧಿಕಾರಿಯಾಗಿರಬೇಕೆಂಬ ವಾಗ್ದಾನ ಪಡೆದನು. ಜೊತೆಗೆ ಸೊಸೆಗೆ ಬಳುವಳಿಯಾಗಿ ರಾಜನಿಂದ ರಾಮಗಿರಿ ಕೋಟೆಯನ್ನೂ ಅದರ ಸಕಲ ಉಪಕರಣಗಳನ್ನೂ ಪಡೆದನು.

ಹೀಗೆ ಔರಂಗಜೇಬ ಮತ್ತು ಮೀರ್‌ಜುಮ್ಲಾ ಇರ್ವರೂ ಒಟ್ಟುಗೂಡಿ ಮುಂದೆ ಭಾರಿ ಭಾರಿ ಆಲೋಚನೆಗಳನ್ನು ಮಾಡಲಾರಂಭಿಸಿದರು. ಡೆಕನಿಗೆ ಹಿಂದಿರುಗುವಾಗ ದಾರಿಯಲ್ಲಿದ್ದ ಬಿಜಾಪುರ ರಾಜ್ಯದ ಬಹು ಭದ್ರವಾದ ಕೋಟೆಯನ್ನು ಹೊಂದಿದ್ದ ಬೀದರ್ ಪಟ್ಟಣವನ್ನು ಮುತ್ತಿ, ಅದನ್ನು ತಮ್ಮ ವಶಪಡಿಸಿಕೊಂಡರು. ಅಲ್ಲಿಂದ ದೌಲತಾಬಾದಿಗೆ ಹಿಂದಿರುಗಿದರು. ಅಲ್ಲಿ ಕುಳಿತು ತಮ್ಮಿಬ್ಬರ ಭವ್ಯ ಇತಿಹಾಸಕ್ಕೆ ಬುನಾದಿಹಾಕಿಕೊಂಡರು. ಅವರಿಬ್ಬರ ಸ್ನೇಹ ಇಡೀ ಹಿಂದೂಸ್ಥಾನದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಆ ಸ್ನೇಹ ಔರಂಗಜೇಬನ ಹೆಗ್ಗಳವನ್ನೂ ಕೀರ್ತಿಯನ್ನೂ ಹೆಚ್ಚಿಸಿತು.

ಜಾಣ್ಮೆಯಿಂದ ಮೀರ್ ಜುಮ್ಲಾ ಷಾಜಹಾನನಿಂದ ತನ್ನನ್ನು ಆಗ್ರಾಕ್ಕೆ ಆಹ್ವಾನಿಸುವ ಪತ್ರಗಳು ಬರುವಂತೆ ಮಾಡಿಕೊಂಡ. ಕೊನೆಗೆ ಪ್ರಧಾನ ಮಂತ್ರಿಯಾಗಿ ಅಲ್ಲಿಗೇ ಹೋಗಿ ನೆಲೆಸಿದ.[1] ಚಕ್ರವರ್ತಿಯನ್ನು ಒಲಿಸಿಕೊಳ್ಳುವ ಉದ್ದೇಶದಿಂದ ಆತನಿಗೆ ಅಪಾರ ನಜರುಗಳನ್ನೂ ಒಪ್ಪಿಸಿದ. ಹೀಗೆ ಒಪ್ಪಿಸುವಾಗಲೇ ಗಾತ್ರದಲ್ಲಿಯೂ ಅಂದ ಚೆಂದದಲ್ಲಿಯೂ ಎಣೆಯಿಲ್ಲದ ವಜ್ರವನ್ನು (ಕೊಹಿನೂರ್) ಚಕ್ರವರ್ತಿಗೆ ಅರ್ಪಿಸಿದ್ದು.

ಚಕ್ರವರ್ತಿಯನ್ನು ಒಲಿಸಿಕೊಂಡಮೇಲೆ ಮೀರ್ ಜುಮ್ಲಾ ಗೋಲ್ಕೊಂಡ ಮತ್ತು ಬಿಜಾಪುರ ರಾಜ್ಯಗಳ ಮೇಲೆ ಯುದ್ಧಮಾಡಿ ಅವನ್ನೂ ಗೆದ್ದುಕೊಳ್ಳುವ ಸಲಹೆಮಾಡಿದನು. ಆಗ ಚಕ್ರವರ್ತಿ ಖಾಂದಹಾರಿನ ಮೇಲೆ ದಂಡೆತ್ತಿಹೋಗಬೇಕೆಂಬ ಆಲೋಚನೆಮಾಡಿದ್ದನು. ಬೆಲೆಯಾದ ಗೋಲ್ಕೊಂಡದ ವಜ್ರಗಳನ್ನು ಬಿಟ್ಟು ಖಾಂದಹಾರಿನ ಕಲ್ಲುಗಳಿಗೆ ಆಸೆಮಾಡುವುದು ಸೂಕ್ತವಲ್ಲವೆಂದು ಮೀರ್ ಜುಮ್ಲಾನ ಸಲಹೆಯಾಗಿತ್ತು. ಕೇಪ್‌ಕಾಮೊರಿನ್[2]ವರೆಗೆ ಜಯಭೇರಿ ಹೊಡೆಯುವ ತನಕ ಚಕ್ರವರ್ತಿ ತನ್ನ ದಂಡಯಾತ್ರೆಯನ್ನು ನಿಲ್ಲಿಸಕೂಡದೆಂದು ಹುರಿದುಂಬಿಸುವ ಮಾತಾಡಿದನು.

ಬಹುಶಃ ವಜ್ರಗಳ ಮೇಲಿನ ಆಸೆಗಾಗಿಯೋ ಏನೋ, ಷಾಜಹಾನ ಮೀರ್

---

[1] ಇದು ೧೬೫೬ರಲ್ಲಿ.

[2] ಕನ್ಯಾಕುಮಾರಿ

ಜುಮ್ಲಾನ ಸಲಹೆಗೆ ಒಪ್ಪಿದನು. ಇದರಲ್ಲಿ ಇನ್ನೊಂದು ಉದ್ದೇಶವೂ ಆತನಿಗೆ ಇದ್ದಿರಬಹುದು. ಅದೇನೆಂದರೆ, ತನ್ನ ಹಿರಿಯಮಗ ದಾರಾನ ಸೊಕ್ಕು ಮುರಿಯಲು ಇದು ಒಳ್ಳೆಯ ಅವಕಾಶ ಎಂಬುದು. ಅಂತೂ ಮೀರ್ ಜುಮ್ಲಾನ ದಂಡನಾಯಕತ್ವದಲ್ಲಿ ಚಕ್ರವರ್ತಿ ಡೆಕನಿಗೆ ಸೈನ್ಯವೊಂದನ್ನು ಕಳುಹಿಸಿಕೊಟ್ಟನು.

ಇತ್ತ ದಾರಾನಿಗೂ ಚಕ್ರವರ್ತಿಗೂ ಮನಸ್ತಾಪ ಹೆಚ್ಚಾಗುವ ಕೃತ್ಯವೊಂದು ನಡೆಯಿತು. ಏಷ್ಯಾದಲ್ಲಿಯೇ ದೊಡ್ಡ ರಾಜನೀತಿಜ್ಞನೂ ಚಕ್ರವರ್ತಿಗೆ ಬಹಳ ಬೇಕಾದವನೂ ಆಗಿದ್ದ ವಜೀರ್ ಸಾದುಲ್ಲಾಖಾನನನ್ನು ದಾರಾ ಸಾಯಿಸಿಬಿಟ್ಟ.[1] ಈ ವಿಚಾರ ದೇಶದಲ್ಲೆಲ್ಲಾ ಹಬ್ಬಿ ಎಲ್ಲರ ಮನೆಯ ಮಾತಾಗಿಬಿಟ್ಟಿತು. ಆ ಖಾನನ ಅಪರಾಧವಾದರೂ ಏನು ಗೊತ್ತೆ ? ಅವನು ಸುಲ್ತಾನ್ ಸೂಜನ ಬಗ್ಗೆ ತುಂಬಾ ಆಸಕ್ತಿ ತೋರಿಸುತ್ತಿದ್ದುದು ಒಂದು. ಹುಟ್ಟಿನಲ್ಲಿ ಹಿಂದೂವಾದರೂ ಆಮೇಲೆ ಮುಹಮ್ಮದೀಯನಾದ ಆ ಖಾನ ಪರ್ಷಿಯನರಿಗೆ ಆಗುತ್ತಿರಲಿಲ್ಲ. ಇನ್ನೊಂದು ವದಂತಿಯ ಪ್ರಕಾರ, ಚಕ್ರವರ್ತಿ ಸತ್ತಮೇಲೆ ಮೊಗಲ್ ಸಿಂಹಾಸನವನ್ನು ಮೊಗಲರ ಕೈ ತಪ್ಪಿಸಿ ಪಠಾಣರಿಗೆ ವಹಿಸಿಕೊಡಬೇಕೆಂದು ಆತ ಯೋಚಿಸುತ್ತಿದ್ದನಂತೆ. ಅವನು ತಾನೇ ಸಿಂಹಾಸನವನ್ನೇರಿಬಿಡಬೇಕೆಂಬ ಮನಸ್ಸುಮಾಡಿದ್ದನೆಂದೂ ಹೇಳುತ್ತಾರೆ. ಅವನ ಹೆಂಡತಿ ಪಠಾಣರವಳು. ಅಲ್ಲದೆ ಆತ ತನ್ನ ಉದ್ದೇಶ ಸಾಧನೆಗಾಗಿ ಅಲ್ಲಲ್ಲಿ ಪಠಾಣ ಸೈನಿಕರ ಪಾಳೆಯಗಳನ್ನು ಇಟ್ಟುಕೊಂಡಿದ್ದನೆಂಬ ಸುದ್ದಿಯೂ ಇತ್ತು. ಇವನ್ನೆಲ್ಲಾ ನಿಜವೆಂದು ನಂಬಿದ ದಾರಾ ಆ ಖಾನನನ್ನೇ ಮುಗಿಸಿಬಿಟ್ಟ. ಇದು ಚಕ್ರವರ್ತಿಗೆ ಬಹಳ ಬೇಜಾರನ್ನುಂಟುಮಾಡಿತು.

ಮೀರ್ ಜುಮ್ಲಾನೊಡನೆ ಡೆಕನಿಗೆ ಸೈನ್ಯ ಕಳುಹಿಸಿದ್ದನ್ನು ದಾರಾ ಬೇರೊಂದು ರೀತಿಯಲ್ಲಿ ಅರ್ಥಮಾಡಿಕೊಂಡ. ಔರಂಗಜೇಬನ ಬಲವನ್ನು ಹೆಚ್ಚಿಸುವುದಕ್ಕೇ ಈ ರೀತಿ ಮಾಡಿದ್ದಾನೆಂದು ಆತ ಭಾವಿಸಿದ. ತಂದೆಯ ಈ ಉದ್ದೇಶವನ್ನು ದಾರಾ ವಿರೋಧಿಸಿದುದಲ್ಲದೆ, ನಾನಾ ರೀತಿಯಲ್ಲಿ ಆತನ ಮನಸ್ಸನ್ನು ಒಲಿಸಿಕೊಳ್ಳಲು ಪ್ರಯತ್ನಪಟ್ಟ. ಕೊನೆಗೂ ತಂದೆ ಬಗ್ಗದೆಹೋದ ಕಾರಣ ಡೆಕನಿಗೆ ಕಳುಹಿಸಲ್ಪಟ್ಟ ಸೈನ್ಯವನ್ನು ಔರಂಗಜೇಬ ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳದಂತೆ ಪ್ರಯತ್ನಮಾಡಿದ ; ಹಲವಾರು ಷರತ್ತುಗಳನ್ನೂ ವಿಧಿಸಿದ. ಈ ಷರತ್ತುಗಳು ಮೀರ್ ಜುಮ್ಲಾನಿಗೆ ಒಪ್ಪಿಗೆಯಾಗಲಿಲ್ಲ, ನಿಜ. ಆದರೂ ಷಾಜಹಾನನ ಒತ್ತಾಯಕ್ಕೆ ಒಪ್ಪಿಕೊಂಡು, ಶ್ರೇಷ್ಠವಾದ ಸೈನ್ಯವೊಂದರ ದಂಡನಾಯಕನಾಗಿ ಡೆಕನಿಗೆ ಹೊರಟ. ಅಲ್ಲಿಗೆ ಹೋದವನು ಕಾಲಹರಣ

---

[1] ಸಾದುಲ್ಲಾಖಾನ ಸತ್ತದ್ದು ೧೬೫೬ರಲ್ಲಿ. ದಾರಾ ಆತನಿಗೆ ವಿಷ ಕೊಡಿಸಿದನೆಂದು ಒಂದು ಅಭಿಪ್ರಾಯವಿದೆ.

ಮಾಡದೇ ನೇರವಾಗಿ ಬಿಜಾಪುರ ರಾಜ್ಯದ ಮೇಲೆ ಧಾಳಿಯನ್ನಾರಂಭಿಸಿ ಕಲ್ಯಾಣಕ್ಕೆ[1] ಮುತ್ತಿಗೆ ಹಾಕಿಯೇಬಿಟ್ಟ.

ಹೀಗಿತ್ತು ಹಿಂದೂಸ್ಥಾನದ ಪರಿಸ್ಥಿತಿ, ಎಪ್ಪತ್ತು ವರ್ಷ ವಯಸ್ಸಿನ ಮೊಗಲ್ ಚಕ್ರವರ್ತಿಗೆ ಬಾಯಿಬಿಟ್ಟು ಹೇಳಲು ಅಸಹ್ಯವಾದ ವ್ಯಾಧಿಯೊಂದು ಒದಗಿದಾಗ. ಆ ಕಾಯಿಲೆ ಇಂಥದೆಂದು ವರ್ಣನೆ ಮಾಡುವ ಬದಲು, ಆ ವಯಸ್ಸಿನ ಚಕ್ರವರ್ತಿಗೆ ಅದು ನಾಚಿಕೆ ತರುವಂಥದ್ದಾಗಿತ್ತೆಂದು ಹೇಳಿದರೆ ಸಾಕು. ಆತ ತನ್ನ ವೀರ್ಯನಾಶನ ಮಾಡಿಕೊಳ್ಳುವ ಬದಲು ಅದನ್ನು ಸಂಚಯ ಮಾಡಿಕೊಳ್ಳಬೇಕಾಗಿತ್ತೆಂಬುದರಲ್ಲಿ ಸಂದೇಹವೇ ಇಲ್ಲ.[2]

ಚಕ್ರವರ್ತಿಯ ಈ ವ್ಯಾಧಿಯ ಸುದ್ದಿ ಅವನ ಚಕ್ರಾಧಿಪತ್ಯದಲ್ಲೆಲ್ಲಾ ಹರಡಿತು. ಅದರಿಂದಾಗಿ ದೇಶದಲ್ಲಿ ಅಶಾಂತಿ ಹಾಗೂ ಆತಂಕಗಳು ತಲೆದೋರಿದುವು. ದಾರಾ ಆಗ್ರಾ ಮತ್ತು ದೆಹ್ಲಿಗಳಲ್ಲಿಯೂ ಉಳಿದ ಮೂವರು ಮಕ್ಕಳು ತಮ್ಮ ತಮ್ಮ ರಾಜ್ಯಗಳಲ್ಲಿಯೂ ಸೈನ್ಯಗಳನ್ನು ಜಮಾಯಿಸಲಾರಂಭಿಸಿದರು. ತಮ್ಮ ನೆರೆಹೊರೆಯವರಿಗೂ ಗೆಳೆಯರಿಗೂ ಪತ್ರಗಳನ್ನು ಬರೆದು ಸಹಾಯಕೋರಿದರು. ಏನೇನೋ ಒಳಸಂಚುಗಳನ್ನು ನಡೆಸಿದರು. ದಾರಾ ತನ್ನ ತಮ್ಮಂದಿರು ಬರೆದ ಪತ್ರಗಳನ್ನು ಗುಟ್ಟಾಗಿ ತಡೆದಿಟ್ಟು, ಅವನ್ನು ತಂದೆಗೆ ತೋರಿಸಿ, ಆತನ ಮೂರು ಮಕ್ಕಳು ಮಾಡುತ್ತಿರುವ ಕುತಂತ್ರಗಳನ್ನು ಬಯಲಿಗೆಳೆಯಲೆತ್ನಿಸಿದ. ಬೇಗಂ ಸಾಹೇಬಳಿಗೆ ಅಪ್ಪನ ಕಿವಿ ಊದುವ ಅವಕಾಶ ಇದ್ದೇ ಇತ್ತು. ಆದರೂ ತಂದೆಗೆ ಮಗನ ಮೇಲೆ ಏಕೋ ಅನುಮಾನ. ಎಲ್ಲಿ ವಿಷಹಾಕಿ

---

[1] ಕಲ್ಯಾಣ : ಬೀದರ್ ಜಿಲ್ಲೆಯಲ್ಲಿದ್ದು ಈಗ 'ಬಸವಕಲ್ಯಾಣ' ಎಂದು ಹೆಸರು ಪಡೆದಿರುವ ಒಂದು ಊರು. ಇದು ೯ ರಿಂದ ೧೨ನೇ ಶತಮಾನದವರೆಗೆ ಕನ್ನಡನಾಡಿನ ಅರಸರಾದ ಚಾಲುಕ್ಯರ ರಾಜಧಾನಿಯಾಗಿತ್ತು. ೧೨ನೇ ಶತಮಾನದಲ್ಲಿ ಕಳಚುರಿಗಳು ಪತನವಾದ ನಂತರ ಇದು ರಾಜಧಾನಿಯಾಗಿ ಉಳಿಯಲಿಲ್ಲ. ಆಮೇಲೆ ಇದು ಡೆಕನ್ ಮುಸ್ಲಿಮರ ಕೈಸೇರಿ, ಬೀದರಿನ ಅಧೀನ ರಾಜ್ಯವಾಯಿತು. ೧೬೫೭ರ ಏಪ್ರಿಲ್ ೨೭ರಂದು ಔರಂಗಜೇಬನ ಕಲ್ಯಾಣದ ಮುತ್ತಿಗೆಯಲ್ಲಿ ಅದು ಪತನವಾಯಿತು. ಕಲ್ಯಾಣ ಔರಂಗಜೇಬನ ವಶವಾಗುವ ಮುನ್ನ ಭಾರಿ ಕೋಟೆ ಇದ್ದ ಬೀದರ್ ನಗರವನ್ನೂ, ನಿಲಂಗ ಮತ್ತು ಚಿಂಚೋಲಿ ಎಂಬ ಸಣ್ಣ ಪುಟ್ಟ ಕೋಟೆಗಳನ್ನೂ ಔರಂಗಜೇಬನ ಸೈನ್ಯ ವಶಪಡಿಸಿಕೊಂಡಿತ್ತು.

[2] ಜಾದೂನಾಥ್ ಸರ್ಕಾರ್ ಅವರು "ಔರಂಗಜೇಬನ ಚರಿತ್ರೆ" (History of Aurangzeb)ಎಂಬ ಗ್ರಂಥದಲ್ಲಿ ಷಾಜಹಾನನು 'stranguary and constipation' ಅಂದರೆ ಮೂತ್ರಕಟ್ಟುರೋಗ ಮತ್ತು ಮಲಬದ್ಧತೆ'ಗಳಿಂದ ೧೬೫೭ರಲ್ಲಿ ಕಾಯಿಲೆಬಿದ್ದನೆಂದು ಹೇಳಿದ್ದಾರೆ. ಒಂದು ವಾರದ ತನಕ ರಾಜವೈದ್ಯರು ತುಂಬಾ ಪ್ರಯಾಸಪಟ್ಟರು. ಆದರೆ ರೋಗ ಉಲ್ಬಣಿಸಿತು. ಕಾಲುಗಳು ಮತ್ತು ದೇಹದ ಕೆಳಭಾಗದ ಅಂಗಗಳು ಊದಿಕೊಂಡುವು. ಹಸಿವೇ ಇರಲಿಲ್ಲ. ನಾಲಿಗೆ ಒಣಗುತ್ತಿತ್ತು. ಒಮ್ಮೊಮ್ಮೆ ಜ್ವರದ ಸೂಚನೆಯೂ ಕಾಣಿಸುತ್ತಿತ್ತು;

ಸಾಯಿಸಿಬಿಡುವನೋ ಎಂಬ ಭೀತಿ, ಅವನಿಗೆ. ಈ ಕಾರಣ ಏನೇ ತಿನ್ನಲಿ ಉಣ್ಣಲಿ, ಬಹಳ ಎಚ್ಚರಿಕೆಯಿಂದಿರುತ್ತಿದ್ದ. ಮಗ ದಾರಾನಿಗೂ ತಂದೆಯ ಮೇಲೆ ಅನುಮಾನ. ತಂದೆಯೊಡನೆ ಔರಂಗಜೇಬನು ಗುಟ್ಟಾಗಿ ಪತ್ರವ್ಯವಹಾರ ನಡೆಸುತ್ತಿದ್ದನೆಂದು ಭಾವಿಸಿ ದಾರಾ ಆತನ ಮೇಲೆ ರೇಗಾಡುತ್ತಿದ್ದ.[1]

---

[1]. ಔರಂಗಜೇಬನಿಗೂ ಆತನ ತಂದೆ ಚಕ್ರವರ್ತಿ ಷಾಜಹಾನನಿಗೂ ಮೊದಲಿನಿಂದಲೂ ನಡೆದ ಪತ್ರವ್ಯವಹಾರಗಳನ್ನು ಗಮನಿಸಿದರೆ ದಾರಾನ ಈ ಅಭಿಪ್ರಾಯ ತಪ್ಪೆಂದು ಕಾಣುತ್ತದೆ. ಮೊದಲಿಗೆ ಮುಲ್ತಾನಿನ ಸುಬೇದಾರನಾಗಿದ್ದ ವೇಳೆ ಔರಂಗಜೇಬ ೧೬೫೨ರಲ್ಲಿ ಖಾಂದಹಾರಿನ ಮೇಲೆ ತಂದೆಯ ಅಪ್ಪಣೆಯಂತೆ ಯುದ್ಧಕ್ಕೆ ತೊಡಗಿದ. ಆದರೆ ಈ ಯುದ್ಧದಲ್ಲಿ ಔರಂಗಜೇಬ ಜಯಶೀಲನಾಗಲಿಲ್ಲ. ಮೊಗಲ್ ಬೊಕ್ಕಸಕ್ಕೆ ಹನ್ನೆರಡು ಕೋಟಿ ರೂಪಾಯಿಗಳು ಖರ್ಚಾದುವು. ಕೊನೆಗೂ ಖಾಂದಹಾರ್ ಮೊಗಲ್ ಸಾಮ್ರಾಜ್ಯಕ್ಕೆ ದಕ್ಕಲಿಲ್ಲ. ಈ ತಲೆತಗ್ಗಿಸುವಂಥ ಅವಮಾನವನ್ನು ಸಹಿಸಲಾರದೆ ಷಾಜಹಾನ ಮಗ ಔರಂಗಜೇಬನಿಗೆ 'ಅಷ್ಟೊಂದು ಸಿದ್ಧತೆಗಳನ್ನು ಮಾಡಿಕೊಂಡಿದ್ದರೂ ನೀನು ಹೇಗೆ ಆ ಕೋಟೆಯನ್ನು ವಶಪಡಿಸಿಕೊಳ್ಳಲಿಲ್ಲವೋ ಕಾಣೆ; ನನಗಂತೂ ತುಂಬ ಆಚ್ಚರಿ !' ಎಂದು ಬರೆದ. ಔರಂಗಜೇಬ ತಾನು ಮಾಡುವ ಎಲ್ಲ ಪ್ರಯತ್ನಗಳನ್ನೂ ಮಾಡಿದನೆಂದೂ, ಮುತ್ತಿಗೆ ಸಾಮಗ್ರಿಗಳು ಸಾಕಷ್ಟು ಇಲ್ಲದಿದ್ದ ಕಾರಣ ಮತ್ತು ಫಿರಂಗಿಗಳ ಸಲಕರಣೆಗಳು ಕಮ್ಮಿ ಇದ್ದುದರಿಂದ ಸಾಧ್ಯವಾಗಲಿಲ್ಲ ಎಂದು ಉತ್ತರ ಬರೆದ. ಆದರೆ ಷಾಜಹಾನ ಸಿಟ್ಟಾಗಿಯೇ ಉತ್ತರ ಬರೆದ : 'ನಾನು ಖಾಂದಾಹಾರ್ ಬಿಡುವುದಿಲ್ಲ. ಏನಾದರೂ ಮಾಡಿ ಅದನ್ನು ವಶಪಡಿಸಿಕೊಳ್ಳಲೇಬೇಕು' ಎಂದು. ಹಾಗಿದ್ದರೆ ತಾನೇ ಮುಂದೆ ಆ ಕೆಲಸ ಮಾಡುವೆ, ಅದಕ್ಕೆ ಅನುಕೂಲವಾಗುವಂತೆ ತನಗೆ ಆಫ್‌ಘಾನಿಸ್ತಾನದಲ್ಲೋ ಪಂಜಾಬಿನಲ್ಲೋ ಇರಲು ಅವಕಾಶ ಮಾಡಿಕೊಡಬೇಕು ಎಂದು ಔರಂಗಜೇಬ ಕೇಳಿಕೊಂಡ. ಈ ಮಧ್ಯೆ ಔರಂಗಜೇಬ ಡೆಕನಿನ ಸುಬೇದಾರನಾಗಿ ನೇಮಿಸಲ್ಪಟ್ಟಿದ್ದ. ಡೆಕನಿಗೆ ಹೋಗಲೇಬೇಕೆಂದು ಷಾಜಹಾನ್ ಕಂಠೋಕ್ತವಾಗಿ ಹೇಳಿಬಿಟ್ಟ: 'ಖಾಂದಹಾರವನ್ನು ಗೆಲ್ಲಲು ನೀನು ಶಕ್ತನೆಂದು ಭಾವಿಸಿದ್ದರೆ, ನಿನ್ನ ಸೈನ್ಯವನ್ನು ವಾಪಸು ಕರೆಸಿಕೊಳ್ಳುತ್ತಿರಲಿಲ್ಲ. ಪ್ರತಿಯೊಬ್ಬನೂ ಏನಾದರೂ ಬಂದು ಕೆಲಸ ಮಾಡಬಲ್ಲ. ತಿಳಿದವರು ಹೇಳುತ್ತಾರೆ, ಅನುಭವಸ್ಥರು ಹೇಳಿಸಿಕೊಳ್ಳಬೇಕಾಗಿಲ್ಲ' ಎಂದು. ಷಾಜಹಾನನ ಈ ಮಾತಿಗೆ ಔರಂಗಜೇಬನು ಕೊಟ್ಟ ಉತ್ತರದಲ್ಲಿ ಒಂದು ಗಾದೆ ಇದೆ : 'ಒಂದು ರವೆಯಷ್ಟಾದರೂ ತಿಳುವಳಿಕೆ ಇದ್ದರೆ ಮನುಷ್ಯ ಒಳ್ಳೆಯದಾವುದು ಕೆಟ್ಟುದಾವುದು ಎಂದು ಅರಿಯಬಲ್ಲ'. ತಾನು ಉದ್ದೇಶಪೂರ್ವಕವಾಗಿ ತನ್ನ ಕೆಲಸದಲ್ಲಿ ತಪ್ಪಲಿಲ್ಲವೆಂದೂ, ಏಕೆಂದರೆ, ಹಾಗೆ ತಪ್ಪಿದರೆ ತಂದೆಯ ಕೋಪಕ್ಕೆ ಗುರಿಯಾಗುತ್ತಿದ್ದೆನೆಂದೂ ಉತ್ತರಿಸಿದ.

೧೬೫೩ರಲ್ಲಿ ಔರಂಗಜೇಬ ಡೆಕನಿನ ಸುಬೇದಾರನಾಗಿ ಎರಡನೆಯ ಸಲ ನೇಮಿಸಲ್ಪಟ್ಟ. ಒಂದೊಮ್ಮೆ, ಅಂದರೆ ೧೬೪೪ರವರೆಗೆ, ಆತ ಸುಬೇದಾರನಾಗಿದ್ದ. ಈ ಎಂಟು ವರ್ಷಗಳ ಅವಧಿಯಲ್ಲಿ ಆಡಳಿತ ಕೆಟ್ಟುಹೋಗಿ ಬೇಸಾಯ ಹಾಳಾಗಿಹೋಗಿತ್ತು. ಇದಕ್ಕೆ ಸಕಾಲದಲ್ಲಿ ಬೀಳದಿದ್ದ ಮಳೆಗಳೂ ಕಾರಣವಾಗಿದ್ದುವು. ಭೂಮಿ ಫಲವತ್ತಾಗಿರಲಿಲ್ಲ. ಭೂಮಾಪನ ಮತ್ತು ಕಂದಾಯ ನಿರ್ಣಯ ಸರಿಯಾಗಿ ಆಗಿರಲಿಲ್ಲ. ಈ ಕಾರಣ ಮೊದಲು ನಿರ್ಧರಿಸಲ್ಪಟ್ಟ

ಈ ಮಧ್ಯೆ ಚಕ್ರವರ್ತಿಯ ರೋಗ ಉಲ್ಬಣಗೊಂಡಿತು. ಆಸ್ಥಾನವೆಲ್ಲ ಅಲ್ಲೋಲ ಕಲ್ಲೋಲವಾಯಿತು. ಆಗ್ರಾ ಜನ ದಿಕ್ಕೆಟ್ಟರು. ಅಂಗಡಿ ಮುಂಗಟ್ಟುಗಳನ್ನು ಹಲವಾರು ದಿನಗಳ ತನಕ ಮುಚ್ಚಿಬಿಟ್ಟರು. ಚಕ್ರವರ್ತಿಯ ನಾಲ್ಕು ಮಕ್ಕಳು ಕತ್ತಿಯ ಬಲ ದಿಂದಲೇ ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳುವುದಾಗಿ ಬಹಿರಂಗವಾಗಿ ಹೇಳಲಾರಂಭಿಸಿದರು. ಈಗ ಅವರು ಹಿಮ್ಮೆಟ್ಟುವ ಕಾಲ ಕಳೆದುಹೋಗಿತ್ತು. ಅವರಲ್ಲಿ ಯಾರಾದರೂ ಸರಿ ಮೊಗಲ್ ಕಿರೀಟವನ್ನು ಯುದ್ಧದಲ್ಲಿ ಗೆದ್ದೇ ಪಡೆಯಬೇಕಾಗಿತ್ತು. ಸೋತರೆ ಸಾವು ಕಟ್ಟಿಟ್ಟ ಬುತ್ತಿಯಾಗಿತ್ತು. 'ಸಿಂಹಾಸನ, ಇಲ್ಲವೆ ಸಾವು' ಇದು ಶತಸ್ಸಿದ್ಧವಾಯಿತು. ಹೇಗೆ ಷಾಜಹಾನ ತನ್ನ ಸಹೋದರರ ರಕ್ತದಲ್ಲಿ ಕೈ ಅದ್ದಿ ಸಿಂಹಾಸನವನ್ನೇರಿದ್ದನೋ, ಹಾಗೆಯೇ ಈಗ ಅವನ ಮಕ್ಕಳ ಪೈಕಿ ಯಾರೂ ಸಹೋದರರ ರಕ್ತ ಹರಿಸದೆ ರಾಜ್ಯವನ್ನು ದಕ್ಕಿಸಿಕೊಳ್ಳುವಂತಿರಲಿಲ್ಲ.

---

ಕಂದಾಯದಲ್ಲಿ ೧೨ ಲಕ್ಷ ರಿಯಾಯಿತಿ ತೋರಿಸಿದರು. ಈ ರೀತಿಯ ರಿಯಾಯಿತಿಯನ್ನು ಭೂ ಕಂದಾಯ ನಿಗದಿ ಅಧಿಕಾರಿಗಳು ತೋರಿಸಿದ ಕಾರಣವೇನೆಂದರೆ, ಮುಂದಾದರೂ ಕಂದಾಯದ ವಸೂಲಿ ಸುಲಭವಾಗಲಿ ಎಂದು. ಹೀಗಿದ್ದರೂ ಕಂದಾಯ ಹೆಚ್ಚಿಂದು ಕಂಡಿತು. ಮೊಗಲ್ ಡೆಕನಿಗೆ ಸೇರಿದ ನಾಲ್ಕು ಸುಬೆಗಳ (Provinces) ಒಟ್ಟು ಕಂದಾಯ ವರ್ಷಕ್ಕೆ ೩ ಕೋಟಿ ೬೨ ಲಕ್ಷ ಇದ್ದರೂ, ೧೬೫೨ರಲ್ಲಿ ವಸೂಲಾದದ್ದು ಒಂದು ಕೋಟಿ ಮಾತ್ರ.

ರಾಜ್ಯದ ವಿಸ್ತೀರ್ಣದಲ್ಲಿ ೩೭½ ಲಕ್ಷ ಆದಾಯ ಬರುವ ಭೂಮಿಯನ್ನು ಔರಂಗಜೇಬನಿಗೆ ಮತ್ತು ಅವನ ಮಕ್ಕಳಿಗೆ ಜಹಗೀರಾಗಿ ಕೊಡಲಾಗಿತ್ತು. ಉಳಿದದ್ದನ್ನು 'ಖಾಲ್ಸಾ ಷರೀಫ್' ಎಂದರೆ ಚಕ್ರಾಧಿಪತ್ಯಕ್ಕೆ ಸೇರಿದ ಭೂಮಿ ಬಿಟ್ಟು ಮಿಕ್ಕದನ್ನು ಅನೇಕಾನೇಕ ಅಧಿಕಾರಿಗಳಿಗೆ ಕೊಡ ಲಾಗಿತ್ತು. ಖಾಲ್ಸಾಷರೀಫ್ ಭೂಮಿಗಳ ಮೇಲಿನ ಕಂದಾಯ ನೇರವಾಗಿ ಚಕ್ರವರ್ತಿಗೆ ಸಲ್ಲುತ್ತಿತ್ತು. ಅದನ್ನು ಡೆಕನ್ ರಾಜ್ಯಾಡಳಿತದ ಖರ್ಚಿಗೆ ಉಪಯೋಗಿಸುವಂತಿರಲಿಲ್ಲ. ಈ ಎಲ್ಲ ಕಾರಣಗಳಿಂದ ಡೆಕನಿನ ಹಣಕಾಸಿನ ಪರಿಸ್ಥಿತಿ ತುಂಬಾ ಕೆಟ್ಟಿತ್ತು. ಖರ್ಚುವೆಚ್ಚಗಳನ್ನು ಸರಿದೂಗಿಸುವುದು ಕಷ್ಟವಾಯಿತು. ಆಡಳಿತ ಹಾಗೂ ಸೈನ್ಯದ ಖರ್ಚು ಸುಮಾರು ೩೨ ಲಕ್ಷ ರೂಪಾಯಿಗಳಷ್ಟಿತ್ತು. ಇದರಲ್ಲಿ ಔರಂಗಜೇಬನಿಗಾಗಿ ಮತ್ತು ಅವನ ಮಕ್ಕಳಿಗಾಗಿ ಕೊಡುತ್ತಿದ್ದ ನಿಗದಿ ಭತ್ಯ ೨೬ ಲಕ್ಷ ಸೇರಿತ್ತು. ಹೆಚ್ಚು ಆದಾಯ ಪಡೆಯಲು 'ಮಹಲ್' ಭೂಮಿಗಳನ್ನು ಸರ್ಕಾರಕ್ಕೆ ಸೇರಿಸಿ ಕೊಳ್ಳಬೇಕೆಂದು ಆತ ಸಲಹೆಮಾಡಿದ. ಮೊದಲು ಷಾಜಹಾನ ಒಪ್ಪದೆಹೋದ ; ಆಮೇಲೆ ಒಪ್ಪಿದ. ಹೀಗೆ ತಂದೆಮಕ್ಕಳಲ್ಲಿ ಹಣಕಾಸಿನ ಬಗ್ಗೆ ಪತ್ರವ್ಯವಹಾರ ವರ್ಷಾನುಗಟ್ಟಲೆ ಸಾಗಿತು. ಮಗ ತಂದೆಗೆ ಬರೆದ : 'ಮಹಾಸ್ವಾಮಿಯವರು ನನಗೆ ಮಹಾ ಸುಬೇದಾರನ ಪದವಿಯನ್ನು ನೀಡಿ ಗೌರವಿಸಬೇಕೆಂದಿದ್ದರೆ ಅದಕ್ಕೆ ಅನುಕೂಲಗಳನ್ನು ಕಲ್ಪಿಸಿ' ಎಂದು. ತನ್ನಲ್ಲಿ ನಗದು ದುಡ್ಡು ಬಹಳ ಕಮ್ಮಿ ಇದೆ, ಅದಕ್ಕೆ ಸೂಕ್ತ ವ್ಯವಸ್ಥೆ ಮಾಡಬೇಕು ಎಂದು ಕೇಳಿಕೊಂಡ. ಹೀಗೆ ನಡೆದ ಪತ್ರವ್ಯವಹಾರದಿಂದ ಅಸಮಾಧಾನಗೊಂಡ ಷಾಜಹಾನ್ ಈ ಬಗ್ಗೆ ತುಂಬಿದ ರಾಜಸಭೆಯಲ್ಲಿ ಔರಂಗಜೇಬನ ಬಗ್ಗೆ ಕಟುವಾಗಿ ಮಾತನಾಡಿದ. ಜಾಗೀರ್‌ದಾರರ ಭೂಮಿಗಳನ್ನು ಸರ್ಕಾರಕ್ಕೆ

ಈ ಯುದ್ಧಕ್ಕೆ ಮೊದಲು ಕಾಲಿಟ್ಟವನೆಂದರೆ ಬಂಗಾಳದ ಸುಲ್ತಾನ್ ಸೂಜ. ಆತ ಅಲ್ಲಿಯ 'ರಾಜರು'ಗಳನ್ನು ಹಾಳುಮಾಡಿ, ಜನರನ್ನು ಕೊಳ್ಳೆಹೊಡೆದು, ಅಪಾರ ಐಶ್ವರ್ಯ ಸಂಪಾದಿಸಿಕೊಂಡು ಅದರಿಂದ ದೊಡ್ಡ ಸೈನ್ಯವನ್ನು ಕಟ್ಟಿದ್ದ. ಪರ್ಷಿಯನ್ ಅಮೀರರ ಬೆಂಬಲ ಪಡೆದು ಆಗ್ರಾ ಕಡೆ ಧಾವಿಸಿದ. ದಾರಾ ವಿಷ ಕೊಟ್ಟು ತಂದೆಯನ್ನು ಸಾಯಿಸಿದ್ದಾನೆಂತಲೂ, ಆ ಹೊಲಸು ಕೃತ್ಯಕ್ಕಾಗಿ ಅವನ ಮೇಲೆ ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲವೆಂತಲೂ, ಹಾಗೆ ಮಾಡಿ ಖಾಲಿಯಾದ ಸಿಂಹಾಸನವನ್ನೇರುವುದು ತನ್ನ ನಿರ್ಧಾರವೆಂತಲೂ ಘೋಷಿಸಿದನು. ಸೂಜನ ನಿರ್ಧಾರವನ್ನು ಬದಲಿಸಬೇಕೆಂದು ದಾರಾ ತಂದೆಗೆ ಸಲಹೆಮಾಡಿದ. ಆದರೆ ಅದು ನಿಷ್ಫಲವಾಯಿತು. ತಾನು ಸತ್ತಿಲ್ಲ ವೆಂದೂ, ಔಷದಿ ತೆಗೆದುಕೊಂಡ ಅನಂತರ ತಾನು ಗುಣವಾಗಿರುವುದಾಗಿಯೂ, ಸೂಜನು ತಪ್ಪದೆ ಬಂಗಾಳಕ್ಕೆ ಹಿಂದಿರುಗಬೇಕೆಂದೂ ಷಾಜಹಾನ ಮಗನಿಗೆ ತಿಳಿಸಿದ. ಆದರೆ

---

ತೆಗೆದುಕೊಂಡು ಅವುಗಳ ಆದಾಯದಿಂದ ಹಣದ ಕೊರತೆಯನ್ನು ಹೋಗಲಾಡಿಸಬೇಕೆಂದು ಔರಂಗಜೇಬನ ಸಲಹೆಯಾಗಿತ್ತು. ಇದು ಷಾಜಹಾನನ್ನು ರೇಗಿಸಿತು. ಆತ ಬರೆದ : ಪರ್ಗಣ ದಲ್ಲಿರುವ ಆದಾಯ ಬರುವಂಥ ಭೂಮಿಗಳನ್ನು ನೀನು ತೆಗೆದುಕೊಂಡು, ಉಪಯೋಗವಿಲ್ಲದ ಭೂಮಿಗಳನ್ನು ಬೇರೆಯವರಿಗೆ ಬಿಡುವುದು ಮುಸಲ್ಮಾನನಾದವನಿಗೆ ತಕ್ಕುದಲ್ಲ, ಮತ್ತು ಧರ್ಮವೂ ಅಲ್ಲ. ಆಸಿರ್ ಪರ್ಗಣದಲ್ಲಿ ಅರ್ಧ ಲಕ್ಷ ಕಡಿಮೆ ಉತ್ಪನ್ನ ಬರುವ ಭೂಮಿಗಳನ್ನು ನೀನು ತೆಗೆದುಕೊಂಡು, ನಿನಗೆ ಸಲ್ಲಬೇಕಾದ ಮಾಶಾಸನವನ್ನು ಅರ್ಧಕ್ಕೆ ಇಳಿಸಿಕೊಂಡು, ನಿನ್ನ ಆದಾಯವನ್ನೂ ಸರಿದೂಗಿಸಿಕೊಳ್ಳಬೇಕೆಂದು ನಾನು ಆಜ್ಞೆಮಾಡುತ್ತಿದ್ದೇನೆ.'

ಇದರಿಂದ ಔರಂಗಜೇಬ ರೇಗಿಹೋಗಿ ಪ್ರತ್ಯುತ್ತರ ಬರೆದ : 'ನಾನು ನನ್ನ ಜೀವಮಾನ ದಲ್ಲಿ ಯಾವಾಗಲೂ ಅನ್ಯಾಯವಾಗಿ ವರ್ತಿಸಿಲ್ಲ. ಸದಾ ದೇವರನ್ನೂ, ಭೂಮಿಯ ಮೇಲಿರುವ ದೇವರ ಪ್ರತಿನಿಧಿಯನ್ನೂ ಮೆಚ್ಚಿಸಲು ಪ್ರಯತ್ನಪಟ್ಟಿದ್ದೇನೆ. ನೀವು ಈ ಒಂದು ಲಕ್ಷ ರೂಪಾಯಿಯನ್ನು ದೊಡ್ಡದುಮಾಡಿ ನನ್ನನ್ನು ಖಂಡಿಸಿದ್ದೀರಿ. ಈ ಭೂಮಿಗಳನ್ನು ನನ್ನ ಸ್ವಂತಕ್ಕೆ ತೆಗೆದುಕೊಂಡಿಲ್ಲ. ಅವನ್ನು ನಿಮ್ಮ ಕಂದಾಯದ ಅಧಿಕಾರಿಗಳು ನಿಮ್ಮ ಆಜ್ಞೆ ಯಂತೆಯೆ ನಾನು ಡೆಕನಿಗೆ ಬರುವುದಕ್ಕಿಂತ ಮುನ್ನವೆ ಹಿಂದಿನ ಕಂದಾಯಕ್ಕೆ ನನಗೆ ವರ್ಗಾಯಿ ಸಿದ್ದಾರೆ. ಕಂದಾಯದ ಅಧಿಕಾರಿಗಳು, ಅದರಲ್ಲಿಯೂ ತುಂಬಾ ಜ್ಞಾಪಕಶಕ್ತಿಯುಳ್ಳ ವಜೀರ (ದಿವಾನ), ಈ ವಿಚಾರವನ್ನೂ ನಿಮಗೇಕೆ ತಿಳಿಸಲಿಲ್ಲವೋ ಕಾಣೆ. ಹಿಂದಿನಿಂದ ನಡೆದು ಕೊಂಡುಬಂದ ಪ್ರಕಾರ ತನಿಖೆ ಮಾಡದೆ ಅಥವಾ ನನ್ನ ಸಮಜಾಯಿಷಿ ಕೇಳದೆ ಕೇವಲ ದೂರಿನ ಮೇಲೆ ಆಜ್ಞೆಮಾಡಿದ್ದೀರಿ ಮತ್ತು 'ಮುಸಲ್ಮಾನ್' ಎಂಬ ಪದವನ್ನು ಕ್ಷಣಿಕವಾದ ವಿಷಯದಲ್ಲಿ ಉಪಯೋಗಿಸಿದ್ದೀರಿ. ನಿರ್ಧರಿಸಲ್ಪಟ್ಟ ಸಂಬಳಕ್ಕಿಂತ ಹೆಚ್ಚು ಸಂಬಳವನ್ನು ನಾನು ಪಡೆಯು ತ್ತೇನೆಂದು ಅವರು ಹೇಳಿದ್ದನ್ನು ನೀವು ನಂಬಿದಿರಿ ಮತ್ತು ನನಗೆ ಸಲ್ಲಬೇಕಾದ ನಗದು ಹಣದಲ್ಲಿ ಅರ್ಧ ಲಕ್ಷ ಕಡಿಮೆಮಾಡಬೇಕೆಂದು ಅಪ್ಪಣೆ ಮಾಡಿದ್ದೀರಿ...ನಾನು ನಿಮಗೆ ಪ್ರತಿಯಾಗಿ ಕೊಡ ಬೇಕಾದ್ದು ಏನಿದೆ ಹೇಳಿ ?'

ಸೂಜ ಕೊಟ್ಟ ಉತ್ತರವೇನು ಗೊತ್ತೆ ? 'ತಂದೆಗೆ ಒದಗಿರುವ ವ್ಯಾಧಿ ವಾಸಿಯಾಗು ವುದು ಅಸಾಧ್ಯವೆಂದು ಆಸ್ಥಾನದಲ್ಲಿರುವ ನನ್ನ ಕಡೆಯುವರಿಂದ ತಿಳಿದುಬಂದಿದೆ; ತಂಡೆಯ ಮರಣದ ಬಗ್ಗೆ ನನಗೆ ಅನುಮಾನವೇ ಇಲ್ಲ. ಅಥವಾ, ಒಂದು ಪಕ್ಷ ನನ್ನ ತಂದೆ ಸತ್ತಿಲ್ಲದಿದ್ದರೆ ಒಳ್ಳೆಯದೇ ಆಯಿತು. ಆಗ್ರಾಕ್ಕೆ ಹೋಗಿ ಪಿತನ ಪೂಜ್ಯ ಪಾದ ಗಳಿಗೆ ನಮಸ್ಕಾರಮಾಡಿ ಮುಂದೇನು ಮಾಡಬೇಕೆಂಬ ಬಗ್ಗೆ ಆತನ ಅಪ್ಪಣೆಯನ್ನು ಪಡೆದು ಅದನ್ನು ಶಿರಸಾವಹಿಸಿ ಪಾಲಿಸುವೆ.' ಹೀಗೆ ಹೇಳಿಕೊಂಡೇ ಆತ ಆಗ್ರಾ ಕಡೆ ಸೈನ್ಯ ಸಮೇತ ಧಾವಿಸಿದ.

ಇದೇ ಸಮಯವನ್ನು ಕಾದು ಔರಂಗಜೇಬನು ಆಗ್ರಾ ಕಡೆ ಸೈನ್ಯದೊಡಗೂಡಿ ಹೊರಟನು. ಷಾಜಹಾನ ಮತ್ತು ದಾರಾ ಇಬ್ಬರೂ ಅವನನ್ನು ಬೆದರಿಸಿ ನೋಡಿದರು. ಡೆಕನ್ ಬಿಟ್ಟರೆ ತಕ್ಕ ಶಾಸ್ತಿಯಾಗುವುದೆಂದು ದಾರಾ ಭೀತಿ ಹುಟ್ಟಿಸಿದನು. ಔರಂಗಜೇಬ ಅಣ್ಣ ಸೂಜಾ ಕೊಟ್ಟಂತ ಉತ್ತರವನ್ನೇ ಕೊಟ್ಟನು. ಆದರೆ ಆತನಲ್ಲಿ ಸಾಕಷ್ಟು ಹಣ ಇಲ್ಲದ್ದರಿಂದಲೂ, ಸೈನ್ಯವು ಸಣ್ಣದಾಗಿದ್ದುದರಿಂದಲೂ ಶಕ್ತಿಯಿಂದ ಮಾಡಬಹುದಾದು ದನ್ನು ಯುಕ್ತಿಯಿಂದ ಮಾಡಲಾರಂಭಿಸಿದ. ಇವನ ಯುಕ್ತಿಗೆ ಮೊದಲು ಮೋಸ ಗೊಂಡವರು ತಮ್ಮ ಮೊರಾದ್ ಭಕ್ಷ ಮತ್ತು ಮೀರ್ ಜುಮ್ಲಾ. ಔರಂಗಜೇಬ ತನ್ನ ತಮ್ಮ ಮೊರಾದ್ ಭಕ್ಷನಿಗೆ ಬರೆದ ಕಾಗದ ಹೀಗಿದೆ :

---

ಹೀಗಾಗಿ, ಔರಂಗಜೇಬನ ಎರಡನೇ ಸಲದಡೆ ಕನ್ ಸುಬೇದಾರಿಕೆ ತಂದೆ ಮಗನಿಗೆ ಭಿನ್ನ ಭಾವನೆಗಳಿಗೆ ಎಡೆಮಾಡಿತು. ಇದಕ್ಕೆ ಯಾರು ಹೊಣೆ ? ನಮ್ಮ ಮುಂದೆ ಔರಂಗಜೇಬ ಹೇಳಿದ್ದು ಮಾತ್ರ ಇದೆ. ಷಾಜಹಾನನ ಹೇಳಿಕೆ ಇಲ್ಲ. ಹೀಗಿರುವಾಗ ಷಾಜಹಾನನದು ತಪ್ಪೆಂದು ಹೇಳುವುದು ಅಷ್ಟು ಸುಲಭದ ಮಾತಲ್ಲ. ಬಹುಶಃ ಔರಂಗಜೇಬನಿಗೆ ಆಗದವರು ಚಕ್ರವರ್ತಿಗೆ ಚಾಡಿ ಚುಚ್ಚಿರಬೇಕು ; ಅಥವಾ ಬಹಳ ದೂರದಲ್ಲಿ ಆಡಳಿತ ನಡೆಸುತ್ತಿದ್ದ ಔರಂಗಜೇಬನ ಕಷ್ಟನಷ್ಟಗಳನ್ನು ಚಕ್ರವರ್ತಿ ಅರಿತುಕೊಳ್ಳದೆ ಹೋಗಿರಬೇಕು. ಅಂತೂ ಈ ರೀತಿ ಅವರಿಬ್ಬರಲ್ಲಿ ಉಂಟಾದ ಮನಸ್ತಾಪದಿಂದ ಸಿಂಹಾಸನಕ್ಕೆ ನಡೆದ ಹೋರಾಟವು ಅಷ್ಟು ನಿರ್ಧಯತೆಯಿಂದ ನಡೆಯಲು ಕಾರಣವಾಯಿತೆಂದು ಕಾಣುತ್ತದೆ. ಅವರಿಬ್ಬರಿಗೂ ಉಂಟಾದ ವೈಷಮ್ಯ ಎಷ್ಟರಮಟ್ಟಿಗೆ ಹೋಯಿತೆಂದರೆ, ಔರಂಗಜೇಬನು ಸುಬೇದಾರನಾಗಿದ್ದ ಐದು ವರ್ಷ ಗಳ ದೀರ್ಘಕಾಲದಲ್ಲಿ ಒಂದು ಸಲವಾದರೂ ತಂದೆ ಮಗನನ್ನು ಆಸ್ಥಾನಕ್ಕೆ ಬಾ ಎಂದು ಕರೆಯ ಲಿಲ್ಲ. ಹುಟ್ಟಿದ ಹಬ್ಬದ ದಿನ ಚಕ್ರವರ್ತಿಗೆ ನಜರುಗಳನ್ನು ಸಲ್ಲಿಸಬೇಕಷ್ಟೆ. ಬೇರೆ ಮಕ್ಕಳು ಬಹು ಬೆಲೆಯಾದ ನಜರುಗಳನ್ನು ಒಪ್ಪಿಸಿದ್ದು ಅಧಿಕೃತ ಚರಿತ್ರೆಯಲ್ಲಿ ಬರೆಯಲ್ಪಟ್ಟಿದ್ದರೂ ಔರಂಗಜೇಬ ಕೊಟ್ಟದ್ದು ಒಂದೂ ಅದರಲ್ಲಿ ಕಂಡುಬರುವುದಿಲ್ಲ. ಹಾಗೆಯೇ ದಾರಾನ ಮಕ್ಕಳು ತಾತನಿಂದ ನಗದು ಹಣ ಹಾಗೂ ಆಭರಣಗಳನ್ನು ಆಗಾಗ್ಗೆ ಪಡೆಯುತ್ತಿದ್ದರೂ ಔರಂಗಜೇಬನ ಮಕ್ಕಳಿಗೆ ತಾತ ತೋರಿಸಿದ್ದ ಮಮತೆ ಒಂದೇ ಸಲ.

"ಸಹೋದರ, ರಾಜ್ಯಭಾರಮಾಡುವ ಜಂಜಾಟದ ಕೆಲಸವೆಂದರೆ ನನಗೆ ಆಗದು ಎಂಬು ದನ್ನು ನಿನಗೆ ಜ್ಞಾಪಿಸಬೇಕಾಗಿಲ್ಲ. ದಾರಾ ಮತ್ತು ಸೂಜ ರಾಜ್ಯಕ್ಕಾಗಿ ದಾಹಪಡುತ್ತಿದ್ದಾರೆ. ಆದರೆ ನಾನು ಫಕೀರನಾಗಲು ತವಕಪಡುತ್ತಿದ್ದೇನೆ. ರಾಜ್ಯವನ್ನೇ ತ್ಯಾಗಮಾಡುವ ಮನಸ್ಸು ಮಾಡಿದ್ದರೂ ನಾನು ನನ್ನ ಮಮತೆಯ ತಮ್ಮನಾದ ನಿನಗೆ ನನ್ನ ಮನಸ್ಸಿನ ಭಾವನೆಗಳನ್ನು ತಿಳಿಸದಿದ್ದರೆ ತಪ್ಪಾದೀತು. ದಾರಾ ರಾಜ್ಯ ಆಳಲು ಅಶಕ್ತನಷ್ಟೇ ಅಲ್ಲದೆ, ಕಾಫರನಾದ ಕಾರಣ ಸಿಂಹಾಸನವನ್ನೇರಲೂ ಅನರ್ಹನಾಗಿದ್ದಾನೆ. ಅಮೀರರಾರಿಗೂ ಅವನನ್ನು ಕಂಡರೆ ಆಗುವು ದಿಲ್ಲ. ಇನ್ನು ಸೂಜನಾದರೋ ಬಹಿರಂಗವಾಗಿ ತಾನು 'ರಫೇಜಿ' (refezi = heretic = ಪಾಷಂಡಿ) ಎಂದು ಹೇಳಿಕೊಂಡಿರುವುದರಿಂದ ಅವನೂ ಸಿಂಹಾಸನಕ್ಕೆ ಅಯೋಗ್ಯ. ಅವನು ಹಿಂದೂಸ್ಥಾನಕ್ಕೇ ಶತ್ರು. ಹೀಗಿರುವಾಗ ನೀನೊಬ್ಬನೇ ಆ ಮಹಾ ಸಿಂಹಾಸನವನ್ನೇರುವುದಕ್ಕೆ ಅರ್ಹ. ಹೀಗೆ ಹೇಳಿದನೆಂದು ಅನ್ಯಥಾ ಭಾವಿಸಬೇಡ. ಇದು ನನ್ನೊಬ್ಬನ ಅಭಿಪ್ರಾಯ ವಲ್ಲದೆ, ದೇಶದ ಅಮೀರರೆಲ್ಲರ ಅಭಿಪ್ರಾಯವಾಗಿದೆ. ಅವರೆಲ್ಲ ನಿನ್ನ ಶೌರ್ಯ ಧೈರ್ಯಗಳನ್ನು ಮೆಚ್ಚಿ ಕೊಂಡಾಡುತ್ತಿದ್ದಾರೆ; ರಾಜಧಾನಿಗೆ ನೀನೆಂದು ಬರುವೆಯೆಂದು ನಿರೀಕ್ಷಿಸುತ್ತಿದ್ದಾರೆ.

ನನ್ನ ಬಗ್ಗೆ ಹೇಳಬೇಕಾದರೆ, ನನಗೇನೂ ಬೇಕಾಗಿಲ್ಲ. ನೀನು ಸಿಂಹಾಸನವನ್ನೇರಿದ ಮೇಲೆ ನಿನ್ನ ರಾಜ್ಯದ ಒಂದು ಮೂಲೆಯಲ್ಲಿ ನನಗೆ ಮೂರಡಿ ಜಾಗ ಕೊಟ್ಟು ಫಕೀರನಂತೆ ದೇವರ ಧ್ಯಾನದಲ್ಲಿ ಕಾಲ ಕಳೆಯಲು ಅವಕಾಶಮಾಡಿಕೊಟ್ಟರೆ ಸಾಕು. ಇದೊಂದು ವಾಗ್ದಾನ ವಷ್ಟೇ ನಿನ್ನಿಂದ ಬೇಕಾಗಿರುವುದು. ಅಷ್ಟು ಮಾಡಿದರೆ ಸಾಕು, ನಾನೂ ನನ್ನ ಇಡೀ ಪರಿವಾರ ಹಾಗೂ ಸೈನ್ಯವೂ ನಿನ್ನ ಹಿಂದೆ. ತಮ್ಮಯ್ಯ, ನನ್ನ ಮಾತಿಗೆ ನಂಬಿಕೆಯಾಗಿ ಹಾಗೂ ನನ್ನ ಅಕ್ಕರೆಯ ಶುಭಾಶಯದ ಕುರುಹಾಗಿ ಒಂದು ಲಕ್ಷ ರೂಪಾಯಿಗಳನ್ನು ಕಳುಹಿಸುತ್ತಿದ್ದೇನೆ. ಇದನ್ನು ಒಪ್ಪಿಸಿಕೋ. ಕಾಲ ಸಂದಿಗ್ಧವಾಗಿದೆ. ಆದ್ದರಿಂದ ಒಂದು ನಿಮಿಷವನ್ನೂ ಕಳೆಯದೆ ಸೂರತ್ ಕೋಟೆಗೆ ಮುತ್ತಿಗೆ ಹಾಕು; ಅಲ್ಲಿರುವ ಅಪಾರ ಭಂಡಾರವನ್ನು ವಶಪಡಿಸಿಕೊ."

ಹಣದಲ್ಲಿಯೂ ಸ್ಥಾನಮಾನದಲ್ಲಿಯೂ ಕಡಿಮೆ ಮಟ್ಟದಲ್ಲಿದ್ದ ಮೊರಾದ್ ಭಕ್ಷ್ ಅಣ್ಣ ಔರಂಗಜೇಬನ ಸಲಹೆಯನ್ನು ಬಹಳ ಆನಂದದಿಂದ ಒಪ್ಪಿಕೊಂಡು, ತನ್ನ ಭವ್ಯ ಭವಿಷ್ಯಕ್ಕೆ ಹಿಗ್ಗಿ ಹೀರೆಕಾಯಿಯಾದ. ಅಣ್ಣನ ಪತ್ರವನ್ನು ಎಲ್ಲರಿಗೂ ತೋರಿಸಿದ. ಆ ಪತ್ರವನ್ನು ಓದಿದ ರಾಜ್ಯದ ಯುವಜನ ಸಂತೋಷದಿಂದ ಸೈನ್ಯಕ್ಕೆ ಸೇರಲಿ ಎಂಬುದು ಒಂದು ಉದ್ದೇಶವಾದರೆ, ಶ್ರೀಮಂತ ವರ್ತಕರು ತಾನು ಕೇಳುತ್ತಿದ್ದ ಹಣವನ್ನು ಹಿಂದು ಮುಂದು ನೋಡದೆ ಕೊಡಲಿ ಎಂಬುದು ಇನ್ನೊಂದು ಉದ್ದೇಶವಾಗಿತ್ತು. ತಾನಾಗಲೇ ಹಿಂದೂಸ್ಥಾನದ ಚಕ್ರವರ್ತಿಯಾಗಿಬಿಟ್ಟೆನೆಂದು ಭಾವಿಸಿ ಆತ ಅಧಿಕಾರ ಚಲಾಯಿಸ ಲಾರಂಭಿಸಿದ. ಯಾರು ಏನು ಕೇಳಿದರೆ ಅದನ್ನು ವಾಗ್ದಾನಮಾಡಲಾರಂಭಿಸಿದ. ಸರಿ, ಜನರೆಲ್ಲರ ಬೆಂಬಲ ಸಿಕ್ಕಿತು ಅವನಿಗೆ. ಭಾರಿ ಸೈನ್ಯ ಕಟ್ಟಿದ. ಆ ಸೈನ್ಯದಿಂದ ಆರಿಸಿದ ಮೂರು ಸಾವಿರ ಯೋಧರನ್ನು ಸೂರತ್ ಮುತ್ತಿಗೆಗೆ ಕಳುಹಿಸಿದ. ಅವರ ದಂಡನಾಯಕನಾಗಿ ಕದನಕಲಿಯೆಂದು ಪ್ರಸಿದ್ಧನಾಗಿದ್ದ ಖೋಜಾ ಷಾ ಅಬ್ಬಾಸ ನನ್ನು (ಷಾಬಾಷ್‌ಖಾನನನ್ನು) ನೇಮಿಸಿದ.

ಅತ್ತ ತಮ್ಮನನ್ನು ಪುಸಲಾಯಿಸಿ ಯುದ್ಧ ಸನ್ನದ್ಧನನ್ನಾಗಿ ಮಾಡಿದ ಔರಂಗಜೇಬ ಇತ್ತ ತನ್ನ ಗಮನವನ್ನು ಮೀರ್ ಜುಮ್ಲಾನ ಕಡೆ ಹರಿಸಿದ. ಮೀರ್ ಜುಮ್ಲಾ ಆ ವೇಳೆಯಲ್ಲಿ ಕಲ್ಯಾಣಿಯ ಮುತ್ತಿಗೆಯಲ್ಲಿ ತೊಡಗಿದ್ದ. ದೌಲತಾಬಾದಿಗೆ ಕೂಡಲೇ ಬರಬೇಕೆಂದು ಔರಂಗಜೇಬ ತನ್ನ ಮಗ ಸುಲ್ತಾನ್ ಮಹಮ್ಮದನ ಮೂಲಕ, ಅಂದರೆ ಗೋಲ್ಕೊಂಡರಾಜನ ಅಳಿಯನ ಮೂಲಕ, ಮೀರ್ ಜುಮ್ಲಾನಿಗೆ ಹೇಳಿಕಳುಹಿಸಿದ. ಇದರಲ್ಲಿ ಏನೋ ದುರುದ್ದೇಶವಿರಬೇಕೆಂದು ಅರಿತ ಮೀರ್ ಜುಮ್ಲಾ ಷಾಜಹಾನ ಸತ್ತಿಲ್ಲವೆಂದೂ, ತನ್ನ ಹೆಂಡತಿ ಮಕ್ಕಳು ದಾರಾನ ಹಿಡಿತದಲ್ಲಿರುವಾಗ ತಾನು ಔರಂಗಜೇಬನ ಪಕ್ಷವನ್ನು ವಹಿಸುವುದು ಸಾಧ್ಯವಾಗುವುದಿಲ್ಲವೆಂದೂ ಹೇಳಿದ. ಇದರಿಂದ ನಿರಾಶನಾದ ಔರಂಗಜೇಬ ತನ್ನ ಎರಡನೆ ಮಗ ಸುಲ್ತಾನ್ ಮುಜುಮನ ಮೂಲಕ ಮತ್ತೆ ಹೇಳಿಕಳುಹಿಸಿದ. ಮುಜುಮ್ ಮೀರ್ ಜುಮ್ಲಾನನ್ನು ಒಪ್ಪಿಸಿದ. ಕಲ್ಯಾಣಿ ಮುತ್ತಿಗೆಯನ್ನು ಸಂಪೂರ್ಣಗೊಳಿಸಿ, ಊರನ್ನು ವಶಪಡಿಸಿಕೊಂಡು, ಮೀರ್ ಜುಮ್ಲಾ ತನ್ನ ಅತ್ಯುತ್ತಮವಾದ ಸೇನಾ ತುಕುಡಿಯೊಂದರ ಸಮೇತ ದೌಲತಾಬಾದಿಗೆ ಹೋದನು.

ಅವನನ್ನು ಔರಂಗಜೇಬ ಬಹು ಆದರದಿಂದ ಸ್ವಾಗತಿಸಿದನು. 'ಬಾಬಾ', 'ಬಾಬಾಜಿ' ಎಂಬ ಪ್ರೀತಿಯ ಮಾತುಗಳಿಂದ ಆತನನ್ನು ಸಂಬೋಧಿಸಿ ನೂರಾರು ಬಾರಿ ಅಪ್ಪಿ ಆಲಿಂಗಿಸಿದನು. ಏಕ್ಕಟ ಕರೆದು ಹೀಗೆಂದನು : 'ನಿನ್ನ ಹೆಂಡತಿ ಮಕ್ಕಳು ಆಗ್ರಾದಲ್ಲಿ ದಾರಾನ ಕೈಸೆರೆಯಲ್ಲಿರುವಾಗ ನೀನು ನನ್ನ ಕಡೆ ಸೇರುವುದು ಸರಿಯಲ್ಲವೆಂದು ಸುಲ್ತಾನ್ ಮಹಮ್ಮದನ ಮೂಲಕ ಹೇಳಿಕಳುಹಿಸಿದ್ದು ಸೂಕ್ತವಾದುದೇ ಸರಿ. ಆದರೆ ನಾವು ಕೆಲವು ವಿಷಯಗಳಲ್ಲಿ ಈಗ ಕೈಹಾಕಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈಗ ನನಗೊಂದು ಯೋಚನೆ ಹೊಳೆಯುತ್ತಿದೆ. ಅದನ್ನು ಕೇಳಿ ನೀನು ಅಚ್ಚರಿಪಡುವುದು ನಿಜ. ಆದರೆ ಸರಿಯಾಗಿ ಯೋಚಿಸಿದ ಮೇಲೆ ನಿನ್ನ ಸಂಸಾರದ ರಕ್ಷಣೆಗೆ ಅದೊಂದೇ ಸೂಕ್ತಮಾರ್ಗ ಎಂದು ಒಪ್ಪುತ್ತೀಯೆ. ನೀನು ಕೇವಲ ನೆಪಮಾತ್ರಕ್ಕೆ ದೌಲತಾಬಾದ್ ಕೋಟೆಯಲ್ಲಿ ಬಂಧಿಯಂತೆ ಇರು. ನನ್ನ ಮಕ್ಕಳು ನಿನ್ನ ಯೋಗಕ್ಷೇಮ ನೋಡಿಕೊಳ್ಳುವರು. ಇದನ್ನು ತಿಳಿದ ದಾರಾ ನೀನು ನನ್ನ ವೈರಿಯೆಂದು ಭಾವಿಸಿ, ಯಾವ ಸಂದೇಹವನ್ನೂ ಪಡದೆ, ನಿನ್ನ ಹೆಂಡತಿ ಮಕ್ಕಳನ್ನು ಸುರಕ್ಷಿತವಾಗಿ ನೋಡಿಕೊಳ್ಳುವನು. ನಾನು ನಿನ್ನ ಸೈನ್ಯವನ್ನೂ ನೀನು ಈ ಹಿಂದೆಯೇ ಕೊಡುತ್ತೇನೆಂದು ವಾಗ್ದಾನಮಾಡಿದ್ದ ಹಣವನ್ನೂ ಉಪಯೋಗಿಸಿಕೊಂಡು ನನ್ನ ಅದೃಷ್ಟಪರೀಕ್ಷೆ ಮಾಡಿನೋಡುತ್ತೇನೆ.'

ಈ ದಾಟಿಯಲ್ಲಿ ಔರಂಗಜೇಬ ಮೀರ್ ಜುಮ್ಲಾನಿಗೆ ಹೇಳಿದನೆಂದು ನನಗೆ ಅಧಿಕಾರಯುತವಾಗಿ ತಿಳಿದುಬಂದಿತು. ಮೀರ್ ಜುಮ್ಲಾ ಏನು ಉತ್ತರ ಇತ್ತನೋ ಗೊತ್ತಿಲ್ಲ. ಅಂತೂ ಔರಂಗಜೇಬನು ಹೇಳಿದಂತೆ ನಡೆದುಕೊಂಡುಬಿಟ್ಟ. ಮನಃ ಪೂರ್ವಕವಾಗಿ ಒಪ್ಪಿದನೋ ಇಲ್ಲ ಜನರು ಹೇಳುವಂತೆ ಬೆದರಿಕೆಯಿಂದಾಗಿ ಒಪ್ಪಿದನೋ ಹೇಳುವುದು ಕಷ್ಟ. ಈ ಮಾತುಕತೆಗಳು ನಡೆದಾಗ ಔರಂಗಜೇಬನ ಮಕ್ಕಳಿಬ್ಬರೂ ಸಶಸ್ತ್ರರಾಗಿ

ನಿಂತು ಮೀರ್‌ಜುಮ್ಲಾನನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದರಂತೆ. ಹೀಗಿರುವಾಗ ಹೆದರಿಯೇ ಮೀರ್ ಜುಮ್ಲಾ ಔರಂಗಜೇಬನು ಹೇಳಿದಂತೆ ಕೇಳಲು ಒಪ್ಪಿರಬೇಕು. ಅಂತೂ ಆ ಮಹಾಸೇನಾಪತಿ ದೌಲತಾಬಾದ್ ಕೋಟೆಯಲ್ಲಿ ತನ್ನ ಅವಿವೇಕದಿಂದಲೇ ಬಂಧನಕ್ಕೆ ಒಳಗಾದ.

ತಮ್ಮ ನಾಯಕನನ್ನು ಬಂಧಿಯನ್ನಾಗಿ ಮಾಡಿದ್ದಾರೆಂಬ ವಿಚಾರವನ್ನು ವಿಜಾಪುರದ ಸೈನಿಕರು ತಿಳಿದು ಆತನ ಬಿಡುಗಡೆಯಾಗಬೇಕೆಂದು ಕೂಗಾಡಿದರು. ಅವರು ಮನಸ್ಸು ಮಾಡಿದ್ದರೆ ಆತನನ್ನು ಬಂಧನದಿಂದ ಬಿಡುಗಡೆಮಾಡಬಹುದಿತ್ತು. ಆದರೆ ಔರಂಗಜೇಬನ ಯುಕ್ತಿ ಅವರನ್ನು ತಡೆಯಿತು. ಮೀರ್ ಜುಮ್ಲಾ ಬಂಧಿಯಾಗಿ ರುವುದು ಆತನ ಒಪ್ಪಿಗೆಯಿಂದಲೇ ಎಂದು ಸೈನ್ಯದ ಹಿರಿಯ ಅಧಿಕಾರಿಗಳಿಗೆ ತಿಳಿಸಿ ಅವರನ್ನು ಸಮಾಧಾನಮಾಡಿದನು. ಆದರ ಮೇಲೆ ಉದಾರವಾಗಿ ಬಹುಮಾನಗಳನ್ನು ಇತ್ತನು. ಸೈನ್ಯದಲ್ಲಿದ್ದ ಅಧಿಕಾರಿಗಳಿಗೆ ಬಡ್ತಿ ನೀಡುವುದಲ್ಲದೆ ಸಂಬಳ ಸಾರಿಗೆಗಳನ್ನೂ ಹೆಚ್ಚುಮಾಡಿ ಕೊಡುವುದಾಗಿ ವಾಗ್ದಾನಮಾಡಿದನು. ತನ್ನ ಔದಾರ್ಯದ ಕುರುಹಾಗಿ ಮೂರು ತಿಂಗಳ ಸಂಬಳವನ್ನು ಮುಂಗಡವಾಗಿ ಕೊಟ್ಟನು.

ಈ ರೀತಿ ಸೈನ್ಯವನ್ನು ತನ್ನ ಕಡೆ ಮಾಡಿಕೊಂಡು ಮತ್ತು ತಕ್ಕಷ್ಟು ಶಕ್ತಿ ಸಾಮರ್ಥ್ಯಗಳನ್ನು ಬೆಳೆಸಿಕೊಂಡ ಔರಂಗಜೇಬ ಇನ್ನೂ ಶರಣಾಗತವಾಗದಿದ್ದ ಸೂರತ್ತಿನ ಕಡೆ ಹೊರಟನು. ಆ ಕಡೆ ಹೊರಟ ಸೈನ್ಯ ಕೆಲವು ದಿನ ದಾರಿ ಸಾಗಿಸುವುದರಲ್ಲಿ ಸೂರತ್ ವಶವಾಯಿತೆಂಬ ಸಂತೋಷದ ಸುದ್ದಿ ಬಂದಿತು. ಈಗ ಔರಂಗಜೇಬ ತನ್ನ ದಿಕ್ಕು ಬದಲಾಯಿಸಿದ. ತಮ್ಮ ಮೊರಾದ್ ಭಕ್ಷನಿಗೆ ಪತ್ರ ಬರೆದು, ಅದರಲ್ಲಿ ತನ್ನ ಮತ್ತು ಮೀರ್ ಜುಮ್ಲಾರಿಬ್ಬರ ಮಧ್ಯೆ ನಡೆದ ಸಂಗತಿಗಳನ್ನೆಲ್ಲಾ ತಿಳಿಸಿದ. ತಮ್ಮನ ವಿಜಯದಿಂದ ತಾನೆಷ್ಟು ಹಿಗ್ಗಿರುವನೆಂದು ಹೇಳಿ ತನ್ನ ಅಭಿನಂದನೆ ಸೂಚಿಸಿದ. ತಾನು ತನ್ನ ಅಪಾರ ಸೈನ್ಯ ಹಾಗೂ ಹಣದ ಸಮೇತ ಬ್ರಹ್ಮಪುರದ (ಬುರ್ಹಾನ್‌ಪುರ) ಮೂಲಕ ಆಗ್ರಾ ಕಡೆ ಹೊರಟಿರುವುದಾಗಿಯೂ, ತಮ್ಮನೂ ಕೂಡಲೇ ಹೊರಟುಬರಬೇಕೆಂದೂ ಪತ್ರದಲ್ಲಿ ತಿಳಿಸಿದ. ಇಬ್ಬರೂ ಎಲ್ಲಿ ಸಂಧಿಸಬೇಕೆಂಬ ಬಗ್ಗೆ ಸೂಚನೆಗಳು ಸಹ ಇದ್ದವು.

ಸೂರತ್ತನ್ನು ವಶಪಡಿಸಿಕೊಂಡ ಮೊರಾದ್ ಭಕ್ಷನಿಗೆ ಅಲ್ಲಿ ನಿರೀಕ್ಷಿಸಿದಷ್ಟು ಭಂಡಾರ ಸಿಕ್ಕಲಿಲ್ಲ. ಒಂದು ತಿಂಗಳ ಶ್ರಮ ವ್ಯರ್ಥವಾಯಿತು. ಡಚ್ಚರು ಹೇಳಿಕೊಟ್ಟ 'ಡೈನಮೆಂಟ್' ಹಾಕುವ ರೀತಿಯನ್ನು ಅನುಸರಿಸಿ ಕೋಟೆಯ ಒಂದು ಭಾಗವನ್ನು ಕೆಡವದಿದ್ದರೆ ಅದೂ ಸಾಧ್ಯವಾಗುತ್ತಿರಲಿಲ್ಲ. ಅಂತೂ ಸಿಕ್ಕಿದಷ್ಟನ್ನು ತೆಗೆದುಕೊಂಡು, ಅದನ್ನು ಸಿಪಾಯಿಗಳ ಸಂಬಳಕ್ಕೆ ಕೊಟ್ಟು, ಮುಂದಿನ ಆಲೋಚನೆ ಮಾಡಿದನು. ಸೂರತ್ತಿನಲ್ಲಿ ಮೊರಾದ್ ಭಕ್ಷನಿಗೆ ಹಣ ಸಿಕ್ಕದಿದ್ದರೂ ಹೆಸರು ಸಿಕ್ಕಿತು. ಆ ಹೆಸರಿನ ಹೆಗ್ಗಳಿಕೆಯಿಂದ ಹಿಗ್ಗಿ, ಔರಂಗಜೇಬನನ್ನು ಕೂಡಿಕೊಳ್ಳಲು ಹೊರಟಿದ್ದ ಆತನಿಗೆ ಸೇನಾ ನಾಯಕ ಷಾ ಅಬ್ಬಾಸ ಬುದ್ಧಿವಾದ ಹೇಳಿದ. ಕಣ್ಣುಮುಚ್ಚಿಕೊಂಡು ಔರಂಗಜೇಬನ

ಬಲೆಗೆ ಬೀಳಬೇಡವೆಂದು ಆತ ಸಲಹೆಮಾಡಿದನು. ಅವನನ್ನು ಸೇರಿಕೊಳ್ಳುವ ಬದಲು, ತಾನೇ ಸಮಯ ಸಂದರ್ಭಗಳನ್ನು ನೋಡಿ ಆಗ್ರಾವನ್ನು ವಶಪಡಿಸಿಕೊಳ್ಳುವ ಆಲೋಚನೆ ಮಾಡುವುದು ಸೂಕ್ತವಾದುದು ಎಂದನು. ಆದರೆ ನಿತ್ಯವೂ ಅಣ್ಣನಿಂದ ಬರುತ್ತಿದ್ದ ಪ್ರೀತಿಯ ಪತ್ರಗಳನ್ನು ನೋಡಿ ಆತ ಈ ಸಲಹೆಗಳಿಗೆ ಕಿವಿಗೊಡಲಿಲ್ಲ. ಹಿರಿಯ ಅಬ್ಬಾಸನ ವಿವೇಕದ ಮಾತುಗಳಿಗೆ ಕಿರಿಯ ರಾಜಕುಮಾರ ಕಿವಿಗೊಟ್ಟಿದ್ದರೆ ಚೆನ್ನಾಗಿತ್ತು. ಆದರೆ ಚಕ್ರಾಧಿಪತಿಯಾಗುವ ಆಸೆ ಆ ಹುಡುಗನನ್ನು ಕುರುಡನನ್ನಾಗಿ ಮಾಡಿದ್ದಿತು. ಅಬ್ಬಾಸನ ವಿವೇಕದ ಮಾತುಗಳು ಬಾಯಲ್ಲಿ ನೀರೂರಿಸುವ ಔರಂಗಜೇಬನ ಪತ್ರಗಳ ಮುಂದೆ ಬಹು ಸಪ್ಪೆಯಾಗಿ ಕಂಡುವು. ಯಾವತ್ತು ತನ್ನ ಕನಸು ನನಸಾಗುವುದೋ ಎಂದು ತವಕಪಡುತ್ತಿದ್ದ ಆತ ಅಹಮದಾಬಾದಿನಲ್ಲಿದ್ದ ತನ್ನ ಬೀಡು ಕಿತ್ತು, ಗುಜರಾತ್ ದೇಶವನ್ನು ತ್ಯಜಿಸಿ, ಬೆಟ್ಟ ಗುಡ್ಡ ಕಾಡುಗಳನ್ನು ಹಾದು, ಬೇಗ ಬೇಗ ತನಗಾಗಿ ಬಹಳ ದಿನಗಳಿಂದ ಕಾಯುತ್ತಿದ್ದ ಅಣ್ಣನನ್ನು ಕೂಡಿಕೊಳ್ಳಲು ಧಾವಿಸಿದ.

ಔರಂಗಜೇಬನು ಎಲ್ಲಿ ಕಾಯುತ್ತಿದ್ದನೋ ಅಲ್ಲಿಗೆ ಮೊರಾದ್‌ಭಕ್ಷ ಬಂದು ಸೇರಿದಾಗ ಎರಡು ಸೈನ್ಯಗಳೂ ಆ ಸುದಿನವನ್ನು ಬಹು ಆನಂದದಿಂದ ಆಚರಿಸಿದುವು. ಅಣ್ಣ ತಮ್ಮಂದಿರು ಎಡೆಬಿಡದೆ ಇದ್ದರು. ತನ್ನ ತಮ್ಮನ ಮೇಲೆ ಎಷ್ಟು ಪ್ರೀತಿ ಎಂಬುದನ್ನು ಔರಂಗಜೇಬ ಪದೇ ಪದೇ ವ್ಯಕ್ತಪಡಿಸಿದ. ಸಿಂಹಾಸನದ ಮೇಲೆ ತನಗೆ ಎಳ್ಳಷ್ಟೂ ಆಸೆಯಿಲ್ಲವೆಂದು ಮತ್ತೆ ಮತ್ತೆ ಒತ್ತಿ ಹೇಳಿದ. ದಾರಾನನ್ನು ದಂಗುಬಡೆದು, ತಮ್ಮನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವ ಒಂದೇ ಒಂದು ಉದ್ದೇಶದಿಂದ ತಾನು ಎರಡೂ ಸೈನ್ಯಗಳ ಮಹಾನಾಯಕನಾಗಲು ಇಚ್ಛಿಸುವುದಾಗಿ ತಿಳಿಸಿದ.

ಎರಡೂ ಸೈನ್ಯಗಳು ಔರಂಗಜೇಬನ ಮಹಾನಾಯಕತ್ವದಲ್ಲಿ ಆಗ್ರಾ ಕಡೆ ಹೊರಟವು. ಆ ಪ್ರಯಾಣದ ಕಾಲದಲ್ಲಿ ಔರಂಗಜೇಬ ತನ್ನ ತಮ್ಮನೊಡನೆ ಏಕಾಂತದಲ್ಲಿರಲಿ ಅಥವಾ ಬೇರೆಯವರ ಒಟ್ಟಿಗಿರಲಿ ಆತನನ್ನು 'ಹಜರತ್' ಎಂದು ಗೌರವಪೂರ್ಣವಾಗಿ ಸಂಬೋಧಿಸುತ್ತಿದ್ದ. ಇವು ಯಾವೂವೂ ಆ ಮೊರಾದ್‌ಭಕ್ಷನಲ್ಲಿ ಅನುಮಾನ ಹುಟ್ಟಿಸದೆ ಹೋದದ್ದು ಆಶ್ಚರ್ಯವೇ ಸರಿ. ಗೋಲ್ಕೊಂಡದಲ್ಲಿ ಇತ್ತೀಚೆಗೆ ನಡೆದ ಮಹಾ ಘಾತುಕತನದ ವರ್ತನೆಯನ್ನು ಮೊರಾದ್ ಅಷ್ಟು ಸುಲಭವಾಗಿ ಮರೆತುಬಿಟ್ಟನಲ್ಲ! ಆದರೆ ಆತನೇನು ತಾನೆ ಮಾಡಿಯಾನು ಹೇಳಿ? ಸಾಮ್ರಾಟನಾಗುವ ಮಹದಾಸೆ ಆತನ ಕಣ್ಣುಗಳನ್ನು ಕಟ್ಟಿಬಿಟ್ಟಿತ್ತು. ಮೊನ್ನೆ ತಾನೆ ಗೋಲ್ಕೊಂಡ ರಾಜ್ಯವನ್ನು ಕಬಳಿಸಬೇಕೆಂಬ ದುರಾಸೆಗೆ ಒಳಗಾದ ಔರಂಗಜೇಬ ಫಕೀರನಾಗುವುದು ಸಾಧ್ಯವೇ ಎಂದು ಕೊಂಚವೂ ಯೋಚಿಸಲಾರದೆ ಹೋದ, ಆತ!

ಈರ್ವರು ಸಹೋದರರ ಸೈನ್ಯಗಳೂ ಕೂಡಿ ಮಹಾ ಸೈನ್ಯವೇ ಆಯಿತು. ಈ ಮಹಾ ಸೈನ್ಯದ ಆಗಮನದ ಸುದ್ದಿ ಆಗ್ರಾದಲ್ಲಿ ಆಲ್ಲೋಲಕಲ್ಲೋಲವನ್ನುಂಟುಮಾಡಿತು.

ದಾರಾನಂತೂ ಸಿಡಿಮಿಡಿಗೊಂಡನು. ಇವೆಲ್ಲದರ ಪರಿಣಾಮವನ್ನು ಅರಿತ ಆ ಮುದಿಯ ಷಾಜಹಾನ್ ಭಯಭೀತನಾಗಿ, ಇದನ್ನು ತಪ್ಪಿಸಲು ಏನೆಲ್ಲಾ ಉಪಾಯಗಳನ್ನು ಯೋಚಿಸಿದನು. ಆದರೆ ಔರಂಗಜೇಬನ ಬುದ್ಧಿಶಕ್ತಿಯ ಮುಂದೆ ಅವು ನಿಲ್ಲಲಾರದೆ ಹೋದುವು. ಚಕ್ರವರ್ತಿ ಹರಿಕಾರರ ಮೇಲೆ ಹರಿಕಾರರನ್ನು ಅಟ್ಟಿದನು. ತಾನು ಕಾಯಿಲೆಯಿಂದ ಮಲಗಿರುವುದಾಗಿಯೂ, ಮಕ್ಕಳಿಬ್ಬರೂ ಅವರವರ ರಾಜ್ಯಗಳಿಗೆ ಹಿಂದಿರುಗಬೇಕೆಂದೂ, ಹಾಗೆ ಮಾಡಿದರೆ ಅವರ ತಪ್ಪುಗಳನ್ನೆಲ್ಲಾ ಮನ್ನಿಸಿಬಿಡುವು ದಾಗಿಯೂ ಹೇಳಿಕಳುಹಿಸಿದನು. ಆದರೆ ಅವೆಲ್ಲ ಗೋರ್ಕಲ್ಲಮೇಲೆ ಮಳೆಗರೆದಂತಾ ದುವು. ಒಟ್ಟಾದ ಅಣ್ಣತಮ್ಮಂದಿರು ಭಾರಿ ಸೈನ್ಯ ಸಮೇತ ರಾಜಧಾನಿಯತ್ತ ಸಾಗಿ ದರು.

ಚಕ್ರವರ್ತಿಯ ಕಾಯಿಲೆ ದಿನೇ ದಿನೇ ಉಲ್ಬಣಿಸುತ್ತಿತ್ತು. ಇದನ್ನು ತಿಳಿದ ಆ ಇಬ್ಬರು ಸಹೋದರರು ತಮ್ಮ ಎಂದಿನ ನಟನೆಯನ್ನು ಹೂಡಿದರು. ಷಾಜಹಾನನಿಂದ ಬಂದ ಪತ್ರಗಳೆಲ್ಲಾ ಸುಳ್ಳೆಂದೂ, ಅವೆಲ್ಲ ದಾರಾನ ಸೃಷ್ಟನೆಗಳೆಂದೂ ಹೇಳಿದರು. ತಂದೆ ಸತ್ತೇಹೋಗಿದ್ದಾನೆ, ಅಥವಾ ಇನ್ನೇನು ಸಾಯುವ ಸ್ಥಿತಿಯಲ್ಲಿದ್ದಾನೆ ಎಂದು ತಿಳಿಸಿ ದರು. ದೇವರೆ ದಯದಿಂದ ತಂದೆ ಸಾಯದೆ ಬದುಕಿದ್ದರೆ ತಾವು ಅವನ ಪಾದಪದ್ಮಗಳಿಗೆ ಎರಗಿ, ಆಶೀರ್ವಾದ ಪಡೆದು, ದ್ರೋಹಿ ದಾರಾನ ಕೈಸೆರೆಯಿಂದ ಆತನನ್ನು ಬಿಡಿಸಿ ಕೃತಾರ್ಥರಾಗುತ್ತೇವೆ ಎಂದು ಸಾರಿದರು.

ಷಾಜಹಾನನ ಪರಿಸ್ಥಿತಿ ನಿಜವಾಗಿಯೂ ದಾರುಣವಾಗಿತ್ತು. ಒಂದು ಕಡೆ ವಿಷಮ ವಾದ ಕಾಯಿಲೆಯಾದರೆ, ಇನ್ನೊಂದು ಕಡೆ ದಾರಾನಿಂದ ಬಂಧಿತನಾಗಿರುವ ದಾರುಣ ಸ್ಥಿತಿ. ತಂದೆ ಏನು ಹೇಳಿದರೂ ಕೇಳದೆ ದಾರಾ ಯುದ್ಧಕ್ಕೆ ತೊಡೆ ತಟ್ಟುತ್ತಿದ್ದ. ಉಳಿದ ಮಕ್ಕಳು ಆಗ್ರಾ ಕಡೆ ಧಾವಿಸಿ ಬರುತ್ತಿದ್ದರು. ಹೀಗಿರುವಾಗ ಆತ ಮಾಡುವುದಾದರೂ ಏನು ? ತಾನು ಗಳಿಸಿದ ಅಷ್ಟೈಶ್ವರ್ಯವೆಲ್ಲ ಪೋಲಾಗಿ ಹೋಗುವುದಲ್ಲ ಎಂಬ ಸಂಕಟ ಆತನಿಗೆ. ಆದರೆ ಕೊನೆಗೆ ಯುದ್ಧ ನಡೆಯುವುದು ಅನಿವಾರ್ಯವೆಂದಾಗ ಆತ ತನ್ನ ನಂಬಿಕಸ್ತ ಸರದಾರರನ್ನೆಲ್ಲಾ ಕರೆಸಿ 'ಯುದ್ಧಕ್ಕೆ ಸಿದ್ಧರಾಗಿ' ಎಂದು ಹೇಳಬೇಕಾಯಿತು. ನಿಜವಾಗಿಯೂ ಮನಸ್ಸಿನಲ್ಲಿ ಆತನಿಗೆ ದಾರಾನ ಮೇಲಿನ ಪ್ರೀತಿಗಿಂತ ಇತರ ಮಕ್ಕಳ ಮೇಲಿನ ಪ್ರೀತಿಯೇ ಹೆಚ್ಚಾಗಿತ್ತು. ಆದರೆ ಮಾಡುವುದೇನು ? ಬಂಗಾಳದ ಕಡೆಯಿಂದ ದಂಡೆತ್ತಿ ಬರುತ್ತಿದ್ದ ಸೂಜನಿಂದ ಹಾನಿ ಸನ್ನಿಹಿತವಾಗಿತ್ತು. ಅದನ್ನು ತಡೆಯಲು ಕೂಡಲೇ ಸೈನ್ಯವನ್ನು ಕಳುಹಿಸುವುದು ಅನಿವಾರ್ಯವಾಗಿತ್ತು. ಹೀಗೆ ಸೈನ್ಯವನ್ನು ಕಳುಹಿಸಿದ ಮೇಲೆ ತನ್ನ ಇನ್ನಿಬ್ಬರು ಮಕ್ಕಳ ಸೈನ್ಯವನ್ನು ಎದುರುಗೊಳ್ಳುವಂತೆ ಆತ ಮತ್ತೊಂದು ಸೈನ್ಯವನ್ನು ಸಜ್ಜುಗೊಳಿಸಿ ಕಳುಹಿಸಿದ.

ಸುಲ್ತಾನ್ ಸೂಜನ ಮೇಲೆ ಕಳುಹಿಸಿದ ಸೈನ್ಯಕ್ಕೆ ದಾರಾನ ಮಗ ಇಪ್ಪತ್ತೈದು ವರ್ಷ ವಯಸ್ಸಿನ ಸುಲೇಮಾನ್ ಷೆಕೋನನ್ನು ದಳಪತಿಯನ್ನಾಗಿ ನೇಮಿಸಿದನು. ಈ

ಮೊಮ್ಮಗನ ಬಗ್ಗೆ ತಾತನಿಗೆ ಬಹಳ ಅಭಿಮಾನ. ಮಗನ ಬದಲು ಈ ಮೊಮ್ಮಗ ಸಿಂಹಾಸನವನ್ನೇರಿದರೆ ಒಳಿತಾದೀತೆಂದು ಆ ಮುದುಕನ ಆಸೆಯಾಗಿತ್ತು. ಯುದ್ಧಕ್ಕೆ ಕಳುಹಿಸಿದ ತನ್ನ ಈ ಮೊಮ್ಮಗನ ಬೆಂಬಲಕ್ಕೆ ಹಿರಿಯನಾದ ರಾಜಾ ಜಯಸಿಂಗನನ್ನು ಕಳುಹಿಸಿದನು. ಯುದ್ಧದಲ್ಲಿ ಅನಾವಶ್ಯಕವಾದ ರಕ್ತದ ಕೋಡಿ ಹರಿಯಬಾರದೆಂಬ ಉದ್ದೇಶ ಆ ಮುದುಕನದಾಗಿತ್ತು. ಈಗ ಹಿಂದೂಸ್ಥಾನದಲ್ಲಿ ಅತ್ಯಂತ ಶ್ರೀಮಂತನೂ ಬಹುಶಃ ಬಹು ಶಕ್ತಿವಂತನೂ ಆದ 'ರಾಜ'ನೆಂದರೆ ಜಯಸಿಂಗನೆ. ಆತನಿಗೆ ಷಾಜಹಾನ ಹೇಳಿಕಳುಹಿಸಿದ, 'ಆದಷ್ಟು ಪ್ರಯತ್ನಮಾಡಿ ಯುದ್ಧ ಆಗದಂತೆ ತಡೆಯಬೇಕು ; ಮತ್ತು ಸೂಜ ಬಂಗಾಳಕ್ಕೆ ಹಿಂದಿರುಗುವಂತೆ ಏನಾದರೂ ಮಾಡಬೇಕು' ಎಂದು. ಆದರೆ ಈ ದಿಶೆಯಲ್ಲಿ ಮಾಡಿದ ಜಯಸಿಂಗನ ಪ್ರಯತ್ನಗಳೆಲ್ಲ ವಿಫಲವಾದವು. ಯುದ್ಧವನ್ನು ತಪ್ಪಿಸಲು ಅವನಿಂದ ಸಾಧ್ಯವಾಗಲಿಲ್ಲ. ಏಕೆಂದರೆ, ಒಂದು ಕಡೆ ಸುಲೇಮಾನ್ ಷೆಕೋ ಯುದ್ಧದಲ್ಲಿ ಜಯಭೇರಿ ಹೊಡೆದು ಹೆಸರುಗಳಿಸಬೇಕೆಂದು ಹಾತೊರೆಯುತ್ತಿದ್ದರೆ ಇನ್ನೊಂದು ಕಡೆ ಸೂಜ ತಾನು ನಿಧಾನ ಮಾಡಿದರೆ ಔರಂಗಜೇಬನು ಮುನ್ನುಗ್ಗಿ ಆಗ್ರಾ ಮತ್ತು ಡೆಲ್ಲಿನಗರಗಳನ್ನು ಎಲ್ಲಿ ವಶಪಡಿಸಿಕೊಳ್ಳುವನೊ ಎಂಬ ಶಂಕೆಯಿಂದ ಕೂಡಿದ್ದ. ಈ ಕಾರಣ ಎರಡೂ ಸೈನ್ಯಗಳು ಯುದ್ಧಕ್ಕೆ ಕಾಲ್ಕೆರೆದು ನಿಂತವು. ಒಂದನ್ನೊಂದು ಕಂಡ ಕೂಡಲೇ ಫಿರಂಗಿಗಳು ಹಾರಲಾರಂಭಿಸಿದುವು. ವೀರಾವೇಶದ ಹೋರಾಟ ಆರಂಭ ವಾಯಿತು. ಕೊನೆಗೆ ಸೂಜಾ ಸಮರದಿಂದ ಹಿಮ್ಮೆಟ್ಟಿ, ಕಂಗೆಟ್ಟು ಓಡಿಹೋಗಬೇಕಾ ಯಿತು. ಜಯಸಿಂಗನೂ ಅವನ ಆಪ್ತ ಸ್ನೇಹಿತ ದಲೀಲ್‌ಖಾನ್ ಎಂಬ ಪಠಾಣನೂ ಬೇಕೆಂತಲೇ ಕೈತಡೆದುಕೊಂಡರು. ಹಾಗೆ ಮಾಡದಿದ್ದರೆ ಸೂಜಾನ ಸೈನ್ಯ ನಿರ್ನಾಮವಾಗು ತ್ತಿತ್ತಲ್ಲದೆ, ಅದರ ದಳಪತಿ ಸೆರೆಸಿಕ್ಕಿಬಿಡುತ್ತಿದ್ದ. ರಾಜಕುಮಾರನ ಮೇಲೆ ಕೈಮಾಡುವ ಸಾಹಸದ ಮನಸ್ಸು ಬರಲಿಲ್ಲ ಜಯಸಿಂಗನಿಗೆ. ಹಾಗೆ ಮಾಡದೆ, ಸೂಜಾ ಓಡಿಹೋಗಲು ಎಡೆಮಾಡಿಕೊಟ್ಟ. ಒಟ್ಟನಲ್ಲಿ, ಸುಲೇಮಾನ್ ಷೆಕೋ ಜಯಭೇರಿ ಹೊಡೆದುಕೊಂಡು ಆಗ್ರಾ ಕಡೆಗೆ ಸಾಗಿದ.

ಓಡಿಹೋಗುತ್ತಿದ್ದ ಚಿಕ್ಕಪ್ಪನ ಬೆನ್ನುಹತ್ತುವುದು ಷೆಕೋನಿಗೆ ಸರಿಕಾಣಲಿಲ್ಲ. ಏಕೆಂದರೆ, ಇತ್ತ ಇನ್ನಿಬ್ಬರು ಚಿಕ್ಕಪ್ಪಂದಿರು ಆಗ್ರಾ ಕಡೆ ಮುನ್ನುಗ್ಗಿ ಬರುತ್ತಿದ್ದರು. ಅವರನ್ನು ನೋಡಿಕೊಳ್ಳಬೇಕಾದ್ದು ಆತನ ತುರ್ತು ಕೆಲಸವಾಗಿತ್ತು. ಸುಲೇಮಾನ್ ಷೆಕೋನ ಜಯಘೋಷದಿಂದ ಹರ್ಷಗೊಂಡ ಆಗ್ರಾ ಜನ, ಅದೇ ಗಳಿಗೆಯಲ್ಲಿ ಔರಂಗಜೇಬ ಬ್ರಹ್ಮಪುರದ ಬಳಿ ನದಿ ದಾಟಿ ಅಡೆತಡೆಗಳನ್ನೆಲ್ಲಾ ತೊಡೆದುಕೊಂಡು ಆಗ್ರಾ ಕಡೆ ಮುಂದುವರಿಯುತ್ತಿದ್ದಾನೆಂಬ ಸುದ್ದಿಯನ್ನು ಕೇಳಿ ದಿಗ್ಭ್ರಮೆಗೊಂಡರು. ಆತನನ್ನು ಇನ್ನೂ ಮುಂದೆ ಬರದಂತೆ ಉಜ್ಜಯನಿಯ ಬಳಿ ಇರುವ ನದಿಯ ಆಚೆಯೇ ತಡೆಗಟ್ಟುವ ಆಜ್ಞೆಯನ್ನು ಹೊತ್ತ ಒಂದು ಸೈನ್ಯ ಆ ಕಡೆ ಧಾವಿಸಿತು. ಆ ತುಕಡಿಯ ಸೇನಾಧಿಪತ್ಯ ವನ್ನು ಖಾಸಿಂ ಖಾನನಿಗೂ ರಾಜಾ ಜಸ್ವಂತ್‌ಸಿಂಗನಿಗೂ ವಹಿಸಲಾಯಿತು. ಈ

ಖಾಸಿಂ ಖಾನ ಚಕ್ರವರ್ತಿಗೆ ಬೇಕಾದವನು. ಆದರೆ ದಾರಾನಿಗೆ ಬೇಡವಾದನು. ರಾಜ ಜಸ್ವಂತ್‌ಸಿಂಗನು ರಾಜ ಜಯಸಿಂಗನಿಗೆ ಯಾವುದರಲ್ಲಿಯೂ ಕಡಿಮೆ ಇರಲಿಲ್ಲ. ಈತನೇ ಅಕ್ಬರನ ಕಾಲದಲ್ಲಿ ಪ್ರಸಿದ್ಧನಾಗಿದ್ದ ರಾಜ ರಾಣಾನ ಅಳಿಯ !

ಈ ಇಬ್ಬರೂ ಕೂಡಿ ತಮ್ಮ ಸೈನ್ಯ ಸಮೇತ ಹೊರಟು ಔರಂಗಜೇಬನನ್ನು ಎದುರಿಸಿದರು. ಆಗ ಬೇಸಗೆ ಕಾಲ. ನದಿ ಒಣಗಿತ್ತು. ಈ ಕಾರಣ ನದಿಯ ಪಾತ್ರದಲ್ಲಿಯೇ ಯುದ್ಧ ಪ್ರಾರಂಭವಾಯಿತು. ಜಸ್ವಂತಸಿಂಗನೇನೋ ವೀರಾವೇಶದಿಂದ ಹೋರಾಡಿದ. ಆದರೆ ಖಾಸಿಂ ಖಾನ ಮೋಸಮಾಡಿಬಿಟ್ಟನೆಂದು ಜನ ಹೇಳುತ್ತಾರೆ. ಯುದ್ಧದ ಹಿಂದಿನ ರಾತ್ರಿ ತನ್ನ ಕಡೆಯಮದ್ದು ಗುಂಡುಗಳನ್ನು ಅವನು ಮರಳಿನಲ್ಲಿ ಬಚ್ಚಿಟ್ಟು ಮೋಸ ಮಾಡಿದನಂತೆ. ಮಾರನೆಯ ದಿನ ಯುದ್ಧವೇನೋ ಖಡಾಖಡಿಯಿಂದ ನಡೆಯಿತು. ತಾನು ಚಕ್ರವರ್ತಿಯಾಗುವೆನೆಂಬ ಆಸೆಯಿಂದ ಮೊರಾದ್ ಭಕ್ಷ ಒದಗಿಬಂದ ಆತಂಕಗಳನ್ನೆಲ್ಲಾ ಎದುರಿಸಿದ. ಆತ ನದಿಯನ್ನು ದಾಟಿಯೇ ಬಿಟ್ಟ. ಅವನನ್ನು ಹಿಂಬಾಲಿಸಿತು ಅವನ ಭಾರೀ ಸೈನ್ಯ. ಖಾಸಿಂ ಖಾನ ಯುದ್ಧರಂಗದಿಂದ ಓಡಿಹೋದ. ಜಸ್ವಂತ್‌ಸಿಂಗ್ ಇಕ್ಕಟ್ಟಿನಲ್ಲಿ ಸಿಲುಕಿದ. ಆ ಸಂದಿಗ್ಧ ಪರಿಸ್ಥಿತಿಯಲ್ಲಿ ಅವನ ರಜಪೂತ ಅನುಯಾಯಿಗಳು ಅವನ ಪ್ರಾಣ ಸಂರಕ್ಷಣೆ ಮಾಡಿದರು. ಅನೇಕ ರಜಪೂತರು ಅವನಿಗಾಗಿ ಪ್ರಾಣಾರ್ಪಣೆ ಮಾಡಿದರು. ಎಂಟು ಸಾವಿರ ಜನರಿದ್ದ ಜಸ್ವಂತನ ಸೈನ್ಯ ರಣದೇವತೆಗೆ ಬಲಿಯಾಗಿ ಆರುನೂರಕ್ಕೆ ಇಳಿಯಿತು. ಅಳಿದುಳಿದ ಈ ನೆಚ್ಚಿನ ಅನುಯಾಯಿಗಳನ್ನು ಕಟ್ಟಿಕೊಂಡು ಹೊರಟ ರಾಜ ಆಗ್ರಾಕ್ಕೆ ಹಿಂದಿರುಗುವುದು ಬೇಡವೆಂದು ನಿರ್ಧರಿಸಿ, ತನ್ನ ರಾಜ್ಯದ ಕಡೆ ಹೋಗಿಬಿಟ್ಟನು.

'ರಾಜಿಪೂ' (Rajipoo) ಎಂದರೆ 'ರಾಜಪುತ್ರ' (Son of Raja) ಎಂದರ್ಥ. ಇವರಿಗೆ ಯುದ್ಧ ಕಲೆ ವಂಶಪಾರಂಪರ್ಯವಾಗಿ ಬಂದದ್ದು. ಚಿಕ್ಕ ವಯಸ್ಸಿನಿಂದಲೇ ಅಫೀಮಿನ ಸೇವನೆಮಾಡುತ್ತಾ ಬರುತ್ತಾರೆ. ಇವರು ಎಷ್ಟು ಅಫೀಮು ತಿನ್ನುತ್ತಾರೆಂಬುದನ್ನು ನೋಡಿ ನನಗೆ ಅಚ್ಚರಿಯಾಯಿತು. ಯುದ್ಧ ಮಾಡುವ ದಿನ ಸಾಮಾನ್ಯವಾಗಿ ತಿನ್ನುವುದಕ್ಕಿಂತ ಎರಡರಷ್ಟು ಅಫೀಮನ್ನು ತಿನ್ನುತ್ತಾರೆ. ಹೀಗೆ ಅಫೀಮು ತಿನ್ನುವುದರಿಂದ ಇವರು ಯುದ್ಧದಲ್ಲಿ ಮರಣಕ್ಕೆ ಹೆದರದೆ ಹೋರಾಡುತ್ತಾರೆ. ಈ ಕಾರಣದಿಂದಲೇ ಮಹಮ್ಮದೀಯನಾದ ಚಕ್ರವರ್ತಿ ತನ್ನ ಸೈನ್ಯದಲ್ಲಿ ಜೆಂಟೈಲರಾದ 'ರಾಜ'ರುಗಳನ್ನು ನೇಮಿಸಿಕೊಂಡು, ಅವರನ್ನು ಅಮೀರರನ್ನು ಕಂಡಷ್ಟೇ ಗೌರವದಿಂದ ಕಾಣುತ್ತಿರುವುದು.

ಮೇಲೆ ಹೇಳಿದ ಜಸ್ವಂತಸಿಂಗನು ರಣರಂಗದಲ್ಲಿ ಸೋತು ಹಿಂದಿರುಗುತ್ತಿದ್ದಾನೆಂಬ ಸುದ್ದಿಯನ್ನು ಕೇಳಿದ ಅವನ ಹೆಂಡತಿ ಆತನ ಬಗ್ಗೆ ತಾಳಿದ ತಿರಸ್ಕಾರ ಭಾವನೆಯನ್ನು ನಾನು ಇಲ್ಲಿ ಹೇಳದಿರಲಾರೆ. ಆಕೆ ರಾಣಾ ಮನೆತನಕ್ಕೆ ಸೇರಿದ ವೀರ ರಮಣಿ. ಜಸ್ವಂತಸಿಂಗನು ತನ್ನ ಎಂಟುಸಾವಿರ ಯೋಧರಲ್ಲಿ ಅಳಿದುಳಿದ ಕೇವಲ ಆರುನೂರು ರಜಪೂತರನ್ನು

ಮಾತ್ರ ಕಟ್ಟಿಕೊಂಡು ಯುದ್ಧರಂಗದಿಂದ ಹಿಂದಿರುಗುತ್ತಿದ್ದ, ನಿಜ. ಆದರೆ ಅವನು ಹೇಡಿಯಂತೆ ಓಡಿಬರುತ್ತಿರಲಿಲ್ಲ. ವೀರಾವೇಶದಿಂದ ಹೋರಾಡಿ, ಹಿಮ್ಮುಖನಾಗುವುದು ಅತ್ಯಾವಶ್ಯಕವೆಂದು ಕಂಡೇ ಹಾಗೆ ಮಾಡಿದ್ದ. ಇಂಥವನನ್ನು ಹೆಂಡತಿ ಎದುರುಗೊಂಡು, ಅವನು ಸೋತುದಕ್ಕಾಗಿ ತನ್ನ ವ್ಯಸನವನ್ನು ಸೂಚಿಸಬೇಕಾಗಿತ್ತು. ಹಾಗೆ ಮಾಡುವ ಬದಲು ಆಕೆ ತನ್ನ ಗಂಡನು ಕೋಟೆಯೊಳಗೆ ಕಾಲಿಡಬಾರದೆಂದು ಹೇಳಿ, ದಿಡ್ಡಿ ಬಾಗಿಲು ಗಳನ್ನು ಮುಚ್ಚಿಸಿಬಿಟ್ಟಳು. 'ಅವನು ನಮ್ಮ ವಂಶಕ್ಕೇ ಅಪಕೀರ್ತಿ ತಂದಿದ್ದಾನೆ. ಅಂಥ ವನು ಈ ಕೋಟೆಯೊಳಗೆ ಪ್ರವೇಶಿಸಬಾರದು. ಅವನು ನನ್ನ ಗಂಡನಲ್ಲ. ಅಂಥ ಹೇಡಿ ಯನ್ನು ಗಂಡನೆಂದು ಈ ನಾಲಗೆ ಕರೆಯಲಾರದು ; ಕಣ್ಣಿಂದ ನೋಡಲಾರದು. ನಮ್ಮ ಹೆಸರಾಂತ ಮನೆತನಕ್ಕೆ ಸೇರಿದವನು ಅಪ್ರತಿಮ ಶೌರ್ಯವನ್ನು ಮೆರೆಯಬೇಕಾಗಿತ್ತು ; ಹಾಗೆ ಮೆರೆದು ಸಾಯಬೇಕಾಗಿತ್ತು. ಯುದ್ಧದಲ್ಲಿ ಹೋರಾಡಿ ಸಾಯದವನು ಬದುಕ ಬಾರದು.....ಅಥವಾ, ನನ್ನ ಗಂಡ ಹೇಡಿಯಾಗಿರಲು ಸಾಧ್ಯವೇ ? ಇರಲಾರದು ! ಆತ ವೀರಾವೇಶದಿಂದ ಹೋರಾಡಿ ಸತ್ತೇ ಇರಬೇಕು ! ಬದುಕಿದ್ದಾನೆಂಬುದು ಸುಳ್ಳು ಸಂಗತಿ ಇರಬೇಕು. ಅವನು ಹೇಡಿಯಂತೆ ಹಿಂದಿರುಗಲಾರನೆಂದು ನನಗೆ ಗೊತ್ತು....ಚಿತೆಯನ್ನು ಸಿದ್ಧಪಡಿಸಿ. ನಾನು ಅದರಲ್ಲಿ ಧುಮುಕಿ ಪ್ರಾಣನೀಗಬೇಕು !' ಎಂದು ಆಕೆ ಅಂದುಕೊಂಡಳು.

ಈ ತರಹ ಮಾನಸಿಕ ಯಾತನೆಯಲ್ಲಿ ಆಕೆ ಎಂಟು ಒಂಬತ್ತು ದಿನಗಳನ್ನು ಕಳೆದಳು. ಗಂಡನ ಮುಖವನ್ನು ನೋಡಲು ಒಪ್ಪಲಿಲ್ಲ. ಇಷ್ಟು ಹೊತ್ತಿಗೆ ಆಕೆಯ ತಾಯಿ ಬಂದು ಮಗಳಿಗೆ ಸಮಾಧಾನ ಹೇಳಿದಳು. 'ಜಸ್ವಂತಸಿಂಗನು ಇಷ್ಟಕ್ಕೆ ಸುಮ್ಮನಿರುವವನಲ್ಲ. ಮತ್ತೊಮ್ಮೆ ಔರಂಗಜೇಬನ ಮೇಲೆ ಯುದ್ಧಮಾಡಿ ತನಗೊದಗಿರುವ ಕಳಂಕವನ್ನು ತೊಳೆದುಕೊಳ್ಳದೆ ಬಿಡುವುದಿಲ್ಲ'—ಹೀಗೆಂದು ತಾಯಿ ಮಗಳನ್ನು ಸಮಾ ಧಾನ ಮಾಡಿದಳು. ತಾಯಿಯ ಮಾತಿನಿಂದ ಮಗಳು ಸಮಾಧಾನಗೊಂಡಳಂತೆ.

ಈ ಒಂದು ನಿದರ್ಶನ ಸಾಕು, ಈ ದೇಶದ ಸ್ತ್ರೀಯರು ಎಷ್ಟು ಕೆಚ್ಚೆದೆಯವರು ಎಂಬುದನ್ನು ತೋರಿಸಲು. ಎಷ್ಟೋ ಜನ ಸ್ತ್ರೀಯರು ಗಂಡಂದಿರೊಡನೆ ಸಹಗಮನ ಮಾಡುವುದನ್ನು ನಾನೇ ನೋಡಿದ್ದೇನೆ. ಈ ಪದ್ಧತಿಯ ದುಷ್ಪರಿಣಾಮಗಳನ್ನು ಅನಂತರ ಹೇಳುತ್ತೇನೆ.

ಉಜ್ಜಯನಿಯ ಪ್ರಸಂಗದಿಂದ ಸಿಟ್ಟಿಗೆದ್ದ ದಾರಾ, ಷಾಜಹಾನ್ ಚಕ್ರವರ್ತಿಯು ತಡೆಯದಿದ್ದರೆ ಏನೇನೊ ಮಾಡಿಬಿಡುತ್ತಿದ್ದ. ಖಾಸಿಂ ಖಾನ ಕೈಗೆ ಸಿಕ್ಕಿದ್ದರೆ ಅವನ ತಲೆಯನ್ನು ಕಡಿಸಿಬಿಡುತ್ತಿದ್ದ. ಔರಂಗಜೇಬನಿಗೆ ಹಣ ಸಹಾಯಮಾಡಿದ ಮೀರ್ ಜುಮ್ಲಾನನ್ನೂ, ಅವನ ಮಗ ಅಮೀರ್‌ಖಾನನ್ನೂ ಕೊಲ್ಲಿಸಿಬಿಡುತ್ತಿದ್ದ. ಮೀರ್ ಜುಮ್ಲಾನ ಹೆಂಡತಿ ಮಕ್ಕಳನ್ನು ವೇಶ್ಯಾವೃತ್ತಿಗೆ ಅಟ್ಟಿಬಿಡುತ್ತಿದ್ದ. ಆದರೆ ಮೀರ್

ಜುಮ್ಲಾನೇ ಔರಂಗಜೇಬನ ಮೋಸದ ಬಲೆಗೆ ಬಿದ್ದಿದ್ದಾನೆಂದರೆ, ತಪ್ಪು ಅವನದಲ್ಲ ಎಂದು ಷಾಜಹಾನನ ಸಮಾಧಾನದ ಮಾತುಗಳನ್ನು ಕೇಳಿ ದಾರಾ ಸುಮ್ಮನಾದನು.

ಆ ಕಡೆ ಜಯೋನ್ಮತ್ತನಾದ ಔರಂಗಜೇಬನೂ ಮೊರಾದ್ ಭಕ್ಷನೂ ಆಗ್ರಾ ಕಡೆ ಮುಂದುವರಿಯುವ ಮುನ್ನ ಎಚ್ಚರಿಕೆಯಿಂದ ಇರಬೇಕೆಂದು ಭಾವಿಸಿ, ನರ್ಮದಾ ನದಿಯ ದಡದಲ್ಲಿ ತಂಗಿ ವಿಶ್ರಾಂತಿ ಪಡೆಯಲಾರಂಭಿಸಿದರು. ತಮ್ಮ ಸೈನ್ಯದಲ್ಲಿ ಧೈರ್ಯಸ್ಥೈರ್ಯ ಗಳನ್ನು ಹೆಚ್ಚಿಸಲು ದಾರಾನ ಸೈನ್ಯದ ಮೂವತ್ತು ಸಾವಿರ ಮೊಗಲ್ ಸೈನಿಕರು ತಮ್ಮ ಕಡೆ ಇದ್ದಾರೆಂದು ಹೇಳಲಾರಂಭಿಸಿದರು. ಇದು ಬರೀ ಪೊಳ್ಳು ಮಾತಾಗಿರಲಿಲ್ಲವೆಂದು ಆ ಮೇಲೆ ಗೊತ್ತಾಗುವುದು. ಷಾಜಹಾನನ ಸ್ಥಿತಿ ಮತ್ತಷ್ಟು ಅಪಾಯಕರವೂ ಚಿಂತಾ ಜನಕವೂ ಆಯಿತು. ಆ ತನ್ನಿಬ್ಬರು ಮಕ್ಕಳು ಆಗ್ರಾದ ಮೇಲೆ ಧಾಳಿಮಾಡುವುದನ್ನು ತಪ್ಪಿಸುವುದು ಅಸಾಧ್ಯವೆಂದು ತೋರಿತು. ದಾರಾನೂ ಕೊನೆಯ ಹೋರಾಟಕ್ಕೆ ಭಾರಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ. ಆದರೆ ಷಾಜಹಾನನಿಗೆ ಮಾತ್ರ ತನ್ನ ಮನೆತನ ಮಣ್ಣುಗೂಡುವುದೆಂದು ಏನೋ ಒಂದು ಶಕುನ ಸಾರಿ ಹೇಳುತ್ತಿತ್ತು. ಅದನ್ನು ಹೇಗಾ ದರೂ ಮಾಡಿ ತಪ್ಪಿಸಬೇಕೆಂದು ಆತ ಬಹಳ ಪ್ರಯತ್ನಿಸಿದ. ಆದರೆ ದಾರಾನನ್ನು ತಡೆಯು ವುದು ಅವನಿಂದ ಸಾಧ್ಯವಾಗಲಿಲ್ಲ. ಏಕೆಂದರೆ, ಆತ ಇನ್ನೂ ರೋಗದಿಂದ ನರಳುತ್ತ ಹಿರಿಯ ಮಗನ ಗುಲಾಮನಾಗಿದ್ದನೇ ಹೊರತು, ಚಕ್ರವರ್ತಿಯಂತೆ ಇರಲಿಲ್ಲ, ಆ ಮಗನಿಗೆ ರಾಜ್ಯದ ಎಲ್ಲಾ ಅಧಿಕಾರಗಳನ್ನು ವಹಿಸಿಕೊಡಬೇಕಾದ್ದು ಅನಿವಾರ್ಯ ವಾಗಿತ್ತು. ಸೈನ್ಯಾಧಿಕಾರಿಗಳೂ ರಾಜ್ಯದ ಹಿರಿಯರೂ ಅವನ ಆಜ್ಞೆಯನ್ನು ಪರಿಪಾಲಿಸ ಬೇಕೆಂದು ಬಹಳ ಹಿಂದೆಯೇ ಹೇಳಲಾಗಿತ್ತು.

ಹೀಗಾಗಿ, ದಾರಾನಿಗೆ ಹಿಂದೂಸ್ಥಾನದಲ್ಲಿ ಹಿಂದೆಂದೂ ಸಂಗ್ರಹಿಸದಂತಹ ಭಾರಿ ಸೈನ್ಯವನ್ನು ಕಟ್ಟಲು ಸಾಧ್ಯವಾಯಿತು. ಏನಿಲ್ಲ ಅಂದರೂ ಅವನ ಸೈನ್ಯದಲ್ಲಿ ಒಂದು ಲಕ್ಷ ಅಶ್ವದಳ, ಇಪ್ಪತ್ತು ಸಾವಿರಕ್ಕಿಂತ ಹೆಚ್ಚು ಕಾಲ್ದಳ ಮತ್ತು ಎಂಬತ್ತು ಫಿರಂಗಿ ಗಳಿದ್ದುವು. ಇಷ್ಟಲ್ಲದೆ, ಸೈನ್ಯವನ್ನು ಹಿಂಬಾಲಿಸಿ ಹೋಗುವ 'ಬಜಾರ್' ವರ್ತಕರು ಇತ್ಯಾದಿ ಅಸಂಖ್ಯಾತ ಜನರಿದ್ದರು. ಸಂಖ್ಯಾಬಲದಿಂದ ನೋಡಿದರೆ ದಾರಾನ ಸೈನ್ಯ ಔರಂಗಜೇಬನ ಎರಡು ಮೂರರಷ್ಟು ಸೈನ್ಯಬಲವನ್ನು ಎದುರಿಸಬಹುದಾಗಿತ್ತು. ಔರಂಗ ಜೇಬನ ಸೈನ್ಯ ಬಹಳವೆಂದರೆ ನಲವತ್ತು ಸಾವಿರಕ್ಕೆ ಹೆಚ್ಚಿರಲಿಲ್ಲ. ಆ ಸೈನಿಕರೂ ಸಹ ಬಿಸಿಲಿನ ಧಗೆಯಲ್ಲಿ ಬೆಂದು ಬಹು ದೂರ ನಡೆದು ಸುಸ್ತಾಗಿದ್ದವರು. ಹೀಗಿದ್ದರೂ ದಾರಾನಿಗೆ ಜಯವಾಗುತ್ತದೆ ಎಂದು ಯಾರೂ ಹೇಳುವಂತಿರಲಿಲ್ಲ. ಕಾರಣ, ಪ್ರಮುಖ ಅಮೀರರೆಲ್ಲ ಅವನ ಹಿತಕ್ಕೆ ವಿರೋಧವಾಗಿದ್ದರು. ಮಗ ಸುಲೇಮಾನ್ ಷಕೋನ ಅಧೀನದಲ್ಲಿದ್ದ ಸೈನ್ಯವನ್ನು ಬಿಟ್ಟರೆ ಉಳಿದ ಸೈನ್ಯವನ್ನು ನಂಬುವಂತಿರಲಿಲ್ಲ. ಇದನ್ನು ಕಂಡೇ ದಾರಾನ ಸ್ನೇಹಿತರು ಯುದ್ಧ ಬೇಡವೆಂದು ಸಲಹೆಮಾಡಿದರು. ಹಾಸಿಗೆ ಹಿಡಿದು ಮಲಗಿದ್ದ ಷಾಜಹಾನ ಯುದ್ಧ ನಡೆಯಲೇಬೇಕಾದ ಪಕ್ಷದಲ್ಲಿ ತಾನೇ ಸೇನೆಯ

ನಾಯಕತ್ವವನ್ನು ವಹಿಸಿಕೊಳ್ಳುವುದಾಗಿ ಹೇಳಿದ. ಹಾಗೆ ಮಾಡಿದರೆ ಮಕ್ಕಳು ತನ್ನ ಮೇಲೆ ಯುದ್ಧಮಾಡಲಾರರು, ಹಾಗಾದರೂ ಯುದ್ಧ ತಪ್ಪೀತು-ಎಂಬುದು ಷಾಜಹಾನನ ಆಸೆ. ಏಕೆಂದರೆ, ಆತ ಎಲ್ಲ ಅಮೀರರಿಗೂ ಬೇಕಾದವನಾಗಿದ್ದ.

ಆದರೆ ದಾರಾ ಬುದ್ಧಿವಾದದ ಮಾತುಗಳಿಗೆ ಕಿವಿಗೊಡುವ ಸ್ವಭಾವದವನಾಗಿರಲಿಲ್ಲ. ಅವನ ಮೊಂಡುತನವನ್ನು ಕಂಡ ಅವನ ಹಿತೈಷಿಗಳು, ಸೂಜಾನನ್ನು ಓಡಿಸಿ ಹಿಂದಿರುಗುತ್ತಿರುವ ಸುಲೇಮಾನ್ ಷೆಕೋ ಆಗ್ರಾಕ್ಕೆ ಬಂದು ಅವನನ್ನು ಕೂಡಿಕೊಳ್ಳುವವರೆಗಾದರೂ ಕಾಯುವುದೊಳ್ಳೆಯದೆಂದು ಸಲಹೆಮಾಡಿದರು. ಆದರೆ ಯುದ್ಧದಲ್ಲಿ ಗೆದ್ದರೆ ಬರುವ ಕೀರ್ತಿ ಹಾಗೂ ಸಿಂಹಾಸನ-ಇವೆರಡೂ ತನಗೇ ಬರಬೇಕೆಂದು ಆಸೆಪಟ್ಟವನಾದ ದಾರಾ ಇಡೀ ಸೈನ್ಯವು ಸಮರಕ್ಕೆ ಸಾಗಬೇಕೆಂದು ಆಜ್ಞೆಮಾಡಿಯೇಬಿಟ್ಟ.

ಯುದ್ಧಕ್ಕೆ ಸೈನ್ಯವನ್ನು ಕಳುಹಿಸಿಕೊಟ್ಟ ದಾರಾ ಹೊರಡುವುದಕ್ಕೆ ಮುಂಚೆ ತಂದೆಯನ್ನು ನೋಡಲು ಹೋದ. ಮಗನನ್ನು ಕಂಡ ತಂದೆ ಆತನನ್ನು ಅಪ್ಪಿ ಆಲಿಂಗಿಸಿ ಬಳಬಳ ಕಣ್ಣೀರು ಸುರಿಸಿದ. ಕೊನೆಗೆ ಕಣ್ಣೀರು ಒರೆಸಿಕೊಂಡು ವೃದ್ಧ ಷಾಜಹಾನ ಹೀಗೆಂದನು : 'ಮಗನೆ, ನಿನಗಿಷ್ಟ ಬಂದ ರೀತಿಯಲ್ಲಿ ನಡೆಯಬೇಕೆಂದು ಮನಸ್ಸು ಮಾಡಿಬಿಟ್ಟದ್ದೀಯೆ. ನಾನೀಗ ಅದಕ್ಕೆ ಅಡ್ಡಿಬರುತ್ತಿಲ್ಲ. ದೇವರು ನಿನಗೆ ಒಳ್ಳೆಯದು ಮಾಡಲಿ. ಆದರೆ ಒಂದು ಮಾತು ಜ್ಞಾಪಕದಲ್ಲಿರಲಿ : ಯುದ್ಧದಲ್ಲಿ ಏನಾದರೂ ನೀನು ಸೋತರೆ ನನಗೆ ಮುಖ ತೋರಿಸುವ ಮುನ್ನ ಬಹಳ ಎಚ್ಚರಿಕೆಯಿಂದಿರಬೇಕು, ತಿಳಿಯಿತೆ !'

ಈ ಮಾತುಗಳನ್ನು ಅಷ್ಟಾಗಿ ಮನಸ್ಸಿಗೆ ಹಾಕಿಕೊಳ್ಳದ ದಾರಾ ಆತುರಾತುರವಾಗಿ ತಂದೆಯಿಂದ ಬೀಳ್ಕೊಂಡು, ಆಗ್ರಾದಿಂದ ಹೊರಟು, ಹೊರಗೆ ಕಾಯುತ್ತಿದ್ದ ಸೈನ್ಯವನ್ನು ನಡೆಸಿಕೊಂಡು, ಇಪ್ಪತ್ತು ಹರಿದಾರಿ ದೂರದಲ್ಲಿದ್ದ ಚಂಬಲ್ ನದಿಯ ಬಳಿ ಬೀಡುಬಿಟ್ಟು ಶತ್ರುವಿಗಾಗಿ ಕಾಯುತ್ತ ಕುಳಿತ. ಬಹು ತೀಕ್ಷ್ಣದೃಷ್ಟಿಯುಳ್ಳವನೂ ಕಪಟಿಯೂ ಆದ ಆ ಫಕೀರ (ಔರಂಗಜೇಬ) ಎಲ್ಲೆಡೆಯಲ್ಲಿಯೂ ಇಟ್ಟಿದ್ದ ತನ್ನ ಗೂಢಚಾರರ ಮೂಲಕ ದಾರಾನ ಚಲನವಲನಗಳನ್ನೆಲ್ಲಾ ಅರಿತುಕೊಂಡಿದ್ದ. ದಾರಾನಿಗೆ ಎದುರಾಗಿ ನದಿಯ ಈ ಕಡೆ ತನ್ನ ಸೈನ್ಯವನ್ನು ಇಡದೆ, ಸುಲಭವಾಗಿ ನದಿಯನ್ನು ದಾಟಬಹುದಾದ ಬೇರೊಂದು ಕಡೆ ಇಟ್ಟನು. ಆ ಸ್ಥಳ ಚಂಪತ್ ರಾಜನಿಗೆ ಸೇರಿತ್ತು. ಅವನಿಗೆ ಏನೇನೊ ಕೊಟ್ಟು ಸನ್ಮಾನ ಮಾಡಿ ತನ್ನ ಕಡೆ ಒಲಿಸಿಕೊಂಡು, ಆತನ ರಾಜ್ಯದಲ್ಲಿ ಹಾದುಹೋಗಲು ಅನುಮತಿ ಪಡೆದುಕೊಂಡಿದ್ದನು. ಬೆಟ್ಟ ಗುಡ್ಡ ಕಾಡುಗಳಿದ್ದ ಆ ಪ್ರದೇಶದಲ್ಲಿ ಸೈನ್ಯಕ್ಕೆ ದಾರಿ ತೋರಿಸುವುದಾಗಿಯೂ ಆ ಚಂಪತ್ ರಾಜ ಒಪ್ಪಿಕೊಂಡಿದ್ದ. ಆ ಮಾರ್ಗದಲ್ಲಿ ಔರಂಗಜೇಬನ ಸೈನ್ಯ ಸಾಗಿಬರುವುದು ಅಸಾಧ್ಯ ಎಂದು ದಾರಾನ ಭಾವನೆಯಾಗಿತ್ತು. ಶತ್ರು ಸೈನ್ಯ ಎದುರಿಗೇ ಇದೆ ಎನ್ನುವ ಭಾವನೆ ಬರುವಂತೆ ಔರಂಗಜೇಬ ತನ್ನ ಡೇರೆಗಳನ್ನು ಹಾಕಿಸಿ ನಿಶಾನಿಗಳನ್ನು ಏರಿಸಿದ. ಅವುಗಳನ್ನು

ನೋಡುತ್ತ ದಾರಾ ನದಿಯ ಆಚೆ ಕುಳಿತುಕೊಂಡಿರಲು, ಔರಂಗಜೇಬ ತನ್ನ ಸೈನ್ಯವನ್ನು ಬೇರೊಂದು ಕಡೆಯಿಂದ ನದಿ ದಾಟಿಸುವ ಕೆಲಸದಲ್ಲಿ ತೊಡಗಿದ್ದ. ಈ ಮೋಸ ಅರಿವಾದ ಕೂಡಲೇ ದಾರಾ ಅಲ್ಲಿಗೆ ಧಾವಿಸಿದನು. ಆದರೆ ಔರಂಗಜೇಬ ತನ್ನ ಸೈನ್ಯವನ್ನು ತ್ವರಿತ ವಾಗಿ ಆಗ್ರಾದ ಕಡೆಗೆ ಕೊಂಡೊಯ್ದು, ಜಮುನಾ ನದಿಯ ದಡವನ್ನು ಸೇರಿಯೇಬಿಟ್ಟ. ಆಯಾಸಗೊಂಡಿದ್ದ ಸೈನ್ಯವು ವಿಶ್ರಾಂತಿ ಪಡೆಯಲು ಅವಕಾಶ ಕೊಟ್ಟು, ತಾನು ಶತ್ರುವಿನ ಚಲನವಲನಗಳನ್ನು ಕಾಯುತ್ತಾ ಕುಳಿತ.

ಆತ ಬೀಡುಬಿಟ್ಟ ಸ್ಥಳ ಆಗ್ರಾದಿಂದ ಐದು ಹರಿದಾರಿಗಳಷ್ಟು ದೂರದಲ್ಲಿತ್ತು. ಆ ಸ್ಥಳಕ್ಕೆ ಮೊದಲು 'ಸಮೂಘರ್' ಎಂಬ ಹೆಸರಿತ್ತು. ಆ ಮೇಲೆ ಅದು 'ಫತೇ ಬಾದ್', ಎಂದರೆ 'ವಿಜಯಸ್ಥಳ' ಎಂದಾಯಿತು. ದಾರಾ ತನ್ನ ಸೈನ್ಯ ಸಮೇತ ಓಡೋಡಿ ಬಂದು ಅದೇ ನದಿಯ ಬಳಿ ಆಗ್ರಾಕ್ಕೂ ಔರಂಗಜೇಬನ ಸೈನ್ಯಕ್ಕೂ ಮಧ್ಯೆ ಬೀಡುಬಿಟ್ಟನು. ಜಮುನಾ ನದಿಯ ಆ ಕಡೆ ಈ ಕಡೆ ಎರಡು ಸೈನ್ಯಗಳು ಒಂದ ನ್ನೊಂದು ನೋಡುತ್ತಾ ಮೂರು ನಾಲ್ಕು ದಿವಸಗಳ ವರೆಗೆ ಕದನಕ್ಕೆ ಕೈಹಾಕದೆ ಕಾದುವು. ಈ ಮಧ್ಯೆ ಷಾಜಹಾನನು ಮಗ ದಾರಾನಿಗೆ ಪತ್ರಗಳ ಮೇಲೆ ಪತ್ರಗಳನ್ನು ಕಳುಹಿಸಿದನು. 'ಸುಲೇಮಾನ್ ಷೇಕೋ ಬರುತ್ತಿದ್ದಾನೆ. ಅವನು ಬರುವ ತನಕ ಕಾಯಿ ; ಆತುರಪಡಬೇಡ. ಮೆಲ್ಲ ಮೆಲ್ಲನೆ ಆಗ್ರಾ ಕಡೆಗೆ ಸರಿಯುತ್ತಾ ಬಂದು ತಕ್ಕ ಸ್ಥಳವನ್ನು ಆರಿಸಿಕೊಂಡು, ಅದನ್ನು ಬಲವಾಗಿ ರಕ್ಷಿಸಿಕೊಳ್ಳುವ ವ್ಯವಸ್ಥೆ ಮಾಡು' ಎಂದು ಪತ್ರಗಳಲ್ಲಿ ತಿಳಿಸುತ್ತಿದ್ದನು. ಈ ಪತ್ರಗಳಿಗೆಲ್ಲಾ ದಾರಾ ಕೊಟ್ಟ ಒಂದೇ ಒಂದು ಉತ್ತರ ವೆಂದರೆ, 'ಆ ಪಾಪಿ ಔರಂಗಜೇಬನನ್ನೂ ಅವನ ತಮ್ಮ ಮೊರಾದ್ ಭಕ್ಷನನ್ನೂ ಕೈಕಾಲು ಕಟ್ಟಿ ಅಪ್ಪನಿಗೆ ಒಪ್ಪಿಸುವೆ. ಇದಕ್ಕೆಲ್ಲಾ ಮೂರೇ ದಿವಸಗಳು ಸಾಕು !' ಎಂದು. ಹೀಗೆ ಒಪ್ಪಿಸಿದ ಮಕ್ಕಳನ್ನು ತಂದೆ ಯಾವ ಶಿಕ್ಷೆಗಾದರೂ ಗುರಿಪಡಿಸಬಹುದು ಎಂದು ಮೇಲೊಗ್ಗರಣೆ ಹಾಕಿದ.

ಈ ರೀತಿಯ ಉತ್ತರ ಕಳುಹಿಸಿದ ದಾರಾ ಯುದ್ಧಕ್ಕೆ ಸಿದ್ಧತೆಗಳನ್ನು ಮಾಡಿ ಕೊಂಡ. ತನ್ನ ಇಡೀ ಸೈನ್ಯದ ಮುಂದೆ ಫಿರಂಗಿಗಳನ್ನು ಜೋಡಿಸಿದ. ಸಾಲಾಗಿ ಇಟ್ಟ ಫಿರಂಗಿಗಳಿಗೆ ಕಬ್ಬಿಣದ ಸರಪಳಿಗಳನ್ನು ಕಟ್ಟಿ ಶತ್ರುವಿನ ಅಶ್ವಸೈನ್ಯ ಮುನ್ನುಗ್ಗದಂತೆ ಮಾಡಿದ. ಫಿರಂಗಿಗಳ ಹಿಂದೆ ಒಂಟೆಗಳ ಸಾಲನ್ನು ನಿಲ್ಲಿಸಿ, ಆ ಒಂಟೆಗಳ ಪಾರ್ಶ್ವಗಳಲ್ಲಿ ಸಣ್ಣ ಫಿರಂಗಿಗಳನ್ನು ಇರಿಸಿದ. ಒಂಟೆ ಸವಾರರು ಕೆಳಗಿಳಿಯದೆ ಈ ಸಣ್ಣ ಫಿರಂಗಿಗಳನ್ನು ಹಾರಿಸಬಹುದಾಗಿತ್ತು. ಒಂಟೆಗಳ ಹಿಂದೆ ಬಂದೂಕುಸೈನ್ಯದ ಬಹು ಭಾಗವನ್ನು ನಿಲ್ಲಿಸಿದನು. ಇನ್ನುಳಿದ ಸೈನ್ಯವೆಂದರೆ ರಾವುತರು. ಇವರು ಕಡುಗತ್ತಿ, ರಜಪೂತರು ಉಪಯೋಗಿಸುವಂಥ ಭಲ್ಲೆ, ಬಿಲ್ಲು ಬಾಣ–ಇವುಗಳಿಂದ ಸಜ್ಜಿತರಾಗಿದ್ದರು. ಬಿಲ್ಲು ಬಾಣ ಗಳನ್ನು ಉಪಯೋಗಿಸುವವರು ಸಾಮಾನ್ಯವಾಗಿ ಮೊಗಲರು. ಮೊಗಲರು ಎಂದರೆ ಬಿಳಿಯ ಮಹಮದೀಯರು, ಪರ್ಷಿಯನರು, ತುರುಕರು, ಅರಬರು ಮತ್ತು ಉಸ್ಬೇಕರು.

ದಾರಾ ಸೈನ್ಯವನ್ನು ಮೂರು ತುಕಡಿಗಳಾಗಿ ವಿಂಗಡಿಸಿದನು. ಮೂವತ್ತು ಸಾವಿರ ಮೊಗಲರನ್ನು ಒಳಗೊಂಡ ಬಲ ತುಕಡಿಯ ನಾಯಕತ್ವವನ್ನು ಖಲೀಲುಲ್ಲಾ ಖಾನನಿಗೂ, ಎಡ ತುಕಡಿಯ ನಾಯಕತ್ವವನ್ನು ರುಸ್ತುಂಖಾನ್ ಡಂಕ್ನಿಗೂ ವಹಿಸಿದನು. ರುಸ್ತುಂಖಾನ್ ಹೆಸರಾಂತ ಯೋಧ. ಇವರಿಬ್ಬರ ಬೆಂಬಲಕ್ಕೆ ಛತ್ತರ್‌ಸಾಲ್ ಹಾಗೂ ರಾಜ ರಾಮಸಿಂಗ್ ರೌಟೀಲನನ್ನು ನೇಮಿಸಿದನು.

ಅತ್ತ ಔರಂಗಜೇಬ ಮತ್ತು ಮೊರಾದ್ ಭಕ್ಷರು ತಮ್ಮ ಸೈನ್ಯವನ್ನು ಹೆಚ್ಚು ಕಡಿಮೆ ಇದೇ ರೀತಿಯಲ್ಲಿಯೇ ನಿಲ್ಲಿಸಿದರು. ಆದರೆ ಅವರು ಶತ್ರುವಿನ ಕಡೆಯ ಕುದುರೆಗಳನ್ನು ಬೆದರಿಸಿ ಓಡಿಹೋಗುವಂತೆ ಮಾಡುವುದಕ್ಕಾಗಿ ಬೆಂಕಿಯ ಬಾಣ ಬಿರುಸುಗಳನ್ನು ಎಸೆಯುವ ವಿಶೇಷ ವ್ಯವಸ್ಥೆ ಮಾಡಿಕೊಂಡರು.

ಈ ದೇಶದ ರಾವುತಸೈನ್ಯ ಬಹು ವಿಚಕ್ಷಣೆಯಿಂದ ಯುದ್ಧಮಾಡಬಲ್ಲದು. ಬಂದೂಕದವನು ಎರಡು ಸಲ ಬಂದೂಕ ಹಾರಿಸುವದರೊಳಗೆ ಒಬ್ಬ ರಾವುತ ಆರು ಸಲ ಬಾಣ ಬಿಡಬಲ್ಲ. ಅಲ್ಲದೆ, ಕಟ್ಟುನಿಟ್ಟಾದ ಶಿಸ್ತನ್ನೂ ಪಾಲಿಸಬಲ್ಲ. ಮುನ್ನುಗ್ಗುವಾಗ ರಾವುತರು ಒಟ್ಟಾಗಿ ನುಗ್ಗಬಲ್ಲರು. ಇಷ್ಟಿದ್ದರೂ, ಇಲ್ಲಿಯ ಸೈನ್ಯದ ದಕ್ಷತೆ ನಮ್ಮ ಸೈನ್ಯದ ದಕ್ಷತೆಯ ಮಟ್ಟಕ್ಕೆ ಬರಲಾರದು.

ಮೇಲೆ ಹೇಳಿದ ರೀತಿಯಲ್ಲಿ ಸಿದ್ಧತೆಗಳು ಮುಗಿದ ಮೇಲೆ ಎರಡೂ ಕಡೆಯ ಫಿರಂಗಿಗಳು ಘರ್ಜಿಸಿದವು.[1] ಬಾಣಗಳು ಆಕಾಶವನ್ನೆಲ್ಲಾ ತುಂಬಿದವು. ಆದರೆ ಆಗ ಇದ್ದಕ್ಕಿದ್ದಂತೆ ಭಾರಿ ಮಳೆ ಬಂದು ಎರಡು ಕಡೆಯೂ ಆಗಬೇಕಾಗಿದ್ದ ರಕ್ತಪಾತವನ್ನು ತಾತ್ಕಾಲಿಕವಾಗಿ ನಿಲ್ಲಿಸಿತು. ಮಳೆ ನಿಂತಕೂಡಲೇ ಮತ್ತೆ ಫಿರಂಗಿಗಳು ಬೆಂಕಿಯನ್ನು ಕಾರಿದವು. ಸಿಲೋನಿಂದ ತರಿಸಿದ ಆನೆಯೊಂದರ ಮೇಲೆ ಕುಳಿತು ದಾರಾ ಸೈನ್ಯಕ್ಕೆ ಮುನ್ನುಗ್ಗಲು ಆಜ್ಞೆಯನ್ನು ನೀಡುತ್ತಿದ್ದ. ದೊಡ್ಡ ರಾವುತಸೈನ್ಯದ ಮುಂಚೂಣಿಯ ಕಡೆಗೆ ಹೋಗಿ, 'ಧೈರ್ಯದಿಂದ ಶತ್ರುವಿನ ಫಿರಂಗಿಸಾಲಿನ ಮೇಲೆ ಧಾಳಿ ಮಾಡಿ' ಎಂದು ಹುರಿದುಂಬಿಸುವ ಮಾತುಗಳನ್ನಾಡುತ್ತಿದ್ದ. ಆ ಕಡೆಯವರು ಈ ಧಾಳಿಯನ್ನು ದಿಟ್ಟತನದಿಂದ ಎದುರಿಸಿದರು. ಒಂದು ಗಳಿಗೆ ದಾರಾನ ಸುತ್ತ ಶವಗಳ ರಾಶಿಯೇ ಬಿತ್ತು. ರಾವುತಸೈನ್ಯವಲ್ಲದೆ ಅದರ ಹಿಂದಿದ್ದ ಸೈನ್ಯವೂ ಅಸ್ತವ್ಯಸ್ತಗೊಂಡಿತು. ಆದರೂ ದಾರಾ ಧೃತಿಗೆಡದೆ ಮುನ್ನುಗ್ಗುವ ನಿರ್ಧಾರವನ್ನು ಬದಲಿಸಲಿಲ್ಲ. ಆನೆಯ ಮೇಲೆ ಕುಳಿತು ಆತ ದಿಟ್ಟತನದಿಂದ ಸುತ್ತ ಮುತ್ತ ನೋಡಿದ; ಎಲ್ಲವೂ ಹೇಗೆ ನಡೆಯುತ್ತಿದೆ ಎಂಬುದನ್ನು ಈಕ್ಷಿಸಿದ. ಅವನ ದಿಟ್ಟತನದ ಮುಖವನ್ನು ಕಂಡ ಸೈನ್ಯ ಮತ್ತೆ ಧೈರ್ಯ ತಂದುಕೊಂಡಿತು. ಓಡಿಹೋಗುತ್ತಿದ್ದವರು ಪುನಃ ಸೈನ್ಯವನ್ನು ಕೂಡಿಕೊಂಡರು. ಹೋರಾಟ ಮತ್ತೊಮ್ಮೆ ಆರಂಭವಾಯಿತು. ಆದರೆ ಶತ್ರುವಿನೊಡನೆ ಕೈಕೈ ಮಿಲಾ

---

[1] ಈ ಯುದ್ಧ ನಡೆದದ್ದು ಕ್ರಿ.ಶ. ೧೬೫೮ನೆ ಮೇ ತಿಂಗಳು ೨೯ನೇ ತಾರೀಖು

ಯಿಸುವುದರೊಳಗೆ ಆ ಕಡೆಯ ಫಿರಂಗಿಗಳು ಬೆಂಕಿ ಕಾರಿದುವು. ಸಾವು ನೋವುಗಳು ದಾರಾನ ಸೈನ್ಯವನ್ನು ಮತ್ತೆ ಅವ್ಯವಸ್ಥೆಗೊಳಿಸಿದುವು. ಅನೇಕರು ಪಲಾಯನಮಾಡ ಲಾರಂಭಿಸಿದರು. ಆದರೆ ಬಹುತೇಕ ಮಂದಿ ಧೃತಿಗೆಡದ ದಾರಾನನ್ನು ಹಿಂಬಾಲಿಸಿ ಶತ್ರು ವಿನ ಫಿರಂಗಿ ಸಾಲನ್ನು ಸಮೀಪಿಸಿದರು. ಫಿರಂಗಿಗಳನ್ನು ಕಸಿದುಕೊಂಡು ಅವಕ್ಕೆ ಕಟ್ಟಿದ್ದ ಸರಪಣಿಗಳನ್ನು ಕಿತ್ತೊಗೆದರು. ಶತ್ರು ಸೈನ್ಯವನ್ನು ಭೇದಿಸಿದರು. ಒಂಟೆಗಳನ್ನೂ ಕಾಲ್ದಳ ವನ್ನೂ ದಿಕ್ಕಾಪಾಲುಮಾಡಿಬಿಟ್ಟರು. ಈಗ ಎರಡು ಕಡೆಯ ಅಶ್ವದಳಗಳು ಒಂದಕ್ಕೆ ಒಂದು ಮುಖ ಕೊಟ್ಟು ಅತ್ಯಂತ ಬಿರುಸಿನ ಹೋರಾಟ ನಡೆಸಿದುವು. ಬಾಣಗಳಿಂದ ಆಕಾಶವು ಕತ್ತಲೆಗವಿಯಿತು. ದಾರಾ ತನ್ನ ಬತ್ತಳಿಕೆಯನ್ನು ಬರಿದು ಮಾಡಿದ. ಆದರೆ ಬಾಣಗಳನ್ನು ಬಿಡುವುದರಿಂದ ಆಗುವ ಪರಿಣಾಮ ಅಷ್ಟಕ್ಕಷ್ಟೆ. ಹತ್ತರಲ್ಲಿ ಒಂಬತ್ತು ಬಾಣ ಗಳು ಶತ್ರುವಿನ ತಲೆಯ ಮೇಲೆ ಹಾರಿಹೋಗುತ್ತಿದ್ದುವು ; ಅಥವಾ, ಗುರಿಮುಟ್ಟುವ ಮುನ್ನವೇ ಪುಸ್ಸೆಂದು ನೆಲಕ್ಕೆ ಬೀಳುತ್ತಿದ್ದುವು. ಅಂತೂ ಬಾಣಗಳನ್ನು ಬಿಟ್ಟರು, ಕತ್ತಿಗಳಿಂದ ಇರಿದರು, ಕೈ ಕೈ ಮಿಲಾಯಿಸಿದರು. ಕತ್ತಿಗಳು ಹೆಚ್ಚು ಹೆಚ್ಚು ಜನರನ್ನು ಬಲಿತೆಗೆದುಕೊಂಡಂತೆ ಹೋರಾಟದ ಆವೇಶವೂ ತೀವ್ರವಾಯಿತು. ಈ ಭಯಾನಕ ಯುದ್ಧದಲ್ಲಿ ದಾರಾ ತನ್ನ ಅಪ್ರತಿಮ ಧೈರ್ಯ ಶೌರ್ಯಗಳನ್ನು ಪ್ರದರ್ಶಿಸಿದ. ಎತ್ತಿದ ದನಿಯಲ್ಲಿ ಕೂಗಿ ತನ್ನ ಸೈನ್ಯವನ್ನು ಹುರಿದುಂಬಿಸಿದ. ಸ್ವತಃ ತಾನೇ ತನ್ನ ಪ್ರತಾಪ ವನ್ನು ತೋರಿಸಿ ಶತ್ರುವು ಹಿಮ್ಮೆಟ್ಟುವಂತೆ ಮಾಡಿದ. ಕೊನೆಗೆ ರಣರಂಗದಿಂದ ಶತ್ರುವು ಓಡಿಹೋಗುವಂತೆ ಮಾಡಿದ.

ದಾರಾನ ಸನಿಯದಲ್ಲಿಯೇ ಇದ್ದ ಔರಂಗಜೇಬ ಆನೆಯ ಮೇಲೆ ಕುಳಿತು ತನ್ನ ಕಡೆ ಆಗುತ್ತಿದ್ದ ಅನಾಹುತವನ್ನು ಗಮನಿಸಿದ. ಅದನ್ನು ತಪ್ಪಿಸಲು ಆತ ಪ್ರಯತ್ನಪಟ್ಟ. ಆದರೆ ಅದು ವಿಫಲವಾಯಿತು. ಅವನ ಸೈನ್ಯವೆಲ್ಲಾ ಚೆಲ್ಲಾಪಿಲ್ಲಿಯಾಗಿತ್ತು. ಓಡಿಹೋದವರನ್ನು ಬಿಟ್ಟರೆ ಉಳಿದವರು ಕೇವಲ ೫೦೦೦ ಅಥವಾ ೧೦೦೦೦ ಜನ. ಆದರೂ ಔರಂಗಜೇಬ ಧೃತಿಗೆಡಲಿಲ್ಲ. ಉಳಿದವರನ್ನು ಮುಗಿಸಿಬಿಡಲು ದಾರಾ ಮುನ್ನುಗ್ಗು ತ್ತಿದ್ದರೂ ಔರಂಗಜೇಬ ಮುಖದಲ್ಲಿ ಒಂದಿಷ್ಟು ಕಳಂಕವನ್ನೂ ತೋರಿಸದೆ ತನ್ನ ಪ್ರಮುಖ ಸರದಾರರನ್ನು ಹೆಸರು ಹಿಡಿದು ಗಟ್ಟಿಯಾಗಿ ಕರೆಯಲಾರಂಭಿಸಿದ. ಅವನ ಬಾಯಿಂದ ಯಾವ ಮಾತುಗಳು ಬಂದುವೋ ಅದನ್ನೇ ನಾನು ಹೇಳುತ್ತೇನೆ ಕೇಳಿ : 'ದಿಲ್ ಇ ಯಾರಾನ ! ಖುದಾ ಹೈ ! ನಾವು ಓಡಿಹೋದರೆ ಬಂದದ್ದೇನು ? ನಮ್ಮ ಡೆಕನ್ ಪ್ರಾಂತ ಎಲ್ಲಿದೆಯೆಂದು ನಿಮಗೆ ಗೊತ್ತಿಲ್ಲವೆ ! ಖುದಾ ಹೈ, ಖುದಾ ಹೈ !'

ತನ್ನ ಧೈರ್ಯ ಸ್ಥೈರ್ಯಗಳ ಬಗ್ಗೆ ಯಾರಿಗೂ ಅನುಮಾನ ಬಾರದಿರಲೆಂದೂ ತಾನು ಓಡಿಹೋಗುವ ಹೇಡಿಯಲ್ಲವೆಂದೂ ತೋರಿಸಲು ಆತ ತನ್ನ ಆನೆಯ ಕಾಲುಗಳನ್ನು ಸರಪಳಿಯಿಂದ ಬಿಗಿಯುವಂತೆ ಆಜ್ಞಾಪಿಸಿದ. ಈ ಮಾತುಗಳನ್ನು ಕೇಳಿದ ಅವನ

ಕಡೆಯವರು ಹೋರಾಡುವ ತಮ್ಮ ಧೃಡನಿರ್ಧಾರವನ್ನು ಘೋಷಿಸಿದರು. ಆನೆಯ ಕಾಲು ಕಟ್ಟುವುದು ಅನಾವಶ್ಯಕವಾಯಿತು.

ಈ ಮಧ್ಯೆ ದಾರಾ ಔರಂಗಜೇಬನ ಮೇಲೆ ಧಾವಿಸಬೇಕೆಂದು ಆಲೋಚಿಸಿದ. ಆದರೆ ತನಗೂ ಅವನಿಗೂ ಮಧ್ಯೆ ಇದ್ದ ಹಳ್ಳ ತಿಟ್ಟುಗಳ ಕಾರಣವಾಗಿಯೂ, ಚದುರಿದರೂ ಅಲ್ಲಲ್ಲಿ ಇದ್ದ ಅಶ್ವದಳದ ಕಾರಣವಾಗಿಯೂ ಮುಂದೆ ಹೋಗಲು ಅವನಿಗೆ ಸಾಧ್ಯವಾಗಲಿಲ್ಲ. ತನ್ನ ಶತ್ರುವಾದ ತಮ್ಮನನ್ನು ಸೆರೆಹಿಡಿಯದೆ ಅಥವಾ ಕೊಲ್ಲದೆ ಜಯ ಸಂಪೂರ್ಣವಾಗದೆಂದು ಆತನಿಗೆ ಅನಿಸಿರಬೇಕು. ಅದು ಅಷ್ಟು ಕಷ್ಟವಾದುದಲ್ಲವೆಂಬುದು ಔರಂಗಜೇಬನ ಅಸಹಾಯಕ ಪರಿಸ್ಥಿತಿಯಿಂದ ಸ್ಪಷ್ಟವಾಗಿತ್ತು. ಆದರೆ ಮುಂದೆ ನಾನು ಹೇಳಲಿರುವ ಪ್ರಸಂಗ ಅವನ ಮನಸ್ಸನ್ನು ಬೇರೆ ಕಡೆ ಸೆಳೆಯಿತು. ಇದರಿಂದಾಗಿ ಔರಂಗಜೇಬನು ಸನ್ನಿಹಿತವಾದ ಅಪಾಯಗಳಿಂದ ಪಾರಾಗಿಬಿಟ್ಟನು.

ತನ್ನ ಸೈನ್ಯದ ಎಡ ತುಕಡಿಗಳಲ್ಲಿ ಅವ್ಯವಸ್ಥೆ ಉಂಟಾಗಿರುವುದನ್ನು ದಾರಾ ನೋಡಿದ. ರುಸ್ತುಂಖಾನನೂ ಛತ್ರಸಾಲನೂ ಮಡಿದರೆಂಬ ಸುದ್ದಿಯನ್ನು ಯಾರೋ ಅವನ ಕಿವಿಯಲ್ಲಿ ಉಸುರಿದರು. ರಾಮ್‌ಸಿಂಗ್ ರೌಟೇಲ ಶತ್ರುವಿನ ಮಧ್ಯೆ ಹಿಂದುಮುಂದು ನೋಡದೆ ನುಗ್ಗಿದುದರಿಂದ ಅವನು ಸುತ್ತುವರಿಯಲ್ಪಟ್ಟು ಅಪಾಯಕ್ಕೆ ಈಡಾಗಿರುವುದನ್ನು ದಾರಾನ ಕಿವಿಗೆ ಹಾಕಿದರು. ಈ ಕಾರಣಗಳಿಂದ ದಾರಾ ಔರಂಗಜೇಬನ ಮೇಲೆ ಧಾವಿಸುವುದನ್ನು ಬಿಟ್ಟು ತನ್ನ ಎಡ ತುಕಡಿಯ ಸಹಾಯಕ್ಕೆ ನುಗ್ಗಿದನು. ಅವನು ಅಲ್ಲಿಗೆ ಹೋದ ಕಾರಣ ಆ ತುಕಡಿ ಜಯಗಳಿಸಿತು. ಶತ್ರು ಸೈನ್ಯ ಪಲಾಯನವಾಯಿತು. ಅತ್ತ ರಾಮಸಿಂಗ್ ರೌಟೇಲ ತನ್ನ ಅದ್ಭುತ ಪರಾಕ್ರಮವನ್ನು ಪ್ರದರ್ಶಿಸಿ ಮೊರಾದ್ ಭಕ್ಷನನ್ನು ಗಾಯಗೊಳಿಸಿದನು. ಅವನ ಆನೆಯ ಅತಿ ಸಮೀಪಕ್ಕೆ ಧಾವಿಸಿ ಅದರ ಸಬರಗಳನ್ನು ಕಡಿಯಲು ಯತ್ನಿಸಿದನು. ಆದರೆ ಮೊರಾದನ ಚಾಕಚಕ್ಯತೆಯಿಂದ ಅದು ಸಾಧ್ಯವಾಗಲಿಲ್ಲ. ರಜಪೂತರೆಲ್ಲ ಅವನ ಸುತ್ತ ಮುತ್ತಿಕೊಂಡಿದ್ದರೂ, ಅವನೇ ಗಾಯಗೊಂಡಿದ್ದರೂ ಅತ ಜಗ್ಗಲಿಲ್ಲ. ಎಡಪಕ್ಕದಲ್ಲಿ ಆನೆಯ ಮೇಲೆ ಕುಳಿತಿದ್ದ ತನ್ನ ಎಳೆಂಟು ವರ್ಷದ ಮಗನ ಮೇಲೆ ಗುರಾಣಿಯನ್ನು ಮುಚ್ಚಿ, ರಾಮಸಿಂಗ ರೌಟೇಲನ ಮೇಲೆ ಗುರಿಯಿಟ್ಟು ಬಾಣ ಪ್ರಯೋಗಮಾಡಿದನು. ರೌಟೇಲ ಬಾಣಕ್ಕೆ ಆಹುತಿಯಾದ. ಇದನ್ನು ತಿಳಿದ ದಾರಾ ಮೊರಾದ್ ಭಕ್ಷನ ಮೇಲೆ ಧಾವಿಸಿದನು. ಔರಂಗಜೇಬನನ್ನು ತೀರಿಸದೆ ಬಿಟ್ಟದ್ದು ಆತನು ಮಾಡಿದ್ದ ತಪ್ಪಾಗಿತ್ತು. ಆ ತಪ್ಪನ್ನು ಮತ್ತೆ ಮಾಡಬಾರದೆಂದು ಮನಸ್ಸಿನಲ್ಲಿ ಅಂದುಕೊಂಡು, ಆತ ಮೊರಾದನ ಮೇಲೆ ಎರಗಿದನು. ಆದರೆ ದ್ರೋಹದ ಪ್ರಸಂಗವೊಂದು ನಡೆದು ಆದನ್ನು ಅಸಾಧ್ಯವನ್ನಾಗಿ ಮಾಡಿತು ; ದ್ರೋಹ ದಾರಾನ ಅವನತಿಗೆ ದಾರಿಮಾಡಿಕೊಟ್ಟಿತು.

ದಾರಾ ಎಡ ತುಕಡಿಯನ್ನು ಕೂಡಿ ಯುದ್ಧ ನಡೆಸುತ್ತಿರಬೇಕಾದರೆ, ಔರಂಗಜೇಬನ ಸೈನ್ಯವನ್ನು ಧ್ವಂಸಮಾಡಬಹುದಾದ ಶಕ್ತಿಯುಳ್ಳ ಮೂವತ್ತುಸಾವಿರ ಮೊಗಲ್

ಸೈನ್ಯವನ್ನು ಒಳಗೊಂಡ ಬಲ ತುಕಡಿಯ ನಾಯಕ ಖಲೀಲುಲ್ಲಾ ಖಾನ್ ತಟಸ್ಥನಾಗಿಬಿಟ್ಟ! ತನ್ನ ತುಕಡಿ 'ಮೀಸಲು ಸೈನ್ಯ' ಎಂಬ ನೆಪದ ಮೇಲೆ ಹೆಜ್ಜೆ ಮುಂದಿಡದೆ ನಿಂತಲ್ಲಿಯೇ ನಿಂತುಬಿಟ್ಟ. ಬಾಣವನ್ನೂ ಬತ್ತಳಿಕೆಯಿಂದ ತೆಗೆಯಲಿಲ್ಲ. ಈ ತಾಟಸ್ಥ್ಯಕ್ಕೆ ಅವನ ವಿಶ್ವಾಸಘಾತುಕತನವೇ ಕಾರಣವಾಗಿತ್ತು. ಈ ಯುದ್ಧ ನಡೆಯುವುದಕ್ಕೆ ಕೆಲವು ವರ್ಷಗಳ ಹಿಂದೆ ದಾರಾ ಅವನನ್ನು ಎಕ್ಕಡದಿಂದ ಹೊಡೆದು ಅವಮಾನಗೊಳಿಸಿದ್ದ. ಆ ಸೇಡನ್ನು ತೀರಿಸಿಕೊಳ್ಳಲು ಖಲೀಲುಲ್ಲಾ ಈಗ ಮನಸ್ಸುಮಾಡಿದ್ದ. ಆದರೂ ದಾರಾ ಇಲ್ಲಿಯವರೆಗೆ ಅವನ ಸಹಾಯವಿಲ್ಲದೆ ಜಯಗಳಿಸಿದ್ದನು. ಇದನ್ನು ಕಂಡ ಆ ರಾಜದ್ರೋಹಿ ಮತ್ತೊಂದು ಉಪಾಯ ಹೂಡಿದನು. ಅವನು ತನ್ನ ತುಕಡಿಯನ್ನು ಬಿಟ್ಟು ಹಲವಾರು ಅನುಯಾಯಿಗಳ ಸಮೇತ ದಾರಾ ಮತ್ತು ಮೊರಾದ್ ಭಕ್ಷರು ಯುದ್ಧಮಾಡುತ್ತಿದ್ದ ಕಡೆಗೆ ಕುದುರೆಯ ಮೇಲೆ ಧಾವಿಸಿ ದೂರದಿಂದಲೇ ಕೂಗಿಕೊಂಡ : 'ರಾಜರಿಗೆ ಜಯವಾಗಲಿ! ದೇವರು ಕಾಪಾಡಲಿ ! ಜಯ ನಿಮ್ಮದಾಯಿತು! ಹಾಗಿದ್ದೂ ಇನ್ನೇಕೆ ಆನೆಯ ಮೇಲೆ ಕುಳಿತಿರುವಿರಿ? ಅಪಾಯದ ಅರಿವಿಲ್ಲವೇ ನಿಮಗೆ? ನಿಮ್ಮ ಅಂಬಾರಿಗೆ ತಗುಲುತ್ತಿರುವ ಅಸಂಖ್ಯಾತ ಬಾಣಗಳಾಗಲಿ ಗುಂಡುಗಳಾಗಲಿ ನಿಮಗೆ ತಗುಲಿದರೆ ನಿಮ್ಮ ಗತಿಯೇನೆಂದು ಯೋಚಿಸಿರುವಿರಾ ? ಮೊದಲು ಆನೆಯಿಂದ ಇಳಿದು ಕುದುರೆಯನ್ನೇರಿ ! ಶತ್ರುವನ್ನು ಬಿರುಸಿನಿಂದ ಬೆನ್ನಟ್ಟುವ ಕೆಲಸವಲ್ಲದೆ ಇನ್ನೇನೂ ಉಳಿದಿಲ್ಲ. ಶತ್ರುಗಳು ತಪ್ಪಿಸಿಕೊಂಡು ಹೋಗದಂತೆ ಮಾಡಿ, ದೊರೆಯೆ ! '

ಯಾವ ಆನೆಯ ಮೇಲೆ ಕುಳಿತು ದಾರಾ ತನ್ನ ಶೌರ್ಯ ಧೈರ್ಯಗಳನ್ನು ಮೆರೆದನೋ ಮತ್ತು ತನ್ನ ಸೈನ್ಯಕ್ಕೆ ಕಾಣುವಂತೆ ಇದ್ದನೋ, ಅಂಥ ಆನೆಯ ಬೆನ್ನಿನಿಂದ ಕೆಳಗಿಳಿದರೆ ಆಗುವ ಅನಾಹುತವನ್ನು ಯೋಚಿಸಿದ್ದರೆ ಆತ ಹಿಂದೂಸ್ಥಾನ ಚಕ್ರಾಧಿಪತ್ಯದ ಒಡೆಯನಾಗಬಹುದಾಗಿತ್ತು. ಆದರೆ ಸುಲಭವಾಗಿ ಮೋಸಹೋಗಬಲ್ಲ ಆತ ಆ ದ್ರೋಹಿ ಖಲೀಲುಲ್ಲಾ ಖಾನ ಹೇಳಿದ್ದನ್ನು ನಂಬಿ ಮಾಡಬಾರದ್ದನ್ನು ಮಾಡಿಬಿಟ್ಟ; ಆನೆಯಿಂದ ಇಳಿದು ಕುದುರೆಯನ್ನೇರಿದ. ಆದರೆ ಹದಿನೈದು ನಿಮಿಷಗಳೂ ಕಳೆದಿಲ್ಲ ; ಆಗ ಆತನಿಗೆ ಅರಿವಾಯಿತು ತಾನು ಮಾಡಿದ ತಪ್ಪು. ಖಲೀಲುಲ್ಲಾ ಎಲ್ಲಿದ್ದಾನೆಂದು ಕೇಳಿದ. ಆ ಪಾಪಿ ಹತ್ತಿರದಲ್ಲಿ ಎಲ್ಲಿಯೂ ಇರಲಿಲ್ಲ. ಹೀಗಾಗಿ ದಾರಾನ ಸಿಟ್ಟು ದಿಕ್ಕು ಕಾಣದೆ ಹೋಯಿತು. ಅಂತೆಯೇ ತಮ್ಮ ನಾಯಕನನ್ನು ಕಾಣದ ಸೈನ್ಯವೂ ದಿಕ್ಕೆಟ್ಟಿತು. ಅವನು ಮರಣಹೊಂದಿದನೆಂಬ ಸುಳ್ಳು ಸುದ್ದಿಯನ್ನು ಕೇಳಿ ಸೈನ್ಯ ಭೀತಿಗೊಂಡಿತು. ಪ್ರತಿಯೊಬ್ಬ ಸೈನಿಕನೂ ತನ್ನ ಯೋಗಕ್ಷೇಮದ ಯೋಚನೆ ಮಾಡಲಾರಂಭಿಸಿದ ; ಔರಂಗಜೇಬನಿಂದ ಹೇಗೆ ತಪ್ಪಿಸಿಕೊಳ್ಳುವುದೆಂದು ಚಿಂತಿಸಲಾರಂಭಿಸಿದ. ನಿಮಿಷಾರ್ಧದಲ್ಲಿ ಕದನದ ಪರಿಸ್ಥಿತಿ ತಲೆಕೆಳಕಾಯಿತು. ನಿರ್ನಾಮವಾಗಿಬೇಕಾಗಿದ್ದ ಶತ್ರು ಜಯಗಳಿಸಿದ. ಕಾಲುಘಂಟೆಯ ತನಕ ಮನಸ್ಸು ಗಟ್ಟಿಮಾಡಿಕೊಂಡು ಔರಂಗಜೇಬ ತನ್ನ ಆನೆಯ ಮೇಲೆ ಕುಳಿತ. ಹಾಗೆ ಕುಳಿತ ಕಾರಣ ಆತ

ಹಿಂದೂಸ್ಥಾನದ ಸಿಂಹಾಸನದ ಮೇಲೂ ಕುಳಿತುಕೊಳ್ಳುವುದು ಸಾಧ್ಯವಾಯಿತು. ಆದರೆ ದಾರಾ ಕೇವಲ ಒಂದೆರಡು ನಿಮಿಷಗಳ ಮುನ್ನ ಆನೆಯಿಂದಿಳಿದವನು ಕೀರ್ತಿಯ ಶಿಖರದಿಂದ ಕಡುಕಷ್ಟದ ಕಂದರಕ್ಕೆ ಉರುಳಿದ ; ಅತೀವ ಸಂಕಟಕ್ಕೆ ಸಿಕ್ಕಿದ ರಾಜ ಕುಮಾರರಲ್ಲಿ ಒಬ್ಬನಾದ. ಮನುಷ್ಯನ ಸಂಕುಚಿತ ದೃಷ್ಟಿಯಿಂದಾಗಿ ಹಂಚಿಕಡ್ಡಿಯಷ್ಟು ಸಣ್ಣದಾದ ಪ್ರಸಂಗ ಎಂತಹ ಮಹತ್ಪರಿಣಾಮಗಳನ್ನುಂಟುಮಾಡುತ್ತದೆ ನೋಡಿ !

ಹಿಂದೂಸ್ಥಾನದ ಮಹಾಸೇನೆಗಳು ಆಗಾಗ್ಗೆ ಅದ್ಭುತ ಸಾಹಸವನ್ನು ಪ್ರದರ್ಶಿಸು ತ್ತವೆ. ಆದರೆ ಒಮ್ಮೆ ಅವ್ಯವಸ್ಥೆಗೊಂಡರೆ ಅವು ಮತ್ತೆ ಶಿಸ್ತಿನಿಂದ ವರ್ತಿಸುವುದು ಅಸಾಧ್ಯ. ಅಂಥ ಅವ್ಯವಸ್ಥೆಗೊಳಗಾದ ಸೈನ್ಯಗಳು ಮಹಾಪೂರದಿಂದ ಕೂಡಿದ ನದಿಯು ದಡವನ್ನು ಮೀರಿ ಹರಿದಂತೆ ವರ್ತಿಸುತ್ತವೆ. ಯಾವ ಅಡೆತಡೆಗಳಿಲ್ಲದೆ ಹರಿಯುವ ಪ್ರವಾಹ ಮಾಡುವ ಅನಾಹುತಕ್ಕೆ ಎಣೆಯುಂಟೆ ! ಶಿಸ್ತನ್ನು ಕಳೆದುಕೊಂಡ ಹಿಂದೂ ಸ್ಥಾನದ ಈ ಮಹಾ ಸೈನ್ಯಗಳು ಪ್ರಾಣಿಗಳ ಮಂದೆಯಂತೆ ಓಡಿಹೋಗುವುದನ್ನು ನಾನು ನೋಡಲಾರೆ. ನಮ್ಮ ಫ್ಲಾಂಡರ್ಸಿನ ಇಪ್ಪತ್ತೈದುಸಾವಿರ ಸೈನ್ಯ ಸಾಕು, ಈ ಅಗಾಧವಾದ ಸೈನ್ಯಗಳನ್ನು ಬಲಿಹಾಕಲು. ಹತ್ತು ಸಾವಿರ ಗ್ರೀಕರು ಅಥವಾ ಐವತ್ತು ಸಾವಿರ ಮೆಸಿಡೋನಿಯನರು ಅಲೆಕ್ಸಾಂಡ್ರನ ನಾಯಕತ್ವದಲ್ಲಿ ಡೇರಿಯುಸನ ಆರೇಳು ಲಕ್ಷ ಸೈನ್ಯವನ್ನು ಜಯಪ್ರದವಾಗಿ ಎದುರಿಸಿದರೆಂಬುದರಲ್ಲಿ ಏನೂ ಸುಳ್ಳಿಲ್ಲ ; ಅಥವಾ ಅದಕ್ಕೆ ಅಚ್ಚರಿಪಡಬೇಕಾದುದೂ ಇಲ್ಲ. ಇಂಡಿಯನರ ಯಾವ ಸೈನ್ಯವನ್ನಾದರೂ ತಲ್ಲಣಿಸಲು ಫ್ರೆಂಚರ ಸೈನ್ಯದ ದಿಟ್ಟ ಕಾದಾಟವೇ ಸಾಕು.

ಅನಿರೀಕ್ಷಿತವೂ ಆಶ್ಚರ್ಯಕರವೂ ಆದ ಈ ಪರಿಸ್ಥಿತಿಯನ್ನು ಔರಂಗಜೇಬ ತನಗನು ಕೂಲವಾಗುವಂತೆ ಉಪಯೋಗಿಸಿಕೊಂಡನು. ನೀತಿರೀತಿಗಳನ್ನೆಲ್ಲ ಬದಿಗಿಟ್ಟು, ಒಳಸಂಚು ಗಳಿಗೆ ಕೈಹಾಕಿದನು. ಆ ವಿಶ್ವಾಸಘಾತುಕನಾದ ಖಲೀಲುಲ್ಲಾಖಾನ ಔರಂಗಜೇಬನ ಮುಂದೆ ಹಾಜರಾಗಿ, ತಾನೂ ತನ್ನ ಸೈನ್ಯವೂ ಆತನ ಸೇವೆಗೆ ಸಿದ್ಧವಾಗಿರುವುದಾಗಿ ಹೇಳಿ ಕೊಂಡ. ಆ ದ್ರೋಹಿಯ ಸಹಾಯಕ್ಕಾಗಿ ಔರಂಗಜೇಬ ತನ್ನ ಕೃತಜ್ಞತೆಯನ್ನು ಸೂಚಿಸಿ, ತಾನು ರಾಜನಲ್ಲವೆಂದೂ ಮೊರಾದ್ ಭಕ್ಷನೇ ರಾಜನೆಂದೂ ಹೇಳಿ, ಅವನ ಬಳಿಗೆ ಕರೆದುಕೊಂಡುಹೋಗಿ ಆತನಿಗೆ ಸಲ್ಲಿಸಬೇಕಾದ ಗೌರವಗಳನ್ನು ಸಲ್ಲಿಸುವಂತೆ ಮಾಡಿದ. ಔರಂಗಜೇಬನಿಗೆ ರಾಜ್ಯದ ಮೇಲೆ ಆಸೆಯೇ ಇಲ್ಲ ಎಂದು ಖಲೀಲುಲ್ಲಾ ಭಾವಿಸಿದ.

ಹೀಗೆ ಔರಂಗಜೇಬ ನಟಿಸಿದರೂ ದಾರಾನ ಕಡೆಯ ಅಮೀರರುಗಳಿಗೆ ಹಗಲು ರಾತ್ರಿ ಪತ್ರಗಳ ಮೇಲೆ ಪತ್ರಗಳನ್ನು ಬರೆದು ಅವರನ್ನು ತನ್ನ ಕಡೆ ಒಲಿಸಿಕೊಳ್ಳ ಲಾರಂಭಿಸಿದನು. ಸದಾ ಆತನ ಹಿತವನ್ನೇ ಬಯಸುತ್ತಿದ್ದ ಆತನ ಕಕ್ಕ ಷೈಸ್ತಾಖಾನ ನನ್ನು ತನ್ನ ಕಡೆ ಸೆಳೆದುಕೊಂಡನು. ಈ ಷೈಸ್ತಾಖಾನ ಇಡೀ ಹಿಂದೂಸ್ಥಾನದಲ್ಲಿಯೇ ಅತ್ಯಂತ ವ್ಯಂಗಸೂಚಕವಾದ ಪತ್ರಗಳನ್ನು ಅತ್ಯುತ್ತಮ ಶೈಲಿಯಲ್ಲಿ ಬರೆಯಬಲ್ಲ ನಿಸ್ಸೀಮ

ನೆಂದು ಹೆಸರುಪಡೆದಿದ್ದ. ಅವನಿಗೂ ದಾರಾನಿಗೂ ಯಾವುದೋ ಪೂರ್ವ ವೈಷಮ್ಯ. ಈ ಕಾರಣದಿಂದ ಆತ ದಾರಾನ ಅವನತಿಗೆ ಕಾರಣನಾದನು.

ಔರಂಗಜೇಬ ತನ್ನ ನಟನೆಯನ್ನು ಜನ ನಂಬುವಂತೆ ಏನೇ ಮಾಡಿದರು ಸಹ ಅದನ್ನು ಮೊರಾದ್ ಭಕ್ಷನ ಹೆಸರಿನಲ್ಲಿ ಮಾಡುತ್ತಿದ್ದನು. ಯಾವ ರಾಜಾಜ್ಞೆ ಹೊರಟರೂ ಅದು ಮೊರಾದನ ಹೆಸರಿನಲ್ಲಿ ಹೊರಡುತ್ತಿತ್ತು. ನಾನೆ ಮುಂದಿನ ರಾಜ ! ಔರಂಗಜೇಬ ರಾಜನ 'ವಕೀಲ' ಮಾತ್ರ ; ಕೇವಲ ಒಬ್ಬ ಸಾಮಾನ್ಯ ಪ್ರಜೆ, ಅಷ್ಟೆ. ಆಡಳಿತದ ಜಂಜಾಟಗಳು ಆತನಿಗೆ ಬೇಡ. ಫಕೀರನಂತೆ ಬಾಳಿ, ಫಕೀರನಂತೆ ಸಾಯು ವುದೇ ಆತನ ಏಕೈಕಗುರಿ !—ಹೀಗೆಂದು ಮೊರಾದ ನಂಬಿದ.

ಅತ್ತ ಮೊಸಕ್ಕೊಳಗಾದ ದಾರಾ ಭಯಭೀತನಾಗಿ ಆಗ್ರಾಕ್ಕೆ ಹಿಂದಿರುಗಿದನು. ಆದರೆ ತಂದೆಗೆ ಮುಖ ತೋರಿಸುವ ಧೈರ್ಯಮಾಡಲಿಲ್ಲ. ಆ ತಂದೆ ಹೇಳಿದ್ದ ಮಾತು ಜ್ಞಾಪಕದಲ್ಲಿತ್ತು. ತನ್ನ ಬಳಿಗೆ ಬರದೇಹೋದ ಮಗನನ್ನು ಸಮಾಧಾನಪಡಿಸುವ ಉದ್ದೇಶದಿಂದ ಷಾಜಹಾನ ತನ್ನ ನಂಬಿಕ ಸ್ತ ಖೋಜಾನೊಬ್ಬನ ಮೂಲಕ ಹೀಗೆ ಪತ್ರ ಬರೆದು ಕಳುಹಿಸಿದನು : 'ಸುಲೇಮಾನ್ ಷಕೋನ ಸೈನ್ಯ ಇರುವವರೆಗೆ ನಿರಾಶೆಗೆ ಕಾರಣ ವಿಲ್ಲ. ನೀನು ಸದ್ಯಕ್ಕೆ ದಿಹ್ಲಿಗೆ ಹೋಗು. ಅಲ್ಲಿಯ ಅಶ್ವಶಾಲೆಯಲ್ಲಿ ಸಾವಿರ ಕುದುರೆ ಗಳಿವೆ. ಆನೆಗಳನ್ನು ಒದಗಿಸಬೇಕೆಂದೂ ಹಣ ಸಹಾಯಮಾಡಬೇಕೆಂದೂ ಅಲ್ಲಿಯ ಕೋಟೆಯ ಕೊತ್ವಾಲನಿಗೆ ನನ್ನ ಆಜ್ಞೆ ಇದೆ. ಎಷ್ಟು ಆವಶ್ಯಕವೋ ಅಷ್ಟು ದೂರ ಮಾತ್ರ ಹೋಗು. ನಾನು ಆಗಾಗ್ಗೆ ಪತ್ರ ಕಳುಹಿಸುತ್ತಿರುತ್ತೇನೆ. ಅವು ಜಾಗ್ರತೆ ತಲುಪುವಷ್ಟು ಹತ್ತಿರದಲ್ಲಿ ಇರು. ಔರಂಗಜೇಬನಿಗೆ ಛೀಮಾರಿಹಾಕಿ ದಾರಿಗೆ ತರಬಲ್ಲೆ ನೆಂದು ನನಗನ್ನಿಸುತ್ತದೆ.'

ಆದರೆ ದಾರುಣ ದುಃಖದಲ್ಲಿ ಮುಳುಗಿದ ದಾರಾ ಈ ಪತ್ರಕ್ಕೆ ಉತ್ತರ ಬರೆಯು ವುದು ಹೋಗಲಿ, ಅದು ತಲುಪಿದ್ದಕ್ಕೂ ಜವಾಬು ಬರೆಯಲಿಲ್ಲ. ಬೇಗಂ ಸಾಹೇಬಳಿಗೆ ಹೇಳಬೇಕಾಗಿದ್ದ ಹಲವಾರು ಸಂಗತಿಗಳನ್ನು ತಿಳಿಯಪಡಿಸಿ, ಆತ ರಾತ್ರಾ ರಾತ್ರಿಯೇ ತನ್ನ ಹೆಂಡತಿ, ಹೆಣ್ಣು ಮಕ್ಕಳು ಮತ್ತು ಕೊನೆಯ ಮಗ ಸಿಪಿಹಿರ್ ಷಕೋ—ಇವರನ್ನು ಕರೆದುಕೊಂಡು ಮೂರು ನಾಲ್ಕು ಸಾವಿರ ಸಿಬ್ಬಂದಿಯ ಸಮೇತ ಆಗ್ರಾದಿಂದ ಹೊರಟು ಬಿಟ್ಟ. ಇಷ್ಟೊಂದು ಜನ ಸಿಬ್ಬಂದಿ ಅವನನ್ನು ಹಿಂಬಾಲಿಸಿತೆಂದು ನಂಬುವುದು ಕಷ್ಟ. ಅಂತೂ ಹಾಗೆ ಹೇಳುತ್ತಾರೆ.

ಅತ್ತ ದಾರಾ ದಿಹ್ಲಿಯ ದಾರಿ ತುಳಿಯಿತ್ತರಲಿ, ಇತ್ತ ನಾವು ಆಗ್ರಾದಲ್ಲಿ ಔರಂಗ ಜೇಬ ಅನುಸರಿಸಿದ ಗೂಢವಾದ ತಂತ್ರ ಹಾಗೂ ಚಾಣಕ್ಯತನಗಳನ್ನು ನೋಡೋಣ. ಆತ ಮೊದಲು ಮಾಡಿದ ಕೆಲಸವೆಂದರೆ,ಸುಲೇಮಾನ್ ಷಕೋನ ಸೈನ್ಯದಲ್ಲಿ ಅನೈಕ್ಯತೆಯ ಬೀಜ ಬಿತ್ತಿದ್ದು. 'ದಾರಾ ಸೋತು ನಿರ್ಗತಿಕನಾಗಿದ್ದಾನೆ. ಅವನನ್ನು ನಂಬಿ ಉಪಯೋಗವಿಲ್ಲ. ಷಾಜಹಾನನ ಆರೋಗ್ಯ ತೀರಾ ಕೆಟ್ಟುಹೋಗಿದೆ. ಅವನು ಹೆಚ್ಚು ದಿನ

ಬದುಕುವ ಸಂಭವವಿಲ್ಲ. ಆದ್ದರಿಂದ ನನ್ನ ಕಡೆ ಸೇರಿ ನಿಮ್ಮ ಮುಂದಿನ ಯೋಗಕ್ಷೇಮ ನೋಡಿಕೊಳ್ಳಿ'–ಹೀಗೆಂದು ಔರಂಗಜೇಬ ಸುಲೇಮಾನ್ ಷಕೋನ ಕಡೆಯ ಮುಖ್ಯ ರಾದ ರಾಜಾ ಜಯಸಿಂಗನಿಗೂ, ದಲೀಲ್ ಖಾನನಿಗೂ ಹೇಳಿಸಿದನು. ಅವರು ತಮ್ಮ ಮುಂದಿನ ಯೋಗಕ್ಷೇಮವನ್ನು ತಾವೇ ಆಲೋಚಿಸಿ ಸುಲೇಮಾನ್ ಷಕೋನನ್ನು ಬಂಧಿಸಿ ತನ್ನ ಬಳಿಗೆ ತಂದರೆ ಮತ್ತೂ ಒಳಿತಾಗುವುದು ಎಂದು ತಿಳಿಸಿದನು.

ಜಯಸಿಂಗ ಕೊಂಚ ಕಾಲ ತಾನು ಏನು ಮಾಡಬೇಕೆಂಬುದರ ಬಗ್ಗೆ ಆಲೋಚನೆ ಮಾಡಿದ. ಅವನಿಗಿನ್ನೂ ದಾರಾ ಮತ್ತು ಷಾಜಹಾನರ ಹೆದರಿಕೆ ಇದ್ದೇ ಇತ್ತು. ರಾಜ ಮನೆತನದವನೊಬ್ಬನ ಮೇಲೆ ಕೈಮಾಡಿದರೆ ಉಂಟಾಗುವ ಪರಿಣಾಮವೇನೆಂದು ಅವನಿಗೆ ಗೊತ್ತಿತ್ತು. ಆ ತಪ್ಪಿಗೆ ಔರಂಗಜೇಬನೇ ಶಿಕ್ಷೆ ವಿಧಿಸಿದರೂ ವಿಧಿಸಬಹುದು. ಅಲ್ಲದೆ, ಸುಲೇಮಾನ್ ಷಕೋ ಒಡಪಟ್ಟಿಗೆ ಬಂಧನಕ್ಕೊಳಗಾಗುವವನಲ್ಲ. ಸಾವಿಗೂ ಅಂಜದ ಗಂಡು, ಆತ. ಹೀಗೆಲ್ಲಾ ಯೋಚಿಸಿ, ಆತನ ನೆಚ್ಚಿನ ಗೆಳೆಯ ದಲೀಲ್ ಖಾನನೊಡನೆ ತನ್ನ ಅಂತರಂಗವನ್ನು ತೋಡಿಕೊಂಡ. ಇಬ್ಬರೂ ಒಂದು ತೀರ್ಮಾನಕ್ಕೆ ಬಂದರು ; ತಮ್ಮಿಬ್ಬರ ಸ್ನೇಹ ಚಿರವಾಗಿರಬೇಕೆಂದು ಪ್ರಮಾಣಮಾಡಿಕೊಂಡರು. ಈ ರೀತಿಯ ಒಪ್ಪಂದ ಮಾಡಿಕೊಂಡು ಅನಂತರ ಜಯಸಿಂಗ ಸುಲೇಮಾನ್ ಷಕೋನ ಡೇರೆಗೆ ಹೋಗಿ ಅವನನ್ನು ಕುರಿತು ಹೀಗೆಂದನು : 'ರಾಜಕುಮಾರ, ನೀವು ಅಪಾಯದಲ್ಲಿದ್ದೀ ರೆಂಬ ವಿಚಾರವನ್ನು ನಿಮ್ಮಿಂದ ನಾನು ಮರೆಮಾಚಬಾರದು. ನೀವು ದಲೀಲ್ ಖಾನ ನನ್ನಾಗಲಿ, ದಾವುದ್ ಖಾನನನ್ನಾಗಲಿ, ಅಷ್ಟೇ ಅಲ್ಲ ಸೈನ್ಯದಲ್ಲಿ ಯಾರನ್ನಾಗಲಿ ನಂಬು ವಂತಿಲ್ಲ. ನೀವು ನಿಮ್ಮ ತಂದೆಯ ಸಹಾಯಕ್ಕೆ ಹೋಗುವುದು ಪರಿಹರಿಸಲಾರದ ಅಪಾಯದಲ್ಲಿ ಸಿಕ್ಕಿದಂತೆ. ಇಂಥ ಪರಿಸ್ಥಿತಿಯಲ್ಲಿ ನೀವು ಶ್ರೀನಗರದ ಬೆಟ್ಟಗುಡ್ಡಗಳಲ್ಲಿ ತಲೆಮರೆಸಿಕೊಳ್ಳುವುದೊಳ್ಳೆಯದು. ಆ ದೇಶದ ರಾಜ ನಿಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ. ಅಲ್ಲಿಗೆ ಹೋಗುವುದು ಯಾರಿಗೇ ಆಗಲಿ ಅಷ್ಟು ಸುಲಭವಲ್ಲ. ಈ ಕಾರಣ ಔರಂಗಜೇಬನ ಭಯ ನಿಮಗಿಲ್ಲ. ಅಲ್ಲಿಗೆ ಹೋದಮೇಲೆ ಸಮಯ ನೋಡಿ ಕೊಂಡು ನೀವು ಇಲ್ಲಿಗೆ ಬರಬಹುದು.'

ಜಯಸಿಂಗನ ಈ ಮಾತುಗಳಿಂದ ಆ ರಾಜಕುಮಾರನಿಗೆ ಸ್ಪಷ್ಟವಾಯಿತು, ತಾನು ನಿಸ್ಸಹಾಯಕ ಸ್ಥಿತಿಯಲ್ಲಿದ್ದೇನೆ ಎಂದು. ಅವನು ಹೇಳಿದಂತೆ ಮಾಡದೆಹೋದರೆ ತನ್ನ ಪ್ರಾಣಕ್ಕೆ ಸಂಚಕಾರವೆಂಬುದೂ ಅರಿವಾಯಿತು. ಹೀಗೆ ಅನಿವಾರ್ಯಕ್ಕೆ ಕಟ್ಟುಬಿದ್ದ ಸುಲೇಮಾನ್ ಷಕೋ ತನಗೆ ಬೇಕಾದವರೊಡಗೂಡಿ ಪರ್ವತಗಳ ಕಡೆಗೆ ಹೊರಟು ಹೋದ. ಅವನು ಬಿಟ್ಟುಹೋದ ಸೈನ್ಯ ಜಯಸಿಂಗ ಮತ್ತು ದಲೀಲ್ ಖಾನರ ಅಧೀನ ದಲ್ಲಿಯೇ ಉಳಿಯಿತು. ಈ ಸೈನ್ಯವನ್ನೇ ಉಪಯೋಗಿಸಿಕೊಂಡು ಅವರಿಬ್ಬರೂ ಸುಲೇಮಾನ್ ಷಕೋನ ಬಿಡದಿ ಭಂಡಾರಗಳನ್ನು ಸೂರೆಮಾಡುವ ಹೀನಕೃತ್ಯವೆಸಗಲು ಹಿಂದುಮುಂದು ನೋಡಲಿಲ್ಲ. ಈ ಸೂರೆಯಲ್ಲಿ ಅವರಿಗೆ ಆನೆಯ ಮೇಲೆ ಹೇರುವಷ್ಟು

ಚಿನ್ನದ ನಾಣ್ಯಗಳು (ಚಿನ್ನದ ಮೊಹರುಗಳು ಅಂದರೆ ಚಿನ್ನದ ರೂಪಾಯಿಗಳು) ಸಿಕ್ಕಿದುವು.

ಅತ್ತ ಗುಡ್ಡಗಾಡಿಗೆ ಓಡಿಹೋಗುತ್ತಿದ್ದ ಸುಲೇಮಾನ್ ಷಿಕೋ ತುಂಬಾ ಕಷ್ಟಕ್ಕೆ ಸಿಲುಕಿದ. ಅವನ ಸೇವಕರೇ ಅವನನ್ನು ತ್ಯಜಿಸಿದರು. ದಾರಿಯಲ್ಲಿ ಕಳ್ಳಕಾಕರು ಸುಲಿಗೆ ಮಾಡಿದರು. ಅವರನ್ನು ಎದುರಿಸುವುದರಲ್ಲಿ ರಾಜಕುಮಾರನ ಕಡೆಯುವ ರನೇಕರು ಅಸುನೀಗಿದರು. ಇಂಥ ಎಲ್ಲ ಕಷ್ಟನಷ್ಟಗಳನ್ನು ಅನುಭವಿಸಿ ಷಿಕೋ ತನ್ನ ಹೆಂಡತಿ ಮಕ್ಕಳ ಸಮೇತ ಘರ್‌ವಾಲ್ (ಶ್ರೀನಗರ)[1] ತಲುಪಿದ. ಅಲ್ಲಿಯ ರಾಜ ಇವನನ್ನು ವಿನಯದಿಂದ ಎದುರುಗೊಂಡು, ಎಲ್ಲ ರೀತಿಯ ರಕ್ಷಣೆ ಕೊಡುವುದಾಗಿ ಭರವಸೆ ನೀಡಿದ.

ಈಗ ನಾವು ಆಗ್ರಾದಲ್ಲಿ ಏನಾಯಿತೆಂಬುದನ್ನು ನೋಡೋಣ. ಸಮೂಘರ್‌ನ ಯುದ್ಧ ಮುಗಿದ ಮೂರು ದಿನಗಳ ತರುವಾಯ ಔರಂಗಜೇಬ ಮತ್ತು ಮೊರಾದ್ ಭಕ್ಷರು ಆಗ್ರಾ ಬಳಿಗೆ ಬಂದು, ಆ ಪಟ್ಟಣಕ್ಕೆ ಹರಿದಾರಿ ದೂರದಲ್ಲಿದ್ದ ತೋಟವೊಂದರಲ್ಲಿ ತಂಗಿದರು. ಅಲ್ಲಿ ತಂಗಿದ ಮೇಲೆ ಔರಂಗಜೇಬ ತನ್ನ ತಂದೆ ಷಾಜಹಾನನಿಗೆ ಒಂದು ಪತ್ರ ಬರೆದು ಕಳುಹಿಸಿದ. ಈ ಪತ್ರ ಬಹು ಚಾಣಕ್ಯತನದ ಸಿಹಿಮಾತುಗಳಿಂದ ತುಂಬಿತ್ತು. ಈ ಪತ್ರವನ್ನು ತೆಗೆದುಕೊಂಡುಹೋದ ಔರಂಗಜೇಬನ ಆತ್ಮೀಯ ಖೋಜಾ ಆ ಮುದಿ ಚಕ್ರವರ್ತಿಯ ಸಮ್ಮುಖಕ್ಕೆ ಹೋಗಿ, ಆತನಿಗೆ ನಜರೊಪ್ಪಿಸಿ, ತನ್ನ ಮಾತಿನ ಮುಜರೆಗಳನ್ನು ಸಲ್ಲಿಸಿದ : 'ದಾರಾನ ದುರಾಸೆ ಹಾಗೂ ಕುಟಿಲ ಆಲೋಚನೆ ಗಳ ಕಾರಣವಾಗಿ ಆಗಬಾರದ್ದೆಲ್ಲಾ ಆಗಿಹೋಯಿತು. ಇದಕ್ಕೆ ಔರಂಗಜೇಬನು ತುಂಬಾ ವ್ಯಥೆಪಡುತ್ತಾನೆ. ಯಜಮಾನರ ಆರೋಗ್ಯ ಈಗ ಉತ್ತಮಗೊಂಡಿದೆಯೆಂದು ಕೇಳಿ ಅವರೆಲ್ಲ ತುಂಬ ಹರ್ಷಭರಿತರಾಗಿದ್ದಾರೆ. ತಮ್ಮ ಅಪ್ಪಣೆಯನ್ನು ಶಿರಸಾವಹಿಸಲು ಔರಂಗಜೇಬ ಸಿದ್ಧನಾಗಿದ್ದಾನೆ'–ಹೀಗೆ ಮಾತಿನಲ್ಲಿ ಮಧು ಸೇರಿಸಿ ಹೇಳಿದ ಆ ಖೋಜ.

ಷಾಜಹಾನನಿಗೆ ತನ್ನ ಮಗನ ಬೂಟಾಟಿಕೆ ಹಾಗೂ ಅಧಿಕಾರ ಲಾಲಸೆಗಳು ಚೆನ್ನಾಗಿ ಗೊತ್ತಿದ್ದುವು. ಅವನಂತೆ ತಾನೂ ನಟಿಸಿದನು. ಮಗನ ರಾಜಭಕ್ತಿಯಿಂದ ತನಗೆ ತುಂಬಾ ತೃಪ್ತಿಯಾಗಿದೆ ಎಂದು ಸೂಚಿಸಿ, ತನ್ನ ಮೆಚ್ಚಿಕೆಯನ್ನು ಮಗನಿಗೆ ತಿಳಿಸುವಂತೆ ಹೇಳಿಕಳುಹಿಸಿದನು. ಚಕ್ರವರ್ತಿ ಬುದ್ಧಿವಂತನಾಗಿದ್ದರೆ ತಾನು ಬದುಕಿರುವೆ ನೆಂಬುದನ್ನು ತೋರಿಸಲು ಜನಗಳಿಗೆ ಬಹಿರಂಗವಾಗಿ ದರ್ಶನ ನೀಡಬೇಕಾಗಿತ್ತು; ಅಮೀರ ರನ್ನೆಲ್ಲಾ ಕರೆಸಿ ಮಾತಾಡಬೇಕಾಗಿತ್ತು. ಹಾಗೆ ಮಾಡದೆ, ಕುಟಿಲ ತಂತ್ರಗಳಿಗೆ ತೌರುಮನೆಯಾಗಿದ್ದ ಔರಂಗಜೇಬನೊಡನೆ ತನ್ನದೇ ಆದ ತಂತ್ರದ ಆಟ ಆಡಲು ನಿರ್ಧರಿಸಿದನು.

---

[1]ಇದು ಈಗಿನ ಘರ್‌ವಾಲ್ ಜಿಲ್ಲೆಯ ಶ್ರೀನಗರ ; ಕಾಶ್ಮೀರದ ರಾಜಧಾನಿ ಶ್ರೀನಗರವಲ್ಲ.

ಆದರೆ ಔರಂಗಜೇಬ ಇಂಥವುಗಳಲ್ಲಿ ಎತ್ತಿದ ಕೈ. ಹೀಗಾಗಿ ಮಗನಿಗೆ ಒಡ್ಡಿದ ಬೋನಿನಲ್ಲಿ ತಂದೆಯೇ ಬಿದ್ದುಬಿಟ್ಟ. ಷಾಜಹಾನ ತನ್ನ ನಂಬಿಕಸ್ತನೊಬ್ಬನನ್ನು ಮಗನ ಬಳಿಗೆ ಕಳುಹಿಸಿ, ತಾನು ದಾರಾನ ದುರ್ವತನೆ ಹಾಗೂ ರಾಜ್ಯ ಆಳುವುದಕ್ಕೆ ಅವನಿಗಿರುವ ಅನರ್ಹತೆಗಳನ್ನು ಅರಿತಿರುವುದಾಗಿಯೂ, ಔರಂಗಜೇಬನ ಬಗ್ಗೆ ಮೊದಲಿನಿಂದ ತನಗೆ ತುಂಬಾ ಮಮತೆಯಿರುವುದಾಗಿಯೂ, ಈಗಲೂ ಆ ಮಮತೆಯ ಮಗನು ಬಂದು ತಂದೆಯನ್ನು ಕಂಡು ರಾಜ್ಯದ ಅವ್ಯವಸ್ಥೆಯನ್ನು ಸರಿಮಾಡುವ ಆಲೋಚನೆ ಮಾಡಬೇಕೆಂದೂ ತಿಳಿಸಿದ. ಕುತಂತ್ರಿಯಾದ ಔರಂಗಜೇಬ ತಂದೆಯ ಮಾತುಗಳನ್ನು ನಂಬಲಿಲ್ಲ. ಆತನಿಗೆ ಗೊತ್ತಿತ್ತು, ಹಗಲೂ ರಾತ್ರಿ ಬೇಗಂ ಸಾಹೇಬಳು ಅಪ್ಪನನ್ನು ಬಿಟ್ಟು ಅಲ್ಲಾಡದೆ ಅವನನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿದ್ದಾಳೆ ಎಂಬ ವಿಚಾರ. ಅವಳೇ ಈ ಸುದ್ದಿಯನ್ನು ಕಳುಹಿಸಿರಬೇಕೆಂದೂ ಆತ ಭಾವಿಸಿದ. ಅಲ್ಲದೆ, ಆಕೆ ಕೋಟೆಯೊಳಗೆ ಗಟ್ಟಿಮುಟ್ಟಾದ ಟಾರ್ಟರ್ ಹೆಂಗಸರನ್ನು ಸೇರಿಸಿಕೊಂಡಿರುವಳೆಂದೂ, ತಾನು ಅಲ್ಲಿಗೆ ಹೋದಲ್ಲಿ ಅವರು ಶಸ್ತ್ರಸಜ್ಜಿತರಾಗಿ ತನ್ನ ಮೇಲೆ ಬೀಳಲು ಏರ್ಪಾಡು ಆಗಿರುವುದಾಗಿಯೂ ಔರಂಗಜೇಬ ಹೇಗೋ ತಿಳಿದುಕೊಂಡ. ಹೀಗಿರುವಾಗ ಆತ ಕೋಟೆಯನ್ನು ಪ್ರವೇಶಿಸಬಾರದೆಂಬ ತೀರ್ಮಾನಕ್ಕೆ ಬಂದವನು, ತಂದೆಯನ್ನು ನೋಡಲು 'ಈಗ ಬರುತ್ತೇನೆ, ಆಗ ಬರುತ್ತೇನೆ' ಎಂದು ಸುಮ್ಮನೆ ಕಾಲ ತಳ್ಳಿದ. ಈ ಮಧ್ಯೆ ತನ್ನ ಗುಪ್ತ ತಂತ್ರಗಳನ್ನು ನಡೆಸಲಾರಂಭಿಸಿದ. ಬಹು ಪ್ರಭಾವಶಾಲಿಗಳಾದ ಅಮೀರರ ಅಭಿಪ್ರಾಯವೇನೆಂದು ಕೇಳಿ ತಿಳಿದುಕೊಂಡ.

ಹೀಗೆ ತನ್ನ ಯೋಜನೆಗಳಿಗೆ ಸರಿಯಾದ ಅಡಿಪಾಯ ಹಾಕಿ, ಸಮಯ ಕಾದು, ಇದ್ದಕ್ಕಿದ್ದಂತೆ ಒಂದು ದಿನ ಆಗ್ರಾ ಕೋಟೆ ತನ್ನ ಮಗ ಸುಲ್ತಾನ್ ಮಹಮ್ಮದನ ಕೈವಶವಾಗುವಂತೆ ಮಾಡಿಬಿಟ್ಟ. ಆ ಯುವಕನು ಕೋಟೆಯ ಸುತ್ತ ಅನೇಕ ಜನ ಯೋಧರನ್ನು ಕಾವಲು ಇಟ್ಟು, ತಾನು ತಾತನನ್ನು ಕಂಡು ತಂದೆಯ ಸಂದೇಶವನ್ನು ತಿಳಿಸುವ ನೆಪಹೂಡಿ ಕೋಟೆಯನ್ನು ಪ್ರವೇಶಿಸಿದ. ಹಾಗೆ ಮಾಡಿ ಹೆಬ್ಬಾಗಿಲಿನಲ್ಲಿದ್ದ ಕಾವಲುಗಾರರ ಮೇಲೆ ಬಿದ್ದ. ಆ ಕೂಡಲೇ ಕೋಟೆಯ ಸುತ್ತ ಇರಿಸಿದ್ದ ಯೋಧರು ಅವನನ್ನು ಕೂಡಿಕೊಂಡರು. ಅವರೆಲ್ಲ ಸೇರಿ ಕಾವಲುಪಡೆಯನ್ನು ನಿಶಸ್ತ್ರರನ್ನಾಗಿ ಮಾಡಿದರು ; ಕೋಟೆಯನ್ನು ತಮ್ಮ ವಶಮಾಡಿಕೊಂಡರು.

ಇದರಿಂದ ಹೆಚ್ಚು ಅಚ್ಚರಿಗೊಂಡವರು ಯಾರೆಂದರೆ ಷಾಜಹಾನ. ಅವನು ತಾನು ಒಡ್ಡಿದ ಬಲೆಯಲ್ಲಿ ತಾನೇ ಬಿದ್ದು, ತನ್ನ ಕೋಟೆಯಲ್ಲಿ ತಾನು ಹೆತ್ತ ಮಗನ ಬಂಧಿಯಾದ. ಇಂತಹ ಸಂದಿಗ್ಧ ಪರಿಸ್ಥಿತಿಗೆ ಸಿಕ್ಕಿದ ಆತ, ಸುಲ್ತಾನ್ ಮಹಮ್ಮದನು ತನಗೆ ವಿಧೇಯನಾಗಿ ನಡೆದುಕೊಂಡರೆ ಆತನನ್ನು ಮುಂದಿನ ರಾಜನನ್ನಾಗಿ ಮಾಡುವುದಾಗಿ ತನ್ನ ಕಿರೀಟ ಹಾಗೂ ಕೊರಾನುಗಳೆತಡನ್ನೂ ಮುಟ್ಟಿ ಪ್ರಮಾಣ ಮಾಡಿದನೆಂದು ಹೇಳಲಾಗಿದೆ. 'ಮಗೂ, ಬಾ ನನ್ನ ಬಳಿಗೆ. ಬಂದು, ನಿನ್ನ

ತಾತನನ್ನು ಈ ಬಂಧನದಿಂದ ಬಿಡುಗಡೆಮಾಡುವ ಅವಕಾಶವನ್ನು ಕಳೆದುಕೊಳ್ಳಬೇಡ. ಹಾಗೆ ಮಾಡಿದೆಯಾದರೆ ದೇವರ ಆಶೀರ್ವಾದ ಮತ್ತು ಚಿರ ಕೀರ್ತಿ—ಇವೆರಡನ್ನೂ ಗಳಿಸುವೆ'—ಹೀಗೆಂದು ಮೊಗಲ್ ಚಕ್ರವರ್ತಿ ಮೊಮ್ಮಗನಿಗೆ ತಿಳಿಸಿದನಂತೆ.

ಈ ಸಲಹೆಗಳನ್ನು ಒಪ್ಪಿಕೊಳ್ಳುವ ಧೈರ್ಯವಿದ್ದಿದ್ದರೆ ಸುಲ್ತಾನ್ ಮಹಮ್ಮದ್ ತಂದೆಯ ಸ್ಥಾನವನ್ನು ಆಕ್ರಮಿಸಬಹುದಾಗಿತ್ತು. ಷಾಜಹಾನನ ಮಾತು ಇನ್ನೂ ನಡೆಯುತ್ತಿತ್ತು. ಷಾಜಹಾನ ಕೋಟೆಯ ಹೊರಗೆ ಹೋಗಿ ಸೈನ್ಯದ ನಾಯಕತ್ವವನ್ನು ವಹಿಸಿಕೊಂಡಿದ್ದರೆ ಅವನ ಹಿಂದೆ ಸೈನ್ಯವೂ ಅಮೀರರೂ ಇರುತ್ತಿದ್ದರು. ಆತನೇ ಯುದ್ಧ ರಂಗಕ್ಕೆ ಹೋಗಿದ್ದಲ್ಲಿ ಮಗ ಔರಂಗಜೇಬ ಆತನ ಮೇಲೆ ಯುದ್ಧಮಾಡುವುದು ಅಸಂಭವ ವಿತ್ತು. ಯಾರು ಔರಂಗಜೇಬನನ್ನು ಹಿಂಬಾಲಿಸುತ್ತಿದ್ದರೋ ಅವರು ದೂರ ಸರಿಯು ತ್ತಿದ್ದರು. ಅದರಲ್ಲಿಯೂ ಮೊರಾದ್ ಬಕ್ಷನೇ ಔರಂಗಜೇಬನನ್ನು ತ್ಯಜಿಸಿಬಿಡುತ್ತಿದ್ದ.

ತಾತ ಷಾಜಹಾನನು ಸಮೂಘರ್ ಯುದ್ಧದ ನಂತರ ಯಾವ ತಪ್ಪು ಮಾಡಿ ದನೋ ಅದೇ ತಪ್ಪನ್ನು ಸುಲ್ತಾನ್ ಮಹಮ್ಮದನೂ ಮಾಡಿದನೆಂದು ಒಂದು ಅಭಿಪ್ರಾಯವಿದೆ. ಹಾಗೆಯೇ, ಷಾಜಹಾನ ಏನು ಉಪಾಯ ಹೂಡಿದನೋ ಅದೇ ಸರಿಯಾದದ್ದೆಂದು ಹೇಳುವವರೂ ಇದ್ದಾರೆ. ಆಲೋಚಿಸಿದ ಉಪಾಯದಂತೆ ನಡೆಯದೆಹೋದುದನ್ನು ನೋಡಿ ಉಪಾಯವೇ ಸರಿಯಲ್ಲವೆಂದು ಹೇಳುವುದು ಸಾಮಾನ್ಯಜನರು ಮಾಡುವ ತಪ್ಪು. ಸರಿಯಾಗಿ ಯೋಚಿಸದೆ ಮಾಡಿದ ತಂತ್ರಗಳು ಅನೇಕ ವೇಳೆ ಜಯಪ್ರದವಾಗುವುದನ್ನು ಕಂಡು ಪ್ರಪಂಚವೇ ಅವುಗಳನ್ನು ಹೊಗಳು ತ್ತದೆ. ಷಾಜಹಾನನು ಆಲೋಚಿಸಿದಂತೆ ಔರಂಗಜೇಬನು ನಡೆದುಕೊಂಡಿದ್ದರೆ ಆತ ತಂದೆಯ ಬಂಧಿಯಾಗಿಬಿಡುತ್ತಿದ್ದ. ಆಗ ಜನರೆಲ್ಲ ರಾಜನ ಚಾಕಚಕ್ಯತೆ ಹಾಗೂ ಬುದ್ಧಿವಂತಿಕೆಯನ್ನು ಮೆಚ್ಚಿ ಕೊಂಡಾಡುತ್ತಿದ್ದರು. ಹಾಗಾಗದೆಹೋದ ಕಾರಣ ಈಗ ಜನರು ಆತನನ್ನು ಅವಿವೇಕಿ, ಬೇಗಂ ಸಾಹೇಬಳ ಕೈಗೊಂಬೆ, ಹಾಗೆ ಹೀಗೆ ಎಂದು ಅವಹೇಳನ ಮಾಡುತ್ತಿದ್ದಾರೆ. ಅಂದರೆ, ಹಕ್ಕಿ (ಔರಂಗಜೇಬ) ತಾನೇ ಆಗಿ ಪಂಜರ ದೊಳಕ್ಕೆ ಹಾರಿಬರುವುದು ತಪ್ಪಿಹೋಯಿತು ಎಂದು ಅಂದುಕೊಳ್ಳುತ್ತಿದ್ದಾರೆ. ಪುನಃ ಸುಲ್ತಾನ್ ಮಹಮ್ಮದನ ವಿಚಾರ ಹೇಳಬೇಕೆಂದರೆ, ಆತ ತನ್ನ ಕೈಗೆ ಸುಲಭವಾಗಿ ಸಿಕ್ಕ ಬಹುದಾಗಿದ್ದ ರಾಜದಂಡವನ್ನು ಹಿಡಿದುಕೊಳ್ಳದೇಹೋದನೆಂದು ಭಾವಿಸುವುದು ಸರಿ ಯಲ್ಲವೆಂದು ಈ ದೇಶದ ರಾಜಕಾರಣಿಗಳು ಹೇಳುತ್ತಾರೆ. ಆತ ತಾತನನ್ನು ಬಂಧನದಿಂದ ಬಿಡಿಸಿ, ರಾಜ್ಯದ ಆಗುಹೋಗುಗಳನ್ನೆಲ್ಲಾ ತನ್ನ ಅಧೀನಕ್ಕೆ ತೆಗೆದುಕೊಳ್ಳಬಹು ದಾಗಿತ್ತು. ಆದರೆ ಹಾಗೆ ಮಾಡದೆಹೋದ ಕಾರಣ ಆತ ಈಗ ಗ್ವಾಲಿಯರ್ ಕೋಟೆ ಯಲ್ಲಿ ತನ್ನ ಬಾಳನ್ನು ಕಳೆಯಬೇಕಾಗಿಬಂದಂತೆ ಕಾಣುತ್ತದೆ. ಷಾಜಹಾನ ಹೇಳಿ ದಂತೆ ಕೇಳದೇಹೋದದ್ದು ತಂದೆಗೆ (ಔರಂಗಜೇಬನಿಗೆ) ಅವನು ತೋರಿಸುತ್ತಿದ್ದ ವಿಧೇಯತೆ ಕಾರಣ ಎಂದರೆ ಯಾರೂ ನಂಬುವುದಿಲ್ಲ. ತಂದೆಯ ಮೇಲಿನ ಭಕ್ತಿಗಿಂತ

ತಾತನ ಮಾತಿನಲ್ಲಿ ಇದ್ದ ಅಪನಂಬಿಕೆಯಿಂದಲೇ ಆತನು ತಾತನನ್ನು ಬಂಧನದಿಂದ ಬಿಡುಗಡೆ ಮಾಡುವ ಸಾಹಸಕ್ಕೆ ಕೈಹಾಕದಿದ್ದುದು ಎಂದು ಹೇಳಬಹುದು. ಅಲ್ಲದೆ, ಔರಂಗಜೇಬನಂಥ ಮಹಾಬುದ್ಧಿವಂತನ ಎದುರು ನಿಲ್ಲುವುದು ಅವನಿಗೆ ಕಷ್ಟವಾಗಿ ಕಂಡಿರ ಬೇಕು. ಅಂತೂ ಕಾರಣಗಳು ಏನೇ ಇರಲಿ, ಆತ ಬಂಧನದಲ್ಲಿದ್ದ ಆ ಭಾಗ್ಯಹೀನ ತಾತನ ಮಾತಿನಂತೆ ನಡೆಯದೆಹೋದ. ಅಷ್ಟೇ ಅಲ್ಲ, ಅವನ ಕೋಣೆಗೆ ಹೋಗುವು ದನ್ನೂ ನಿಲ್ಲಿಸಿದ. ಹಾಗೆ ಮಾಡದಿದ್ದುದಕ್ಕೆ ಆತ ಕೊಟ್ಟ ಕಾರಣ, ತನಗೆ ತಂದೆಯ ಅನುಮತಿ ಇರಲಿಲ್ಲ ಎಂಬುದು. ವಾಸ್ತವವಾದ ವಿಷಯವೆಂದರೆ, ಕೋಟೆಯ ಪ್ರತಿ ಯೊಂದು ಬಾಗಿಲಿನ ಬೀಗದಕೈಯನ್ನೂ ತರದೆ ಮಗ ಸುಲ್ತಾನ್ ಮಹಮ್ಮದನು ತನ್ನನ್ನೂ ಕಾಣಬಾರದು ಎಂದು ಔರಂಗಜೇಬನ ಆಜ್ಞೆ ಆಗಿತ್ತು. ಹಾಗೆ ಮಾಡಿದ ಮೇಲೆ ಔರಂಗಜೇಬನು ತಂದೆಯನ್ನು ಕಾಣಲು ಹೋಗಬೇಕು. ಆಗ ಮಾತ್ರವೇ ಅವನಿಗೆ ಸಂಪೂರ್ಣ ರಕ್ಷಣೆ—ಇದು ಔರಂಗಜೇಬನ ತಂತ್ರವಾಗಿತ್ತು.

ಎರಡು ದಿನಗಳ ಕಾಲ ಷಾಜಹಾನ ಕೋಟೆಯ ಕೀಲಿಕೈಗಳನ್ನು ಕೊಡುವುದಕ್ಕೆ ತಕರಾರು ಮಾಡಿದ. ಆದರೆ ಯಾವಾಗ ತನ್ನವರೇ, ಅದರಲ್ಲಿಯೂ ಚಿಕ್ಕ ಬಾಗಿಲನ್ನು ಕಾಯುತ್ತಿದ್ದ ಪಹರೆಯವರೇ, ತನ್ನನ್ನು ದೂರಮಾಡುತ್ತಿದ್ದಾರೆಂದು ಗೊತ್ತಾಯಿತೋ ಆಗ ಆತ ತನಗಿನ್ನು ರಕ್ಷಣೆಯಿಲ್ಲ ಎಂದು ಅರಿತು, ಕೀಲಿಕೈಗಳನ್ನು ಸುಲ್ತಾನ್ ಮಹಮ್ಮದ್‌ನ ವಶಕ್ಕೆ ವಹಿಸಿದ. ಹಾಗೆ ವಹಿಸಿಕೊಟ್ಟಾಗ ಹೇಳಿದ, ಔರಂಗಜೇಬನು ಆದಷ್ಟು ಜಾಗ್ರತೆ ಬಂದು ತನ್ನನ್ನು ಕಾಣಬೇಕು ; ಏಕೆಂದರೆ, ಆತನಿಗೆ ಹೇಳಬೇಕಾದ ಅತ್ಯಂತ ಮಹತ್ವದ ಗುಟ್ಟುಗಳು ಇವೆ ಎಂದು. ಆದರೆ ಔರಂಗಜೇಬ ಬಹಳ ಹುಷಾರಿನ ಮನುಷ್ಯ. ತಂದೆ ಹೇಳಿದಂತೆ ಕೂಡಲೇ ಕೇಳಿಬಿಡುವ ದಡ್ಡನಲ್ಲ, ಅವ. ಆತ ಕೋಟೆಯ ಕೊತ್ವಾಲ ಎತ್ಬರ್‌ಖಾನ್ ಎಂಬುವನಿಗೆ ಹೇಳಿದ, ಷಾಜಹಾನ್, ಬೇಗಂ ಸಾಹೇಬ್ ಮತ್ತು ಇಡೀ ಅಂತಃಪುರದ ಹೆಂಗಸರು ಎಲ್ಲರನ್ನೂ ಇನ್ನೂ ಹೆಚ್ಚು ನಿರ್ಬಂಧಕ್ಕೊಳಪಡಿಸಬೇಕು ಎಂಬುದಾಗಿ. ಈ ಆಜ್ಞೆಯ ಕಾರಣವಾಗಿ ಕೋಟೆಯ ಹಲವಾರು ಹೆಬ್ಬಾಗಿಲುಗಳನ್ನು ಗೋಡೆ ಕಟ್ಟಿ ಮುಚ್ಚಿಬಿಡಲಾಯಿತು. ಮೊಗಲ್ ಚಕ್ರವರ್ತಿಗೂ ಅವನ ಆಪ್ತರಿಗೂ ಇದ್ದ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದುಹಾಕ ಲಾಯಿತು. ಕೊತ್ವಾಲನ ಅನುಮತಿಯಿಲ್ಲದೆ ಚಕ್ರವರ್ತಿ ತನ್ನ ಕೋಣೆಯಿಂದ ಹೊರಗೆ ಬರಕೂಡದೆಂದೂ ತಿಳಿಸಲಾಯಿತು.

ಇಷ್ಟು ಮಾಡಿ, ಔರಂಗಜೇಬ ತನ್ನ ತಂದೆಗೆ ಒಂದು ಪತ್ರಬರೆದು, ಅದನ್ನು ಮೊಹರುಮಾಡುವ ಮುನ್ನ ಊರಿಗೆಲ್ಲಾ ತೋರಿಸಿದ. ಆ ಪತ್ರದಲ್ಲಿ ಔರಂಗಜೇಬ ಹೀಗೆ ಬರೆದ : 'ನನ್ನ ಬಗ್ಗೆ ತಾವು ತೋರಿಸಿದ ಅಗಾಧವಾದ ಆಸಕ್ತಿ ಹಾಗೂ ದಾರಾನ ಬಗ್ಗೆ ತೋರಿಸಿದ ಅಸಮಾಧಾನ–ಇವುಗಳನ್ನು ನಾನು ನಂಬಬಹುದಾಗಿತ್ತು. ಆದರೆ ನನಗೆ ಖಚಿತವಾಗಿ ಗೊತ್ತಾಗಿದೆ, ನೀವು ಎರಡು ಆನೆಗಳು ಹೊರುವಷ್ಟು ಚಿನ್ನದ ನಾಣ್ಯ

ಗಳನ್ನು ದಾರಾನಿಗೆ ಕಳುಹಿಸಿಕೊಟ್ಟಿರುವಿರಿ ಎಂಬ ವಿಚಾರ. ಹೀಗಿರುವಾಗ, ನಾನು ನಿಮ್ಮ ಬಗ್ಗೆ ಬೇರೊಂದು ಆಲೋಚನೆ ಮಾಡಬೇಕಾಗಿದೆ. ಅವನಿಗೆ ಅಷ್ಟೊಂದು ಹಣ ಒದಗಿಸಿ ಆ ಮೂಲಕ ಆತನು ದೊಡ್ಡ ಸೈನ್ಯಕಟ್ಟಿ, ಈ ಅನರ್ಥಕಾರಿಯಾದ ಯುದ್ಧ ಮುಂದುವರಿಯುವುದಕ್ಕೆ ಅವಕಾಶಮಾಡಿಕೊಟ್ಟದ್ದೀರಿ. ನಿಮ್ಮ ಮಗನ ಮೊಂಡತನದ ಕಾರಣ ನಾನು ಕ್ರೂರವೂ ಹಾಗೂ ಅಸ್ವಾಭಿಕವೂ ಎಂದು ಭಾವಿಸಬಹುದಾದ ಅನಿವಾರ್ಯ ಕ್ರಮವನ್ನು ಅನುಸರಿಸಿದರೆ ತಪ್ಪೇನು ಎಂದು ನೇರವಾಗಿ ಕೇಳಲಿಚ್ಛಿಸುತ್ತೇನೆ. ನಿಮ್ಮ ಹಿರಿಯ ಮಗ ದಾರಾ ನಿಮ್ಮ ಬಂಧನಕ್ಕೆ ಕಾರಣವಲ್ಲವೆ ಎಂದು ನಾನು ಕೇಳುತ್ತೇನೆ. ನಿಮ್ಮ ಮಮತೆಯ ಮಗನಾದ ನಾನು ನಿಮ್ಮ ಪವಿತ್ರ ಪಾದಗಳನ್ನು ಮುಟ್ಟಿ ನಮಸ್ಕರಿಸಲು, ಮತ್ತು ಮಗನು ತಂದೆಗೆ ಸಲ್ಲಿಸಬೇಕಾದ ಭಕ್ತಿಯನ್ನು ಸಲ್ಲಿಸಲು ಅಡ್ಡಬಂದಿರುವವನು ಅವನೇ ಅಲ್ಲವೆ ? ಈಗ ನಾನೇನು ಮಾಡಲಿ ಹೇಳಿ, ನೀವೆ ? ಅನಿವಾರ್ಯವಾಗಿ ನೀವು ಸ್ವಲ್ಪ ಕಾಲ ನಿಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಕಾಗಿದೆ. ಇದಕ್ಕಾಗಿ ನನ್ನನ್ನು ದಯಮಾಡಿ ಕ್ಷಮಿಸಿ ಎಂದು ಬೇಡಿಕೊಳ್ಳುತ್ತಿದ್ದೇನೆ. ಇಷ್ಟು ಭರವಸೆ ಕೊಡಬಲ್ಲೆ: ಏನೆಂದರೆ, ದಾರಾನ ಕೀಟಲೆ ತಪ್ಪಿ ನನಗೆ ನೆಮ್ಮದಿ ಸಿಕ್ಕಿದ ಕೂಡಲೇ ನಾನು ಕೋಟೆಗೆ ಹಾರಿಬಂದು, ನನ್ನ ಕೈಯಿಂದಲೇ ನಿಮ್ಮ ಬಂಧನದಬಾಗಿಲನ್ನು ತೆಗೆಯುತ್ತೇನೆ!'

ದಾರಾ ದಿಹ್ಲಿಯನ್ನು ಬಿಟ್ಟ ದಿನವೇ ಷಾಜಹಾನ ಆನೆಗಳ ಮೇಲೆ ಚಿನ್ನದ ರೂಪಾಯಿ ಗಳನ್ನು ಕಳುಹಿಸಿದ್ದು ನಿಜ ಎಂದು ನನಗೆ ಗೊತ್ತಾಗಿದೆ. ಈ ವಿಚಾರವನ್ನು ರೋಷನಾರ ಬೇಗಮಳು ಔರಂಗಜೇಬನಿಗೆ ತಿಳಿಸಿದಳಂತೆ. ಕೋಟೆಯಲ್ಲಿ ಟಾರ್ಟರ್ ಹೆಂಗಸರು ಇರುವ ಸುದ್ದಿ ಕೊಟ್ಟವಳೂ ಅವಳೇ.

ಇನ್ನೂ ಒಂದು ಸುದ್ದಿ ಹೇಳುತ್ತಾರೆ. ಅದೇನೆಂದರೆ, ಷಾಜಹಾನನು ದಾರಾನಿಗೆ ಬರೆದ ಕಾಗದಗಳನ್ನು ಔರಂಗಜೇಬನು ಅಡ್ಡಗಟ್ಟಿದ ಎಂದು.

ಆದರೆ ತಿಳಿದವರು ಅನೇಕರು ಈ ಆಪಾದನೆಗಳೆಲ್ಲಾ ಸುಳ್ಳೆಂದೂ, ಔರಂಗಜೇಬನು ಬಹಿರಂಗವಾಗಿ ತೋರಿಸಿದ ಪತ್ರ ಜನರನ್ನು ಮೋಸಮಾಡುವುದಕ್ಕಾಗಿ ಎಂದೂ, ಹಾಗೆ ತೋರಿಸಿದ ಉದ್ದೇಶ ತನ್ನ ತಂದೆಯ ಬಗ್ಗೆ ತಾನು ತೋರಿಸಿದ ಅಯೋಗ್ಯವರ್ತನೆಗಳಿಂದ ರೊಚ್ಚಿಗೆದ್ದ ಚಕ್ರವರ್ತಿಯ ಬೆಂಬಲಿಗರನ್ನು ತನ್ನ ಕಡೆ ಎಳೆದುಕೊಳ್ಳುವುದೇ ಆಗಿತ್ತೆಂದೂ ಹೇಳುತ್ತಾರೆ. ಸತ್ಯ ಹೇಗಾದರೂ ಇರಲಿ, ಷಾಜಹಾನನ್ನು ಗೃಹಬಂಧನದಲ್ಲಿ ಇಟ್ಟದ್ದು ಇಡೀ ಅಮೀರರ ಹಿಂಡೇ ಔರಂಗಜೇಬನಿಗೂ ಮೊರಾದ್‌ಭಕ್ಷನಿಗೂ ಸಲಾಮ್ ಹಾಕುವಂತೆ ಮಾಡಿತು. ಆ ಮುದಿವಯಸ್ಸಿನ ಹಾಗೂ ಅಪಮಾನಕ್ಕೊಳಗಾದ ಚಕ್ರವರ್ತಿಯ ಬಗ್ಗೆ ಒಂದು ಎಲೆಯೂ ಅಲ್ಲಾಡದೇ ಹೋದಾಗ, ಮತ್ತು ಒಬ್ಬನಾದರೂ ಒಂದು ಚಕಾರವನ್ನೆತ್ತದೆ ಇದ್ದಾಗ ನನಗಾದ ಸಿಟ್ಟು ಎಷ್ಟೆಂದು ಹೇಳಲಾರೆ. ಷಾಜಹಾನನನ್ನು ದಮನಿಸಿದವನಿಗೆ ಮಂಡಿಯೂರಿ ಇಂದು ಸಲಾಂ ಹಾಕುವ ಆ ಅಮೀರರುಗಳು, ತಮ್ಮ ಅಧಿಕಾರ, ಐಶ್ವರ್ಯ ಹಾಗೂ ಸ್ಥಾನಮಾನಗಳನ್ನು ಆತನಿಂದಲೇ ಪಡೆದವರು ; ಕೆಲವ

ರಂತೂ ಗುಲಾಮರಾಗಿದ್ದು ಇಂದಿನ ಅದ್ದೂರಿಯ ಬಾಳಿಗೇರಿದವರು. ಯಾವ ಪಕ್ಷಕ್ಕೂ ಸೇರದ ದನೇಷ್‌ಮಂಡ್ ಖಾನನಂಥವರೂ ಇದ್ದರು. ಆದರೆ ಅವರ ಸಂಖ್ಯೆ ಬಹಳ ಕಡಿಮೆ. ಈ ಅಲ್ಪಸಂಖ್ಯಾತರನ್ನು ಬಿಟ್ಟರೆ ಎಲ್ಲ ಅಮೀರರೂ ಔರಂಗಜೇಬನಿಗೆ ಬಹುಪರಾಕ್ ಹೇಳಲಾರಂಭಿಸಿದರು.

ಆದರೆ ನಾವು ಅಮೀರರ ಈ ಕೃತಘ್ನ ವರ್ತನೆಯನ್ನು ಒಂದು ರೀತಿಯಲ್ಲಿ ಮನ್ನಿಸಬೇಕಾಗುತ್ತದೆಯೋ, ಏನೋ ! ಏಕೆಂದರೆ, ಹಿಂದೂಸ್ಥಾನದ ಈ ಅಮೀರರಿಗೆ ಫ್ರಾನ್ಸಿನ ಹಾಗೂ ಇತರ ಕ್ರೈಸ್ತ ಪ್ರಪಂಚದ ಶ್ರೀಮಂತರಿಗಿರುವಂತೆ ಭೂಮಾಲೀಕತ್ವ ವೆಂಬುದೇ ಇಲ್ಲ ; ಸ್ವಂತ ಆದಾಯವೆಂಬುದೇ ಇಲ್ಲ. ಇವರ ಆದಾಯ ಎಂದರೆ, ರಾಜನು ತನ್ನ ಇಷ್ಟದಂತೆ ಕೊಡುವ ಅಥವಾ ಕಿತ್ತುಕೊಳ್ಳುವ ವೇತನ (pension). ಈ ವೇತನ ತಪ್ಪಿದರೆ ಅಮೀರರೆಲ್ಲ ಬೀದಿಪಾಲು. ಆಗ ಅವರಿಗೆ ಮೂರು 'ದಂಬ್ಡಿ' ಸಾಲವೂ ಸಿಕ್ಕುವುದಿಲ್ಲ.

ಇಂಥ ಅಮೀರರುಗಳ ರಾಜಭಕ್ತಿಯನ್ನು ಸ್ವೀಕರಿಸಿದ, ಮತ್ತು ಷಾಜಹಾನನನ್ನು ಮೂಲೆಗೊತ್ತರಿಸಿದ ಔರಂಗಜೇಬ ಮತ್ತು ಮೊರಾದ್ ಭಕ್ಷರುಗಳು ದಾರಾನ ಬೆನ್ನು ಹತ್ತಿದರು. ರಾಜಭಂಡಾರ ಅವರಿಬ್ಬರ ಹಣದ ಆವಶ್ಯಕತೆಯನ್ನು ಪೂರೈಸಿತು. ಔರಂಗ ಜೇಬನ ಕಕ್ಕ ಷೈಸ್ತಾಖಾನ್ ಆಗ್ರಾದ ಗೌರ್‍ನರ್ ಆಗಿ ನೇಮಿಸಲ್ಪಟ್ಟನು.

ಸೈನ್ಯವು ಹೊರಡುವ ದಿನ ಸಮೀಪಿಸಿದಾಗ ಮೊರಾದ್ ಭಕ್ಷನ ಆತ್ಮೀಯರು ಒತ್ತಾಯ ಮಾಡಿ ಹೇಳಿದರು, ಆತ ತನ್ನ ಸೈನ್ಯಸಮೇತ ಆಗ್ರಾ ಮತ್ತು ದಿಲ್ಲಿಯ ಸುತ್ತ ಮುತ್ತಲೇ ಇರಬೇಕು ಎಂದು. ಔರಂಗಜೇಬನ ಅತಿವಿನಯ ಹಾಗೂ ಸವಿಮಾತುಗಳು ಮೋಸದ ಮನಸ್ಸನ್ನು ಸೂಚಿಸುತ್ತವೆ ಎಂದರು. ರಾಜನಾಗಿ, ಅಷ್ಟೇ ಅಲ್ಲ ಔರಂಗಜೇಬ ನಿಂದಲೇ ರಾಜನೆಂದು ಹೇಳಿಸಿಕೊಂಡು, ಆಗ್ರಾ ಮತ್ತು ದಿಲ್ಲಿಗಳಿಂದ ದೂರ ಹೋಗುವುದು ಸರಿಯಲ್ಲವೆಂದೂ, ಬೇಕಿದ್ದರೆ ಸಹೋದರ ಔರಂಗಜೇಬನನ್ನೇ ಆ ಕೆಲಸಕ್ಕೆ ನೇಮಿಸಬಹು ದೆಂದೂ ಬುದ್ಧಿ ಹೇಳಿದರು. ಈ ಬುದ್ಧಿವಾದವನ್ನು ಮೊರಾದ್ ಭಕ್ಷನು ಕೇಳಿದ್ದರೆ ಔರಂಗಜೇಬ ತಬ್ಬಿಬ್ಬಾಗಿಬಿಡುತ್ತಿದ್ದ. ಆದರೆ ಮೊರಾದ್ ಭಕ್ಷ ಅಂಥ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆಹೋದ. ಅಣ್ಣ ಔರಂಗಜೇಬನ ಪ್ರಮಾಣಪೂರ್ವಕವಾದ ವಾಗ್ದಾನ ಗಳನ್ನು ಆತ ನಂಬಿಬಿಟ್ಟ. ಕೊರಾನಿನ ಮೇಲೆ ಆಣೆ ಇಟ್ಟು ಮಾಡಿದ ಪ್ರಮಾಣಕ್ಕೆ ಬಹು ಬೆಲೆ ಕೊಟ್ಟ. ಹೀಗಾಗಿ, ಮೊರಾದ್ ಭಕ್ಷ ಅಣ್ಣನೊಡಗೂಡಿ ಆಗ್ರಾದಿಂದ ಹೊರಟು ದಿಲ್ಲಿ ದಾರಿ ಹಿಡಿದ.

ದಾರಿಯಲ್ಲಿ ಮಥುರಾದಲ್ಲಿ ಬೀಡುಬಿಟ್ಟಾಗಲೂ ಮೊರಾದ್ ಭಕ್ಷನ ಹಿತೈಷಿಗಳು ಮತ್ತೊಮ್ಮೆ ಎಚ್ಚರಿಕೆ ಕೊಟ್ಟರು. ಅವರಿಗೆ ಅನುಮಾನ ಹುಟ್ಟಿಸುವಂಥಹ ವಿಷಯ ಗಳನ್ನು ಅವರು ಕೇಳಿದ್ದರು ಮತ್ತು ಕಂಡಿದ್ದರು. ಔರಂಗಜೇಬ ಏನೋ ಕೆಡುಕಿನ ಯೋಚನೆಮಾಡುತ್ತಿದ್ದಾನೆ, ಅಲ್ಲದೆ ಏನೋ ಒಂದು ಮಹಾ ದುರಂತದ ದುರಾಲೋಚನೆ

ನಡೆಸಿದ್ದಾನೆ ಎಂದು ಅವನಿಗೆ ಒತ್ತಿ ಒತ್ತಿ ಹೇಳಿದರು. ಈ ಸುದ್ದಿ ತಮಗೆ ನಾನಾ ಮೂಲಗಳಿಂದ ತಿಳಿದುಬಂದಿದೆಯೆಂದೂ, ಆ ಒಂದು ದಿನವಾದರೂ ಅಣ್ಣನನ್ನು ನೋಡಲು ಹೋಗಬಾರದೆಂದೂ ಅಂಗಲಾಚಿ ಕೇಳಿಕೊಂಡರು. 'ಮೈಗೆ ಸ್ವಸ್ಥವಿಲ್ಲ' ಎಂಬ ನೆಪ ಹಾಕಿದರೆ ಸಾಕು, ಇನ್ನೇನೂ ಮಾಡಬೇಕಾಗಿಲ್ಲ ; ಆಗ ಔರಂಗಜೇಬನೇ ಮಾಮೂಲಿನಂತೆ ಮಿತ ಪರಿವಾರ ಸಮೇತ ಆತನನ್ನು ನೋಡಲು ಬರುತ್ತಾನೆ ಎಂದು ಒಂದು ಉಪಾಯವನ್ನೂ ಸೂಚಿಸಿದರು.

ಆದರೆ ಮೊರಾದ್ ಭಕ್ಷ ಮಂತ್ರಮುಗ್ಧನಾಗಿಬಿಟ್ಟಿದ್ದಾನೋ ಎಂಬಂತೆ ಔರಂಗಜೇಬನ ಮುದ್ದು ಮಾತುಗಳಿಗೆ ಮರುಳಾಗಿಹೋಗಿದ್ದ. ಹಿತೈಷಿಗಳ ಬುದ್ಧಿಮಾತನ್ನು ಕಡೆಗಣಿಸಿ, ಆತ ಔರಂಗಜೇಬನ ಭೋಜನ ಕರೆಯನ್ನು ಒಪ್ಪಿಕೊಂಡ. ಮೊರಾದ್ ಭಕ್ಷ ಬಂದೇಬರುತ್ತಾನೆಂದು ತಿಳಿದ ಔರಂಗಜೇಬ, ಮೀರ್‌ಖಾನ್ ಮುಂತಾದ ಅಂತರಂಗದ ಜನರೊಡನೆ ಮುಂದಿನ ಮಾರ್ಗವನ್ನು ಆಲೋಚಿಸಿದ. ಎಂದಿಲ್ಲದ ಗೌರವ ಮರ್ಯಾದೆಗಳಿಂದ ಮೊರಾದ್ ಭಕ್ಷನನ್ನು ಸ್ವಾಗತಿಸಿದ ; ಕಣ್ಣಲ್ಲಿ ಸಂತೋಷದ ಹನಿಗಳನ್ನು ಸೂಸಿದ. ಭ್ರಾತೃಭಕ್ತಿ ಹಾಗೂ ಅಂಧಶ್ರದ್ಧೆಯುಳ್ಳ ತಮ್ಮನ ಮುಖದ ಮೇಲಿದ್ದ ಧೂಳನ್ನೂ ಬೆವರನ್ನೂ ಒರೆಸಿದ. ಊಟದ ಸಮಯದಲ್ಲಿ ಎಷ್ಟೊಂದು ಉಲ್ಲಾಸ ಹಾಗೂ ಗೆಲವಿನ ಮಾತುಕತೆ ! ಊಟ ಮುಗಿದನಂತರ, ಶಿರಾಜ್ ಮತ್ತು ಕಾಬೂಲಿನ ಬಹು ರುಚಿಕರವಾದ ದ್ರಾಕ್ಷಾರಸಗಳು ಕಾಣಿಸಿಕೊಂಡುವು. ಆಗ ಔರಂಗಜೇಬ ಮೆಲ್ಲನೆ ಮೇಲೆದ್ದು, ಮಮತೆ ಹಾಗೂ ಆನಂದಗಳ ನಟನೆಯಿಂದ ಕೂಡಿದ ಈ ಮಾತುಗಳನ್ನಾಡಿದ : 'ನನ್ನ ಮನಸ್ಸು ಎತ್ತ ಹರಿಯುತ್ತಿದೆ ಎಂಬುದನ್ನು ಮಹಾಸ್ವಾಮಿಯವರಿಗೆ ಹೇಳಬೇಕಾಗಿಲ್ಲ. ಮಹಮ್ಮದೀಯನಾದ ನನಗೆ ಭೋಜನದ ಮೇಜಿನ ಮೋಜುಗಳು ಸಲ್ಲವು. ನನ್ನ ಬದಲು ಮೀರ್‌ಖಾನನೂ ನನ್ನಿತರ ಸ್ನೇಹಿತರೂ ಮಹಾಸ್ವಾಮಿಯವರ ಜೊತೆಯಲ್ಲಿರುವರು'

ದ್ರಾಕ್ಷಾಮದ್ಯವೆಂದರೆ ಮೊರಾದನಿಗೆ ಅಪಾರ ಇಷ್ಟ. ಈಗ ಕೊಟ್ಟಂತಹ ಮದ್ಯವಂತೂ ಬಹು ರುಚಿಯಾಗಿತ್ತು. ಕುಡಿದೂ ಕುಡಿದೂ ಆತ ಮತ್ತನಾಗಿ ಕೊನೆಗೆ ಅತ್ತ ಒರಗಿದ. ಹೀಗಾಗಬೇಕೆಂದು ಔರಂಗಜೇಬನು ಆಲೋಚಿಸಿದ್ದ. ಒಡೆಯನ ಸುಖ ನಿದ್ದೆಗೆ ಅಡ್ಡಿಬರಬಾರದೆಂದು ಮೊರಾದನ ಸೇವಕರನ್ನು ದೂರ ಕಳುಹಿಸಲಾಯಿತು. ಮೀರ್‌ಖಾನ ಮೊರಾದನ ಕತ್ತಿ ಕಠಾರಿಗಳನ್ನು ಬಿಚ್ಚಿಕೊಂಡ.

ಕೊಂಚ ಹೊತ್ತಿನಲ್ಲಿಯೇ ಔರಂಗಜೇಬನು ಅಲ್ಲಿಗೆ ಬಂದ. ಬಂದವನು, ತಮ್ಮನನ್ನು ಕಾಲಿನಿಂದ ಒದೆದು ಎಚ್ಚರಿಸಿದ. ಕಣ್ಣು ಬಿಟ್ಟ ತಮ್ಮನನ್ನು ಕುರಿತು, 'ಥೂ, ನಿನ್ನ ! ನಾಚಿಕೆಯಿಲ್ಲವೆ ನಿನಗೆ ? ರಾಜನಾಗಿದ್ದೀ, ಅಂಥವನಿಗೆ ಒಂದಿಷ್ಟೂ ವಿವೇಚನೆ ಬೇಡವೆ ! ನಿನ್ನ ಬಗ್ಗೆ, ಅಷ್ಟೇ ಅಲ್ಲ ನನ್ನ ಬಗ್ಗೆಯೂ ಸಹ ಪ್ರಪಂಚ ಏನನ್ನುವುದು ! ....ಹೇಯ್ ಯಾರಲ್ಲಿ ! ಕುಡಿದುಬಿದ್ದಿರುವ ಈ ನೀಚನ ಕೈಕಾಲುಗಳನ್ನು ಕಟ್ಟಿ ಒಳಕ್ಕೆ

ಹೊತ್ತುಕೊಂಡುಹೋಗಿ. ಅಲ್ಲಿ ಇವನು ತನ್ನ ನಾಚಿಕೆಯನ್ನು ನಿದ್ದೆಯಲ್ಲಿ ಕಳೆಯಲಿ !'

ಅಪ್ಪಣೆಯಾದ ಕೂಡಲೇ ಅದನ್ನು ಪರಿಪಾಲಿಸಲಾಯಿತು. ಐದಾರು ಜನ ಸಿಪಾಯಿಗಳು ಮೊರಾದ್‌ಭಕ್ಷನ ಮೇಲೆ ಬಿದ್ದು ಅವನನ್ನು ಹಿಚಂಡಿ ಪಿಚಂಡಿ ಕಟ್ಟಿ ಎತ್ತಿಕೊಂಡು ಹೋದರು. ಅವನು ಕೂಗಾಡಿ ಒದರಾಡಿದಾಗ ಅವನ ಹತ್ತಿರದ ಸೇವಕರು ಗುಲ್ಲೆಬ್ಬಿಸಿ ಅವನಿದ್ದ ಕೋಣೆಗೆ ನುಗ್ಗಲು ಪ್ರಯತ್ನಿಸಿದರು. ಆದರೆ ಮೊರಾದ್ ಭಕ್ಷನ ಗೋಲಂದಾಜ ಪಡೆಯ ಮುಖ್ಯಸ್ಥನಾಗಿದ್ದ ಮತ್ತು ಈಗ ಔರಂಗಜೇಬನ ಚಿನ್ನಕ್ಕೆ ಸೋತುಹೋಗಿದ್ದ ಅಲ್ಲಾ ಕೌಲಿ ಅವರನ್ನು ಚೆದರಿಸಿ ಬಾಯಿಮುಚ್ಚಿಸಿದ. ಈ ವಿಚಾರ ಕೂಡಲೇ ಸೈನ್ಯಕ್ಕೆ ಗೊತ್ತಾಯಿತು. ಅಲ್ಲಿ ಗಲಾಟೆಯಾಗುವುದರಲ್ಲಿತ್ತು. ಆದರೆ ಔರಂಗಜೇಬನ ಡೇರೆಯಲ್ಲಿ ನಡೆದದ್ದು ಬಹಳ ಕ್ಷುಲ್ಲಕವಾದುದೆಂದೂ, ಅದರ ಬಗ್ಗೆ ಯಾರೂ ತಲೆ ಕೆಡಿಸಿಕೊಳ್ಳಬೇಕಾಗಿಲ್ಲವೆಂದೂ ಹೇಳುವಂತೆ ಜನರನ್ನು ಆಗಲೇ ನೇಮಿಸಿಯಾಗಿತ್ತು. ಅವರು ಈ ಪ್ರಸಂಗ ನಡೆದಾಗ ತಾವು ಇದ್ದುದಾಗಿಯೂ, ಮಿತಿಮೀರಿ ಕುಡಿದ ಮೊರಾದ್‌ಭಕ್ಷ ಮೈಮರೆತು ಸಿಕ್ಕಿದಹಾಗೆ ಮಾತನಾಡಲಾರಂಭಿಸಿದನೆಂದೂ, ಒಬ್ಬರನ್ನೂ ಬಿಡದೆ ಇಚ್ಛಾನುಸಾರ ಬೈದಾಡಿದನೆಂತಲೂ, ಔರಂಗಜೇಬನನ್ನು ಸಹ ಬಿಡಲಿಲ್ಲವೆಂತಲೂ, ಈ ಕಾರಣಗಳಿಂದ ಆತನನ್ನು ಬೇರೊಂದು ಕೋಣೆಯಲ್ಲಿ ಇರಿಸಬೇಕಾಯಿತೆಂದೂ ಕಥೆ ಕಟ್ಟಿದರು. ಬೆಳಕು ಹರಿದ ಕೂಡಲೆ ಅವನನ್ನು ಬಿಡುಗಡೆಮಾಡಲಾಗುವುದೆಂದು ತಿಳಿಸಿದರು. ಈ ಮಧ್ಯೆ ಕೈತುಂಬ ಲಂಚಕೊಟ್ಟು, ಮುಂದೆ ಉನ್ನತ ಸ್ಥಾನಮಾನಗಳನ್ನು ಕೊಡುವುದಾಗಿ ಸೈನ್ಯದ ಹಿರಿಯ ಅಧಿಕಾರಿಗಳಿಗೆ ವಾಗ್ದಾನಮಾಡಲಾಯಿತು. ಇಡೀ ಸೈನ್ಯದ ಸಂಬಳವನ್ನು ಆ ಕೂಡಲೇ ಹೆಚ್ಚಿಸಲಾಯ್ತು. ಮೊರಾದ್ ಭಕ್ಷನಿಗೆ ಈ ಗತಿ ಆಗುತ್ತೆ ಎಂದು ಯಾರು ಭಾವಿಸಿದ್ದರೋ ಅವರು ಬೆಳಕುಹರಿದಾಗ ನೋಡುತ್ತಾರೆ, ರಾತ್ರಿ ಉಂಟಾದ ಗದ್ದಲ ಸದ್ದಿಲ್ಲದಂತಾಗಿರುವುದನ್ನು. ಔರಂಗಜೇಬ ತನ್ನ ತಮ್ಮನನ್ನು ಆನೆಯ ಮೇಲೆ 'ಅಂಬಾರಿ'ಯೊಳಗೆ ಬಚ್ಚಿಟ್ಟು ದಿಲ್ಲಿಗೆ ಸಾಗಿಸಿದ. ಅಲ್ಲಿ, 'ಸಲೀಮ್‌ಘರ್' ಎಂಬ ನದಿಯ ಮಧ್ಯದ ಪುರಾತನ ಕೋಟೆಯಲ್ಲಿ ಕೂಡಿಹಾಕಿದ.[1]

ಈ ಹೊಸ ರೀತಿಗೆ ಸೈನ್ಯ ತಲೆಬಾಗಿತು. ಷಾ ಅಬ್ಬಾಸನೆಂಬ ಖೋಜಾ ಮಾತ್ರ ಹಾಗೆ ಮಾಡದೆ ಕಿರುಕುಳ ಕೊಡುತ್ತಲೇ ಬಂದ. ಅಂತೂ ಮೊರಾದ್‌ಭಕ್ಷನ ಸೈನ್ಯವನ್ನು ಔರಂಗಜೇಬ ತನ್ನದಾಗಿ ಸ್ವೀಕರಿಸಿದ. ಹೀಗೆ ಮಾಡಿ ಆತ ದಾರಾನ ಬೆನ್ನಟ್ಟಿದ. ದಾರಾ ಲಾಹೋರು ಕಡೆ ದಾರಿ ಸಾಗಿಸಿದ್ದ. ಅಲ್ಲಿಗೆ ತನ್ನವರೊಡನೆ ಹೋಗಿ ಕೋಟೆಯನ್ನು ಸೇರಿಕೊಳ್ಳಬೇಕೆಂದು ಆತ ಯೋಚನೆಮಾಡಿಕೊಂಡಿದ್ದ. ಆದರೆ ಅವನ ಬೆನ್ನುಹತ್ತಿದ ಶತ್ರು ಅದಕ್ಕೆ ಎಡೆಕೊಡಲಿಲ್ಲ. ಲಾಹೋರಿನಲ್ಲಿ ನಿಲ್ಲುವ ಬದಲು ದಾರಾ ಮುಲ್ತಾನಿನ ಹಾದಿಹಿಡಿದ. ಆದರೆ ತಮ್ಮನ ತುರ್ತಿನ ಕಾರ್ಯಾಚರಣೆಯಿಂದ ಅದೂ ಸಾಧ್ಯವಾಗ

---

[1] ಸಲೀಂಘರ್ ; ಇದನ್ನು ಸಲೀಂ ಷಾ ಸೂರ್ ಚಕ್ರವರ್ತಿ ೧೫೪೬ರಲ್ಲಿ ಕಟ್ಟಿಸಿದನು.

ಲಿಲ್ಲ. ಔರಂಗಜೇಬನ ತೀಕ್ಷ್ಣಬುದ್ಧಿ ಹಾಗೂ ಕಾರ್ಯಶಕ್ತಿಯನ್ನು ಯಾವುದೂ ವಿೀರಿಸು ವಂತಿರಲಿಲ್ಲ. ಬಿಸಿಲಿನ ಧಗೆಯಲ್ಲಿಯೂ ಆತನ ಸೈನ್ಯ ಹಗಲೂ ರಾತ್ರಿ ಧಾವಿಸಿತು. ಸೈನ್ಯಕ್ಕೆ ಸ್ಫೂರ್ತಿಯನ್ನು ನೀಡಲು ಔರಂಗಜೇಬನು ಯಾವ ಆಳುಕಾಳುಗಳ ಬೆಂಬಲವೂ ಇಲ್ಲದೆ ಎರಡು ಮೂರು ಹರಿದಾರಿಗಳಷ್ಟು ದೂರ ಮುಂದೆ ಇರುತ್ತಿದ್ದ. ಸಾಮಾನ್ಯರಿಗಿಂತ ಹೆಚ್ಚು ಸೌಕರ್ಯಗಳನ್ನು ಕೇಳುತ್ತಿರಲೂ ಇಲ್ಲ. ರೊಟ್ಟಿ ತಿಂದು, ಸಿಕ್ಕಿದ ನೀರು ಕುಡಿಯುತ್ತಿದ್ದ ; ಬರೀ ನೆಲದ ಮೇಲೆ ಮಲಗುತ್ತಿದ್ದ.

ದಾರಾ ಲಾಹೋರನ್ನು ಬಿಟ್ಟು ಕಾಬೂಲ್ ರಾಜ್ಯಕ್ಕೆ ಹೋಗದೆ ತಪ್ಪುಮಾಡಿದ ನೆಂದು ಈ ದೇಶದ ರಾಜನೀತಿಜ್ಞರು ದೂರುತ್ತಿದ್ದಾರೆ. ಹಾಗೆ ಮಾಡಬೇಕೆಂದು ಅವನಿಗೆ ಒತ್ತಾಯಮಾಡಿ ಹೇಳಿದರೂ ಆತ ಅದರಂತೆ ನಡೆಯದಿದ್ದುದು ಬಿಡಿಸಲಾಗದ ಒಗಟಾ ಗಿದೆ. ಕಾಬೂಲಿನ ರಾಜ್ಯಪಾಲನ ಹೆಸರು ಮೊಹಬತ್ ಖಾನ್. ಹಿಂದೂಸ್ಥಾನದ ಬಹುಕಾಲದ ಹಾಗೂ ಅತಿ ಪ್ರಭಾವಶಾಲಿಯಾದ ಅಮೀರರಲ್ಲಿ ಅವನೊಬ್ಬ. ಅವನಿಗೂ ಔರಂಗಜೇಬನಿಗೂ ಮೊದಲಿನಿಂದಲೂ ಎಣ್ಣೆ–ಸೀಗೆಕಾಯಿ. ಅವನ ಬಳಿ ಆಫ್ಘನರು, ಪರ್ಷಿಯನರು ಮತ್ತು ಉಸ್ಬೇಕರನ್ನು ಎದುರಿಸಲು ಹತ್ತು ಸಹಸ್ರ ಸೈನ್ಯ ಸಿದ್ಧವಾಗಿ ನಿಂತಿತ್ತು. ದಾರಾನ ಬಳಿ ದುಡ್ಡಿಗೆ ಕೊರತೆ ಇರಲಿಲ್ಲ. ಆ ಸೈನ್ಯವೂ ಮೊಹಬತ್ ಖಾನನೂ ಮನಃಪೂರ್ವಕವಾಗಿ ದಾರಾನ ಪರವಾಗಿ ನಿಲ್ಲುವುದರಲ್ಲಿ ಯಾವ ಸಂದೇಹವೂ ಇರಲಿಲ್ಲ. ಇಷ್ಟಲ್ಲದೆ, ದಾರಾ ಕಾಬೂಲಿಗೆ ಹೋಗಿದ್ದರೆ ಆತ ಪರ್ಷಿಯಾ ಹಾಗೂ ಉಸ್ಬೇಕ್ ರಾಜ್ಯಗಳ ಗಡಿಯಲ್ಲಿ ಇದ್ದಂತಾಗಿ, ಆ ರಾಜ್ಯಗಳಿಂದ ಸಾಕಷ್ಟು ಬೆಂಬಲವನ್ನು ಪಡೆಯಬಹುದಾಗಿತ್ತು. ಪರ್ಷಿಯನ್ನರ ನೆರವಿನಿಂದ ಹುಮಾಯೂನ್ ಮತ್ತೆ ರಾಜ್ಯ ಪಡೆದ ನೆಂದು ಆತ ಜ್ಞಾಪಿಸಿಕೊಳ್ಳಬೇಕಾಗಿತ್ತು. ಆದರೆ ತುಂಬ ಬುದ್ಧಿವಂತರೆನಿಸಿಕೊಂಡವರ ಸಲಹೆಯನ್ನು ಅಷ್ಟಾಗಿ ಗಮನಿಸದೆಹೋಗುತ್ತಿದ್ದುದು ಆ ನಿರ್ಭಾಗ್ಯ ದಾರಾನ ಹಣೆಯ ಬರಹವಾಗಿತ್ತು. ಈಗ ಒದಗಿಬಂದ ಪರಿಸ್ಥಿತಿಯಲ್ಲಿ ಆತ ಕಾಬೂಲ್ ಕಡೆಗೆ ಹೋಗುವ ಬದಲು ಸಿಂಧ್ ಕಡೆಗೆ ಹೋದ. ಅಲ್ಲಿಗೆ ಹೋಗಿ, ಇಂಡಸ್ ನದಿಯ ಮಧ್ಯದಲ್ಲಿರುವ ತಟ-ಬಕರ್ (ಥಟ್ಟಾ–ಬಕ್ಕರ್) ಎಂಬ ಒಂದು ಕೋಟೆಯನ್ನು ಸೇರಿಕೊಂಡ.

ದಾರಾ ಎಲ್ಲಿಗೆ ಹೋಗುತ್ತಾನೆಂಬುದು ಖಚಿತವಾದಾಗ ಔರಂಗಜೇಬನು ಅವನ ಬೆನ್ನಟ್ಟುವುದನ್ನು ಬಿಟ್ಟುಬಿಟ್ಟ. ಕಾಬೂಲಿಗೆ ಹೋಗುವುದಿಲ್ಲವೆಂದು ಸ್ಪಷ್ಟವಾದಾಗ ಸಮಾಧಾನದ ನಿಟ್ಟುಸಿರುಬಿಟ್ಟ. ಈಗ ಅವನ ಮನಸ್ಸಿನ ಆತಂಕ ನಿವಾರಣೆಯಾಯಿತು. ತನ್ನ ಸಾಕುತಮ್ಮ ಮೀರ್ ಬಾಬನ ನೇತೃತ್ವದಲ್ಲಿ ಏಳೆಂಟುಸಾವಿರ ಸೈನ್ಯವನ್ನು ದಾರಾನ ಚಲನವಲನಗಳ ರಕ್ಷಣೆಗಾಗಿ ಕಳುಹಿಸಿ, ತಾನು ಆಗ್ರಾಕ್ಕೆ ಮರುನಡೆ ಆರಂಭಿಸಿದ. ಬಂದ ಬಿರುಸಿನಿಂದಲೇ ಮರುನಡೆಯನ್ನು ಮಾಡಿದ. ತಾನಿಲ್ಲದಾಗ ರಾಜಧಾನಿಯಲ್ಲಿ ಏನಾಗಿ ಹೋಗಿದೆಯೋ ಎಂಬ ಭೀತಿ ಅವನನ್ನು ಪೀಡಿಸುತ್ತಿತ್ತು. ಬಹುಶಃ ಕೆಲವು ಶಕ್ತಿವಂತ ರಾಜರುಗಳೇನಾದರೂ, ಉದಾಹರಣೆಗೆ ಜಯಸಿಂಗನೋ ಅಥವಾ ಜಸ್ವಂತ್‌ಸಿಂಗನೋ,

ಇಷ್ಟರಲ್ಲಿ ಷಾಜಹಾನನ್ನು ಬಂಧನದಿಂದ ಬಿಡುಗಡೆಮಾಡಿರಬಹುದು ; ಸುಲೇಮಾನ್ ಷೆಕೋ ಮತ್ತು ಶ್ರೀನಗರದ ರಾಜ–ಇವರುಗಳು ಪರ್ವತದ ಕಡೆಯಿಂದ ರಭಸದ ಮಳೆಯಂತೆ ಎರಗುತ್ತಿರಬಹುದು ; ಅಥವಾ, ಸುಲ್ತಾನ್ ಸೂಜ ಆಗ್ರಾ ಕಡೆಗೆ ಬರುವ ಧೈರ್ಯಮಾಡಿರಬಹುದು. ಆತ ಈ ಆಲೋಚನೆಗಳಲ್ಲಿರುವಾಗ ಒಂದು ಸಣ್ಣ ಪ್ರಸಂಗ ನಡೆಯಿತು. ಅದೊಂದರಿಂದ ಔರಂಗಜೇಬನ ತಲೆಮುಂಪಾಗಿ ನುಗ್ಗುವ ಕಾರ್ಯ ವಿಧಾನವನ್ನು ಅರಿತುಕೊಳ್ಳಬಹುದು.

ಆತ ಮುಲ್ತಾನಿನಿಂದ ಲಾಹೋರಿಗೆ ಹಿಂದಿರುಗುತ್ತಿರುವಾಗ ರಾಜ ಜಯಸಿಂಗನು ತನ್ನ ನಾಲ್ಕೈದು ಸಾವಿರ ರಜಪೂತ ಸೈನ್ಯದೊಡಗೂಡಿ ಎದುರಾಗಿ ಬರುತ್ತಿರುವುದನ್ನು ಕಂಡನು. ಔರಂಗಜೇಬ ಯಾವಾಗಲೂ ತನ್ನ ಸೈನ್ಯಕ್ಕಿಂತ ಮುಂದೆಯೇ ಇರುತ್ತಿದ್ದ. ಷಾಜಹಾನನ ಬಗ್ಗೆ ಜಯಸಿಂಗನಿಗಿದ್ದ ಪ್ರೀತಿವಿಶ್ವಾಸಗಳನ್ನು ಗಮನಿಸಿದರೆ, ಪರಿಸ್ಥಿತಿ ಬಹಳ ಅಪಾಯಕರವಾಗಿದ್ದುದರಲ್ಲಿ ಸಂದೇಹವಿರಲಿಲ್ಲ. ಹೀಗಿರುವಾಗ, ಜಯಸಿಂಗನು ತನ್ನ ಒಡೆಯ ಷಾಜಹಾನನನ್ನು ಬಂಧನದಿಂದ ಬಿಡಿಸಿ, ಆ ಒಡೆಯನಿಗೆ ಹೇಳಬಾರದ ಕಿರುಕುಳಗಳನ್ನು ಕೊಟ್ಟ ಈ ಕರಾಳ ಹೃದಯದ ಮತ್ತು ತನ್ನನ್ನು ನಾನಾ ರೀತಿಯಲ್ಲಿ ಕ್ರೂರವಾಗಿ ಹಿಂಸಿಸಿದ ಔರಂಗಜೇಬನ ಮೇಲೆ ಸೇಡುತೀರಿಸಿಕೊಳ್ಳದೆ ಬಿಡುವುದಿಲ್ಲ ಎಂಬುದು ಸಹಜವಾದುದೇ ಆಗಿತ್ತು. ಔರಂಗಜೇಬನನ್ನು ಸೆರೆಹಿಡಿಯಬೇಕೆಂದೇ ಜಯಸಿಂಗ ಈ ದಂಡಯಾತ್ರೆ ಹೊರಟಿದ್ದನೆಂದು ಊಹಿಸಲಾಗಿತ್ತು. ಇದಕ್ಕೆ ಆಧಾರ ವಾದ ಒಂದು ವಿಚಾರ ಹೇಳಬೇಕಾಗಿದೆ. ಜಯಸಿಂಗ ಇನ್ನೂ ದಿಲ್ಲಿಯಲ್ಲಿದ್ದಾನೆಂದು ಔರಂಗಜೇಬನಿಗೆ ಸುದ್ದಿ ಬಂದ ಗಳಿಗೆಯಲ್ಲೇ ಆತ ಲಾಹೋರ್ ಮತ್ತು ಮುಲ್ತಾನ್‌ಗಳ ಮಧ್ಯೆ ಕಾಣಿಸಿಕೊಂಡ. ಇಷ್ಟು ತ್ರೀವ್ರವಾಗಿ ಆತ ಆ ದೂರದ ದಾರಿಯನ್ನು ಸಾಗಿ ಬಂದಿದ್ದ. ಆದರೆ ಔರಂಗಜೇಬನ ಸ್ಥೈರ್ಯ ಮುಂದಿದ್ದ ಗಂಡಾಂತರದಿಂದ ಅವನನ್ನು ಪಾರುಮಾಡಿತು. ಆತ ತನ್ನ ಮನಸ್ಸಿನ ತುಮುಲವನ್ನು ಒಂದಿಷ್ಟೂ ತೋರಗೊಡಲಿಲ್ಲ. ಅದರ ಬದಲು, ಜಯಸಿಂಗನನ್ನು ಕಂಡು ಆನಂದಗೊಂಡಂತೆ ನಟಿಸಿದನು. ಅವನ ಬಳಿಗೆ ನೇರವಾಗಿ ಕುದುರೆಯನ್ನು ಓಡಿಸಿ, ತ್ವರಿತವಾಗಿ ತನ್ನನ್ನು ಸಮೀಪಿಸುವಂತೆ ಕೈಸನ್ನೆ ಮಾಡುತ್ತಾ, 'ಸಲಾಮೆತ್ ಬಷೆದ್ ರಾಜಾಜೀ ! ಸಲಾಮೆತ್ ಬಷೆದ್ ಬಾಬಾಜಿ !' ಎಂದು ಕೂಗಿ ಹೇಳಿದ. ಆ ರಾಜ ತನ್ನನ್ನು ಸಮಾಪಿಸಿದಾಗ ಹೇಳಿದ : 'ನಾನು ನಿಮ್ಮ ದರ್ಶನಕ್ಕಾಗಿ ಎಷ್ಟೊಂದು ಚಡಪಡಿಸುತ್ತಿದ್ದೆನೆಂದು ನಾನು ಹೇಳಲಾರೆ. ಯುದ್ಧ ಮುಗಿಯಿತು. ದಾರಾ ನಿರ್ನಾಮನಾಗಿ ಒಂಟಿಯಾಗಿ ಅಲೆದಾಡುತ್ತಿದ್ದಾನೆ. ಅವನ ಹಿಂದೆ ಮೀರ್ ಬಾಬಾನನ್ನು ಅಟ್ಟಿದ್ದೇನೆ. ಅವನು ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ !'

ಹೀಗೆಂದು ಹೇಳಿ ಆತ ತನ್ನ ಕೊರಳಿನಲ್ಲಿದ್ದ ಮುತ್ತಿನಹಾರವನ್ನು ತೆಗೆದು, ಬಹು ವಿನಯಪೂರ್ವಕವಾಗಿ ತಗ್ಗಿ ಬಗ್ಗಿ ಜಯಸಿಂಗನ ಕೊರಳಿಗೆ ಹಾಕಿದನು. 'ನನ್ನ ಸೈನ್ಯ ಸುಸ್ತಾಗಿ ಹೋಗಿದೆ. ನೀವು ಈ ಕೂಡಲೇ ಲಾಹೋರಿಗೆ ಹೋಗಬೇಕೆಂದು ನನ್ನ

ಅಭಿಲಾಷೆ. ಎಕೆಂದರೆ, ಅಲ್ಲೇನೊ ನಡೆಯುತ್ತಿದೆಯೆಂದು ನನ್ನ ಹೆದರಿಕೆ. ನಿಮ್ಮನ್ನು ಲಾಹೋರ್ ನಗರದ ರಾಜ್ಯಪಾಲರನ್ನಾಗಿ ನೇಮಿಸಿದ್ದೇನೆ ; ಅದರ ಆಗುಹೋಗುಗಳನ್ನು ನಿಮಗೆ ಒಪ್ಪಿಸಿರುವೆ. ನಾನೂ ಅದಷ್ಟು ಜಾಗ್ರತೆ ನಿಮ್ಮನ್ನು ಕೂಡಿಕೊಳ್ಳುತ್ತೇನೆ. ನೀವು ಸುಲೇಮಾನ್ ಷಕೋನನ್ನು ಕಾಣುತ್ತಿರುವ ರೀತಿಗಾಗಿ ನಾನು ನನ್ನ ವಂದನೆಗಳನ್ನು ಅರ್ಪಿಸದೆ ಇರಲಾರೆ. ದೆಲೀಲ್ ಖಾನನನ್ನು ಎಲ್ಲಿ ಬಿಟ್ಟಿರಿ ? ಅವನು ಸಿಕ್ಕಿದರೆ ಬಲಿ ಹಾಕಿಬಿಟ್ಟೇನು ! ಹೊರಡಿ, ಲಾಹೋರಿಗೆ ಧಾವಿಸಿ : ಸಲಾಮತ್ ಬಷೆದ್ ! ನಮಸ್ಕಾರ !'

ತಟಾ–ಬಕರ್ ಸೇರಿಕೊಂಡ ದಾರಾ, ಬುದ್ಧಿವಂತನೂ ದೃಢಮನಸ್ಸಿನವನೂ ಆದ ಒಬ್ಬ ಖೋಜಾನನ್ನು ಕೋಟೆಯ ರಾಜ್ಯಪಾಲನನ್ನಾಗಿ ನೇಮಿಸಿದನು ; ಪಠಾಣರು ಮತ್ತು ಸೈಯದೀಗಳ ಒಂದು ಅತ್ಯುತ್ತಮವಾದ ಕಾವಲುಪಡೆಯನ್ನು ಕಟ್ಟಿದನು ; ಗೋಲಂದಾಜರನ್ನಾಗಿ ಅನೇಕ ಪೋರ್ಚುಗೀಸರು, ಇಂಗ್ಲಿಷರು, ಫ್ರೆಂಚರು ಮತ್ತು ಜರ್ಮನರನ್ನು ನೇಮಿಸಿಕೊಂಡನು. ಈ ಫರಂಗೀ ಜನರು ಗೋಲಂದಾಜ ಪಡೆಯಲ್ಲಿ ಸೇವೆ ಸಲ್ಲಿಸುವವರು. ಅವರಿಗೆ ಏನೆಲ್ಲಾ ಉದಾರವಾದ ಆಸೆ ತೋರಿಸಿ ದಾರಾ ನೇಮಿಸಿ ಕೊಂಡನು. ತಾನು ಸಿಂಹಾಸನವನ್ನೇರಿದರೆ ಅವರು ಫರಂಗಿಗಳಾದರೂ ಅವರನ್ನು ಅಮೀರರನ್ನಾಗಿ ಮಾಡುವ ಭರವಸೆ ನೀಡಿದನು.

ಇಷ್ಟು ಮಾಡಿದ ದಾರಾ ತನ್ನ ಬಳಿ ಇನ್ನೂ ಇದ್ದ ಹೇರಳವಾದ ಚಿನ್ನ ಬೆಳ್ಳಿಯ ಭಂಡಾರವನ್ನು ಕೋಟೆಯಲ್ಲಿ ಇಟ್ಟು, ಇಂಡಸ್ ನದಿಯ ದಂಡೆಯಲ್ಲಿಯೇ ಸಿಂಧ್ ಕಡೆಗೆ ದಾರಿ ಸಾಗಿಸಿದನು. ತನ್ನೊಡನೆ ಕೇವಲ ಎರಡು ಮೂರು ಸಾವಿರ ಮಾತ್ರ ಸೈನ್ಯ ತೆಗೆದುಕೊಂಡು, ಅತಿ ತ್ವರೆಯಿಂದ ಕಚ್ ರಾಜನ ರಾಜ್ಯವನ್ನು ದಾಟಿ, ಗುಜರಾತ್ ರಾಜ್ಯವನ್ನು ಹೊಕ್ಕು, ಅಹಮದಾಬಾದ್ ನಗರದ ಕೋಟೆಯ ಹೆಬ್ಬಾಗಿಲ ಮುಂದೆ ಹಾಜರಾದನು. ಅಹಮದಾಬಾದಿನ ರಾಜ್ಯಪಾಲನ ಹೆಸರು ಷಾನವಾಜ್‌ಖಾನ್ ಎಂದು. ಆತ ಔರಂಗಜೇಬನ ಮಾವ. ಅವನು ಅಂತಹ ಹೆಸರಾದವನಲ್ಲದಿದ್ದರೂ ಸುಶಿಕ್ಷಿತನೂ ನಮ್ರ ಸ್ವಭಾವದವನೂ ಆಗಿದ್ದ. ಖುಷಿಯಾಗಿ ಕಾಲಕಳೆಯುವ ಸ್ವಭಾವದವನೂ ಆಗಿದ್ದ. ಅಹಮದಾಬಾದ್ ನಗರದಲ್ಲಿ ಬಲವಾದ ರಕ್ಷಣಾಪಡೆಯಿತ್ತು. ಎಂತಹ ಧಾಳಿಯನ್ನಾದರೂ ಎದುರಿಸಬಲ್ಲ ಶಕ್ತಿಯನ್ನು ಅದು ಪಡೆದಿತ್ತು. ಆದರೆ ರಾಜ್ಯಪಾಲನ ಅಧೈರ್ಯದ ಕಾರಣವೋ, ಅಥವಾ ಇದ್ದಕ್ಕಿದ್ದಂತೆ ದಾರಾನನ್ನು ಕಂಡು ತಬ್ಬಿಬ್ಬಾದ ಕಾರಣವೋ ಏನೊ ನಗರದ ಹೆಬ್ಬಾಗಿಲು ದಾರಾನಿಗೆ ತೆರೆಯಲ್ಪಟ್ಟವು. ಅಲ್ಲದೆ, ಅವನಿಗೆ ಷಾನವಾಜನಿಂದ ಬಹು ಗೌರವದ ಸ್ವಾಗತವೂ ದೊರಕಿತು. ದಾರಾನ ಬಗ್ಗೆ ಷಾನವಾಜ್‌ಖಾನ್ ಬಹು ವಿನಯಪೂರ್ವಕವಾಗಿ ವರ್ತಿಸಿ ತನ್ನ ರಾಜಭಕ್ತಿಯನ್ನು ಸಲ್ಲಿಸಿದ ; ಅವನ ಮನಸ್ಸನ್ನು ಒಲಿಸಿಕೊಂಡುಬಿಟ್ಟ. ಆತ ಬಹಳ ಮೋಸದವನೆಂದು ಯಾರು ಏನು ಹೇಳಿದರೂ ದಾರಾ ಕೇಳಲಿಲ್ಲ. ಕೇಳದಿದ್ದರೆ ಹೋಗಲಿ, ಅವನ ಬಳಿ ದಾಥಾ

ತನ್ನ ಮುಂದಿನ ಯೋಜನೆಗಳನ್ನೆಲ್ಲಾ ಹೇಳಿಬಿಡುವುದೆ! ಜಸ್ವಂತಸಿಂಗನೂ ಇನ್ನಿತರ ನಂಬಿಕಸ್ತರೂ ಬರೆದ ಪತ್ರಗಳನ್ನು ಅವನಿಗೆ ತೋರಿಸಿ, ಅವರೆಲ್ಲಾ ತಮ್ಮ ತಮ್ಮ ಸೈನ್ಯ ಸಮೇತ ತನ್ನನ್ನು ಕೂಡಿಕೊಳ್ಳುವರೆಂದೂ ತಿಳಿಸಿಬಿಟ್ಟ!

ದಾರಾ ಅಹಮದಾಬಾದಿನಲ್ಲಿ ಯಜಮಾನನಾಗಿಬಿಟ್ಟಿದ್ದಾನೆಂಬ ಸುದ್ದಿ ಔರಂಗಜೇಬನಿಗೆ ಸಾಕಷ್ಟು ಅಚ್ಚರಿಯನ್ನುಂಟುಮಾಡಿತು. ದಾರಾನಿಗೆ ದುಡ್ಡಿನ ಸವಲತ್ತು ಇನ್ನೂ ಚೆನ್ನಾಗಿರುವುದೆಂದು ಗೊತ್ತಿದ್ದ ಔರಂಗಜೇಬನಿಗೆ ಅಣ್ಣನ ಸ್ನೇಹಿತರೂ ಅಸಂತುಷ್ಟರೂ ಅವನ ಸುತ್ತ ಗುಂಪುಕೂಡಬಹುದೆಂಬ ಅನುಮಾನ ಇದ್ದೇ ಇತ್ತು. ದಾರಾನನ್ನು ತಾನೇ ಹಿಂಬಾಲಿಸಿ, ಅವನಿಗೆ ಸಿಕ್ಕಿರುವ ಸ್ಥಾನದಿಂದ ಅವನನ್ನು ಕದಲಿಸುವ ಕೆಲಸಕ್ಕೆ ಮುಖ್ಯವಾಗಿ ಗಮನ ನೀಡಬೇಕೆಂಬುದರಲ್ಲಿ ಆತನಿಗೆ ಎಳ್ಳಷ್ಟೂ ಸಂದೇಹ ವಿರಲಿಲ್ಲ. ಆದರೆ ಆಗ್ರಾ ಬಿಟ್ಟು ಮತ್ತು ಷಾಜಹಾನನನ್ನು ಹತ್ತಿರದಿಂದ ಕಾಯದೆ ಅಷ್ಟು ದೂರ ಹೋಗುವುದರ ಅಪಾಯವನ್ನು ಔರಂಗಜೇಬನು ಅರಿತನು. ಅಹಮದಾಬಾದಿಗೆ ಹೋಗಬೇಕಾದರೆ ಜಯಸಿಂಗ್, ಜಸ್ವಂತ್‌ಸಿಂಗ್ ಮತ್ತು ಇತರ ಶಕ್ತಿವಂತ ರಾಜರ ರಾಜ್ಯಗಳೊಳಗೆ ಹಾದುಹೋಗಬೇಕಾಗಿತ್ತು. ಅದರಿಂದಲೂ ಅಪಾಯವಿತ್ತು. ಅಲ್ಲದೆ, ಸುಲ್ತಾನ್ ಸೂಜ ದೊಡ್ಡ ಸೈನ್ಯವೊಂದನ್ನು ಕಟ್ಟಿಕೊಂಡು ಆಗ್ರಾ ಕಡೆ ಬರುತ್ತಿದ್ದಾನೆಂದು ಗೊತ್ತಾಗಿತ್ತು. ಶ್ರೀನಗರದ ರಾಜನನ್ನು ಕಟ್ಟಿಕೊಂಡು ಸುಲೇಮಾನ್ ಷಕೋ ಯುದ್ಧ ಸನ್ನದ್ಧನಾಗುತ್ತಿದ್ದಾನೆಂಬ ಸುದ್ದಿಯೂ ಅವನ ಕಿವಿ ಮುಟ್ಟಿತ್ತು. ಇಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿದ ಔರಂಗಜೇಬನು ಸದ್ಯಕ್ಕೆ ದಾರಾನನ್ನು ಅವನ ಪಾಡಿಗೆ ಬಿಡುವುದೊಳ್ಳೆಯದೆಂದೂ, ಆಗಲೇ ಎಲಬಸ್ (ಅಲಹಾಬಾದ್) ಬಳಿ ಗಂಗಾನದಿಯನ್ನು ದಾಟಿದ್ದ ಸುಲ್ತಾನ್ ಸೂಜನನ್ನು ಎದುರಿಸುವುದು ಸೂಕ್ತವೆಂದೂ ತೀರ್ಮಾನಿಸಿದನು.

ಸುಲ್ತಾನ್ ಸೂಜನು ತನ್ನ ಸೈನ್ಯ ಸಮೇತ ದೊಡ್ಡ 'ತಲಾಬ್' (talab–ಕೆರೆ) ಇದ್ದ ಊರೊಂದರ ಬಳಿ ಬೀಡುಬಿಟ್ಟಿದ್ದನು. ಆತ ಬೇಕಾಗಿಯೇ ಆ ಸ್ಥಳವನ್ನು ಆರಿಸಿಕೊಂಡಿದ್ದನು. ಅಲ್ಲಿಗೆ ಬರುವ ಔರಂಗಜೇಬನ ಮೇಲೆ ಬೀಳಬೇಕೆಂಬ ಯೋಚನೆಯಿಂದ ಸೂಜ ಅಲ್ಲಿ ತಂಗಿದ್ದನು.

ಎಣಿಸಿದಂತೆ ಔರಂಗಜೇಬ ತನ್ನ ಸೈನ್ಯ ಸಮೇತ ಅಲ್ಲಿಗೆ ಬಂದು ಒಂದೂವರೆ ಹರಿದಾರಿಯ ದೂರದಲ್ಲಿ ಒಂದು ಸಣ್ಣ ನದಿಯ ದಂಡೆಯಲ್ಲಿ ಬೀಡುಬಿಟ್ಟನು. ಇಬ್ಬರ ಮಧ್ಯೆ ಯುದ್ಧಕ್ಕೆ ದೊಡ್ಡ ಸಿದ್ಧತೆಯೇ ಸಾಗಿತ್ತು. ಆದಷ್ಟು ಜಾಗ್ರತೆ ಯುದ್ಧವನ್ನು ಮುಗಿಸಿಬಿಡಬೇಕೆಂಬ ಕಾತುರದಲ್ಲಿದ್ದ ಔರಂಗಜೇಬ, ಅಲ್ಲಿಗೆ ಬಂದ ಮೂರನೆಯ ದಿನವೇ ನದಿಯ ಆಚೆಯ ದಂಡೆಯಲ್ಲಿ ತನ್ನ ಸಾಮಾನು ಸರಂಜಾಮುಗಳನ್ನು ಬಿಟ್ಟು, ಈ ಕಡೆ ಯುದ್ಧವನ್ನು ಆರಂಭಿಸಿಯೇ ಬಿಟ್ಟ. ದಖನಿನಲ್ಲಿ ಹಿಂದೆ ಬಂದಿಯಾಗಿದ್ದ ಮೀರ್ ಜುಮ್ಲಾ ಸಿಕ್ಕಿದಷ್ಟು ಸೈನ್ಯವನ್ನು ಶೇಖರಿಸಿಕೊಂಡು ಬಂದು ಯುದ್ಧದ ವೇಳೆಗೆ ಔರಂಗಜೇಬನನ್ನು ಕೂಡಿಕೊಂಡ. ದಾರಾ ಓಡಿಹೋದ ಕಾರಣವಾಗಿ ಮೀರ್ ಜುಮ್ಲಾನ ಹೆಂಡತಿ ಮಕ್ಕಳು

ಅಭಿಲಾಷೆ. ಏಕೆಂದರೆ, ಅಲ್ಲೇನೊ ನಡೆಯುತ್ತಿದೆಯೆಂದು ನನ್ನ ಹೆದರಿಕೆ. ನಿಮ್ಮನ್ನು ಲಾಹೋರ್ ನಗರದ ರಾಜ್ಯಪಾಲರನ್ನಾಗಿ ನೇಮಿಸಿದ್ದೇನೆ ; ಅದರ ಆಗುಹೋಗುಗಳನ್ನು ನಿಮಗೆ ಒಪ್ಪಿಸಿರುವೆ. ನಾನೂ ಆದಷ್ಟು ಜಾಗ್ರತೆ ನಿಮ್ಮನ್ನು ಕೂಡಿಕೊಳ್ಳುತ್ತೇನೆ. ನೀವು ಸುಲೇಮಾನ್ ಷಕೋನನ್ನು ಕಾಣುತ್ತಿರುವ ರೀತಿಗಾಗಿ ನಾನು ನನ್ನ ವಂದನೆಗಳನ್ನು ಅರ್ಪಿಸದೆ ಇರಲಾರೆ. ದೆಲೀಲ್ ಖಾನನನ್ನು ಎಲ್ಲಿ ಬಿಟ್ಟರಿ ? ಅವನು ಸಿಕ್ಕಿದರೆ ಬಲಿ ಹಾಕಿಬಿಟ್ಟೇನು ! ಹೊರಡಿ, ಲಾಹೋರಿಗೆ ಧಾವಿಸಿ : ಸಲಾಮತ್ ಬಷೆದ್ ! ನಮಸ್ಕಾರ !'

ತಟಾ–ಬಕರ್ ಸೇರಿಕೊಂಡ ದಾರಾ, ಬುದ್ಧಿವಂತನೂ ದೃಢಮನಸ್ಸಿನವನೂ ಆದ ಒಬ್ಬ ಖೋಜಾನನ್ನು ಕೋಟೆಯ ರಾಜ್ಯಪಾಲನನ್ನಾಗಿ ನೇಮಿಸಿದನು ; ಪಠಾಣರು ಮತ್ತು ಸೈಯದೀಗಳ ಒಂದು ಅತ್ಯುತ್ತಮವಾದ ಕಾವಲುಪಡೆಯನ್ನು ಕಟ್ಟಿದನು ; ಗೋಲಂದಾಜರನ್ನಾಗಿ ಅನೇಕ ಪೋರ್ಚುಗೀಸರು, ಇಂಗ್ಲಿಷರು, ಫ್ರೆಂಚರು ಮತ್ತು ಜರ್ಮನರನ್ನು ನೇಮಿಸಿಕೊಂಡನು. ಈ ಫರಂಗೀ ಜನರು ಗೋಲಂದಾಜ ಪಡೆಯಲ್ಲಿ ಸೇವೆ ಸಲ್ಲಿಸುವವರು. ಅವರಿಗೆ ಏನೆಲ್ಲಾ ಉದಾರವಾದ ಆಸೆ ತೋರಿಸಿ ದಾರಾ ನೇಮಿಸಿಕೊಂಡನು. ತಾನು ಸಿಂಹಾಸನವನ್ನೇರಿದರೆ ಅವರು ಫರಂಗಿಗಳಾದರೂ ಅವರನ್ನು ಅಮೀರರನ್ನಾಗಿ ಮಾಡುವ ಭರವಸೆ ನೀಡಿದನು.

ಇಷ್ಟು ಮಾಡಿದ ದಾರಾ ತನ್ನ ಬಳಿ ಇನ್ನೂ ಇದ್ದ ಹೇರಳವಾದ ಚಿನ್ನ ಬೆಳ್ಳಿಯ ಭಂಡಾರವನ್ನು ಕೋಟೆಯಲ್ಲಿ ಇಟ್ಟು, ಇಂಡಸ್ ನದಿಯ ದಂಡೆಯಲ್ಲಿಯೇ ಸಿಂಧ್ ಕಡೆಗೆ ದಾರಿ ಸಾಗಿಸಿದನು. ತನ್ನೊಡನೆ ಕೇವಲ ಎರಡು ಮೂರು ಸಾವಿರ ಮಾತ್ರ ಸೈನ್ಯ ತೆಗೆದುಕೊಂಡು, ಅತಿ ತ್ವರೆಯಿಂದ ಕಚ್ ರಾಜನ ರಾಜ್ಯವನ್ನು ದಾಟಿ, ಗುಜರಾತ್ ರಾಜ್ಯವನ್ನು ಹೊಕ್ಕು, ಅಹಮದಾಬಾದ್ ನಗರದ ಕೋಟೆಯ ಹೆಬ್ಬಾಗಿಲ ಮುಂದೆ ಹಾಜರಾದನು. ಅಹಮದಾಬಾದಿನ ರಾಜ್ಯಪಾಲನ ಹೆಸರು ಷಾನವಾಜ್‌ಖಾನ್ ಎಂದು. ಆತ ಔರಂಗಜೇಬನ ಮಾವ. ಅವನು ಅಂತಹ ಹೆಸರಾದವನಲ್ಲದಿದ್ದರೂ ಸುಶಿಕ್ಷಿತನೂ ನಮ್ರ ಸ್ವಭಾವದವನೂ ಆಗಿದ್ದ. ಖುಷಿಯಾಗಿ ಕಾಲಕಳೆಯುವ ಸ್ವಭಾವದವನೂ ಆಗಿದ್ದ. ಅಹಮದಾಬಾದ್ ನಗರದಲ್ಲಿ ಬಲವಾದ ರಕ್ಷಣಾಪಡೆಯಿತ್ತು. ಎಂತಹ ಧಾಳಿಯನ್ನಾದರೂ ಎದುರಿಸಬಲ್ಲ ಶಕ್ತಿಯನ್ನು ಅದು ಪಡೆದಿತ್ತು. ಆದರೆ ರಾಜ್ಯಪಾಲನ ಅಧೈರ್ಯದ ಕಾರಣವೋ, ಅಥವಾ ಇದ್ದಕ್ಕಿದ್ದಂತೆ ದಾರಾನನ್ನು ಕಂಡು ತಬ್ಬಿಬ್ಬಾದ ಕಾರಣವೋ ಏನೊ ನಗರದ ಹೆಬ್ಬಾಗಿಲು ದಾರಾನಿಗೆ ತೆರೆಯಲ್ಪಟ್ಟುವು. ಅಲ್ಲದೆ, ಅವನಿಗೆ ಷಾನವಾಜನಿಂದ ಬಹು ಗೌರವದ ಸ್ವಾಗತವೂ ದೊರಕಿತು. ದಾರಾನ ಬಗ್ಗೆ ಷಾನವಾಜ್‌ಖಾನ್ ಬಹು ವಿನಯಪೂರ್ವಕವಾಗಿ ವರ್ತಿಸಿ ತನ್ನ ರಾಜಭಕ್ತಿಯನ್ನು ಸಲ್ಲಿಸಿದ ; ಅವನ ಮನಸ್ಸನ್ನು ಒಲಿಸಿಕೊಂಡುಬಿಟ್ಟ. ಆತ ಬಹಳ ಮೋಸದವನೆಂದು ಯಾರು ಏನು ಹೇಳಿದರೂ ದಾರಾ ಕೇಳಲಿಲ್ಲ. ಕೇಳದಿದ್ದರೆ ಹೋಗಲಿ, ಅವನ ಬಳಿ ದಾಥಾ

ತನ್ನ ಮುಂದಿನ ಯೋಜನೆಗಳನ್ನೆಲ್ಲಾ ಹೇಳಿಬಿಡುವುದೆ! ಜಸ್ವಂತಸಿಂಗನೂ ಇನ್ನಿತರ ನಂಬಿಕಸ್ತರೂ ಬರೆದ ಪತ್ರಗಳನ್ನು ಅವನಿಗೆ ತೋರಿಸಿ, ಅವರೆಲ್ಲಾ ತಮ್ಮ ತಮ್ಮ ಸೈನ್ಯ ಸಮೇತ ತನ್ನನ್ನು ಕೂಡಿಕೊಳ್ಳುವರೆಂದೂ ತಿಳಿಸಿಬಿಟ್ಟ!

ದಾರಾ ಅಹಮದಾಬಾದಿನಲ್ಲಿ ಯಜಮಾನನಾಗಿಬಿಟ್ಟಿದ್ದಾನೆಂಬ ಸುದ್ದಿ ಔರಂಗ ಜೇಬನಿಗೆ ಸಾಕಷ್ಟು ಆಶ್ಚರ್ಯವನ್ನುಂಟುಮಾಡಿತು. ದಾರಾನಿಗೆ ದುಡ್ಡಿನ ಸವಲತ್ತು ಇನ್ನೂ ಚೆನ್ನಾಗಿರುವುದೆಂದು ಗೊತ್ತಿದ್ದ ಔರಂಗಜೇಬನಿಗೆ ಅಣ್ಣನ ಸ್ನೇಹಿತರೂ ಅಸಂತುಷ್ಟರೂ ಅವನ ಸುತ್ತ ಗುಂಪುಕೂಡಬಹುದೆಂಬ ಅನುಮಾನ ಇದ್ದೇ ಇತ್ತು. ದಾರಾನನ್ನು ತಾನೇ ಹಿಂಬಾಲಿಸಿ, ಅವನಿಗೆ ಸಿಕ್ಕಿರುವ ಸ್ಥಾನದಿಂದ ಅವನನ್ನು ಕದಲಿಸುವ ಕೆಲಸಕ್ಕೆ ಮುಖ್ಯವಾಗಿ ಗಮನ ನೀಡಬೇಕೆಂಬುದರಲ್ಲಿ ಆತನಿಗೆ ಎಳ್ಳಷ್ಟೂ ಸಂದೇಹ ವಿರಲಿಲ್ಲ. ಆದರೆ ಆಗ್ರಾ ಬಿಟ್ಟು ಮತ್ತು ಷಾಜಹಾನನನ್ನು ಹತ್ತಿರದಿಂದ ಕಾಯದೆ ಅಷ್ಟು ದೂರ ಹೋಗುವುದರ ಅಪಾಯವನ್ನು ಔರಂಗಜೇಬನು ಅರಿತನು. ಅಹಮದಾಬಾದಿಗೆ ಹೋಗಬೇಕಾದರೆ ಜಯಸಿಂಗ್, ಜಸ್ವಂತ್‌ಸಿಂಗ್ ಮತ್ತು ಇತರ ಶಕ್ತಿವಂತ ರಾಜರ ರಾಜ್ಯಗಳೊಳಗೆ ಹಾದುಹೋಗಬೇಕಾಗಿತ್ತು. ಅದರಿಂದಲೂ ಅಪಾಯವಿತ್ತು. ಅಲ್ಲದೆ, ಸುಲ್ತಾನ್ ಸೂಜ ದೊಡ್ಡ ಸೈನ್ಯವೊಂದನ್ನು ಕಟ್ಟಿಕೊಂಡು ಆಗ್ರಾ ಕಡೆ ಬರುತ್ತಿದ್ದಾ ನೆಂದು ಗೊತ್ತಾಗಿತ್ತು. ಶ್ರೀನಗರದ ರಾಜನನ್ನು ಕಟ್ಟಿಕೊಂಡು ಸುಲೇಮಾನ್ ಷೆಕೋ ಯುದ್ಧ ಸನ್ನದ್ಧನಾಗುತ್ತಿದ್ದಾನೆಂಬ ಸುದ್ದಿಯೂ ಅವನ ಕಿವಿ ಮುಟ್ಟಿತ್ತು. ಇಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿದ ಔರಂಗಜೇಬನು ಸದ್ಯಕ್ಕೆ ದಾರಾನನ್ನು ಅವನ ಪಾಡಿಗೆ ಬಿಡುವುದೊಳ್ಳೆಯದೆಂದೂ, ಆಗಲೇ ಎಲಬಸ್ (ಅಲಹಾಬಾದ್) ಬಳಿ ಗಂಗಾನದಿಯನ್ನು ದಾಟಿದ್ದ ಸುಲ್ತಾನ್ ಸೂಜನನ್ನು ಎದುರಿಸುವುದು ಸೂಕ್ತವೆಂದೂ ತೀರ್ಮಾನಿಸಿದನು.

ಸುಲ್ತಾನ್ ಸೂಜನು ತನ್ನ ಸೈನ್ಯ ಸಮೇತ ದೊಡ್ಡ 'ತಲಾಬ್' (talab–ಕೆರೆ) ಇದ್ದ ಊರೊಂದರ ಬಳಿ ಬೀಡುಬಿಟ್ಟಿದ್ದನು. ಆತ ಬೇಕಾಗಿಯೇ ಆ ಸ್ಥಳವನ್ನು ಆರಿಸಿ ಕೊಂಡಿದ್ದನು. ಅಲ್ಲಿಗೆ ಬರುವ ಔರಂಗಜೇಬನ ಮೇಲೆ ಬೀಳಬೇಕೆಂಬ ಯೋಚನೆಯಿಂದ ಸೂಜ ಅಲ್ಲಿ ತಂಗಿದ್ದನು.

ಎಣಿಸಿದಂತೆ ಔರಂಗಜೇಬ ತನ್ನ ಸೈನ್ಯ ಸಮೇತ ಅಲ್ಲಿಗೆ ಬಂದು ಒಂದೂವರೆ ಹರಿದಾರಿಯ ದೂರದಲ್ಲಿ ಒಂದು ಸಣ್ಣ ನದಿಯ ದಂಡೆಯಲ್ಲಿ ಬೀಡುಬಿಟ್ಟನು. ಇಬ್ಬರ ಮಧ್ಯೆ ಯುದ್ಧಕ್ಕೆ ದೊಡ್ಡ ಸಿದ್ಧತೆಯೇ ಸಾಗಿತ್ತು. ಆದಷ್ಟು ಜಾಗ್ರತೆ ಯುದ್ಧವನ್ನು ಮುಗಿಸಿಬಿಡಬೇಕೆಂಬ ಕಾತುರದಲ್ಲಿದ್ದ ಔರಂಗಜೇಬ, ಅಲ್ಲಿಗೆ ಬಂದ ಮೂರನೆಯ ದಿನವೇ ನದಿಯ ಆಚೆಯ ದಂಡೆಯಲ್ಲಿ ತನ್ನ ಸಾಮಾನು ಸರಂಜಾಮುಗಳನ್ನು ಬಿಟ್ಟು, ಈ ಕಡೆ ಯುದ್ಧವನ್ನು ಆರಂಭಿಸಿಯೇ ಬಿಟ್ಟ. ದಖನಿನಲ್ಲಿ ಹಿಂದೆ ಬಂದಿಯಾಗಿದ್ದ ಮೀರ್ ಜುಮ್ಲಾ ಸಿಕ್ಕಿದಷ್ಟು ಸೈನ್ಯವನ್ನು ಶೇಖರಿಸಿಕೊಂಡು ಬಂದು ಯುದ್ಧದ ಬೆಳಗ್ಗೆ ಔರಂಗಜೇಬನನ್ನು ಕೂಡಿಕೊಂಡ. ದಾರಾ ಓಡಿಹೋದ ಕಾರಣವಾಗಿ ಮೀರ್ ಜುಮ್ಲಾನ ಹೆಂಡತಿ ಮಕ್ಕಳು

ಬಂಧನದಿಂದ ಬಿಡುಗಡೆಹೊಂದಿದ್ದರು. ಅಲ್ಲದೆ, ಔರಂಗಜೇಬನ ಮುಂದಿನ ಸನ್ನಾಹಗಳ ಸಾಧನೆಗೆ ಆತನ ಬಂಧನ ಆವಶ್ಯಕವಾಗಿರಲಿಲ್ಲ. ಯುದ್ಧ ಬಹು ಬಿರುಸಿನಿಂದ ನಡೆಯಿತು. ಆಕ್ರಮಣಕಾರರ ಧಾಳಿ ನಂಬಲಸಾಧ್ಯವಾದಷ್ಟು ಬಿರುಸಾಗಿತ್ತು. ಆದರೆ ಸುಲ್ತಾನ್ ಸೂಜ ತನ್ನ ಸ್ಥಾನವನ್ನು ಬಿಟ್ಟುಕೊಡದೆ ಪ್ರತಿಯೊಂದು ಧಾಳಿಯನ್ನೂ ಹಿಮ್ಮೆಟ್ಟಿಸಿದ. ಅಸಂಖ್ಯಾತ ಜನರನ್ನು ಹತಗೈದ. ನಿಧಾನವಾಗಿ ಬಯಲಿಗೆ ಬರುವನೆಂಬ ಔರಂಗಜೇಬನ ನಿರೀಕ್ಷೆಯನ್ನು ಸುಳ್ಳುಮಾಡಿಬಿಟ್ಟ. ತಾನಿದ್ದ ಸುರಕ್ಷಿತ ಸ್ಥಾನವನ್ನು ಬಿಡದೆ ಅದನ್ನು ಕಾಪಾಡಿಕೊಳ್ಳಬೇಕೆಂಬುದು ಆತನ ಸದ್ಯದ ಮುಖ್ಯ ಉದ್ದೇಶವಾಗಿತ್ತು. ಬಿಸಿಲಿನ ಧಗೆಯಿಂದ ಶತ್ರುಸೈನ್ಯ ನದಿಯ ನೀರಿಗೆ ಜಾರಿದಾಗ ಅದರ ಮೇಲೆ ಹಿಂದಿನಿಂದ ಬಿದ್ದು ಸದೆಬಡಿಯಬೇಕೆಂಬ ಸನ್ನಾಹಕ್ಕೆ ಸಿದ್ಧವಾಗುತ್ತಿದ್ದ.

ಹೀಗಿರುವಾಗ ಒಂದು ಸುದ್ದಿ ಬಂದಿತು. ಅದರ ಪ್ರಕಾರ, ರಾಜಾ ಜಸ್ವಂತ್ ಸಿಂಗನು ಇದ್ದಕ್ಕಿದ್ದಂತೆ ಔರಂಗಜೇಬನ ಸೈನ್ಯದ ಮೇಲೆ ಹಿಂದಿನಿಂದ ಎರಗಿ, ಅದನ್ನು ಧ್ವಂಸಗೈದು ದಿಕ್ಕೆಡುವಂತೆ ಮಾಡಿ, ಸಾಮಾನು ಸರಂಜಾಮುಗಳನ್ನು ಕೊಳ್ಳೆಹೊಡೆಯು ತ್ತಿದ್ದಾನೆಂದು ಗೊತ್ತಾಯಿತು. ಈ ಸುದ್ದಿ ಸೈನ್ಯದಲ್ಲೆಲ್ಲಾ ಹಬ್ಬಿತು. ಸೈನಿಕರ ಹೆದರಿಕೆ ಗಳಿಗೆ ಗಳಿಗೆಗೂ ಹೆಚ್ಚಾಯಿತು. ಇದು ಏಷ್ಯನರ ಸೈನ್ಯಗಳ ಸಾಮಾನ್ಯ ನಡೆವಳಿಕೆ. ಆದರೆ ಔರಂಗಜೇಬ ಧೃತಿಗೆಡಲಿಲ್ಲ. ಪಲಾಯನ ಸರಿಯಲ್ಲವೆಂದು ನಿರ್ಧರಿಸಿದ ಅವನು, ದಾರಾನ ಮೇಲೆ ನಡೆದ ಯುದ್ಧದಲ್ಲಿ ಅನುಸರಿಸಿದ ರೀತಿಯನ್ನೇ ಈಗಲೂ ಅನುಸರಿಸಿದ. ಅವ್ಯವಸ್ಥೆ ಔರಂಗಜೇಬನ ಸೈನ್ಯದಲ್ಲಿ ತಾಂಡವಾಡತೊಡಗಿತು. ಅನಿರೀಕ್ಷಿತವಾಗಿ ಒದಗಿ ಬಂದ ಈ ಅವಕಾಶವನ್ನು ಸುಲ್ತಾನ್ ಸೂಜ ಉಪಯೋಗಿಸಿಕೊಳ್ಳಬೇಕೆಂದು ಬಹಳ ಬಿರುಸಿನ ಹೋರಾಟ ಆರಂಭಿಸಿದ. ಒಂದು ಬಾಣಕ್ಕೆ ಔರಂಗಜೇಬನ ಮಾವುತ ಆಹುತಿ ಯಾದ. ಆನೆ ಬೆದರಿ ಹತೋಟಿ ಮೀರಿ ವರ್ತಿಸಲಾರಂಭಿಸಿತು. ಇದು ಇನ್ನೂ ಅಪಾಯ ವನ್ನು ಹತ್ತಿರ ಹತ್ತಿರ ತಂದಂತಾಯಿತು. ಈಗ ಆನೆಯಿಂದ ಇಳಿಯದೆ ಬೇರೊಂದು ಉಪಾಯವಿಲ್ಲವೆಂದು ಔರಂಗಜೇಬ ಭಾವಿಸಿರುವಾಗ, ಹತ್ತಿರದಲ್ಲಿಯೇ ಇದ್ದ ಮೀರ್ ಜುಮ್ಲಾ ಗಟ್ಟಿಯಾಗಿ 'ಡೆಕನ್ ಕೌ ! ಡೆಕನ್ ಕೌ !' (ಡೆಕನಿಯರೇ ನೀವು ಎಲ್ಲಿರುವಿರಿ!) ಎಂದು ಕೂಗಿ ಹೇಳಿ, ಆತನು ಆನೆಯಿಂದ ಇಳಿಯುವುದನ್ನು ತಪ್ಪಿಸಿದ. ಔರಂಗಜೇಬನಿಗೆ ಈಗ ಏನು ಮಾಡಬೇಕೆಂಬುದೂ ಗೊತ್ತಾಗಲಿಲ್ಲ. ಯಾವ ಹೊತ್ತಿನಲ್ಲಿ ತಾನು ಶತ್ರುವಿನ ಕೈವಶವಾಗಿಬಿಡುವೆನೋ ಎಂದು ಹೆದರಿದ. ಆದರೂ ಅದೃಷ್ಟದ ಹಾದಿ ವಿಚಿತ್ರವಾದುದು. ಅಧಃಪತನವಾಗಿಬಿಡುತ್ತಿದ್ದ ಔರಂಗಜೇಬನು ಕೆಲವೇ ನಿಮಿಷಗಳಲ್ಲಿ ವಿಜಯಕಿರೀಟ ಧರಿಸಬಿಟ್ಟ ! ದಾರಾ ಓಡಿಹೋದಂತೆ ಸುಲ್ತಾನ್ ಸೂಜನೂ ಯುದ್ಧರಂಗದಿಂದ ಓಡಿಹೋದ !

ಪಲಾಯನ ಮಾಡುತ್ತಿರುವ ಸೈನ್ಯವನ್ನು ಆದಷ್ಟು ಜಾಗ್ರತೆ ಬೆನ್ನಟ್ಟಬೇಕೆಂಬ ಉದ್ದೇಶದಿಂದ ಹೇಗೆ ದಾರಾ ಆನೆಯಿಂದ ಇಳಿದು ತಪ್ಪುಮಾಡಿದನೋ, ಅದೇ ತಪ್ಪನ್ನು

ಅವನ ತಮ್ಮ ಸುಲ್ತಾನ್ ಸೂಜನೂ ಮಾಡಿದ. ಆದರೆ ಹಾಗೆ ಮಾಡಿದ್ದು ದುರುದ್ದೇಶ ದಿಂದ ಕೂಡಿದವನೊಬ್ಬನ ಚಿತಾವಣೆಯಿಂದಲೊ ಅಥವಾ ಇಲ್ಲವೊ ಹೇಳಲು ಸಾಧ್ಯವಿಲ್ಲ. ಅಲ್ಲಾವರ್ದಿಖಾನನೆಂಬ[1] ಒಬ್ಬ ಮುಖ್ಯ ಅಧಿಕಾರಿ ಬಹಳ ಒತ್ತಾಯಮಾಡಿ ಹೇಳಿದ, ಆನೆಯಿಂದ ಇಳಿದು ಕುದುರೆಯನ್ನೇರುವಂತೆ. ಆತ ಸುಲ್ತಾನ್ ಸೂಜ ಕುಳಿತ ಆನೆಯ ಕಡೆಗೆ ಓಡಿಬಂದು ಕೈ ಮುಗಿಯುತ್ತಾ, 'ಎಲೈ ರಾಜಕುಮಾರ, ಓಡಿಹೋಗುವ ಸೈನ್ಯ ವನ್ನು ತ್ವರಿತವಾಗಿ ಬೆನ್ನಟ್ಟಿಸಿಕೊಂಡುಹೋಗದೆ, ಇನ್ನೂ ಆನೆಯ ಮೇಲೆ ಕುಳಿತಿರುವೆ ಯಲ್ಲಾ ! ಏರು ನಿನ್ನ ತೇಜಿಯನ್ನು ! ಇಂಡೀಸಿನ ರಾಜ ನೀನು !' ಈ ಮಾತುಗಳನ್ನು ಕೇಳಿ ಸುಲ್ತಾನ್ ಸೂಜ ಆನೆಯಿಂದಿಳಿದು ಕುದುರೆಯನ್ನೇರಿ ದೌಡಾಯಿಸಿದವನು ಸೈನ್ಯ ದಿಂದ ಕಣ್ಮರೆಯಾಗಿಬಿಟ್ಟ. ಇದನ್ನು ಕಂಡ ಸೈನ್ಯ ಅವನು ಸತ್ತಿರಬೇಕು, ಇಲ್ಲ ತಮ್ಮನ್ನೆಲ್ಲಾ ಬಿಟ್ಟೋಡಿರಬೇಕು ಎಂಬ ಭಾವನೆಗೊಳಪಟ್ಟಿತು. ದಿಕ್ಕೆಟ್ಟ ಸೈನ್ಯ ದಿಕ್ಕಾ ಪಾಲಾಗಿ ಓಡಿತು. ಮತ್ತೊಮ್ಮೆ ಸೈನ್ಯದಲ್ಲಿ ಶಿಸ್ತನ್ನು ತರುವುದೇ ಕಷ್ಟವಾಯಿತು.

ಯುದ್ಧದ ದಿಕ್ಕೇ ಬದಲಾದುದನ್ನು ಕಂಡ ಜಸ್ವಂತ್‌ಸಿಂಗ್ ತನ್ನ ಸೂರೆಯಲ್ಲಿ ಆದಷ್ಟು ಗಿಟ್ಟಿಸಿಕೊಂಡು. ಕಾಲ ವಿಳಂಬಮಾಡದೆ ಆಗ್ರಾಕ್ಕೆ ಹಿಂದಿರುಗಿದ. ಅಲ್ಲಿಂದ ತನ್ನ ರಾಜ್ಯಕ್ಕೆ ಹೋಗಿಬಿಡುವುದು ಆತನ ಉದ್ದೇಶವಾಗಿತ್ತು. ಔರಂಗಜೇಬ ಸೋತು ಹೋದನೆಂದೂ, ಅವನನ್ನೂ ಮೀರ್ ಜುಮ್ಲಾನನ್ನೂ ಸೆರೆಹಿಡಿದಿದ್ದಾರೆಂದೂ, ಸುಲ್ತಾನ್ ಸೂಜ ಜಯಭೇರಿ ಹೊಡೆದುಕೊಂಡು ಆಗ್ರಾ ಕಡೆ ಬರುತ್ತಿದ್ದಾನೆಂದೂ ಆಗ್ರಾದಲ್ಲಿ ಸುದ್ದಿ ಆಗಲೇ ಹಬ್ಬಿತ್ತು. ಆಗ್ರಾ ನಗರದ ರಾಜ್ಯಪಾಲನಾಗಿದ್ದ ಷೈಸ್ತಾಖಾನನು ಈ ಸುದ್ದಿ ಯನ್ನು ನಿಜವೆಂದು ಭಾವಿಸಿದ. ನಂಬಿಕೆಗೆ ದ್ರೋಹಮಾಡಿದ ಜಸ್ವಂತ್‌ಸಿಂಗನು ನಗರದ ಹೆಬ್ಬಾಗಿಲನ್ನು ಸಮೀಪಿಸಿದ್ದನ್ನು ಕಂಡು, ಆತ ದಿಕ್ಕುಕಾಣದೆ ಒಂದು ಬಟ್ಟಲು ವಿಷವನ್ನು ಕೈಯಲ್ಲಿ ಹಿಡಿದು ಇನ್ನೇನು ಕುಡಿದು ಬಿಡುವವನಿದ್ದ. ಅಷ್ಟರಲ್ಲಿ ಅವನ ಅಂತಃಪುರದ ಸ್ತ್ರೀಯರು ವಿಷದ ಬಟ್ಟಲನ್ನು ಕಿತ್ತೆಸೆದು ಅವನ ಪ್ರಾಣ ಉಳಿಸಿದರು. ಸುದ್ದಿ ಸುಳ್ಳೆಂದು ಆಗ್ರಾ ನಗರದ ಜನಗಳಿಗೆ ಮನವರಿಕೆಯಾಗಬೇಕಾದರೆ ಎರಡು ದಿನಗಳು ಹಿಡಿದುವು. ಜಸ್ವಂತ್‌ಸಿಂಗನು ಧೈರ್ಯ ಹಾಗೂ ದೃಢಮನಸ್ಸು ಮಾಡಿದ್ದರೆ ಷಾಜಹಾನನನ್ನು ಬಂಧನದಿಂದ ಬಿಡುಗಡೆಮಾಡಬಹುದಿತ್ತು. ಆದರೆ ಅವನಿಗೆ ಸತ್ಯಾಂಶ ಏನೆಂದು ತಿಳಿದಿದ್ದ ಕಾರಣ ರಾಜಧಾನಿಯಲ್ಲಿ ಅವನು ಹೆಚ್ಚು ಕಾಲ ನಿಲ್ಲುವ ಧೈರ್ಯಮಾಡಲಿಲ್ಲ ; ಅಥವಾ, ಮತ್ತಾವ ಶೌರ್ಯದ ಕೆಲಸಕ್ಕೂ ಕೈಹಾಕಲಿಲ್ಲ. ಸುಮ್ಮನೆ ನಗರದ ಮೂಲಕ ತನ್ನ ರಾಜ್ಯಕ್ಕೆ ಹೋಗಿಬಿಟ್ಟ, ಅಷ್ಟೆ.

ಅತ್ತ ಔರಂಗಜೇಬ ಜಸ್ವಂತ್‌ಸಿಂಗನು ಆಗ್ರಾದಲ್ಲಿ ಏನೆಲ್ಲ ಮಾಡಿಬಿಟ್ಟಿದ್ದಾನೋ

---

[1]ಅಲಿವರ್ದಿಖಾನ್ : ಪಟ್ಣದ ಕೊತ್ವಾಲ. ಸುಲ್ತಾನ್ ಸೂಜನ ಪಕ್ಷವಹಿಸಿ, ಕೊನೆಗೆ ಅವನೊಡನೆ ಬಂಗಾಳಕ್ಕೆ ಹೋದ. ಅಲ್ಲಿ ೧೬೫೯ ರಲ್ಲಿ ಕೊಲ್ಲಲ್ಪಟ್ಟನು.

ಎಂದು ಭಾವಿಸಿ, ಮತ್ತು ಆ ಕಾರಣದಿಂದ ಆಗ್ರಾ ನಗರ ದಂಗೆಎದ್ದರೂ ಏಳಬಹುದು ಎಂದು ಊಹಿಸಿ, ಹಿಮ್ಮೆಟ್ಟುತ್ತಿದ್ದ ಸುಲಾನ್ ಸೂಜನ ಬೆನ್ನುಹತ್ತದೆ ತನ್ನ ಇಡೀ ಸೈನ್ಯ ಸಮೇತ ಆಗ್ರಾ ಕಡೆಗೆ ಹೊರಟ. ಹೀಗೆ ಮಾಡಿದ ಸ್ವಲ್ಪ ಹೊತ್ತಿನಲ್ಲಿಯೇ ಗೊತ್ತಾಯಿತು, ತಾನು ಇಲ್ಲಿಯವರಿಗೆ ಎದುರಿಸಿದ ಸೈನ್ಯಕ್ಕೆ ಯಾವ ರೀತಿಯಲ್ಲೂ ಪೆಟ್ಟಾಗಿಲ್ಲ ಎಂದು. ಅಷ್ಟೇ ಅಲ್ಲದೆ, ದಿನವೂ ರಾಜರುಗಳು ಸುಲ್ತಾನ್ ಸೂಜನ ಐಶ್ವರ್ಯ ಹಾಗೂ ಔದಾರ್ಯಗಳಿಂದಾಗಿ ತಮ್ಮ ಸೈನ್ಯಗಳನ್ನು ಅವನ ನೆರವಿಗಾಗಿ ಕಳುಹಿಸಿಕೊಡುತ್ತಿದ್ದಾರೆ ಎಂದು ತಿಳಿಯಿತು. ಸುಲ್ತಾನ್ ಸೂಜ ಬಂಗಾಳಕ್ಕೆ ಬೀಗದ ಕೈಯಂತಿರುವ ಎಲಬಾಸ್ (ಅಲಹಾಬಾದ್) ಎಂಬ ಸ್ಥಳದಲ್ಲಿ ಸೈನ್ಯವನ್ನು ಸಜ್ಜಗೊಳಿಸುತ್ತಿದ್ದನೆಂಬ ಸಂಗತಿಯೂ ಔರಂಗಜೇಬನಿಗೆ ಗೊತ್ತಾಯಿತು. ಗಂಗಾನದಿಯನ್ನು ದಾಟಿ ಬಂಗಾಳಕ್ಕೆ ಹೋಗಬೇಕಾದರೆ ಎಲಬಾಸ್ ಆಯಕಟ್ಟಿನ ಸ್ಥಳವಾಗಿತ್ತು.

ಈ ಪರಿಸ್ಥಿತಿಯಲ್ಲಿ ಔರಂಗಜೇಬ ತನ್ನ ಸಮೀಪದಲ್ಲಿದ್ದ ಇಬ್ಬರ ಸಹಾಯವನ್ನು ಉಪಯೋಗಿಸಿಕೊಳ್ಳಬೇಕೆಂದು ಮನಸ್ಸುಮಾಡಿದ. ಒಬ್ಬ, ತನ್ನ ಹಿರಿಯ ಮಗ ಸುಲ್ತಾನ್ ಅಹಮದ್ ; ಇನ್ನೊಬ್ಬ, ಮೀರ್ ಜುಮ್ಲಾ. ಔರಂಗಜೇಬನಿಗೆ ಗೊತ್ತಿತ್ತು, ರಾಜನಾದವನಿಗೆ ಸಹಾಯಮಾಡಿ ಅವನಿಗೆ ಬೇಕಾದವರೆನಿಸಿಕೊಂಡವರು ತಾವು ಸಲ್ಲಿಸಿದ ಸೇವೆಗೆ ರಾಜನಾದವನು ಏನು ಉಪಕಾರ ಮಾಡಿದರೂ ಅಲ್ಪವೆ ಎಂದು ಭಾವಿಸುತ್ತಾರೆ ಎಂದು. ಆಗಲೇ ಔರಂಗಜೇಬನ ಹಿರಿಯ ಮಗ ಸುಲ್ತಾನ್ ಮಹಮ್ಮದ್ ತಂದೆಗೆ ಅವಿಧೇಯನಾಗಿ ವರ್ತಿಸುತ್ತಿರುವುದು ಕಂಡುಬಂದಿತ್ತು. ಆಗ್ರಾ ಕೋಟೆಯನ್ನು ವಶಪಡಿಸಿಕೊಳ್ಳುವುದರಲ್ಲಿ ತಾನು ತೋರಿದ ಯುಕ್ತಿ–ಶಕ್ತಿಗಳ ಬಗ್ಗೆ ಮಹಮದ್ ಜಂಭಕೊಚ್ಚಿಕೊಂಡದ್ದೂ ಕೊಚ್ಚಿಕೊಂಡದ್ದೆ. ತಾತ ಷಾಜಹಾನನ್ನು ಸಹ ದಿಗ್ಭ್ರಮೆಗೊಳಿಸಿದೆನೆಂದು ವೊಮ್ಮಗ ತಾನೇ ಬೆನ್ನುತಟ್ಟಿಕೊಳ್ಳುತ್ತಿದ್ದ. ಮೀರ್ ಜುಮ್ಲಾನ ಮೇಧಾಶಕ್ತಿ, ವರ್ತನೆ ಹಾಗೂ ಧೈರ್ಯಗಳನ್ನು ಔರಂಗಜೇಬನು ಮೆಚ್ಚಿಕೊಂಡಿದ್ದ. ಆದರೆ ಈ ಸದ್ಗುಣಗಳೇ ಅವನ ಮನಸ್ಸಿನಲ್ಲಿ ಭೀತಿ ಹಾಗೂ ಅಪನಂಬಿಕೆಗಳನ್ನು ಹುಟ್ಟಿಸಿದ್ದುವು. ಮೀರ್ ಜುಮ್ಲಾನ ಅಪಾರ ಐಶ್ವರ್ಯ, ಇಂಡಿಯಾದ ಪ್ರಮುಖ ವಿಚಾರಗಳಲ್ಲೆಲ್ಲಾ ಆತನ ಕೈವಾಡ ಮತ್ತು ಆತನು 'ಇಂಡಿಯಾ'ದ ಬಹು ವಿಚಕ್ಷಣೆಯ ರಾಜನೀತಿಜ್ಞನೆಂಬ ಕೀರ್ತಿ–ಇವುಗಳಿಂದ ಸುಲ್ತಾನ್ ಮಹಮ್ಮದನಂತೆಯೇ ಆತನೂ ಹಿರಿಯ ಆಸೆಗಳ ಕನಸು ಕಾಣುತ್ತಿದ್ದಾನೆಂದು ಔರಂಗಜೇಬನಿಗೆ ಗೊತ್ತಿಲ್ಲದೆ ಇರಲಿಲ್ಲ.

ಇಂಥ ವಿಚಾರಗಳು ಸಾಮಾನ್ಯ ಬುದ್ಧಿಯವರನ್ನೂ ದಿಗ್ಭ್ರಮೆಗೊಳಿಸಿಬಿಡುತ್ತಿದ್ದುವು. ಆದರೆ ಔರಂಗಜೇಬನು ಅಂತಹ ಸಾಮಾನ್ಯ ಬುದ್ಧಿಯವನಲ್ಲ. ಉಪಾಯದಿಂದ ಅವರಿಬ್ಬರನ್ನೂ ದೂರ ಸಾಗಿಸಿ ತಾನು ದೂರಿಗೆ ಸಿಕ್ಕಿಕೊಳ್ಳದಂತೆ ಮಾಡಿಕೊಳ್ಳುವ ಯುಕ್ತಿಮಾರ್ಗ ಅವನಿಗೆ ಗೊತ್ತಿತ್ತು. ಅವನು ದೊಡ್ಡ ಸೈನ್ಯವೊಂದನ್ನು ಅವರಿಬ್ಬರ ವಶಕ್ಕೆ ಒಪ್ಪಿಸಿ, ಸುಲ್ತಾನ್ ಸೂಜನ ಮೇಲೆ ಹೋಗಲು ಅವರನ್ನು ಕಳುಹಿಸಿದ. ಮೀರ್ ಜುಮ್ಲಾನ ಕಿವಿಯಲ್ಲಿ ಹೇಳಿದ, "ಬೆಲೆಯಾದ ಬಂಗಾಳ ರಾಜ್ಯ ಜೀವಮಾನದ ಪರ್ಯಂತ

ನಿನ್ನದು ; ಅಷ್ಟೇ ಅಲ್ಲದೆ, ನಿನ್ನ ಮರಣಾನಂತರವೂ ಅದು ನಿನ್ನ ಮಗನಿಗೆ ಸೇರಬೇಕೆಂದು ನನ್ನ ಇಚ್ಛೆ ; ಇದು ನೀನು ಸಲ್ಲಿಸುವ ಅಮೋಘ ಸೇವೆಗೆ ಅಲ್ಪಕಾಣಿಕೆ ; ಮುಂದೆ ಸೂಜ ನನ್ನು ಸೋಲಿಸಿದ ತರುವಾಯ ಹಿಂದೂಸ್ಥಾನದ ಅತಿ ದೊಡ್ಡ ಬಿರುದಾದ 'ಅಮೀರ್-ಉಲ್-ಉಮ್‌ರಾ' (ಅಮೀರರ ಅರಸು) ಎಂಬ ಬಿರುದು ನಿನಗಾಗಿ ಕಾದಿದೆ !" ಹೀಗೆಲ್ಲಾ ಹೇಳಿ ಮೀರ್ ಜುಮ್ಲಾನನ್ನು ಪುಸಲಾಯಿಸಿದ.

ಮಗ ಸುಲ್ತಾನ್ ಮುಹಮ್ಮದನಿಗೆ ಔರಂಗಜೇಬ ಇಷ್ಟೇ ಹೇಳಿದ : "ನೀನು ನನ್ನ ಮಕ್ಕಳಲ್ಲಿ ಮೊದಲಿಗ ಎಂಬುದನ್ನು ನೆನೆದುಕೊ. ನಿನ್ನವೇ ಆದ ಕದನಗಳಲ್ಲಿ ನೀನೇ ಭಾಗವಹಿಸಿ ವಿಕ್ರಮ ಸಾಧಿಸಬೇಕಾಗಿದೆ ಎಂಬುದನ್ನು ಅರಿತುಕೊ. ಬಹಳಷ್ಟು ಮಾಡಿದ್ದೀಯೇ. ಆದರೂ ಸರಿಯಾಗಿ ತೂಗಿನೋಡಿದರೆ, ಸುಲ್ತಾನ್ ಸೂಜನ ಹವಣಿಕೆಗಳನ್ನೆಲ್ಲಾ ತಲೆಕೆಳಕುಮಾಡಿ ಅವನನ್ನು ನಿನ್ನ ಕೈವಶಮಾಡಿಕೊಳ್ಳುವವರೆಗೆ ನೀನೇನೂ ಸಾಧಿಸಿಲ್ಲವೆಂದೇ ಹೇಳಬೇಕು. ನಮ್ಮ ವಿರೋಧಿಗಳಲ್ಲೆಲ್ಲಾ ಬಹು ಬಲಾಢ್ಯನೆಂದರೆ ಅವನೆ !"

ಇಷ್ಟು ಹೇಳಿ, ಔರಂಗಜೇಬ ಅವರಿಬ್ಬರಿಗೂ ಕಿಂಕಾಪಿನ ಸೆರಪಾಗಳನ್ನು (ಉಡುಪು) ಮತ್ತು ಬಹು ಸುಂದರವಾಗಿ ಅಲಂಕರಿಸಲ್ಪಟ್ಟ ಹಲವು ಆನೆ ಕುದುರೆಗಳನ್ನು ಕೊಟ್ಟು ಗೌರವಿಸಿದ. ಹೇಗೋ ಮಾಡಿ, ಮಗನ ಹೆಂಡತಿಯನ್ನೂ (ಗೋಲ್ಕೊಂಡ ರಾಜನ ಮಗಳು), ಮೀರ್ ಜುಮ್ಲಾನ ಒಬ್ಬನೇ ಮಗ ಮುಹಮ್ಮದ್ ಎಮೀರ್‌ಖಾನನನ್ನೂ ತನ್ನ ಹತ್ತಿರವೇ ಇರಿಸಿಕೊಂಡ. ಸೊಸೆಯನ್ನು ಇರಿಸಿಕೊಳ್ಳಲು ಕಾರಣ, ಆಕೆಯಂಥ ಕುಲೀನಸ್ತ್ರೀ ಯುದ್ಧರಂಗದಲ್ಲಿ ಇದ್ದರೆ ಸೈನ್ಯದ ಕಾರ್ಯಾಚರಣೆಗೆ ಅಡ್ಡಿ ಆತಂಕ ಬರುತ್ತವೆ ಎಂಬುದು. ಮೀರ್ ಜುಮ್ಲಾನ ಮಗನನ್ನು ಇರಿಸಿಕೊಂಡ ಕಾರಣ, ತನಗೆ ಆ ಯುವಕನನ್ನು ಕಂಡರೆ ಬಹು ಇಷ್ಟ, ಅವನ ವಿದ್ಯಾಭ್ಯಾಸದ ಬಗ್ಗೆ ತಾನು ಗಮನ ಕೊಡಬೇಕಾಗಿದೆ ಎಂಬುದು. ಆದರೆ ಅವರಿಬ್ಬರೂ ಆ ಸೇನಾಪತಿಗಳ ನಂಬಿಕೆಗಾಗಿ ತನ್ನ ಬಳಿ ಒತ್ತೆಯಾಳುಗಳಾಗಿರಲಿ ಎಂಬುದೇ ಆತನ ಮನಸ್ಸಿನಲ್ಲಿ ಇದ್ದ ಗುಟ್ಟು.

ಸುಲ್ತಾನ್ ಸೂಜನು ಕೆಳ ಬಂಗಾಳದ ರಾಜರುಗಳಿಂದ ಸೆಳೆಯುತ್ತಿದ್ದ ಹಣದಿಂದಾಗಿ ಅವರು ತನ್ನ ಮೇಲೆ ದಂಗೆ ಎದ್ದರೂ ಏಳಬಹುದೆಂದು ಆತನಿಗೆ ಯಾವಾಗಲೂ ಹೆದರಿಕೆ ಇದ್ದೇ ಇತ್ತು. ಹೀಗಾಗಿ ಔರಂಗಜೇಬನು ಮೇಲೆ ಹೇಳಿದಂತೆ ಮಾಡಿದ ವ್ಯವಸ್ಥೆಯನ್ನು ತಿಳಿದಕೂಡಲೇ ಅವನು ಎಲಬಾಸ್‌ನಲ್ಲಿ ತಾನು ಹೂಡಿದ್ದ ಸೇನಾಶಿಬಿರವನ್ನು ಕಿತ್ತು, ಬನಾರಸ್ ಮತ್ತು ಪಟ್ನಾ ಮುಖಾಂತರ ಮೊಂಘೈರ್ ಕಡೆಗೆ ಹೊರಟನು. ಆ ಸ್ಥಳ ಸೇರಿ, ಅಲ್ಲಿ ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡನು. ಪಟ್ನಾ ಹಾಗೂ ಗಂಗಾನದಿಯಿಂದ ಹಿಡಿದು ಪರ್ವತಗಳವರೆಗೆ ಹಬ್ಬಿದ ಈ ಕೋಟೆಯನ್ನು ನಾನು ಹಲವು ವರ್ಷಗಳ ತರುವಾಯ ನೋಡಿದ್ದೇನೆ. ಈ ಆಯಕಟ್ಟಿನ ಸ್ಥಳದಲ್ಲಿ ಬೀಡುಬಿಟ್ಟ ಸುಲ್ತಾನ್ ಸೂಜ ಶತ್ರುವಿನ ಬರುವಿಕೆಗಾಗಿ ಕಾಯ್ದು. ಆದರೆ ಮೀರ್ ಜುಮ್ಲಾ ತನ

ಸೈನ್ಯ ಸಮೇತ ಗಂಗಾನದಿಯ ಕಣಿವೆಗಳ ಕೆಳಗಿಳಿಯುತ್ತಿರುವುದು ಕೇವಲ ತೋರಿಕೆಗಾಗಿ ಯೆಂದೂ, ವಾಸ್ತವವಾಗಿ ಅವನು ಸೈನ್ಯದ ಜೊತೆ ಇಲ್ಲವೆಂದೂ, ಪರ್ವತ ಪ್ರದೇಶ ಗಳಲ್ಲಿರುವ ರಾಜರುಗಳನ್ನು ತನ್ನ ಕಡೆ ಸೆಳೆದುಕೊಂಡು ಅವರ ರಾಜ್ಯಗಳ ಮೂಲಕ ರಾಜಮಹಲ್ ಕಡೆಗೆ ಅವನೂ ಸುಲ್ತಾನ್ ಮಹಮ್ಮದನೂ ಬಹು ತ್ವರಿತವಾಗಿ ಮುನ್ನುಗ್ಗಿ ತನ್ನನ್ನು ಬಂಗಾಳದಿಂದಲೇ ಓಡಿಸುವ ಸನ್ನಾಹಮಾಡಿದ್ದಾರೆಂದೂ ಸುಲ್ತಾನ್ ಸೂಜನಿಗೆಗೊತ್ತಾದಾಗ, ಆತ ಅಷ್ಟು ಶ್ರಮವಹಿಸಿ ಕಟ್ಟಿದ ಕೋಟೆ ಕೊತ್ತಲಗಳನ್ನು ತ್ಯಜಿಸಿ ತ್ವರಿತದಿಂದ ರಾಜಮಹಲ್ ಕಡೆಗೆ ಧಾವಿಸಿದನು. ಮೀರ್ ಜುಮ್ಲಾ ಅಲ್ಲಿಗೆ ಬರುವ ಮುನ್ನವೇ ಆತ ಆ ಸ್ಥಳವನ್ನು ತಲುಪಿದ. ಸುಲ್ತಾನ್ ಸೂಜ ರಾಜಮಹಲನ್ನು ತಲುಪುವುದನ್ನು ತಪ್ಪಿಸಲು ಸಾಧ್ಯವಿಲ್ಲವೆಂದು ತಿಳಿದಾಗ ಮೀರ್ ಜುಮ್ಲಾ ಮತ್ತು ಸುಲ್ತಾನ್ ಮಹಮ್ಮದರು ಎಡಕ್ಕೆ ಗಂಗಾನದಿಯ ಕಡೆಗೆ ತಿರುಗಿದರು. ಅವರು ರಾಜ-ಮಹಲಿನತ್ತ ತಮ್ಮ ಸೈನ್ಯ, ಫಿರಂಗಿ ಹಾಗೂ ಸಾಮಾನು ಸರಂಜಾಮುಗಳನ್ನು ಕಳುಹಿಸಿ ಕೊಟ್ಟಿದ್ದರು. ಅವುಗಳನ್ನು ತಮ್ಮ ಸ್ವಾಧೀನಕ್ಕೆ ಪಡೆಯಲು ಅತ್ಯಂತ ಕಠಿಣವಾದ ಅಡ್ಡದಾರಿಗಳಲ್ಲಿ ನಡೆದರು. ಕೊನೆಗೆ ಅವನ್ನು ಪಡೆದುಕೊಂಡನಂತರ ಅವರಿಬ್ಬರೂ ಸುಲ್ತಾನ್ ಸೂಜನ ಮೇಲೆ ಬಿದ್ದರು. ಸೂಜ ಐದಾರು ದಿನಗಳ ಕಾಲ ಹೋರಾಡಿದ. ಕೇವಲ ಮಣ್ಣಿನಿಂದ ಕಟ್ಟಿದ್ದ ಕೋಟೆಯನ್ನು ಕೆಡವಿಹಾಕಲು ಮೀರ್ ಜುಮ್ಲಾನ ಫಿರಂಗಿಗಳಿಗೆ ಕಷ್ಟವಾಗಲಿಲ್ಲ. ಇದನ್ನು ಕಂಡ ಸೂಜ ಇನ್ನೇನು ಆರಂಭವಾಗಲಿದ್ದ ಮಳೆಯಲ್ಲಿ ತನ್ನ ಸ್ಥಿತಿ ಮತ್ತಷ್ಟು ಕಷ್ಟವಾಗುವುದೆಂದು ಅರಿತು, ರಾತ್ರಾ ರಾತ್ರಿಯೇ ಕತ್ತಲಲ್ಲಿ ಕಣ್ಮರೆಯಾದ. ರಾತ್ರಿಯೇ ವೇಳೆ ಏನಾದರೂ ಮೋಸವಾದಿತೆಂದು ಹೆದರಿದ ಮೀರ್ ಜುಮ್ಲಾ ಶತ್ರುವನ್ನು ಹಿಂಬಾಲಿಸುವ ಗೋಜಿಗೆ ಹೋಗಲಿಲ್ಲ. ಬೆಳಕು ಹರಿಯುವುದೇ ತಡ, ಮಳೆ ಭೋರೆಂದು ಬಂದೇಬಿಟ್ಟಿತು. ಆ ಭಾರಿ ಮಳೆಯಲ್ಲಿ ರಾಜಮಹಲ್ ಬಿಡುವುದು ಅಸಾಧ್ಯವಾಯಿತು. ಇದು ಸುಲ್ತಾನ್ ಸೂಜನ ಅದೃಷ್ಟ. ಏಕೆಂದರೆ, ಇನ್ನೂ ಜುಲೈ, ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್-ಈ ನಾಲ್ಕೂ ತಿಂಗಳು ಮಳೆಗಾಲ. ಆ ವೇಳೆ ಎಲ್ಲೆಲ್ಲೂ ನೀರು. ಸೈನ್ಯದ ಚಲನೆಗೆ ತುಂಬಾ ಅಡ್ಡಿ. ಹೀಗಾಗಿ ಮೀರ್ ಜುಮ್ಲಾ ತನ್ನ ಸೈನ್ಯವನ್ನು ಮಳೆಗಾಲದವರೆಗೆ ರಾಜಮಹಲಿನಲ್ಲಿಯೇ ಇಡಬೇಕಾಯಿತು. ಸುಲ್ತಾನ್ ಸೂಜ ತನಗೆ ಬೇಕಾದ ಕಡೆ ನಿಂತು, ಸೈನ್ಯವನ್ನು ಸಜ್ಜುಗೊಳಿಸುವುದಕ್ಕೆ ಅವಕಾಶ ಸಿಕ್ಕಿತು. ಕೆಳ ಬಂಗಾಳದಿಂದ ಅನೇಕ ಜನ ಪೋರ್ಚುಗೀಸರು ತಮ್ಮ ಹಲವಾರು ಫಿರಂಗಿಗಳ ಸಮೇತ ಬಂದರು. ಬಹು ಫಲವತ್ತಾದ ಭೂಮಿಯ ಕಾರಣವಾಗಿ ಯೂರೋಪಿಯನರು ಬಹು ಸಂಖ್ಯೆಯಲ್ಲಿ ಈ ಪ್ರದೇಶಕ್ಕೆ ಬಂದು ನೆಲೆಸಿದ್ದಾರೆ. ಸುಲ್ತಾನ್ ಸೂಜ ಈ ಪರದೇಶೀಯರನ್ನು ಪ್ರೋತ್ಸಾಹಿಸುತ್ತಾ ಬಂದಿದ್ದಾನೆ. ಅದರಲ್ಲಿಯೂ, ಪೋರ್ಚುಗೀಸ್ ಮಿಷನರಿ ಪಾದ್ರಿಗಳಿಗೆ ಆತ ಹೆಚ್ಚು ಪ್ರೋತ್ಸಾಹ ನೀಡಿದ್ದಾನೆ. ಅವರು ಎಲ್ಲಿ ಬೇಕಾದರೆ ಅಲ್ಲಿ ಇಗರ್ಜಿಗಳನ್ನು ಕಟ್ಟಲೂ,

ಇಷ್ಟಬಂದಷ್ಟು ಸಂಪತ್ತನ್ನು ಗಳಿಸಲೂ ಉತ್ತೇಜನ ಕೊಡುತ್ತಿದ್ದಾನೆ. ಈಗ ಬಂಗಾಳ ದಲ್ಲಿರುವ ಫರಂಗಿ ಸಂಸಾರಗಳ ಸಂಖ್ಯೆ ಕನಿಷ್ಟಪಕ್ಷ ಎಂಟೊಂಬತ್ತು ಸಾವಿರ ಆಗುತ್ತದೆ.

ಮಳೆಗಾಲದ ಅವಧಿಯಲ್ಲಿ ಸುಲ್ತಾನ್ ಮಹಮ್ಮದ್ ಮತ್ತು ಮೀರ್ ಜುಮ್ಲಾ ಇವರಿಬ್ಬರಲ್ಲಿ ತೀವ್ರವಾದ ಮನಸ್ತಾಪ ಹುಟ್ಟಿತು. ಸುಲ್ತಾನ್ ಮಹಮ್ಮದ್ ತಾನೇ ಮುಖ್ಯ ಸೇನಾಧಿಪತಿಯೆಂದು ಹೇಳಿಕೊಳ್ಳುತ್ತಾ ಮೀರ್ ಜುಮ್ಲಾನನ್ನು ತಿರಸ್ಕಾರದಿಂದ ಕಾಣಲಾರಂಭಿಸಿದ. ತಂದೆ ಔರಂಗಜೇಬನ ಬಗ್ಗೆಯೇ ಅವಿಧೇಯತೆಯ ಮಾತುಗಳು ಅವನ ಬಾಯಿಂದ ಬರುತ್ತಿದ್ದವು. ಆಗ್ರಾ ವಶಮಾಡಿಕೊಂಡ ಬಗ್ಗೆ ತನ್ನ ಪ್ರತಾಪವನ್ನು ಹೇಳಿಕೊಂಡು, ಕಿರೀಟಕ್ಕಾಗಿ ಔರಂಗಜೇಬ ತನಗೆ ಕೃತಜ್ಞನಾಗಿರಬೇಕೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದ. ಈ ವಿಚಾರ ಔರಂಗಜೇಬನ ಕಿವಿಮುಟ್ಟಿತು. ತಂದೆ ಸಿಟ್ಟಿ-ಗೆದ್ದಿದ್ದಾನೆಂಬ ಸುದ್ದಿ ಸುಲ್ತಾನ್ ಮಹಮ್ಮದನಿಗೆ ತಿಳಿದುಬಂದಿತು. ತನ್ನನ್ನೆಲ್ಲಿ ಮೀರ್ ಜುಮ್ಲಾನಿಂದ ಹಿಡಿಸಿಬಿಡುವನೋ ಎಂದು ಹೆದರಿದ ಆತ, ಮಿತಪರಿವಾರದೊಡನೆ ಸುಲ್ತಾನ್ ಸೂಜನ ಕಡೆ ಹೋಗಿಬಿಟ್ಟ. ಹೋದವನು, ಅತನಿಗೆ ತಾನು ಸಹಾಯ ಮಾಡುವುದಾಗಿ ಹೇಳಿಕೊಂಡ. ಇದು ಔರಂಗಜೇಬ ಹಾಗೂ ಮೀರ್ ಜುಮ್ಲಾ ಸೇರಿ ಒಡ್ಡಿದ ಬಲೆ ಇರಬೇಕೆಂದು ಅನುಮಾನಪಟ್ಟ ಸುಲ್ತಾನ್ ಸೂಜ, ಮುಹಮ್ಮದನನ್ನು ಮಾಡಿದ ವಾಗ್ದಾನಗಳನ್ನಾಗಲೀ ಅಥವಾ ನಿಷ್ಠೆಯ ಪ್ರಮಾಣವಚನಗಳನ್ನಾಗಲೀ ನಂಬಲಿಲ್ಲ. ಅವನಿಗೆ ಮುಖ್ಯವಾದ ಯಾವ ಸೈನ್ಯಾಧಿಕಾರವನ್ನು ಕೊಡದೆ ಅವನನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದ. ಈ ರೀತಿಯ ವರ್ತನೆಯಿಂದ ಬೇಜಾರುಪಟ್ಟು ಕೊಂಡ ಸುಲ್ತಾನ್ ಮುಹಮ್ಮದನು ಹಲವು ತಿಂಗಳುಗಳ ಅನಂತರ ಮತ್ತೆ ಮೀರ್ ಜುಮ್ಲಾನನ್ನೇ ಆಶ್ರಯಿಸಿದನು. ಉಚಿತ ಮರ್ಯಾದೆಯಿಂದ ಅವನನ್ನು ಸ್ವಾಗತಿಸಿದ ಜುಮ್ಲಾ ತಾನು ಔರಂಗಜೇಬನಿಗೆ ಹೇಳಿ ಎಲ್ಲ ಸರಿಪಡಿಸುವುದಾಗಿ ಭರವಸೆ ನೀಡಿದನು.

ನನಗೆ ಜನ ಹೇಳಿದರು, ಸುಲ್ತಾನ್ ಮುಹಮ್ಮದನ ಈ ವಿಚಿತ್ರ ನಡತೆ ಔರಂಗ ಜೇಬನ ಯೋಜನೆಯಂತೆ ನಡೆಯಿತು ಎಂದು. ತನ್ನ ಮಗ ಎಷ್ಟೇ ಅಪಾಯಕ್ಕೊಳ ಗಾದರೂ ಚಿಂತೆಯಿಲ್ಲ, ಸುಲ್ತಾನ್ ಸೂಜನನ್ನು ನಿರ್ನಾಮಮಾಡುವ ಯಾವ ಉದ್ಯ ಮದಲ್ಲೇ ಆಗಲಿ ಅವನನ್ನು ತೊಡಗಿಸುವುದು ಔರಂಗಜೇಬನ ಉದ್ದೇಶವಾಗಿತ್ತು. ಯಾವ ಅವಕಾಶವೇ ಒದಗಲಿ, ಅದನ್ನು ಉಪಯೋಗಿಸಿಕೊಂಡು ಸುಲ್ತಾನ್ ಮುಹಮ್ಮದನನ್ನು ಬಲವಾದ ರಕ್ಷಣೆಯುಳ್ಳ ಸ್ಥಳಗಳಿಗೆ ರವಾನಿಸುವುದಕ್ಕೆ ಒಂದು ನೆವ ಬೇಕಾಗಿತ್ತು. ಈಗ ತನ್ನ ಮಗ ರಾಜಮಹಲಿಗೆ ಹಿಂದಿರುಗಿದನೆಂದು ತಿಳಿದಾಗ ಔರಂಗಜೇಬ ಸಿಟ್ಟಾಗಿ, ಅಥವಾ ಸಿಟ್ಟಾದವನಂತೆ ನಟಿಸುತ್ತ, ಆ ಕೂಡಲೇ ದಿಲ್ಲಿಗೆ ಬರಬೇಕೆಂದು ಮಗನಿಗೆ ಪತ್ರ ಕಳುಹಿಸಿದ. ಆ ರಾಜಕುಮಾರ ಈ ಆಜ್ಞೆಯಂತೆ ನಡೆಯದಿರಲು ಧೈರ್ಯಮಾಡಲಿಲ್ಲ. ಅವನು ಗಂಗಾನದಿಯನ್ನು ದಾಟಿ ಈಚೆಗೆ ಬಂದನೊ ಇಲ್ಲವೊ, ಶಸ್ತ್ರಸಜ್ಜಿತ ಸೈನ್ಯ ಪಡೆ ಯೊಂದು ಅವನನ್ನು ಹಿಡಿದು ಬಲಾತ್ಕಾರದಿಂದ ಅಂಬಾರಿಯಲ್ಲಿ ಹಾಕಿ, ಗ್ವಾಲಿಯರಿಗೆ

ಕೊಂಡೊಯ್ಯಿತು. ಅಲ್ಲಿಯ ಕೋಟೆಯಲ್ಲಿ ಆತ ಬಹುಶಃ ತನ್ನ ಬಾಳಿನ ಕೊನೆಯನ್ನು ಕಾಣುವನೆಂದು ಕಾಣುತ್ತದೆ.[1]

ಹಿರಿಯ ಮಗನನ್ನು ಈ ರೀತಿ ವಿಲೇವಾರಿಮಾಡಿದ ಮೇಲೆ, ಔರಂಗಜೇಬ ತನ್ನ ಎರಡನೆಯ ಮಗ ಸುಲ್ತಾನ್ ಮುಜಮುನಿಗೆ ಹೇಳಿದ, 'ಆಕಾಶಕ್ಕೆ ಅಡರುವ ಅಣ್ಣನ ಆಸೆಯನ್ನು ಅನುಕರಿಸಬೇಡ. ಆಳುವ ಕಲೆ ಎಷ್ಟು ಸೂಕ್ಷ್ಮವೆಂದರೆ, ಆಳತಕ್ಕವನು ಮಗುವಿನಂತೆ ತನ್ನ ನೆಳಲಿಗೆ ತಾನೇ ಹೊಟ್ಟೆಕಿಚ್ಚುಪಟ್ಟುಕೊಳ್ಳಬೇಕು. ಬುದ್ಧಿವಂತ ನಾಗು. ಇಲ್ಲದಿದ್ದರೆ, ನಿಮ್ಮಣ್ಣನಿಗಾದ ಗತಿಯೇ ನಿನಗೂ ಆಗುತ್ತದೆ ! ಜಹಾಂಗೀರನ ಬಗ್ಗೆ ಆತನ ಮಗ ಷಾಜಹಾನ ನಡೆದುಕೊಂಡಂತೆ ಔರಂಗಜೇಬನ ಬಗ್ಗೆ ಆತನ ಮಕ್ಕಳು ನಡೆದುಕೊಳ್ಳುತ್ತಾರೆಂದು ನೀನು ಭಾವಿಸಿದ್ದರೆ, ಅದು ಕೇವಲ ಅಪಾಯಕಾರಿಯಾದ ಭ್ರಮೆ ; ಅಥವಾ ಷಾಜಹಾನನಂತೆ ಔರಂಗಜೇಬ ತನ್ನ ರಾಜದಂಡವನ್ನು ಕೈಬಿಡುತ್ತಾನೆಂದೂ ತಪ್ಪು ತಿಳಿಯಬೇಡ !'

ಈ ಸಂದರ್ಭದಲ್ಲಿ ನಾನೊಂದು ಮಾತು ಹೇಳಲಿಚ್ಛಿಸುತ್ತೇನೆ. ಅದೇನೆಂದರೆ, ಸುಲ್ತಾನ್ ಮುಜುಮನ ವರ್ತನೆಯಿಂದ ಅವನಿಗೆ ಯಾವುದಾದರೂ ದುರಾಲೋಚನೆಗಳು ಇದ್ದುವೆಂದು ತಂದೆಗೆ ಅನಿಸಬಾರದಾಗಿತ್ತು. ನೀಚ ಗುಲಾಮನೂ ಕೂಡ ಮುಜುಮ ನಷ್ಟು ವಿಧೇಯನಾಗಿರಲಿಲ್ಲ ಎಂದು ಹೇಳಬಹುದು. ಆದರೂ ಅನೇಕ ಬುದ್ಧಿವಂತರು ಹೇಳುತ್ತಾರೆ, ಸುಲ್ತಾನ್ ಮುಜುಮನಿಗೆ ಸಿಂಹಾಸನದ ಮೇಲೆ ಆಸೆ ಇಲ್ಲದೆ ಇರಲಿಲ್ಲ ಎಂದು.[2]

ಇದಕ್ಕೆ ರುಜುವಾತು ಮುಂದೆ ದೊರೆಯಬಹುದು. ಈಗ ಮುಂದೇನಾಯಿತೆಂದು ನೋಡೋಣ.

ಬಂಗಾಳದಲ್ಲಿ ಇಷ್ಟೆಲ್ಲಾ ನಡೆಯುತ್ತಿರುವಾಗ ಸುಲ್ತಾನ್ ಸೂಜ ತನ್ನ ಶಕ್ತಿ ಮೀರಿ ಚತುರನಾದ ವಿರೋಧಿಯನ್ನು ಎದುರಿಸಿದ. ಸೂಕ್ತವೆಂದು ಕಂಡುಬಂದ ಕಾರಣ ಗಂಗಾನದಿಯನ್ನು ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ದಾಟಿದ. ಈ ಮಧ್ಯೆ ಔರಂಗಜೇಬ ಆಗ್ರಾದ ಸುತ್ತಮುತ್ತಲಲ್ಲೇ ಉಳಿದ. ಸೆಲೀಂಫರ್ ಎಂಬ ಕೋಟೆಯಲ್ಲಿಟ್ಟಿದ್ದ ತಮ್ಮನಾದ ಮೊರಾದ್ ಭಕ್ಷನನ್ನು ಗ್ವಾಲಿಯರ್ ಕೋಟೆಯಲ್ಲಿ ಕೂಡಿ

---

[1]ಸುಲ್ತಾನ್ ಮಹಮ್ಮದನನ್ನು ಗ್ವಾಲಿಯರ್‌ನಿಂದ ಸಲೀಂಫರ್‌ಗೆ (ದಿಲ್ಲಿಗೆ) ಸಾಗಿಸಿ, ೧೬೭೬ರ ಡಿಸೆಂಬರ್‌ನಲ್ಲಿ ವಿಷ ಕೊಟ್ಟು ಕೊಲ್ಲಿಸಲಾಯಿತು.

[2]ಮೇಲೆ ಹೇಳಿದ ಈ ಪ್ರಸಂಗದ ವೇಳೆಗೆ ಔರಂಗಜೇಬನಿಗೆ ನಲವತ್ತೊಂದು ವರ್ಷ ಆಗಿತ್ತು. ಆಮೇಲೆ ಆತ ತನ್ನ ತೊಂಬತ್ತನೇ ವರ್ಷದವರೆಗೂ ಬದುಕಿ, ಅಲ್ಲಿಯವರೆಗೂ ರಾಜ್ಯವನ್ನಾಳಿದ. ೧೭೦೭ರಲ್ಲಿ ಕಾಲವಾದಮೇಲೆ ಅದೇ ಸುಲ್ತಾನ್ ಮುಜುಮನು 'ಷಾ ಆಲಂ ಬಹದೂರ್ ಷಾ' ಎಂಬ ಹೆಸರಿನಲ್ಲಿ ಐದು ವರ್ಷಗಳ ಕಾಲ ರಾಜ್ಯವನ್ನಾಳಿದನು.

ಹಾಕಿದ ಮೇಲೆ ದಿಹ್ಲಿಗೆ ಹೋದ. ಅಲ್ಲಿಗೆ ಹೋದವನು ರಾಜನ ಸಕಲ ಅಧಿಕಾರಗಳನ್ನು ಬಹಿರಂಗವಾಗಿ ಚಲಾಯಿಸಲಾರಂಭಿಸಿದ. ಮೊದಲು ದಾರಾನನ್ನು ಗುಜರಾತಿನಿಂದ ಹೊರಗಟ್ಟಬೇಕು—ಇದು ಅವನ ಮುಖ್ಯ ಗುರಿಯಾಗಿತ್ತು. ಆದರೆ ಈಗಾಗಲೇ ನಾನು ಹೇಳಿರುವಂತೆ ಅದು ಅಷ್ಟು ಸುಲಭವಾಗಿರಲಿಲ್ಲ. ಹೀಗಿದ್ದರೂ ಅವನಿಗಿದ್ದ ಅಪೂರ್ವ ಚತುರತೆ ಹಾಗೂ ಅದೃಷ್ಟದ ಅಖಂಡ ಬೆಂಬಲ ಇವು ಎಲ್ಲಾ ಆತಂಕಗಳನ್ನು ನಿವಾರಿಸಿದುವು.

ಖಜುಹಾ ಯುದ್ಧದಲ್ಲಿ ಕೊಳ್ಳೆಹೊಡೆದ ಅಪಾರ ಐಶ್ವರ್ಯದೊಡನೆ ತನ್ನ ರಾಜ್ಯಕ್ಕೆ ಹಿಂತಿರುಗಿದ ಜಸ್ವಂತಸಿಂಗನು, ಆ ಐಶ್ವರ್ಯದಲ್ಲಿ ದೊಡ್ಡ ಸೈನ್ಯವನ್ನು ಕಟ್ಟ ಲಾರಂಭಿಸಿದನು. ಸೈನ್ಯವನ್ನು ಕಟ್ಟಿದ ಅನಂತರ ತಾನು ದಾರಾನನ್ನು ಆಗ್ರಾ ದಾರಿ ಯಲ್ಲಿ ಕೂಡಿಕೊಳ್ಳುವುದಾಗಿಯೂ, ಆತ ನಿಧಾನಮಾಡದೆ ದಂಡೆತ್ತಿಬರಬೇಕೆಂದೂ ದಾರಾನಿಗೆ ತಿಳಿಸಿದನು. ದಾರಾ ಸಹ ದೊಡ್ಡ ಸೈನ್ಯವನ್ನು ಕಟ್ಟಿದ್ದ. ಹೆಸರಾಂತ ಜಸ್ವಂತ ಸಿಂಗನೊಡಗೂಡಿ ಆಗ್ರಾ ಸಮೀಪಿಸಿದರೆ ತನ್ನ ಸ್ನೇಹಿತರೆಲ್ಲ ತನ್ನ ಧ್ವಜದ ಅಡಿ ನೆರೆಯುವ ಧೈರ್ಯಮಾಡುವರೆಂದು ಆತ ನಿರೀಕ್ಷಿಸಿಕೊಂಡು ಅಹಮದಾಬಾದಿನಿಂದ ಹೊರಟು ಆಗ್ರಾಕ್ಕೆ ಏಳೆಂಟು ಮೈಲಿ ದೂರದಲ್ಲಿರುವ ಅಜ್ಮೀರಕ್ಕೆ ಬಂದನು. ರಾಜ ಜಯಸಿಂಗನಾದರೂ ಔರಂಗಜೇಬನೇ ಯುದ್ಧದಲ್ಲಿ ಗೆಲ್ಲುವ ಸಂಭವವುಂಟೆಂದು ಭಾವಿಸಿ, ಆತನ ಮನವೊಲಿಸಿಕೊಳ್ಳುವ ಉದ್ದೇಶದಿಂದ ಜಸ್ವಂತಸಿಂಗನಿಗೆ ಹೇಳಿದ, 'ದಾರಾನ ಪಕ್ಷ ವಹಿಸಬೇಡ' ಎಂದು. ಅವನಿಗೆ ಹೀಗೆಂದು ಪತ್ರ ಬರೆದ : "ಮುಗ್ಗರಿಸುತ್ತಿರುವ ಆ ರಾಜಕುಮಾರನನ್ನು ನೀನು ಎತ್ತುವುದಕ್ಕೆ ಪ್ರಯತ್ನಿಸುವುದರ ಕಾರಣವಾದರೂ ಏನು ? ಇಂಥ ಉದ್ಯಮದಲ್ಲಿ ಪಟ್ಟುಹಿಡಿದರೆ ಅದರಿಂದ ನಿನಗೂ ನಿನ್ನ ಸಂಸಾರಕ್ಕೂ ಕೇಡು ತಪ್ಪದು. ಆ ಉಪಯೋಗವಿಲ್ಲದ ದಾರಾ ಏನೂ ಸಾಧಿಸಿದಂತಾಗುವುದಿಲ್ಲ. ಔರಂಗಜೇಬ ನಿನ್ನನ್ನೆಂದೂ ಕ್ಷಮಿಸಲಾರ. ನಾನೂ ನಿನ್ನಂತೆ ಒಬ್ಬ ರಾಜ. ಆದ್ದರಿಂದ ನಾನು ಹೇಳು ತ್ತಿದ್ದೇನೆ, 'ರಾಜಪುತರ ರಕ್ತವನ್ನು ಬರಿದೆ ವ್ಯರ್ಥಮಾಡಬೇಡ' ಎಂದು. ಬೇರೆ ರಾಜರನ್ನು ನಿನ್ನ ಕಡೆಗೆ ಸೆಳೆದುಕೊಳ್ಳಬಲ್ಲೆನೆಂದು ನೀನು ಉಬ್ಬಬೇಡ. ಏಕೆಂದರೆ, ಅಂಥ ನಿನ್ನ ಪ್ರಯತ್ನವನ್ನು ವಿಫಲಗೊಳಿಸುವ ವಿಧಾನ ನನಗೆ ಗೊತ್ತುಂಟು. ಇದು ಎಲ್ಲಾ 'ಇಂದೂ'ಗಳಿಗೆ(Indou), ಅಂದರೆ ಜೆಂಟೈಲರಿಗೆ, ಸಂಬಂಧಪಟ್ಟ ವಿಷಯ. ದೇಶವನ್ನೇ ಆವರಿಸಿ ಉರಿಯಬಹುದಾದ ಜ್ವಾಲೆಯನ್ನು ಹೊತ್ತಿಸಲು ನಿನಗೆ ಅನುಮತಿ ಸಿಗಲಾರದು. ಅದರ ಬದಲು, ನೀನು ದಾರಾನನ್ನು ಅವನ ಪಾಡಿಗೆ ಬಿಡುವುದಾದರೆ ಔರಂಗಜೇಬ ಹಿಂದಿನದನ್ನೆಲ್ಲಾ ಮರೆತುಬಿಡುವನು. ಅಲ್ಲದೆ ಖಜುಹಾ ಯುದ್ಧದಲ್ಲಿ ಪಡೆದ ಐಶ್ವರ್ಯ ವಾಪಸುಕೊಡೆಂದು ಅವನು ಕೇಳುವುದಿಲ್ಲ. ಅಷ್ಟೇ ಅಲ್ಲ, ಈ ಕೂಡಲೇ ನಿನ್ನನ್ನು ಗುಜರಾತಿನ ರಾಜ್ಯಪಾಲನನ್ನಾಗಿ ನೇಮಿಸುವನು. ನಿನ್ನ ರಾಜ್ಯಕ್ಕೆ ಹತ್ತಿರವಾದ ಪ್ರಾಂತ ವನ್ನು ಆಳುವುದರಲ್ಲಿ ನಿನಗೆಷ್ಟು ಅನುಕೂಲ ಎಂಬುದನ್ನು ನೀನು ಅರಿತುಕೊ. ಅಲ್ಲಿ ನೀನು

ತಾಪತ್ರಯವಿಲ್ಲದೆ ಸುರಕ್ಷಿತವಾಗಿ ಇರಬಲ್ಲೆ. ಮೇಲೆ ಹೇಳಿದಂತೆ ಎಲ್ಲವನ್ನೂ ಚಾಚೂ ತಪ್ಪದೆ ನಡೆಸಿಕೊಡುವ ಭರವಸೆಯನ್ನು ನಾನು ನೀಡುತ್ತೇನೆ"

ಜಯಸಿಂಗನ ಈ ಪತ್ರದಿಂದಾಗಿ ಜಸ್ವಂತಸಿಂಗನು ತನ್ನ ಮನೆಯಲ್ಲಿ ತನ್ನ ಪಾಡಿಗೆ ಇದ್ದುಬಿಟ್ಟ. ಔರಂಗಜೇಬ ತನ್ನ ಇಡೀ ಸೈನ್ಯ ಸಮೇತ ಅಜ್ಮೀರ ತಲುಪಿ, ಅಲ್ಲಿ ದಾರಾನಿಗೆ ಎದುರಾಗಿ ಬೀಡುಬಿಟ್ಟನು.

ಈ ಚರಿತ್ರೆಯನ್ನು ಓದಿದ ಯಾರು ತಾನೆ ದಾರಿತಪ್ಪಿದ ಹಾಗೂ ಮೋಸಕ್ಕೊಳಗಾದ ದಾರಾನ ಬಗ್ಗೆ ವ್ಯಸನಪಡದೆ ಇದ್ದಾರು ! ಜಸ್ವಂತಸಿಂಗನು ನಂಬಿಕೆಗೆ ದ್ರೋಹ ಮಾಡಿದನೆಂದು ಈಗ ಆತನಿಗೆ ಅರಿವಾಯಿತು. ಆದರೆ ಅದರ ದುಷ್ಪರಿಣಾಮದಿಂದ ಪಾರಾಗಲು ಈಗ ಕಾಲ ಮೀರಿಹೋಗಿತ್ತು. ಸಾಧ್ಯವಿದ್ದರೆ ಆತ ತನ್ನ ಸೈನ್ಯವನ್ನು ಹಿಂದಿರುಗಿಸಿಕೊಂಡು ಅಹಮದಾಬಾದಿಗೆ ಹೋಗಿಬಿಡುತ್ತಿದ್ದ. ಆದರೆ ಆ ಬೇಸಗೆಯ ಬಿಸಿಲಿನಲ್ಲಿ ಮತ್ತು ಅಭಾವದ ಪರಿಸ್ಥಿತಿಯಲ್ಲಿ ಹೇಗೆ ತಾನೆ ಹಾಗೆ ಮಾಡಲು ಸಾಧ್ಯವಾದೀತು ? ಮೂವತ್ತೈದು ದಿನಗಳು ಬೇಕಾಗುತ್ತಿತ್ತು, ರಾಜರುಗಳ ಸ್ನೇಹಿತರ ಅಥವಾ ಜಸ್ವಂತಸಿಂಗನ ಪಕ್ಷದವರ ಪ್ರದೇಶದಲ್ಲಿ ಸೈನ್ಯವನ್ನು ಸಾಗಿಸಿ ಹಿಮ್ಮೆಟ್ಟಿಕೊಂಡು ಬರುವ ಔರಂಗಜೇಬನ ಭಾರೀ ಸೈನ್ಯದಿಂದ ಪಾರಾಗಿ ಅಹಮದಾಬಾದ್ ಮುಟ್ಟಲು. 'ಹೀಗಿರುವಾಗ ಯೋಧನಂತೆ ಸಾಯುವುದೇ ಸರಿ. ಅಸಮಾನ ಬಲಗಳ ನಡುವೆ ಯುದ್ಧ ನಡೆಯಬೇಕಾಗಿದೆ, ನಿಜ. ಆದರೆ ಇಲ್ಲಿ, ಈ ಜಾಗದಲ್ಲಿ, ನಾನು ಗೆಲ್ಲಬೇಕು, ಇಲ್ಲ ಸಾಯಬೇಕು' —ಹೀಗೆಂದು ದಾರಾ ನಿರ್ಧರಿಸಿದ. ಆದರೂ ಆತ ತನಗೊದಗಿದ್ದ ಅಪಾಯ ಏನೆಂಬುದನ್ನು ಸರಿಯಾಗಿ ಅರ್ಥಮಾಡಿಕೊಂಡಂತೆ ಕಾಣಲಿಲ್ಲ. ಎಲ್ಲಿ ದ್ರೋಹ ಇಲ್ಲವೆಂದು ನಿರೀಕ್ಷಿಸಿದ್ದನೋ ಅಲ್ಲಿಯೇ ಅದು ಸುಳಿದಾಡಿತು. ಯಾರನ್ನು ನಂಬಬಾರದಾಗಿತ್ತೋ, ಯಾರು ಔರಂಗಜೇಬನೊಡನೆ ಪತ್ರವ್ಯವಹಾರ ನಡೆಸುತ್ತಾ ದಾರಾನ ಸಕಲ ಯೋಜನೆಗಳನ್ನೆಲ್ಲಾ ಅವನಿಗೆ ತಪ್ಪದೆ ತಿಳಿಸುತ್ತಿದ್ದನೋ ಅಂಥ ದ್ರೋಹಿ ಷಾ ನವಾಜ್‌ಖಾನನನ್ನು ನಂಬುವುದನ್ನು ಆತ ಬಿಡಲಿಲ್ಲ. ಆ ದ್ರೋಹಿಗೆ ತರುವಾಯ ತಕ್ಕ ಶಾಸ್ತಿಯೇನೋ ಆಯಿತು. ಅವನು ದಾರಾನಿಂದಲೊ ಅಥವಾ ಔರಂಗಜೇಬನ ಕಡೆಯವರ ಕತ್ತಿಯಿಂದಲೋ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಬಹುಶಃ ಎರಡನೆಯದನ್ನು ಹೆಚ್ಚು ನಂಬಬಹುದೆಂದು ನನಗೆ ಅನಿಸುತ್ತದೆ. ಆದರೆ ಆ ದ್ರೋಹಿ ಸತ್ತದ್ದರಿಂದ ದಾರಾನಿಗೆ ಬಂದ ಭಾಗ್ಯವೇನು ? ಅಹಮದಾಬಾದನ್ನು ಕೈವಶಮಾಡಿಕೊಂಡ ಗಳಿಗೆಯಿಂದ ದಾರಾ ತನ್ನ ಹಿತೈಷಿಗಳ ಮಾತುಗಳನ್ನು ಕೇಳಿ, ಷಾ ನವಾಜ್‌ಖಾನನನ್ನು ತಿರಸ್ಕಾರದಿಂದ ಕಂಡು, ಅವನ ಮಾತಿಗೆ ಮೂರು ಕಾಸಿನ ಬೆಲೆಯನ್ನೂ ಕೊಡಬಾರದಾಗಿತ್ತು.

ಮಾರನೆಯ ದಿನ ಒಂಬತ್ತು ಗಂಟೆಯ ನಂತರ ಹತ್ತು ಗಂಟೆ ಒಳಗೆ ಕದನ ಆರಂಭವಾಯಿತು. ಸುಮಾರಾದ ಒಂದು ಗುಡ್ಡದ ಮೇಲೆ ಹೂಡಿದ್ದ ದಾರಾನ ಫಿರಂಗಿಗಳು ಸಾಕಷ್ಟು ಶಬ್ದವನ್ನೇನೋ ಮಾಡಿದುವು. ಆದರೆ ಫಿರಂಗಿಗಳ ಗುಂಡುಗಳನ್ನು

ಕೇವಲ ಖಾಲಿ ಚರೆಗಳಿಂದ ಹಾರಿಸುವಷ್ಟರ ಮಟ್ಟಿಗೆ ದ್ರೋಹ ಸಾಗಿದ್ದಿತು. ಇದನ್ನು 'ಯುದ್ಧ' ಎಂದು ಕರೆಯಬಹುದಾದರೆ, ಆ ಯುದ್ಧದ ವಿವರಣೆ ಅನಾವಶ್ಯಕ. ಅದು ಆರಂಭವಾದ ಕ್ಷಣದಲ್ಲಿಯೇ ದಾರಾನ ಸೈನ್ಯ ಧೂಳಿಪಟವಾಯಿತು. ಮೊದಲ ಗುಂಡು ಹಾರಿತೊ ಇಲ್ಲವೊ, ಜಯಸಿಂಗ ದಾರಾನಿಗೆ ಕಾಣುವ ಹಾಗೆ ನಿಂತು 'ಸರಿಯಾಗುವುದನ್ನು ತಪ್ಪಿಸಿಕೊಳ್ಳಬೇಕೆಂದಿದ್ದರೆ ಯುದ್ಧರಂಗದಿಂದ ಕೂಡಲೇ ಹೊರಟುಹೋಗಬೇಕೆಂದು' ತನ್ನ ಕಡೆಯ ಅಧಿಕಾರಿಗಳ ಮೂಲಕ ದಾರನಿಗೆ ಹೇಳಿಕಳುಹಿಸಿದ. ಆ ಬಡಪಾಯಿ ರಾಜಕುಮಾರ ಹೆದರಿ ಕಂಗಾಲಾಗಿ ಆತನು ಹೇಳಿದಂತೆ ಕೇಳಿದ; ತನ್ನ ಸಾಮಾನು ಸರಂಜಾಮುಗಳನ್ನು ಏನುಮಾಡಬೇಕೆಂದು ಯಾರಿಗೂ ತಿಳಿಸದೆ ಓಡಿಬಿಟ್ಟ. ಸಧ್ಯ, ಅವನ ಹೆಂಡತಿ ಮಕ್ಕಳನ್ನಾದರೂ ಕರೆದುಕೊಂಡುಹೋಗಲು ಅವಕಾಶ ಸಿಕ್ಕಿತಲ್ಲ ಎಂದು ಅವನನ್ನು ಅಭಿನಂದಿಸಬೇಕು. ಆತ ಜಯಸಿಂಗನ ಹಿಡಿತಕ್ಕೆ ಸಿಕ್ಕಿಬಿಟ್ಟಿದ್ದನೆಂಬುದು ಖಚಿತ. ಅವನ ದಾಕ್ಷಿಣ್ಯದಿಂದಾಗಿಯೇ ಆತ ತಪ್ಪಿಸಿಕೊಳ್ಳಲು ಸಾಧ್ಯವಾಯಿತು. ರಾಜಮನೆತನದವರ ರಕ್ತ ಸುರಿಸಿದರೆ ಒದಗಬಹುದಾದ ಅಪಾಯವನ್ನು ಅರಿತಿದ್ದ ರಾಜಾ ಜಯಸಿಂಗ ಸದಾ ಅವರಿಗೆ ಮರ್ಯಾದೆ ತೋರಿಸುತ್ತಾ ಬಂದಿದ್ದ.

ಈ ರೀತಿಯ ಕಷ್ಟಕ್ಕೀಡಾದ ದಾರಾ ಜೀವಸಹಿತ ಉಳಿಯಬೇಕಾದರೆ ಅಹಮದಾಬಾದ್ ಮುಟ್ಟುವುದೊಂದೇ ಮಾರ್ಗವಾಗಿತ್ತು. ಆತ ಅಲ್ಲಿಗೆ ಧಾವಿಸಿದ. ಶತ್ರು ಪ್ರದೇಶವೆಂದು ಪರಿಗಣಿಸಬಹುದಾದ ದಾರಿಯಲ್ಲಿ ಅವನು ಡೇರೆ ಗುಡಾರಗಳಿಲ್ಲದೆ ಮತ್ತು ಸಾಮಾನು ಸರಂಜಾಮುಗಳಿಲ್ಲದೆ ಓಡಿದ. ಅಜ್ಮೀರದಿಂದ ಅಹಮದಾಬಾದ್‌ವರೆಗೆ ಇರುವ ಪ್ರದೇಶವೆಲ್ಲಾ ರಾಜರುಗಳಿಗೆ ಸೇರಿತ್ತು. ಬಹಳವೆಂದರೆ ದಾರಾನ ಪರಿವಾರದಲ್ಲಿ ಎರಡು ಸಾವಿರ ಜನ ಇದ್ದರು. ಆ ಬಿಸಿಲಿನ ಬೇಗೆ ತಡೆಯಲಸಾಧ್ಯವಾಗಿತ್ತು. 'ಕೂಲ್ಲಿ' (koulley) ಗಳಂತೂ[1] ಅವನನ್ನು ಹಗಲೂ ರಾತ್ರಿ ಬೆನ್ನಟ್ಟಿ, ಸಿಕ್ಕಿದ್ದನ್ನು ಕೊಳ್ಳೆ ಹೊಡೆದರು ಮತ್ತು ಅನೇಕ ಸಿಪಾಯಿಗಳನ್ನು ಕೊಂದುಹಾಕಿದರು. ಹೀಗಾಗಿ ತನ್ನ ಸಿಬ್ಬಂದಿಯಿಂದ ನಾಲ್ಕು ಮಾರು ದೂರ ಹೋಗುವುದೂ ದಾರಾನಿಗೆ ಅಪಾಯಕರವಾಯಿತು. ಈ ಕೂಲ್ಲಿಗಳು ನಾಡಿನ ಈ ಭಾಗದ ರೈತಾಪಿ ಜನ. ಮಹಾ ಠಕ್ಕರು. ಇಡೀ ಇಂಡೀಸಿನಲ್ಲಿ ಯಾವ

---

[1]ಕೂಲ್ಲಿ : ಈ ಪದ ಗುಜರಾತ್, ಕೊಂಕಣ ಮತ್ತು ದಖಿನ್‌ನಲ್ಲಿರುವ 'ಕೋಲಿ' (koli) ಎಂಬ ಜಾತಿಯ ಹೆಸರಿನಿಂದ ಬಂದಿದೆಯೆಂದು ಗೊತ್ತಾಗುತ್ತದೆ. ಕನ್ನಡ ಮತ್ತು ತಮಿಳುಭಾಷೆಗಳಲ್ಲಿ ಉಪಯೋಗದಲ್ಲಿರುವ 'ಕೂಲಿ' ಎಂಬ ಪದದಿಂದ ಬಂದಿರಬಹುದೆಂಬ ಜಿಜ್ಞಾಸೆಯೂ ಉಂಟು. ಖಚಿತವಾಗಿ ಯಾವುದು ಸರಿಯೆಂದು ಹೇಳಲು ಸಾಧ್ಯವಾಗಿಲ್ಲ. ಆದರೆ ದಾರಾನನ್ನು ಹಾಗೂ ಅವನ ಪರಿವಾರದವರನ್ನು ಕೊಳ್ಳೆಹೊಡೆದವರು ಅವರ ಸಾಮಾನುಗಳನ್ನು ಹೊರುತ್ತಿದ್ದ ಕೂಲಿಯವರೇ ಎಂದು ಇಟ್ಟುಕೊಳ್ಳುವುದಾದರೆ 'ಕೂಲ್ಲಿಗಳು' 'ಕೂಲಿಗಳೇ' ಹೊರತು 'ಕೋಲಿ' ಎಂಬ ಜಾತಿಯ ಜನರಲ್ಲ ಎಂದು ಹೇಳಬೇಕಾಗುತ್ತದೆ.

ನೀತಿನಿಯಮಗಳಿಲ್ಲದ ಜನರೆಂದರೆ ಇವರೆ. ಈ ಕೂಲ್ಲಿಗಳ ಕೊಳ್ಳೆಗೆ ಸಿಕ್ಕಿ ತುಂಬಾ ಕಷ್ಟಕ್ಕೆ ಒಳಗಾದ ದಾರಾ ಅಹಮದಾಬಾದಿಗೆ ಇನ್ನೊಂದು ದಿನದ ದಾರಿಯಷ್ಟು ದೂರದಲ್ಲಿ ತಂಗಿ, ಮಾರನೆ ದಿನವೇ ನಗರವನ್ನು ಪ್ರವೇಶಿಸಬೇಕೆಂದು ಯೋಚಿಸಿದ್ದ ; ಅಲ್ಲದೆ, ಸೈನ್ಯವೊಂದನ್ನು ಕಟ್ಟಬೇಕೆಂದೂ ಮಾಡಿದ್ದ. ಆದರೆ ಸೋತವನ ಹಾಗೂ ನತದೃಷ್ಟನ ಆಸೆಗಳು ಕೈಗೂಡುವುದು ಅಪರೂಪ.

ಅಹಮದಾಬಾದ್ ಕೋಟೆಯನ್ನು ರಕ್ಷಿಸುತ್ತಿದ್ದ ರಾಜ್ಯಪಾಲ ತನಗೆ ಒದಗಬಹುದಾದ ಅಪಾಯಗಳಿಗೆ ಹೆದರಿಯೋ, ಅಥವಾ ಔರಂಗಜೇಬನು ತೋರಿಸಿದ ಆಸೆಗಳಿಗೆ ಮರಳಾಗಿಯೋ ಏನೋ, ತನ್ನ ಒಡೆಯನ ಹಿತವನ್ನು ಗಮನಿಸಲಿಲ್ಲ. ಆತ ದಾರಾನಿಗೆ ಒಂದು ಪತ್ರ ಬರೆದು ನಗರವನ್ನು ಪ್ರವೇಶಿಸಕೂಡದೆಂದೂ, ಅದರ ಹೆಬ್ಬಾಗಿಲುಗಳನ್ನು ಮುಚ್ಚಿಬಿಡಲಾಗಿದೆಯೆಂದೂ, ಹಾಗೇನಾದರೂ ಪ್ರವೇಶಿಸಿದರೆ ಅವನನ್ನು ನಾಗರಿಕರು ಸಶಸ್ತ್ರರಾಗಿ ಎದುರಿಸುವರೆಂದೂ ತಿಳಿಸಿದ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೇ ನಾನು ದಾರಾನಿಗೆ ಸಿಕ್ಕಿದ್ದು. ಅದೊಂದು ವಿಚಿತ್ರವಾದ ಪ್ರಸಂಗವೇ ಸರಿ. ಹಾಗೆ ಸಿಕ್ಕಿ ಮೂರು ದಿನಗಳಾಗಿದ್ದುವು. ಯಾವ ವೈದ್ಯಕೀಯ ಸಹಾಯವೂ ಇಲ್ಲದಿದ್ದ ಕಾರಣ ತನ್ನೊಡನೆ ಹಕೀಮನಾಗಿ ಬರಬೇಕೆಂದು ದಾರಾ ನನ್ನನ್ನು ಒತ್ತಾಯಮಾಡಿದ. ರಾಜ್ಯಪಾಲನಿಂದ ಪತ್ರ ಬರುವುದಕ್ಕೆ ಒಂದು ದಿನ ಮುಂಚಿತವಾಗಿ ಆತ ಕೂಲ್ಲಿಗಳಿಂದ ನನಗೇನಾದರೂ ಪ್ರಾಣಾಪಾಯ ಒದಗಬಹುದೆಂದು ಭಾವಿಸಿ, ತಾನು ಇಳಿದುಕೊಂಡಿದ್ದ ಕಾರವಾನ್ ಸರಾಯ್ ಶಿಬಿರದಲ್ಲಿ ರಾತ್ರಿ ಕಳೆಯಬೇಕೆಂದು ನನಗೆ ಹೇಳಿದ. ದಾರಾನ ಹೆಂಡತಿ ಹಾಗೂ ಅವಳ ಪರಿವಾರದವರು ಡೇರೆಯ ಸೌಕರ್ಯವೂ ಇಲ್ಲದೆ, 'ಕನಟೆ' (Kanate)ಗಳ, ಅಂದರೆ ಡೇರೆಯ ತಟ್ಟೆಗಳ, ಮರೆಯಲ್ಲಿ ಬಿಡಾರ ಮಾಡಿದ್ದರು. ಈ ತಟ್ಟೆಗಳ ಹಗ್ಗಗಳನ್ನು ನಾನಿದ್ದ ಗಾಡಿಯ ಚಕ್ರಕ್ಕೆ ಕಟ್ಟಿದ್ದರು. 'ಹಿಂದೂಸ್ಥಾನದ' ದೊಡ್ಡ ಮನುಷ್ಯರು ತಮ್ಮ ಹೆಂಗಸರ ಬಗ್ಗೆ ಎಷ್ಟೊಂದು ಎಚ್ಚರಿಕೆ ವಹಿಸುತ್ತಾರೆಂಬುದನ್ನು ತಿಳಿದವರಿಗೆ ಇದನ್ನು ಕೇಳಿ ನಂಬಲಸಾಧ್ಯವಾಗಬಹುದು. ರಾಜಕುಮಾರ ದಾರಾನ ಅದೃಷ್ಟ ಎಷ್ಟು ಹೀನವಾಗಿತ್ತು ಎಂಬುದನ್ನು ತಿಳಿಸುವುದಕ್ಕಾಗಿ ಈ ಮಾತನ್ನು ಹೇಳುತ್ತಿದ್ದೇನೆ.

ಮಾರನೆಯ ದಿನ ಸೂರ್ಯೋದಯವಾದಾಗ ರಾಜ್ಯಪಾಲನು ಕಳುಹಿಸಿದ ಪತ್ರ ತಲುಪಿತು. ಆ ಪತ್ರದಲ್ಲಿದ್ದ ಸುದ್ದಿಯನ್ನು ಕೇಳಿದ ಸ್ತ್ರೀಯರ ಗೋಳಾಟ ಎಲ್ಲರ ಕಣ್ಣಲ್ಲೂ ನೀರು ತಂದಿತು. ನಾವೆಲ್ಲ ದಿಗ್ಭ್ರಮೆಗೊಂಡೆವು. ದಿಕ್ಕುತೋರದೆ ಒಬ್ಬರ ಮುಖ ಒಬ್ಬರು ನೋಡಲಾರಂಭಿಸಿದೆವು. ಇನ್ನೊಂದು ಗಂಟೆಯಲ್ಲಿ ಏನಾಗುವುದೊ ಎಂದು ಹೆದರಿಬಿಟ್ಟೆವು. ದಾರಾ ಡೇರೆಯಿಂದ ಹೊರಗೆ ಬರುವುದನ್ನು ನಾವು ನೋಡಿದೆವು. ಆತ ಬದುಕಿದ್ದಕ್ಕಿಂತ ಸತ್ತಿರುವಂತೆಯೇ ಕಂಡಿತು. ಒಮ್ಮೆ ಒಬ್ಬನೊಡನೆ, ಇನ್ನೊಮ್ಮೆ ಮತ್ತೊಬ್ಬನೊಡನೆ ಏನೋ ಮಾತಾಡಿದ. ಸಾಧಾರಣ ಸಿಪಾಯಿಯನ್ನೂ ನಿಲ್ಲಿಸಿ ಅವನ ಸಲಹೆ

ಕೇಳಿದ. ಪ್ರತಿಯೊಬ್ಬರ ಮುಖದಲ್ಲಿಯೂ ಭಯಭೀತಿಗಳು ಎದ್ದು ಕಾಣುತ್ತಿದ್ದುದನ್ನು ಅರಿತ ಅವನಿಗೆ ಯಾರೂ ತನ್ನ ಸಹಾಯಕ್ಕೆ ಇಲ್ಲವೆಂಬುದು ಸ್ಪಷ್ಟವಾಯಿತು. ಹಾಗಿದ್ದರೆ ತನ್ನ ಗತಿಯೇನು ? ಎಲ್ಲಿ ಹೋಗಬೇಕು ? ಹೊರಡುವುದು ನಿಧಾನವಾದಷ್ಟೂ ತನ್ನ ನಾಶ ಸನ್ನಿಹಿತವೆಂದು ಆತನಿಗೆ ಭಾಸವಾಗಿರಬೇಕು.

ದಾರಾನ ಪರಿವಾರದೊಡನೆ ನಾನಿದ್ದಷ್ಟು ದಿನಗಳು ಹಗಲೂ ರಾತ್ರಿ ಬಿಡುವಿಲ್ಲದೆ ದಾರಿ ನಡೆದದ್ದೂ ನಡೆದದ್ದೆ. ಸಹಿಸಲು ಅಸದಳವಾದ ಬಿಸಿಲಿನ ಝಳ! ಉಸಿರು ಕಟ್ಟಿಸುವ ಆ ಧೂಳು !! ನನ್ನ ಗಾಡಿಯನ್ನು ಎಳೆಯುತ್ತಿದ್ದ ಗುಜರಾತಿನ ಮೂರು ದೊಡ್ಡ ಎತ್ತುಗಳಲ್ಲಿ ಒಂದು ಸತ್ತುಹೋಯಿತು ; ಇನ್ನೊಂದು ಇನ್ನೇನು ಸಾಯುವುದರಲ್ಲಿತ್ತು ; ಮತ್ತು ಮೂರನೆಯದು ಬಳಲಿ ಮುಂದಕ್ಕೆ ಕಾಲಿಡದಂತಾಗಿತ್ತು. ನನ್ನನ್ನು ತನ್ನ ಪರಿವಾರದಲ್ಲಿ ಸೇರಿಸಿಕೊಳ್ಳಬೇಕೆಂಬುದು ದಾರಾನ ಇಚ್ಛೆಯಾಗಿತ್ತು. ಆತನ ಮಡದಿಯರಲ್ಲಿ ಒಬ್ಬಳಿಗೆ ಕಾಲಿನಲ್ಲಿ ಯಾವುದೊ ಹುಣ್ಣು ಎದ್ದಿತ್ತು. ಈ ಕಾರಣ ಆತ ನನ್ನ ಸೇವೆಯನ್ನು ಅಪೇಕ್ಷಿಸಿದ. ಆದರೆ ಆತನ ಬೆದರಿಕೆಗಾಗಲಿ ಅಥವಾ ಬೇಡಿಕೆಗಾಗಲಿ ನನ್ನ ಪ್ರಯಾಣಕ್ಕೆ ಬೇಕಾದ ಒಂದು ಕುದುರೆ, ಒಂದು ಎತ್ತು, ಕೊನೆಗೆ ಒಂದು ಒಂಟೆಯೂ ಸಹ ಸಿಕ್ಕಲಿಲ್ಲ. ಆತನ ಅಧಿಕಾರ ಹಾಗೂ ಪ್ರಭಾವಕ್ಕೆ ಅರೆಕಾಸಿನ ಬೆಲೆಯೂ ಇಲ್ಲದಂತಾಗಿತ್ತು. ಹೀಗಾಗಿ, ನಾನು ಅವನೊಡನೆ ಪ್ರಯಾಣವನ್ನು ಮುಂದುವರಿಸುವುದು ಸಾಧ್ಯವಿಲ್ಲವಾಯಿತು ; ನಾನು ಹಿಂದೆಯೇ ಉಳಿದುಬಿಟ್ಟೆ. ಕೇವಲ ನಾಲ್ಕೈದುನೂರು ಕುದುರೆಸವಾರರ ಪರಿವಾರದೊಡನೆ ಹೊರಟ ಆ ರಾಜಕುಮಾರನನ್ನು ನೋಡಿದಾಗ ನಾನು ಕಣ್ಣೀರುಹಾಕದೆ ಇರಲು ಸಾಧ್ಯವಾಗಲಿಲ್ಲ. ಅವನ ಪರಿವಾರದಲ್ಲಿ ಚಿನ್ನ ಬೆಳ್ಳಿಗಳನ್ನು ಹೇರಿದ್ದ ಒಂದೆರಡು ಆನೆಗಳೂ ಇದ್ದುವೆಂದು ಹೇಳುತ್ತಾರೆ.

ಹೀಗೆ ಹೊರಟ ದಾರಾ ತಟ–ಬಕರ್ ಕಡೆ ಹೋದನೆಂದು ಗೊತ್ತಾಯಿತು. ಬಹುಶಃ ಅದೇ ಸರಿಯಾದ ಮಾರ್ಗವೆಂದು ನನಗೆ ಅನ್ನಿಸುತ್ತದೆ. ಆದರೆ ಅಲ್ಲಿಗೆ ಹೋಗುವಾಗ ಅಡ್ಡಬರುವ ಮರಳುಗಾಡನ್ನು ಸುರಕ್ಷಿತವಾಗಿ ಅವನು ದಾಟಿಯಾನೆ ಎಂಬ ಆತಂಕ ನನಗೆ. ವಾಸ್ತವವಾಗಿ, ಆ ಮರಳುಗಾಡನ್ನು ದಾಟುವಾಗ ಅವನ ಪರಿವಾರದ ಬಹು ಮಂದಿ ಗಂಡಸರು ಹೆಂಗಸರು ಸತ್ತೇಹೋದರೆಂದು ತಿಳಿಯಿತು. ಕುಡಿಯಲು ನೀರಿಲ್ಲದೆ, ತಿನ್ನಲು ಅನ್ನವಿಲ್ಲದೆ, ನಡೆಯಲು ತ್ರಾಣವಿಲ್ಲದೆ ಹಲವರು ಸತ್ತರೆ, ಮತ್ತೆ ಕೆಲವರು ಕೊಳ್ಳಿಗಳ ಕ್ರೌರ್ಯಕ್ಕೆ ತುತ್ತಾಗಿ ಸತ್ತರು. ದಾರಾನೂ ಈ ಅಪಾಯಕರವಾದ ಪ್ರಯಾಣದಲ್ಲಿ ಸತ್ತಿದ್ದರೆ ಚೆನ್ನಾಗಿತ್ತು ! ಆದರೆ ಆತ ಹೇಗೊ ಒದ್ದಾಡಿಕೊಂಡು ಕಚ್ ರಾಜನ ರಾಜ್ಯವನ್ನು ಮುಟ್ಟಿದ.

ಅತ್ಯಂತ ಮರ್ಯಾದೆಯಿಂದ ಕಚ್ ರಾಜ ದಾರಾನನ್ನು ಎದುರುಗೊಂಡ. ತನ್ನ ಇಡೀ ಸೈನ್ಯವನ್ನು ದಾರಾನ ಸೇವೆಗೆ ಒಪ್ಪಿಸುವುದಾಗಿ ಆತ ಹೇಳಿದ. ಆದರೆ ಒಂದೇ ಒಂದು ಷರತ್ತು. ಅದೇನೆಂದರೆ, ತನ್ನ ಮಗನಿಗೆ ದಾರಾನ ಮಗಳನ್ನು ಕೊಡಬೇಕು.

ಆದರೆ ಜಯಸಿಂಗನು ನಡೆಸಿದ ಒಳಸಂಚುಗಳಿಗೆ ಜಸ್ವಂತಸಿಂಗನು ಒಳಗಾದಂತೆ ಕಚ್ ರಾಜನೂ ಒಳಗಾಗಿಬಿಟ್ಟ. ಆತನ ನಡೆನುಡಿಯಲ್ಲಿ ಇದ್ದಕ್ಕಿದ್ದಂತೆ ಬದಲಾವಣೆ ಎದ್ದು ಕಂಡಿತು. ಆ ಅನಾಗರಿಕನು ಎಲ್ಲಿ ತನ್ನ ಪ್ರಾಣಕ್ಕೇ ಸಂಚಕಾರತಂದುಬಿಡುವನೋ ಎಂದು ಹೆದರಿದ ದಾರಾ ಒಂದು ಗಳಿಗೆಯೂ ನಿಧಾನಮಾಡದೆ ತಟ-ಬಕರಿಗೆ ಹೊರಟು ಬಿಟ್ಟ.

ಕೊಲ್ಲಿಗಳಿಂದ ನನಗೆ ಒದಗಿದ ಅಪಾಯಗಳ ದೀರ್ಘ ವರ್ಣನೆಗಳಿಂದ ಓದುಗರನ್ನು ಬೇಜಾರು ಪಡಿಸಲು ಇಷ್ಟಪಡುವುದಿಲ್ಲ. ಅವರನ್ನು ಒಲಿಸಿಕೊಂಡು ನನ್ನ ಬಳಿ ಇದ್ದ ಅಲ್ಪ ಸ್ವಲ್ಪ ಹಣವನ್ನು ಹೇಗೆ ಉಳಿಸಿಕೊಂಡೆ ಎಂಬ ಕಥೆಯನ್ನು ಹೇಳುವ ಗೋಜಿಗೂ ಸಹ ಹೋಗುವುದಿಲ್ಲ. ನಾನು ನನ್ನ ವೈದ್ಯವೃತ್ತಿಯ ಚಮತ್ಕಾರವನ್ನು ಭವ್ಯವಾಗಿ ಪ್ರದರ್ಶಿಸಿದೆನೆಂದು ಹೇಳಬೇಕು. ನನ್ನಂತೆ ಭಯಭೀತರಾಗಿದ್ದ ನನ್ನಿಬ್ಬರು ಸೇವಕರು ಬಾಯಿಬಿಟ್ಟು ಹೇಳಿದರು, 'ಪ್ರಪಂಚದಲ್ಲೇ ನೀನು ಬಹು ದೊಡ್ಡ ವೈದ್ಯ' ಎಂದು. ದಾರಾನ ಸಿಪಾಯಿಗಳು ನನಗೆ ತುಂಬಾ ಮೋಸಮಾಡಿದರೆಂದು ಮತ್ತು ನನ್ನಲ್ಲಿದ್ದ ಬೆಲೆಯಾದುದನ್ನೆಲ್ಲಾ ಕದ್ದರೆಂದು ಆ ಸೇವಕರೇ ಹೇಳಿದರು. ನಾನೂ ನನ್ನ ಸೇವಕರೂ ಸೇರಿ ಆ ಕಳ್ಳ ಕೊಲ್ಲಿಗಳು ನನ್ನ ಬಗ್ಗೆ ಒಳ್ಳೆ ಅಭಿಪ್ರಾಯಪಡೆಯುವಂತೆ ಮಾಡಿದೆವು. ಅವರು ನನ್ನನ್ನು ಏಳೆಂಟು ದಿನಗಳ ಕಾಲ ತಡೆದು ನಿಲ್ಲಿಸಿಕೊಂಡಾದ ಮೇಲೆ ನನ್ನ ಗಾಡಿಗೆ ಒಂದು ಎತ್ತನ್ನು ಕಟ್ಟಿ ಅಹಮದಾಬಾದಿನ ಮಸೀದಿಯ ಗೋಪುರಗಳು ಕಾಣುವವರೆಗೂ ನನ್ನನ್ನು ಸಾಗಿಸಿಕೊಟ್ಟರು. ಆ ನಗರದಲ್ಲಿ ದಿಲ್ಲಿಗೆ ಹೊರಟಿದ್ದ ಒಬ್ಬ ಅಮೀರನ ಪರಿಚಯವಾಯಿತು. ಅವನ ರಕ್ಷಣೆಯಲ್ಲಿ ನಾನು ದಿಲ್ಲಿಗೆ ಹೊರಟೆ. ದಾರಿಯಲ್ಲಿ ಆಗಾಗ್ಗೆ ಸತ್ತ ಹೆಣಗಳ ದೃಶ್ಯ ಕಣ್ಣಿಗೆ ಬೀಳುತ್ತಿತ್ತು. ಮನುಷ್ಯರಷ್ಟೇ ಅಲ್ಲದೆ ಆನೆ ಕುದುರೆಗಳೂ ಒಂಟೆ ಎತ್ತುಗಳೂ ಸತ್ತುಬಿದ್ದಿದ್ದುವು. ಇವೆಲ್ಲ ಆ ಬಡಪಾಯಿ ದಾರಾನ ಸೈನ್ಯದ ಅವಶೇಷಗಳಾಗಿದ್ದುವು.

ಅತ್ತ ದಾರಾ ಕಾಲೆಳೆದುಕೊಂಡು ತಟ-ಬಕರಿಗೆ ದಾರಿ ಸಾಗಿಸುತ್ತಿದ್ದರೆ, ಇತ್ತ ಬಂಗಾಳದಲ್ಲಿ ಯುದ್ಧ ಇನ್ನೂ ನಡೆಯುತ್ತಿತ್ತು. ತನ್ನ ಶತ್ರುಗಳು ನಿರೀಕ್ಷಿಸಿದ್ದುದ ಕ್ಕಿಂತಲೂ ಹೆಚ್ಚಿನ ಸಾಮರ್ಥ್ಯದಿಂದ ಸುಲ್ತಾನ್ ಸೂಜ ಹೋರಾಟ ನಡೆಸುತ್ತಿದ್ದ. ಆದರೆ ಮೀರ್ ಜಮ್ಲಾನ ಬುದ್ಧಿಶಕ್ತಿ ಹಾಗೂ ನಡತೆಯನ್ನು ಅರಿತಿದ್ದ ಔರಂಗಜೇಬ ಇದರಿಂದ ಭೀತನಾಗಲಿಲ್ಲ. ಅಲ್ಲದೆ, ಬಂಗಾಳಕ್ಕೂ ಆಗ್ರಾಕ್ಕೂ ಇದ್ದ ದೂರದಿಂದ ಆ ಕೂಡಲೇ ಯಾವ ಸೈನ್ಯವೇ ಆಗಲಿ ಅಪಾಯವನ್ನು ತಂದೊಡ್ಡುವ ಸಂಭವವಿರಲಿಲ್ಲ. ವಾಸ್ತವವಾಗಿ ಇದ್ದ ಆತಂಕಗಳೆಂದರೆ, ಸುಲೇಮಾನ್ ಷೆಕೋ ಹತ್ತಿರದಲ್ಲಿಯೇ ಇದ್ದದ್ದು ; ಮತ್ತು ಆತನೂ ಶ್ರೀನಗರದ ರಾಜನೂ ಸೇರಿ ಸೈನ್ಯ ಸಮೇತ ಪರ್ವತ ಪ್ರದೇಶಗಳಿಂದ ಇಳಿದುಬಂದು ಧಾಳಿಮಾಡಬಹುದಾದದ್ದು. ಅವನು ಇದ್ದ ಸ್ಥಳಕ್ಕೂ ಆಗ್ರಾಕ್ಕೂ ಏಳೆಂಟು ದಿನಗಳ ಹಾದಿ, ಅಷ್ಟೆ. ಈ ಶತ್ರುವನ್ನು ಔರಂಗಜೇಬ ಕಡೆಗಣಿಸು

ವಂತಿರಲಿಲ್ಲ. ಆದ್ದರಿಂದ ಆತನನ್ನು ಹೇಗೆ ದಾರಿತಪ್ಪಿಸಬೇಕೆಂಬುದು ಔರಂಗಜೇಬನ ಮುಖ್ಯ ಯೋಜನೆಯಾಯಿತು.

ಈ ಯೋಜನೆಯನ್ನು ಸಾಧಿಸಲು ಅನುಸರಿಸಬೇಕಾದ ಸರಿಯಾದ ಮಾರ್ಗ ವೆಂದರೆ, ಶ್ರೀನಗರದ ರಾಜನೊಡನೆ ಜಯಸಿಂಗನ ಮೂಲಕ ರಾಜೀಸಂಧಾನ ನಡೆಸುವುದು. ಜಯಸಿಂಗನು ಶ್ರೀನಗರದ ರಾಜನಿಗೆ ಪತ್ರದ ಮೇಲೆ ಪತ್ರ ಬರೆದು, ಸುಲೇಮಾನ್ ಷಕೋ ನನ್ನು ಒಪ್ಪಿಸಿದಲ್ಲಿ ಅತ್ಯಂತ ಹೆಚ್ಚಿನ ಅನುಕೂಲ ಸಿಗುವುದೆಂದೂ, ಹಾಗೆ ಮಾಡದಿದ್ದ ಪಕ್ಷದಲ್ಲಿ ಬಹು ಕಠಿಣವಾದ ಶಿಕ್ಷೆಗೆ ಗುರಿಯಾಗಬೇಕಾಗುವುದೆಂದೂ ತಿಳಿಸಿದ. ಶ್ರೀನಗರದ ರಾಜನು ತನ್ನ ರಾಜ್ಯವೆಲ್ಲಾ ಹೋದರೂ ಚಿಂತೆಯಿಲ್ಲ, ತಾನು ದ್ರೋಹದ ಹಾಗೂ ಹೀನವಾದ ಕೆಲಸ ಮಾಡಲಾರೆ ಎಂಬುದಾಗಿ ಉತ್ತರಕೊಟ್ಟ. ಹೆದರಿಕೆಯಾಗಲಿ ಪ್ರೀತಿಯ ಮಾತಾಗಲಿ ಶ್ರೀನಗರ ರಾಜನನ್ನು ದಾರಿಗೆತರುವುದಿಲ್ಲವೆಂಬುದು ಖಚಿತವಾದಾಗ, ಔರಂಗಜೇಬ ತನ್ನ ಸೈನ್ಯವನ್ನು ಪರ್ವತಗಳ ಬುಡಕ್ಕೆ ಸಾಗಿಸಿದ. ಅಸಂಖ್ಯಾತ ಜನರನ್ನು ನೇಮಿಸಿಕೊಂಡು ಬಂಡೆಗಳನ್ನು ಒಡೆಸಿದ; ಕಿರಿದಾದ ದಾರಿಯನ್ನು ಅಗಲಮಾಡಿಸಿದ. ತನ್ನ ರಾಜ್ಯವನ್ನು ಪ್ರವೇಶಿಸಲು ಮಾಡಿದ ಔರಂಗಜೇಬನ ಈ ವ್ಯರ್ಥ ಪ್ರಯತ್ನಗಳನ್ನು ನೋಡಿ ರಾಜ ನಕ್ಕುಬಿಟ್ಟ. 'ಹಿಂದೂಸ್ಥಾನ'ದಂತಹ ನಾಲ್ಕು ದೇಶಗಳ ಸೈನ್ಯಗಳು ಸಹ ಆ ಪರ್ವತಗಳನ್ನು ಭೇದಿಸಲು ಸಾಧ್ಯವಿರಲಿಲ್ಲ. ಈ ಕಾರಣ ಔರಂಗಜೇಬನ ಪ್ರಯತ್ನಗಳೆಲ್ಲ ವಿಫಲವಾದವು. ಆತ ತನ್ನ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಳ್ಳಬೇಕಾಯಿತು.

ಈ ಮಧ್ಯೆ ದಾರಾ ತಟ–ಬಕರ್ ಕೋಟೆಯನ್ನು ಸಮೀಪಿಸಿದ. ಅದು ಇನ್ನೂ ಮೂರು ನಾಲ್ಕು ದಿನಗಳ ಹಾದಿಯಷ್ಟು ದೂರದಲ್ಲಿರುವಾಗ ಅದಕ್ಕೆ ಮುತ್ತಿಗೆಹಾಕಿದ್ದ ಮೀರ್ ಬಾಬಾ ಅದನ್ನು ಪೂರ್ತಿ ಧ್ವಂಸಮಾಡಿಬಿಟ್ಟಿರುವನೆಂಬ ಸುದ್ದಿ ತಿಳಿಯಿತು. ಇದು ಸರಿಯಾದ ಸಂಗತಿಯಾಗಿತ್ತೆಂದು ಮುತ್ತಿಗೆಯಲ್ಲಿ ಗೋಲಂದಾಜರಾಗಿ ಕೆಲಸಕ್ಕೆ ಸೇರಿದ್ದ ಫ್ರೆಂಚ್‌ಮನರು ಮತ್ತು ಇತರ ಫರಂಗಿ (Franks)ಗಳಿಂದ ಆಮೇಲೆ ನನಗೆ ಗೊತ್ತಾಯಿತು.

ತಟ–ಬಕರ್‌ನಲ್ಲಿ ಅಕ್ಕಿ ಮತ್ತು ಮಾಂಸಗಳ ಬೆಲೆ ಗಗನಕ್ಕೇರಿತು. ಅವುಗಳನ್ನು ಒಂದು ಲೀವ್ರ್‌ಗೆ (ಆಗ ಒಂದು ಪೌಂಡು ಮತ್ತು ಚಿಲ್ಲರೆ ತೂಕಕ್ಕೆ) ಒಂದು ಕ್ರೌನ್ (ಆಗ ಸುಮಾರು ೫ ಷಿಲ್ಲಿಂಗ್) ನಂತೆ ಮಾರುತ್ತಿದ್ದರಂತೆ. ಹಾಗೆಯೇ ಇತರ ಆವಶ್ಯಕ ವಸ್ತುಗಳ ಧಾರಣೆಯೂ ಆಗಿತ್ತು. ಹಾಗಿದ್ದರೂ ಕೋಟೆಯ ಕೊತ್ವಾಲ ಮುತ್ತಿಗೆಯನ್ನು ವೀರಾವೇಶದಿಂದ ಎದುರಿಸಿದನು. ಔರಂಗಜೇಬನ ಬೆದರಿಕೆಗಳಾಗಲಿ ಆಸೆಗಳಾಗಲಿ ಅವನನ್ನು ಕದಲಿಸಲಿಲ್ಲ. ದಾರಾ ಬರುತ್ತಿರುವನೆಂಬ ಸುದ್ದಿಯನ್ನು ಕೇಳಿ ಆತ ತನ್ನ ಸಿಪಾಯಿಗಳಿಗೆ ಹೆಚ್ಚು ಹೆಚ್ಚು ಹಣ ಕೊಟ್ಟು ಶತ್ರುವನ್ನು ಹಿಮ್ಮೆಟ್ಟಿಸುವುದಕ್ಕೆ ಸರ್ವ ಪ್ರಯತ್ನಮಾಡಿದ. ದಾರಾ ಕೋಟೆಯನ್ನು ಸಲೀಸಾಗಿ ಪ್ರವೇಶಮಾಡಲಿ ಎಂಬುದು ಆತನ ಉದ್ದೇಶವಾಗಿತ್ತು. ದಾರಾ ಭಾರಿ ಸೈನ್ಯದೊಡನೆ ಬರುತ್ತಿರುವನೆಂಬ ಸುಳ್ಳು

ಸುದ್ದಿಯನ್ನು ಮುತ್ತಿಗೆ ಹಾಕಿದವರಲ್ಲಿ ಹಬ್ಬಿಸಿದ. ಸುದ್ದಿ ಹಬ್ಬಿಸಲು ಹೋದ ಗೂಢಚಾರರು ತಾವೇ ಆ ಭಾರಿ ಸೈನ್ಯವನ್ನು ಕಂಡುದಾಗಿ ಹೇಳಿದರು. ಇದರಿಂದ ಆಲೋಚಿಸಿದ ಪರಿಣಾಮ ಆಯಿತು ; ಶತ್ರುಸೈನ್ಯ ಹೆದರಿಬಿಟ್ಟಿತು.

ಆದರೆ ಯಾವ ಉದ್ಯಮದಲ್ಲಿಯೇ ಆಗಲಿ ಜಯಗಳಿಸುವುದು ದಾರಾನ ಹಣೆಯಲ್ಲಿ ಬರೆದಿರಲಿಲ್ಲ. ಕೋಟೆಯ ಮುತ್ತಿಗೆಯನ್ನು ಕೆಲವೇ ಜನರ ಸಹಾಯದಿಂದ ತಪ್ಪಿಸುವುದು ಅಸಾಧ್ಯವೆಂದು ಅರಿತುಕೊಂಡ ಆತ ಇಂಡಸ್ ನದಿ ದಾಟಿ ಪರ್ಷಿಯಾಕ್ಕೆ ಹೋಗಲೆ ಎಂದು ಒಮ್ಮೆ ಆಲೋಚಿಸಿದ. ಆದರೆ ಅದಕ್ಕೂ ಎಷ್ಟೋ ಅಡಚಣೆಗಳಿದ್ದುವು. ಆತ ಪರ್ಷಿಯಾಕ್ಕಾಗಲಿ ಮೊಗಲನಿಗಾಗಲಿ ಅಧೀನರಾಗಿಲ್ಲದ ಪಠಾಣ ರಾಜರ ರಾಜ್ಯಗಳಲ್ಲಿ ಹಾದುಹೋಗಬೇಕಾಗಿತ್ತು. ಕುಡಿಯಲು ಒಳ್ಳೆಯ ನೀರೂ ಸಿಕ್ಕದ ಭಾರಿ ಬೆಂಗಾಡು ಪ್ರದೇಶದಲ್ಲಿ ಸಾಗಬೇಕಾಗಿತ್ತು. ಇಂತಹ ಕಷ್ಟಗಳನ್ನು ಎದುರಿಸಬೇಕಾಗುವುದೆಂಬ ಕಾರಣಗಳಿಗಿಂತ ಅತಿ ಸಣ್ಣ ಕಾರಣವನ್ನು ಒಡ್ಡಿ ದಾರಾನ ಹೆಂಡತಿ ಪರ್ಷಿಯಾಕ್ಕೆ ಹೋಗುವುದನ್ನು ತಪ್ಪಿಸಿದಳು. ಗಂಡನೇನಾದರೂ ಪರ್ಷಿಯಾಕ್ಕೆ ಹೋಗಲೇಬೇಕೆಂದು ಹಠಹಿಡಿಯುವುದಾದರೆ, ತಾನು ಮತ್ತು ಮಗಳು ಪರ್ಷಿಯಾ ಚಕ್ರವರ್ತಿಯ ದಾಸಿಯರಾಗುವುದನ್ನು ನೋಡುವ ಸ್ಥಿರಮನಸ್ಸನ್ನು ಆತ ಮಾಡಬೇಕಾದೀತೆಂದು ಅವಳು ವಾದಿಸಿದಳು. ಅದಕ್ಕೆ ಒಪ್ಪುವುದಾದರೆ ಅಲ್ಲಿಗೆ ಹೋಗಬಹುದು ಎಂದು ಅವಳು ಹೇಳಿದಳು. ಗುಲಾಮತನದ ಅಪಕೀರ್ತಿಯನ್ನು ದಾರಾನ ಮನೆತನ ಹೊರಲು ಒಪ್ಪೀತೆ ? ಇಲ್ಲ, ಒಪ್ಪಲು ಸಾಧ್ಯವಿರಲಿಲ್ಲ. ಆದರೆ ಪರ್ಷಿಯಾಕ್ಕೆ ಹೋದರೆ ಗುಲಾಮತನದ ಅವಹೇಳನಕ್ಕೆ ಗುರಿಯಾಗಬೇಕಾಗುತ್ತೆ ಎಂಬ ದಾರಾನ ಹೆಂಡತಿಯ ಭಾವನೆಗೆ ಆಧಾರವೇ ಇರಲಿಲ್ಲ. ಏಕೆಂದರೆ, ಹಿಂದೆ ಹುಮಾಯೂನನ ಹೆಂಡತಿಗೂ ಇಂಥ ಪರಿಸ್ಥಿತಿ ಒದಗಿದಾಗ ಆಕೆಯನ್ನು ಯಾವ ಅವಹೇಳನಕ್ಕೂ ಪರ್ಷಿಯಾ ರಾಜ ಗುರಿಮಾಡಲಿಲ್ಲ. ಅದರ ಬದಲು ಆಕೆಯನ್ನು ಗೌರವದಿಂದಲೂ ದಯೆಯಿಂದಲೂ ನೋಡಿಕೊಂಡ.

ದಾರಾನ ಮನಸ್ಸು ಈ ತೊಯ್ದಾಟದಲ್ಲಿರುವಾಗ ಆತನಿಗೆ ಅರಿವಾಯಿತು, ತಾನು ಶಕ್ತಿವಂತನಾದ ಪಠಾಣ ಗಿಯಾನ್ ಖಾನನಿಗೆ (Gion Kan) ಬಹಳ ಹತ್ತಿರದಲ್ಲೇ ಇರುವೆನು ಎಂದು. ದಂಗೆ ಎದ್ದನೆಂಬ ಕಾರಣದ ಮೇಲೆ ಹಿಂದೆ ಷಾಜಹಾನ ಈ ಖಾನನನ್ನು ಆನೆಯ ಕಾಲಿನಿಂದ ತುಳಿಸಿಬಿಡಬೇಕೆಂದು ಆಜ್ಞೆಮಾಡಿದ್ದ. ಆ ಸಲ ಮತ್ತು ಇನ್ನೊಂದು ಸಲ ದಾರಾ ಅದಕ್ಕೆ ಅಡ್ಡಿಬಂದು ಆತನ ಪ್ರಾಣ ಉಳಿಸಿದ್ದ. ಅಂಥವನ ಆಶ್ರಯವನ್ನು ಪಡೆದು ತಟ-ಬಕರಿಗೆ ಮುತ್ತಿಗೆಹಾಕಿರುವ ಮೀರ್‌ಬಾಬಾನನ್ನು ಓಡಿಸುವ ಆಲೋಚನೆ ಮಾಡಿದ, ದಾರಾ. ಆತನ ಮುಂದಿನ ಆಲೋಚನೆ ಹೀಗಿತ್ತು : ತಟ-ಬಕರ್ ಕೋಟೆಯನ್ನು ಪಡೆದುಕೊಂಡು, ಅಲ್ಲಿರುವ ಭಂಡಾರವನ್ನು ತೆಗೆದುಕೊಂಡು ಖಂದಹಾರ್‌ದ ಮೂಲಕ ಕಾಬೂಲಿಗೆ ಹೋಗಿ, ಅಲ್ಲಿ ಮೊಹಬತ್‌ಖಾನನ ಸ್ನೇಹ ಬೆಳೆಸುವುದು ಒಳ್ಳೆಯದು ಎಂದು. ಮೊಹಬತ್‌ಖಾನನಿಗೆ ಕಾಬೂಲಿನ ಆಡಳಿತ ಸಿಕ್ಕಲಿಕ್ಕೆ

ದಾರಾನೆ ಕಾರಣನಾಗಿದ್ದ. ಹೀಗಿರುವಾಗ ಆತನು ತನಗೆ ಖಂಡಿತ ಸಹಾಯಮಾಡು ತ್ತಾನೆಂದು ದಾರಾ ಭಾವಿಸಿದ್ದರಲ್ಲಿ ತಪ್ಪಿರಲಿಲ್ಲ. ಇದನ್ನು ಕೇಳಿದ ದಾರಾನ ಹೆಂಡತಿ ಮತ್ತು ಮಕ್ಕಳಿಗೆ ಏನೋ ಅಪಶಕುನವಾದಂತಾಯಿತು. ಗಿಯಾನ್‌ಖಾನನ ಆಶ್ರಯ ಪಡೆಯ ಬೇಡವೆಂದು ಅವರು ದಾರಾನಿಗೆ ಬಹಳವಾಗಿ ಹೇಳಿದರು. ಹೆಂಡತಿ, ಮಗಳು ಮತ್ತು ಚಿಕ್ಕ ವಯಸ್ಸಿನ ಮಗ ಸೆಪಿರ್‌ಷೆಕೋ ಇವರೆಲ್ಲಾ ಅವನ ಕಾಲಿಗೆ ಬಿದ್ದು, ಕಣ್ಣಲ್ಲಿ ನೀರು ಸುರಿಸುತ್ತಾ ದಮ್ಮಯ್ಯ ಅಂದರು. 'ಆ ಪಠಾಣನು ದಾರಿಗಳ್ಳ ಹಾಗೂ ದಂಗೆಕೋರ. ಅಂಥವನನ್ನು ನಂಬುವುದು ತಲೆಮುಂದಾಗಿ ವಿನಾಶದ ದಾರಿ ಹಿಡಿದಂತೆ!' ಎಂದು ಅವರು ಹೇಳಿದರು. ಅಲ್ಲದೆ ತಟ–ಬಕರ್ ಮುತ್ತಿಗೆಯನ್ನು ತೆಗೆಯಲೇಬೇಕೆಂಬ ಹಠ ಏಕೆ ? ಕಾಬೂಲಿಗೆ ಹೋಗುವುದಕ್ಕೆ ಸಲೀಸಾದ ದಾರಿಯುಂಟು. ಮಿರ್‌ಬಾಬಾ ಮುತ್ತಿಗೆಯನ್ನು ತ್ಯಜಿಸಿ ಆ ದಾರಿಗೆ ಅಡ್ಡ ಬರಲಾರ—ಹೀಗೆಂದು ಹೇಳಿದರು.

ಇಷ್ಟೆಲ್ಲ ಹೇಳಿದರೂ ದುರಾದೃಷ್ಟ ತನ್ನನ್ನು ದೂಡುತ್ತಿದೆಯೋ ಎಂಬಂತೆ ದಾರಾ ಈ ಬುದ್ಧಿವಾದಗಳಲ್ಲಿ ಏನೂ ಹುರುಳಿಲ್ಲವೆಂದು ಅಲ್ಲಗಳೆದುಬಿಟ್ಟನು. ಕಾಬೂಲಿಗೆ ಹೋಗುವ ದಾರಿ ತುಂಬಾ ಕಠಿಣ ಹಾಗೂ ಅಪಾಯಕರವೆಂದೇ ವಾದಿಸಿದನು. ತಾನು ಮಾಡಿದ ಉಪಕಾರವನ್ನು ಸ್ಮರಿಸದಷ್ಟು ಕೃತಘ್ನನಲ್ಲ ಗಿಯಾನ್‌ಖಾನ್ ಎಂಬುದು ಅವನ ನಂಬಿಕೆಯಾಗಿತ್ತು. ಈ ಕಾರಣ ದಾರಾ ಯಾರು ಏನು ಹೇಳಿದರೂ ಕೇಳದೆ ಹೊರಟೇಬಿಟ್ಟ. ಹಾಗೆ ಹೊರಟು, 'ಕೇಡುಗನು ತನ್ನ ಹಿತಸಾಧನೆಗಾಗಿ ಯಾವ ಕೃತಜ್ಞತೆಯನ್ನೂ ಸ್ಮರಿಸದೆ, ತನ್ನ ಹಿತೈಷಿಗಳನ್ನೇ ಬಲಿಕೊಡಲು ಹಿಂದುಮುಂದು ನೋಡುವುದಿಲ್ಲ' ಎಂಬುದಕ್ಕೆ ಮತ್ತೊಂದು ನಿದರ್ಶನವನ್ನು ತನ್ನ ಕ್ರಿಯೆಯಿಂದಲೇ ವ್ಯಕ್ತಪಡಿಸಿದ.

ಆ ದಾರಿಗಳ್ಳ ಗಿಯಾನ್‌ಖಾನ ಮೊದಲು ಬಹು ಮಂದಿ ಸಿಪಾಯಿಗಳೊಡಗೂಡಿ ದಾರಾ ಬರುತ್ತಿರುವನೆಂದು ಭಾವಿಸಿ ಅವನನ್ನು ಗೌರವದಿಂದಲೂ, ಪ್ರೀತಿ ವಿಶ್ವಾಸ ಗಳಿಂದಲೂ ಎದುರುಗೊಂಡ. ದಾರಾನ ಕಡೆಯವರನ್ನೆಲ್ಲಾ ಸ್ನೇಹಿತರಂತೆಯೂ ಸೋದರ ರಂತೆಯೂ ಕಂಡ. ಅವರ ಆವಶ್ಯಕತೆಗಳನ್ನೆಲ್ಲಾ ನೋಡಿಕೊಳ್ಳುವಂತೆ ತನ್ನ ಕಡೆಯವ ರಿಗೆ ಹೇಳಿದ. ಆದರೆ ಯಾವಾಗ ದಾರಾನ ಸಿಬ್ಬಂದಿ ಇನ್ನೂರು ಮುನ್ನೂರು ಜನರಿಗಿಂತ ಹೆಚ್ಚಿಲ್ಲವೆಂದು ಗೊತ್ತಾಯಿತೊ ಆಗ ಆತ ತನ್ನ ಮೇಲ್ನೋಟದ ಗೌರವ ವರ್ತನೆಯನ್ನು ತ್ಯಜಿಸಿಬಿಟ್ಟ. ಆತ ನಡೆಸಿದ ಕ್ರೂರ ಕೃತ್ಯ ಔರಂಗಜೇಬನ ಪ್ರೇರಣೆಯಿಂದಾಯಿತೋ ಅಥವಾ ಅವನಿಗೆ ಆ ಕೃತ್ಯ ನಡೆಸಲು ಇದ್ದಕ್ಕಿದ್ದಂತೆ ಆ ದುರ್ಬುದ್ಧಿ ಬಂದಿತೋ ಗೊತ್ತಿಲ್ಲ. ದಾರಿಯಲ್ಲಿ ಕಳ್ಳಕಾಕರ ಹಾವಳಿಯಿಂದ ಹೇಗೋ ದಾರಾ ಉಳಿಸಿಕೊಂಡು ಬಂದಿದ್ದ ಹಲವಾರು ಹೇಸರಗತ್ತೆಗಳು ಹೊತ್ತ ಚಿನ್ನವನ್ನು ಕಂಡು ಆತನಿಗೆ ಎಂದಿಲ್ಲದ ದುರಾಸೆ ಹುಟ್ಟಿದ್ದರೂ ಹುಟ್ಟಿರಬಹುದು. ಅದು ಹೇಗಾದರೂ ಇರಲಿ, ಅವನು ರಾತ್ರಾ ರಾತ್ರಿ ಸಾಕಷ್ಟು ಸಂಖ್ಯೆಯಲ್ಲಿ ಶಸ್ತ್ರಸಜ್ಜಿತ ಜನರನ್ನು ಶೇಖರಿಸಿ, ಆ ಚಿನ್ನವನ್ನೂ ಹೇಸರ

ಒಡವೆವಸ್ತುಗಳನ್ನೂ ತನ್ನ ವಶಪಡಿಸಿಕೊಂಡುಬಿಟ್ಟ. ದಾರಾನ ಮೇಲೂ ಅವನ ಮಗ ಸೆಫಿರ್ ಷೆಕೋನ ಮೇಲೂ ಬಿದ್ದ. ಹಲವರನ್ನು ಕೊಂದು, ದಾರಾನನ್ನು ಬಂಧಿಸಿದ. ಬಂಧನಕ್ಕೊಳಗಾದ ದಾರಾನನ್ನು ಆನೆಯ ಮೇಲೆ ಹೇರಿದ. ಆತನಾಗಲಿ ಆತನ ಕಡೆಯವರಾಗಲಿ ಮಿಸುಕಾಡಿದರೆ ಕಡಿದುಬಿಡಬೇಕೆಂಬ ಕಟ್ಟಾಜ್ಞೆಯನ್ನು ಹೊತ್ತ ಕಟುಕ ದಾರಾನ ಹಿಂದೆಯೇ ಕುಳಿತಿದ್ದ. ಇಂಥ ಅವಹೇಳನದ ಸ್ಥಿತಿಯಲ್ಲಿ ದಾರಾನನ್ನು ತಟ–ಬಕರ್‌ನಲ್ಲಿದ್ದ ಸೇನೆಯ ಮುಂದೆ ಕೊಂಡೊಯ್ದು, ಸೇನಾಧಿಪತಿ ಮೀರ್ ಬಾಬಾನಿಗೆ ಒಪ್ಪಿಸಿದನು. ಆ ಸೇನಾಧಿಪತಿ ದಾರಾನನ್ನು ಸರಿಯಾದ ಬಂಧನದಲ್ಲಿ ಲಾಹೋರಿಗೂ ಅಮೇಲೆ ದಿಲ್ಲಿಗೂ ಕೊಂಡೊಯ್ಯಬೇಕು ಎಂದು ಗಿಯಾನ್ ಖಾನನಿಗೆ ಆಜ್ಞೆಮಾಡಿದ.

ಆ ನತದೃಷ್ಟ ದಾರಾನನ್ನು ದಿಲ್ಲಿಯ ಹೆಬ್ಬಾಗಿಲ ಬಳಿಗೆ ಕರೆದುತಂದಾಗ ಔರಂಗಜೇಬನು ಒಂದು ವಿಚಾರವನ್ನು ಆಲೋಚನೆ ಮಾಡಬೇಕಾಗಿ ಬಂದಿತು. ದಾರಾನನ್ನು ಗ್ವಾಲಿಯರ್ ಕೋಟೆಗೆ ಒಯ್ಯುವಾಗ ದಿಲ್ಲಿಯ ಊರ ಮೂಲಕ ಕೊಂಡೊಯ್ಯಬೇಕೆ ಬೇಡವೆ ಎಂಬುದೇ ಆ ಆಲೋಚನೆ. ಊರೊಳಗೆ ಹಾದು ಕೊಂಡೊಯ್ಯುವ ಆಲೋಚನೆಯನ್ನು ಖಂಡಿತ ಬಿಡಬೇಕೆಂಬುದು ಹಲವು ಆಸ್ಥಾನಿಕರ ಅಭಿಪ್ರಾಯವಾಗಿತ್ತು. ಹಾಗೆ ಮಾಡಿದರೆ ರಾಜಮನೆತನಕ್ಕೇ ಅಗೌರವ ಮಾಡಿದಂತಾಗುವುದೆಂದೂ, ಅದರಿಂದಾಗಿ ಜನಗಳು ದಂಗೆಯೇಳುವುದಕ್ಕೆ ಒಂದು ಮಾರ್ಗ ಕಲ್ಪಿಸಿಕೊಟ್ಟಂತಾಗುವುದೆಂದೂ, ಆಗ ದಾರಾನ ಬಿಡುಗಡೆಯಾಗುವುದು ಸುಲಭವಾಗಬಹುದೆಂದೂ ಅವರು ಹೇಳಿದರು. ಮತ್ತೆ ಕೆಲವರು ಈ ಅಭಿಪ್ರಾಯಕ್ಕೆ ವಿರೋಧವಾಗಿ 'ಇಲ್ಲ ಇಲ್ಲ, ಅವನನ್ನು ಇಡೀ ನಗರವೇ ನೋಡಬೇಕು; ನೋಡಿದ ಜನ ಹೆದರಿ ಬೆದರುವಂತಾಗಬೇಕು; ಔರಂಗಜೇಬನ ಅಖಂಡ ಅಧಿಕಾರ ಎಷ್ಟಿದೆ ಎಂಬುದು ಜನಗಳಿಗೆ ತಿಳಿಯಬೇಕು' ಎಂದರು. 'ದಾರಾ ಕೈಸೆರೆ ಸಿಕ್ಕಿದನೋ ಇಲ್ಲವೋ ಎಂಬುದು ಇನ್ನೂ ಅನುಮಾನಪಡುತ್ತಿರುವ ಅಮೀರರುಗಳಿಗೂ ಜನಗಳಿಗೂ ಗೊತ್ತಾಗಲಿ; ಅವರ ಅನುಮಾನ ಪರಿಹಾರವಾಗಲಿ. ಮತ್ತೆ ಅವನೊಡನೆ ಗುಪ್ತ ಸಂಧಾನ ಮಾಡುವ ಆಸೆಯೇನಾದರೂ ಇದ್ದರೆ ಅವರು ಅದಕ್ಕೆ ತಿಲಾಂಜಲಿಯನ್ನೀಯಲಿ'—ಹೀಗೆಂದು ಅವರು ಔರಂಗಜೇಬನಲ್ಲಿ ಹೇಳಿದರು.

ಅವರು ಹೇಳಿದ್ದೇ ಔರಂಗಜೇಬನ ಮನಸ್ಸಿನಲ್ಲಿ ಇದ್ದುದು. ಹೀಗಾಗಿ ದಾರಾನನ್ನು ಆನೆಯಮೇಲೆ ಹಿಡಿಮುರಿ ಕಟ್ಟಿ ಕುಳ್ಳಿರಿಸಿದರು. ಅವನ ಹಿಂದೆ ಕಟುಕನ ಬದಲು ಬಹದೂರ್ ಖಾನನನ್ನು ಕೂರಿಸಿದರು. ದಾರಾನನ್ನು ಕುಳ್ಳಿರಿಸಿದ್ದ ಆನೆ, ಹಿಂದೆ ಅವನು ಸಾಮಾನ್ಯವಾಗಿ ಏರುತ್ತಿದ್ದ ಪೆಗೂ ಅಥವಾ ಸಿಲೋನಿನ ಆನೆಯಾಗಿರಲಿಲ್ಲ. ಹಿಂದೆ ದಾರಾ ಭವ್ಯವಾಗಿ ಅಲಂಕೃತವಾದ ಆನೆಯಮೇಲೆ ಚಿನ್ನದ ಅಂಬಾರಿಯಲ್ಲಿ ಮಂಡಿಸಿ ಮೇಲೆ ಏರಿಸಿದ ಛತ್ರಿಯ ನೆರಳಿನಲ್ಲಿ ಸವಾರಿಮಾಡುತ್ತಿದ್ದ. ಈಗ ಅದೇ ದಾರಾ ಯಾವುದೋ ಮುದಿಯಾದ ಹಾಗೂ ಮೈತೊಳೆದು ಎಷ್ಟೋ ದಿವಸಗಳಾಗಿದ್ದ ಆನೆಯ ಮೇಲೆ ಕುಳಿತುಕೊಂಡಿದ್ದ. ಹಿಂದೂಸ್ಥಾನದ ರಾಜಕುಮಾರರ ಸಿರಿಸೂಚಕವಾದ ತೋರ

ಮುತ್ತಿನ ಹಾರ ಅವನ ಕೊರಳಿನಲ್ಲಿ ಇರಲಿಲ್ಲ. ಜರಿಯ ರುಮಾಲನ್ನಾಗಲಿ, ಕಿಂಕಾಪಿನ ಅಂಗಿಯನ್ನಾಗಲೀ ಅವನು ತೊಟ್ಟಿರಲಿಲ್ಲ. ಬಹು ಒರಟಾದ ಹಳೆಯ ಬಟ್ಟೆಗಳನ್ನು ಅವನೂ ಅವನ ಮಗನೂ ತೊಟ್ಟಿದ್ದರು. ಅವನು ಸುತ್ತಿದ್ದ ರುಮಾಲಿನ ಮೇಲೆ ಕಾಶ್ಮೀರದ ಶಾಲೊಂದನ್ನು ಹೊದಿಸಿದ್ದರು.

ಹೀಗೆ ತೀರ ಸಾಮಾನ್ಯನ ರೀತಿಯಲ್ಲಿ ದಾರಾನನ್ನು ದಿಹ್ಲಿಯ ಬಜಾರುಗಳಲ್ಲಿ ಮತ್ತು ನಗರದ ಗಲ್ಲಿಗಲ್ಲಿಗಳಲ್ಲಿ ಕರೆದುಕೊಂಡು ಹೋಗಲಾಯಿತು. ದಾರಾನ ಕಗ್ಗೊಲೆ ಇನ್ನೇನು ಆಗಬಹುದೇನೋ ಎಂಬ ಭಾವನೆಯನ್ನು ನಾನು ಮನಸ್ಸಿನಿಂದ ದೂರ ಮಾಡ ಲಾಗಲಿಲ್ಲ. ಜನಸಾಮಾನ್ಯರಿಗೆ ಬಹಳ ಅಚ್ಚುಮೆಚ್ಚಿನವನಾದ ಒಬ್ಬ ರಾಜಕುಮಾರ ನನ್ನು ಔರಂಗಜೇಬನೂ ಆತನ ಮಂತ್ರಿಗಳೂ ಈ ರೀತಿ ಅಪಮಾನಕ್ಕೆ ಗುರಿಮಾಡುವ ಧೈರ್ಯವನ್ನು ಹೇಗೆ ಪಡೆದರು ಎಂದು ನನಗೆ ಆಶ್ಚರ್ಯವಾಯಿತು. ಆದರಲ್ಲಿಯೂ, ಹಿಂದೆ ಮುಂದೆ ಯಾವ ಸೈನ್ಯವೂ ಇಲ್ಲದಿರುವುದನ್ನು ಕಂಡು ಮತ್ತಷ್ಟು ಸೋಜಿಗವೆನಿ ಸಿತು. ಔರಂಗಜೇಬನ ಈ ಅಸಭ್ಯ ವರ್ತನೆಯಿಂದ ಜನರು ಕೊಂಚಕಾಲ ರೊಚ್ಚಿಗೆದ್ದರು. ಅವನು ತನ್ನ ತಂದೆಯನ್ನು ಸೆರೆಗೆ ಹಾಕಿದ್ದು, ಮಗ ಸುಲ್ತಾನ್ ಮಹಮ್ಮದನನ್ನೂ ಸಹೋದರ ಮುರಾದ್ ಭಕ್ಷನನ್ನೂ ಬಂಧನದಲ್ಲಿ ಇಟ್ಟಿದ್ದು—ಇವೆಲ್ಲ ಪ್ರತಿಯೊಬ್ಬನ ಹೃದಯವನ್ನು ತಲ್ಲಣಗೊಳಿಸಿದ್ದುವು. ದಾರಾನ ಮೆರವಣಿಗೆಯ ಸಮಯದಲ್ಲಿ ಅಸಂಖ್ಯಾತ ಜನ ಸೇರಿದ್ದರು. ಎಲ್ಲೆಲ್ಲೂ ಜನ ಅಳುತ್ತಿದ್ದುದನ್ನು ಕಂಡೆ. ದಾರಾನಿಗೆ ಒದಗಿದ ದುಃಸ್ಥಿತಿಗೆ ಮರುಗಿ ಜನರು ಬಹು ವಿಧವಾಗಿ ಪ್ರಲಾಪಿಸುತ್ತಿದ್ದುದನ್ನು ನೋಡಿದೆ.

ನಾನು ನಗರದ ಒಂದು ಆಯಕಟ್ಟಿನ ಸ್ಥಳದಲ್ಲಿ ಬಹು ದೊಡ್ಡ ಬಜಾರಿನ ಮಧ್ಯೆ ಒಳ್ಳೆಯ ಕುದುರೆಯ ಮೇಲೆ ಕುಳಿತು ಇಬ್ಬರು ಸೇವಕರು ಮತ್ತು ಇಬ್ಬರು ಆತ್ಮೀಯ ಗೆಳೆಯರೊಡಗೂಡಿ ಆ ಹೃದಯವಿದ್ರಾವಕ ದೃಶ್ಯವನ್ನು ನೋಡಿದೆ. ಯಾವ ಕಡೆ ತಿರುಗಿ ನೋಡಿದರೂ ಜನರು ಬಿಕ್ಕಿಬಿಕ್ಕಿ ಅಳುತ್ತಿದ್ದರು. ಇಂಡಿಯಾದ ಜನರು ಬಹು ಕರುಣಾವಂತರು. ತಮಗೆ ಏನೋ ಒಂದು ಬಾರಿ ಕೇಡು ಸಂಭವಿಸಿದಂತೆ ಗಂಡಸರು ಹೆಂಗಸರು ಮತ್ತು ಮಕ್ಕಳು ಎಲ್ಲಾ ಗೋಳಾಡುತ್ತಿದ್ದರು. ಆ ನಿರ್ಭಾಗ್ಯ ದಾರಾನ ಪಕ್ಕದಲ್ಲಿ ಗಿಯಾನ್ ಖಾನ್ ಸವಾರಿಯಲ್ಲಿ ಹೋಗುತ್ತಿದ್ದ. ಅವನನ್ನು ಕಂಡ ಜನರು ಬೈಯ್ಯುತ್ತಿದ್ದ ಬೈಗುಳಗಳೂ, ಕ್ರೋಧದ ಮಾತುಗಳೂ ಕಿವಿ ಕಿವುಡಾಗುವಂತಿ ದ್ದುವು. ಆ ಅಯೋಗ್ಯ ಪಠಾಣನ ಕಡೆಗೆ ಹಲವು ಫಕೀರರು ಹಾಗೂ ಬಡಜನರು ಕಲ್ಲು ಗಳನ್ನು ಎಸೆಯುತ್ತಿದ್ದುದನ್ನು ಕಂಡೆ. ಆದರೆ ದಾರಾನನ್ನು ಬಿಡಿಸಲು ಒಬ್ಬರಾದರೂ ಅಲ್ಲಾಡಬೇಕಲ್ಲ! ಯಾರಾದರೂ ಕತ್ತಿ ಇರಿಯಬೇಕಲ್ಲ!

ಆ ಅಪಮಾನಕರವಾದ ಮೆರವಣಿಗೆ ದಿಹ್ಲಿಯ ಸಂದಿಗೊಂದಿಗಳಲ್ಲೆಲ್ಲಾ ಸಾಗಿದ ಮೇಲೆ ದಾರಾನನ್ನು ಅವನ ಸ್ವಂತ ತೋಟವಾದ ಹೈದರ್–ಅಬಾದ್‌ನಲ್ಲಿ ಬಂಧನದಲ್ಲಿ ಇಡಲಾಯಿತು.

ಮೆರವಣಿಗೆ ಸಾಗಿದಾಗ ಜನಗಳು ಹೇಗೆ ವರ್ತಿಸಿದರು ಎಂಬುದನ್ನು ಔರಂಗಜೇಬ ತಿಳಿದುಕೊಂಡ ಕೂಡಲೇ ಅವನು ತನ್ನ ಆಪ್ತರನ್ನು ಕರೆಸಿ ಮುಂದಿನ ಆಲೋಚನೆ ಮಾಡಿದ. ದಾರಾನನ್ನು ಗ್ವಾಲಿಯರ್ ಕೋಟೆಯಲ್ಲಿ ಬಂಧನದಲ್ಲಿಡಬೇಕೆ ಅಥವಾ ಕೂಡಲೇ ಅವನನ್ನು ಮುಗಿಸಿಬಿಡಬೇಕೆ—ಎಂಬ ವಿಷಯ ಚರ್ಚೆಯಾಗಿ, ಕೊನೆಗೆ ಅವನನ್ನು ಕೂಡಲೇ ವಧೆಮಾಡುವುದೇ ಸರಿಯೆಂಬ ನಿರ್ಧಾರಕ್ಕೆ ಬರಲಾಯಿತು. ಆತನ ಮಗ ಸೆಪೆರ್‌ಷೆಕೋನನ್ನು ಗ್ವಾಲಿಯರ್ ಕೋಟೆಯಲ್ಲಿ ಇರಿಸಬೇಕೆಂದಾಯಿತು. ಈ ಸಭೆಯಲ್ಲಿ ರೋಷನಾರಾ ಬೇಗಮಳು ತನ್ನ ಅಣ್ಣನ ಮೇಲೆ ಏನೇನು ದ್ವೇಷವಿತ್ತೋ ಅದನ್ನೆಲ್ಲಾ ಕಾರಿ, ದನೇಷ್‌ಮುಂಡ್‌ಖಾನನಿಗೆ ವಿರೋಧವಾಗಿ ವಾದಿಸಿ, ಈ ಅಸಹ್ಯ ಹಾಗೂ ಅಸ್ವಾಭಾವಿಕ ಕೊಲೆಗೆ ಔರಂಗಜೇಬನು ಒಪ್ಪುವಂತೆ ಮಾಡಿದಳು. ಆಕೆಗೆ ಬೆಂಬಲ ಕೊಟ್ಟವರು ಖಲೀಲುಲ್ಲಾಖಾನ್ ಮತ್ತು ಷೈಸ್ತಾಖಾನರು. ಅವರಿಬ್ಬರೂ ದಾರಾನ ಹಳೆಯ ಶತ್ರುಗಳು. ಇನ್ನೊಬ್ಬ ಹೊಸ ಶತ್ರುವೊಬ್ಬ ಹುಟ್ಟಿಕೊಂಡಿದ್ದ. ಅವನೇ ತಕರಬ್‌ಖಾನ್. ಅವರ ಜೊತೆಗೆ ಹಿಂದೆ ಹಕೀಮನಾಗಿದ್ದ ಈತ ಈಚೆಗೆ ಪರಾವಲಂಬಿ ಯಾಗಿ ಅಮೀರನ ಸ್ಥಾನವನ್ನು ಪಡೆದಿದ್ದ. ಈತನನ್ನು 'ಹಕೀಮ್ ದಾವುದ್' ಎಂಬ ವಿಶಿಷ್ಟ ಹೆಸರಿನಿಂದ ಕರೆಯುತ್ತಿದ್ದರು. ಪರ್ಷಿಯಾದಿಂದ ಅವನು ಇಲ್ಲಿಗೆ ಓಡಿಬಂದಿದ್ದ. ಮೇಲೆ ಹೇಳಿದ ಮಂತ್ರಾಲೋಚನಸಭೆಯಲ್ಲಿ ಈತ ರೋಷಾವೇಶದ ಮಾತುಗಳನ್ನಾಡಿ ಎಲ್ಲರ ಗಮನವನ್ನು ತನ್ನ ಕಡೆಗೆ ಸೆಳೆದುಗೊಂಡ. 'ದಾರಾ ಬದುಕಲೇಬಾರದು. ಅವನನ್ನು ಕೂಡಲೇ ಕೊಂದುಹಾಕದಿದ್ದರೆ ರಾಜ್ಯಕ್ಕೆ ಕ್ಷೇಮವಿಲ್ಲ. ಅವನನ್ನು ಕೊಂದು ಹಾಕಬೇಕೆಂದು ಹೇಳುವಾಗ ನನಗೆ ಒಂದಿಷ್ಟೂ ವ್ಯಸನವಿಲ್ಲ. ಏಕೆಂದರೆ, ಆತ ಮುಸಲ್ಮಾನಲ್ಲ; ಕಾಫರ್ ಆಗಿ ಎಷ್ಟೋ ಕಾಲವಾಯಿತು. ಅಂಥವನ ರಕ್ತವನ್ನು ಹರಿಸುವುದು ಪಾಪ ಎಂದಾದರೆ ಆ ಪಾಪ ನನ್ನ ತಲೆಯಮೇಲಿರಲಿ!' ಆಡಿದ ಈ ಮಾತಿಗೆ ತಕ್ಕ ಫಲ ವನ್ನು ಅನುಭವಿಸಿದ ಈ ಹಕೀಮ. ಪಾಪಜೀವನ ನಡೆಸುತ್ತಿದ್ದ ಆತನಿಗೆ ದೇವರು ತಕ್ಕ ಶಿಕ್ಷೆಯನ್ನೇ ವಿಧಿಸಿದ. ಆತ ಸ್ವಲ್ಪಕಾಲದಲ್ಲಿಯೇ ಅವಹೇಳನಕ್ಕೆ ಗುರಿಯಾಗಿ ಅಯೋಗ್ಯ ನೆಂದು ಕರೆಸಿಕೊಂಡು ಬಹಳ ಅಸಹ್ಯವಾದ ಸಾವಿಗೆ ಗುರಿಯಾಗಿಬಿಟ್ಟ.

ದಾರನನ್ನು ಕೊಲ್ಲುವ ಕೆಲಸಕ್ಕೆ ನಜೆರ್ ಎಂಬ ಗುಲಾಮನನ್ನು ನೇಮಿಸಲಾ ಯಿತು. ಈ ಗುಲಾಮನಿಗೆ ಷಾಜಹಾನ ವಿದ್ಯಾಬುದ್ಧಿಗಳನ್ನು ಕಲಿಸಿದ್ದ. ಆದರೂ ಈತನಿಗೆ ದಾರಾನನ್ನು ಕಂಡರೆ ಆಗುತ್ತಿರಲಿಲ್ಲ. ಕಾರಣ, ಈತನನ್ನು ದಾರಾ ಒಮ್ಮೆ ಹಿಯ್ಯಾಳಿಸಿದ್ದ. ತನಗೆ ವಿಷಹಾಕಿ ಸಾಯಿಸುವರೆಂದು ಭಾವಿಸಿದ ದಾರಾ ತನ್ನ ಮಗ ಸೆಪೆರ್‌ಷೆಕೋನ ಜೊತೆಗೂಡಿ ಬಸಳೆಸೊಪ್ಪು (lentil) ಬೇಯಿಸುತ್ತ ಕುಳಿತಿದ್ದ. ಆಗ ನಜೆರ್ ನಾಲ್ಕು ಜನ ಕಟುಕರೊಡಗೂಡಿ ದಾರಾನ ಕೋಣೆಯನ್ನು ಪ್ರವೇಶಿಸಿದ. ಅವರನ್ನು ಕಂಡ ದಾರಾ 'ಮಗುವೇ, ಅಗೋ ನನ್ನನ್ನು ಕೊಲ್ಲಲು ಬಂದಿದ್ದಾರೆ, ಅವರು!' ಎಂದು ಕೂಗಿದ. ಆತನ ಬಳಿ ಇದ್ದ ಒಂದೇ ಒಂದು ಆಯುಧವೆಂದರೆ ಒಂದು ಸಣ್ಣ ಚಾಕು. ಅದನ್ನು

ಕೈಗೆ ತೆಗೆದುಕೊಳ್ಳುವುದೇ ತಡ, ಒಬ್ಬ ಕಟುಕ ಸೆಪೆರ್‌ಷೆಕೋನನ್ನು ಬಲವಾಗಿ ಹಿಡಿದು ಕೊಂಡ. ಇನ್ನು ಮೂವರು ದಾರಾನ ಮೇಲೆ ಬಿದ್ದು ಅವನನ್ನು ಕೆಳಗೆ ಹಾಕಿ ಅದುಮಿ ಹಿಡಿದುಕೊಂಡರು. ಆಗ ನಜೆರ್ ಆ ಬಡಪಾಯಿ ದಾರಾನ ಕತ್ತಿಗೆಯನ್ನು ಕೊಯ್ದು ಬಿಟ್ಟ ! ತಲೆಯನ್ನು ಆ ಕೂಡಲೇ ತೆಗೆದುಕೊಂಡುಹೋಗಿ ಔರಂಗಜೇಬನಿಗೆ ತೋರಿಸ ಲಾಯಿತು. ಔರಂಗಜೇಬ ಅದನ್ನು ಒಂದು ತಟ್ಟೆಯಲ್ಲಿ ಇಡಿಸಿ, ನೀರು ತರುವಂತೆ ಹೇಳಿದ. ನೀರಿನಿಂದ ಮುಖದ ಮೇಲಿದ್ದ ರಕ್ತವನ್ನು ತೊಳೆಸಿದ ಮೇಲೆ ಅವನಿಗೆ ಖಚಿತ ವಾಯಿತು, ಅದು ದಾರಾನ ತಲೆಯೇ ಎಂದು. ಕಣ್ಣಲ್ಲಿ ನೀರು ತಂದು 'ಐ ಬೇದ್–ಬಕ್ತ್ ! (Ai bed-bakt !) ಹೊಲಸು ಇದು ! ಈ ಹೃದಯವಿದ್ರಾವಕ ದೃಶ್ಯ ಮತ್ತೆ ನನ್ನ ಕಣ್ಣಿಗೆ ಬೀಳದಿರಲಿ. ಇದನ್ನು ತೆಗೆದುಕೊಂಡು ಹೋಗಿ ಹುಮಾಯೂನನ ಗೋರಿ ಯಲ್ಲಿ ಹೂಳಿ' ಎಂದು ಆಜ್ಞೆಮಾಡಿದ.

ದಾರಾನ ಮಗಳನ್ನು ಅದೇ ದಿನ ಸಂಜೆ ಅಂತಃಪುರಕ್ಕೆ ಕರೆದುಕೊಂಡು ಹೋಗ ಲಾಯಿತು. ಆಮೇಲೆ ಆಕೆಯನ್ನು ಷಾಜಹಾನ್ ಮತ್ತು ಬೇಗಂ ಸಾಹೇಬಳ ಕೋರಿಕೆಯಂತೆ ಅವರ ಬಳಿಗೆ ಕಳುಹಿಸಿಕೊಟ್ಟರು. ದಾರಾನ ಹೆಂಡತಿ ತನಗೂ ತನ್ನ ಗಂಡನಿಗೂ ಒದಗಬಹುದಾದ ಗಂಡಾಂತರಗಳನ್ನು ಊಹಿಸಿ ಇದಕ್ಕೆ ಮುನ್ನವೇ ಲಾಹೋರಿನಲ್ಲಿ ವಿಷ ತೆಗೆದುಕೊಂಡು ಪ್ರಾಣವನ್ನು ನೀಗಿಕೊಂಡಿದ್ದಳು. ಸೆಪೆರ್ ಷೆಕೊನನ್ನು ಗ್ವಾಲಿಯರ್ ಕೋಟೆಯಲ್ಲಿ ಇಡಲಾಯಿತು.

ಈ ದುರಂತಗಳೆಲ್ಲಾ ನಡೆದ ಸ್ವಲ್ಪ ದಿನಗಳ ಮೇಲೆ ಗಿಯಾನ್ ಖಾನನನ್ನು ಮಂತ್ರಾಲೋಚನಾ ಸಭೆಯ ಮುಂದೆ ಕರೆಸಿ ಒಂದೆರಡು ಬಹುಮಾನಗಳನ್ನು ಕೊಟ್ಟು ದಿಲ್ಲಿಯಿಂದ ಕಳುಹಿಸಿಬಿಟ್ಟರು. ಅವನು ಮಾಡಿದ ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಆತ ಅನುಭವಿಸಬೇಕಾಯಿತು. ಅತನನ್ನು ದಾರಿಯಲ್ಲಿ ಅಡ್ಡಗಟ್ಟಿ ಕೊಲೆಮಾಡಿಸ ಲಾಯಿತಂತೆ. ಮಹಾಕೇಡಿಗರು ತಮ್ಮ ಉದ್ದೇಶ ಸಾಧನೆಗಾಗಿ ಎಂತಹ ಹೇಯವಾದ ಕೆಲಸವನ್ನು ಮಾಡಿಸಿದರೂ, ಹಾಗೆ ಮಾಡಿದವರನ್ನು ಆ ಕೇಡಿಗರು ಬಹಳ ಹೀನಾಯ ಮಾನವಾಗಿ ಕಾಣುತ್ತಾರೆಂಬುದನ್ನು ಮತ್ತು ತಮ್ಮ ಉದ್ದೇಶ ಸಾಧನೆಯಾದನಂತರ ಅಂಥವರನ್ನು ಶಿಕ್ಷೆಗೆ ಒಳಪಡಿಸದೆ ಬಿಡುವುದಿಲ್ಲ ಎಂಬುದನ್ನು ಆ ಅನಾಗರಿಕ ಕೊಂಚ ಆಲೋಚಿಸಬೇಕಾಗಿತ್ತು.

ಈ ಮಧ್ಯೆ ತಟ–ಬಕರ್‌ನ ಶೂರನಾದ ರಾಜ್ಯಪಾಲ ಕೊನೆಯವರೆಗೂ ಹೋರಾಡಿ ಅನಿವಾರ್ಯವಾಗಿ ಶರಣಾಗತನಾದ. ಮೀರ್ ಬಾಬಾ ಪಟ್ಟಣವನ್ನು ಪ್ರವೇಶಿಸಿದ. ಆಮೇಲೆ ಆತ ಲಾಹೋರಿಗೆ. ಹೋಗಿ, ಅಲ್ಲಿಂದ ಶ್ರೀನಗರಕ್ಕೆ ಹೋದ. ಅಲ್ಲಿಗೆ ಹೋದವನು ಸುಲೇಮಾನ್ ಷೆಕೋನ ಪಕ್ಷವಹಿಸಿದ. ಅವನು ತನ್ನೊಡನೆ ಶ್ರೀನಗರಕ್ಕೆ ಕರೆದುಕೊಂಡು ಹೋದವರಲ್ಲಿ ಅನೇಕ ಜನ ಫರಂಗಿಯವರಿದ್ದರು. ಅವರಿಗೆಲ್ಲಾ ಉದಾರವಾಗಿ ಹಣ ಕೊಟ್ಟ.

ದಾರಾನ ಸಂಸಾರದಲ್ಲಿ ಉಳಿದವರೆಂದರೆ ಸುಲೇಮಾನ್ ಷೆಕೋ ಒಬ್ಬನೆ. ಶ್ರೀನಗರದ ರಾಜ ಆತನಿಗೆ ಕೊಟ್ಟ ಮಾತಿನಂತೆ ನಡೆದಿದ್ದರೆ ಆತನನ್ನು ಅಲ್ಲಿಂದ ಈಚೆಗೆ ಹೊರಡಿಸುವುದು ಕಷ್ಟವಾಗಿತ್ತು. ಆದರೆ ಜಯಸಿಂಗನ ಒಳಸಂಚು, ಔರಂಗಜೇಬನ ವಾಗ್ದಾನ ಹಾಗೂ ಬೆದರಿಕೆಗಳು, ದಾರಾನ ಮರಣ, ನೆರೆಹೊರೆಯ ರಾಜರುಗಳು ಮಾಡಿಕೊಳ್ಳುತ್ತಿದ್ದ ಸಿದ್ಧತೆ–ಇವೆಲ್ಲಾ ಆ ಪುಕ್ಕಲು ರಾಜನ ಧೈರ್ಯವನ್ನೂ ಕೆಡಿಸಿ ದುವು. ಸುಲೇಮಾನ್ ಷೆಕೋನಿಗೆ ಸ್ಪಷ್ಟವಾಯಿತು, ತನಗಿನ್ನು ರಕ್ಷಣೆ ದೊರೆಯ ಲಾರದು ಎಂದು. ಶ್ರೀನಗರವನ್ನು ಬಿಟ್ಟು ಆತ ಮಹಾ ತಿಬೆಟಿಗೆ ಹೋಗಲು ಪ್ರಯತ್ನ ಪಟ್ಟ. ಅಲ್ಲಿಗೆ ಹೋಗುವ ದಾರಿ ಅಸಾಧ್ಯ ಗುಡ್ಡಗಾಡುಗಳಿಂದ ಕೂಡಿತ್ತು. ಅವನನ್ನು ಅಲ್ಲಿಗೂ ಶ್ರೀನಗರದ ರಾಜನ ಮಗ ಹಿಂಬಾಲಿಸಿದ. ಷೆಕೋ ಆತನ ಕೈಗೆ ಸಿಕ್ಕಿಬಿದ್ದ. ಸಿಕ್ಕಿಬಿದ್ದ ಆತನನ್ನು ದಿಲ್ಲಿಗೆ ಕರೆದುಕೊಂಡು ಬಂದರು. ಅಲ್ಲಿ ಸೆಲೀಂಘರ್ ಕೋಟೆಯಲ್ಲಿ ಮೊರಾದ್ ಬಕ್ಷನೊಡನೆ ಸೆರೆಮನೆಗೆ ಹಾಕಿದರು.

ಔರಂಗಜೇಬ ದಾರಾನ ಬಗ್ಗೆ ಹೇಗೆ ನಡೆದುಕೊಂಡನೋ ಅದೇ ರೀತಿ ದಾರಾನ ಮಗನ ಬಗ್ಗೆಯೂ ನಡೆದುಕೊಂಡ. ಬಂಧಿಸಲ್ಪಟ್ಟಿರುವವನು ಸುಲೇಮಾನ್ ಷೆಕೋ ಎಂಬುದು ಎಲ್ಲರಿಗೂ ಗೊತ್ತಾಗಲಿ ಎಂದು ಆತನನ್ನು ಎಲ್ಲ ಆಸ್ಥಾನಿಕರ ಮುಂದೆ ಕರೆಸಿದ. ಕುತೂಹಲವನ್ನು ತಡೆಯಲಿಕ್ಕಾಗದೆ ನಾನೂ ಅಲ್ಲಿಗೆ ಹೋಗಿದ್ದೆ. ಆ ಭೀಕರ ದೃಶ್ಯವನ್ನು ಕಣ್ಣಾರೆ ಕಂಡೆ. ಅಮೀರರುಗಳೆಲ್ಲಾ ಸೇರಿದ್ದ ಸಭೆಗೆ ಷೆಕೋನನ್ನು ಕರೆ ತಂದರು. ಅದಕ್ಕೆ ಮುಂಚೆ ಅವನ ಕಾಲ್ಬೇಡಿಗಳನ್ನು ತೆಗೆದುಹಾಕಿದರು. ಆದರೆ ಗಿಲೀಟನ ಕೈಬೇಡಿಗಳು ಹಾಗೆ ಇದ್ದುವು. ಎತ್ತರವಾಗಿಯೂ ಸುಂದರಕಾಯನಾಗಿಯೂ ಇದ್ದ ಆ ಯುವಕನನ್ನು ಕಂಡಾಗ ಅನೇಕ ಅಮೀರರು ಕಣ್ಣೀರುಹಾಕಿದರು. ಆಸ್ಥಾನದ ಪ್ರಮುಖ ಸ್ತ್ರೀಯರಿಗೆ ಸಭೆಗೆ ಬರಲು ಅನುಮತಿ ನೀಡಲಾಗಿತ್ತು. ಅವರೆಲ್ಲ ಜಾಳಂದರ ಗಳ ಹಿಂದೆ ಕುಳಿತು ನಿಟ್ಟುಸಿರುಬಿಡುತ್ತಿದ್ದರು. ಔರಂಗಜೇಬನು ತನ್ನ ಭ್ರಾತೃವಿಗೊದ ಗಿದ ಸಂಕಟಕ್ಕೆ ವ್ಯಸನಪಡುವಂತೆ ಕಂಡಿತು. ಆತ ದಯಾಪೂರಿತನಾಗಿ ಈ ಮಾತು ಗಳನ್ನು ಹೇಳಿದ : 'ಹೆದರಬೇಡ, ಷೆಕೋ. ನಿನಗೆ ಯಾವ ತೊಂದರೆಯೂ ಆಗುವುದಿಲ್ಲ. ದೇವರು ದೊಡ್ಡವನು. ನೀನು ಅವನನ್ನು ನಂಬು. ದಾರಾ ಬದುಕಲು ಅವಕಾಶ ಕಲ್ಪಿಸಿ ಕೊಳ್ಳಲಿಲ್ಲ. ಅವನ ಮರಣಕ್ಕೆ ಕಾರಣ ಆತ ಕಾಫರನಾಗಿದ್ದುದೇ !'

ಈ ಮಾತುಗಳನ್ನು ಕೇಳಿ ಷೆಕೊ ನೆಲಕ್ಕೆ ಬಗ್ಗಿ ಸಲಾಂ ಮಾಡಿದ. ಹಾಗೆ ಮಾಡಿ ದಿಟ್ಟತನದಿಂದ "ಕುಡಿಯಲು 'ಪೌಸ್ಟ್' (poust) ಕೊಡುವುದೆಂದಾದರೆ ಕೂಡಲೇ ನನ್ನನ್ನು ಸಾವಿಗೀಡುಮಾಡುವುದೊಳ್ಳೆಯದು" ಎಂದು ಹೇಳಿದ. "ಆ ಪಾನೀಯ ವನ್ನು ಖಂಡಿತ ಕುಡಿಸುವುದಿಲ್ಲ" ಎಂದು ಔರಂಗಜೇಬ ಧೃಡವಾಗಿ ನುಡಿದು, ಅವನನ್ನು ಸಮಾಧಾನ ಮಾಡಿದ. ಮತ್ತೊಂದು ಸಲ ಸಲಾಂಮಾಡಬೇಕೆಂದು ಆ ಯುವಕನಿಗೆ ಆಜ್ಞಾಪಿಸಲಾಯಿತು. ಆನೆಯ ಮೇಲೆ ಚಿನ್ನದ ರೂಪಾಯಿಗಳನ್ನು ಹೇರಿಕೊಂಡು

ಹೋದ ಬಗ್ಗೆ ಆತನನ್ನು ಪ್ರಶ್ನಿಸಲಾಯಿತು. ಇಷ್ಟೆಲ್ಲಾ ಆದಮೇಲೆ ಅವನನ್ನು ಅಲ್ಲಿಂದ ಹೊರಗೆ ಕರೆದುಕೊಂಡುಹೋಗಿ ಮಾರನೆಯ ದಿನ ಗ್ವಾಲಿಯರಿಗೆ ಸಾಗಿಸಲಾಯಿತು.

ಈ 'ಪೌಸ್ಟ್' ಎಂದರೆ ಮತ್ತೇನಲ್ಲ, ಗಸಗಸೆ ಬೀಜಗಳನ್ನು (poppy heads) ಅರೆದು, ಒಂದು ರಾತ್ರಿ ನೀರಿನಲ್ಲಿ ನೆನೆಹಾಕಿ ಮಾಡಿದ ಪಾನೀಯ ಅಷ್ಟೆ. ಕಾರಣಾಂತರ ಗಳಿಂದ ಅಪರಾಧಿಯ ತಲೆ ಕಡಿಯಬಾರದೆಂಬ ತೀರ್ಮಾನಕ್ಕೆ ಬಂದಲ್ಲಿ ಅಂಥ ಅಪರಾಧಿಗೆ ಈ ಪಾನೀಯವನ್ನು ಬೆಳಗ್ಗೆ ಹೊತ್ತಿಗೆ ಮುಂಚೆ ದೊಡ್ಡ ಬಟ್ಟಲೊಂದರಲ್ಲಿ ತಂದು ಕುಡಿಸು ತ್ತಾರೆ. ಅದನ್ನು ಕುಡಿಯುವವರೆಗೆ ತಿನ್ನಲು ಏನನ್ನೂ ಕೊಡುವುದಿಲ್ಲ. ಕುಡಿದವನು ಹಾಗೆಯೇ ಹೊಟ್ಟೆಗಿಲ್ಲದೆ ಸಾಯಬೇಕು, ಅಷ್ಟೆ. ಈ ಪಾನೀಯವನ್ನು ಸೇವಿಸಿದವನು ನಿಧಾನವಾಗಿ ಶಕ್ತಿಹೀನನಾಗಿ ಬುದ್ಧಿಯನ್ನು ಕಳೆದುಕೊಳ್ಳುತ್ತಾನೆ. ಬರುಬರುತ್ತಾ ಜಡಸ್ವಭಾವದವನಾಗಿ, ಕೊನೆಗೆ ಸತ್ತೇಹೋಗುತ್ತಾನೆ. ಈ ಪಾನೀಯದಿಂದಲೇ ಸೆಪೆರ್ ಷೆಕೊ, ಮುರಾದ್ ಭಕ್ಷನ ಮೊಮ್ಮಗ ಮತ್ತು ಸುಲೇಮಾನ್ ಷೆಕೊ–ಇವರುಗಳನ್ನು ಈ ಪ್ರಪಂಚದಿಂದ ತೊಲಗಿಸಿದ್ದು ಎಂದು ಹೇಳುತ್ತಾರೆ.

ಮೊರಾದ್ ಭಕ್ಷನನ್ನು ಇನ್ನೂ ಹೆಚ್ಚು ಕ್ರೂರವಾದ ವಿಧಾನದಲ್ಲಿ ಮರಣಕ್ಕೀಡು ಮಾಡಲಾಯಿತು. ಆತ ಸೆರೆಮನೆಯಲ್ಲಿದ್ದರೂ ಜನಗಳು ಆತನ ಬಗ್ಗೆ ಬಹಳ ವಿಶ್ವಾಸ ವನ್ನು ತೋರಿಸುತ್ತಿದ್ದರು. ಆತನ ಶೌರ್ಯ ಧೈರ್ಯಗಳನ್ನು ಕುರಿತು ಜನರು ಒಂದೇ ಸಮನೆ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದರು. ಇಂಥವನಿಗೆ 'ಪೌಸ್ಟ್' ಕುಡಿಸಿ ಗುಟ್ಟಾಗಿ ಈ ಲೋಕದಿಂದ ಕಳುಹಿಸಿಕೊಡುವುದು ಔರಂಗಜೇಬನಿಗೆ ಸರಿಯೆಂದು ಕಾಣಲಿಲ್ಲ. ಅವನು ಸತ್ತನೆ ಇಲ್ಲವೆ ಎಂಬ ಅನುಮಾನ ಜನರಿಗೆ ಇದ್ದೇ ಇರುತ್ತದೆ ಎಂದೂ ಅದರಿಂದಾಗಿ ಒಂದಲ್ಲ ಒಂದು ದಿನ ಅವನ ಪರ ಜನರು ದಂಗೆಯೇಳಬಹುದೆಂದೂ ಯೋಚಿಸಿ, ಆತನು ಗುಜರಾತಿನಲ್ಲಿ ರಾಜ್ಯವಾಳುತ್ತ ಯುದ್ಧಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿರುವಾಗ ಅಹಮದಾ ಬಾದಿನ ಒಬ್ಬ ಸೈಯದನನ್ನು ಕೊಲ್ಲಿಸಿ ಅವನ ಐಶ್ವರ್ಯವನ್ನೆಲ್ಲಾ ಕಸಿದುಕೊಂಡ ಎಂದು ಅವನ ಮೇಲೊಂದು ಆಪಾದನೆ ಹೊರಿಸಿದ. ಆ ಸೈಯದನ ಮಕ್ಕಳು ಬಹಿರಂಗವಾಗಿ ಆಸ್ಥಾನದಲ್ಲಿ ಹಾಜರಾಗಿ ನ್ಯಾಯ ದೊರಕಿಸಿಕೊಡಬೇಕೆಂದು ಗಟ್ಟಿಯಾಗಿ ಕೂಗಿದರು. ಪ್ರತೀಕಾರವಾಗಿ ಮೊರಾದ್ ಭಕ್ಷನ ತಲೆ ಬೇಕೆಂದು ಅವರು ಕೇಳಿದರು. ಹಿಂದು ಮುಂದು ನೋಡದೆ ಔರಂಗಜೇಬ ಅವರ ಕೋರಿಕೆಯನ್ನು ಸಲ್ಲಿಸಿಬಿಟ್ಟ. ಗ್ವಾಲಿಯರ್ ಕೋಟೆಗೆ ಹೋಗಿ ಮುರಾದ್ ಭಕ್ಷನ ತಲೆ ಪಡೆಯಬಹುದೆಂದು ಹೇಳಿದ.

ಇನ್ನು ಔರಂಗಜೇಬನ ಮನಸ್ಸಿನಲ್ಲಿ ಉಳಿದು ಆತನಿಗೆ ಆತಂಕವನ್ನುಂಟುಮಾಡು ತ್ತಿದ್ದವನೆಂದರೆ ಸುಲ್ತಾನ್ ಸೂಜ ಒಬ್ಬನೆ. ಇಲ್ಲಿಯವರೆಗೂ ಶೌರ್ಯ ಧೈರ್ಯಗಳನ್ನು ತೋರಿಸಿದ ಆತ ಈಗ ಕೊನೆಗೆ ಸಹೋದರನ ಶಕ್ತಿಸಾಮರ್ಥ್ಯಗಳಿಗೆ ಮಣಿಯುವುದು ಸೂಕ್ತವೆಂದು ಭಾವಿಸಿದನು. ಅವನ ಮೇಲೆ ಯುದ್ಧಮಾಡುತ್ತಿದ್ದ ಮೀರ್ ಜುಮ್ಲಾನ ಸಹಾಯಕ್ಕೆ ಔರಂಗಜೇಬ ಮೇಲಿಂದ ಮೇಲೆ ಸೈನ್ಯವನ್ನು ಕಳುಹಿಸಿದ ಕಾರಣ ಕೊನೆಗೆ

ಸುಲ್ತಾನ್ ಸೂಜ ತನ್ನ ಪ್ರಾಣ ರಕ್ಷಣೆಗಾಗಿ ಡಾಕ್ಕಾಕ್ಕೆ ಓಡಿಹೋಗಬೇಕಾಯಿತು. ಅಲ್ಲಿಗೆ ಆ ದುರಂತದ ಕತೆ ಕೊನೆಗೊಂಡಿತು.

ಡಾಕ್ಕಾಕ್ಕೆ ಹೋದ ಸುಲ್ತಾನ್ ಸೂಜ ಮುಂದೆಲ್ಲಿಗೆ ಹೋಗಬೇಕೆಂದು ಗೊತ್ತಿಲ್ಲದೆ ಸಧ್ಯಕ್ಕೆ ಅರಕಾನ್‌ನಲ್ಲಿ ಆಶ್ರಯಪಡೆದು ಮೋಕಾಕ್ಕೆ ಹೋಗಿ, ಅನುಕೂಲವೊದಗಿದಾಗ ಮೆಕ್ಕಾಕ್ಕೂ ಆನಂತರ ತುರ್ಕಿಗೋ ಪರ್ಷಿಯಾಕ್ಕೋ ಹೋಗುವುದೆಂದು ತೀರ್ಮಾನಿಸಿದ. ಈ ವಿಚಾರವಾಗಿ ಅರಕಾನ್ ರಾಜನನ್ನು ಕಂಡುಬರಲು ತನ್ನ ಮಗ ಸುಲ್ತಾನ್ ಬಂಕೂ ವನ್ನು ಕಳುಹಿಸಿದ. ಆ ರಾಜ ಸೂಜನ ಕೋರಿಕೆಯನ್ನು ಮನ್ನಿಸಿ 'ಆಗಬಹುದು' ಎಂದನು. ಅನೇಕ 'ಗ್ಯಾಲಿ'ಗಳ (ದೋಣಿಗಳ) ಸಮೇತ ಸುಲ್ತಾನ್ ಬಂಕೂ ಡಾಕ್ಕಾಕ್ಕೆ ಹಿಂದಿರುಗಿದ. ಈ ಗ್ಯಾಲಿಗಳನ್ನು ಫರಂಗಿಯವರು (Franks) ನಡೆಸುತ್ತಿದ್ದರು. 'ಫ್ರಾಂಕರು' (Franks) ಎಂದರೆ ಕದ್ದುಬಂದ ಪೋರ್ಚುಗೀಸರು ಮತ್ತು ಇತರ ಅಲೆಮಾರಿ ಕ್ರೈಸ್ತರು. ಇವರು ಅರಕಾನ್ ರಾಜನಲ್ಲಿ ಸೇರಿಕೊಂಡು ಕೆಳಬಂಗಾಳವನ್ನು ಕೊಳ್ಳೆಹೊಡೆಯುವುದನ್ನು ತಮ್ಮ ಮುಖ್ಯ ವೃತ್ತಿಯಾಗಿಮಾಡಿಕೊಂಡಿದ್ದರು.

ಅರಕಾನ್ ರಾಜನು ಕಳುಹಿಸಿದ ದೋಣಿಗಳಲ್ಲಿ ಕುಳಿತು ಸುಲ್ತಾನ್ ಸೂಜ ತನ್ನ ಹೆಂಡತಿ, ಮೂರು ಜನ ಗಂಡು ಮಕ್ಕಳು ಮತ್ತು ಹೆಣ್ಣುಮಕ್ಕಳ ಸಮೇತ ಅರಕಾನಿಗೆ ಹೊರಟ. ಅವರನ್ನೆಲ್ಲ ಅರಕಾನ್ ರಾಜ ಗೌರವದಿಂದ ಕಂಡು, ಅವರಿಗೆ ಬೇಕಾದ ಆವಶ್ಯಕತೆಗಳನ್ನು ಒದಗಿಸಿದ. ಹೀಗೆ ತಿಂಗಳುಗಳು ಕಳೆದುವು. ಹಡಗಿನಲ್ಲಿ ಮೊಕಾಕ್ಕೆ ಹೋಗಲು ಅನುಕೂಲವಾದ ಕಾಲ ಒದಗಿತು. ಆದರೂ ಹಡಗಿನ ಸುದ್ದಿಯೇ ಇಲ್ಲ. ಸೂಜ ಹಡಗುಗಳನ್ನು ಬಾಡಿಗೆಗೆ ಕೇಳಿದ. ಅವನಿಗೆ ಹಡಗುಗಳಲ್ಲದೆ ಚಿನ್ನಬೆಳ್ಳಿಯಾಗಲಿ ವಜ್ರಗಳಾಗಲಿ ಬೇಕಿರಲಿಲ್ಲ ; ಅವೆಲ್ಲ ಅವನಲ್ಲಿ ಸಾಕಷ್ಟು ಇದ್ದುವು. ಬಹುಶಃ ಅವನ ಐಶ್ವರ್ಯವೇ ಅವನ ಅವನತಿಗೆ ಕಾರಣವೆಂದು ಹೇಳಬಹುದೆಂದು ಕಾಣುತ್ತದೆ. ಈ ಅನಾಗರಿಕ ರಾಜರುಗಳಿಗೆ ಅವರು ಆಡಿದ ಮಾತಿನ ಮೇಲೆ ನಂಬಿಕೆಯೇ ಇಲ್ಲ. ಮೋಕಾಕ್ಕೆ ಹೋಗಲು ಅವಕಾಶ ಮಾಡಿಕೊಡಬೇಕೆಂದು ಸುಲ್ತಾನ್ ಸೂಜ ಎಷ್ಟೇ ಹೇಳಿಕಳುಹಿಸಿದರೂ ಅರಕಾನ್ ರಾಜ ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಅವನ ಮುಂದೆ ಹೋಗಿ ನಿಂತು ಸಲಾಂ ಹಾಕಿ ಕೇಳುವುದು ತನ್ನ ಗೌರವಕ್ಕೆ ತರವಲ್ಲವೆಂದು ಸೂಜ ಭಾವಿಸಿರಬೇಕು ; ಅಥವಾ ಹೋದರೆ ಆತ ತನ್ನನ್ನೆಲ್ಲಿ ಸೆರೆಹಿಡಿಯುವನೋ ಎಂದು ಹೆದರಿರಬೇಕು. ಈ ಅರಕಾನ್ ರಾಜನನ್ನು ಮಿರ್ ಜುಮ್ಲಾ ಅಗಲೆ ತನ್ನ ಬುಟ್ಟಿಗೆ ಹಾಕಿಕೊಂಡಿದ್ದ. ಆದರೂ ಸೂಜ ತನ್ನ ಮಗನನ್ನು ಕಳುಹಿಸಿದ. ಮಗನು ರಾಜನನ್ನು ಕಂಡು ಒಳ್ಳೊಳ್ಳೆಯ ಬಹುಮಾನಗಳನ್ನು ಅರ್ಪಿಸಿ, ತಂದೆಯ ಪರವಾಗಿ ನಮಸ್ಕಾರ ಹೇಳಿ, ಆಡಿದ ಮಾತಿನಂತೆ ನಡೆದುಕೊಳ್ಳಬೇಕೆಂದು ಕೇಳಿಕೊಂಡನು. ಇದರಿಂದಲೂ ಯಾವ ಫಲಿತಾಂಶ ಕಾಣಲಿಲ್ಲ. ಇದರಿಂದ ಸುಲ್ತಾನ್ ಸೂಜನ ಮನಸ್ಸಿಗೆ ಸಾಕಷ್ಟು ನೋವಾಯಿತು. ಇದು ಸಾಲದೆಂಬಂತೆ ಅರಕಾನ್ ರಾಜ ತನಗೆ ಸೂಜನ

ಮಗಳನ್ನು ಮದುವೆ ಮಾಡಿಕೊಡಬೇಕೆಂದು ಕೇಳಿದ. ಇದಕ್ಕೆ ಸೂಜ ಒಪ್ಪದೆ ಹೋದ ಕಾರಣ ರಾಜ ನಿರಾಶನಾದ. ಇದರಿಂದ ಸೂಜ ಬಹಳ ಸಂದಿಗ್ಧ ಪರಿಸ್ಥಿತಿಗೆ ಒಳಗಾದ. ಆಗ ಮಾಡುವುದೇನು ? ಸುಮ್ಮನೆ ಕೆಲಸವಿಲ್ಲದೆ ಕುಳಿತುಕೊಳ್ಳುವುದೆಂದರೆ ಅವನತಿಯೇ ಸರಿ. ಸಮುದ್ರಯಾನ ಮಾಡಲು ಹವಾಮಾನ ಅನುಕೂಲವಾದ ಕಾಲ ಕಳೆಯುತ್ತಾ ಬರುತ್ತಿತ್ತು. ಏನಾದರೂ ಉಪಾಯ ಮಾಡದಿದ್ದರೆ ಗತ್ಯಂತರವಿಲ್ಲವೆಂದು ಆಲೋಚಿಸಿದ ಸುಲ್ತಾನ್ ಸೂಜ ಒಂದು ಸನ್ನಾಹ ಮಾಡಿದ. ಅರಕಾನ್ ರಾಜ ಜೆಂಟೈಲನಾದರೂ ಅವನ ರಾಜ್ಯದಲ್ಲಿ ಅನೇಕ ಜನ ಮಹಮ್ಮದೀಯರಿದ್ದರು. ಸೂಜ ಗುಟ್ಟಾಗಿ ಅವರನ್ನು ತನ್ನ ಕಡೆಗೆ ಎಳೆದುಕೊಂಡು, ಅವರನ್ನೂ ತನ್ನ ಕಡೆಯ ಇನ್ನೂರು ಮುನ್ನೂರು ಜನರನ್ನೂ ಸೇರಿಸಿ ಒಂದು ಕೂಟ ಕಟ್ಟಿದ. ಈ ಕೂಟದ ಸಹಾಯದಿಂದ ರಾಜನ ಮೇಲೆ ಬಿದ್ದು, ಅವನನ್ನೂ ಅವನ ಸಂಸಾರದವರನ್ನೂ ಕೊಂದುಹಾಕಿ ತಾನು ರಾಜನಾಗಬೇಕೆಂದು ಆತ ಮನಸ್ಸು ಮಾಡಿದ. ಆದರೆ ಇದನ್ನು ಕಾರ್ಯರೂಪಕ್ಕೆ ತರುವುದಕ್ಕೆ ಮುಂಚೆಯೇ ಗುಟ್ಟು ರಟ್ಟಾಗಿಬಿಟ್ಟಿತು. ಆಗ ಅರಕಾನ್ ರಾಜ ಸುಮ್ಮನಿದ್ದಾನೆಯೇ ! ಸುಲ್ತಾನ್ ಸೂಜನನ್ನೂ ಅವನ ಹೆಂಡತಿ ಮಕ್ಕಳನ್ನೂ ಕೊಲ್ಲಿಸಲು ಯೋಚನೆಮಾಡಿದ. ಇದನು ತಿಳಿದ ಸೂಜ ದಿಕ್ಕುತೋರದೆ ಪೆಗೂ ರಾಜ್ಯಕ್ಕೆ ಓಡಿಹೋಗಲು ಪ್ರಯತ್ನಪಟ್ಟ. ಅಲ್ಲಿಗೆ ಹೋಗುವುದು ಸುಲಭವಾಗಿರಲಿಲ್ಲ. ಉದ್ದಕ್ಕೂ ಬೆಟ್ಟಗುಡ್ಡ ಕಾಡುಗಳು. ಹಿಂದೆ ಇದ್ದಂತೆ ಈಗ ಅಲ್ಲಿಗೆ ಸರಿಯಾದ ಮಾರ್ಗವಿರಲಿಲ್ಲ. ಅಂತೂ ಸೂಜ ಆ ಕಠಿಣವಾದ ದಾರಿಯಲ್ಲಿ ಸಾಗಿದ. ಹಿಂದಿನಿಂದ ಅವನ ಬೆನ್ನಟ್ಟಿ ಹೋಗುತ್ತಿದ್ದರು, ರಾಜನ ಕಡೆಯವರು. ಕೇವಲ ಇಪ್ಪತ್ತುನಾಲ್ಕು ಗಂಟೆಗಳೊಳಗೆ ಅವನು ಸಿಕ್ಕಿಬಿದ್ದ. ಸೆರೆಸಿಕ್ಕುವ ಮುನ್ನ ಸೂಜ ದಿಟ್ಟತನದಿಂದ ಹೋರಾಡಿದ. ಆದರೆ ಸಂಖ್ಯೆಯಲ್ಲಿ ಹೆಚ್ಚಿದ್ದ ಅವರನ್ನು ಸೋಲಿಸುವುದು ಸುಲಭವಾಗಲಿಲ್ಲ. ಸೂಜನ ಮಗ ಬಂಕೂ ಸಿಂಹದಂತೆ ಹೋರಾಡಿದ. ಸುತ್ತಲಿಂದ ಬಿದ್ದ ಕಲ್ಲುಬಂಡೆಗಳಿಂದ ಅವನ ಮೈಯೆಲ್ಲಾ ರಕ್ತಮಯವಾಯಿತು. ಕೊನೆಗೆ ಸೋತು ಸಿಕ್ಕಿಬಿದ್ದ ಅವನನ್ನೂ, ಅವನ ಇಬ್ಬರು ತಮ್ಮಂದಿರನ್ನೂ, ತಂಗಿಯರು ಮತ್ತು ತಾಯಿಯನ್ನೂ ಸೆರೆಹಿಡಿದು ಕರೆದುಕೊಂಡು ಹೋದರು.

ಈ ಘಟನೆ ನಡೆದ ಮೇಲೆ ಸುಲ್ತಾನ್ ಸೂಜನ ಗತಿಯೇನಾಯಿತೆಂದು ಗೊತ್ತಾಗಲಿಲ್ಲ. ನಾಲ್ಕಾರು ತರಹ ಸುದ್ದಿಗಳನ್ನು ಹೇಳುತ್ತಾರೆ ದಿಲ್ಲಿಯಲ್ಲಿ. ಮಸುಲಿಪಟ್ಟದಲ್ಲಿ ಅವನು ಇದ್ದನೆಂದೂ, ಅವನಿಗೆ ಗೋಲ್ಕೊಂಡಾ ಮತ್ತು ಬಿಜಾಪುರ ರಾಜರುಗಳು ಸಹಾಯಮಾಡುವುದಾಗಿ ಹೇಳಿದರೆಂದೂ ಒಂದು ಸುದ್ದಿ. ಇನ್ನೊಂದು ಸುದ್ದಿ, ಆತನನ್ನು ಸೂರತ್ತಿನಲ್ಲಿ ಕಂಡರು ಎಂಬುದು. ಪರ್ಷಿಯಾದಲ್ಲಿ ಇದ್ದನೆಂದು ಮತ್ತೊಂದು ಸುದ್ದಿ. ನನಗನಿಸುತ್ತದೆ, ಇವೆಲ್ಲಾ ನಂಬಲರ್ಹವಾದ ಸುದ್ದಿಗಳಲ್ಲ ಎಂದು. ಆ ಪ್ರದೇಶದಲ್ಲಿರುವ ಡಚ್ ಫ್ಯಾಕ್ಟರಿಯ ಮುಖ್ಯಸ್ಥನೊಬ್ಬನು ಬರೆದ ಪತ್ರದಲ್ಲಿ ಇರುವ ಸುದ್ದಿಯೇ ಸರಿಯಾದ ಸುದ್ದಿಯೆಂದು ನನ್ನ ಭಾವನೆ. ಆ ಪತ್ರದ ಪ್ರಕಾರ, ಸೂಜ ತಪ್ಪಿಸಿಕೊಳ್ಳಲು

ಪ್ರಯತ್ನಪಟ್ಟು ಕೊನೆಗೆ ಶತ್ರುಗಳ ಖಡ್ಗಕ್ಕೆ ತುತ್ತಾದನೆಂದೂ, ಆತನ ಶವ ಇತರರ ಶವಗಳಲ್ಲಿ ಸೇರಿಹೋಗಿ ಗುರುತಿಸಲಾರದಂತಾಗಿತ್ತೆಂದೂ ಗೊತ್ತಾಗುತ್ತದೆ.

ಹೀಗೆ ಸೂಜನ ಗತಿಯ ಬಗ್ಗೆ ಹಲವಾರು ಊಹಾಪೋಹಗಳಿದ್ದರೂ ಆತನ ಹೆಂಡತಿಮಕ್ಕಳ ಬಗ್ಗೆ ಅಂತಹ ಯಾವ ಊಹಾಪೋಹಗಳೂ ಇಲ್ಲ. ಹಿಂದಿರುಗಿ ಕರೆದು ತಂದ ಮೇಲೆ ಅವರನ್ನೆಲ್ಲಾ ಸೆರೆಮನೆಗೆ ನೂಕಿ ಬಹಳ ಕ್ರೂರವಾಗಿ ಕಾಣಲಾಯಿತು. ಸ್ವಲ್ಪ ಕಾಲದ ನಂತರ ಅವರನ್ನು ಬಂಧನದಿಂದ ಬಿಡುಗಡೆಮಾಡಿ ಅವರ ಬಗ್ಗೆ ಕರುಣೆಯನ್ನು ತೋರಿಸಲಾಯಿತು. ಅರಕಾನ್ ರಾಜ ಹಿರಿಯ ರಾಜಕುಮಾರಿಯನ್ನು ಮದುವೆಯಾದ. ರಾಜಮಾತೆ ಸುಲ್ತಾನ್ ಬಂಕೂವಿನ ಮೇಲೆ ಕಣ್ಣುಹಾಕಿದಳು !

ಇಷ್ಟೆಲ್ಲಾ ನಡೆಯುತ್ತಿರುವಾಗ ಸುಲ್ತಾನ್ ಬಂಕೂವಿನ ಕೆಲವು ಸೇವಕರು ಮಹಮ್ಮದೀಯರ ಕಡೆ ಸೇರಿಕೊಂಡು ಕಟ್ಟಕಡೆಯ ಒಳಸಂಚು ನಡೆಸಲೆತ್ನಿಸಿದರು. ಆದರೆ ಅದನ್ನು ನಡೆಸಲು ಪ್ರಯತ್ನಿಸಿದ ದಿನವೇ ಅದು ಬಹಿರಂಗವಾಗಿಬಿಟ್ಟಿತು. ಇದರ ಬಗ್ಗೆ ಯೂ ಸಾಪಿರ ಕಥೆಗಳನ್ನು ಹೇಳುತ್ತಾರೆ. ಇವುಗಳಲ್ಲಿ ನಂಬಲರ್ಹವಾದುದೆಂದರೆ, ರಾಜನು ಸೂಜನ ವಂಶವನ್ನೇ ನಿರ್ಮೂಲ ಮಾಡಬಿಡಬೇಕೆಂದು ದೃಢಸಂಕಲ್ಪಮಾಡಿದನೆಂಬುದು. ಆತನು ಮದುವೆಯಾದ ರಾಜಕುಮಾರಿಯನ್ನು, ಆಕೆ ತುಂಬು ಗರ್ಭಿಣಿಯಾಗಿದ್ದರೂ, ಅವನ ಅಪ್ಪಣೆಯಂತೆ ಕೊಲ್ಲಿಸಲಾಯಿತು ; ಸುಲ್ತಾನ್ ಬಂಕೂ ಮತ್ತು ಆತನ ತಮ್ಮಂದಿರನ್ನು ಕರಾಳವಾದ ಕೊಡಲಿಗಳಲ್ಲಿ ಕತ್ತರಿಸಿಹಾಕಿದರು. ಆ ನತದೃಷ್ಟ ಸಂಸಾರಕ್ಕೆ ಸೇರಿದ ಸ್ತ್ರೀಯರನ್ನು ಅವರವರ ಕೋಣೆಗಳಲ್ಲಿ ಕೂಡಿಹಾಕಿ ಹೊಟ್ಟೆಗಿಲ್ಲದೆ ಸಾಯಿಸಿದರು.

ಮೊಗಲ್ ರಾಜ್ಯಕ್ಕೆ ಆಸೆಪಟ್ಟ ಆ ನಾಲ್ಕು ಸಹೋದರರಲ್ಲಿ ಉದ್ಭವಿಸಿದ ಯುದ್ಧ ಇಂತು ಕೊನೆಗೊಂಡಿತು. ಇದು ಐದಾರು ವರ್ಷಗಳಕಾಲ, ಅಂದರೆ ಸುಮಾರು ೧೬೫೫ ರಿಂದ ೧೬೬೦ ಅಥವಾ ೧೬೬೧ರವರೆಗೆ ನಡೆಯಿತು. ಕೊನೆಗೆ ಔರಂಗಜೇಬನು ಆ ಮಹಾ ಚಕ್ರಾಧಿಪತ್ಯದ ಏಕೈಕ ಸಾಮ್ರಾಟನಾಗಿ ಮೆರೆದ.

ಯುದ್ಧ ಮುಗಿಯಿತೊ ಇಲ್ಲವೋ, ಉಸ್ಬೆಕಿನ ಟಾರ್ಟರರು ಔರಂಗಜೇಬನ ಬಳಿಗೆ ಇಬ್ಬರು ರಾಯಭಾರಿಗಳನ್ನು ಕಳುಸಿಕೊಟ್ಟರು. ಷಾಜಹಾನ ಬದುಕಿದ್ದರೂ ಅವನ ಈ ಮಗ ಇಂಡೀಸಿನ ರಾಜನಾಗಿರುವುದು ವಾಸ್ತವವೆಂಬ ವಿಷಯವನ್ನು ಅರಿತುಕೊಂಡ ಅವರು ತಮ್ಮ ಹಿಂದಿನ ಮೋಸದ ವರ್ತನೆಯನ್ನು ಮರೆಸುವ ಉದ್ದೇಶದಿಂದ ರಾಯಭಾರಿಗಳನ್ನು ಕಳುಹಿಸಿದರು. ಔರಂಗಜೇಬ ರಾಯಭಾರಿಗಳನ್ನು ಸೂಕ್ತ ಮರ್ಯಾದೆಯಿಂದ ಕಂಡು ಗೌರವಿಸಿದನು. ಆಗ ನಾನು ಆಸ್ಥಾನದಲ್ಲಿ ಇದ್ದೆನಾದ ಕಾರಣ ನಡೆದದ್ದನ್ನು ಕರಾರುವಾಕಾಗಿ ಹೇಳಬಲ್ಲೆ.

ಔರಂಗಜೇಬನ ಮುಂದೆ ಹಾಜರಾದ ಆ ರಾಯಭಾರಿಗಳು ಬಗ್ಗಿ ಮೂರು ಸಲ 'ಸಲಾಂ'ಮಾಡಿದರು. ಅವರು ತಂದ ಪತ್ರಗಳನ್ನು ಕೊಡಲು ಔರಂಗಜೇಬನ ಸಮೀಪಕ್ಕೆ

ಹೋದರು. ಆದರೆ ಪತ್ರಗಳನ್ನು ಅಮೀರನೊಬ್ಬ ಈಸಿಕೊಂಡು ತೆರೆದು ರಾಜನಿಗೆ ಒಪ್ಪಿಸಿದ. ರಾಜ ಅವನ್ನು ಓದಿಕೊಂಡು ಬಂದಿದ್ದ ರಾಯಭಾರಿಗಳಿಗೆ 'ಸೆರಪಾ' ಉಡುಪಿನ ಮರ್ಯಾದೆ ಮಾಡುವಂತೆ ಅಪ್ಪಣೆಮಾಡಿದ. ಸೆರಪಾ ಎಂದರೆ ಕಿಂಕಾಪಿನ ಅಂಗಿ, ರೂಮಾಲು, ಮತ್ತು ಕಸೂತಿಹಾಕಿದ ರೇಷ್ಮೆಯ ನಡುಪಟ್ಟಿ. ಇದಾದ ತರುವಾಯ ರಾಯಭಾರಿಗಳು ಅವರ ಖಾನರಿಂದ ತಂದಿದ್ದ ಬಹುಮಾನಗಳನ್ನು ರಾಜನಿಗೆ ಒಪ್ಪಿಸಿದರು. ಆ ಬಹುಮಾನಗಳು ಯಾವುವೆಂದರೆ : ಅತ್ಯುತ್ತಮವಾದ ನೀಲವರ್ಣಶಿಲೆ (ಆಷರ್ ಶಿಲೆ : Azure Lapis Laruli), ಉದ್ದನೆಯ ಕೂದಲಿನ ಕೆಲವು ಒಂಟೆಗಳು ಮತ್ತು ಬಹು ಸುಂದರವಾದ ಹಲವು ಟಾರ್ಟರ್ ಕುದುರೆಗಳು. ಅಲ್ಲದೆ, ಆಗತಾನೆ ಕಿತ್ತುತಂದ ಸೇಬು, ಪೇರು, ದ್ರಾಕ್ಷಿ ಮುಂತಾದ ಹಣ್ಣುಗಳ ಹಲವಾರು ಒಂಟೆ ಹೇರುಗಳು. ಚಳಿಗಾಲದಲ್ಲೆಲ್ಲಾ ದಿಹ್ಲಿಯ ಜನರಿಗೆ ತಿನ್ನಲು ಸಿಕ್ಕುವ ಈ ಹಣ್ಣುಗಳು ಸಾಮಾನ್ಯವಾಗಿ ಉಸ್ಬೆಕ್‌ನಿಂದ ಬರುತ್ತವೆ. ಹೊಸಹಣ್ಣುಗಳಲ್ಲದೆ ಒಣಹಣ್ಣುಗಳ ಎಷ್ಟೋ ಹೇರುಗಳನ್ನು ತಂದಿದ್ದರು. ಅವಾವುವೆಂದರೆ, ಬೊಕಾರಾ ಪ್ರೂನ್, ಅಪ್ರಿಕಾಟ್, ಬೀಜವಿಲ್ಲದ ಕಿಸ್‌ಮಿಸಿ ಎಂಬ ದ್ರಾಕ್ಷಿ ಮತ್ತು ಇನ್ನೆರಡು ತರಹದ ಕಪ್ಪು ಮತ್ತು ಬಿಳಿ ಬಣ್ಣದ ಮತ್ತು ತಿನ್ನಲು ಬಹುರುಚಿಯಾಗಿದ್ದ ದಪ್ಪ ದ್ರಾಕ್ಷಿ.

ಈ ಬಹುಮಾನಗಳಿಗಾಗಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದ ಔರಂಗಜೇಬನು ರಾಯಭಾರಿಗಳು ಹೋಗಿ ವಿಶ್ರಾಂತಿ ಪಡೆಯಬಹುದೆಂದು ತಿಳಿಸಿದ. ರಾಯಭಾರಿಗಳಿಗೆ ಒಟ್ಟನಲ್ಲಿ ಸಂತೋಷವಾಯಿತು. ಇಂಡಿಯಾದ ರೀತಿಯಲ್ಲಿ ಸಲಾಂ ಮಾಡುವುದು ಗೌರವಕ್ಕೆ ಕಡಿಮೆಯಾದರೂ ಮತ್ತು ರಾಜ ತನ್ನ ಸ್ವಹಸ್ತದಿಂದಲೇ ಪತ್ರಗಳನ್ನು ಈಸಿಕೊಳ್ಳದೆ ಹೋದರೂ ಬೇರೆ ವಿಚಾರಗಳಿಂದಾಗಿ ಅವರಿಗೆ ಸಮಾಧಾನವಾಗಿತ್ತು. ರಾಯಭಾರಿಗಳು ನಾಲ್ಕು ತಿಂಗಳುಗಳಿಗಿಂತಲೂ ಹೆಚ್ಚು ಕಾಲ ದಿಹ್ಲಿಯಲ್ಲಿ ಇದ್ದರು. ದಿಹ್ಲಿಯ ಹವ ಅವರಿಗೆ ಹಿಡಿಸಲಿಲ್ಲ. ಅವರೂ ಅವರ ಸಿಬ್ಬಂದಿಯವರೂ ಕಾಯಿಲೆ ಕಸಾಲೆಗಳಿಂದ ನರಳಿದರು. ಅನೇಕರು ಸತ್ತೇಹೊದರು. 'ಹಿಂದೂಸ್ಥಾನ'ದ ಬಿಸಿಲಿನ ಬೇಗೆಯನ್ನು ತಡೆಯಲಾರದೆ ಹೋದರೋ ಅಥವಾ ತಮ್ಮ ಹೊಲಸುತನ ಹಾಗೂ ಹೊಟ್ಟೆತುಂಬ ಉಣ್ಣದ ಕಾರಣ ನರಳಿದರೋ ಹೇಳಲಾಗುವುದಿಲ್ಲ. ಉಸ್ಬೆಕ್ ಟಾರ್ಟರಿನ ಜನರಷ್ಟು ಜಿಪುಣ ಬುದ್ಧಿಯ ಮತ್ತು ಹೊಲಸುತನದ ಜನ ಬೇರೆ ಇರಲಾರರು. ಔರಂಗಜೇಬನು ಅವರ ಭತ್ಯಕ್ಕಾಗಿ ಕೊಟ್ಟ ಹಣವನ್ನು ಒಬ್ಬೊಬ್ಬರೂ ಬೇರೆ ಬೇರೆ ಕೂಡಿಹಾಕಿಬಿಟ್ಟು, ಹೊಟ್ಟೆಗೆ ತಿನ್ನದೆ ಒದ್ದಾಡಿದರು. ಅಂತೂ ಕೊನೆಗೆ ರಾಯಭಾರಿಗಳು ಹೊರಟರು. ರಾಜ ಆ ಇಬ್ಬರು ರಾಯಭಾರಿಗಳಿಗೆ ಅಮೀರರು ಕೂಡಿದ ಆಸ್ಥಾನದಲ್ಲಿ ಮತ್ತೆ ಸೆರಪಾ ಉಡುಪಿನ ಮರ್ಯಾದೆಮಾಡಿ, ಅವರ ಸ್ವಂತಕ್ಕೆ ತಲಾ ಎಂಟುಸಾವಿರ ರೂಪಾಯಿಗಳನ್ನು ಕೊಡಿಸಿದ. ರಾಯಭಾರಿಗಳನ್ನು ಕಳುಹಿಸಿಕೊಟ್ಟಿದ್ದ ಇಬ್ಬರು ಖಾನರಿಗೆ ಬಹು ಸುಂದರವಾದ ಸೆರಪಾ ಉಡುಪುಗಳನ್ನೂ ಮತ್ತಿತರ ಬಹುಮಾನಗಳನ್ನೂ ಕಳುಹಿಸಿಕೊಟ್ಟ.

ನಾನು ಈ ರಾಯಭಾರಿಗಳ ಪರಿಚಯಮಾಡಿಕೊಂಡು ಮೂರು ಸಲ ಅವರನ್ನು ಕಂಡೆ. ನನಗೆ ಬೇಕಾದ ಸ್ನೇಹಿತರಲ್ಲಿ ಒಬ್ಬರು ನನ್ನನ್ನು ಹಕೀಮನೆಂದು ಅವರಿಗೆ ಪರಿಚಯಮಾಡಿಕೊಟ್ಟಿದ್ದರು. ರಾಯಭಾರಿಗಳಿಂದ ಅವರ ದೇಶವನ್ನು ಕುರಿತ ಸಂಗತಿಗಳನ್ನು ಸಂಗ್ರಹಿಸಬೇಕೆಂಬುದೇ ನನ್ನ ಉದ್ದೇಶವಾಗಿತ್ತು. ಆದರೆ, ಅವರನ್ನು ಪ್ರಶ್ನಿಸಿದಾಗ ಅವರಿಗೆ ತಮ್ಮ ದೇಶದ ಬಗ್ಗೆ ಏನೇನೂ ಗೊತ್ತಿಲ್ಲ ಎಂಬುದು ಗೊತ್ತಾಯಿತು. ರಾಯಭಾರಿಗಳಾದವರು ಇಷ್ಟು ದಡ್ಡರಾಗಿರಬಲ್ಲರೆ ಎಂದು ನನಗೆ ಆಶ್ಚರ್ಯವಾಯಿತು.

ಒಮ್ಮೆ ಅವರು ನನ್ನನ್ನು ಊಟಕ್ಕೆ ಕರೆದರು. ಊಟಕ್ಕೆ ಬಡಿಸಿದ್ದು ಏನು ಗೊತ್ತೆ ? ಕುದುರೆಯ ಮಾಂಸವಲ್ಲದೆ ಬೇರೇನೂ ಅಲ್ಲ ! ನಾನು ಊಟಮಾಡುವಂತೆ ನಟಿಸಿದೆ. ಆದರೆ 'ರಗೌತ್' (ragout) ಎಂಬ ತಿಂಡಿ ಮಾತ್ರ ಬಹು ರುಚಿಯಾಗಿತ್ತು. ಊಟದ ವೇಳೆ ಒಂದು ಮಾತೂ ಹೊರಡುವಹಾಗಿಲ್ಲ. ಬಾಯಿ ತುಂಬ ಮಾಂಸ ಮತ್ತು ಮಸಾಲೆ ಹಾಕಿ ತಯಾರಿಸಿದ ಪಲಾವು ಅನ್ನವನ್ನು ತುಂಬಿಕೊಳ್ಳುವುದೇ ಅವರು ಮಾಡುತ್ತಿದ್ದ ಕೆಲಸ. ಚಮಚಗಳ ಉಪಯೋಗ ಅವರಿಗೆ ತಿಳಿಯದು.

ಹೊಟ್ಟೆಯನ್ನು ತುಂಬಿಕೊಂಡಮೇಲೆ ಮಾತು ಆರಂಭವಾಯಿತು. ಮಾತುಕತೆಗಳು ಆರಂಭವಾದ ಮೇಲೆ ಅವರು ತಮ್ಮ ಶಕ್ತಿ ಎಷ್ಟೆಂಬುದನ್ನು ಹೇಳಿಕೊಂಡರು. ಅದನ್ನು ರುಜುವಾತುಮಾಡಲು ಬಿಲ್ಲುಬಾಣಗಳನ್ನು ತರಿಸಿದರು. ಈ ಬಿಲ್ಲುಬಾಣಗಳು 'ಹಿಂದೂಸ್ಥಾನ'ದ ಬಿಲ್ಲುಬಾಣಗಳಿಗಿಂತ ದೊಡ್ಡವಾಗಿದ್ದುವು. ಬಾಣವನ್ನು ಒಂದು ಎತ್ತಿಗೋ ಅಥವಾ ಕುದುರೆಗೋ ಹೊಡೆದು ಅದು ಆಚೆಗೆ ತೂರಿಹೋಗುವಂತೆ ಮಾಡಬಲ್ಲೆವೆಂದು ಹೇಳಿಕೊಂಡು ಪಂಥ ಕಟ್ಟುವುದಕ್ಕೆ ಸಿದ್ಧರಾಗಿದ್ದರು.

ತಮ್ಮ ದೇಶದ ಹೆಂಗಸರ ಶಕ್ತಿ ಶೌರ್ಯಗಳನ್ನೂ ಅವರು ಹೊಗಳಿದರು. ಅವರ ಮುಂದೆ ಅಮೆಜಾನ್ ಹೆಂಗಸರು ಬಹು ಮೃದು ಎಂದರು. ಅವರು ತಮ್ಮ ಹೆಂಗಸರ ಸಾಹಸದ ಬಗ್ಗೆ ಅನೇಕ ಕತೆಗಳನ್ನು ಹೇಳಿದರು. ಅವರು ಹೇಳಿದ ಕತೆಯೊಂದನ್ನು ಅವರ ಟಾರ್ಟರಿ ಭಾಷೆಯ ವೈಖರಿಯಲ್ಲಿಯೇ ಹೇಳಲು ನನಗೆ ಬಂದಿದ್ದರೆ ಚೆನ್ನಾಗಿರುತ್ತಿತ್ತೆಂದು ಅನಿಸುತ್ತದೆ. ಅವರ ದೇಶದಲ್ಲಿ ಔರಂಗಜೇಬ ಯುದ್ಧ ನಡೆಸುತ್ತಿದ್ದಾಗ (ಹಿಂದೆ ಆತ ಆ ಪ್ರದೇಶದ ಸುಬೇದಾರನಾಗಿದ್ದಾಗ) ಇಪ್ಪತ್ತೈದು ಮೂವತ್ತು ಮಂದಿ ಸಿಪಾಯಿಗಳು ಒಂದು ಸಣ್ಣ ಹಳ್ಳಿಗೆ ನುಗ್ಗಿ ಕೊಳ್ಳೆಹೊಡೆಯಲಾರಂಭಿಸಿದರು. ಜನರನ್ನೆಲ್ಲ ಬಂಧಿಸಿ ತಮ್ಮೊಡನೆ ಕರೆದುಕೊಂಡು ಹೋಗುವ ಏರ್ಪಾಡುಮಾಡುತ್ತಿದ್ದಾಗ ಒಬ್ಬ ಮುದುಕಿ ಹೇಳಿದಳು "ಮಕ್ಕಳೇ ! ನನ್ನಮಾತು ಕೇಳಿ. ಈ ತರಹ ತುಂಟಾಟ ಬಿಡಿ. ನನ್ನ ಮಗಳು ಈಗ ಎಲ್ಲಿಯೋ ಹೋಗಿದ್ದಾಳೆ. ಇನ್ನೇನು ಬರುವ ಹೊತ್ತಾಯಿತು. ನಿಮಗೆ ಬುದ್ಧಿ ಇದ್ದರೆ ಸುಮ್ಮನೆ ಇಲ್ಲಿಂದ ಹೊರಟುಹೋಗಿ. ಅವಳೇನಾದರೂ ನಿಮ್ಮನ್ನು ಕಂಡರೆ ಮುಗಿಸಿಬಿಡುತ್ತಾಳೆ" ಎಂದು.

ಆ ಮುದುಕಿಯ ಮಾತಿಗೆ ಸಿಪಾಯಿಗಳು ಸೊಪ್ಪುಹಾಕದೆ, ಊರನ್ನು

ಮತ್ತಷ್ಟು ಕೊಳ್ಳೆಹೊಡೆದು ಜನರನ್ನೂ ಹಾಗೂ ಆ ಮುದುಕಿಯನ್ನೂ ಹಿಂಗಟ್ಟು ಮುಂಗಟ್ಟು ಕಟ್ಟಿ ಕುದುರೆಗಳ ಮೇಲೆ ಹಾಕಿಕೊಂಡು ಹೊರಟರು. ಅವರು ಅರ್ಧ ಹರಿದಾರಿ ಹೋಗಿರಲಿಲ್ಲ. ಹಿಂದಕ್ಕೆ ನೋಡುತ್ತಲೇ ಇದ್ದ ಆ ಮುದುಕಿ "ಅಗೋ ನನ್ನ ಮಗಳು ! ಅಗೋ ನನ್ನ ಮಗಳು !" ಎಂದು ಸಂತೋಷದಿಂದ ಕೂಗಿದಳು. ಆಕೆಯ ಮಗಳು ಕಾಣದಿದ್ದರೂ ಆಕೆಯು ಏರಿದ ಕುದುರೆ ಎಬ್ಬಿಸಿದ ಧೂಳನ್ನು ನೋಡಿಯೆ ತನ್ನ ಮಗಳು ತನ್ನೆಲ್ಲರ ಬಿಡುಗಡೆಗೆ ಬಂದಳೆಂದು ಮುದುಕಿ ಭಾವಿಸಿದ್ದಳು. ಹಾಗನ್ನುವುದರಲ್ಲಿಯೇ ಆ ಟಾರ್ಟರಿ ಯುವತಿ ಕೆನೆಯುತಿದ್ದ ಕುದುರೆಯ ಮೇಲೆ ನಾಗಾಲೋಟದಲ್ಲಿ ಬಂದಳು. ಆಕೆಯ ಒಂದು ಭುಜದಿಂದ ಬಿಲ್ಲು–ಬತ್ತಳಿಕೆಗಳು ತೂಗಾಡುತ್ತಿದ್ದವು. ದೂರದಿಂದಲೇ ಆಕೆ "ಎಲ್ಲರನ್ನೂ ಬಿಟ್ಟರೆ ನಿಮ್ಮತಂಟೆಗೆ ಬರುವುದಿಲ್ಲ" ಎಂದು ಕೂಗಿ ಹೇಳಿದಳು. ಆದರೆ ಮೊಗಲರು ಆಕೆಯ ಮಾತುಗಳನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಆ ಮುದುಕಿ ಹೇಳಿದ ಒಳ್ಳೆ ಮಾತಿಗೂ ಅವರು ಗಮನಕೊಡಲಿಲ್ಲ. ಆಗ ಆ ಯುವತಿ ಮೂರು ನಾಲ್ಕು ಬಾಣಗಳನ್ನು ಪ್ರಯೋಗಿಸಿ ಅಷ್ಟೇ ಜನರನ್ನು ಕೆಳಗುರುಳಿಸಿದಳು. ಆಗ ಮೊಗಲರು ತಮ್ಮ ಬಾಣ ಪ್ರಯೋಗವನ್ನಾರಂಭಿಸಿದರು. ಆದರೆ, ಆಕೆ ಆ ಬಾಣಗಳಿಗೆ ಸಿಕ್ಕದೆ ಗಹಗಹಿಸಿ ನಕ್ಕು ಪ್ರತಿಯಾಗಿ ಬಾಣಗಳನ್ನು ಬಿಟ್ಟಳು. ಆ ಬಾಣ ಪ್ರಯೋಗದಿಂದ ಹತ್ತಾರು ಜನ ಸತ್ತುಬಿದ್ದರು. ಉಳಿದವರನ್ನು ಆಕೆ ಕತ್ತಿಯಿಂದ ಇರಿದುಕೊಂದಳು.

ಟಾರ್ಟರಿಯ ರಾಯಭಾರಿಗಳು ಇನ್ನೂ ದಿಲ್ಲಿಯಲ್ಲಿರುವಾಗ ಔರಂಗಜೇಬ ಯಾವುದೋ ಕಾಯಿಲೆಯಿಂದ ನರಳಲಾರಂಭಿಸಿದ. ವಿಪರೀತ ಜ್ವರ. ಆ ಜ್ವರದ ತಾಪದಿಂದ ಏನೇನೋ ಮಾತನಾಡುತ್ತಿದ್ದ. ನಾಲಗೆ ದಪ್ಪನಾಗಿ ಮಾತೇ ಸರಿಯಾಗಿ ಹೊರಡುತ್ತಿರಲಿಲ್ಲ. ಹಕೀಮರು ಏನೇ ಮಾಡಿದರೂ ಕಾಯಿಲೆ ವಾಸಿಯಾಗದೆ ಸಾವು ತಪ್ಪಿದ್ದಲ್ಲ ಎಂಬಂತಾಯಿತು. ಆದರೆ ರೋಷನಾರಾ ಬೇಗಮಳು ಈ ವಿಚಾರವನ್ನು ಬಹಿರಂಗ ಪಡಿಸುವುದಕ್ಕೆ ಅವಕಾಶಕೊಡಲಿಲ್ಲ. ಹೀಗಿರುವಲ್ಲಿ ನಾನಾ ತರಹ ವದಂತಿಗಳು ಹಬ್ಬಿದುವು. ಗುಜರಾತಿನ ಸುಬೇದಾರನಾಗಿ ನಿಯಮಿತನಾಗಿದ್ದ ರಾಜಾ ಜಸ್ವಂತ್‌ಸಿಂಗನು ಷಾಜಹಾನನನ್ನು ಬಂಧನದಿಂದ ಬಿಡಿಸಲು ದಂಡೆತ್ತಿ ಬರುತ್ತಿದ್ದಾನೆಂದೂ, ಇದೇ ಉದ್ದೇಶದಿಂದ ಕಾಬೂಲಿನ ಸುಬೇದಾರನಾದ ಮೊಹಬತ್‌ಖಾನನು ಆ ಹುದ್ದೆಯನ್ನು ತ್ಯಜಿಸಿ ಮೂರು ನಾಲ್ಕು ಸಾವಿರ ರಾವುತರೊಡಗೂಡಿ ಆಗ್ರಾಕ್ಕೆ ಬರುತ್ತಿದ್ದಾನೆಂದೂ, ಷಾಜಹಾನನ ಸೆರೆಮನೆಯನ್ನು ಕಾಯುವ ಜವಾಬ್ದಾರಿಯನ್ನು ಹೊತ್ತ ಎತ್ಬರ್‌ಖಾನ್ ಎಷ್ಟು ಜಾಗ್ರತೆ ತಾನು ಸೆರೆಮನೆಯ ಬೀಗ ತೆಗೆಯುಲಿ ಎಂದು ಚಡಪಡಿಸುತ್ತಿರುವನೆಂದೂ ಜನ ಮಾತಾಡಲಾರಂಭಿಸಿದರು. ಇದಲ್ಲದೆ, ಸುಲ್ತಾನ್ ಮುಜುಮು ಒಂದು ಕಡೆ ಅಮೀರರುಗಳಿಗೆ ಲಂಚಗಳನ್ನು ಕೊಟ್ಟು ಅವರನ್ನು ತನ್ನ ಕಡೆ ಎಳೆದುಕೊಳ್ಳಲಾರಂಭಿಸಿರುವನೆಂದೂ, ಒಂದು ರಾತ್ರಿ ವೇಷ ಮರೆಸಿಕೊಂಡು ಜಯಸಿಂಗನನ್ನು ಕಂಡು ಆತ ತನ್ನ

ಪರ ಇರಬೇಕೆಂದು ದಮ್ಮಯ್ಯಗುಡ್ಡೆ ಹಾಕಿ ಕೇಳಿಕೊಂಡನೆಂದೂ ಹೇಳುತ್ತಾರೆ. ಇನ್ನೊಂದು ಕಡೆ, ರೋಷನಾರ ಬೇಗಮಳ ಪಕ್ಷವೊಂದು ಸಿದ್ಧವಾಗುತ್ತಿದೆಯೆಂದೂ, ಆಕೆ ಹಲವಾರು ಅಮೀರರ ಹಾಗೂ ಫಿದಯ್ ಖಾನನ ಮನವೊಲಿಸಿಕೊಂಡು ಔರಂಗಜೇಬನ ಮೂರನೇ ಮಗ ಕೇವಲ ಏಳು ವರ್ಷಗಳ ಸುಲ್ತಾನ್ ಅಕ್ಬರನ ಪರವಾಗಿ ಸನ್ನಾಹಮಾಡುತ್ತಿರುವಳೆಂದೂ ಜನ ಅಂದುಕೊಳ್ಳುತ್ತಿದ್ದರು.

ಈ ಎರಡೂ ಪಕ್ಷಗಳೂ ಷಾಜಹಾನನ್ನು ಬಿಡುಗಡೆ ಮಾಡುವ ಉದ್ದೇಶ ಹೊಂದಿರುವುದಾಗಿ ನಟಿಸಿದುವು. ಜನಗಳೂ ಹಾಗೆಯೇ ಭಾವಿಸಿದರು. ಆದರೆ, ಇದು ಜನಗಳ ಬೆಂಬಲವನ್ನು ಪಡೆಯುವುದಕ್ಕೆ ಹೂಡಿದ ಸಂಚೇ ಹೊರತು, ಯಾರಿಗೂ ಷಾಜಹಾನನ್ನು ಬಿಡುಗಡೆ ಮಾಡುವ ಉದ್ದೇಶವಿರಲಿಲ್ಲ. ವಾಸ್ತವವಾಗಿ ಹೇಳಬೇಕಾದರೆ, ಜನಗಳಿಗೂ ಮತ್ತೊಮ್ಮೆ ಷಾಜಹಾನ ಸಿಂಹಾಸನದ ಮೇಲೆ ಕುಳಿತುಕೊಳ್ಳುವುದು ಇಷ್ಟವಿರಲಿಲ್ಲ. ಇಲ್ಲಿಯವರೆಗೆ ಷಾಜಹಾನನ ಬಗ್ಗೆ ಅಯೋಗ್ಯವಾದ ರೀತಿಯಲ್ಲಿ ನಡೆಯದೆ ಇದ್ದ ಜಸ್ವಂತಸಿಂಗ್, ಮೊಹಬತ್ ಖಾನ್ ಮತ್ತು ಇತರ ಕೆಲವರನ್ನು ಬಿಟ್ಟರೆ ನ್ಯಾಯವಾಗಿ ಸಿಂಹಾಸನದ ಮೇಲೆ ಇರಬೇಕಾದ ಷಾಜಹಾನನ್ನು ತ್ಯಜಿಸಿ ಔರಂಗಜೇಬನ ಮರ್ಜಿ ಹಿಡಿಯದಿದ್ದ ಅಮೀರ ಒಬ್ಬನೂ ಇರಲಿಲ್ಲ. ಕಾರಾಗೃಹದ ಬಾಗಿಲು ತೆರೆಯುವುದು ಕೆರಳಿದ ಸಿಂಹದ ಸರಪಣಿಯನ್ನು ಕಳಚಿದಂತೆ ಎಂಬುದು ಗೊತ್ತಿತ್ತು. ಅಂಥ ಪರಿಸ್ಥಿತಿಗೆ ಹೆದರಿದ ಆಸ್ಥಾನೀಕರು ತೆಪ್ಪಗಾಗಿದ್ದರು.

ಔರಂಗಜೇಬನು ಎಂತಹ ಕಾಯಿಲೆಯಿಂದ ನರಳುತ್ತಿದ್ದರೂ ರಾಜ್ಯದ ಆಡಳಿತವನ್ನಾಗಲಿ, ತಂದೆಯ ಮೇಲಿನ ನಿರ್ಬಂಧವನ್ನಾಗಲಿ ಸಡಿಲಿಸಲಿಲ್ಲ. ಒಂದು ಕಡೆ ತಾನೇನಾದರೂ ಸತ್ತರೆ ತಂದೆಯನ್ನು ಬಂಧನದಿಂದ ಬಿಡುಗಡೆಮಾಡಿರೆಂದು ಹೇಳುತ್ತಿದ್ದ. ಇನ್ನೊಂದು ಕಡೆ, ಗುಟ್ಟಾಗಿ ಎತ್ಬರ್ ಖಾನನಿಗೆ ತಂದೆಯ ಮೇಲಿನ ನಿರ್ಬಂಧವನ್ನು ಕೊಂಚವೂ ಸಡಿಲಿಸಕೂಡದೆಂದು ಪತ್ರ ಬರೆದು ತಿಳಿಸುತ್ತಿದ್ದ. ಈ ರೀತಿಯ ಅವ್ಯವಸ್ಥೆಯ ಐದನೇ ದಿನ ಔರಂಗಜೇಬ ತಾನು ಮಲಗಿದ್ದಂತೆಯೇ ತನ್ನನ್ನು ರಾಜಸಭಾಮಂದಿರಕ್ಕೆ ಎತ್ತಿಕೊಂಡು ಹೋಗುವಂತೆ ಆಜ್ಞೆಮಾಡಿ ತನ್ನ ಅಮೀರರೆಲ್ಲರಿಗೂ ತಾನು ಬದುಕಿರುವುದನ್ನು ರುಜುವಾತು ಮಾಡಿಕೊಟ್ಟ. ಈ ಉದ್ದೇಶದಿಂದಲೇ ಆತ ತನ್ನನ್ನು ಏಳನೆಯ ದಿನವೂ, ಒಂಬತ್ತು ಹತ್ತನೆಯ ದಿನಗಳಂದೂ ಸಭಾಮಂದಿರಕ್ಕೆ ಎತ್ತಿಕೊಂಡುಹೋಗಿ ಕೂರಿಸುವಂತೆ ಹೇಳಿ ತಾನಿರುವುದನ್ನು ಖಚಿತಪಡಿಸಿಕೊಟ್ಟನು. ನಂಬಲಸಾಧ್ಯವಾದ ವಿಚಾರವೆಂದರೆ, ಆತ ಹದಿಮೂರನೆಯ ದಿನ ಪ್ರಜ್ಞೆತಪ್ಪಿದಾಗ ಎಲ್ಲರೂ ಸತ್ತೇಹೋದನೆಂದು ಭಾವಿಸಿದರೂ ಆತನೇ ರಾಜಾ ಜಯಸಿಂಗನಿಗೂ ಮತ್ತಿಬ್ಬರು ಮೂವರು ಮುಖ್ಯ ಅಮೀರರಿಗೂ ಹೇಳಿಕಳುಹಿಸಿ, ತಾನು ಸತ್ತಿಲ್ಲ, ಬದುಕಿರುವೆ ಎಂದು ರುಜುವಾತು ಮಾಡಿಕೊಟ್ಟನು. ಅವರೆಲ್ಲ ಬಂದಾಗ ನೆಲದ ಮೇಲೆ ಬಿದ್ದಿದ್ದ ಔರಂಗಜೇಬ ತನ್ನನ್ನು ಹಾಸಿಗೆಯ ಮೇಲೆ ಕುಳ್ಳಿರಿಸುವಂತೆ ಹೇಳಿ, ಕಾಗದ ಮಸಿಯನ್ನು ತರಿಸಿ ಎತ್ಬರ್ ಖಾನ

ನಿಗೆ ಒಂದು ಪತ್ರ ಬರೆದನು. ರೋಷನಾರಾ ಬೇಗಮಳಿಗೆ ಹೇಳಿಕಳುಹಿಸಿ ಆಕೆಯ ಬಳಿಯಿದ್ದ ರಾಜಮುದ್ರೆಯನ್ನು ತರಿಸಿದನು. ಆ ರಾಜಮುದ್ರೆಯನ್ನು ಒಂದು ಸಣ್ಣ ಚೀಲದಲ್ಲಿ ಹಾಕಿ, ಅದರ ಬಾಯಿಕಟ್ಟಿ, ತನ್ನ ತೋಳಿಗೆ ಕಟ್ಟಿಕೊಳ್ಳುತ್ತಿದ್ದ. ಇನ್ನೊಂದು ಮುದ್ರೆಯನ್ನು ಅದಕ್ಕೆ ಒತ್ತಿ ಮೊಹರುಮಾಡಿದನು. ರೋಷಾನಾರ ಬೇಗಮಳು ರಾಜ ಮುದ್ರೆಯನ್ನು ದುರುಪಯೋಗ ಮಾಡದಿರಲೆಂದು ಹಾಗೆ ಮಾಡಿದನು.

ಇದೆಲ್ಲವನ್ನೂ ಕೇಳಿ ತಿಳಿದುಕೊಂಡ ನನ್ನ ಹಿತೈಷಿ ಆಗ "ಎಂತಹ ಮನೋಬಲ ! ಎಂತಹ ಅಪ್ರತಿಮ ಮನಸ್ಥೈರ್ಯ ! ಓ ಔರಂಗಜೇಬ, ನಿನ್ನಿಂದ ಇನ್ನೂ ಮಹತ್ತರ ಕಾರ್ಯಗಳಾಗಲಿ ! ದೇವರು ನಿನ್ನನ್ನು ಕಾಪಾಡಲಿ ! ನೀನು ಸಾಯುವುದು ದೇವರಿಗೆ ಇಷ್ಟವಿಲ್ಲ !" ಎಂದನು.

ಅಂತೂ ಮೂರ್ಛೆಬಿದ್ದನಂತರ ಔರಂಗಜೇಬನ ಆರೋಗ್ಯ ದಿನೆ ದಿನೆ ಸುಧಾರಿಸ ಲಾರಂಭಿಸಿತು. ಹೀಗೆ ಅವನು ಚೇತರಿಸಿಕೊಳ್ಳುತ್ತಿರುವಾಗ ಷಾಜಹಾನ್ ಮತ್ತು ರೋಷನಾರಾ ಬೇಗಂ ಸಾಹೇಬಳ ಆರೈಕೆಯಲ್ಲಿದ್ದ ದಾರಾನ ಮಗಳನ್ನು ತನ್ನ ಮೂರನೆಯ ಮಗ ಸುಲ್ತಾನ್ ಎಕ್ಬರನಿಗೆ ಕೊಟ್ಟು ಮದುವೆಮಾಡಬೇಕೆಂಬ ಉದ್ದೇಶದಿಂದ ಆ ಹುಡುಗಿಯನ್ನು ಅವರಿಬ್ಬರ ಪೋಷಣೆಯಿಂದ ತಪ್ಪಿಸಲು ಪ್ರಯತ್ನಮಾಡಿದನು. ಈ ಮಗನನ್ನು ರಾಜ್ಯದ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂದು ಔರಂಗಜೇಬನ ಅಭಿಲಾಷೆಯಾಗಿತ್ತು. ಸುಲ್ತಾನ್ ಎಕ್ಬರ್ ಚಿಕ್ಕವನಾದರೂ ಆಸ್ಥಾನದಲ್ಲಿ ಬಹಳ ಜನರಿಗೆ ಬೇಕಾದವನಾಗಿದ್ದ. ಏಕೆಂದರೆ, ಆತ ಮಸ್ಕತಿನ ರಾಜರುಗಳ ಮನೆತನಕ್ಕೆ ಸೇರಿದವನಾದ ಷಾನವಾಜ್‌ಖಾನನ ಮಗಳ ಮಗ. ಔರಂಗಜೇಬನ ಇತರ ಮಕ್ಕಳಾದ ಸುಲ್ತಾನ್ ಮಹಮ್ಮದ್ ಮತ್ತು ಸುಲ್ತಾನ್ ಮುಜುಂ ರಜಪೂತ ಸ್ತ್ರೀಯರ ಹೊಟ್ಟೆ ಯಲ್ಲಿ ಹುಟ್ಟಿದವರು. ಮೊಗಲ್ ರಾಜರು ಮಹಮ್ಮದೀಯರಾದರೂ ವಿಧರ್ಮಿಗಳ (ಹಿಂದೂಗಳ) ಸ್ತ್ರೀಯರನ್ನು ಮದುವೆಯಾಗುವುದಕ್ಕೆ ಅಭ್ಯಂತರವಿಲ್ಲ. ಅಂತಹ ವಿವಾಹ ದಿಂದ ಅನುಕೂಲವಾಗುವುದಾದರೆ, ಅಥವಾ ಸುಂದರಳಾದ ಸ್ತ್ರೀಯೊಬ್ಬಳು ಸಿಕ್ಕುವು ದಾದರೆ ಹಿಂದು ಮುಂದು ನೋಡದೆ ಸಂಬಂಧ ಬೆಳೆಸುತ್ತಾರೆ.

ಔರಂಗಜೇಬನು ಆಲೋಚಿಸಿದ ತಂತ್ರ ನಡೆಯಲಿಲ್ಲ. ಷಾಜಹಾನ ಹಾಗೂ ಬೇಗಂ ಸಾಹೇಬ ಇಬ್ಬರೂ ಈ ಸಲಹೆಯನ್ನು ಒಪ್ಪದೆಹೋದರು. ಆ ಹುಡುಗಿಯೂ ಸಹ ಈ ಮದುವೆಗೆ ಒಪ್ಪಲಿಲ್ಲ. ಎಲ್ಲಿ ಬಲತ್ಕಾರದಿಂದ ಕರೆದುಕೊಂಡುಹೋಗಿಬಿಡುವರೋ ಎಂದು ಆಕೆ ಹೆದರಿಬಿಟ್ಟಳು. ತನ್ನ ತಂದೆಯನ್ನು ಕೊಲ್ಲಿಸಿದ ಆ ಪಾಪಿಯ ಮಗನನ್ನು ಮದುವೆಯಾಗುವ ಬದಲು ಆತ್ಮಹತ್ಯೆ ಮಾಡಿಕೊಂಡಾದರೂ ಸಾಯುವೆನೆಂದು ಆಕೆ ಘಂಟಾಘೋಷವಾಗಿ ಹೇಳಿಬಿಟ್ಟಳು.

ಔರಂಗಜೇಬನಿಗೆ 'ಮುಬಾರಕ್' (Mobarec) ಸಲ್ಲಿಸುವುದರಲ್ಲಿ ಹಾಲೆಂಡ್ ದೇಶವೂ ಹಿಂದೆ ಬೀಳಲಿಲ್ಲ. ಆ ದೇಶವು ಸೂರತ್ತಿನ ತನ್ನ ಫ್ಯಾಕ್ಟರಿಯ ಮುಖ್ಯಸ್ಥ

ನಾಗಿದ್ದ ಮೆಸ್ಯರ್ ಅಡ್ರಿಕನ್ (Monsieur Adrican) ಎಂಬುವನನ್ನು ಆರಿಸಿ ಔರಂಗಜೇಬನ ಬಳಿಗೆ ರಾಯಭಾರಿಯನ್ನಾಗಿ ಕಳುಹಿಸಿತು. ಅಡ್ರಿಕನ್ ಒಳ್ಳೆ ಗುಣ ವಂತ, ಶಕ್ತಿಶಾಲಿ ಹಾಗೂ ವಿಚಾರಶಕ್ತಿಯುಳ್ಳವ. ಅನುಭವಸ್ಥರೂ ತಿಳುವಳಿಕಸ್ತರೂ ಹೇಳಿದ ಬುದ್ಧಿಮಾತುಗಳನ್ನು ಅಲ್ಲಗಳೆಯುತ್ತಿರಲಿಲ್ಲ. ಅಂತವನು ತನ್ನ ಕೆಲಸವನ್ನು ತನ್ನ ದೇಶವು ಮೆಚ್ಚುವ ರೀತಿಯಲ್ಲಿ ನಿರ್ವಹಿಸಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಹೊರಗೆ ನೋಡುವುದಕ್ಕೆ ಔರಂಗಜೇಬ ಯಾರಿಗೂ ಬಗ್ಗದವನಂತೆ ಕಾಣುತ್ತಾನೆ. ನಿಷ್ಠಾವಂತ ಮಹಮ್ಮದೀಯನಂತೆ ವರ್ತಿಸುತ್ತ ಫರಂಗಿಯವರು ಮತ್ತು ಕ್ರೈಸ್ತರ ಬಗ್ಗೆ ತಿರಸ್ಕಾರ ತೋರಿಸುತ್ತಾನೆ. ಆದರೂ ಈ ರಾಯಭಾರ ಬಂದ ಸಂದರ್ಭದಲ್ಲಿ ಆತ ಬಹು ನಮ್ರತೆಯಿಂದ ವರ್ತಿಸಿದನು. ಅಡ್ರಿಕನ್ ಇಂಡಿಯನರ ರೀತಿಯಲ್ಲಿ ವಂದಿಸಬಹುದೆಂಬ ತನ್ನ ಇಚ್ಛೆಯನ್ನು ಇಳಿಸಿದ. ರಾಯಭಾರಿ ಕೊಟ್ಟ ಕಾಗದ ಪತ್ರಗಳನ್ನು ಅಮೀರ ನೊಬ್ಬನ ಮೂಲಕ ಈಸಿಕೊಂಡರೂ ಸಹ ಅದನ್ನು ಅಗೌರವವೆಂದು ಭಾವಿಸಕೂಡದು. ಏಕೆಂದರೆ, ಉಸ್ಬೆಕಿನ ರಾಯಭಾರಿಗಳ ಬಗ್ಗೆಯೂ ಅದೇ ರೀತಿಯಲ್ಲಿ ಔರಂಗಜೇಬ ನಡೆದುಕೊಂಡಿದ್ದನು.

ಆರಂಭದ ಪರಿಚಯದ ಉಪಚಾರಗಳಾದ ಮೇಲೆ ಔರಂಗಜೇಬನು ರಾಯಭಾರಿಗೂ ಆತನ ಪರಿವಾರದ ಕೆಲವರಿಗೂ ಜರತಾರಿಯ ನಿಲುವಂಗಿಗಳನ್ನು (ಸೆರಪಾ) ನೀಡಿ ಸನ್ಮಾನಿಸಿದನು. ರಾಯಭಾರಿ ತಾನು ತಂದಿದ್ದ ಬಹುಮಾನಗಳನ್ನು ಔರಂಗಜೇಬನಿಗೆ ಒಪ್ಪಿಸಿದನು. ಕೆಂಪು ಮತ್ತು ಹಸುರು ಬಣ್ಣದ ಬಹು ಸೊಗಸಾದ ಬನಾತು ಬಟ್ಟೆಗಳು, ದೊಡ್ಡ ದೊಡ್ಡ ಕನ್ನಡಿಗಳು, ಚೀನಾ ಮತ್ತು ಜಪಾನ್ ತಯಾರಿಕೆಯ ಹಲವು ಸಾಮಾನುಗಳು—ಇವು ಅವನು ಒಪ್ಪಿಸಿದ ಬಹುಮಾನಗಳು. ಚೀನಿ ಹಾಗೂ ಜಪಾನಿ ಸಾಮಾನುಗಳಲ್ಲಿ 'ಪಾಲಕಿ' (paleky) ಮತ್ತು 'ತಕ್-ರವಾನೂ' (rak-ravan, takht-raivan, ರಾಜಪೀಠ) ಇದ್ದುವು.

ರಾಯಭಾರಿಗಳು ಅದಷ್ಟು ಕಾಲ ನಿಲ್ಲುವಂತೆ ಮಾಡುವುದು ಮೊಗಲ್ ಚಕ್ರವರ್ತಿಯ ಪದ್ಧತಿ. ತನ್ನ ಅಧಿಕಾರ ಹಾಗೂ ದರ್ಪ ಎಷ್ಟೆಂಬುದನ್ನು ತೋರಿಸುವುದು ಇದರ ಉದ್ದೇಶ. ನಿತ್ಯವೂ ದರ್ಬಾರಿಗೆ ರಾಯಭಾರಿಗಳೆಲ್ಲ ಬಂದು ತಮ್ಮ ಗೌರವ ಸಲ್ಲಿಸಿದಾಗ ನೋಡುವವರಿಗೆ ಚಕ್ರವರ್ತಿಯ ಹಿರಿಮೆ ಎದ್ದು ಕಾಣುತ್ತದೆ. ಟಾರ್ಟರಿ ರಾಜ್ಯದಿಂದ ಬಂದ ರಾಯಭಾರಿಗಳಿಗಿಂತ ಹೆಚ್ಚು ಕಾಲ ಅಡ್ರಿಕನ್ ಇರದಿದ್ದರೂ, ಅವನು ಅಪೇಕ್ಷಿಸಿದಾಗ ಹೋಗಲು ಸಾಧ್ಯವಾಗಲಿಲ್ಲ. ಅಲ್ಲದೆ ಅವನ ಕಾರ್ಯದರ್ಶಿ ಬೇರೆ ಸತ್ತುಹೋದ. ಪರಿವಾರದ ಇತರರು ಕಾಯಿಲೆ ಕಸಾಲೆಯಿಂದ ನರಳುತ್ತಿದ್ದರು. ಆಗ ಔರಂಗಜೇಬನಿಂದ ಅನುಮತಿ ಸಿಕ್ಕಿತು, ಆತ ಹೋಗಬಹುದು ಎಂದು. ಬೀಳ್ಕೊಡು ವಾಗಲು ಸಹ ಆತ ರಾಯಭಾರಿಗೆ ಬನಾತು ಬಟ್ಟೆಯ (brocade) ಸೆರಾಪ (ನಿಲುವಂಗಿ) ಯನ್ನೂ, ರತ್ನಖಚಿತವಾದ ಈಟಿಯನ್ನೂ ಕೊಟ್ಟು ಸನ್ಮಾನಿಸಿದನು. ಆಗ ರಾಯ

ಭಾರಿಯ ಜೊತೆ ಇದ್ದ ಬಟೇವಿಯಾದ ಗೌರ್‍ನರನಿಗೂ ಬಹು ಬೆಲೆಯಾದ ಉಡುಪಿನ ಮರ್ಯಾದೆ ಆಯಿತು. ಇಷ್ಟನ್ನು ಕೊಟ್ಟು ಸನ್ಮಾನಿಸಿ ಔರಂಗಜೇಬ ಮೇಲೊಂದು ಪತ್ರ ಬರೆದು ರಾಯಭಾರಿಯ ಕೈಗಿತ್ತು ಕಳುಹಿಸಿಕೊಟ್ಟನು.

ಈ ರಾಯಭಾರವನ್ನು ಕಳುಹಿಸಿದ ಡಚ್ಚರ ಉದ್ದೇಶ ತಮ್ಮ ರಾಷ್ಟ್ರದ ಬಗ್ಗೆ ರಾಜನಿಗೆ ಮನವರಿಕೆ ಮಾಡಿಕೊಡುವುದಲ್ಲದೆ, ಅವರ ಗಡಂಗುಗಳಿದ್ದ ಬಂದರುಗಳ ಪ್ರದೇಶದ ಸುಬೇದಾರರುಗಳು ತಮಗೆ ಅನುಕೂಲವಾದ ರೀತಿಯಲ್ಲಿ ವರ್ತಿಸುವಂತೆ ಮಾಡುವುದೇ ಆಗಿತ್ತು. ತಮಗೆ ಆಗುತ್ತಿದ್ದ ಅಪಮಾನ ಹಾಗೂ ತಮ್ಮ ವ್ಯಾಪಾರಕ್ಕೆ ಇದ್ದ ಅಡ್ಡಿ ಆತಂಕಗಳನ್ನು ಹೇಳಿಕೊಂಡು, ತಮ್ಮದು ದೊಡ್ಡ ರಾಷ್ಟ್ರವೆಂಬ ಮತ್ತು ಇಂಡೀಸ್ ರಾಜನನ್ನು ಕಂಡು ದೂರು ಹೇಳಿಕೊಳ್ಳಬಲ್ಲ ಶಕ್ತಿ ತಮಗೆ ಇದೆಯೆಂಬ ಭಾವನೆ ಸಂಬಂಧಪಟ್ಟವರ ಮನಸ್ಸಿನಲ್ಲಿ ಬರುವಂತೆ ಮಾಡಿ ತೊಂದರೆಗಳನ್ನು ನಿವಾರಣೆ ಮಾಡಿಕೊಳ್ಳುವುದು ಅವರ ಉದ್ಧೇಶವಾಗಿತ್ತು. ತಮ್ಮ ವ್ಯಾಪಾರದಿಂದ ಹಿಂದೂಸ್ಥಾನಕ್ಕೆ ಬಹಳ ಅನುಕೂಲವಿದೆಯೆಂಬ ಭಾವನೆಯನ್ನುಂಟುಮಾಡುವುದೂ ಅವರ ಇಚ್ಛೆಯಾಗಿತ್ತು. ತಮ್ಮ ದೇಶವು ಯಾವಯಾವ ಸಾಮಾನುಗಳನ್ನು ಇಂಡೀಸಿನಿಂದ ಕೊಂಡುಕೊಳ್ಳುತ್ತಿದೆಯೆಂದು ತೋರಿಸುವುದಕ್ಕಾಗಿ ಒಂದು ದೊಡ್ಡ ಪಟ್ಟಿಯನ್ನೇ ತೋರಿಸಿದರು. ಅಲ್ಲದೆ, ಆ ಸಾಮಾನುಗಳನ್ನು ಕೊಂಡುಕೊಳ್ಳಲು ತಾವು ಇಂಡೀಸಿಗೆ ಹೇರಳವಾದ ಚಿನ್ನ ಬೆಳ್ಳಿಗಳನ್ನು ಕಳುಹಿಸುತ್ತಿರುವುದಾಗಿ ಹೇಳಿದರು. ಆದರೆ ಇಂಡೀಸಿನಿಂದ ಒಂದೇ ಸಮನೆ ತಮ್ಮ ದೇಶಕ್ಕೆ ಆಮದುಮಾಡಿಕೊಳ್ಳುತ್ತಿದ್ದ ತಾಮ್ರ, ಸೀಸ, ದಾಲ್ಚಿನ್ನಿ, ಲವಂಗ, ಜಾಕಾಯಿ, ಮೆಣಸು, ಆ್ಯಲೋವರ, ಆನೆ ಮತ್ತು ಇತರ ವಿವಿಧ ವ್ಯಾಪಾರದ ಸರಕುಗಳ ಲೆಕ್ಕ ತೋರಿಸಲೇ ಇಲ್ಲ.

ಈ ರಾಯಭಾರಿಗಳು ಬಂದ ವೇಳೆಯಲ್ಲಿ ಹಿರಿಯ ಅಮೀರನೊಬ್ಬ ಔರಂಗಜೇಬನನ್ನು ಕುರಿತು ಆತನು ರಾಜ್ಯಭಾರದ ಕಾರ್ಯಕಲಾಪಗಳಲ್ಲಿ ಬಿಡುವಿಲ್ಲದೆ ತೊಡಗುವುದು ಆರೋಗ್ಯಕ್ಕೆ ಕೆಡುಕೆಂದೂ, ಅದರಿಂದ ಬುದ್ಧಿಶಕ್ತಿಗೆ ಅಪಾಯವೆಂದೂ ತಿಳುವಳಿಕೆ ಹೇಳಲು ಹೋದ. ರಾಜ ಅವನು ಹೇಳಿದ್ದನ್ನು ಕೇಳದವನಂತೆ ನಟಿಸುತ್ತ, ವಿಚಾರವಂತನೂ ಸಾಹಿತ್ಯಪ್ರಿಯನೂ ಆದ ಇನ್ನೊಬ್ಬ ಹಿರಿಯ ಅಮೀರನ ಬಳಿಗೆ ಹೋಗಿ ಹೀಗೆ ಹೇಳಿದ: "ಅಪಾಯಗಳೂ ಆಪತ್ತುಗಳೂ ಬಂದಾಗ ರಾಜನಾದವನು ತನ್ನ ಪ್ರಾಣವನ್ನೇ ಕಡೆಗಣಿಸಬೇಕಾಗುತ್ತದೆ ; ಅನಿವಾರ್ಯವಾದರೆ ತನ್ನ ಪ್ರಜೆಗಳ ಪ್ರಾಣರಕ್ಷಣೆಗಾಗಿ ಖಡ್ಗ ಹಿಡಿದು ಹೋರಾಡಿ ಮಡಿಯಬೇಕಾಗುತ್ತದೆ. ಇದು ರಾಜನ ಮೇಲೆ ಬಿದ್ದ ಹೊಣೆ ಎಂಬ ಬಗ್ಗೆ ತಿಳಿದಂಥ ನಿಮ್ಮಲ್ಲಿ ಭಿನ್ನಾಭಿಪ್ರಾಯ ಇರಲಾರದೆಂದು ನಾನು ಭಾವಿಸಿದ್ದೇನೆ. ಆದರೂ ನನ್ನ ಹಿತೈಷಿ ಎನಿಸಿಕೊಂಡ ಆ ಅಮೀರ ಹೇಳುತ್ತಿದ್ದಾನೆ, ಸಾರ್ವಜನಿಕ ಆಗುಹೋಗುಗಳನ್ನು ನಾನು ತಲೆಗೆ ಹಚ್ಚಿಕೊಳ್ಳಬಾರದು, ಜನರ ಹಿತವನ್ನು ಸಾಧಿಸುವುದರಲ್ಲಿ ನಾನು ಒಂದು ದಿನವಾದರೂ ನಿದ್ದೆಗೆಡಬಾರದು, ಅದರ ಬದಲು ಒಂದು ದಿನವೂ

ತಪ್ಪದೆ ದೈಹಿಕ ಸುಖಗಳಲ್ಲಿ ತಲ್ಲೀನನಾಗಬೇಕು ಎಂದು. ಅವನ ಪ್ರಕಾರ ನಾನು ನನ್ನ ಸ್ವಂತ ಸುಖವಲ್ಲದೆ ಮತ್ತು ನನ್ನ ದೈಹಿಕ ಆರೋಗ್ಯವಲ್ಲದೆ ಬೇರೆ ವಿಚಾರಗಳಿಗೆ ಗಮನ ಕೊಡಬಾರದು. ನಾನು ನನ್ನೀ ಮಹಾರಾಜ್ಯದ ಆಡಳಿತವನ್ನು ಯಾವನೋ ಒಬ್ಬ ವಜೀರನಿಗೆ ವಹಿಸಿಕೊಡಬೇಕು ಎಂಬುದು ಅವನ ಅಭಿಪ್ರಾಯ. ಆದರೆ ಆತ ಮರೆತಂತೆ ಕಾಣುತ್ತದೆ, ನಾನು ರಾಜನ ಮಗನಾಗಿ ಹುಟ್ಟಿ ಸಿಂಹಾಸನದ ಮೇಲೆ ಕುಳಿತಿರುವುದು 'ದುಡಿದು ಬದುಕು' ಎಂಬ ದೇವರ ಉದ್ದೇಶವನ್ನು ಸಾರ್ಥಕವಮಾಡಲು ಎಂಬುದನ್ನು. ನಾನು ಬದುಕಬೇಕಾದ್ದು ನನಗೋಸ್ಕರ ಅಲ್ಲ, ನನ್ನ ಪ್ರಜೆಗಳಿಗೋಸ್ಕರ. ಪ್ರಜೆಗಳ ಸುಖವೂ ನನ್ನ ಸುಖವೂ ಹಾಸುಹೊಕ್ಕಾಗಿರಬೇಕೇ ಹೊರತು ಅನ್ಯಥಾ ಇರಬಾರದು. ಪ್ರಜೆಗಳ ಸುಖಸಂತೋಷಗಳನ್ನೇ ನಾನು ಗಮನಿಸಬೇಕಾಗಿರುವುದು. ನ್ಯಾಯವನ್ನು ಎತ್ತಿಹಿಡಿಯುವುದಕ್ಕಾಗಿ, ರಾಜಾಜ್ಞೆಗಳ ಪರಿಪಾಲನೆಗಾಗಿ ಮತ್ತು ರಾಜ್ಯದ ರಕ್ಷಣೆಗಾಗಿ ಪ್ರಜೆಗಳ ಸುಖಸಂತೋಷಗಳನ್ನು ಬಲಿಕೊಡಬೇಕೇ ಹೊರತು, ಇನ್ನಿತರ ಕಾರಣಗಳಿಗಾಗಿ ಅಲ್ಲ. ಆ ಮನುಷ್ಯ ಶಿಫಾರಸು ಮಾಡುತ್ತಿರುವ ನಿರಾಸಕ್ತಿಯ ಪರಿಣಾಮಗಳೇನೆಂದು ಆತನಿಗೆ ಗೊತ್ತಿಲ್ಲ. ನಾನು ಚಲಾಯಿಸಬೇಕಾದ ಅಧಿಕಾರಗಳನ್ನು ಇನ್ನೊಬ್ಬರಿಗೆ ಬಿಟ್ಟು ಕೊಟ್ಟರೆ ಆಗುವ ಕೆಡಕುಗಳು ಯಾವುವು ಎಂಬುದನ್ನು ಆತ ಅರಿತಿಲ್ಲ. ಅಷ್ಟಲ್ಲದೆ ಆ ಮಹಾ ಸಾದಿ (Sadi)ಒತ್ತಿ ಒತ್ತಿ ಹೇಳಿದನೆ, 'ಎಲೈ ರಾಜರುಗಳೇ, ಆಳುವುದಿದ್ದರೆ ನೀವೇ ಆಳಿ. ಇನ್ನೊಬ್ಬರ ಮೂಲಕ ಆಳುವುದಾದರೆ ನೀವು ರಾಜರಾಗುವುದು ಬೇಡ, ಬೇಡ !' ಎಂದು. ಹೋಗು, ಆ ನಿನ್ನ ಅಮೀರ ಸ್ನೇಹಿತನಿಗೆ ಹೇಳು, ಆತ ನನ್ನ ಮೆಚ್ಚಿಗೆಗೆ ಪಾತ್ರನಾಗಬೇಕಾದರೆ ನಾನು ಆತನಿಗೆ ಒಪ್ಪಿಸಿದ ಕೆಲಸವನ್ನು ನಿರ್ವಂಚನೆಯಿಂದ ಮಾಡ ಬೇಕು ಎಂದು. ಇನ್ನೊಮ್ಮೆ ರಾಜನಿಗೆ ಬುದ್ಧಿವಾದ ಹೇಳುವುದಕ್ಕೆ ಮುನ್ನ ತುಂಬಾ ಎಚ್ಚರಿಕೆ ವಹಿಸಬೇಕು ಎಂದು ಆತನಿಗೆ ತಿಳಿಸಬೇಕು. ಅಯ್ಯೋ ! ಸೃಷ್ಟಿಯೇ ನಮ್ಮ ಸುಖಸಂತೋಷಗಳಿಗೆ ಸಾಕಷ್ಟು ಅವಕಾಶ ಮಾಡಿಕೊಟ್ಟಿರುವಾಗ, ಅಂಥವರ ಬುದ್ಧಿವಾದ ಗಳ ಅವಶ್ಯಕತೆಯೇನು ! ನಮ್ಮ ಪತ್ನಿಯರೂ ಸುಖ ಶಾಂತಿಯ ಹೂವಿನ ಹಾದಿಯಲ್ಲಿ ನಡೆಯಲು ನಮಗೆ ಸಹಾಯ ಮಾಡುತ್ತಾರೆಂಬುದರಲ್ಲಿ ಸಂದೇಹವಿಲ್ಲ."

ಔರಂಗಜೇಬನ ಈ ಭಾಷಣವನ್ನು ನನಗೆ ತಿಳಿಸಿದವನು ಯುವಕ ವೈದ್ಯನೂ ನನ್ನ ಆತ್ಮೀಯ ಗೆಳೆಯನೂ ಆದ ಆ ಅಮೀರನ ಮಗ.

ಇದೇ ಸಂದರ್ಭದಲ್ಲಿ ದಿಲ್ಲಿ ಅರಮನೆಯ ಅಂತಃಪುರದಲ್ಲಿ ವಿಷಾದಕರವಾದ ಪ್ರಸಂಗ ವೊಂದು ನಡೆಯಿತು. ಏನೇನೂ ಗಂಡಸುತನವಿಲ್ಲದವನು ಪ್ರೇಮದ ಕಾವಿಗೆ ಕರಗಲಾರ ಎಂಬ ನನ್ನ ಮತ್ತು ಇತರರ ಅಭಿಪ್ರಾಯವನ್ನು ಸುಳ್ಳಾಗಿಸುವ ಆ ಪ್ರಸಂಗದಿಂದ ದಿಲ್ಲಿಗೆ ದಿಲ್ಲಿಯೇ ಆಸಕ್ತಿ ವಹಿಸುವಂತಾಯಿತು.

ದಿದರ್‌ಖಾನ್ ಎಂಬಾತ ಅಂತಃಪುರದ ಮುಖ್ಯ ಖೋಜಾಗಳಲ್ಲಿ ಒಬ್ಬ. ಅವನು ಒಂದು ಮನೆ ಕಟ್ಟಿಕೊಂಡಿದ್ದ. ವಿಶ್ರಾಂತಿ ವಿನೋದಗಳಿಗೆ ಒಮ್ಮೊಮ್ಮೆ ಅಲ್ಲಿಗೆ ಹೋಗು

ತ್ತಿದ್ದ ; ಮತ್ತು ಅಲ್ಲಿಯೇ ಹೆಚ್ಚಾಗಿ ಮಲಗಿಕೊಳ್ಳುತ್ತಿದ್ದ. ಆತ ಕರಣಿಕನ ಕೆಲಸ ಮಾಡಿಕೊಂಡಿದ್ದ ಪಕ್ಕದ ಮನೆಯ ಹಿಂದೂ ಒಬ್ಬನ ತಂಗಿಯ ಸೌಂದರ್ಯಕ್ಕೆ ಮನ ಸೋತುಬಿಟ್ಟ. ಅವರಿಬ್ಬರಲ್ಲಿ ಅನೀತಿಯ ಸಂಬಂಧ ಸಾಕಷ್ಟು ಕಾಲ ನಡೆದುಬಂತು. ಇದರ ಬಗ್ಗೆ ಯಾರೂ ಸಂದೇಹಪಡಲಿಲ್ಲ. ಏಕೆಂದರೆ, ಆತ ಎಷ್ಟೇ ಆದರೂ ಖೋಜಾ ತಾನೆ ! ಎಲ್ಲಿಗೆ ಬೇಕಾದರೂ ಹೋಗಬಹುದಾದ 'ಹೆಂಗಸು' ಆತ. ಆದರೆ ಬರುಬರುತ್ತಾ ಅವರಿಬ್ಬರ ಸಲಿಗೆ ಬೀದಿಯಪಾತಾಯಿತು. ಹಿಂದೂವಿನ ಕಿವಿಗೂ ಈ ಸುದ್ದಿ ಮುಟ್ಟಿತು. ನಿಜವಾದರೆ ಅವರಿಬ್ಬರನ್ನು ಕತ್ತರಿಸಿಹಾಕುವೆನೆಂದು ಮನಸ್ಸಿನಲ್ಲಿ ಮಾಡಿಕೊಂಡ ಆತ, ಒಂದು ರಾತ್ರಿ ಕಾದು ನೋಡಿದ. ಆ ಮೇಲೆ ಕೇಳಬೇಕೆ ? ಇಬ್ಬರೂ ಆತನ ಕತ್ತಿಗೆ ತುತ್ತಾದರು. ಈ ಸುದ್ದಿಯ ಕಾರಣ ಇಡೀ ಅಂತಃಪುರದಲ್ಲೆಲ್ಲಾ ಗುಲ್ಲೋಗುಲ್ಲು. ಅರಮನೆಯ ಸ್ತ್ರೀಯರಿಗೂ ಖೋಜಾಗಳಿಗೂ ಆ ಕರಣಿಕನನ್ನು ಕೊಂದು ಸೇಡುತೀರಿಸಿ ಕೊಳ್ಳಬೇಕೆಂಬ ಆಕ್ರೋಶ. ಇದು ಔರಂಗಜೇಬನಿಗೆ ಗೊತ್ತಾಯಿತು. ಆತ ಆ ರೀತಿ ಆಗುವುದಕ್ಕೆ ಅವಕಾಶಕೊಡದೆ, ಆ ಕರಣಿಕನನ್ನು ಮಹಮ್ಮದೀಯ ಮತಕ್ಕೆ ಸೇರಿಸಿ ಕೊಂಡು ಈ ಪ್ರಣಯ ಪ್ರಸಂಗವನ್ನು ಅಲ್ಲಿಗೆ ಮುಕ್ತಾಯಮಾಡಿದ.

ಇಡಮಾಡಿದರೆ ಪ್ರಾಣಿಗಳ ಮೇಲೆ ಆಗುವ ಪರಿಣಾಮವೇ ಬೇರೆ, ಮನುಷ್ಯರ ಮೇಲೆ ಆಗುವಪರಿಣಾಮವೇ ಬೇರೆ ಎಂದು ಇಂಡಿಯನರ ಅಭಿಪ್ರಾಯ. ಇಡಮಾಡಲ್ಪಟ್ಟ ಪ್ರಾಣಿಗಳು ಮೃದು ಸ್ವಭಾವ ಹೊಂದಿ ಹೇಳಿದಂತೆ ಕೇಳುವಂತಾಗುತ್ತವೆ. ಆದರೆ ಇಡ ಮಾಡಿಸಿಕೊಂಡ ಯಾವ ಖೋಜಾ ತಾನೆ ವಕ್ರ ಸ್ವಭಾವದವನೂ ದುರಹಂಕಾರಿಯೂ ಕಠೋರ ಮನಸ್ಸಿನವನೂ ಆಗದೆ ಇದ್ದಾನು ಎಂದು ಕೇಳುತ್ತಾರೆ, ಅವರು. ಅವರು ಹೀಗೆ ಹೇಳಿದರೂ, ಅನೇಕ ಖೋಜಾಗಳು ಬಹು ನಂಬಿಕಸ್ತರೂ ಉದಾರಿಗಳೂ ಧೈರ್ಯ ಶಾಲಿಗಳೂ ಆಗಿದ್ದಾರೆ ಎಂಬುದನ್ನು ನಾವು ಮರೆಯುವಂತಿಲ್ಲ.

ಹೆಚ್ಚು ಕಡಿಮೆ ಇದೇ ಕಾಲದಲ್ಲಿ ರೋಷನಾರ ಬೇಗಮಳು ಔರಂಗಜೇಬನ ಸಿಟ್ಟಿಗೆ ತುತ್ತಾಗುವ ಒಂದು ಪ್ರಸಂಗ ನಡೆಯಿತು. ಆಕೆ ಇಬ್ಬರು ಯುವಕರನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಂಡಳೆಂಬುದು ಅವಳ ಮೇಲಿದ್ದ ಅನುಮಾನ. ಯಾವ ರುಜು ವಾತೂ ಇರದೆ, ಕೇವಲ ಅನುಮಾನವಷ್ಟೇ ಇದ್ದುದರಿಂದ ರಾಜ ಆಕೆಯ ಮೇಲೆ ಯಾವ ವಿಧದ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಹಿಂದೆ ಆಕೆಯ ಅಂತಃಪುರದಲ್ಲಿ ನೀರು ಕಾಯಿ ಸುವ ಕಡಾಯಿಯಲ್ಲಿ ಅವಿತುಕೊಂಡಿದ್ದ ಯುವಕನನ್ನು ಷಾಜಹಾನ ಜೀವಸಹಿತ ಬೇಯಿಸಿದ್ದನಷ್ಟೆ. ಅಂತಹ ಕ್ರೂರ ಶಿಕ್ಷೆಯನ್ನು ಈಗ ತನ್ನ ಮುಂದೆ ಹಿಡಿದು ತಂದ ಇಬ್ಬರು ಯುವಕರಿಗೆ ವಿಧಿಸುವುದಕ್ಕೆ ಹೋಗಲಿಲ್ಲ, ಔರಂಗಜೇಬ. ನಡೆದ ವಿಷಯವೇನೆಂದು ನಾನು ಹೇಳುತ್ತೇನೆ, ಕೇಳಿ. ಇದು ನನಗೆ ತಿಳಿದದ್ದು ಅಂತಃಪುರದಲ್ಲಿ ಬಹಳ ಕಾಲದಿಂದ ಊಳಿಗದಲ್ಲಿದ್ದ ಒಬ್ಬ ಮೆಸ್ತಿಸೊ (ಬೆರಕೆ) ಪೋರ್ಚುಗೀಸ್ ಹೆಂಗಸೊಬ್ಬಳಿಂದ :

ರೋಷನಾರ ಬೇಗಮಳು ತನ್ನ ಬಳಿಗೆ ಒಬ್ಬ ಯುವಕನನ್ನು ಗುಟ್ಟಾಗಿ ಕರೆಸಿ

ಕೊಂಡು ಅವನೊಡನೆ ಹಲವಾರು ದಿನಗಳು ಸುಖಪಟ್ಟಳು. ಕೊನೆಗೆ ಒಂದು ರಾತ್ರಿ ಆತನನ್ನು ಹೊರಗೆ ಕರೆದುಕೊಂಡು ಹೋಗುವಂತೆ ಪರಿಚಾರಿಕೆಯರಿಗೆ ಒಪ್ಪಿಸಿದಳು. ಹೆದರಿಕೆಯಿಂದಲೋ ಏನೋ, ಅವರು ಆ ಯುವಕನನ್ನು ಹೊರಗೆ ಕರೆದುಕೊಂಡು ಹೋಗದೆ ಅಲ್ಲೆಲ್ಲಿಯೋ ಬಿಟ್ಟುಬಿಟ್ಟರು. ಆತ ದಿಕ್ಕು ಕಾಣದೆ ರಾಜೋದ್ಯಾನದಲ್ಲಿ ಅಲೆದಾಡಿದ. ಇದನ್ನು ಕಂಡ ತೋಟಗಾರರು ಅವನನ್ನು ಹಿಡಿದುಕೊಂಡುಹೋಗಿ ಔರಂಗ ಜೇಬನ ಮುಂದೆ ನಿಲ್ಲಿಸಿದರು. ಆ ಯುವಕ ತಾನು ಕೋಟೆಯ ಗೋಡೆ ಹತ್ತಿ ಒಳಗೆ ಬಂದುದನ್ನು ಬಿಟ್ಟರೆ ಮತ್ತೇನನ್ನೂ ಬಾಯಿಂದ ಹೊರಡಿಸಲಿಲ್ಲ. ಇಷ್ಟರಿಂದ ಅವನ ತಪ್ಪು ತಿಳಿಯಲಾರದೆಹೋಯಿತು. ಔರಂಗಜೇಬ ಆತನನ್ನು ಒಳಕ್ಕೆ ಬಂದ ರೀತಿ ಯಲ್ಲೇ ಹೊರಕ್ಕೆ ಕಳುಹಿಸುವಂತೆ ಆಜ್ಞಾಪಿಸಿದ. ಆದರೆ ಖೋಜಾಗಳು ದಣಿಯ ಅಪ್ಪಣೆಯನ್ನು ಮೀರಿ ಆ ಯುವಕನನ್ನು ಕೋಟೆಯ ಗೋಡೆಯ ಮೇಲಿನಿಂದ ಕೆಳಕ್ಕೆ ನೂಕಿ ಅವನ ಗತಿ ಮುಗಿಸಿಬಿಟ್ಟರು.

ಇನ್ನೊಬ್ಬ ಯುವಕ ಉದ್ಯಾನವನದಲ್ಲಿ ಅಲೆದಾಡುತ್ತಿರುವಾಗ ಸಿಕ್ಕಿಬಿದ್ದ. ಆತ ತಾನು ಹೆಬ್ಬಾಗಿಲಿನಿಂದ ಬಂದೆನೆಂದು ಹೇಳಿದ. ಅದೇ ಬಾಗಿಲಿನಿಂದ ಹೊರಗೆ ಹೋಗು ವಂತೆ ಔರಂಗಜೇಬನ ಅಪ್ಪಣೆಯಾಯಿತು. ಆದರೆ, ಅಂತಃಪುರದ ಬಾಗಿಲನ್ನು ಸರಿಯಾಗಿ ಕಾಯದೆ ಅಸಡ್ಡೆಮಾಡಿದ ಖೋಜಾಗಳಿಗೆ ತಕ್ಕ ಶಿಕ್ಷೆ ವಿಧಿಸಿದ. ಈ ಖೋಜಾಗಳ ಅಸಡ್ಡೆಯಿಂದಾಗಿ ರಾಜಮನೆತನದ ಮರ್ಯಾದೆ ಹಾಳಾಗುತ್ತಿದೆಯಲ್ಲದೆ ರಾಜನ ಪ್ರಾಣಕ್ಕೇ ಸಂಚಕಾರ ಬರುವ ಸಂಭವವಿದೆ.

ಇದಾದ ಹಲವು ತಿಂಗಳುಗಳ ತರುವಾಯ ದಿಲ್ಲಿಗೆ ಒಂದೇ ಸಲ ಐದು ರಾಯ ಭಾರಿಗಳು ಬಂದರು. ಮೆಕ್ಕಾ ಷರೀಫ್‌ನ ರಾಯಭಾರಿ, ಅರೇಬಿಯಾದ ಫೆಲಿಕ್ಸ್ ದೊರೆಯ ರಾಯಭಾರಿ, ಇಥಿಯೋಪಿಯಾ ರಾಜನ ಇಬ್ಬರು ರಾಯಭಾರಿಗಳು ಮತ್ತು ಬಸ್ಸೋರಾ ರಾಜನ ಒಬ್ಬ ರಾಯಭಾರಿ–ಇವರೇ ಆ ಐದು ಜನ ರಾಯಭಾರಿಗಳು. ಮೊದಲ ಎರಡು ರಾಯಭಾರಿಗಳಿಗೂ ಬಸ್ಸೋರಾ ರಾಜನ ರಾಯಭಾರಿಗೂ ಸಿಕ್ಕಿದ ಮರ್ಯಾದೆ ಅಷ್ಟಕ್ಕಷ್ಟೆ. ಅವರ ಪರಿವಾರ ಬಹಳ ಕನಿಷ್ಠ ರೀತಿಯದಾಗಿತ್ತು. ತಾವು ತಂದ ಬಹುಮಾನಗಳಿಗೆ ಪ್ರತಿಯಾಗಿ ಹಣ ಪಡೆಯುವುದಕ್ಕೆ ಅವರು ಬಂದಿದ್ದಾರೆಂದು ಹೇಳಲಾಗುತ್ತಿತ್ತು. ಇಷ್ಟೆ ಅಲ್ಲದೆ, ಆ ಜನ ಸುಂಕಸಾರಿಗೆಗಳಿಲ್ಲದೆ ರಾಯಭಾರಕ್ಕೆ ಸೇರಿದ್ದೆಂದು ಅನೇಕಾನೇಕ ಸರಕುಗಳನ್ನು ಇಲ್ಲಿಗೆ ಸಾಗಿಸಿದರು. ತರುವಾಯ ಅವು ಗಳನ್ನು ಮಾರಿ ಹೇರಳವಾಗಿ ದುಡ್ಡುಮಾಡಿದರು. ಈ ಸರಕುಗಳನ್ನೂ ಕುದುರೆಗಳನ್ನೂ ಮಾರಿ ಬಂದ ಹಣದಿಂದ 'ಹಿಂದೂಸ್ಥಾನ'ದಲ್ಲಿ ಸಿಕ್ಕುವ ಸರಕುಗಳನ್ನು ಕೊಂಡುಕೊಂಡು, ರಫ್ತುಮಾಡುವ ಸರಕುಗಳ ಮೇಲೆ ಕೊಡಬೇಕಾದ ಸುಂಕ ಕೊಡದೆ ತಮ್ಮ ದೇಶಕ್ಕೆ ಸಾಗಿಸಿಕೊಂಡುಹೋದರು.

ಇಥಿಯೋಪಿಯದಿಂದ ಬಂದ ರಾಯಭಾರದ ವಿಚಾರವಾಗಿ ಒಂದೆರಡು ಮಾತು

ಹೇಳಬೇಕಾಗುತ್ತದೆ. ಅಲ್ಲಿಯ ರಾಜ ಇಂಡೀಸಿನಲ್ಲಿ ಇತ್ತೀಚೆಗೆ ನಡೆದ ವಿದ್ಯಮಾನಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡಿದ್ದ. ಅಲ್ಲದೆ, ತನ್ನ ಹಿರಿಮೆಯನ್ನು ಈ ವಿಶಾಲ ದೇಶದಲ್ಲಿ ಮೆರೆಸಲು ಮನಸ್ಸುಮಾಡಿ, ಅದಕ್ಕೆ ತಕ್ಕ ರೀತಿಯಲ್ಲಿ ರಾಯಭಾರವನ್ನು ಸಜ್ಜು ಮಾಡಿ ಕಳುಹಿಸಿದ್ದ. ಅದರ ಮೇಲೂ ಪಿಸಿಪಿಸಿ ಗುಸುಗುಸು ಮಾತು ಇತ್ತು. ಏನೆಂದರೆ, ಕೊಡಬಹುದಾದ ಭಾರಿ ಬಹುಮಾನಗಳ ಮೇಲೆ ಕಣ್ಣಿಟ್ಟಿದೆ ಎಂದು.

ಇಥಿಯೋಪಿಯಾದ ರಾಯಭಾರದಲ್ಲಿ ಇಬ್ಬರು ಗಣ್ಯರಾದ ರಾಯಭಾರಿಗಳಿದ್ದರು. ಅವರಲ್ಲಿ ಒಬ್ಬ ಮಹಮ್ಮದೀಯ. ನಾನು ಕೆಲವು ವರ್ಷಗಳ ಹಿಂದೆ ಈಜಿಪ್ಟಿನಿಂದ ಕೆಂಪು ಸಮುದ್ರದ ಮೇಲೆ ಬರುತ್ತಿರುವಾಗ ಆತನನ್ನು ಮೋಕಾದಲ್ಲಿ ಭೇಟಿಯಾಗಿದ್ದೆ. ಅನೇಕ ಜನ ಗುಲಾಮರನ್ನು ಮಾರಿ, ಅದರಿಂದ ಬಂದ ಹಣದಿಂದ ಇಂಡಿಯಾದ ಸರಕುಗಳನ್ನು ಕೊಂಡುಕೊಳ್ಳುವುದಕ್ಕಾಗಿ ಆತನನ್ನು ಇಥಿಯೋಪಿಯಾ ದೊರೆ ಕಳುಹಿಸಿದ್ದ. ಎಂಥ ಮರ್ಯಾದೆಯ ವ್ಯಾಪಾರಮಾಡುತ್ತಿದ್ದಾನೆ ಆಫ್ರಿಕದ ಆ ಮಹಾ ಕ್ರೈಸ್ತರಾಜ ನೋಡಿ!

ಇಥಿಯೋಪಿಯಾದ ಇನ್ನೊಬ್ಬ ರಾಯಭಾರಿ, ಅರ್ಮೀನಿಯಾದ ಕ್ರೈಸ್ತ ವರ್ತಕ. ಆತನನ್ನು ನಾನು ಮೋಕಾದಲ್ಲಿ ಕಂಡಿದ್ದೆ.

ತನ್ನ ರಾಯಭಾರ ಅದ್ದೂರಿಯಾಗಿ ಕಾಣಬೇಕೆಂದು ಇಥಿಯೋಪಿಯ ರಾಜ ಹೇರಳವಾದ ಹಣ ಒದಗಿಸಿದ್ದ. ಮೋಕಾದಲ್ಲಿ ಮಾರಾಟಮಾಡುವುದಕ್ಕೆಂದು ಮೂವತ್ತೆರಡು ಗುಲಾಮಿ ಹುಡುಗ ಹುಡುಗಿಯರನ್ನು ಒದಗಿಸಿದ್ದ. ಅವರನ್ನು ಮಾರಿ ಬಂದ ಹಣ ರಾಯಭಾರದ ಖರ್ಚಿಗೆ ಮೀಸಲಿಡಲಾಗಿತ್ತು. ಬಹಳ ಗೌರವದ ಪದ್ಧತಿಯಲ್ಲವೆ ಇದು! ಮೋಕಾದಲ್ಲಿ ಚಿಕ್ಕವಯಸ್ಸಿನ ಒಂದು ಜೊತೆ ಹೆಣ್ಣು ಗಂಡು ಗುಲಾಮರಿಗೆ ಇಪ್ಪತ್ತೈದು ಅಥವಾ ಮೂವತ್ತು ಕ್ರೌನುಗಳಷ್ಟು ಬೆಲೆ. ಇವರನ್ನಷ್ಟೇ ಅಲ್ಲದೆ, ಮೊಗಲ್ ಚಕ್ರವರ್ತಿಗೆಂದು ಆರಿಸಿದ ಇಪ್ಪತ್ತೈದು ಗುಲಾಮರನ್ನು ಕಳುಹಿಸಿಕೊಟ್ಟಿದ್ದ. ಇವರಲ್ಲಿ ಒಂಬತ್ತು ಹತ್ತು ಮಂದಿ ಬಹು ಚಿಕ್ಕವಯಸ್ಸಿನವರಿದ್ದು, ಇಡಮಾಡಲು ತಕ್ಕವರಾಗಿದ್ದರು. ಕ್ರೈಸ್ತನಾದ ರಾಜ ಮಾಡುವ ಕೆಲಸವೇ ಇದು? ಆದರೆ ಇಥಿಯೋಪಿಯನರ ಕ್ರೈಸ್ತಮತಕ್ಕೂ ನಮ್ಮದಕ್ಕೂ ತುಂಬಾ ವ್ಯತ್ಯಾಸ.

ಮೊಗಲನಿಗೆ ಕಳುಹಿಸಿದ ಮತ್ತಿತರ ಬಹುಮಾನಗಳು ಯಾವುವೆಂದರೆ: ಅರೇಬಿಯಾ ಕುದುರೆಗಳಿಗೆ ಸಾಟಿಯಾದ ಹದಿನೈದು ಕುದುರೆಗಳು, ಒಂದು ಜಾತಿಯ ಕಿರಿಯ ಹೇಸರಗತ್ತೆ ಮತ್ತು ಆನೆಯ ದಂತಗಳು. ಈ ದಂತಗಳು ಎಷ್ಟು ಭಾರಿಯಾಗಿದ್ದುವೆಂದರೆ, ಒಂದೊಂದನ್ನು ಎತ್ತುವುದಕ್ಕೆ ಒಬ್ಬ ಮನುಷ್ಯ ಮುಕ್ಕರಿಯಬೇಕಾಗಿತ್ತು. ಕೊನೆಯದಾಗಿ, ಎತ್ತಿನ ಕೊಂಬುಗಳು ಬಹುಮಾನದಲ್ಲಿ ಸೇರಿದ್ದುವು. ಈ ಕೊಂಬುಗಳಲ್ಲಿ ಪುನುಗನ್ನು ತುಂಬಿದ್ದರು. ಈ ಕೊಂಬುಗಳು ಬಹಳ ದೊಡ್ಡವಾಗಿದ್ದುವು. ನಾನು ಒಂದರ ಬಾಯನ್ನು ಅಳೆದಾಗ ಅದರ ಅಗಲ ಅರ್ಧ ಅಡಿಯಷ್ಟಿತ್ತು.

ಈ ರೀತಿಯಲ್ಲಿ ಸಜ್ಜುಮಾಡಿಕೊಂಡು ಗೋಂಡಾರ್‌ನಿಂದ ಹೊರಟ ರಾಯಭಾರಿಗಳು ಎರಡು ತಿಂಗಳುಗಳ ಕಾಲ ಬೆಂಗಾಡು ಪ್ರದೇಶದಲ್ಲಿ ಪ್ರಯಾಣಮಾಡಿ ಮೋಕಾಕ್ಕೆ ಬಂದರು. ಇಲ್ಲಿಗೆ ಬರುವುದರೊಳಗೆ ದಾರಿಯಲ್ಲಿ ಅವರಿಗೆ ಅಗತ್ಯ ವಸ್ತುಗಳು ಸಿಗದೆ ಹಲವಾರು ಗುಲಾಮರು ಸತ್ತುಹೋದರು. ಮೋಕಾದಲ್ಲಿ ಗುಲಾಮರ ಬೆಲೆ ಇಳಿದು ಹೋಗಿತ್ತು. ಗುಲಾಮರಿಂದ ಮಾರುಕಟ್ಟೆ ತುಂಬಿಹೋಗಿದ್ದರಿಂದ ಹುಡುಗ ಹುಡುಗಿಯರನ್ನು ಕಡಿಮೆ ಬೆಲೆಗೆ ಮಾರಬೇಕಾಯಿತು. ಗುಲಾಮರ ಮಾರಾಟವಾದ ಕೂಡಲೇ ರಾಯಭಾರಿಗಳು ತಮ್ಮ ಪ್ರಯಾಣವನ್ನು ಮುಂದುವರೆಸಿ, ಸೂರತ್ತಿಗೆ ಬರುವ ಹಡಗೊಂದರಲ್ಲಿ ಹೊರಟು ಇಪ್ಪತ್ತೈದು ದಿನಗಳ ಸಮುದ್ರಯಾನಮಾಡಿದರು. ಸಮುದ್ರಯಾನದಲ್ಲಿ ಹಲವಾರು ಗುಲಾಮರೂ ಅನೇಕ ಕುದುರೆಗಳೂ ಸತ್ತುಹೋದುವು. ಹೇಸರಗತ್ತೆಯೂ ಸತ್ತುಹೋಯಿತು. ಆದರೆ ಇದರ ಚರ್ಮವನ್ನು ತಮ್ಮೊಡನೆ ತೆಗೆದುಕೊಂಡು ಬಂದರು. ಈ ಚರ್ಮವನ್ನು ನಾನು ದಿಲ್ಲಿಯಲ್ಲಿ ನೋಡಿದೆ. ಬಹು ಸುಂದರವಾದ ಹಾಗೂ ಮೃದುವಾದ ಚರ್ಮ ಅದು.

ಈ ರಾಯಭಾರಿಗಳು ಸೂರತ್ತಿನಲ್ಲಿ ಹಡಗು ಇಳಿಯುವುದಕ್ಕಿಲ್ಲ, 'ಶಿವಾಜಿ' ಎಂಬ ಹೆಸರಿನ ಬಿಜಾಪುರದ ದಂಗೆಕೋರನೊಬ್ಬ ಪಟ್ಟಣವನ್ನು ಪ್ರವೇಶಿಸಿ ಅದನ್ನು ಕೊಳ್ಳೆ ಹೊಡೆದು ಬೆಂಕಿ ಹಚ್ಚಿದನು. ರಾಯಭಾರಿಗಳು ಇಳಿದುಕೊಂಡಿದ್ದ ಮನೆಯೂ ಆ ಬೆಂಕಿಯಲ್ಲಿ ಸುಟ್ಟುಹೋಯಿತು. ಆ ಬೆಂಕಿಯಲ್ಲಿ ಹಾಗೂ ಶಿವಾಜಿ ಕಡೆಯವರ ಕೊಳ್ಳೆಯಲ್ಲಿ ಉಳಿದು ಉಳಿದುವೆಂದರೆ ರಾಯಭಾರಿಗಳ ಪರಿಚಯ ಪತ್ರಗಳು, ಕೆಲವು ಗುಲಾಮರು, ಉಡುಪುಗಳು, ಹೇಸರಗತ್ತೆಯ ಚರ್ಮ ಮತ್ತು ಪುನುಗನ್ನು ಖಾಲಿ ಮಾಡಿದ ಎತ್ತಿನಕೊಂಬು.

ಈ ಮಹೋನ್ನತ ರಾಯಭಾರಿಗಳು ತಮಗೊದಗಿದ ಈ ವ್ಯಸನಕರವಾದ ನಷ್ಟವನ್ನು ಬಹಳ ಉತ್ಪ್ರೇಕ್ಷೆಮಾಡಿ ಹೇಳಿಕೊಂಡರು. ಆದರೆ ಅವರು ಹಡಗಿನಿಂದ ಭೂಮಿಯ ಮೇಲೆ ಕಾಲಿಟ್ಟಾಗ ಅವರ ಚಿಂತಾಜನಕ ಸ್ಥಿತಿಯನ್ನು, ಅಂದರೆ ಮೈಮೇಲೆ ಸರಿಯಾದ ಬಟ್ಟೆಯಿಲ್ಲದೆ, ಕೈಯಲ್ಲಿ ದುಡ್ಡಾಗಲಿ ಹುಂಡಿಯಾಗಲಿ ಇಲ್ಲದೆ, ಹೊಟ್ಟೆಗಿಲ್ಲದೆ ನಪೇತಲರಾಗಿದ್ದ ಅವರ ಸ್ಥಿತಿಯನ್ನು ಕಂಡು ಅವರಿಗೆ ಸೂರತ್ತಿನಲ್ಲಿ ಆದ ಗತಿ ಸೂಕ್ತವಾಗಿಯೇ ಇದ್ದಿತೆಂದು ಜನ ಹಿಯ್ಯಾಳಿಸಿದರು. ಆ ಅಸಹ್ಯ ಬಹುಮಾನಗಳನ್ನು ದಿಲ್ಲಿಯ ವರೆಗೆ ಸಾಗಿಸುವ ತಾಪತ್ರಯ ತಪ್ಪಿದ್ದು ಒಳ್ಳೆಯದಾಯಿತು ಎಂದರು.

ಈ ರಾಯಭಾರಿಗಳು ಭಿಕ್ಷುಕರಂತೆ ಔರಂಗಜೇಬನ ಮುಂದೆ ಹಾಜರಾಗುವುದಕ್ಕೆ ಶಿವಾಜಿ ಒಳ್ಳೆಯ ನೆಪ ಒದಗಿಸಿಕೊಟ್ಟನೆಂದೇ ಇಂಡಿಯನರು ಮಾತಾಡುತ್ತಿದ್ದರು. ಇಂತಹ ದುರವಸ್ಥೆಯಲ್ಲಿದ್ದ ರಾಯಭಾರಿಗಳಿಗೆ ಸೂರತ್ತಿನ ಗೌರ್ನರ್ ಊಟೋಪಚಾರಕ್ಕೆ ಏರ್ಪಡಿಸಿದುದಲ್ಲದೆ, ದಿಲ್ಲಿಗೆ ಹೋಗುವುದಕ್ಕೆ ಹಣವನ್ನೂ ಗಾಡಿಗಳನ್ನೂ ಒದಗಿಸಿದನು. ಶಿವಾಜಿಯು ಸೂರತ್ತಿನ ಮೇಲೆ ಮಾಡಿದ ಧಾಳಿಯ ನೆಪದಲ್ಲಿ ಅವರು ತಮ್ಮ ಅನುಕೂಲ

ಕ್ಕಾಗಿ ಪುನುಗನ್ನೂ ಅನೇಕ ಗುಲಾಮರನ್ನೂ ಮಾರಿಕೊಂಡರು.

ಸೂರತ್ತಿನಲ್ಲಿ ಡಚ್ ಫ್ಯಾಕ್ಟರಿಯಲ್ಲಿದ್ದ ನನ್ನ ಅಚ್ಚುಮೆಚ್ಚಿನ ಸ್ನೇಹಿತ ಅಡ್ರಿಕನ್ ಈ ರಾಯಭಾರಗಳಲ್ಲಿ ಒಬ್ಬನಾಗಿದ್ದ. ಅರ್ಮೀನಿಯನ್ ಕ್ರೈಸ್ತನೊಡನೆ ನನಗೆ ಒಂದು ಪರಿಚಯ ಪತ್ರ ಕಳುಹಿಸಿದ್ದ. ಅರ್ಮೀನಿಯನ್ನನಿಗೆ ಗೊತ್ತಿರಲಿಲ್ಲ, ನಾನು ಮೋಕಾದಲ್ಲಿ ಆತನ ಅತಿಥಿಯಾಗಿದ್ದೆ ಎಂದು. ಇದು ಗೊತ್ತಾದಾಗ ಆತನಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಐದಾರು ವರ್ಷಗಳ ತರುವಾಯ ಈ ಭೇಟಿ ಆಗಿತ್ತು. ಆತನನ್ನು ನಾನು ಅಪ್ಪಿಕೊಂಡು ಸಂತೋಷವನ್ನು ವ್ಯಕ್ತಪಡಿಸಿ ನನ್ನ ಕೈಲಾದ ಸಹಾಯ ಮಾಡುವುದಾಗಿ ಭರವಸೆ ಕೊಟ್ಟೆ. ನನಗೆ ಆಸ್ಥಾನದಲ್ಲಿ ಸಾಕಷ್ಟು ಜನರು ಗೊತ್ತಿದ್ದರೂ ಬರಿಗ್ಗೆಯಲ್ಲಿದ್ದ ಈ ರಾಯಭಾರಿಗಳಿಗೆ ಸಹಾಯಮಾಡುವುದು ಕಷ್ಟವಾಯಿತು. ಅವರಲ್ಲಿದ್ದ ಬಹುಮಾನಗಳೆಂದರೆ ಹೇಸರಗತ್ತೆಯ ಚರ್ಮ ಮತ್ತು ಶರಾಬು ತುಂಬಿಟ್ಟಿದ್ದ ಎತ್ತಿನ ಕೊಂಬು. ಬೆಲ್ಲದಿಂದ ಮಾಡಿದ ಮದ್ಯವೇ ಈ ಶರಾಬು. ಈ ಮದ್ಯವೆಂದರೆ ಅವರಿಗೆ ಪಂಚಪ್ರಾಣ. ಬರಿಗ್ಗೆಯಲ್ಲಿ ಆಸ್ಥಾನಕ್ಕೆ ಹೋದರೆ ಇವರಿಗೆ ತೋರಿಸಬಹುದಾದ ತಿರಸ್ಕಾರ ಇವರ ಬಡತನದ ಉಡುಗೆ ತೊಡುಗೆಗಳಿಂದ ಹೆಚ್ಚುವಂತದ್ದಾಗಿತ್ತು. ಬೀದಿಗಳಲ್ಲಿ 'ಪಲೇಕಿ' (paleky=ಪಲ್ಲಕ್ಕಿ) ಇಲ್ಲದೆ ಅಡ್ಡಾಡುತ್ತಿದ್ದರು. ಬರಿಗಾಲಲ್ಲಿ ಮತ್ತು ಬರಿದಲೆಯಲ್ಲಿ ಅವರ ಹಿಂದೆ ಓಡಾಡುತ್ತಿದ್ದ ಏಳೆಂಟು ಜನ ಸೇವಕರ ಉಡುಪೋ ಹೇಳತೀರದು ! ಒಂದು ಚೂರು ಲಂಗೋಟಿ ಮತ್ತು ಹೆಗಲ ಮೇಲೆ ಅಡ್ಡಲಾಗಿ ಹಾಕಿಕೊಂಡ ಒಂದು ತುಂಡು ಬಟ್ಟೆ—ಇಷ್ಟೆ ಅವರ ಉಡುಪು. ರಾಯಭಾರಿಗಳ ಬಳಿ ಬಾಡಿಗೆಗೆ ಪಡೆದ ಮುರುಕು ಗಾಡಿಯಲ್ಲದೆ ಬೇರೆ ವಾಹನವಿರಲಿಲ್ಲ. ನಮ್ಮ ಮಿಷನರಿ ಫಾದರ್ (ಪಾದ್ರಿ) ಕೊಟ್ಟಿದ್ದ ಒಂದು ಕುದುರೆಯನ್ನು ಬಿಟ್ಟರೆ ಅವರಲ್ಲಿ ಮತ್ತಾವ ಕುದುರೆಯೂ ಇರಲಿಲ್ಲ. ನಾನು ಒಂದು ಕುದುರೆ ಕೊಟ್ಟಿದ್ದೆ. ಆದರೆ ಸಾಯಿಸುವಷ್ಟರ ಮಟ್ಟಿಗೆ ಅದನ್ನು ಉಪಯೋಗಿಸಿಬಿಟ್ಟರು.

ಈ ಪರಿಸ್ಥಿತಿಯಲ್ಲಿದ್ದ ರಾಯಭಾರಿಗಳ ಪರವಾಗಿ ನಾನು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತು. ಜನ ಅವರನ್ನು ಭಿಕ್ಷುಕರಂತೆ ಕಾಣುತ್ತಿದ್ದರು. ಯಾರೂ ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಒಂದು ದಿನ ನಾನು ವಿದೇಶಾಂಗ ಮಂತ್ರಿಯಾದ ನನ್ನ ಹಿತೈಷಿ ಆಗಾ ದನೇಷಮಂಡ್ ಖಾನನೊಡನೆ ಮಾತನಾಡುತ್ತಿರುವಾಗ ಇಥಿಯೋಪಿಯ ಚಕ್ರವರ್ತಿಯ ವೈಭವವನ್ನು ನಾನು ಹೊಗಳಿದ್ದೆ. ಆತ ಔರಂಗಜೇಬನಿಗೆ ಹೇಳಿ ರಾಯಭಾರಿಗಳು ಆಸ್ಥಾನದಲ್ಲಿ ಪರಿಚಯಪತ್ರಗಳನ್ನು ಒಪ್ಪಿಸುವುದಕ್ಕೆ ಅನುಮತಿ ದೊರಕಿಸಿಕೊಟ್ಟ. ಔರಂಗಜೇಬ ಇಬ್ಬರು ರಾಯಭಾರಿಗಳಿಗೂ ಸೆರಪಾ ಮುಂತಾದ ಬಹುಮಾನಗಳನ್ನಿತ್ತು ಅವರ ಸತ್ಕಾರಕ್ಕೆ ಯುಕ್ತ ವ್ಯವಸ್ಥೆಯಾಗುವಂತೆ ಆಜ್ಞೆಮಾಡಿದನು. ಮೇಲಾಗಿ, ಈಗ ಸುಮಾರು ಮೂರು ಸಾವಿರ ಕ್ರೌನುಗಳಿಗೆ ಸಮನಾಗುವ ಆರು ಸಾವಿರ ರೂಪಾಯಿಗಳನ್ನು ಕೊಡಿಸಿದ. ಇದರಲ್ಲಿ ಮಹಮ್ಮದೀಯನಿಗೆ ನಾಲ್ಕು ಸಾವಿರ ; ಕ್ರೈಸ್ತನಿಗೆ ಎರಡು

ಸಾವಿರ. ಔರಂಗಜೇಬ ಈ ರಾಯಭಾರಿಗಳ ಮೂಲಕ ಇಥಿಯೋಪಿಯಾ ರಾಜನಿಗೆ ಬಹು ಬೆಲೆಯಾದ ಸೆರಪಾವನ್ನೂ, ಇನ್ನಿತರ ಸಾಮಾನುಗಳ ಜೊತೆಗೆ ಇಪ್ಪತ್ತು ಸಾವಿರ ಚಿನ್ನ ಮತ್ತು ಬೆಳ್ಳಿ ರೂಪಾಯಿಗಳನ್ನೂ ಕಳುಹಿಸಿಕೊಟ್ಟ. ಇಥಿಯೋಪಿಯಾದಲ್ಲಿ ಟಂಕಿಸಿದ ನಾಣ್ಯಗಳ ಚಲಾವಣೆ ಇಲ್ಲದ ಕಾರಣ ತಾನು ಕಳುಹಿಸಿದ ಚಿನ್ನ ಬೆಳ್ಳಿ ನಾಣ್ಯಗಳನ್ನು ಚಕ್ರವರ್ತಿ ಮೆಚ್ಚುವನೆಂದು ಔರಂಗಜೇಬ ತಿಳಿಸಿದ. ಆದರೆ ಅವನಿಗೆ ಗೊತ್ತಿತ್ತು, ಒಂದು ರೂಪಾಯಿಯೂ ಹಿಂದೂಸ್ಥಾನದ ಹೊರಗೆ ಹೋಗುವುದಿಲ್ಲ ಎಂದು. ರಾಯಭಾರಿಗಳು ಆ ಹಣವನ್ನೆಲ್ಲಾ ತಮಗೆ ಬೇಕಾದ ಸಾಮಾನು ಸರಂಜಾಮುಗಳನ್ನು ಕೊಂಡುಕೊಳ್ಳು ವುದರಲ್ಲಿ ಉಪಯೋಗಿಸುತ್ತಾರೆ ಎಂದು ಆತನಿಗೆ ತಿಳಿದಿತ್ತು. ಅವರು ಮಾಡಿದ್ದೂ ಹಾಗೆಯೇ. ಅವರು ತಮ್ಮ ರಾಜರಾಣಿಯರಿಗೂ ಚಕ್ರವರ್ತಿಯ ಒಬ್ಬನೇ ಒಬ್ಬ ಮಗ ನಿಗೂ ಬೇಕಾದ ವಿಧ ವಿಧ ಬಟ್ಟೆಗಳನ್ನು ಕೊಂಡರು ; ಅವನ್ನು ಸುಂಕ ಸಾರಿಗೆಗಳಿಲ್ಲದೆ ಹಿಂದೂಸ್ಥಾನದ ಹೊರಗೆ ಸಾಗಿಸಿದರು.

ರಾಯಭಾರಿಗಳಲ್ಲಿ ಒಬ್ಬನಾದ ಮೂರತನಿಗೂ ನನಗೂ ಸ್ನೇಹವಿದ್ದರೂ ಅವನಿಗಾಗಿ ನಾನು ನನ್ನ ದಾಕ್ಷಿಣ್ಯಗಳನ್ನು ಖರ್ಚುಮಾಡಿದ್ದು ಮೂರು ಕಾರಣಗಳಿಂದಾಗಿ ತಪ್ಪಾ ಯಿತು. ಒಂದನೆಯದು, ಆತ ತನ್ನ ಬಳಿ ಇದ್ದ ಹುಡುಗನೊಬ್ಬನನ್ನು ನನಗೆ ಐವತ್ತು ರೂಪಾಯಿಗಳಿಗೆ ಮಾರುವುದಾಗಿ ಹೇಳಿದ್ದ. ಆದರೆ ಆತ ಮುನ್ನೂರು ರೂಪಾಯಿ ಕೇಳಿದ. ಆ ಹುಡುಗನ ಮೈಕಟ್ಟು ಚೆನ್ನಾಗಿತ್ತು. ಚರ್ಮದ ಬಣ್ಣ ಕಪ್ಪೆಂದರೆ ಕಪ್ಪಾಗಿತ್ತು. ಮೂಗು ಚಪ್ಪಟೆಯಾಗಿರಲಿಲ್ಲ. ಸಾಮಾನ್ಯ ಇಥಿಯೋಪಿಯನರಿಗೆ ಇರುವಂತೆ ತುಟಿಗಳು ದಪ್ಪನಾಗಿರಲಿಲ್ಲ. ಮುನ್ನೂರು ರೂಪಾಯಿ ಕೊಟ್ಟಾದರೂ ಆ ಹುಡುಗನನ್ನು ಕೊಂಡು ಕೊಂಡು, ತಂದೆಯೊಬ್ಬ ತನ್ನ ಮಗನನ್ನೇ ಮಾರಿದ ಎಂದು ಹೇಳಿಕೊಳ್ಳುವ ಅವಕಾಶವನ್ನುಂಟುಮಾಡಿಕೊಳ್ಳೋಣ ಎಂದಿದ್ದೆ. ಆದರೆ ಅದು ನಡೆಯಲಿಲ್ಲ.

ಇಥಿಯೋಪಿಯಾದಲ್ಲಿ ಒಂದು ಮಸೀದಿ ಇತ್ತು. ಪೋರ್ಚುಗೀಸರು ಗೋವಾ ದಿಂದ ಸೈನ್ಯವನ್ನು ತೆಗೆದುಕೊಂಡುಹೋಗಿ ಆ ದೇಶದ ಮೇಲೆ ಧಾಳಿಮಾಡಿದಾಗ ಅದನ್ನು ಹಾಳುಗೆಡವಿದ್ದರು. ತಮ್ಮ ರಾಜನಿಗೆ ಶಿಫಾರ್ಸುಮಾಡಿ ಆ ಮಸೀದಿಯನ್ನು ಪುನಃ ಕಟ್ಟಿಸುವುದಕ್ಕೆ ಏರ್ಪಾಡುಮಾಡುವುದಾಗಿ ಆ ಇಬ್ಬರು ರಾಯಭಾರಿಗಳು ಔರಂಗ ಜೇಬನ ಮುಂದೆ ವಾಗ್ದಾನ ಮಾಡಿದ್ದರು. ಈ ಖರ್ಚಿಗಾಗಿ ಔರಂಗಜೇಬ ೨೦೦೦ ರೂಪಾಯಿಗಳನ್ನು ಮುಂಗಡವಾಗಿ ಕೊಟ್ಟ. ಈ ರೀತಿಯ ವಾಗ್ದಾನ ನನಗೆ ಒಪ್ಪಿಗೆ ಯಾಗಲಿಲ್ಲ. ಇದು ನನ್ನ ಎರಡನೇ ಆಕ್ಷೇಪಣೆ.

ನನ್ನ ಮೂರನೆಯ ಆಕ್ಷೇಪಣೆಯೆಂದರೆ, ಕ್ರೈಸ್ತನಾದ ಮೂರತ್ ಔರಂಗಜೇಬ ನನ್ನು ಕೇಳಿಕೊಂಡು ತನ್ನ ರಾಜನಿಗೆ ಕೊರಾನು ಮುಂತಾದ ಏಳೆಂಟು ಪುಸ್ತಕಗಳನ್ನು ಪಡೆದದ್ದು.

ಈ ವ್ಯವಹಾರಗಳಲ್ಲಿ ಏನೋ ಹೀನಾಯ ನಡತೆ ಇದ್ದಂತೆ ಕಂಡಿತು. ಕ್ರೈಸ್ತ ರಾಜನ ಹೆಸರಿನಲ್ಲಿ ಕ್ರೈಸ್ತ ರಾಯಭಾರಿ ಹೀಗೆ ಮಾಡಿದ್ದು ತೀರಾ ಅಸಹ್ಯವೆನಿಸಿತು.

ಈ ರಾಯಭಾರಿಗಳು ದಿಲ್ಲಿಯಲ್ಲಿ ಇದ್ದ ಕಾಲದಲ್ಲಿ, ಯಾವಾಗಲೂ ಜ್ಞಾನ ಸಂಪಾದನೆಗೆ ಹಾತೊರೆಯುತ್ತಿದ್ದ ಆಗಾ ಅವರನ್ನು ಆಗಾಗ್ಯೆ ತನ್ನ ಮನೆಗೆ ಊಟಕ್ಕೆ ಕರೆಯುತ್ತಿದ್ದ. ಅವರ ದೇಶ ಹಾಗೂ ಸರ್ಕಾರದ ವಿಚಾರವಾಗಿ ಪ್ರಶ್ನೆಗಳನ್ನು ಹಾಕುತ್ತಿದ್ದ. ನೈಲ್ ನದಿಯ ವಿಚಾರವನ್ನು ಕೇಳಿದ. ಅದರ ವಿಚಾರ ಚೆನ್ನಾಗಿ ತಿಳಿದುಕೊಂಡಿದ್ದ ರಾಯಭಾರಿಗಳು ಅದು ಹುಟ್ಟುವುದೆಲ್ಲಿ ಎಂಬುದನ್ನು ವಿವರಿಸಿ ಹೇಳಿದರು. ಮೂರತ್ ಹೇಳಿದ ಒಂದೆರಡು ವಿಷಯಗಳು ಯಾವುವೆಂದರೆ : ಇಥಿಯೋಪಿಯಾದಲ್ಲಿ ಹಲವಾರು ಹೆಂಡಿರುಗಳನ್ನು ಹೊಂದದ ಗಂಡಸರೇ ಅಪರೂಪವಂತೆ. ತನಗೆ ಶಾಸ್ತ್ರೋಕ್ತವಾಗಿ ಮದುವೆಯಾದ ಹೆಂಡತಿಯಲ್ಲದೆ ಇಟ್ಟುಕೊಂಡಿರುವ ಇಬ್ಬರು ಹೆಂಗಸರು ಇದ್ದಾರೆಂದು ನಾಚಿಕೆಯಿಲ್ಲದೆ ಹೇಳಿಕೊಂಡ. ಇಂಡೀಸಿನಲ್ಲಿ ಹೆಂಗಸರು ಮಹಮ್ಮದೀಯರನ್ನು ಕಂಡರೆ, ಏಕೆ ಜೆಂಟೈಲರನ್ನು ಕಂಡರೂ ಸಹ ಅವಿತುಕೊಳ್ಳುವಂತೆ ಇಥಿಯೋಪಿಯಾದಲ್ಲಿ ಅವಿತುಕೊಳ್ಳುವುದಿಲ್ಲವೆಂದು ತಿಳಿಸಿದ. ನಾನೇನಾದರೂ ಇಥಿಯೋಪಿಯಾಕ್ಕೆ ಹೋದರೆ ಮದುವೆಯಾಗದೆ ಹಿಂದಿರುವುದಿಲ್ಲವೆಂದೂ ಹೇಳಿದ. ಕೆಲವು ವರ್ಷಗಳ ಹಿಂದೆ ಒಬ್ಬ ಯೂರೋಪಿಯನ್ 'ಪಾದ್ರಿ'ಗೆ (Padry) ಒತ್ತಾಯವಾಗಿ ಒಬ್ಬಳನ್ನು ಮದುವೆಮಾಡಿದರಂತೆ.

ಔರಂಗಜೇಬನು ಕೂಡ ಈ ರಾಯಭಾರಿಗಳಿಗೆ ಎರಡು ಸಲ ಹೇಳಿಕಳುಹಿಸಿ, ಅವರಿಂದ ಆ ದೇಶದಲ್ಲಿ ಮಹಮ್ಮದೀಯ ಮತದ ಪರಿಸ್ಥಿತಿ ಏನು ಎಂದು ತಿಳಿದುಕೊಳ್ಳುವ ಪ್ರಯತ್ನಮಾಡಿದ. ಆತನೂ ಸಹ ಹೇಸರಗತ್ತೆಯ ಚರ್ಮವನ್ನು ತರಿಸಿ ನೋಡಿದನು. ಆ ಚರ್ಮ ಆಮೇಲೆ ಕೋಟೆಯ ಮುಖ್ಯಾಧಿಕಾರಿಯ ಕೈಸೇರಿಬಿಟ್ಟಿತು. ನಾನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ರಾಯಭಾರಿಗಳು ಆ ಚರ್ಮವನ್ನು ನನಗೆ ಕೊಡುವ ರೆಂದುಕೊಂಡಿದ್ದೆ. ಹಾಗೆ ಕೊಡದೆಹೋದ ಕಾರಣ ನನಗೆ ತುಂಬಾ ನಿರಾಸೆಯಾಯಿತು. ಚರ್ಮದ ಜೊತೆಗೆ ಎತ್ತಿನ ಕೊಂಬುಗಳನ್ನೂ ರಾಜನಿಗೆ ತೋರಿಸಿ ಎಂದಿದ್ದೆ ರಾಯಭಾರಿಗಳಿಗೆ. ಹಾಗೇನಾದರೂ ಮಾಡಿದ್ದರೆ ಔರಂಗಜೇಬ ಕೇಳಿಬಿಡುತ್ತಿದ್ದ, ಕೊಂಬಿನಲ್ಲಿದ್ದ ಪುನುಗನ್ನು ಕದ್ದ ಶಿವಾಜಿಯ ಕಡೆಯವರು ಕೊಂಬನ್ನೇಕೆ ಕದಿಯಲಿಲ್ಲ ಎಂದು.

ಇಥಿಯೋಪಿಯ ರಾಯಭಾರ ಇನ್ನೂ ದಿಲ್ಲಿಯಲ್ಲಿರುವಾಗ ಔರಂಗಜೇಬ ತನ್ನ ಮಂತ್ರಿಮಂಡಲವನ್ನೂ ತನ್ನ ಆಸ್ಥಾನದ ಹಿರಿಯರನ್ನೂ ಕರೆದು ತನ್ನ ಮೂರನೆಯ ಮಗ ಸುಲ್ತಾನ್ ಅಕ್ಬರನಿಗೆ ಸರಿಯಾದ ಶಿಕ್ಷಕನನ್ನು ನೇಮಿಸುವ ಆಲೋಚನೆ ನಡೆಸಿದ. ಈ ಮಗನನ್ನು ಮುಂದೆ ಸಿಂಹಾಸನದ ಉತ್ತರಾಧಿಕಾರಿಯಾಗಿ ಮಾಡುವುದು ಆತನ ಉದ್ದೇಶವಾಗಿತ್ತು. ಸರಿಯಾದ ವಿದ್ಯಾಬುದ್ಧಿಗಳನ್ನು ಕಲಿಸಿ ಆ ಹುಡುಗನನು ತಿಳಿವಳಿಕಸ್ತನನ್ನಾಗಿ ಮಾಡಬೇಕೆಂಬುದು ಔರಂಗಜೇಬನ ಆಸೆಯಾಗಿತ್ತು. ಮುಂದೆ ರಾಷ್ಟ್ರ

ಗಳನ್ನೇ ಆಳಬೇಕಾದ ರಾಜಕುಮಾರರ ತಲೆಯಲ್ಲಿ ಉಪಯುಕ್ತ ಜ್ಞಾನವನ್ನು ತುಂಬ ಬೇಕಾದ ಆವಶ್ಯಕತೆಯನ್ನು ಎಲ್ಲರಿಗಿಂತ ಹೆಚ್ಚಾಗಿ ಔರಂಗಜೇಬ ಅರಿತಿದ್ದ. ತನ್ನ ಅಧಿಕಾರ ಹಾಗೂ ಸ್ಥಾನಮಾನಗಳಲ್ಲಿ ಈ ರಾಜಕುಮಾರರು ಬೇರೆಯವರನ್ನು ಮೀರಿಸ ಬೇಕಾಗಿರುವ ಕಾರಣ, ಅವರಿಗೆ ಉನ್ನತವಾದ ತಿಳಿವಳಿಕೆ ಹಾಗೂ ಜ್ಞಾನ ಇರಬೇಕೆಂದು ಆತ ಅನ್ನುತಿದ್ದ. ಏಷ್ಯಾದ ಚಕ್ರಾಧಿಪತ್ಯಗಳಲ್ಲಿಯ ದುರಾಡಳಿತ, ತನ್ಮೂಲಕ ಅವುಗಳ ಕ್ಷೀಣತೆ—ಇವುಗಳಿಗೆ ಕಾರಣಗಳನ್ನು ಹುಡುಕಿ ನೋಡಿದಾಗ, ಆ ಚಕ್ರಾಧಿಪತ್ಯಗಳನ್ನು ಆಳಿದ ರಾಜರುಗಳಿಗೆ ಬಾಲ್ಯದಲ್ಲಿ ಸಾಕಷ್ಟು ವಿದ್ಯಾಭ್ಯಾಸವಿಲ್ಲದಿದ್ದುದೂ, ಕಲಿತ ವಿದ್ಯೆ ಮನಸ್ಸಿನ ಮೇಲೆ ದುಷ್ಪರಿಣಾಮವನ್ನುಂಟುಮಾಡುವಂಥಹದು ಆಗಿದ್ದುದೂ ಕಂಡು ಬಂದಿತು. ಬಾಲ್ಯದಿಂದ ಹೆಂಗಸರು ಮತ್ತು ಖೋಜಾಗಳ ಮಧ್ಯೆ ಮತ್ತು ರಷ್ಯ, ಸರ್‌ಕಾಸ್ಸಿಯ, ಮಿಂಗ್ರೋಲಿಯಾ, ಜಾರ್ಜಿಯಾ ಮತ್ತು ಇಥಿಯೋಪಿಯಾಗಳಿಂದ ತಂದ ಗುಲಾಮರುಗಳ ಮಧ್ಯೆ ಬೆಳೆದ ರಾಜಕುಮಾರರ ಮನಸ್ಸು ಸುತ್ತುಮುತ್ತಲಿನವರ ವೃತ್ತಿಯ ಸ್ವಭಾವಕ್ಕೆ ಅನುಗುಣವಾಗಿಬಿಡುತ್ತಿತ್ತು. ದೊಡ್ಡವರಿಗೆ ಸಲಾಮುಹಾಕಿ ಹಲ್ಲು ಗಿಂಜುವುದು, ಮತ್ತು ಕೆಳಗಿನವರಿಗೆ ತಮ್ಮ ದೊಡ್ಡಸ್ತಿಕೆ ತೋರಿಸಿ ಅವರನ್ನು ಹೀನಾಯ ವಾಗಿ ಕಾಣುವುದು—ಇಂತಹ ವಾತಾವರಣದಲ್ಲಿ ಬೆಳೆದ ಮಕ್ಕಳು ರಾಜರಾದಾಗ ಅಂತಃ ಪುರದ ಗೋಡೆಗಳನ್ನು ದಾಟಿ ಆಗ ತಾನೆ ಹೊರಗೆ ಬಂದು ಹೊಸದಾಗಿ ತಮ್ಮ ಮೇಲೆ ಹೊರಿಸಿದ ಜವಾಬ್ದಾರಿಯ ಅರಿವಿಲ್ಲದೆಯೆ ವರ್ತಿಸುತ್ತಿದ್ದರು. ಅವರಿಗೆ ತಾವು ಯಾವುದೋ ಪ್ರಪಂಚದಿಂದ ಬಂದಿರುವೆವೆಂಬ ಭಾವನೆ ಬರುತ್ತಿತ್ತು. ತಮ್ಮ ಸುತ್ತ ಮುತ್ತ ನಡೆಯುವುದನ್ನು ಬೆಪ್ಪುತಕ್ಕಡಿಗಳಂತೆ ನೋಡುತ್ತಾ, ಪಾತಾಳಗುಹೆಯಿಂದ ಆಗ ತಾನೆ ಹೊರಗೆ ಬಂದವರಂತೆ ನಡೆದುಕೊಳ್ಳುತ್ತಿದ್ದರು. ಮಕ್ಕಳಂತೆ ಎಲ್ಲವನ್ನೂ ನಂಬಿಬಿಡುತ್ತಿದ್ದರು ; ಅಥವಾ ಎಲ್ಲವನ್ನೂ ಕಂಡು ಹೆದರಿಬಿಡುತ್ತಿದ್ದರು. ಇಲ್ಲವೆ, ಪಟ್ಟು ಹಿಡಿದು ಕುಳಿತು ತಪ್ಪುಗಳ ಅರಿವಿಲ್ಲದೆ ಹೇಳಿದ ಬುದ್ಧಿಮಾತಿಗೆ ಬೆಲೆಕೊಡದೆ ಎಲ್ಲ ಕೆಲಸಗಳಲ್ಲೂ ತಲೆಮುಂದಾಗಿ ನುಗ್ಗುತ್ತಿದ್ದರು. ಅವರ ಸ್ವಭಾವಕ್ಕನುಗುಣವಾಗಿಯೋ, ಇಲ್ಲವೆ ಮೊಟ್ಟಮೊದಲು ಅವರ ಮನಸ್ಸಿನ ಮೇಲೆ ಮುದ್ರಯೊತ್ತಿದ ಭಾವನೆಗಳಿಗೆ ಅನು ಗುಣವಾಗಿಯೋ ಈ ರಾಜರುಗಳು ಕಿರೀಟ ಧರಿಸಿಕೊಂಡಾಗ ಬಹಳ ಠೀವಿಯಿಂದಲೂ ಗಾಂಭೀರ್ಯದಿಂದಲೂ ವರ್ತಿಸುತ್ತಿದ್ದರು. ಇವು ಅವರ ಹುಟ್ಟುಗುಣಗಳಲ್ಲದಿದ್ದರೂ ಹಾಗೆ ನಡೆದುಕೊಳ್ಳುತ್ತಿದ್ದರು. ಅವರಿಗೆ ನೀಡಿದ ಅರಬರೆ ವಿದ್ಯಾಭ್ಯಾಸವೇ ಇದಕ್ಕೆ ಕಾರಣವಾಗಿತ್ತು. ಹೀಗಾಗಿ, ಅವರ ಅನಾಗರಿಕತೆಗೆ ಹಾಗೂ ಡಂಭಾಚಾರಗಳಿಗೆ ಅವರ ಗಾಂಭೀರ್ಯ ಬೇರೊಂದು ಹೆಸರು, ಅಷ್ಟೆ. ಒಂದು ವೇಳೆ ಹಾಗಿಲ್ಲದಿದ್ದರೆ, ಅವರು ತಮ್ಮ ವರ್ತನೆಯಲ್ಲಿ ಮಗುವಿನಂತೆ ಅತಿ ವಿಧೇಯತೆಯನ್ನು ತೋರಿಸುತ್ತಿದ್ದರು. ಮಗುವಿನಂತೆ ಏಕೆ ಎಂದರೆ, ಅವರ ನಡೆನುಡಿ ಅಸ್ವಾಭಾವಿಕ ಹಾಗೂ ತೋರಿಕೆಯದಾಗಿರುತ್ತಿದ್ದ ಕಾರಣ.

ಏಷ್ಯಾದ ಚರಿತ್ರೆಯನ್ನು ಅಧ್ಯಯನಮಾಡಿದ ಯಾರಿಗಾದರೂ ಈ ಹೇಳಿಕೆಯ

ಸತ್ಯತೆ ಅರಿವಾಗದಿರದು. ಏಷ್ಯಾದ ಸಾಮ್ರಾಟರು ಕಣ್ಣು ಮುಚ್ಚಿಕೊಂಡು ದಯಾ ದಾಕ್ಷಿಣ್ಯವಿಲ್ಲದೆ ಕ್ರೂರವಾಗಿ ವರ್ತಿಸಿಲ್ಲವೆ ? ಅವರು ಕುಡಿತ ಹಾಗೂ ಮಿತಿಮೀರಿದ ವಿಷಯಲಂಪಟತೆಗಳಿಗೆ ದಾಸರಾಗಿಲ್ಲವೆ ? ಸ್ತ್ರೀ ವ್ಯಸನದಲ್ಲಿ ಅವರು ತಮ್ಮ ದೇಹದ ಆರೋಗ್ಯವನ್ನೂ, ಬುದ್ಧಿಶಕ್ತಿಯನ್ನೂ ಕಳೆದುಕೊಂಡಿಲ್ಲವೆ ? ರಾಜ್ಯಭಾರದ ವಿಷಯಗಳ ಕಡೆಗೆ ಗಮನಕೊಡದೆ ಸದಾ ಬೇಟೆಯಲ್ಲಿ ಕಾಲಕಳೆದಿಲ್ಲವೆ ? ಬೇಟೆಗಾಗಿ ತಮ್ಮೊಡನೆ ಅನಿವಾರ್ಯವಾಗಿ ಬಂದ ಅನೇಕ ಬಡಬಗ್ಗರು ಹೊಟ್ಟೆಗಿಲ್ಲದೆ ಸಾಯುತ್ತಿದ್ದರೂ, ಚಳಿ ಮಳೆ ಬಿಸಿಲುಗಳಿಂದ ಕೊರಗುತ್ತಿದ್ದರೂ, ಬೇಟೆ ನಾಯಿಗಳ ತಂಡವೇ ತಮ್ಮ ಪಂಚ ಪ್ರಾಣವೆಂಬಂತೆ ವರ್ತಿಸಿಲ್ಲವೆ? ಒಂದು ಮಾತಿನಲ್ಲಿ ಹೇಳಬಹುದಾದರೆ, ಏಷ್ಯಾದ ರಾಜರು ಬಹು ನೀಚವೆನಿಸುವ ದುರ್ನಡತೆಗಳಿಗೆ ತುತ್ತಾಗಿ ಸದಾ ಕಾಲ ಕಳೆಯುತ್ತಿದ್ದರು. ಈ ದುರ್ನಡತೆಗಳು, ನಾನು ಮೊದಲೇ ಹೇಳಿದಂತೆ, ಅವರ ಸ್ವಭಾವಕ್ಕನುಗುಣವಾಗಿಯೋ ಅಥವಾ ಅವರಿಗೆ ಹೇಳಿಕೊಟ್ಟ ಪಾಠದಂತೆಯೋ ಇದ್ದುವು. ಈಗಲೂ ತನ್ನ ರಾಜ್ಯದ ಸ್ಥಿತಿಗತಿಗಳನ್ನು ಬಲ್ಲ ಅರಸ ಸಿಕ್ಕುವುದೇ ಅಪರೂಪ. ಯಾವನೋ 'ವಜೀರ'ನಿಗೆ (ಪ್ರಧಾನ ಮಂತ್ರಿಗೆ) ಆಡಳಿತ ಸೂತ್ರಗಳನ್ನು ವಹಿಸಿಬಿಟ್ಟು, ಹಾಯಾಗಿ ಕುಳಿತು ಕೊಳ್ಳುವ ರಾಜರೇ ಹೆಚ್ಚು. ಆ ವಜೀರ ಯಾವ ಅಡೆತಡೆಗಳಿಲ್ಲದೆ ಸರ್ವಾಧಿಕಾರಿಯಂತೆ ರಾಜ್ಯವಾಳುತ್ತ, ತನ್ನ ರಾಜನನ್ನು ಕೀಳ್ತರದ ಕೆಲಸಗಳಿಗೆ ಹಚ್ಚಿ, ಅವನಿಗೂ ಆಡಳಿತಕ್ಕೂ ಮಧ್ಯೆ ಕಾಣದಂತಹ ತೆರೆಯನ್ನು ಎಳೆದುಬಿಡುತ್ತಾನೆ. ಅಕಸ್ಮಾತ್ ರಾಜ್ಯಾಡಳಿತವು ಈ ಪ್ರಧಾನ ಮಂತ್ರಿಯ ಹಿಡಿತಕ್ಕೆ ಸಿಕ್ಕದೆಹೋಯಿತೆನ್ನಿ, ಆಗ ಅದು ರಾಜಮಾತೆಯ ಕೈಸೇರುತ್ತದೆ. ಆಕೆ ಮೊದಲೇ ಒಬ್ಬ ಕೀಳುಪುಟ್ಟದ ಹೆಂಗಸು. ಆಕೆಯೂ, ಒಳಸಂಚು ಗಳಲ್ಲಿ ಎತ್ತಿದಕೈಯಾದ ಖೋಜಾಗಳೂ ಸೇರಿಕೊಂಡು ರಾಜ್ಯಭಾರನಡೆಸಲು ಹೋಗಿ, ಆಸ್ತಿಪಾಸ್ತಿ ಇದ್ದವರೆಲ್ಲರ ಪ್ರಾಣಕ್ಕೆ ಸಂಚಕಾರತಂದುಬಿಡುತ್ತಾರೆ.

ಅನೇಕ ಕಡೆಗಳಿಂದ ಬಂದ ರಾಯಭಾರಿಗಳನ್ನು ಸ್ವಾಗತಿಸಿ ಆದ ಮೇಲೆ ಪರ್ಷಿಯಾದ ರಾಯಭಾರಿ ಗಡಿಯಲ್ಲಿ ಬಂದಿದ್ದಾನೆಂಬ ಸುದ್ದಿ ಬಂದಿತು. ಮೊಗಲನ ಸೇವೆಯಲ್ಲಿದ್ದ ಪರ್ಷಿಯನರೂ ಪರ್ಷಿಯನ್ ಅಮೀರರುಗಳೂ ಗುಲ್ಲೆಬ್ಬಿಸಿದರು ; ಏನೋ ಒಂದು ಮಹತ್ವಿಷಯ ರಾಯಭಾರಿಯನ್ನು ಹಿಂದೂಸ್ಥಾನಕ್ಕೆ ಕರೆತಂದಿದೆ ಎಂದು ಪ್ರಚಾರಮಾಡಿದರು. ಈ ವದಂತಿಗಳಿಗೆ ಆಧಾರವಿಲ್ಲವೆಂದು ತಿಳಿದವರಿಗೆಲ್ಲಾ ಗೊತ್ತಿತ್ತು. ಮಹಾ ಘಟನೆಗಳ ಕಾಲ ಆಗಿಹೋಗಿತ್ತು. ಪಾರಸಿಕರು ತಮ್ಮ ಪ್ರತಿಷ್ಠೆಯ ಪ್ರಚಾರ ಕ್ಕಾಗಿ ರಾಯಭಾರವನ್ನು ಕಳುಹಿಸಿದ್ದರೆ ಹೊರತು, ಮತ್ತಾವುದಕ್ಕೂ ಅಲ್ಲ.

ರಾಜಧಾನಿಯನ್ನು ಪ್ರವೇಶಿಸಿದ ರಾಯಭಾರಿಗೆ ಎಲ್ಲ ರೀತಿಯ ಗೌರವದ ಸ್ವಾಗತ ದೊರೆಯಿತು. ಆತ ಸಾಗಿಬಂದ 'ಬಜಾರು'ಗಳನ್ನು ಹೊಸದಾಗಿ ಅಲಂಕರಿಸಲಾಗಿತ್ತು. ಎರಡು ಕಡೆಯೂ ಅಶ್ವದಳ ಒಂದು ಹರಿದಾರಿ ಉದ್ದಕ್ಕೂ ನಿಂತಿತ್ತು. ಅನೇಕ ಅಮೀರರು ವಾದ್ಯ ಸಮೇತ ಮೆರವಣಿಗೆಯಲ್ಲಿ ಭಾಗವಹಿಸಿದರು. ಅರಮನೆಯ ಬಾಗಿಲನ್ನು

ಸಮಿಾಪಿಸಿದಾಗ ಫಿರಂಗಿಗಳನ್ನು ಹಾರಿಸಿ ಗೌರವ ಸೂಚಿಸಲಾಯಿತು. ಔರಂಗಜೇಬ ರಾಯಭಾರಿಯನ್ನು ಅತ್ಯಂತ ವಿನಯದಿಂದ ಎದುರುಗೊಂಡುದಲ್ಲದೆ, ಅವನು ಪರ್ಷಿಯನ್ ರೀತಿಯಲ್ಲಿ ಸಲಾಮುಮಾಡಿದ್ದರಿಂದ ಬೇಜಾರುಪಟ್ಟುಕೊಳ್ಳಲಿಲ್ಲ. ರಾಯಭಾರಿ ಕೊಟ್ಟ ಪರಿಚಯ ಪತ್ರವನ್ನು ತನ್ನ ಕೈಯಿಂದಲೇ ಈಸಿಕೊಂಡ. ಅಷ್ಟೇ ಅಲ್ಲ, ಅದನ್ನು ಹಣೆಗೆ ತಾಕಿಸಿ ವಿಶಿಷ್ಟವಾದ ಮರ್ಯಾದೆ ತೋರಿಸಿದ. ಒಬ್ಬ ಖೋಜಾ ಪತ್ರದ ಮೊಹರನ್ನು ಒಡೆಯುವುದಕ್ಕೆ ಸಹಾಯಮಾಡಿದ. ಅದನ್ನು ಗಾಂಭೀರ್ಯದಿಂದ ನೋಡಿಕೊಂಡ ಔರಂಗಜೇಬ, ರಾಯಭಾರಿಗೆ ಸಲ್ಲಬೇಕಾದ ಸನ್ಮಾನಗಳನ್ನು ತನ್ನ ಮುಂದೆಯೆ ಸಲ್ಲಿಸಿ ಆತನನ್ನು ಗೌರವಿಸಬೇಕೆಂದು ಆಜ್ಞೆಮಾಡಿದ.

ಈ ಗೌರವವನ್ನು ಪಡೆದ ಮೇಲೆ ರಾಯಭಾರಿ ತಾನು ತಂದಿದ್ದ ಬಹುಮಾನಗಳನ್ನು ಔರಂಗಜೇಬನಿಗೆ ಒಪ್ಪಿಸಿದ. ಇಪ್ಪತ್ತೈದು ಪಾರಸಿ ಕುದುರೆಗಳು. ನೋಡುವುದಕ್ಕೆ ಬಹು ಚೆಂದವಾಗಿದ್ದುವು. ಕಸೂತಿಹಾಕಿದ ಕಿನ್‌ಕಾಪು ಬಟ್ಟೆ (brocade) ಹೊದಿಸಿ, ಅವನ್ನು ಇನ್ನೂ ಹೆಚ್ಚು ಚೆಂದವಾಗಿ ಮಾಡಿದ್ದರು. ಗಾತ್ರದಲ್ಲಿ ಹಾಗೂ ಶಕ್ತಿಯಲ್ಲಿ ಆನೆಗಳೆಂದು ತಪ್ಪು ಭಾವನೆ ಕಲ್ಪಿಸುವಂತಿದ್ದ ಇಪ್ಪತ್ತು ಉತ್ತಮ ತಳಿಯ ಒಂಟೆಗಳು, ಅತ್ತರುಗಳನ್ನು ಇಟ್ಟಿದ್ದ ಅನೇಕ ಪೆಟ್ಟಿಗೆಗಳು, 'ಬೇದ್ ಮಿಷ್' (beidmichk) ಎಂದು ಕರೆಯಲ್ಪಡುವ ಮತ್ತೊಂದು ಅಪೂರ್ವವಾದ ಅತ್ತರನ್ನು ಮಡಗಿದ್ದ ಪೆಟ್ಟಿಗೆಗಳು, ಬಹಳ ದೊಡ್ಡದಾಗಿಯೂ ಅಂದವಾಗಿಯೂ ಇದ್ದ ಐದಾರು ಜಮಖಾನಗಳು, ಎಲ್ಲಿಯೂ ಕಾಣಸಿಗದಂತಹ ಅಂದಚೆಂದದ ಹೂವು ಹಾಕಿದ ಕಿನ್‌ಕಾಪಿನ ಬಟ್ಟೆಗಳು, ನಾಲ್ಕು ದಮಸ್ಕಸ್ ಕುಡುಗತ್ತಿಗಳು (cutlasses) ಮತ್ತು ಅಷ್ಟೇ ಸಂಖ್ಯೆಯ ರತ್ನದ ಹಿಡಿಗಳಿಂದ ಕಂಗೊಳಿಸುತ್ತಿದ್ದ ಬಾಕುಗಳು (poniards), ಕೊನೆಯಲ್ಲಿ, ಐದಾರು ಜೊತೆ ಕುದುರೆ ಜೀನುಗಳು. ಜೀನುಗಳಂತೂ ಬಹು ಸೊಗಸಾಗಿದ್ದುವು.

ಇವನ್ನೆಲ್ಲಾ ನೋಡಿ ಔರಂಗಜೇಬನಿಗೆ ಬಹಳ ಸಂತೋಷವಾಯಿತೆಂದು ಹೇಳುತ್ತಾರೆ. ಆತ ಪ್ರತಿಯೊಂದನ್ನು ವಿವರ ವಿವರವಾಗಿ ನೋಡಿ, ಅವುಗಳ ಅಂದ ಚೆಂದವನ್ನು ಹೊಗಳಿ, ಅವನ್ನು ಕಳುಹಿಸಿದ ಪರ್ಷಿಯಾ ಚಕ್ರವರ್ತಿಯನ್ನು ಕೊಂಡಾಡಿದನು. ರಾಯಭಾರಿಯು ಇಳಿದುಕೊಳ್ಳಲು ಮುಖ್ಯ ಅಮಿಾರರ ವಠಾರದಲ್ಲಿ ಅವಕಾಶಮಾಡಿಕೊಡಬೇಕೆಂದು ತನ್ನ ಕಡೆಯವರಿಗೆ ಹೇಳಿ, ಆತನನ್ನು ಬೀಳ್ಕೊಟ್ಟನು.

ಔರಂಗಜೇಬನ ಖರ್ಚುವೆಚ್ಚದಲ್ಲಿ ರಾಯಭಾರಿ ನಾಲ್ಕೈದು ತಿಂಗಳುಗಳ ಕಾಲ ದಿಲ್ಲಿಯಲ್ಲಿ ಅದ್ದೂರಿಯಾಗಿ ಕಾಲ ಕಳೆದ. ಮುಖ್ಯ ಅಮಿಾರರುಗಳು ಅವನನ್ನು ತಮ್ಮ ಮನೆಗಳಿಗೆ ಕರೆದುಕೊಂಡುಹೋಗಿ ಸತ್ಕರಿಸಿದರು. ರಾಯಭಾರಿ ಹಿಂದಿರುಗುವಾಗ ಆತನನ್ನು ಔರಂಗಜೇಬ ಮತ್ತೊಮ್ಮೆ ಗೌರವಿಸಿ, ಪರ್ಷಿಯಾ ಚಕ್ರವರ್ತಿಗೆ ತಕ್ಕ ಬಹುಮಾನಗಳೊಡನೆ ಕಳುಹಿಸಿಕೊಟ್ಟನು. ತಾನೂ ಒಂದು ರಾಯಭಾರ ಕಳುಹಿಸುವುದಾಗಿ ಹೇಳಿಕಳುಹಿಸಿದನು.

ಪರ್ಷಿಯನ್ ರಾಯಭಾರಿಯನ್ನು ಇಷ್ಟೆಲ್ಲಾ ಗೌರವದಿಂದ ಕಂಡರೂ ದಿಲ್ಲಿಯ ಆಸ್ಥಾನದಲ್ಲಿದ್ದ ಪರ್ಷಿಯನರು ಪರ್ಷಿಯಾ ಚಕ್ರವರ್ತಿ ತಾನು ಬರೆದುಕಳುಹಿಸಿದ್ದ ಪತ್ರದಲ್ಲಿ ಔರಂಗಜೇಬನನ್ನು ಛೀಮಾರಿ ಮಾಡಿದ್ದ ಎಂದು ಹೇಳಿಕೊಂಡರು. ತಂದೆಯನ್ನು ಬಂಧನದಲ್ಲಿಟ್ಟದ್ದಕ್ಕಾಗಿ, ಅಣ್ಣನನ್ನು ಕೊಲ್ಲಿಸಿದ್ದಕ್ಕಾಗಿ, ಒಟ್ಟನಲ್ಲಿ ಮುಸಲ್ಮಾನನಿಗೆ ಸರಿಯಲ್ಲದ ಕೃತ್ಯಗಳನ್ನು ಮಾಡಿದ್ದಕ್ಕಾಗಿ ಆತ ತನ್ನ ಅಸಂತೋಷವನ್ನು ವ್ಯಕ್ತಪಡಿಸಿದ್ದನೆಂದು ಪಿಸುಗುಟ್ಟಿಕೊಂಡರು. ಔರಂಗಜೇಬ, "ಆಲಂಘೀರ್" ಎಂಬ ಬಿರುದಿನಲ್ಲಿ ಮೆರೆದು ಅದನ್ನು ಹಿಂದೂಸ್ಥಾನದ ನಾಣ್ಯಗಳ ಮೇಲೆ ಹಾಕಿಸಿದ್ದಕ್ಕಾಗಿಯೂ ಪರ್ಷಿಯದ ರಾಜ ತನ್ನ ಅಸಂತೋಷವನ್ನು ವ್ಯಕ್ತಪಡಿಸಿದ್ದನಂತೆ. ಇಷ್ಟೇ ಅಲ್ಲದೆ, ಪತ್ರದ ಕೊನೆಯಲ್ಲಿ ಈ ಮಾತುಗಳನ್ನು ಹೇಳಿದ್ದನೆಂದು ಇಲ್ಲಿಯ ಪರ್ಷಿಯನರು ತಿಳಿಸುತ್ತಾರೆ : "ನೀವು ಆಲಂಘೀರ್ ಎಂದು (ಪ್ರಪಂಚವನ್ನೇ ಗೆದ್ದವರೆಂದು) ಹೇಳಿಕೊಳ್ಳುತ್ತಿದ್ದೀರಿ. ಅದರ ಪರೀಕ್ಷೆಗಾಗಿ ನಿಮಗೆ ಒಂದು ಕತ್ತಿಯನ್ನೂ ಒಂದು ಕುದುರೆಯನ್ನೂ ಕಳುಹಿಸಿಕೊಡುತ್ತಿದ್ದೇನೆ. ನೋಡುವ ನಮ್ಮಿಬ್ಬರ ಪರಾಕ್ರಮ !"

ನಾನು ಕೇಳಿದ ಕತೆಯನ್ನು ಕೇಳಿದಂತೆ ಹೇಳಿದ್ದೇನೆ. ಅದು ಸುಳ್ಳೆಂದು ಸಾಧಿಸಲು ನನಗೆ ಯಾವ ಪಕ್ಷಪಾತವೂ ಇಲ್ಲ. ಆಸ್ಥಾನದ ಗುಟ್ಟುಗಳನ್ನು ತಿಳಿಯುವುದು ಕಷ್ಟವೇನಲ್ಲ. ನನಗೆ ಆಸ್ಥಾನದ ಭಾಷೆ ಬರುತ್ತಿದ್ದರೆ, ಮತ್ತು ಬೇಕಾದ ಸ್ನೇಹಿತರಿದ್ದು ದುಡ್ಡನ್ನು ನೀರು ಚೆಲ್ಲಿದಂತೆ ಚೆಲ್ಲಿದರೆ ಸಾಕು—ಏನನ್ನು ಬೇಕಾದರೂ ತಿಳಿದುಕೊಳ್ಳಬಹುದು. ಪರ್ಷಿಯಾ ರಾಜ ಈ ರೀತಿಯ ಭಾಷೆಯನ್ನು ಪತ್ರದಲ್ಲಿ ಉಪಯೋಗಿಸಿದ್ದನೆಂದು ನಾನು ನಂಬಲಾರೆ. ಹಿಂದೂಸ್ಥಾನದಂತಹ ಚಕ್ರಾಧಿಪತ್ಯದ ಮೇಲೆ ಆಕ್ರೋಶ ಮಾಡಿಕೊಳ್ಳುವ ಪರಿಸ್ಥಿತಿಯಲ್ಲಿ ಆತ ಇಲ್ಲವೆಂದೇ ತಿಳಿದವರ ಅಭಿಪ್ರಾಯ. ಆತನಿಗೆ ಅಷ್ಟೊಂದು ದಾಸತ್ತು ಇದ್ದರೆ, ಇಲ್ಲಿಯವರೆಗೆ ಹಿಂದೂಸ್ಥಾನದಲ್ಲಿ ನಡೆದ ಒಳಜಗಳದಲ್ಲಿ ಪ್ರವೇಶಿಸದೆ ಏಕೆ ಸುಮ್ಮನೆ ಕುಳಿತುಕೊಳ್ಳುತ್ತಿದ್ದ ? ದಾರಾ, ಷಾಜಹಾನ್, ಸುಲ್ತಾನ್ ಸೂಜ—ಇವರೆಲ್ಲ ದಮ್ಮಯ್ಯ ಎಂದರೂ ಜಪ್ಪೆನ್ನದೆ ಕುಳಿತಿದ್ದ ಪರ್ಷಿಯಾ ಚಕ್ರವರ್ತಿಗೆ ಈಗ ಇಂಥ ಜಂಭದ ಮಾತಾಡಲು ಹೇಗೆ ಧೈರ್ಯ ಬಂದೀತು ?

ಅಂತೂ, ಪರ್ಷಿಯಾ ರಾಜನ ಪತ್ರದಲ್ಲಿ ಒಪ್ಪಿಗೆಯಾಗದ ಕೆಲವು ಮಾತುಗಳಿದ್ದುವೋ ಅಥವಾ ಔರಂಗಜೇಬ ರಾಯಭಾರಿಯ ಮಾತುಕತೆ ಹಾಗೂ ನಡೆವಳಿಕೆಗಳಿಂದ ಸಿಟ್ಟಾದನೋ ಏನೊ ಗೊತ್ತಿಲ್ಲ, ರಾಯಭಾರಿ ದಿಲ್ಲಿ ಬಿಟ್ಟ ಎರಡು ಮೂರು ದಿನಗಳ ತರುವಾಯ ಪರ್ಷಿಯ ರಾಜನ ಹೆಸರಿನಲ್ಲಿ ಒಪ್ಪಿಸಿದ ಕುದುರೆಗಳ ಹಿಂಗಾಲುಗಳನ್ನು ಆ ರಾಯಭಾರಿಯೇ ಊನಮಾಡಿಸಿದ್ದಾನೆಂದು ತಿಳಿದು ಔರಂಗಜೇಬ ರೇಗಾಡಿದನಂತೆ. ಹೀಗೆ ರೇಗಿ, ರಾಯಭಾರಿಯನ್ನು ತಡೆದು ನಿಲ್ಲಿಸಿ ಆತ ಕೊಂಡುಕೊಂಡುಹೋಗುತ್ತಿದ್ದ ಇಂಡಿಯಾದ ಗುಲಾಮರನ್ನು ವಾಪಸು ಕರೆತರಬೇಕೆಂದು ಆಜ್ಞೆಮಾಡಿದ. ಕ್ಷಾಮದ ಕಾರಣ ಅಗ್ಗವಾಗಿ ಸಿಗುತ್ತಿದ್ದ ಅನೇಕ ಜನರನ್ನು ರಾಯಭಾರಿ ಕೊಂಡು ತನ್ನ

ದೇಶಕ್ಕೆ ಸಾಗಿಸುತ್ತಿದ್ದ. ಅಲ್ಲದೆ, ಅವನ ಸೇವಕರು ಎಷ್ಟೋ ಜನಗಳನ್ನು ಕದ್ದು ಕೊಂಡೂ ಹೋಗಿದ್ದರಂತೆ. ಒಟ್ಟನಲ್ಲಿ, ಪರ್ಷಿಯಾಕ್ಕೆ ಕರೆದುಕೊಂಡುಹೋಗುತ್ತಿದ್ದ ಗುಲಾಮರ ಸಂಖ್ಯೆ ಬಹಳ ಹೆಚ್ಚು ಎಂತಲೇ ಹೇಳಬೇಕು.

ಪರ್ಷಿಯಾದ ರಾಯಭಾರಿ ದಿಲ್ಲಿಯಲ್ಲಿ ಇದ್ದಷ್ಟು ದಿನವೂ ಔರಂಗಜೇಬ ಬಹಳ ಕಟ್ಟುನಿಟ್ಟಾಗಿ ಇದ್ದುಕೊಂಡು, ತನ್ನ ತಂದೆ ಷಾಜಹಾನನಂತೆ ತುಚ್ಛವಾದ ನಡೆನುಡಿ ಗಳಿಗೆ ಕೈಹಾಕದೆ ಎಚ್ಚರಿಕೆಯಿಂದಿದ್ದ. ಹಿಂದೊಮ್ಮೆ ಷಾಜಹಾನನ ಕಾಲದಲ್ಲಿ ಪರ್ಷಿಯಾ ರಾಯಭಾರ ಬಂದಾಗ ಆತ ತನ್ನ ಬಿಂಕ ಬಿಗುಮಾನಗಳಿಂದಲೋ ಅಥವಾ ಅತಿ ಸಲುಗೆ ಯಿಂದಲೋ ವರ್ತಿಸಿ ರಾಯಭಾರಿಗೆ ಕಿರಿಕಿರಿಯನ್ನುಂಟುಮಾಡಿದ್ದ.

ಪರ್ಷಿಯನರು ಇಂಡಿಯನರನ್ನು ಗೇಲಿಮಾಡಬೇಕಾದರೆ ಹಲವಾರು ಕತೆಗಳನ್ನು ಹೇಳುತ್ತಾರೆ. ಒಂದು ಕತೆ ಹೀಗಿದೆ :

ಷಾಜಹಾನ ಆಳುತ್ತಿರುವಾಗ ಪರ್ಷಿಯಾದಿಂದ ರಾಯಭಾರವೊಂದು ಬಂದಿತು. ಏನೇ ಮಾಡಿದರೂ ರಾಯಭಾರಿ ಮೊಗಲ್ ಚಕ್ರವರ್ತಿಗೆ ಇಂಡಿಯಾದ ರೀತಿಯಲ್ಲಿ ಬಗ್ಗಿ ಸಲಾಮ್ ಮಾಡಲೊಲ್ಲ. ಅವನಿಗೆ ಬುದ್ಧಿ ಕಲಿಸಬೇಕೆಂದು ಚಕ್ರವರ್ತಿ ಒಂದು ಉಪಾಯ ಹೂಡಿದ. ರಾಯಭಾರಿ ಚಕ್ರವರ್ತಿಯನ್ನು 'ಆಮ್-ಖಾಸ್' ಎಂಬ ಸಭಾ ಭವನದಲ್ಲಿ ಭೇಟಿ ಮಾಡಬೇಕೆಂದಾಗಿತ್ತು. ಚಕ್ರವರ್ತಿ ಆ ಆಮ್-ಖಾಸಿಗೆ ಬರುವ ಬಾಗಿಲನ್ನು ಮುಚ್ಚಿಸಿ ಕೆಳಕದವನ್ನು (wicket) ಮಾತ್ರ ತೆರೆದಿಡಬೇಕೆಂದು ಆಜ್ಞಾಪಿಸಿದ್ದ. ಇದರ ಮೂಲಕ ಆಮ್-ಖಾಸಿಗೆ ಬರಬೇಕಾದರೆ ತಲೆತಗ್ಗಿಸದೆ ಬರುವಂತಿರಲಿಲ್ಲ. ತನ್ನನ್ನು ನೋಡಲು ಬಂದ ರಾಯಭಾರಿ ಬಾಗಿಲ ಬಳಿ ತಲೆ ತಗ್ಗಿಸುವುದಕ್ಕಿಂತ ಹೆಚ್ಚಾಗಿ ತನಗೆ ಸಲಾಮುಮಾಡಲು ತಲೆ ತಗ್ಗಿಸಿದ ಎಂದು ಜಂಭಕೊಚ್ಚಿಕೊಳ್ಳುವ ಮನಸ್ಸು ಮಾಡಿದ್ದ, ಚಕ್ರವರ್ತಿ. ಆದರೆ ಬಿಂಕದ ಹಾಗೂ ಸೂಕ್ಷ್ಮಬುದ್ಧಿಯ ಆ ರಾಯಭಾರಿ ಈ ಹೂಟವನ್ನು ಅರಿತವನಾಗಿ ಏನುಮಾಡಿದ ಎಂದರೆ, ಹಿಮ್ಮುಖನಾಗಿ ಆ ಕಿರು ಬಾಗಿಲಿನಲ್ಲಿ ಸಭಾ ಭವನವನ್ನು ಪ್ರವೇಶಿಸಿದ! ತನ್ನ ಹೂಟಕ್ಕೆ ಬೀಳದೆಹೋದ ರಾಯಭಾರಿ ಯನ್ನು ಕಂಡು ಕುಪಿತನಾದ ಷಾಜಹಾನ್ "ಹೇ ಬೇದ್‌ಬಕ್ತ್, ಕತ್ತೆಯಂತೆ ಹಿಂದು ಮುಂದಾಗಿ ಬಂದೆಯಲ್ಲ ! ಇದೇನು ಕತ್ತೆಗಳ ದೊಡ್ಡಿಯೆಂದು ಭಾವಿಸಿದೆಯಾ ?" ಎಂದು ಕೇಳಲು, ಅದಕ್ಕೆ ರಾಯಭಾರಿಯ ಉತ್ತರ ಸಿದ್ಧವಾಗಿತ್ತು : "ಇಂಥ ಬಾಗಿಲಿನ ಮೂಲಕ ಓಡಾಡಬೇಕಾದರೆ ಮನೆಯೊಳಗಿರುವವರು ಕತ್ತೆಗಳಲ್ಲದೆ ಬೇರೆ ಯಾರೆಂದು ಭಾವಿಸಲಿ !"

ಇನ್ನೊಂದು ಕಥೆ ಹೀಗಿದೆ : ಪರ್ಷಿಯಾದ ರಾಯಭಾರಿ ಒಮ್ಮೆ ಒರಟೊರಟಾಗಿ ಉತ್ತರ ಕೊಟ್ಟ. ಸಿಟ್ಟಾದ ಷಾಜಹಾನ "ಹೇ ಬೇದ್‌ಬಕ್ತ್ ! ಪರ್ಷಿಯನ್ ರಾಜ ಇಂಥ ಅವಿವೇಕಿಯನ್ನು ರಾಯಭಾರಿಯಾಗಿ ಕಳುಹಿಸಿದ್ದಾನಲ್ಲ, ಅವನ ಆಸ್ಥಾನದಲ್ಲಿ ಇನ್ಯಾರೂ ದೊಡ್ಡಮನುಷ್ಯರು ಇರಲೇಇಲ್ಲವೆ ?" ಎಂದು ಕೇಳಿದ.

"ಇದ್ದಾರೆ. ನನ್ನ ಸಾಮ್ರಾಟನ ಆಸ್ಥಾನದಲ್ಲಿ ನನಗಿಂತ ಎಷ್ಟೋ ಪಾಲು ಹೆಚು

ನನ್ನುರೂ ಬುದ್ಧಿವಂತರೂ ಆದವರು ತುಂಬಿದ್ದಾರೆ. ಆದರೆ ಆತ ರಾಜರಿಗೆ ತಕ್ಕಂಥ ರಾಯಭಾರಿಗಳನ್ನು ಕಳುಹಿಸಿಕೊಡುತ್ತಾನೆ !" ಎಂದು ಉತ್ತರ ಬಂದಿತು.

ಒಮ್ಮೆ ಷಾಜಹಾನ ರಾಯಭಾರಿಯನ್ನು ಭೋಜನಕ್ಕೆ ಆಹ್ವಾನಿಸಿದ. ಆ ವೇಳೆಯಲ್ಲಿ ಆತನನ್ನು ಗೇಲಿಮಾಡಬೇಕೆಂದು ಮನಸ್ಸು ಮಾಡಿದ. ಊಟ ಸಾಗುತ್ತಿತ್ತು. ರಾಯಭಾರಿ ತನಗೆ ಬಡಿಸಿದ ಮಾಂಸದಲ್ಲಿ ದಪ್ಪ ದಪ್ಪ ಮೂಳೆಗಳನ್ನು ಆರಿಸಿ ತಿನ್ನು ತ್ತಿರುವಾಗ ಷಾಜಹಾನ, "ರಾಯಭಾರಿಗಳೇ, ನಾಯಿಗಳೇನು ತಿನ್ನಬೇಕು ?" ಎಂದು ಏನೂ ಕಾಣದವನಂತೆ ಆಡಿದ. 'ಕಿಚೆರಿ ತಿನ್ನಬೇಕು' ಎಂಬ ಆ ರಾಯಭಾರಿಯ ಉತ್ತರ ಸಿದ್ಧವಾಗಿತ್ತು. ಷಾಜಹಾನನಿಗೆ ಕಿಚೆರಿಯನ್ನು ಕಂಡರೆ ತುಂಬಾ ಇಷ್ಟವಂತೆ. ಆಗ ಆತ ತಿನ್ನುತ್ತಿದ್ದುದೂ ಅದೇ. ತರಕಾರಿ ಮುಂತಾದುವುಗಳನ್ನು ಹಾಕಿ ಮಾಡಿದ ಅನ್ನವೇ ಕಿಚೆರಿ. ಅದು ಜನಸಾಮಾನ್ಯರ ಊಟವೂ ಆಗಿತ್ತು.

ಆಗ ದಿಲ್ಲಿಯನ್ನು ಇನ್ನೂ ಕಟ್ಟಲಾಗುತ್ತಿತ್ತು. "ಇಸ್ಫಹಾನಿಗೆ[1] ಹೋಲಿಸಿದರೆ ತನ್ನ ಈ ಹೊಸ ದಿಲ್ಲಿ ಹೇಗೆ ಕಾಣುತ್ತೆ" ಎಂದು ಷಾಜಹಾನ್ ರಾಯಭಾರಿಯನ್ನು ಕೇಳಿದ. ರಾಯಭಾರಿ ಬಹಳ ಗಟ್ಟಿಯಾಗಿ ನಕ್ಕು, "ಅಯ್ಯೋ ದೇವರೆ, ನಿಮ್ಮ ದಿಲ್ಲಿಯ ಧೂಳಿಗೂ ಹೋಲಿಸುವುದಕ್ಕಾಗುವುದಿಲ್ಲ ಇಸ್ಫಹಾನನ್ನು !" ಎಂದ. ಇದನ್ನು ಷಾಜಹಾನ್ ಹೊಗಳಿಕೆ ಎಂದು ಭಾವಿಸಿದ. ಆದರೆ ರಾಯಭಾರಿ ಹೇಳಿದ್ದು ತೆಗಳಿಕೆಯ ಅರ್ಥದಲ್ಲಿ. "ದಿಲ್ಲಿಯ ರಸ್ತೆಗಳ ಧೂಳನ್ನು ತಡೆಯಲು ಸಾಧ್ಯವಿಲ್ಲ" ಎಂಬುದು ಅವನ ಅಭಿಪ್ರಾಯವಾಗಿತ್ತು.

ಕೊನೆಯದಾಗಿ ಇನ್ನೊಂದು ಕತೆ : ಒಂದು ದಿನ ಷಾಜಹಾನ ರಾಯಭಾರಿ ಯನ್ನು ಒತ್ತಾಯಮಾಡಿ ಕೇಳಿದನಂತೆ "ಹಿಂದೂಸ್ಥಾನದ ಮತ್ತು ಪರ್ಷಿಯದ ಚಕ್ರವರ್ತಿ ಗಳಲ್ಲಿ ಯಾರು ಹೆಚ್ಚು ಶೂರರು ?" ಎಂದು. ಇದಕ್ಕೆ ರಾಯಭಾರಿ, "ಹಿಂದೂಸ್ಥಾನದ ಚಕ್ರವರ್ತಿಗಳು ಹದಿನೈದು ಹದಿನಾರು ದಿನಗಳ ಪೂರ್ಣ ಚಂದ್ರನಂತಿದ್ದರೆ, ಪರ್ಷಿಯದ ಚಕ್ರವರ್ತಿಗಳು ಎರಡು ಮೂರು ದಿನಗಳ ಬಾಲಚಂದ್ರನಂತಿದ್ದಾರೆ" ಎಂದು ಉತ್ತರಿಸಿದ. ಈ ಉತ್ತರ ಕೇಳಿ ಷಾಜಹಾನ ಮೊದಲಿಗೆ ಬಹಳ ಸಂತೋಷಪಟ್ಟುಕೊಂಡ. ಆದರೆ ಆಮೇಲೆ ಉತ್ತರವನ್ನು ಬಿಡಿಸಿ ನೋಡಿದಾಗ ಅರ್ಥ ಸ್ಪಷ್ಟವಾಯಿತು. ಹಿಂದೂಸ್ಥಾನದ ಚಕ್ರಾಧಿಪತ್ಯ ಕ್ಷೀಣದೆಸೆಗೆ ಕಾಲಿಡುತ್ತಿದೆ ; ಪರ್ಷಿಯಾ ಚಕ್ರಾಧಿಪತ್ಯ ವೃದ್ಧಿಯಾಗುತ್ತಿದೆ —ಎಂದು ರಾಯಭಾರಿ ಚಮತ್ಕಾರದಿಂದ ಹೇಳಿದ್ದ.

ಇಂಡಿಯಾದವರನ್ನು ಚುಡಾಯಿಸಲು ಪರ್ಷಿಯನರು ಇಂತಹ ತಮಾಷೆಯ ಕತೆಗಳನ್ನು ಹೇಳಿದ್ದೂ ಹೇಳಿದ್ದೆ. ನನ್ನ ಅಭಿಪ್ರಾಯದಲ್ಲಿ ರಾಯಭಾರಿಯಾದವನು ಎಂಥ ಸಂದರ್ಭದಲ್ಲಿಯೂ ಸಹ ತನ್ನ ಗೌರವ ಘನತೆಗಳಿಗೆ ತಕ್ಕಂತೆ ವರ್ತಿಸಬೇಕೆ

---

[1]ಇಸ್ಫಹಾನ್ ; 16 ರಿಂದ 18ನೆಯ ಶತಮಾನದವರೆಗೆ ಪರ್ಷಿಯಾದೇಶದ ರಾಜಧಾನಿ.

ಹೊರತು, ಲಘುವಾಗಿಯಾಗಲೀ ಬಿಂಕಬಿಗುಮಾನಗಳಿಂದಾಗಲಿ ವರ್ತಿಸಬಾರದು. ಒಮ್ಮೆ ಇಂಥ ಬಿಂಕ ಹಾಗೂ ಬಿಗುಮಾನಗಳಿಂದ ಕುಪಿತನಾದ ಷಾಜಹಾನ ತನ್ನ ಆಸ್ಥಾನಕ್ಕೆ ಬರುವಾಗ ದಾರಿಯಲ್ಲಿ ರಾಯಭಾರಿಯ ಮೇಲೆ 'ಮಸ್ತ್'ನಲ್ಲಿದ್ದ ಆನೆಯೊಂದನ್ನು ಬಿಡಿಸುವ ಒಳಸಂಚು ಹೂಡಿದನು. ಆದರೆ ಮುನ್ನುಗ್ಗಿದ ಆನೆಯನ್ನು ರಾಯಭಾರಿ ಬಾಣಗಳಿಂದ ಹೊಡೆದು ಓಡಿಸಿ ತನ್ನ ಪ್ರಾಣ ಉಳಿಸಿಕೊಂಡ.

ಪರ್ಷಿಯಾದ ರಾಯಭಾರಿಗಳು ತಮ್ಮ ದೇಶಕ್ಕೆ ಹಿಂತಿರುಗಿದ ತರುವಾಯ ಔರಂಗಜೇಬ ತನ್ನ ಮಾಜಿ ಗುರುವಾದ ಮುಲ್ಲಾ ಸಾಲೇ[1] ಎಂಬುವನಿಗೆ ಮರೆಯಲಾಗದ ಸ್ವಾಗತವನ್ನು ನೀಡಿದನು. ಅದೊಂದು ಅಸಾಧಾರಣವಾದ ಹಾಗೂ ಸೊಗಸಾದ ಕತೆ. ಆ ಮುಲ್ಲಾ ಷಾಜಹಾನನು ಕೊಟ್ಟಿದ್ದ ಜಹಗೀರಿಯನ್ನು ಅನುಭವಿಸುತ್ತಾ ಕಾಬೂಲಿನ ಬಳಿ ಇದ್ದುಕೊಂಡಿದ್ದವನು, ರಾಜ್ಯದಲ್ಲಿ ಅಂತರ್ಜಗಳ ಕೊನೆಗೊಂಡುದನ್ನು ಕೇಳಿ ಹಿಂದಿನ ಶಿಷ್ಯನ (ಔರಂಗಜೇಬನ) ಆಸೆಗಳೆಲ್ಲಾ ಕೈಗೂಡಿದುವೆಂದು ತಿಳಿದು, ತನ್ನ ಶಿಷ್ಯನನ್ನು ಕಂಡು ಆತನಿಂದ ಅಮೀರ ಪದವಿಗೇರುವ ಆಸೆಯನ್ನು ಇಟ್ಟುಕೊಂಡು ದಿಲ್ಲಿಗೆ ಹೊರಟು ಬಂದ. ಆದರೆ ಆತ ರಾಜನನ್ನು ಭೇಟಿಮಾಡಲು ರೋಷನಾರ ಬೇಗಮಳಿಂದ ಹಿಡಿದು ಎಲ್ಲ ಪ್ರತಿಷ್ಠವ್ಯಕ್ತಿಗಳ ಕಾಲುಕಟ್ಟಬೇಕಾಯಿತು. ಆಸ್ಥಾನದ ಆವರಣದಲ್ಲಿ ಇಂಥ ಮನುಷ್ಯನೊಬ್ಬ ಇದ್ದಾನೆಂದು ಅರಿವಾಗಲು ಔರಂಗಜೇಬನಿಗೆ ಮೂರು ತಿಂಗಳು ಬೇಕಾಯಿತು. ಕೊನೆಗೆ ಒಂದು ದಿನ ಆ ಮುಲ್ಲಾ ಔರಂಗಜೇಬನನ್ನು ಏಕಾಂತವಾಗಿ ಕಾಣಬೇಕೆಂದಾಯಿತು. ಭೇಟಿಯ ಕಾಲದಲ್ಲಿ ತಿಳಿದವರೆಂದು ಹೆಸರಾದ ಹಕೀಂ–ಉಲ್–ಮುಲುಕ್, ದನೇಷ್–ಮುಂಡ್‌ಖಾನ್ ಮುಂತಾದ ಮೂರು ನಾಲ್ಕು ಜನರು ಮಾತ್ರ ಇದ್ದರು. ತನ್ನ ಗುರುವೆಂದು ಹೇಳಿಕೊಂಡ ಆ ಮುಲ್ಲಾನನ್ನು ಕುರಿತು ಔರಂಗಜೇಬನು ಆಡಿದ ಮಾತುಗಳ ಸಾರಾಂಶ ಹೆಚ್ಚು ಕಡಮೆ ಹೀಗಿದೆ. ಹೆಚ್ಚು ಕಡಮೆ ಎಂದು ಏಕೆ

---

ಮುಲ್ಲಾ ಸಾಲೇ : ಔರಂಗಜೇಬನ ವಿದ್ಯಾಭ್ಯಾಸ ಆತನ ಹತ್ತನೇ ವಯಸ್ಸಿನಲ್ಲಿಯೇ ಆರಂಭವಾಯಿತೆನ್ನಲಾಗಿದೆ. ಷಾಜಹಾನನ ವಜೀರರುಗಳಲ್ಲಿ ಪ್ರಸಿದ್ಧನಾದ ಸಾದುಲ್ಲಾ ಖಾನನೂ ಅವನ ಗುರುಗಳಲ್ಲಿ ಒಬ್ಬನಾಗಿದ್ದನು. ಇನ್ನೊಬ್ಬ ಗುರು ಯಾರೆಂದರೆ, ಗಿಲಾನಿನ ಮೀರ್ ಮಹಮದ್ ಹಷೀಂ. ಈತ ಔರಂಗಜೇಬನ ಗುರುವಾಗಿ ಷಾಜಹಾನನ ಆಡಳಿತ ಮುಗಿಯುವವರೆಗೂ ಇದ್ದ.

ಬೆರ್‌ನ್ಯೇ ಹೇಳುವ ಮುಲ್ಲಾ ಸಾಲೇ ಎಂಬಾತನ ವಿಚಾರ ಪರ್ಷಿಯ ದೇಶದ ಚರಿತ್ರೆಯಲ್ಲಿ ಬರುವುದಿಲ್ಲ. ಒಬ್ಬ ಮುಲ್ಲಾ ಷಾ ಎಂಬುವನ ವಿಚಾರವೇನೊ ಬರುತ್ತದೆ. ಆತ ದಾರಾ ಷುಕೋನಿಗೂ ಗುರುವಾಗಿದ್ದನಲ್ಲದೆ, ಷಾಜಹಾನನ ಮೆಚ್ಚಿಗೆಗೂ ಪಾತ್ರನಾಗಿದ್ದ. ಈತ 1660ರಲ್ಲಿ ಕಾಶ್ಮೀರದಲ್ಲಿ ಕಾಲವಾದ. ಬಹುಶಃ, ಇವನೇ ಇರಬೇಕು ಔರಂಗಜೇಬನಿಗೆ ಪಾಠ ಹೇಳಿದ ಮುಲ್ಲಾ ಸಾಲೇ.

ಹೇಳುತ್ತಿದ್ದೇನೆಂದರೆ, ಅಷ್ಟು ದೀರ್ಘವಾದ ಸಂಭಾಷಣೆಯನ್ನು ಆಡಿದ ರೀತಿಯಲ್ಲಿಯೇ ಹೇಳುವುದು ಅಸಾಧ್ಯ. ನನ್ನ ಹಿತೈಷಿ ಆಗಾನ ಬದಲು ನಾನೇ ಅಲ್ಲಿದ್ದರೂ ಅದನ್ನೆಲ್ಲಾ ಚಾಚೂ ತಪ್ಪದೆ ಹೇಳಲು ಆಗುತ್ತಿರಲಿಲ್ಲ. ಔರಂಗಜೇಬನು ಹೇಳಿದ ಮಾತುಗಳು ಈ ಧಾಟಿಯಲ್ಲಿ ಇದ್ದುವೆಂದು ನಾನು ಹೇಳಬಯಸುತ್ತೇನೆ :

"ಏನು ಮುಲ್ಲಾಜೀ, ತಾವು ಬಂದದ್ದು ? ತಮ್ಮನ್ನು ರಾಜ್ಯದ ಉನ್ನತ ಪದವಿಗೇರಿಸಬೇಕೆಂದು ತಮ್ಮ ಅಭಿಲಾಷೆಯೇ ? ಆಗಲಿ, ಅಂತಹ ಸ್ಥಾನಕ್ಕೆ ತಾವೆಷ್ಟು ಅರ್ಹರೆಂಬುದನ್ನು ಮೊದಲು ಆಲೋಚಿಸೋಣ. ನನ್ನ ಬಾಲ್ಯದಲ್ಲಿ ನನಗೆ ಸೂಕ್ತವಾದ ವಿದ್ಯಾಬುದ್ಧಿಗಳನ್ನು ಕಲಿಸಿದ್ದರೆ ತಾವು ಕೇಳುವ ಪದವಿಗೆ ಖಂಡಿತ ಅರ್ಹರಾಗುತ್ತಿದ್ದಿರಿ. ನನಗೊಬ್ಬ ಸುಶಿಕ್ಷಿತನಾದ ಯುವಕನನ್ನು ತೋರಿಸಿದರೆ ಆತ ತಂದೆ ಅಥವಾ ಗುರು ಇವರಲ್ಲಿ ಯಾರಿಗೆ ಕೃತಜ್ಞನಾಗಿರಬೇಕು ಎಂದು ನಾನು ಹೇಳಿಬಿಡುತ್ತೇನೆ. ತಮ್ಮಿಂದ ನಾನೇನು ಕಲಿತೆನು ಗೊತ್ತೆ ? ಇಡೀ ಫರಂಗೀಸ್ಥಾನ (Franguistan–ಯೂರೋಪು) ಲೆಕ್ಕಕ್ಕೆ ಬಾರದ ದ್ವೀಪ ಎಂದು ಹೇಳಿದಿರಿ, ನೀವು. ಆ ಖಂಡದಲ್ಲಿ ಹಿಂದಿನ ಕಾಲದಲ್ಲಿ ಅತ್ಯಂತ ಪ್ರಬಲನಾದ ರಾಜರೆಂದರೆ ಪೋರ್ಚುಗಲ್ ರಾಜ, ಆಮೇಲೆ ಹಾಲೆಂಡ್ ರಾಜ, ಮತ್ತು ಕೊನೆಯಲ್ಲಿ, ಇಂಗ್ಲೆಂಡ್ ರಾಜ–ಎಂದು ತಿಳಿಸಿದಿರಿ. ಇನ್ನುಳಿದ ಫರಂಗೀಸ್ಥಾನದ ರಾಜರುಗಳು, ಅಂದರೆ ಫ್ರಾನ್ಸ್ ಮತ್ತು ಅಂಡಲೂಸಿಯಾದ ರಾಜರುಗಳು, ನಮ್ಮ ಸಣ್ಣ ಪುಟ್ಟ ಪಾಳೆಯಗಾರರಿಗೆ ಸಮ ಎಂದಿರಿ. ಇಷ್ಟು ಹೇಳಿ, ಹಿಂದೂಸ್ಥಾನದ ಚಕ್ರವರ್ತಿಗಳೆಂದರೆ ಎಲ್ಲ ರಾಜರುಗಳ ಕೀರ್ತಿಯನ್ನು ಮೀರಿಸಬಲ್ಲ ಮಹಾಪರಾಕ್ರಮಿಗಳೆಂದು ತಿಳಿಸಿದಿರಿ. ಅಂಥ ಚಕ್ರವರ್ತಿಗಳು ಯಾರೆಂದರೆ, ಹುಮಾಯೂನ, ಅಕ್ಬರ, ಜಹಾಂಗೀರ ಹಾಗೂ ಷಾಜಹಾನ ಎಂಬುದಾಗಿ ಹೇಳಿದಿರಿ. ಇವರನ್ನು ಸಂತೃಪ್ತರು, ಉದಾತ್ತರು, ವಿಶ್ವವಿಜೇತರು ಹಾಗೂ ವಿಶ್ವದೊಡೆಯರು ಎಂದು ಹೊಗಳಿದಿರಿ. ಅದೇ ಪರ್ಷಿಯಾ, ಉಸ್ಬೆಕ್, ಕಷ್ಗರ್, ಟಾರ್ಟರಿ, ಕತಾಯ್ (Cathay), ಪೆಗು, ಸಯಾಂ, ಚೀನಾ ಮತ್ತು ಮಚೀನಾ ಮುಂತಾದ ದೇಶಗಳ ರಾಜರುಗಳು ಇಂಡೀಸಿನ ರಾಜರ ಕಂಡರೆ ಗಡಗಡ ನಡುಗುತ್ತಾರೆ ಎಂದು ತಿಳಿಸಿದಿರಿ. ಎಂತಹ ಮೆಚ್ಚುವಂಥ ಭೂಗೋಳಶಾಸ್ತ್ರಜ್ಞರಿದ್ದೀರಿ ನೀವು ! ಇತಿಹಾಸವನ್ನು ಎಷ್ಟು ಆಳವಾಗಿ ಅಭ್ಯಾಸ ಮಾಡಿದ್ದೀರಿ ನೀವು ! ಪ್ರಪಂಚದ ಪ್ರತಿಯೊಂದು ರಾಷ್ಟ್ರದ ವಿಶಿಷ್ಟ ಲಕ್ಷಣಗಳನ್ನು ನನಗೆ ಮನವರಿಕೆಮಾಡಿಕೊಡಬೇಕಾಗಿದ್ದುದು ನನ್ನ ಗುರುವಿನ ಕರ್ತವ್ಯವಾಗಿರಲಿಲ್ಲವೆ ?—ಎಂದು ನಾನು ನಿಮ್ಮನ್ನು ಕೇಳುತ್ತೇನೆ. ಪ್ರತಿಯೊಂದು ರಾಷ್ಟ್ರದ ಸಾಧನ ಸಂಪತ್ತುಗಳೇನು, ಶಕ್ತಿಸಾಮರ್ಥ್ಯಗಳೇನು, ಯುದ್ಧದ ರೀತಿ ನೀತಿಗಳೇನು, ನಡೆನುಡಿಗಳೇನು, ಧರ್ಮಮರ್ಮಗಳೇನು, ಆಡಳಿತ ವಿಧಾನಗಳೇನು, ಆಡಳಿತದ ಮುಖ್ಯ ಗೊತ್ತುಗುರಿಗಳೇನು–ಇವನ್ನು ಹೇಳಬಾರದಾಗಿತ್ತೇ ಮುಲ್ಲಾಜಿ, ನೀವು ? ಅಷ್ಟೆ ಅಲ್ಲ, ಇತಿಹಾಸವು ಕಲಿಸುವ ಪಾಠವನ್ನು ಒತ್ತಿ ಒತ್ತಿ ಹೇಳಿ, ರಾಜ್ಯಗಳ ಉದಯ, ಉನ್ನತಿ ಹಾಗೂ ಅವನತಿಗಳು ಹೇಗಾದವು, ಯಾವ

ಘಟನೆಗಳಿಂದ ಮತ್ತು ಯಾವ ತಪ್ಪುನೆಪ್ಪುಗಳ ಕಾರಣವಾಗಿ ಮಹಾಕ್ರಾಂತಿಗಳೂ ತೀವ್ರ ಬದಲಾವಣೆಗಳೂ ಆದುವು ಎಂದು ತಿಳಿಸುವ ಜವಾಬ್ದಾರಿ ನಿಮ್ಮ ಮೇಲಿರಲಿಲ್ಲವೆ ? ಮಾನವನ ಇತಿಹಾಸವನ್ನು ಕುರಿತು ನಿಗೂಢವೂ ವ್ಯಾಪಕವೂ ಆದ ಜ್ಞಾನವನ್ನು ನನಗೆ ಕೊಡುವ ಬದಲು, ಈ ಚಕ್ರಾಧಿಪತ್ಯವನ್ನು ಕಟ್ಟಿದ ನನ್ನ ಪೂರ್ವಜರ ಹೆಸರಷ್ಟೇ ಹೇಳಿ ನಿಮ್ಮ ಪಾಠ ಮುಗಿಸಿದಿರಿ. ರಾಜನಾದವನಿಗೆ ತನ್ನ ಸುತ್ತಮುತ್ತ ಇರುವ ರಾಷ್ಟ್ರಗಳ ಭಾಷೆಯ ಪರಿಚಯವಿರಬೇಕಾದ್ದು ಅವಶ್ಯಕ. ಆದರೆ ನೀವು ಅರಾಬಿಕ್ ಭಾಷೆಯನ್ನು ಓದುವಂತೆಯೂ ಬರೆಯುವಂತೆಯೂ ಮಾಡಿದಿರಿ. ಹತ್ತು ಹನ್ನೆರಡು ವರ್ಷಗಳು ಶ್ರಮಿಸಿದರೂ ಆ ಭಾಷೆಯಲ್ಲಿ ಪ್ರವೀಣನಾಗಲು ಸಾಧ್ಯವಿಲ್ಲವೆಂದು ಗೊತ್ತಿದ್ದೂ ಸಹ, ನನ್ನ ಕಾಲವನ್ನು ವ್ಯರ್ಥಮಾಡಿ ಆ ಭಾಷೆಯನ್ನು ಕಲಿಸಿಬಿಟ್ಟರೆ ಸಾಕೆಂದು ನೀವು ಭಾವಿಸಿದಿರಿ. ರಾಜಕುಮಾರನೊಬ್ಬನು ಎಷ್ಟೊಂದು ಮುಖ್ಯ ವಿಷಯಗಳನ್ನು ತಿಳಿದುಕೊಳ್ಳಬೇಕೆಂದು ನಿಮಗೆ ಗೊತ್ತಿದ್ದರೂ ಅದನ್ನು ಮರೆತು ಆತನು ವ್ಯಾಕರಣದಲ್ಲಿ ಪ್ರವೀಣವಾಗಬೇಕೆಂದು ನೀಳಿಯದ ಗಂಟಲಿನಲ್ಲಿ ಅದನ್ನು ತುರುಕಿದಿರಿ. ಹೀಗೆ ನೀವು ನನ್ನ ಯೌವನದ ಅಮೂಲ್ಯ ವೇಳೆಯನ್ನು ನಿಸ್ಸಾರವೂ ವ್ಯರ್ಥವೂ ಕೊನೆಯಿಲ್ಲದ್ದೂ ಆದ ಶಬ್ದಗಳನ್ನು ಗಟ್ಟಿಮಾಡಿಸುವುದರಲ್ಲಿ ಹಾಳುಮಾಡಿದಿರಿ !»

ಈ ತರಹ ಭಾಷೆಯಲ್ಲಿ ಔರಂಗಜೇಬ ತನ್ನ ಮನಸ್ಸಿನಲ್ಲಿದ್ದ ತಿರಸ್ಕಾರವನ್ನು ಬಯಲುಮಾಡಿದನು. ಕೆಲವು ಪಂಡಿತರು ತಮ್ಮ ಚಕ್ರವರ್ತಿಯನ್ನು ಹೊಗಳಿ, ಇನ್ನಷ್ಟು ಹುರಿದುಂಬಿಸಲೆಂದೋ ಅಥವಾ ಆ ಮುಲ್ಲಾನ ಮೇಲಿನ ಅಸೂಯೆಯಿಂದಲೋ ಪ್ರಮಾಣಮಾಡಿ ಔರಂಗಜೇಬ ಹೇಳಿದ್ದು ಸತ್ಯ ಎಂದರು. ರಾಜ ಅಷ್ಟಕ್ಕೆ ನಿಲ್ಲದೆ ಮತ್ತೆ ತನ್ನ ಮಾತನ್ನು ಮುಂದುವರಿಸಿ ಹೀಗೆ ಹೇಳಿದ : "ಬಾಲ್ಯದಲ್ಲಿ ಹೇಳಿದ್ದು ಮನಸ್ಸಿನಲ್ಲಿ ಶಾಶ್ವತವಾಗಿ ನಿಲ್ಲುವುದೆಂದು ನಿಮಗೆ ಗೊತ್ತಿತ್ತಷ್ಟೆ. ಸಾವಿರಾರು ಹಿತವಚನಗಳನ್ನು ಬೋಧಿಸಿ, ಮನಸ್ಸನ್ನು ಉದಾತ್ತ ಆಲೋಚನೆಗಳ ಕಡೆಗೆ ಕೊಂಡೊಯ್ದು, ಮಹತ್ತರ ಕಾರ್ಯಗಳನ್ನು ಮಾಡುವಂತೆ ಪ್ರೇರೇಪಿಸುವ ಕೆಲಸವನ್ನು ನೀವೇಕೆ ಮಾಡಲಿಲ್ಲ ? ಅರಾಬಿಕ್ ಭಾಷೆಯ ಒಂದರಿಂದಲೇ ನಾವು ಪ್ರಾರ್ಥನೆಮಾಡಲಾಗಲಿ ಅಥವಾ ಧಾರ್ಮಿಕ ಹಾಗೂ ವೈಜ್ಞಾನಿಕ ವಿಚಾರಗಳನ್ನು ತಿಳಿದುಕೊಳ್ಳಲಾಗಲಿ ಸಾಧ್ಯವೆ ? ನಮ್ಮ ಮಾತೃಭಾಷೆಯ ಮೂಲಕ ಅಷ್ಟೇ ಸುಲಭವಾಗಿ, ಮತ್ತು ಒಪ್ಪುವಂತೆ ದೇವರನ್ನು ಪ್ರಾರ್ಥಿಸಲು ಸಾಧ್ಯವಿಲ್ಲವೇ ? ಅಥವಾ, ಘನವಾದ ವಿಷಯಗಳನ್ನು ಇನ್ನೊಬ್ಬರು ಒಪ್ಪುವಂತೆ ನಮ್ಮ ಮಾತೃಭಾಷೆಯಲ್ಲಿ ಹೇಳಲು ಸಾಧ್ಯವಿಲ್ಲವೆ ?

"ನನಗೆ ತತ್ತ್ವಶಾಸ್ತ್ರದಲ್ಲಿ ಪಾಠ ಆಗಿದೆ ಎಂದು ನೀವು ನನ್ನ ತಂದೆಗೆ ತಿಳಿಸಿದ್ದಿರಿ. ನನಗಿನ್ನೂ ಜ್ಞಾಪಕ, ನೀವು ಹಲವಾರು ವರ್ಷಗಳ ಕಾಲ ಜೀವನಕ್ಕೆ ಅನುಪಯೋಗವಾದ ವ್ಯರ್ಥ ವಿಷಯಗಳನ್ನು ನನ್ನ ತಲೆಗೆ ತುರುಕಿದ್ದು. ಬಹಳ ಶ್ರಮವಹಿಸಿ ನನ್ನ ಮನಸ್ಸಿನಲ್ಲಿ ಭವಿಷ್ಯದ ಗೋಪುರವನ್ನು ಕಟ್ಟಿದಿರಿ. ಆದರೆ, ನೀವು ಹೇಳಿದ್ದೆಲ್ಲಾ ಹೇಳಿದ ಗಳಿಗೆಯೇ

ಮರೆತುಹೋಯಿತು. ಅವುಗಳಿಂದೇನಾದರೂ ಪ್ರಯೋಜನವಿದೆಯೆ ಎಂದರೆ, ಏನೇನೂ ಇಲ್ಲ! ಬುದ್ಧಿಗೆ ಶ್ರಮ ಕೊಟ್ಟು, ಕೊನೆಗೆ ಮನುಷ್ಯ ತಲೆನೋವಿಂದಾಗಿ ನುಗ್ಗಿ ತನ್ನ ಸಹನ ಶಕ್ತಿಯನ್ನು ನೀಗಿಕೊಳ್ಳುವಂತೆ ಮಾಡುವುದನ್ನು ಬಿಟ್ಟರೆ ಅವುಗಳಿಂದ ಏನೂ ಫಲವಿಲ್ಲ.

"ಹೌದು, ಮುಲ್ಲಾಜಿ, ತಾವು ನನ್ನ ಜೀವನದ ಅಮೂಲ್ಯವಾದ ವರ್ಷಗಳನ್ನು ನಿಮಗೆ ಅಚ್ಚುಮೆಚ್ಚಾಗಿದ್ದ ಕಲ್ಪನೆಗಳ ಸುಳಿಯಲ್ಲಿ ತೊಳಲುವಂತೆ ಮಾಡಿದಿರಿ. ನಾನು ನಿಮ್ಮನ್ನು ಬಿಡುವಾಗ ವೈಜ್ಞಾನಿಕ ವಿಷಯಗಳ ಬಗ್ಗೆ ಸಾಧಿಸಿದ್ದೇನು ಗೊತ್ತೆ ? ಗಂಡಸು ತನದ ಧೈರ್ಯಸ್ಥೈರ್ಯಗಳುಳ್ಳ ಯುವಕನಾದ ನನ್ನಲ್ಲಿ ಅನೇಕ ಅಸ್ಪಷ್ಟ ಹಾಗೂ ಅಸಹ್ಯ ಪಾರಿಭಾಷಿಕ ಪದಗಳನ್ನು ತುಂಬಿ, ನನ್ನಲ್ಲಿ ಅಧೈರ್ಯ ಹಾಗೂ ನಿರಾಶೆಯ ಭಾವನೆ ಯನ್ನುಂಟುಮಾಡುವುದಷ್ಟೇ ನೀವು ಮಾಡಿದ್ದು. ತತ್ತ್ವಜ್ಞಾನಿಗಳೆಂದು ಮೆರೆಯುವ ಅಜ್ಞಾನಿಗಳು ಸೃಷ್ಟಿಸಿದ ಪದಗಳನ್ನು ಪ್ರಯೋಗಿಸಿ ನನ್ನ ತಲೆ ಕೆಡಿಸಿದಿರಿ.

"ನಿಮ್ಮಂಥ ಠಕ್ಕರು ಏನುಮಾಡುತ್ತಾರೆ, ಗೊತ್ತೆ ? ತಿಳಿವಳಿಕೆಯಲ್ಲಿ ತಮ್ಮನ್ನು ಮೀರಿಸಿದವರಿಲ್ಲ ಎಂಬಂತೆಯೂ, ತಾವು ಹೇಳುವ ಗುಪ್ತ ಹಾಗೂ ಅಸ್ಪಷ್ಟ ಮಾತಿನಲ್ಲಿ ತಮಗೆ ಮಾತ್ರ ಗೊತ್ತಿರುವ ಅನೇಕ ಅತ್ಯಂತ ಗಹನ ವಿಷಯಗಳು ಅಡಗಿರುವಂತೆಯೂ ಮಾತನಾಡುತ್ತಾರೆ. ಬುದ್ಧಿಯು ತರ್ಕಕ್ಕೆ ಹೊಂದಿಕೊಳ್ಳುವಂತಹ ಮತ್ತು ಒಪ್ಪಬಹು ದಾದ ವಾದಕ್ಕೆ ಮಾತ್ರ ಮಣಿಯುವಂತಹ ತತ್ತ್ವಶಾಸ್ತ್ರವನ್ನು ನೀವು ನನಗೆ ಕಲಿಸಿದ್ದರೆ, ಸುಖದುಃಖ ಮತ್ತು ಲಾಭನಷ್ಟಗಳಿಂದ ಏರುಪೇರಾಗದ ಧೃಡಮನಸ್ಸನ್ನು ಪಡೆಯುವ ಪಾಠಗಳನ್ನು ಹೇಳಿದ್ದರೆ, ಮನುಷ್ಯನ ಸ್ವಭಾವ ಎಂಥದು ಎಂಬುದರ ಪರಿಚಯಮಾಡಿಕೊಟ್ಟಿದ್ದರೆ, ಮೂಲಭೂತ ತತ್ತ್ವಗಳ ಪರಿಚಯ ಮಾಡಿಕೊಟ್ಟು ಈ ವಿಶ್ವ ಹಾಗೂ ಅದರ ವಿವಿಧ ಭಾಗಗಳ ವ್ಯವಸ್ಥಿತ ಗತಿಯ ಉದಾತ್ತ ಹಾಗೂ ಉಪ ಯುಕ್ತತೆಯ ತಿಳುವಳಿಕೆ ನೀಡಿದ್ದರೆ, ಇಂಥ ತಾತ್ತ್ವಿಕ ವಿಚಾರಗಳನ್ನು ನೀವು ನನಗೆ ಬೋಧಿಸಿದ್ದರೆ, ಅರಿಸ್ಟಾಟಲನಿಗೆ ಅಲೆಕ್ಸಾಂಡರ್ ಕೃತಜ್ಞನಾಗಿದ್ದುದಕ್ಕಿಂತಲೂ ಹೆಚ್ಚಾಗಿ ನಾನು ನಿಮಗೆ ಕೃತಜ್ಞನಾಗಿರುತ್ತಿದ್ದೆ. ಹಾಗೆ ಕೃತಜ್ಞನಾಗಿರುತ್ತಿದ್ದ ಪಕ್ಷದಲ್ಲಿ ಅರಿಸ್ಟಾಟಲ್ ಅಲೆಕ್ಸಾಂಡರನಿಂದ ಏನು ಪಡೆದನೋ ಅದಕ್ಕಿಂತ ತೀರಾ ಭಿನ್ನವಾದುದನ್ನು ನಿಮಗೆ ಕೊಟ್ಟು ಗೌರವಿಸುವುದು ನನ್ನ ಕರ್ತವ್ಯವಾಗಿರುತ್ತಿತ್ತು.

"ಈಗ ಹೇಳು ಮತ್ತೆ, ಹೇ ಹೊಗಳುಭಟ್ಟ, ರಾಜನಿಗೆ ಬೇಕೇಬೇಕಾದ ಒಂದು ಅತಿ ಮುಖ್ಯ ವಿಷಯವನ್ನಾದರೂ ನೀನು ಭೋದಿಸಿದೆಯಾ ? ರಾಜ ಮತ್ತು ಪ್ರಜೆಗಳ ಮಧ್ಯೆ ಪರಸ್ಪರ ಸಂಬಂಧ ಹೇಗಿರಬೇಕೆಂಬುದನ್ನು ನೀನು ಹೇಳಿದೆಯಾ ? ನಾನು ಮುಂದೆ ನನ್ನ ಕಿರೀಟಕ್ಕಾಗಿ, ಅಷ್ಟೇ ಅಲ್ಲ ನನ್ನ ಉಳಿವಿಗಾಗಿ ಸಹೋದರರೊಡನೆ ಖಡ್ಗ ಹಿಡಿದು ಹೋರಾಡಬೇಕಾಗಿಬರುತ್ತದೆಯೆಂದು ನೀನು ಊಹಿಸಿದೆಯಾ ? ಹಿಂದೂಸ್ಥಾನದ ಪ್ರತಿಯೊಬ್ಬ ರಾಜನ ಮಕ್ಕಳ ಹಣೇಬರಹ ಇದೇ ಆಗಿರುವುದನ್ನು ನೀನು ಅರಿತಿದ್ದೆಯಾ? ಯುದ್ಧದ ಕಲೆಯ ಬಗ್ಗೆ, ಪಟ್ಟಣಗಳನ್ನು ಮುತ್ತಿಗೆ ಹಾಕುವ

ಬಗ್ಗೆ ಮತ್ತು ರಣರಂಗದಲ್ಲಿ ಸೈನ್ಯವನ್ನು ಹೇಗೆ ನಿಲ್ಲಿಸಬೇಕೆಂಬ ಬಗ್ಗೆ ನೀನೇನಾದರೂ ತಿಳಿಸಿದೆಯಾ ? ನಾನು ಇಂಥ ವಿಷಯಗಳಲ್ಲಿ ನಿನಗಿಂತ ತಿಳಿದವರನ್ನು ಕೇಳಿದ್ದು ಒಳ್ಳೆಯ ದಾಯಿತು. ಹೋಗು ! ನಿನ್ನ ಊರಿಗೆ ಹೊರಟುಹೋಗು ! ಇನ್ನು ಮುಂದೆ ನೀನು ಯಾರು ಅಥವಾ ನಿನ್ನ ಗತಿಯೇನಾಯಿತು ಎಂಬುದು ಯಾರಿಗೂ ತಿಳಿಯದಿರಲಿ !"

ಈ ವೇಳೆಯಲ್ಲಿ ಜ್ಯೋತಿಷ್ಕರ ವಿರೋಧವಾಗಿ ಕೊಂಚ ಗಲಾಟೆ ಎದ್ದಿತು. ಅದೇನೂ ನನಗೆ ಅಷ್ಟೊಂದು ಅಹಿತವೆನಿಸಲಿಲ್ಲ. ಬಹುತೇಕ 'ಏಷ್ಯಾಟಿಕರು' (Asiatics) ಜ್ಯೋತಿಶ್ಶಾಸ್ತ್ರದಲ್ಲಿ ಅಪಾರ ನಂಬಿಕೆಯುಳ್ಳವರು. ಅವರ ಮಾತಿನಲ್ಲಿ ಹೇಳುವುದಾದರೆ, 'ಮೇಲೆ ಬರೆಯದೆ ಇರುವುದಾವುದೂ ಕೆಳಗೆ ನಡೆಯುವುದಿಲ್ಲ'. ಪ್ರತಿಯೊಂದು ಕೆಲಸ ಮಾಡುವಾಗಲೂ ಜ್ಯೋತಿಷ್ಕರನ್ನು ಕೇಳುತ್ತಾರೆ. ಎರಡು ಕಡೆಯ ಸೇನೆಗಳು ಯುದ್ಧಕ್ಕೆ ಸಿದ್ಧವಾಗಿ ನಿಂತಿದ್ದರೂ ಒಳ್ಳೆಯ ಗಳಿಗೆ ಬಂದ ಹೊರತು ಸೇನಾಪತಿಗಳನ್ನು ಯುದ್ಧಕ್ಕೆ ತೊಡಗಿಸುವುದು ಪ್ರಯಾಸವೇ ಸರಿ. ಹಾಗೆಯೇ, ಸೇನಾಪತಿಗಳ ನೇಮಕ ದಲ್ಲಿ, ಜನರ ಮದುವೆ ಮುಂಜಿಗಳಲ್ಲಿ, ಮತ್ತು ಪ್ರಯಾಣಗಳಲ್ಲಿ ಜೋಯಿಸ ಮಹಾಶಯ ನನ್ನು ಕೇಳದೆ ಏನೂ ಮಾಡುವುದಿಲ್ಲ. ಬಹು ಸಣ್ಣ ವಿಷಯಗಳಲ್ಲಿಯೂ ಅವರನ್ನು ಕೇಳದೆ ಇರುವುದಿಲ್ಲ. ಹೊಸ ಬಟ್ಟೆ ಹಾಕಬೇಕಾದರೂ ಅವರನ್ನು ಕೇಳಬೇಕು. ಹೊಸದಾಗಿ ಒಬ್ಬ ಗುಲಾಮನನ್ನು ಕೊಂಡುಕೊಳ್ಳಬೇಕಾದರೂ ಅವರನ್ನು ಕೇಳಬೇಕು. ಈ ಮೂಢನಂಬಿಕೆಯ ಕಾರಣವಾಗಿ ಎಷ್ಟೊಂದು ತೊಂದರೆ ತಾಪತ್ರಯಗಳು ಗೊತ್ತೆ ? ಹೀಗಿದ್ದು ಸಹ, ಅದು ಇನ್ನೂ ಮುಂದುವರಿದುಕೊಂಡು ಬರುತ್ತಿದೆಯಲ್ಲ ಎಂದು ನನಗೆ ಆಶ್ಚರ್ಯ. ಸಣ್ಣದಾಗಲಿ, ದೊಡ್ಡದಾಗಲಿ, ಗುಟ್ಟಾದ ವಿಚಾರವಾಗಲಿ, ಬಹಿರಂಗವಾದ ವಿಚಾರವಾಗಲಿ, ಪ್ರತಿಯೊಂದನ್ನೂ ಅನಿವಾರ್ಯವಾಗಿ ಜೋತಿಷ್ಕನಿಗೆ ಹೇಳಿಯೇ ತೀರ ಬೇಕು.

ಒಂದು ದಿನ ಆಸ್ಥಾನ ಜ್ಯೋತಿಷ್ಕ ನೀರಿನಲ್ಲಿ ಬಿದ್ದು ಸತ್ತುಹೋದ. ಇನ್ನೊಬ್ಬ ರಿಗೆ ಏನಾಗುವುದೆಂದು ಹೇಳಬಲ್ಲವನು ತನಗೇನಾಗುವುದೆಂದು ತಿಳಿದುಕೊಳ್ಳಲಾರದೆ ಹೋದನಲ್ಲಾ–ಎಂದು ರಾಜನಿಗೂ ಅಮೀರರುಗಳಿಗೂ ಆಶ್ಚರ್ಯವಾಯಿತು. ವಿಜ್ಞಾನ ಶಾಸ್ತ್ರಗಳು ಚೆನ್ನಾಗಿ ಬೆಳೆದಿರುವ ಫರಂಗೀಸ್ಥಾನದಲ್ಲಿ ಮಂತ್ರವಾದಿಗಳನ್ನು ಮತ್ತು ಡೊಂಬ ರಾಟದವರನ್ನು ಕಂಡಷ್ಟೇ ಮರ್ಯಾದೆಯಿಂದ ಜೋತಿಷ್ಕರನ್ನೂ ಕಾಣುತ್ತಾರೆ. ಅಲ್ಲಿ, ಜೋತಿಷ್ಯವೆಂದರೆ ದೊಡ್ಡವರನ್ನು ಕಾಣಲು ಇರುವ ಒಂದು ವಿಧಾನ, ಮತ್ತು ಹಾಗೆ ಕಂಡು ಅವರಿಗೆ ಏನೇನೋ ಹೇಳಿ, ಅವರನ್ನು ತಮ್ಮ ಕೈವಶಮಾಡಿಕೊಳ್ಳುವ ಮಾರ್ಗ ಎಂಬ ಭಾವನೆಯಿದೆ.

ಒಂದು ಕತೆ ಈ ಜ್ಯೋತಿಷ್ಕರಿಗೆ ಸಂಬಂಧಪಟ್ಟದ್ದು : ಪರ್ಷಿಯಾದ ದೊರೆ, ಷಾ ಅಬ್ಬಾಸನು ತನ್ನ ಅರಮನೆಗೆ ಸೇರಿದ ತೋಟದಲ್ಲಿ ಹಣ್ಣಿನ ಗಿಡಗಳನ್ನು ನೆಡಿಸಬೇಕೆಂದು ಅಪ್ಪಣೆಮಾಡಿಧ. ತೋಟಧ ಮಾಲಿ ಭಾಗವನ್ನು ಅರಿಸಿ ಒಂಧು ಗೊತ್ತಾದ ಧಿನ ಗಿಢ

ನೆಡುವುದೆಂದು ವ್ಯವಸ್ಥೆ ಮಾಡಿಕೊಂಡ. ಆದರೆ, ಅರಮನೆಯ ಜ್ಯೋತಿಷ್ಕ ತನ್ನ ಪ್ರತಿಷ್ಠೆಯನ್ನು ತೋರಿಸುವುದಕ್ಕಾಗಿ ಸರಿಯಾದ ಗಳಿಗೆಯಲ್ಲಿ ಗಿಡ ನೆಡದಿದ್ದರೆ ಅವು ಬೆಳೆಯುವುದಿಲ್ಲವೆಂದು ಭವಿಷ್ಯನುಡಿದ. ಆಗ ದೊರೆ 'ಒಳ್ಳೆಯ ಗಳಿಗೆ ಯಾವುದು ಎಂದು ನೋಡಿ ಹೇಳಿ' ಎಂದನು. ಜ್ಯೋತಿಷ್ಕ ತನ್ನ ಕಡತ ಬಿಚ್ಚಿ ನೋಡಿ 'ಇನ್ನೊಂದು ಘಂಟೆಯೊಳಗೆ ನೆಡಬೇಕಾಗುತ್ತದೆ, ಅನಂತರ ಒಳ್ಳೆಯ ಗಳಿಗೆ ಇರುವುದಿಲ್ಲ' ಎಂದು ಹೇಳಿದ. ತೋಟದ ಮಾಲಿ ಆ ವೇಳೆ ಅಲ್ಲಿರಲಿಲ್ಲ. ರಾಜನ ಆಜ್ಞೆಯಂತೆ ಯಾರನ್ನೋ ಹಿಡಿದು ಗುಂಡಿ ತೋಡಿಸಿದರು. ರಾಜನೇ ತನ್ನ ಹಸ್ತದಿಂದ ಗಿಡಗಳನ್ನು ನೆಟ್ಟನು. ಮಧ್ಯಾಹ್ನ ಕೆಲಸಕ್ಕೆ ಬಂದ ಮಾಲಿಗೆ ತಾನು ನೆಡಬೇಕೆಂದು ಆಲೋಚಿಸಿದ್ದಕ್ಕಿಂತ ಮುಂಚೆಯೇ ಗಿಡಗಳನ್ನು ನೆಟ್ಟದ್ದನ್ನು ಕಂಡು ಆಶ್ಚರ್ಯವಾಯಿತು. ಅಲ್ಲದೆ, ಗಿಡಗಳನ್ನು ಸರಿಯಾದ ಕ್ರಮದಲ್ಲಿಯೂ ನೆಟ್ಟಿರಲಿಲ್ಲವಾಗಿ ಅವನಿಗೆ ಅಸಮಾಧಾನವಾಯಿತು. ಸೇಬಿನ ಗಿಡ ನೆಡುವ ಕಡೆ ಎಪ್ರಿಕಾಟ್ ಗಿಡ ನೆಟ್ಟಿದ್ದರು—ಹೀಗೆಲ್ಲಾ ಅವ್ಯವಸ್ಥೆ ಆಗಿತ್ತು. ಆಗ ನೆಟ್ಟಿದ್ದ ಗಿಡಗಳನ್ನೆಲ್ಲಾ ಆತ ಕಿತ್ತುಹಾಕಿ, ಅವುಗಳ ಬೇರಿಗೆ ಮಣ್ಣು ಕಟ್ಟಿ ಇಟ್ಟನು, ಬೆಳಗ್ಗೆ ನೆಡೋಣವೆಂದು. ಇದು ಜ್ಯೋತಿಷ್ಕನಿಗೆ ತಿಳಿಯಿತು. ದೊರೆಗೆ ದೂರು ಹೋಯಿತು. ಆತ ಸಿಟ್ಟಾಗಿ ಮಾಲಿಗೆ ಹೇಳಿಕಳುಹಿಸಿದ. ತಾನು ಒಳ್ಳೆಯ ಗಳಿಗೆಯಲ್ಲಿ ನೆಡಿಸಿದ ಗಿಡಗಳನ್ನು ಏಕೆ ಕಿತ್ತೆ–ಎಂದು ಆತನನ್ನು ಗದರಿಸಲು, ನಿಷ್ಕಪಟಿಯಾದ ಮಾಲಿ ಅಲ್ಲಿಯೇ ಇದ್ದ ಜ್ಯೋತಿಷ್ಕನ ಕಡೆ ಓರೆನೋಟದಿಂದ ನೋಡಿದನು. ಆತ ಷಿರಾಜಿನ ಮದ್ಯವನ್ನು ಪಟ್ಟಾಗಿ ಕುಡಿದಿದ್ದ. ಅವನು ಅಮಲಿನಿಂದ ಒಂದೆರಡು ಮಾತು ಆಡಿದ: 'ಓಹೋ ಹೋ ! ಬಹಳ ಒಳ್ಳೆಯ ಗಳಿಗೆಯೇ ಸರಿ ! ಮಧ್ಯಾಹ್ನ ನೆಟ್ಟ ಗಿಡಗಳನ್ನು ಸಂಜೆಯೊಳಗೆ ಬೇರುಸಮೇತ ಕಿತ್ತುಹಾಕಬೇಕಾದರೆ, ನೆಟ್ಟ ಗಳಿಗೆ ಒಳ್ಳೆಯ ಗಳಿಗೆಯೇ ಇರಬೇಕು !'

ಈ ಹಾಸ್ಯದ ಮಾತುಗಳನ್ನು ಕೇಳಿದ ದೊರೆ ಹೊಟ್ಟೆ ಹುಣ್ಣಾಗುವವರೆಗೂ ನಕ್ಕುಬಿಟ್ಟನು. ಜ್ಯೋತಿಷ್ಕನ ಕಡೆ ತಿರಸ್ಕಾರದ ನೋಟ ಬೀರಿ ಅರಮನೆಯೊಳಕ್ಕೆ ಹೊರಟುಹೋದ.

ಈಗ ಷಾಜಹಾನನ ಕಾಲದಲ್ಲಿ ನಡೆದ ಮತ್ತೆರಡು ಪ್ರಸಂಗಗಳನ್ನು ಹೇಳುತ್ತೇನೆ: ನೇಕ್ ನೇಮ್ ಖಾನ್ ಎಂಬ ಒಬ್ಬ ಹೆಸರಾಂತ ಆಸ್ಥಾನದ ಅಮೀರ ನಲವತ್ತು ಐವತ್ತು ವರ್ಷಗಳ ಅವಧಿಯಲ್ಲಿ ಅಪಾರ ಐಶ್ವರ್ಯ ಸಂಪಾದಿಸಿದ್ದ. ಅಮೀರರು ಎಷ್ಟೇ ಸಂಪಾದಿಸಿರಲಿ, ಅವರು ಸತ್ತಾಗ ಅವರ ಆಸ್ತಿಪಾಸ್ತಿಯೆಲ್ಲ ರಾಜನಿಗೆ ಸೇರಿಹೋಗುತ್ತದೆ. ಹಾಗೆ ಆದಾಗ ಅವರ ಹೆಂಡತಿ ಮಕ್ಕಳೆಲ್ಲ ಬೀದಿಪಾಲಾಗುತ್ತಾರೆ. ಇದನ್ನು ನೋಡಿದ್ದ ಖಾನ, ತನಗೂ ಅದೇ ಗತಿಯಾಗುವುದೆಂದು ಊಹಿಸಿ, ಒಂದು ಕೆಲಸ ಮಾಡಿದ. ಆತ ತನ್ನ ಆಸ್ತಿಪಾಸ್ತಿಯನ್ನೆಲ್ಲಾ ವಿಧವೆಯರಿಗೂ ಬಡ ಸಿಪಾಯಿಗಳಿಗೂ ಹಂಚಿಬಿಟ್ಟ. ಖಾಲಿಯಾದ ತನ್ನ ಪೆಟ್ಟಿಗೆಗಳಲ್ಲಿ ಹಳೆ ಕಬ್ಬಿಣ, ಕೊಂಬು, ಮೂಳೆ, ಹರಿದ ಎಕ್ಕಡ,

ಚಿಂದಿ ಬಟ್ಟೆ—ಇಂಥವುಗಳನ್ನು ತುಂಬಿ, ಅವಕ್ಕೆಲ್ಲ ಬೀಗಮುದ್ರೆ ಹಾಕಿದ. ಹೀಗೆ ಮಾಡಿ, ಆ ಪೆಟ್ಟಿಗೆಗಳಲ್ಲಿ ಅಪಾರ ನಗನಾಣ್ಯಗಳನ್ನು ತುಂಬಿರುವುದಾಗಿಯೂ, ಅವೆಲ್ಲ ಚಕ್ರವರ್ತಿಗೆ ಸೇರತಕ್ಕವುಗಳೆಂದೂ ಅವರಿವರಲ್ಲಿ ಹೇಳಿಕೊಂಡ.

ಒಂದು ದಿನ ನೇಕ್ ನೇಮ್ ಖಾನ್ ಸತ್ತುಹೋದ. ಸರಿ, ಷಾಜಹಾನನ ಮುಂದೆ ಅವನ ನಗನಾಣ್ಯಗಳಿದ್ದ ಪೆಟ್ಟಿಗೆಗಳನ್ನು ತಂದಿಟ್ಟರು. ದರ್ಬಾರು ನಡೆಯುತ್ತಿತ್ತು. ಆಸ್ಥಾನಿಕರೆಲ್ಲ ನೆರೆದಿದ್ದರು. ಆ ಭಾರೀ ಪೆಟ್ಟಿಗೆಗಳಲ್ಲಿ ಇದ್ದ ನಗ ನಾಣ್ಯಗಳನ್ನು ಕೂಡಲೇ ನೋಡಿ ಸಂತೋಷಪಡಬೇಕೆಂದು ಚಕ್ರವರ್ತಿಗೆ ಆಸೆ. ಅವನ್ನು ಇಡೀ ಅಮೀರರ ಮುಂದೆ ಒಡೆದುತೋರಿಸಬೇಕೆಂದು ಚಕ್ರವರ್ತಿಯ ಆಜ್ಞೆಯಾಯಿತು. ರಾಜಾಜ್ಞೆಯಂತೆ ಅವನ್ನು ಒಡೆಯಲಾಯಿತು. ಅವುಗಳೊಳಗೇನಿತ್ತೆಂದು ಹೇಳಬೇಕೆ ! ಚಕ್ರವರ್ತಿಗೆ ಎಷ್ಟು ಸಿಟ್ಟು ಬಂದಿರಬೇಕೆಂದು ಊಹಿಸಿಕೊಳ್ಳಿ. ಆ ಸಿಟ್ಟಿನಲ್ಲಿ ಆತ ಸಿಂಹಾಸನದಿಂದ ತಟಕ್ಕನೆ ಎದ್ದು ಸರ್ರನೆ ಒಳಕ್ಕೆ ಹೊರಟುಹೋದ.

ಇನ್ನೊಂದು ಕತೆ : ಇದು ಬಹು ಚತುರಳಾದ ಹೆಂಗಸೊಬ್ಬಳಿಗೆ ಸಂಬಂಧಪಟ್ಟದ್ದು. ಒಬ್ಬ ಶ್ರೀಮಂತ 'ಬನ್ಯಾನ್' (ಬನಿಯ) ಇದ್ದ. ಅವನು ಯಾವಾಗಲೂ ಚಕ್ರವರ್ತಿ ಷಾಜಹಾನನ ಸೇವೆಯಲ್ಲಿ ಇರುತ್ತ, ಎಲ್ಲ ಜನರಂತೆ ದುಬಾರಿ ಬಡ್ಡಿ ಹಾಕಿ ಹೇರಳವಾಗಿ ಹಣ ಸಂಪಾದಿಸಿದ್ದ. ಒಂದು ದಿನ ಅವನು ಸತ್ತುಹೋದ. ಸತ್ತಮೇಲೆ ಆತನ ಹೆಂಡತಿಗೂ ಮಗನಿಗೂ ಆಸ್ತಿಯ ಬಗ್ಗೆ ವಿವಾದ ಹುಟ್ಟಿತು. ಮಗನು ಕೇಳಿದ್ದನ್ನು ತಾಯಿ ಕೊಡಲಿಲ್ಲ. ಏಕೆಂದರೆ, ಮಗ ದುಂಡುಗಾರ ಹಾಗೂ ವಿಷಯಲಂಪಟ. ಆತ ಷಾಜಹಾನನಲ್ಲಿ ದೂರುಕೊಟ್ಟ. ತನ್ನ ತಂದೆಯ ಆಸ್ತಿ ಎರಡು ಲಕ್ಷ ಕ್ರೌನುಗಳಷ್ಟಾಗುವುದೆಂದು ಗುಟ್ಟಾಗಿ ತಿಳಿಸಿದ. ಇದನ್ನು ಕೇಳಿದ ಷಾಜಹಾನ ವಿಧವೆಗೆ ಹೇಳಿಕಳುಹಿಸಿದ. ರಾಜಸಭೆಗೆ ಬಂದ ಆಕೆಯನ್ನು ಕುರಿತು ಚಕ್ರವರ್ತಿ, ಬನಿಯನು ಬಿಟ್ಟುಹೋದ ಆಸ್ತಿಯಲ್ಲಿ ಅರ್ಧ ತನಗೂ ಕಾಲು ಭಾಗವನ್ನು ಆಕೆಯ ಮಗನಿಗೂ ಸಲ್ಲಬೇಕೆಂದು ತಿಳಿಸಿದ. ಹೀಗೆ ಹೇಳಿ, ಆಕೆಯನ್ನು ಆಸ್ಥಾನದಿಂದ ಹೊರಗೆ ಅಟ್ಟುವಂತೆ ಅಪ್ಪಣೆಮಾಡಿದ.

ಈ ಅನಿರೀಕ್ಷಿತ ಘಟನೆಯಿಂದ ಆಚ್ಚರಿಗೊಂಡ ಆ ವಿಧವೆ ತಂಟೆತಕರಾರು ಮಾಡುತ್ತಾ, ತಾನು ಯಾವುದೋ ಗುಟ್ಟಿನ ವಿಚಾರವನ್ನು ರಾಜನಿಗೆ ಹೇಳಬೇಕಾಗಿದೆಯೆಂದೂ ಅದಕ್ಕೆ ಅವಕಾಶಮಾಡಿಕೊಡಬೇಕೆಂದೂ ಸೇವಕರ ಮೂಲಕ ತಿಳಿಸಿದಳು. ಆಕೆಯನ್ನು ಮತ್ತೆ ತನ್ನ ಬಳಿಗೆ ಕರೆತರುವಂತೆ ಚಕ್ರವರ್ತಿಯ ಅಪ್ಪಣೆಯಾಯಿತು. ತನ್ನ ಅರ್ಧ ಆಸ್ತಿಗೆ ಹಕ್ಕುದಾರನಾದ ಅವನಿಗೆ ಆಕೆ ಹೇಳಿದಳು : "ಖಾವಂದರಿಗೆ ಪ್ರಣಾಮಗಳು ! ನನ್ನ ಮಗ ಅಪ್ಪನ ಆಸ್ತಿಯನ್ನು ಕೇಳುವುದರಲ್ಲಿ ತಪ್ಪೇನಿಲ್ಲ. ಅವನು ನನ್ನ ಮಗನಾದ ಕಾರಣ ಆಸ್ತಿಗೆ ಆತ ಉತ್ತರಾಧಿಕಾರಿ. ಆದರೆ ಅರ್ಧ ಭಾಗ ಆಸ್ತಿಯನ್ನು ಕೇಳುವ ನೀವು ನನ್ನ ಗಂಡನಿಗೆ ಏನಾಗಬೇಕು ?"

ವಿಧವೆಯ ಈ ಮಾತುಗಳನ್ನು ಕೇಳಿದ ಷಾಜಹಾನ, ಹಿಂದೂಸ್ಥಾನದ ಚಕ್ರವರ್ತಿಯಾದ ತನಗೂ ತೀರಿಹೋದ ಬನಿಯನಿಗೂ ಯಾವ ಸಂಬಂಧವನ್ನೂ ಕಾಣಲಾರದೆ ಗಹಗಹಿಸಿ ನಕ್ಕು, ಆ ವಿಧವೆಯೇ ಎಲ್ಲ ಆಸ್ತಿಗೂ ಪೂರ್ಣ ಹಕ್ಕುದಾರಳೆಂದು ಘೋಷಿಸಿದ.

೧೬೬೦ರಲ್ಲಿ ಯುದ್ಧ ಮುಗಿಯಿತಷ್ಟೆ. ಅಂದಿನಿಂದ ನಾನು ಈ ದೇಶದಿಂದ ಹೊರಟ ಆರು ವರ್ಷಗಳವರೆಗೆ ನಡೆದ ಮುಖ್ಯ ವಿಚಾರಗಳನ್ನು ಈಗ ಹೇಳಲಿದ್ದೇನೆ. ನಾನು ಏನು ಹೇಳಬೇಕೆಂದಿದ್ದೇನೆಯೊ ಅದು ಮೊಗಲರು ಮತ್ತು ಇಂಡಿಯನರ ನಡೆ-ನುಡಿ, ರೀತಿ-ನೀತಿಗಳ ವಿಚಾರಗಳನ್ನು ತಿಳಿಯಲು ಸಹಾಯಕವಾಗುವುದರಲ್ಲಿ ಸಂದೇಹವಿಲ್ಲ.

ಮೊದಲಿಗೆ, ಕೆಲವು ಪ್ರಮುಖ ವ್ಯಕ್ತಿಗಳ ವಿಚಾರ : ಈಗ ಷಾಜಹಾನನ ವಿಚಾರವನ್ನೇ ತೆಗೆದುಕೊಳ್ಳೋಣ. ಔರಂಗಜೇಬನು ಷಾಜಹಾನನ್ನು ಆಗ್ರಾ ಕೋಟೆಯಲ್ಲಿ ಬಂಧಿಸಿ ಆತನು ತಪ್ಪಿಸಿಕೊಳ್ಳದಂತೆ ವ್ಯವಸ್ಥೆಮಾಡಿದ್ದನಷ್ಟೆ. ಆದರೂ ಆತನನ್ನು ಗೌರವದಿಂದಲೂ ಮರ್ಯಾದೆಯಿಂದಲೂ ನೋಡಿಕೊಳ್ಳಲಾಗುತ್ತಿತ್ತು. ಸಿಂಹಾಸನ ಕಳೆದುಕೊಂಡ ಚಕ್ರವರ್ತಿಯು ಷಾಜಹಾನ ಹಿಂದೆ ಯಾವ ಕೋಣೆಗಳಲ್ಲಿ ಇರುತ್ತಿದ್ದನೋ ಈಗಲೂ ಅದೇ ಕೋಣೆಗಳಲ್ಲಿ ಇರುವುದಕ್ಕೆ ಅವಕಾಶಕೊಡಲಾಯಿತು. ಅಲ್ಲದೆ, ಆತನು ತನ್ನ ಮಗಳು ಬೇಗಂ ಸಾಹೇಬಳೊಡನೆಯೂ, ಇಡೀ ಸ್ತ್ರೀಪರಿವಾರದೊಡನೆಯೂ ಇರಲು ಅವಕಾಶ ನೀಡಲಾಯಿತು. ಹಾಡುವ ಮತ್ತು ಕುಣಿಯುವ ಹೆಂಗಸರು, ಅಡಿಗೆಯವರು, ಮತ್ತು ಇತರ ಪರಿಚಾರಕರು ಚಕ್ರವರ್ತಿಗೆ ಎಂದಿನಂತೆ ಸೇವೆಸಲ್ಲಿಸುವುದಕ್ಕೆ ಯಾವ ಅಡ್ಡಿ ಇರಲಿಲ್ಲ. ಹೀಗೆ, ತಂದೆ ಏನು ಕೇಳಿದರೆ ಮಗ ಇಲ್ಲ ಅನ್ನಲಿಲ್ಲ. ಬರುಬರುತ್ತಾ ಆ ಮುದುಕ ಬಹಳ ದೈವಭಕ್ತನಾಗುತ್ತಾ ಬಂದ. 'ಮುಲ್ಲಾ'ಗಳು ಅವನ ಬಳಿಗೆ ಹೋಗಿ ಕೊರಾನು ಓದುವುದಕ್ಕೆ ಅವಕಾಶಮಾಡಿಕೊಡಲಾಯಿತು. ತನಗೆ ಇಷ್ಟ ಬಂದ ಪ್ರಾಣಿಗಳನ್ನು, ಅಂದರೆ ಪಟ್ಟದ ಕುದುರೆ, ವಿಧವಿಧ ಜೇಗೆಗಳು, ಪಳಗಿಸಿದ ಚಿಗರೆಗಳು—ಇವನ್ನು ತನ್ನ ಮುಂದೆ ತರಿಸಿಕೊಂಡು ಅವು ಒಂದರೊಡನೊಂದು ಕಾದುವುದನ್ನು ನೋಡಿ ಸಂತೋಷ ಪಡುವುದಕ್ಕೆ ಅಡ್ಡಿ ಇರಲಿಲ್ಲ. ಒಟ್ಟಿನಲ್ಲಿ ಔರಂಗಜೇಬನು ವಯಸ್ಸಾದ ತಂದೆಯನ್ನು ಮರ್ಯಾದೆಯಿಂದ ನೋಡಿಕೊಂಡನು. ಅಲ್ಲದೆ, ಮಗನು ಈ ಮರ್ಯಾದೆಯ ಸಂಕೇತವಾಗಿ ಹೇರಳವಾದ ಬಹುಮಾನಗಳನ್ನು ಒಪ್ಪಿಸುತ್ತಿದ್ದನು. ರಾಜ್ಯದ ಆಗುಹೋಗುಗಳ ವಿಚಾರಗಳಲ್ಲಿ ತಂದೆಯ ಸಲಹೆಗಳನ್ನು ಕೇಳುತ್ತಿದ್ದನು. ಆಗಾಗ್ಗೆ ಆತ ತಂದೆಗೆ ಬರೆಯುತ್ತಿದ್ದ ಕಾಗದ ಪತ್ರಗಳಲ್ಲಿ ಮಗನು ತೋರಿಸಬೇಕಾದ ಗೌರವಾದರಗಳನ್ನು ವ್ಯಕ್ತಪಡಿಸುತ್ತಿದ್ದನು. ಮಗನ ಈ ಪಿತೃವಾತ್ಸಲ್ಯವನ್ನು ನೋಡಿ ತಂದೆಯ ಮನಸ್ಸು ಸುಪ್ರೀತವಾಯಿತು. ಆತ ತನ್ನ ಬಿಂಕಬಡಿವಾರಗಳನ್ನು ಬಿಟ್ಟು, ಮಗನಿಗೆ ರಾಜ್ಯದ ವಿಚಾರಗಳ ಬಗ್ಗೆ ಪತ್ರ ಬರೆಯುತ್ತಿದ್ದನು. ತನ್ನ ಬಳಿ ಇದ್ದ ದಾರಾನ ಮಗಳನ್ನು ಆತನ ಬಳಿಗೆ ಕಳುಹಿಸಿದನು. ತಾನು ಯಾವ ಮುತ್ತುರತ್ನಗಳನ್ನು ಪುಡಿ

ಮಾಡಿಬಿಡುವೆನೆಂದು ಹೆದರಿಸಿದ್ದನೊ ಅದೇ ಮುತ್ತುರತ್ನಗಳನ್ನು ಮಗನಿಗೆ ಕಳುಹಿಸಿ ಕೊಟ್ಟು, ಅವುಗಳನ್ನು ಒಪ್ಪಿಸಿಕೊಂಡು ತನ್ನ ಮನಸ್ಸಂತೋಷಪಡಿಸಬೇಕೆಂದು ತನ್ನ ವಾತ್ಸಲ್ಯ ತೋರಿಸಿದನು. ದಂಗೆಕೋರನಾದ ಆ ಮಗನಿಗೆ ಹಿಂದೆ ಬೇಡಿಕೊಂಡರೂ ತೋರಿಸದಿದ್ದ ಕ್ಷಮೆಯನ್ನು ಈಗ ನೀಡಿ, ಆತನನ್ನು ಆಶೀರ್ವಾದಪೂರ್ವಕ ಹರಸಿದನು.

ಹೀಗೆ ನಾನು ಹೇಳಿರುವುದರಿಂದ ಔರಂಗಜೇಬ ತಂದೆಗೆ ಶರಣಾಗತನಾದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದ ಎಂದು ಭಾವಿಸಬಾರದು. ಆತ ಬರೆದ ಒಂದು ಕಾಗದವನ್ನು ನಾನು ನೋಡಿದೆ. ಅದರಲ್ಲಿ ಆ ಮುದಿ ಚಕ್ರವರ್ತಿ ಒಮ್ಮೊಮ್ಮೆ ತೋರಿಸುತ್ತಿದ್ದ ದರ್ಪ ಹಾಗೂ ಅಧಿಕಾರದ ವರ್ತನೆಗಳಿಗೆ ರೇಗಿ ಔರಂಗಜೇಬ ದಿಟ್ಟತನದ ಉತ್ತರ ಕೊಟ್ಟಿದ್ದ. ಆತ ಬರೆದ ಒಂದು ಕಾಗದದ ತುಣುಕು ಹೀಗಿದೆ :

"ನಾನು ಹಳೆಯ ಪದ್ಧತಿಗೆ ತಲೆಬಾಗಿ, ನನ್ನಸೇವೆಯಲ್ಲಿ ಸತ್ತವರೆಲ್ಲರ ಆಸ್ತಿ ಪಾಸ್ತಿಗೆ ಹಕ್ಕುದಾರನಾಗುವ ಕ್ರಮವನ್ನು ಕಟ್ಟುನಿಟ್ಟಾಗಿ ಅನುಸರಿಸಬೇಕೆಂದು ನಿಮ್ಮ ಅಭಿಲಾಷೆ ಇದೆ. ಒಬ್ಬ ಅಮೀರನೋ ಅಥವಾ ಶ್ರೀಮಂತ ವರ್ತಕನೋ ಉಸಿರೆಳೆಯು ವುದನ್ನು ನಿಲ್ಲಿಸಿದ ಕೂಡಲೇ, ಕೆಲವು ವೇಳೆ ಇನ್ನೇನು ಸಾಯುತ್ತಾನೆ ಎಂದಾಗಲೇ, ಅವನ ನಗನಾಣ್ಯಗಳ ಪೆಟಾರಿಗಳಿಗೆ ಬೀಗಮುದ್ರೆ ಹಾಕುತ್ತೇವೆ. ಅವನ ಮನೆಯ ಆಳುಕಾಳುಗಳನ್ನು ಮತ್ತು ಮನೆವಾರ್ತೆಗಾರರನ್ನು ಹೊಡೆದು ಬಡಿದು, ಕೆಲವು ವೇಳೆ ಸೆರೆಮನೆಗೂ ಹಾಕುತ್ತೇವೆ. ಸತ್ತವನ ಬಹು ಬೆಲೆಯಾದ ಆಭರಣಗಳು ಎಲ್ಲಿವೆ ಎಂಬುದನ್ನು ಬಾಯಿಬಿಟ್ಟು ಹೇಳದವರನ್ನು ಈ ತರಹ ಚಿತ್ರಹಿಂಸೆಗಳಿಗೆ ಗುರಿಪಡಿಸು ತ್ತೇವೆ. ಈ ಕ್ರಮ ನಮಗೆ ಅನುಕೂಲವೆಂಬುದರಲ್ಲಿ ಸಂದೇಹವಿಲ್ಲ. ಆದರೆ, ಅದರಲ್ಲಿ ಅಡಗಿರುವ ಅನ್ಯಾಯ ಹಾಗೂ ಕ್ರೌರ್ಯಗಳನ್ನು ಅಲ್ಲಗಳೆಯಲು ಸಾಧ್ಯವೆ ? ಪ್ರತಿ ಯೊಬ್ಬ ಅಮೀರನೂ ನೇಕ್ ನೇಮ್ ಖಾನನಂತೆ ನಡೆದುಕೊಂಡರೆ, ಪ್ರತಿಯೊಬ್ಬ ಹೆಂಗಸೂ ಆ 'ಇಂದೂ' ವರ್ತಕನ ವಿಧವೆಯಂತೆ ಆಸ್ತಿಯನ್ನು ಬಚ್ಚಿಟ್ಟುಕೊಂಡರೆ, ಅವರೆಲ್ಲ ನಮಗೆ ಸರಿಯಾದ ಪಾಠ ಕಲಿಸಿದರು ಎಂದು ಹೇಳಬಹುದಲ್ಲವೆ ?

"ನೀವು ನನ್ನನ್ನು ಹಿಯ್ಯಾಳಿಸುವುದು ಬೇಡ. ನನ್ನ ನಡತೆಯ ಬಗ್ಗೆ ನೀವು ತಪ್ಪು ಅಭಿಪ್ರಾಯಕ್ಕೆ ಬರಬಾರದೆಂದೇ ನನ್ನ ಅಭಿಲಾಷೆ. ಹಾಗೆ ತಪ್ಪು ಅಭಿಪ್ರಾಯಕ್ಕೆ ಬಂದರೆ ನಾನದನ್ನು ಸಹಿಸಲಾರೆ. ನಾನು ಸಿಂಹಾಸನವೇರಿರುವ ಕಾರಣ ದುರಹಂಕಾರಿ ಯಾಗಿಬಿಟ್ಟಿದ್ದೇನೆ ಎಂದು ನೀವು ಭಾವಿಸಿದ್ದೀರಿ. ನಿಮ್ಮ ನಲವತ್ತು ವರ್ಷಗಳ ಅನುಭವ ದಿಂದ ನಿಮಗೆ ಗೊತ್ತಾಗಿರಬೇಕು, ಚಕ್ರವರ್ತಿಯ ಕಿರೀಟವೆಂಬ ಆಭರಣ ಎಷ್ಟು ಭಾರೀ ಹೊರೆಯೆಂಬುದು ; ಮತ್ತು ಜನರ ಕಣ್ಣಿನಿಂದ ಮರೆಯಾಗಿ ದೂರವಾದಾಗ ಅವನ ಹೃದಯವೆಷ್ಟು ಯಾತನೆಪಡುತ್ತದೆ ಎಂದು. ನಮ್ಮ ಹೆಸರಾಂತ ಹಿರಿಯನಾದ ಅಕ್ಬರನು ತನ್ನ ಉತ್ತರಾಧಿಕಾರಿಗಳು ರಾಜ್ಯವನ್ನು ಮೃದುವರ್ತನೆ, ವಿವೇಚನೆ ಹಾಗೂ ಬುದ್ಧಿ

ವಂತಿಕೆಗಳಿಂದ ಆಳಲಿ ಎಂದು ತನ್ನ ಅತ್ಯುತ್ತಮವಾದ ಜೀವನ ಚರಿತ್ರೆಯನ್ನು (memoirs) ನಾವು ಓದಲು ಬಿಟ್ಟುಹೋಗಿದ್ದಾನೆ.

"ಮಿರ್ಜಾ ತೈಮೂರ್‌ನಲ್ಲಿ ಇದ್ದಂತಹ ಗುಣವೊಂದನ್ನು ಅಕ್ಬರ ಎತ್ತಿ ತೋರಿಸಿದ್ದಾನೆ. ತೈಮೂರನು ಆಳುತ್ತಿರಬೇಕಾದರೆ, ಒಂದು ದಿನ ಸುಲ್ತಾನ್ ಬೈಯಜಿದ್[1] ಎಂಬುವನನ್ನು ಬಂಧಿಯನ್ನಾಗಿಮಾಡಿ ಆತನ ಮುಂದೆ ತಂದು ನಿಲ್ಲಿಸಿದರು. ತೈಮೂರ ಆ ಬಿಂಕದ ಬಂಧಿಯನ್ನು ದುರುಗುಟ್ಟಿಕೊಂಡು ನೋಡುತ್ತಾ ನಕ್ಕುಬಿಟ್ಟನಂತೆ. ಆ ಒರಟು ವರ್ತನೆಯಿಂದ ರೇಗಿದ ಬೈಯಜಿದ್ ತೈಮೂರನಿಗೆ 'ತಾತ್ಕಾಲಿಕವಾದ ಅದೃಷ್ಟದಿಂದ ಹಿಗ್ಗಬೇಡ. ರಾಜರನ್ನು ಏರಿಸುವವನೂ ಇಳಿಸುವವನೂ ದೇವರೆ. ಈ ದಿನ ಜಯದಿಂದ ಮೆರೆಯುತ್ತಿರುವ ನೀನು ನಾಳೆ ಸೆರೆಮನೆಯಲ್ಲಿರಬಹುದು!' ಎಂದು ಹೇಳಿದನಂತೆ.

"ಅದಕ್ಕೆ ತೈಮೂರನ ಉತ್ತರ ಹೀಗಿತ್ತು: 'ಈ ಇಹಲೋಕದ ಆಸ್ತಿಪಾಸ್ತಿಗಳ ನಶ್ವರತೆ ನನಗೆ ಗೊತ್ತುಂಟು. ಕೆಳಕ್ಕೆ ಬಿದ್ದ ಶತ್ರುವನ್ನು ಹಿಯ್ಯಾಳಿಸುವ ಬುದ್ಧಿಯನ್ನು ದೇವರು ನನಗೆ ಕೊಡದಿರಲೆಂದೇ ಪ್ರಾರ್ಥಿಸುತ್ತೇನೆ. ನಿನ್ನ ಮನನೋಯಿಸಬೇಕೆಂದು ನಾನು ಹಾಗೆ ವರ್ತಿಸಲಿಲ್ಲ. ನಮ್ಮಿಬ್ಬರಲ್ಲಿ ಇರುವ ಸಮಾನತೆಯ ಬಗ್ಗೆ ಚಿಂತಿಸುತ್ತಾ ಚಿಂತಿಸುತ್ತಾ ನಗು ತನ್ನಷ್ಟಕ್ಕೆ ತಾನೇ ಬಂತು; ನಕ್ಕೆ, ಅಷ್ಟೆ. ನೋಡು ಎಂತಹ ವಿಚಿತ್ರ: ನಿನಗೊಂದು ಕಣ್ಣಿಲ್ಲ; ನನಗೊಂದು ಕಾಲಿಲ್ಲ. ಇಂಥವರಿಗೂ ದೇವರು ರಾಜಪದವಿಯನ್ನು ಕೊಡುತ್ತಾನಲ್ಲ! ಈ ಕಿರೀಟದೊಳಗಿನ ಕಿರುಜಾಗದಲ್ಲಿ ಏನಿರಬೇಕು!—ಹೀಗೆಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. ಈ ವೈಚಿತ್ರ್ಯಕ್ಕೆ ನಾನು ನಗದೆ ಮತ್ತೇನು ಮಾಡಲಿ ಹೇಳು?'

"ಈಗ ಇರುವಷ್ಟು ರಾಜ್ಯದ ಭದ್ರತೆಗೆ ಹಾಗೂ ರಕ್ಷಣೆಗೆ ಕಾಲ ಹಾಗೂ ಗಮನವನ್ನು ವೆಚ್ಚಮಾಡುವ ಬದಲು, ಹೊಸ ಪ್ರದೇಶಗಳನ್ನು ಗೆಲ್ಲುವ ಕಡೆಗೆ ಗಮನಕೊಡಬೇಕೆಂದು ನಿಮ್ಮ ಅಭಿಪ್ರಾಯವಿದ್ದಂತೆ ಕಾಣುತ್ತದೆ. ಒಬ್ಬ ಚಕ್ರವರ್ತಿ ತನ್ನ ಆಳ್ವಿಕೆಯಲ್ಲಿ ಹೊಸ ಪ್ರದೇಶಗಳನ್ನು ಗೆದ್ದು ಹೆಸರು ಗಳಿಸಬೇಕಾದದ್ದು ಆತನ ಮುಖ್ಯ ಉದ್ದೇಶಗಳಲ್ಲಿ ಒಂದು, ನಿಜ. ಹಾಗೆ ಮಾಡದೆಹೋದರೆ ನಮ್ಮ ಪೂರ್ವಜನಾದ ಆ ಹೆಸರಾಂತ ತೈಮೂರನ ಸಂತತಿಗೆ ಕೆಟ್ಟ ಹೆಸರು ತಂದಂತಾಗುವುದು. ಆದರೆ ನಾನು ಹಾಗೆ ಮಾಡದಿರುವುದಕ್ಕೆ ಕಾರಣಗಳುಂಟು. ನಮ್ಮ ಸೈನ್ಯಗಳು ಡೆಕನ್ ಮತ್ತು ಬಂಗಾಳಗಳಲ್ಲಿ ಕಾರ್ಯನಿರತ

---

[1] ಸುಲ್ತಾನ್ ಬೈಯಜಿದ್: ಈತ ತುರ್ಕಿಯ ಪ್ರಸಿದ್ಧ ಸುಲ್ತಾನ. ೧೪೦೨ರಲ್ಲಿ ಸೆರೆಹಿಡಿಯಲ್ಪಟ್ಟ ಇವನನ್ನು ತೈಮೂರಲಂಗನು ಕಬ್ಬಿಣದ ಬೋನಿನಲ್ಲಿ ಕೂಡಿಹಾಕಿಸಿ, ತಾನು ಹೋದ ಕಡೆಗಳಲ್ಲೆಲ್ಲ ಆ ಬೋನನ್ನು ತೆಗೆಸಿಕೊಂಡು ಹೋಗುತ್ತಿದ್ದ. ಈ ಬಂಧನವನ್ನು ಸಹಿಸಲಾರದೆ ಈತ ಒಂದು ವರ್ಷದ ತರುವಾಯ ಸತ್ತುಹೋದ.

ವಾಗಿವೆ. ಇದನ್ನು ನೀವು ಸೋಮಾರಿತನ ಎಂದು ಹೇಳಲಾರರಿ ಎಂದು ಭಾವಿಸಿದ್ದೇನೆ. ಅಲ್ಲದೆ, ಹೊಸ ರಾಜ್ಯಗಳನ್ನು ಗೆದ್ದು ಪ್ರಸಿದ್ಧರಾದವರು ಮಹಾರಾಜರಾಗಿರಲಿಲ್ಲ ಎಂಬುದನ್ನು ನೀವು ಜ್ಞಾಪಕಮಾಡಿಕೊಳ್ಳಿ. ಅನೇಕ ವೇಳೆ ಕೇವಲ ಅನಾಗರಿಕ ರಾಜರುಗಳು ಈ ಪೃಥ್ವಿಯ ರಾಷ್ಟ್ರಗಳನ್ನು ಆಳಿದ್ದು ಗೊತ್ತಿಡೆಯಷ್ಟೆ! ಆಕ್ರಮಿಸಲ್ಪಟ್ಟ ಬಹು ವಿಶಾಲವಾದ ಪ್ರದೇಶಗಳು ಕೆಲವೇ ವರ್ಷಗಳಲ್ಲಿ ಕೈಬಿಟ್ಟುಹೋದುದೂ ನಿಮಗೆ ತಿಳಿದಿದೆಯಷ್ಟೆ. ನ್ಯಾಯ ನೀತಿಗಳಿಂದ ರಾಜ್ಯವನ್ನಾಳುವ ದೊರೆಯೇ ನಿಜವಾದ ದೊರೆ."

ಪತ್ರದ ಉಳಿದ ಭಾಗ ನನ್ನ ಕೈಗೆ ಸಿಕ್ಕಲಿಲ್ಲ. ಈಗ ಆ ಪ್ರಸಿದ್ಧ ಅಮೀರ್ ಜುಮ್ಲಾನ ಬಗ್ಗೆ ನಾಲ್ಕು ಮಾತು. ಬಂಗಾಳವನ್ನು ತನ್ನ ಸ್ವಾಧೀನಮಾಡಿಕೊಳ್ಳುವಾಗ ಮೀರ್ ಜುಮ್ಲಾನು ಗಿಯಾನ್‌ಖಾನನು ದಾರಾನ ಬಗ್ಗೆಯಾಗಲಿ ಅಥವಾ ಶ್ರೀನಗರದ ರಾಜನು ಸುಲ್ತಾನ್ ಷೆಕೋನ ಬಗ್ಗೆಯಾಗಲಿ ತೋರಿಸಿದ ಕ್ರೌರ್ಯ ಹಾಗೂ ದ್ರೋಹ ವರ್ತನೆಗಳನ್ನು ಸುಲ್ತಾನ್ ಸೂಜನ ಬಗ್ಗೆ ತೋರಿಸಲಿಲ್ಲ. ಒಬ್ಬ ಚತುರ ಸೇನಾಪತಿ ಹೇಗೆ ವರ್ತಿಸಬೇಕೋ ಹಾಗೆ ವರ್ತಿಸಿ, ಬಂಗಾಳ ದೇಶವನ್ನು ತನ್ನ ವಶಮಾಡಿಕೊಂಡ. ಸೂಜನನ್ನು ಸಲ್ಲದ ಚಿತ್ರಹಿಂಸೆಗಳಿಗೆ ಗುರಿಮಾಡದೆ, ಆತನನ್ನು ಸಮುದ್ರದ ಕಡೆಗೆ ಅಟ್ಟಿ ರಾಜ್ಯದಿಂದ ಓಡಿಹೋಗುವಂತಷ್ಟೆ ಮಾಡಿದ. ಇಷ್ಟು ಮಾಡಿ, ತನ್ನ ಹೆಂಡತಿ ಮಕ್ಕಳನ್ನು ಬಂಗಾಳಕ್ಕೆ ಕರೆಸಿಕೊಳ್ಳುವುದಕ್ಕೆ ಔರಂಗಜೇಬನ ಅನುಮತಿ ಕೇಳಿದ. ಆತನಿಗೆ ಪತ್ರ ಬರೆದು ಅದನ್ನು ಒಬ್ಬ ಖೋಜಾನ ಕೈಯಲ್ಲಿ ಕೊಟ್ಟು ಕಳುಹಿಸಿದ. ತನ್ನ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬರುವಂತೆ ಆತನಿಗೆ ಹೇಳಿರುವುದಾಗಿ ಅದರಲ್ಲಿ ಬರೆದಿದ್ದ. "ಸಧ್ಯ ಯುದ್ಧವು ಸಮಾಪ್ತಿಯಾದಂತಾಯಿತು. ವಯಸ್ಸಿನ ಕಾರಣ ನನ್ನ ಶಕ್ತಿ ಕುಂದಿದೆ. ನನ್ನ ಉಳಿದ ಕಾಲವನ್ನು ಹೆಂಡತಿ ಮಕ್ಕಳೊಡನೆ ಕಳೆಯಲು ನಿಮ್ಮ ಆಕ್ಷೇಪಣೆ ಇಲ್ಲವೆಂದು ನಾನು ಭಾವಿಸಿದ್ದೇನೆ"—ಹೀಗಿತ್ತು ಮೀರ್ ಜುಮ್ಲಾನ ಒಕ್ಕಣೆ.

ಆದರೆ ಔರಂಗಜೇಬ ಆ ಚಾಣಾಕ್ಯ ರಾಜತಂತ್ರಜ್ಞನ ಮನಸ್ಸಿನಲ್ಲಿ ಏನಿದೆಯೆಂದು ತಿಳಿಯಲು ಶಕ್ತನಾಗಿದ್ದ. 'ಮೀರ್ ಜುಮ್ಲಾನ ಮಗ ಮಹಮದ್ ಅಮೀರ್‌ಖಾನ ಬಂಗಾಳಕ್ಕೆ ಹೋದರೆ, ತನಗೆ ಬಂಗಾಳ ರಾಜ್ಯದ ಮೇಲೆ ಸಂಪೂರ್ಣ ಸ್ವಾಮ್ಯಬೇಕೆಂದು ಕೇಳುತ್ತಾನೆ. ಅಷ್ಟರಿಂದಲೆ ಆತ ತೃಪ್ತನಾಗುತ್ತಾನೆಂದು ಹೇಳುವುದಕ್ಕೆ ಬರುವುದಿಲ್ಲ. ಮೀರ್ ಜುಮ್ಲಾ ಸಾಮಾನ್ಯನಲ್ಲ. ಆತನಲ್ಲಿ ಮಣ್ಣುಗ್ಗುವ ಧೈರ್ಯವುಂಟು, ಬುದ್ಧಿಯುಂಟು, ಸಾಹಸವುಂಟು, ಮೇಲಾಗಿ ಶ್ರೀಮಂತಿಕೆಯೂ ಉಂಟು. ಅವನು ವಿಜಯಗಳಿಸಿದ ಸೇನಾಪತಿಯೂ ಆಗಿದ್ದಾನೆ. ಅವನ ಸೈನಿಕರು ಆತನನ್ನು ಭೀತಿ ಮತ್ತು ಪ್ರೀತಿಗಳೆರಡರಿಂದಲೂ ಕಾಣುತ್ತಾರೆ. ಹಿಂದುಸ್ಥಾನದಲ್ಲೇ ಬಹು ಫಲವತ್ತಾದ ಪ್ರಾಂತ ಅವನ ಕೈಯಲ್ಲಿದೆ. ಗೋಲ್ಕೊಂಡಾದ ಪ್ರಸಂಗದಲ್ಲಿ ತಾನು ಎಷ್ಟು ಕಾತುರ ಸ್ವಭಾವದವನು ಹಾಗೂ ಧೈರ್ಯಶಾಲಿ ಎಂಬುದನ್ನು ತೋರಿಸಿಕೊಟ್ಟಿದ್ದಾನೆ. ಹೀಗಿರುವಾಗ ಆತನ ಹೆಂಡತಿ ಮಕ್ಕಳನ್ನು ಕಳುಹಿಸುವುದು ಸೂಕ್ತವೆ? ಸೂಕ್ತವಲ್ಲ. ಆದರೆ

ಕಳುಹಿಸದೆ ಹೋದರೂ ಅಪಾಯ ಉಂಟು–ಹೀಗೆಂದು' ಔರಂಗಜೇಬ ತನ್ನ ಚಾಕ ಚಕ್ಯತೆಯನ್ನು ಉಪಯೋಗಿಸಿದ. ಮೀರ್ ಜುಮ್ಲಾನ ಹೆಂಡತಿ, ಮಗಳು ಮತ್ತು ಮಗನ ಮಕ್ಕಳನ್ನು ಮಾತ್ರ ಕಳುಹಿಸಿಕೊಟ್ಟನು. ಅಲ್ಲದೆ, ತನ್ನ ಚಕ್ರಾಧಿಪತ್ಯದಲ್ಲಿ ಸಲ್ಲಿಸಬಹುದಾದ ಅತ್ಯಂತ ದೊಡ್ಡ ಬಿರುದನ್ನು, ಎಂದರೆ 'ಅಮೀರ್–ಉಲ್-ಎಮಿರಾ' ಎಂಬ ಬಿರುದನ್ನು, ಕೊಟ್ಟು ಗೌರವಿಸಿದನು. ಆತನ ಮಗ ಮಹಮ್ಮದ್ ಅಮೀರ್ ಖಾನನನ್ನು ರಾಜ್ಯದ ಮಹಾಭಕ್ಷಿಯಾಗಿ (ಮೀರ್ ಭಕ್ಷಿ–ಪ್ರಧಾನ ದಂಡನಾಯಕ) ನೇಮಿಸಿದನು. ಇಷ್ಟೆಲ್ಲಾ ಮಾಡಿ, ಬಂಗಾಳದ ಸುಬೇದಾರಿಕೆಯನ್ನು (ಗೌರ್ನರ್ ಪದವಿಯನ್ನು) ಖಾಯಂ ಆಗಿ ಮೀರ್ ಜುಮ್ಲಾನಿಗೆ ಒಪ್ಪಿಸಿದನು.

ತನ್ನ ಉದ್ದೇಶ ಸಾರ್ಥಕವಾಗದಿದ್ದುದನ್ನು ಕಂಡ ಮೀರ್ ಜುಮ್ಲಾ, ತನ್ನ ಮಗನ ಬಗ್ಗೆ ಬೇರೊಂದು ಬೇಡಿಕೆ ಸಲ್ಲಿಸುವ ಗೋಜಿಗೆ ಹೋಗದೆ, ತನಗೆ ಮಾಡಿದ ಉಪಕಾರಕ್ಕಾಗಿ ಔರಂಗಜೇಬನಿಗೆ ಕೃತಜ್ಞತೆಗಳನ್ನು ಅರ್ಪಿಸಿ ತೆಪ್ಪಗಾದ.

ಹೀಗೆ ಒಂದು ವರ್ಷ ಕಳೆಯಿತು. ಮಹತ್ವಾಕಾಂಕ್ಷೆಗಳನ್ನು ಹೊಂದಿದ ಯೋಧನನ್ನು ತೆಪ್ಪಗೆ ಕೂಡುವಂತೆ ಮಾಡಿದರೆ ಆತ ಇದ್ದಲ್ಲಿಯೇ ಗಲಾಟೆ ಎಬ್ಬಿಸಲು ಸಾಧ್ಯವೆಂದು ಭಾವಿಸಿದ ಔರಂಗಜೇಬ, ಮೀರ್ ಜುಮ್ಲಾನನ್ನು ಅಸ್ಸಾಂ ರಾಜನ ಮೇಲೆ ದಂಡೆತ್ತಿ ಹೋಗುವಂತೆ ಮಾಡಿದ. ಅಸ್ಸಾಂ ರಾಜ್ಯ ಬಹು ಶ್ರೀಮಂತವಾದ ರಾಜ್ಯವಾಗಿತ್ತು; ಅಷ್ಟೇ ಶಕ್ತಿಯುತವೂ ಆಗಿತ್ತು. ಮೀರ್ ಜುಮ್ಲಾನು ಅದನ್ನೇ ಆಲೋಚಿಸುತ್ತಿದ್ದ. ಅಸ್ಸಾಂ ರಾಜ್ಯವನ್ನು ಗೆದ್ದು, ಮೊಗಲ್ ಸಾಮ್ರಾಜ್ಯವನ್ನು ಚೀನಾದ ಗಡಿಯವರೆಗೆ ವಿಸ್ತರಿಸಿ, ಶಾಶ್ವತ ಕೀರ್ತಿಯನ್ನು ಗಳಿಸಬೇಕೆಂದು ಹಾರೈಸುತ್ತಿದ್ದ.

ದಂಡಯಾತ್ರೆಗೆ ಭಾರಿ ಸೈನ್ಯವೊಂದು ಸಿದ್ಧವಾಯಿತು. ಅದು ಡಾಕ್ಕಾದಿಂದ[1] ನದಿಯ ಮೇಲೆ ಹೊರಟು, ನೂರು ಹರಿದಾರಿ ದೂರದಲ್ಲಿರುವ ಅಜೋ ಎಂಬ ಸ್ಥಳ ತಲುಪಿತು. ಈ ಸ್ಥಳ ಮೊದಲಿಗೆ ಬಂಗಾಳ ರಾಜ್ಯಕ್ಕೆ ಸೇರಿತ್ತು. ಇದನ್ನು ಅಸ್ಸಾಂ ರಾಜ ಕಸಿದುಕೊಂಡಿದ್ದ. ಆ ಊರಿನಿಂದ ಮತ್ತೆ ಇಪ್ಪತ್ತೆಂಟು ದಿನಗಳು ಪ್ರಯಾಣಮಾಡಿ, ಮೀರ್ ಜುಮ್ಲಾ ತನ್ನ ಸೇನೆಯ ಸಮೇತ ಚಮ್‌ದಾರಾ ಎಂಬ ಸ್ಥಳವನ್ನು ಮುಟ್ಟಿದ. ಅಲ್ಲಿ ಭಾರೀ ಯುದ್ಧ ಆಯಿತು. ಯುದ್ಧದಲ್ಲಿ ಅಸ್ಸಾಂ ರಾಜ ಹಿಮ್ಮೆಟ್ಟಿ ಗೌರ್‌ಗಾಂ ಎಂಬ ತನ್ನ ರಾಜಧಾನಿಗೆ ಹಿಂದಿರುಗಿದ. ಆದರೆ ಮೀರ್ ಜುಮ್ಲಾ ಮತ್ತೆ ಅವನ ಬೆನ್ನು ಹತ್ತಿದ. ಅಸ್ಸಾಂ ರಾಜ ಇನ್ನೂ ಒಳನಾಡಿಗೆ ಸರಿದು, ಲಾಸ್ಸಾ ರಾಜ್ಯದ ಪರ್ವತಗಳಲ್ಲಿ ಸೇರಿಕೊಂಡ. ಚಮ್‌ದಾರಾ ಮತ್ತು ಗೌರ್‌ಗಾಂ ಮೀರ್ ಜುಮ್ಲಾನ ಕೊಳ್ಳೆಗೆ ಒಳಗಾ

---

1. ಡಾಕ್ಕಾವನ್ನು ಮೀರ್ ಜುಮ್ಲಾ ೧೬೫೭ ರಿಂದ ಬಂಗಾಳ ಪ್ರಾಂತದ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ. ಇಲ್ಲಿ ಬೆರ್ನ್ಯೇ ಹೇಳಿರುವ ದಂಡಯಾತ್ರೆ ಆರಂಭವಾಯಿತು. ಅದು ನಡೆದದ್ದು ೧೬೬೧ ರಲ್ಲಿ.

ದುವು. ಬೇಕಾದಷ್ಟು ಸಿಕ್ಕಿತು. ಗೌರ್‌ಗಾಂ ದೊಡ್ಡ ನಗರವಾಗಿದ್ದು ಒಳ್ಳೆ ವ್ಯಾಪಾರಕ್ಕೂ ಸುಂದರ ಸ್ತ್ರೀಯರಿಗೂ ಹೆಸರಾಗಿತ್ತು.

ಮೀರ್ ಜುಮ್ಲಾ ಅಸಾಂ ರಾಜನನ್ನು ಇನ್ನೂ ಮುಂದೆ ಅಟ್ಟಿಸಿಕೊಂಡು ಹೋಗುವುದಕ್ಕೆ ಮಳೆಗಾಲ ಅಡ್ಡಿಬಂದಿತು. ಅದು ಎಂದಿಗಿಂತ ಮೊದಲೇ ಆರಂಭ ವಾಯಿತು. ಆ ಪ್ರದೇಶದಲ್ಲಿ ಮಳೆಯೆಂದರೆ ಸಾಮಾನ್ಯವಾದುದಲ್ಲ. ಎಲ್ಲೆಲ್ಲೂ ಪ್ರವಾಹ. ಎತ್ತರದಲ್ಲಿರುವ ಊರುಗಳನ್ನು ಬಿಟ್ಟರೆ ಎಲ್ಲಾ ಕಡೆಯೂ ನೀರು ನೆಲವನ್ನೆಲ್ಲಾ ಆವರಿಸುತ್ತದೆ. ಮಳೆಗಾಲದ ಅವಕಾಶವನ್ನು ಪಡೆದುಕೊಂಡು ಅಸ್ಸಾಂ ರಾಜ ಮೀರ್ ಜುಮ್ಲಾ ಆಕ್ರಮಿಸಿಕೊಂಡಿದ್ದ ಸ್ಥಳಗಳ ಸುತ್ತುಮುತ್ತಣ ಪ್ರದೇಶದಲ್ಲಿದ್ದ ದನಗಳನ್ನೂ ದವಸಧಾನ್ಯಗಳನ್ನೂ ಬೇರೆ ಕಡೆ ಸಾಗಿಸುವ ಏರ್ಪಾಡುಮಾಡಿದ. ಮೀರ್ ಜುಮ್ಲಾ ಬೇಕಾದಷ್ಟು ಸಿರಿಯನ್ನು ಹಾಗೂ ವಸ್ತುಗಳನ್ನು ಕೊಳ್ಳೆಹೊಡೆದು ಇಟ್ಟುಕೊಂಡಿದ್ದರೂ, ಮುಂದೆ ಹೋಗುವುದಕ್ಕಾಗಲಿ ಹಿಂದೆ ಸರಿಯುವುದಕ್ಕಾಗಲಿ ತೊಂದರೆಯಾಯಿತು. ಮುಂದೆ ಗೋಡೆ ಹಾಕಿದಂತಿದ್ದ ಪರ್ವತಗಳು. ಹಿಂದೆ ಜಲ ಹಾಗೂ ಕಾಲು ಹೂಳಿಕೊಳ್ಳುವ ಕೆಸರು. ಇಷ್ಟಲ್ಲದೆ ಚವ್‌ದಾರಾಕ್ಕೆ ಹೋಗುವ ದಾರಿ ಯಲ್ಲಿ ನದಿಗಳ ಅಡ್ಡಲಾಗಿದ್ದ ತೂಗುಸೇತುವೆಗಳನ್ನು ಅಸ್ಸಾಂ ರಾಜ ಕಡಿದುಹಾಕಿಸಿದ್ದ. ಹೀಗಾಗಿ, ಇಡೀ ಮಳೆಗಾಲವನ್ನು ಮೀರ್ ಜುಮ್ಲಾ ತನ್ನ ಬಿಡಾರದಲ್ಲಿಯೇ ಕಳೆಯ ಬೇಕಾಯಿತು. ಮಳೆ ನಿಂತಮೇಲೆ ತೀರ ನಿತ್ರಾಣಗೊಂಡಿದ್ದ ಸೈನಿಕರಿಗೆ ಉತ್ಸಾಹ ವೆಂಬುದೇ ಇರಲಿಲ್ಲ. ಈ ಕಾರಣ ಜುಮ್ಲಾ ಮುಂದೆ ಸಾಗಿ ಅಸ್ಸಾಂ ಗೆಲ್ಲುವ ಆಸೆಯನ್ನು ತ್ಯಜಿಸಿಬಿಟ್ಟ. ಆದರೆ ಹಿಂದಿರುಗುವುದು ಸಾಧ್ಯವಿರಲಿಲ್ಲ. ಸಾಮಾನ್ಯ ಸೇನಾಪತಿಗೆ ಆ ಸೈನ್ಯವನ್ನು ವಾಪಸು ಬಂಗಾಳಕ್ಕೆ ತೆಗೆದುಕೊಂಡು ಹೋಗುವುದು ಸುಲಭವಾಗಿರಲಿಲ್ಲ. ಏಕೆಂದರೆ, ಅನ್ನ ಆಹಾರಗಳಿಗೆ ತುಂಬಾ ಕಷ್ಟವಿತ್ತು. ಕೆಸರಿನಲ್ಲಿ ಕಾಲಿಡುವುದು ಬಹಳ ಪ್ರಯಾಸವಿತ್ತು. ಇಷ್ಟರ ಮೇಲೆ ಅಸ್ಸಾಂ ರಾಜ ಅವರ ಬೆನ್ನಟ್ಟಿಕೊಂಡು ಬರುತ್ತಿದ್ದ. ಆದರೂ ಮೀರ್ ಜುಮ್ಲಾ ತನ್ನ ಚಾಕಚಕ್ಯತೆಯನ್ನು ಉಪಯೋಗಿಸಿ, ಸೈನ್ಯವನ್ನು ಸಾಗಿಸಿಕೊಂಡು, ಜೊತೆಗೆ ಅಪಾರ ಐಶ್ವರ್ಯವನ್ನು ಹೇರಿಕೊಂಡು ಬಂಗಾಳಕ್ಕೆ ಹಿಂದಿರುಗಿದ.

ಅಜೋ ಕೋಟೆಯಲ್ಲಿದ್ದಾಗ ಮೀರ್ ಜುಮ್ಲಾ ಅದನ್ನು ಮತ್ತಷ್ಟು ಬಲಪಡಿಸಿ ಅಲ್ಲಿ ಸೈನ್ಯದ ತುಕುಡಿಯೊಂದನ್ನು ಇಟ್ಟು, ಮಾರನೆಯ ವರ್ಷ ಅಸ್ಸಾಂ ಮೇಲೆ ಧಾಳಿ ಮಾಡುವ ಆಲೋಚನೆ ಇಟ್ಟುಕೊಂಡ. ಆದರೆ ವಯಸ್ಸಿನಿಂದ ಸೋತ ಶರೀರ ಎಷ್ಟು ದಿನ ತಾನೆ ಯುದ್ಧದ ಶ್ರಮವನ್ನು ಸಹಿಸೀತು. ಅವನಾಗಲಿ ಅವನ ಸೈನಿಕರಾಗಲಿ ಕಂಚಿನ ಶರೀರದವರೇನು ! ಬಂಗಾಳಕ್ಕೆ ಹಿಂದಿರುಗಿದ ಸ್ವಲ್ಪ ದಿವಸಗಳಲ್ಲಿಯೇ ಸೈನ್ಯದಲ್ಲಿ ರಕ್ತಬೇಧಿ ಕಾಣಿಸಿಕೊಂಡಿತು. ಹೆಸರಾಂತ ಮೀರ್ ಜುಮ್ಲಾ ಮೃತ್ಯುವಿಗೆ ತುತ್ತಾದ.

ನಿರೀಕ್ಷಿಸಿದ್ದಂತೆ ಮೀರ್ ಜುಮ್ಲಾನ ಸಾವು ಇಂಡೀಸಿನಲ್ಲಿ ಅಲ್ಲೋಲಕಲ್ಲೋಲ

ವನ್ನುಂಟುಮಾಡಿತು. 'ಈಗಲೀಗ ಔರಂಗಜೇಬ ಬಂಗಾಳದ ರಾಜನಾದ' ಎಂದು ತಿಳಿದವರು ಅಂದುಕೊಂಡರು. ಔರಂಗಜೇಬ ಮೀರ್ ಜುಮ್ಲಾ ತನಗೆ ಮಾಡಿದ ಉಪಕಾರಕ್ಕಾಗಿ ಕೃತಜ್ಞತೆಯನ್ನು ತೋರಿಸಲಾರದಷ್ಟು ಹೇಯಬುದ್ಧಿಯವನಲ್ಲದಿದ್ದರೂ, ತನ್ನನ್ನು ಬುದ್ಧಿಶಕ್ತಿಯಲ್ಲಿಯೂ ಸ್ಥಾನಮಾನದಲ್ಲಿಯೂ ಮೀರಿಸುತ್ತ ತನಗೆ ತಲೆನೋವಾಗಿದ್ದ ಆತನನ್ನು ಕಳೆದುಕೊಂಡುದಕ್ಕೆ ಅಷ್ಟೇನು ವ್ಯಸನಪಡಲಿಲ್ಲವೆಂದೇ ಹೇಳಬೇಕು. ಬಹಿರಂಗವಾಗಿ ಜುಮ್ಲಾನ ಮಗ ಅಮೀರ್ ಖಾನನಿಗೆ ಹೇಳಿದ: 'ನೀನು ನಿನ್ನ ಪ್ರೀತಿಯ ತಂದೆ ಸತ್ತನೆಂದು ಮರುಗುತ್ತೀಯೆ. ಆದರೆ ನಾನು ನನ್ನ ಸ್ನೇಹಿತರಲ್ಲಿ ಅತ್ಯಂತ ಶಕ್ತಿವಂತನೂ ಅತ್ಯಂತ ಅಪಾಯಕಾರಕನೂ ಆದವನು ಸತ್ತನೆಂದು ಮರುಗುತ್ತಿದ್ದೇನೆ !'

ಈ ರೀತಿಯ ಭಾವನೆ ಆತನ ಮನಸ್ಸಿನಲ್ಲಿದ್ದರೂ ಆತ ಮೀರ್ ಜುಮ್ಲಾನ ಮಗನನ್ನು ಪ್ರೀತಿ ವಿಶ್ವಾಸದಿಂದಲೂ ಉದಾರತೆಯಿಂದಲೂ ನೋಡಿಕೊಂಡನು. ತನ್ನನ್ನು ಎರಡನೆಯ ತಂದೆಯಂತೆ ಭಾವಿಸಬೇಕೆಂದು ಹೇಳಿದನು. ಮೀರ್ ಜುಮ್ಲಾನ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬದಲು, ಅಥವಾ ಮಗನ ಸಂಬಳವನ್ನು ಕಡಿಮೆಮಾಡುವ ಬದಲು, ಔರಂಗಜೇಬ ಆತನನ್ನು ಭಕ್ಷಿ ಕೆಲಸದಲ್ಲಿ ಖಾಯಂಮಾಡಿದನು ; ಅವನ ಸಂಬಳವನ್ನು ತಿಂಗಳಿಗೆ ಸಾವಿರ ರೂಪಾಯಿಗಳಷ್ಟು ಹೆಚ್ಚು ಮಾಡಿದನು. ಮತ್ತು ಜುಮ್ಲಾನ ಆಸ್ತಿಗೆ ಅವನನ್ನು ಏಕೈಕ ಉತ್ತರಾಧಿಕಾರಿಯನ್ನಾಗಿ ಮಾಡಿದನು.

ಈಗ ಔರಂಗಜೇಬನ ಕಕ್ಕ ಷೈಸ್ತಾಖಾನನ ವಿಚಾರ. ಈತ ತನ್ನ ವಾಗ್ವೈಖರಿಯಿಂದ ಹಾಗೂ ಒಳತಂತ್ರಗಳಿಂದ ಔರಂಗಜೇಬನ ಉನ್ನತಿಗೆ ಬಹುಮಟ್ಟಿಗೆ ಕಾರಣನಾಗಿದ್ದ. ಈತನನ್ನು ಆಗ್ರಾದ ಸುಬೇದಾರನನ್ನಾಗಿ ನೇಮಿಸಿದ ವಿಚಾರವನ್ನು ಆಗಲೇ ಹೇಳಿದ್ದೇನೆ. ಆಮೇಲೆ ಈತನನ್ನು ಡೆಕನ್ನಿನ ಸುಬೇದಾರನನ್ನಾಗಿಯೂ ಸೇನೆಯ ದಂಡನಾಯಕನನ್ನಾಗಿಯೂ ನೇಮಿಸಿದ. ಮೀರ್ ಜುಮ್ಲಾ ತೀರಿಕೊಂಡ ಮೇಲೆ ಅವನ ಜಾಗದಲ್ಲಿ ಬಂಗಾಳಕ್ಕೆ ವರ್ಗಾಯಿಸಿದನು. ಅಷ್ಟೇ ಅಲ್ಲದೆ, ಆ ರಾಜ್ಯದ ಸೇನೆಯ ದಂಡನಾಯಕನನ್ನಾಗಿ ನೇಮಿಸಿ, ಮೀರ್ ಜುಮ್ಲಾನ ಮರಣದಿಂದ ಖಾಲಿಯಾದ 'ಮೀರ್–ಉಲ್–ಉಮರಾ' ಎಂಬ ಬಿರುದನ್ನು ಇತ್ತನು.

ಷೈಸ್ತಾಖಾನ ಬಂಗಾಳದ ಸುಬೇದಾರನಾದ ಮೇಲೆ ಮಾಡಿದ ಮಹತ್ಕಾರ್ಯವೆಂದರೆ, ಅರಕಾನ್ ದೇಶದ ಮೇಲಣ ದಂಡಯಾತ್ರೆ. ಅರಕಾನಿನಲ್ಲಿ ಅನೇಕ ವರ್ಷಗಳಿಂದ್ತ ಅಸಂಖ್ಯಾತ ಜನ ಹುಟ್ಟು ಪೋರ್ಚುಗೀಸರೂ ಬೆರಕೆ ಪೋರ್ಚುಗೀಸರೂ ಕ್ರೈಸ್ತ ಗುಲಾಮರೂ ಪ್ರಪಂಚದ ನಾನಾ ಕಡೆಗಳಿಂದ ಬಂದ ಫರಂಗಿಯವರೂ ಸೇರಿಕೊಂಡಿದ್ದರು. ಗೋವಾ, ಸಿಲೋನ್, ಮಲೆಕ್ಕಾ, ಕೊಚಿನ್ ಮುಂತಾದ ಕಡೆಗಳಿಂದ ಓಡಿಬಂದವರೆಲ್ಲ ಇಲ್ಲಿ ವಾಸಮಾಡಿಕೊಂಡಿದ್ದರು. ಕ್ರೈಸ್ತ ಮತವನ್ನು ಬಿಟ್ಟೋಡಿ ಬಂದವರಿಗೆ, ಇಬ್ಬರು ಮೂವರು ಹೆಂಡತಿಯರನ್ನು ಕಟ್ಟಿಕೊಂಡವರಿಗೆ, ಅಥವಾ ಮತ್ಯಾವುದಾದರೂ ಮಹಾಸ

ರಾಧ ಮಾಡಿದ ಲಫಂಗರಿಗೆ ಇಲ್ಲಿ ಆಶ್ರಯ ದೊರೆಯುತ್ತಿತ್ತು. ಹೆಸರಿಗೆ ಮಾತ್ರ ಇವರು ಕ್ರೈಸ್ತರು. ನಡೆತೆಯಲ್ಲಿ ಅತಿ ಹೊಲಸಿನ ಕೆಲಸಮಾಡುತ್ತಿದ್ದರು. ವಿಷ ಕೊಟ್ಟು ಸಾಯಿಸುತ್ತಿದ್ದರು. ಕ್ರೈಸ್ತಗುರುಗಳನ್ನೇ ಕೊಂದುಹಾಕುತ್ತಿದ್ದರು. ಆ ಕ್ರೈಸ್ತ ಗುರುಗಳೋ ಈ ಲಫಂಗರಿಗಿಂತ ಒಂದು ಕೈ ಮೇಲಾಗಿದ್ದರು.

ಯಾವಾಗಲೂ ಮೊಗಲನ ಭಯವಿದ್ದ ಅರಕಾನ್ ರಾಜ ಈ ವಿದೇಶೀಯರಿಗೆ ಆಶ್ರಯಕೊಟ್ಟು, ಅವರನ್ನು ತನ್ನ ಗಡಿಯ ರಕ್ಷಣೆಗಾಗಿ ಇಟ್ಟುಕೊಂಡಿದ್ದ. ಚಿಟಗಾಂಗ್ ನಲ್ಲಿ ಇವರನ್ನು ನೆಲೆಯೂರಿಸಿ, ಇವರಿಗೆ ಭೂಮಿ ಕಾಣಿಗಳನ್ನು ಕೊಟ್ಟಿದ್ದ. ಸರಕಾರದ ಭಯ ಭೀತಿಗಳಿಲ್ಲದ ಈ ಜನ ಸ್ತ್ರೀಯರ ಮಾನಭಂಗ ಹಾಗೂ ದರೋಡೆಗಳಲ್ಲದೆ ಬೇರೆ ಕಸಬನ್ನೇನೂ ಮಾಡುತ್ತಿರಲಿಲ್ಲ. ಈ ಕ್ರೂರಿಗಳು 'ಗ್ಯಾಲೀಸ್' ಎಂಬ ಸಣ್ಣ ಹಡಗು ಗಳಲ್ಲಿ ಕುಳಿತು, ಗಂಗಾನದಿ ಮತ್ತು ಅದರ ಸಹಸ್ರಾರು ಶಾಖೋಪಶಾಖೆಗಳಲ್ಲಿ ಅಡ್ಡಾಡಿ ಕೆಳ ಬಂಗಾಳವನ್ನು ಸೂರೆಮಾಡುತ್ತಿದ್ದರು. ನಲವತ್ತು ಐವತ್ತು ಹರಿದಾರಿಗಳಷ್ಟು ದೂರ ನದಿಯ ಮೇಲೆ ಸಾಗಿ, ಏಕಾಏಕಿ ಜನರ ಮೇಲೆ ಬಿದ್ದು, ಊರಿನ ಜನರನ್ನೆಲ್ಲಾ ಹಿಡಿದು ಮಾರುಕಟ್ಟೆಗೆ ಸಾಗಿಸುತ್ತಿದ್ದರು. ಇಲ್ಲವೆ, ಜನರು ಯಾವುದಾದರೂ ಮದುವೆ ಮುಂಜಿಗೋ, ಹಬ್ಬ ಹರಿದಿನಗಳಿಗೋ ಸೇರಿದ್ದರೆ ಏಕಾಏಕಿ ಅವರನ್ನು ಸುತ್ತುಗಟ್ಟಿ ಸೆರೆ ಹಿಡಿದುಕೊಂಡುಹೋಗುತ್ತಿದ್ದರು. ಸಾಗಿಸಿಕೊಂಡು ಹೋಗಲು ಸಾಧ್ಯವಾಗದ ಸಾಮಾನುಗಳನ್ನು ಸುಟ್ಟು ಭಸ್ಮಮಾಡುತ್ತಿದ್ದರು. ಈ ರೀತಿ ಪದೇ ಪದೇ ನಡೆದ ಕೊಳ್ಳೆ ಹಾಗೂ ದರೋಡೆಗಳ ಕಾರಣ, ಗಂಗಾನದಿಯ ಮುಖದಲ್ಲಿದ್ದ ಅನೇಕ ಜನಭರಿತ ದ್ವೀಪ ಗಳು ಇಂದು ಜನರಿಲ್ಲದೆ ಹುಲಿ ಮುಂತಾದ ಕಾಡುಪ್ರಾಣಿಗಳ ಆವಾಸಸ್ಥಾನಗಳಾಗಿವೆ.

ಈ ಪೋಕರಿಗಳು ತಮ್ಮ ಕೈಗೆ ಸಿಕ್ಕಿದ ಜನರಿಗೆ ಕೊಡುತ್ತಿದ್ದ ಹಿಂಸೆಗಳು ಹೇಳ ಲಾರದಂತವು. ಲೂಟಿ ಮಾಡಿದ ಸ್ಥಳಗಳಲ್ಲಿ ಹಿಡಿದ ಅನುಪಯುಕ್ತ ಮುದುಕರನ್ನು ಏಲಂ (ಹರಾಜು) ಮಾಡುವ ಹೇಯ ವರ್ತನೆಗೆ ಹಿಂದುಮುಂದು ನೋಡುತ್ತಿರಲಿಲ್ಲ. ಹೇಗೋ ತಪ್ಪಿಸಿಕೊಂಡ ಯುವಕರು ಈ ಗುಲಾಮರ ಮಾರಾಟ ಕಾಲದಲ್ಲಿ ಸಿಕ್ಕಿಬಿದ್ದ ಜನರನ್ನು ಉಳಿಸುವ ಪ್ರಯತ್ನ ಮಾಡುತ್ತಿದ್ದುದ್ದನ್ನು ನೋಡಬಹುದಾಗಿತ್ತು. ತೀರಾ ವಯಸ್ಸಾಗದೆ ಕೆಲಸಕ್ಕೆ ಯೋಗ್ಯರಾದವರನ್ನು ಈ ದರೋಡೆಕೋರರು ತಮ್ಮ ಬಳಿ ಕೆಲಸಕ್ಕೆ ಇಟ್ಟುಕೊಳ್ಳುತ್ತಿದ್ದರು. ಅವರಿಗೆ ದರೋಡೆ, ಖೂನಿ ಮುಂತಾದವುಗಳಲ್ಲಿ ತರಬೇತಿ ಕೊಡುತ್ತಿದ್ದರು ; ಅಥವಾ ಗೋವಾ, ಸಿಲೋನ್, ಸೆಂಟ್‌ಥೋಮಸ್ ಮತ್ತಿತರ ಕಡೆಗಳಲ್ಲಿದ್ದ ಪೋರ್ಚುಗೀಸರಿಗೆ ಮಾರುತ್ತಿದ್ದರು. ಹುಗ್ಲಿಯಲ್ಲಿದ್ದ ಪೋರ್ಚುಗೀಸರು ಹಿಂದುಮುಂದು ನೋಡದೆ ಈ ನತದೃಷ್ಟ ಬಂಧಿಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ರೀತಿಯ ಮನುಷ್ಯರ ವ್ಯಾಪಾರ ಸಮುದ್ರ ತೀರದಲ್ಲಿಯೇ ನಡೆಯುತ್ತಿತ್ತು.

ಈ ಕಡಲುಗಳ್ಳರು ತಮ್ಮ ಹಡಗುಗಳ ತುಂಬ ತುಂಬಿಕೊಂಡು ಬಂದ ಜನರನ್ನು ಪೋರ್ಚುಗೀಸರಿಗೆ ಅಗ್ಗದ ಬೆಲೆಗೆ ಮಾರಾಟ ಮಾಡುತ್ತಿದ್ದರು. ಇದು ಅವರಿಬ್ಬರಲ್ಲಿ

ಆದ ಒಪ್ಪಂದ. ಪೋರ್ಚುಗೀಸರು ತಮ್ಮ ಸ್ಥಾನಮಾನವನ್ನು ಕಳೆದುಕೊಂಡ ಮೇಲೆ ಅವರ ಬದಲು ಬಂದ ಇತರ ಯೂರೋಪಿಯನರು ಸಹ ಅವರ ಈ ಹೊಲಸು ವ್ಯಾಪಾರ ವನ್ನು ಮುಂದುವರೆಸುತ್ತಿದ್ದರು ಎಂದರೆ ನಿಜವಾಗಿಯೂ ವ್ಯಸನ ಪಡಬೇಕಾಗುತ್ತದೆ. ತಮ್ಮ ಈ ನಡತೆಯ ಬಗ್ಗೆ ಕಡಲುಗಳ್ಳರು ಏನೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದರು ಗೊತ್ತೆ ? ಕ್ರೈಸ್ತ ಮತಕ್ಕೆ ಜನರನ್ನು ಮತಾಂತರ ಗೊಳಿಸಲು ಮಿಷನರಿಗಳು ಹನ್ನೆರಡು ವರ್ಷ ತೆಗೆದುಕೊಂಡರೆ, ತಾವು ಆ ಕೆಲಸವನ್ನು ಹನ್ನೆರಡು ತಿಂಗಳಲ್ಲಿ ಮಾಡುತ್ತೇವೆ ಎಂದು. ಇದು ನಮ್ಮ ಪವಿತ್ರ ಧರ್ಮವನ್ನು ಪ್ರಸಾರಮಾಡುವ ವಿಚಿತ್ರ ರೀತಿಯೇ ಸರಿ !

ಪೋರ್ಚುಗೀಸರು ಹುಗ್ಲಿಯಲ್ಲಿ ನೆಲೆಸಲು ಔರಂಗಜೇಬನ ತಾತ ಜಹಾಂಗೀರನು ಅವಕಾಶ ಮಾಡಿಕೊಟ್ಟನಷ್ಟೆ. ಆತನಿಗೆ ಕ್ರೈಸ್ತರ ಬಗ್ಗೆ ಯಾವ ಮಾತ್ಸರ್ಯವೂ ಇರಲಿಲ್ಲ. ಅವರೊಡನೆ ವ್ಯಾಪಾರ ವಹಿವಾಟು ನಡೆಸಿ, ಆದರಿಂದ ಅಪಾರ ಅನುಕೂಲ ಪಡೆಯುವ ಉದ್ದೇಶ ಹೊಂದಿದ್ದ ಆತ. ಹೊಸದಾಗಿ ಬಂದು ನೆಲೆಸಿದ ಈ ಪೋರ್ಚು ಗೀಸರು ಕೂಡ ಬಂಗಾಳ ಕೊಲ್ಲಿಯಲ್ಲಿ ಕಡಲುಗಳ್ಳರು ಇಲ್ಲದಂತೆ ಮಾಡುವ ಕೆಲಸದಲ್ಲಿ ಸಹಾಯಕರಾದರು.

ಜಹಾಂಗೀರನ ಮಗ ಷಾ ಜಹಾನ ತನ್ನ ಧರ್ಮದ ಆಚರಣೆಯಲ್ಲಿ ತಂದೆಗಿಂತ ಹೆಚ್ಚು ನಿಷ್ಠನಾಗಿದ್ದ. ಆತ ಹುಗ್ಲಿಯಲ್ಲಿದ್ದ ಪೋರ್ಚುಗೀಸರಿಗೆ ಕೊಡಬಾರದ ಕಷ್ಟ ಕೊಟ್ಟ. ಇದಕ್ಕೆ ಒಂದು ಕಾರಣ, ಆ ಪೋರ್ಚುಗೀಸರು ಅರಕಾನಿನ ಲಫಂಗರಿಗೆ ಪ್ರೋತ್ಸಾಹ ನೀಡಿದ್ದು. ಇನ್ನೊಂದು ಕಾರಣ, ಮೊಗಲ್ ಪ್ರಜೆಗಳಾಗಿದ್ದು ಅವರ ಸೇವೆಯಲ್ಲಿ ತೊಡಗಿದ್ದ ಗುಲಾಮರನ್ನು ಬಿಡುಗಡೆ ಮಾಡಲು ನಿರಾಕರಿಸಿದ್ದು. ಮೊಟ್ಟ ಮೊದಲು ಚಕ್ರವರ್ತಿ ಅವರನ್ನು ಹೆದರಿಸಿಯೂ ಒತ್ತಾಯಗಳ ಮೂಲಕವೂ ಅಪಾರ ಹಣವನ್ನು ಕಸಿದುಕೊಂಡ. ಕೊನೆಗೆ ಅವರು ಅದನ್ನು ಕೊಡಲು ತಿರಸ್ಕರಿಸಿದಾಗ ಆತ ಹುಗ್ಲಿ ಪಟ್ಟಣಕ್ಕೆ ಮುತ್ತಿಗೆ ಹಾಕಿ, ಅದನ್ನು ತನ್ನ ವಶಪಡಿಸಿಕೊಂಡು, ಎಲ್ಲ ನಿವಾಸಿ ಗಳನ್ನು ಆಗ್ರಾಕ್ಕೆ ಕೊಂಡೊಯ್ಯುವಂತೆ ಆಜ್ಞೆಮಾಡಿದ. ಆ ಜನಗಳು ಪಟ್ಟ ಕಷ್ಟ ಆಧುನಿಕ ಇತಿಹಾಸದಲ್ಲಿ ಕಾಣದಂಥಾದ್ದು. ಹಿಂದೆ ಬ್ಯಾಬಿಲೋನಿಯಾವನ್ನು ಆಕ್ರಮಣ ಮಾಡಿದಾಗ ಆದ ದುರಂತದಷ್ಟೇ ಇದು ಇತ್ತೆಂದು ಹೇಳಬಹುದು. ಮಕ್ಕಳು ಮರಿಗಳೂ ಪಾದ್ರಿಗಳೂ ಕ್ರೈಸ್ತ ಸಂನ್ಯಾಸಿಗಳೂ ಮಹಾ ಕಷ್ಟನಷ್ಟಗಳನ್ನು ಅನುಭವಿಸ ಬೇಕಾಯಿತು. ಅಂದಚೆಂದದ ಸ್ತ್ರೀಯರನ್ನು, ಅವರು ಮದುವೆಯಾಗಿರಲಿ ಆಗದಿರಲಿ, ಅಂತಃಪುರಕ್ಕೆ ಸೇರಿಸಿಕೊಳ್ಳಲಾಯಿತು. ಅಂದಚೆಂದದಲ್ಲಿ ಕಡಿಮೆ ಇದ್ದವರನ್ನು, ಅಥವಾ ಸ್ವಲ್ಪ ವಯಸ್ಸಾದವರನ್ನು ಅಮೀರರುಗಳಿಗೆ ಹಂಚಲಾಯಿತು. ಚಿಕ್ಕಮಕ್ಕಳಿಗೆ ಸುನ್ನತ್ ಮಾಡಿಸಿ ಅವರನ್ನು ಪರಿಚಾರಕರನ್ನಾಗಿ ನೇಮಿಸಲಾಯಿತು. ವಯಸ್ಸಾದ ಗಂಡಸ ರನ್ನು ಏನೇನೋ ಆಸೆ ತೋರಿಸಿ, ಅಥವಾ ಆನೆಯ ಕಾಲಿಗೆ ಹಾಕಿ ತುಳಿಸುವುದಾಗಿ ಹೆದರಿಸಿ ಕ್ರೈಸ್ತಮತವನ್ನು ತ್ಯಜಿಸುವಂತೆ ಮಾಡಲಾಯಿತು. ಕೆಲವು ಕ್ರೈಸ್ತ ಸಂನ್ಯಾಸಿ

ಗಳು ಮಾತ್ರ ಯಾವುದಕ್ಕೂ ಜಗ್ಗಲಿಲ್ಲ. ಅವರನ್ನು ಗೋವಾಕ್ಕೂ ಮತ್ತಿತರ ಪೋರ್ಚುಗೀಸ್ ವಸಾಹತುಗಳಿಗೂ ರವಾನಿಸಲಾಯಿತು. ಹೀಗೆ ಜಗ್ಗದೆ ನಿಂತವರು ಆಗ್ರಾದಲ್ಲಿದ್ದ ಜೆಸೂಯಿಟರು[1] ಮತ್ತು ಮಿಷನರಿಗಳು[2]. ಅವರು ಈ ದಾರುಣ ಪರಿಸ್ಥಿತಿಯಲ್ಲಿ ಎದೆಗುಂದದೆ ತಮ್ಮ ನಿವಾಸಗಳಲ್ಲಿಯೇ ಇದ್ದುಕೊಂಡು, ಹಣಕಾಸಿನ ಆಸೆ ತೋರಿಸಿಯೋ ಅಥವಾ ತಮ್ಮ ಸ್ನೇಹಿತರ ಸಹಾಯದಿಂದಲೋ ಒಳ್ಳೆಯ ಕೆಲಸ ವನ್ನು ಮಾಡಿದರು,

ಹುಗ್ಲಿಯ ದುರಂತಕ್ಕೆ ಹಿಂದೆಯೂ ಸಹ ಮಿಷನರಿಗಳು ಷಾಜಹಾನನ ಕೋಪಕ್ಕೆ ಬಲಿಯಾಗಿದ್ದರು. ಹೇಗೆಂದರೆ, ಜಹಾಂಗೀರನ ಕಾಲದಲ್ಲಿ ಆಗ್ರಾ ಮತ್ತು ಲಾಹೋರ ಗಳಲ್ಲಿ ಇಗರ್ಜಿಗಳನ್ನು ಕಟ್ಟಲು ಮಿಷನರಿಗಳಿಗೆ ಅವಕಾಶ ದೊರೆತಿತ್ತು. ಅವನ್ನೆಲ್ಲ ನಿರ್ನಾಮಮಾಡಿಬಿಡಬೇಕೆಂದು ಷಾ ಜಹಾನ ಆಜ್ಞೆಮಾಡಿದ. ಆಗ್ರಾದ ಇಗರ್ಜಿಯ ಬಹು ಎತ್ತರವಾದ ಗೋಪುರದ ಮೇಲಿದ್ದ ಗಂಟೆಯನ್ನು ಬಾರಿಸಿದರೆ ಅದು ಇಡೀ ನಗರ ದಲ್ಲೆಲ್ಲಾ ಕೇಳಿಸುತ್ತಿತ್ತು.

ಷಾಜಹಾನನು ಹುಗ್ಲಿಯನ್ನು ವಶಪಡಿಸಿಕೊಳ್ಳುವುದಕ್ಕೆ ಮುಂಚೆ ಅಲ್ಲಿದ್ದ ಕಡಲು ಗಳ್ಳರು ಬೇಕೆಂದರೆ ಅರಕಾನ್ ರಾಜ್ಯವನ್ನೇ ಒಪ್ಪಿಸುವುದಾಗಿ ಗೋವಾದ ಪೋರ್ಚುಗೀಸ್ ವೈಸ್‌ರಾಯಿಗೆ ಹೇಳಿದ್ದರು. ಸೆಬಾಸ್ತಿಯನ್ ಗೊನ್‌ಸಾಲ್ವೆಸ್ ಎಂಬಾತ ಆ ಕಡಲು ಗಳ್ಳರ ನಾಯಕನಾಗಿದ್ದ. ಆತ ತನ್ನ ದರ್ಪ ಹಾಗೂ ಹೆಗ್ಗಳಿಕೆಗಳನ್ನು ಉಪಯೋಗಿಸಿ ಕೊಂಡು ಅರಕಾನ್ ರಾಜನ ಮಗಳನ್ನು ಮದುವೆಯಾಗಿದ್ದ. ಇಂಥ ಅಲ್ಪನ ಮಾತಿಗೆ ಬೆಲೆಕೊಡುವುದು ಸೂಕ್ತವಲ್ಲವೆಂದು ಗೋವಾ ವೈಸ್‌ರಾಯ್ ಸುಮ್ಮನಾಗಿಬಿಟ್ಟ. ಸೆಬಾಸ್ಟಿಯನ್ ಮಾಡಿದ ಸಲಹೆಯಲ್ಲಿ ಆಚ್ಚರಿಪಡುವಂತಾದ್ದು ಏನೂ ಇರಲಿಲ್ಲ. ಪೋರ್ಚುಗೀಸರು ಜಪಾನ್, ಪೆಗೂ, ಇಥಿಯೋಪಿಯಾ ಮುಂತಾದ ಕಡೆಗಳಲ್ಲಿ ವರ್ತಿಸಿದ ರೀತಿಯಲ್ಲಿಯೇ ಈಗಲೂ ವರ್ತಿಸಿದರು.

ಇಂಡೀಸಿನಲ್ಲಿ ಪೋರ್ಚುಗೀಸರ ಶಕ್ತಿ ಇಳಿಮುಖವಾಗುವುದಕ್ಕೆ ಅವರ ಅನಾಚಾರ ಗಳೆ ಕಾರಣ. ಆ ಅನಾಚಾರಗಳಿಗೆ ತಕ್ಕ ಶಿಕ್ಷೆಯನ್ನು ದೇವರು ಅವರಿಗೆ ಕೊಟ್ಟ ನೆಂದರೂ ತಪ್ಪಿಲ್ಲ. ಮೊದಲಿಗೆ ಅವರ ಹೆಸರೆಂದರೆ ಶಕ್ತಿಯ ಗೋಪುರವಾಗಿತ್ತು. ಇಂಡಿಯಾದ ರಾಜರುಗಳೆಲ್ಲ ಅವರ ಸ್ನೇಹ ಸಂಪರ್ಕ ಬೆಳೆಸಿದ್ದರು. ಧೈರ್ಯ, ಉದಾರತೆ, ಧರ್ಮನಿಷ್ಠೆ, ಅಪಾರ ಶ್ರೀಮಂತಿಕೆ ಮತ್ತು ಸಾಹಸ ಕೆಲಸ—ಇಂಥವುಗಳಿಗೆ ಹಿಂದೆ ಬಂದ ಪೋರ್ಚುಗೀಸರು ಹೆಸರಾಗಿದ್ದರು. ಈಗಿನವರಂತೆ ಆಗಿನವರು ಇರಲಿಲ್ಲ. ಈಗಿನ

---

[1]ಜೆಸೂಯಿಟರು : ಕ್ಯಾಥೋಲಿಕ್ ಪಂಥದ ಕ್ರೈಸ್ತರು.

[2]ಮಿಷನರಿಗಳು : ಕ್ರೈಸ್ತಮತ ಪ್ರಚಾರಕರು.

ವರು ಎಲ್ಲಾ ದುಷ್ಕೃಟಗಳ ತವರುಮನೆಯಾಗಿದ್ದಾರೆ ; ಮಾಡಬಾರದ ಯಾವ ಕೆಟ್ಟ ಕೆಲಸಗಳೂ ಅವರಲ್ಲಿ ಇಲ್ಲದಿಲ್ಲ.

ಈ ಕಡಲುಗಳ್ಳರು ಇದೇ ವೇಳೆಯಲ್ಲಿ ಗಂಗಾನದಿಯ ಮುಖದಲ್ಲಿದ್ದ ಸಂದೀಪ ಎಂಬ ದ್ವೀಪವನ್ನು ತಮ್ಮ ವಶಪಡಿಸಿಕೊಂಡರು. ಈ ದ್ವೀಪದಲ್ಲಿ ಫ್ರಾ-ಜೋನ್ ಎಂಬ ಅಗಸ್ಟೈನ್ ಸಂನ್ಯಾಸಿ ಒಬ್ಬ ಸಣ್ಣ ರಾಜನಂತೆ ರಾಜ್ಯಭಾರ ಮಾಡಿಕೊಂಡಿದ್ದ. ಅನೇಕ ವರ್ಷಗಳಿಂದ ಆಳಿಕೊಂಡಿದ್ದ ಈತ ಹೇಗೆ ಅಲ್ಲಿದ್ದ ಸ್ಥಳದ ಅಧಿಪತಿಯನ್ನು ಹೊರದೂಡಿದನೋ ಗೊತ್ತಾಗಲಿಲ್ಲ. ಈ ದ್ವೀಪದಲ್ಲಿ ಇದ್ದ ಕಡಲುಗಳ್ಳರೇ ಸುಲ್ತಾನ್ ಸೂಜನನ್ನು ಅರಕಾನಿಗೆ ಸಾಗಿಸಲಿಕ್ಕಾಗಿ ತಮ್ಮ ಸಣ್ಣ ಹಡಗುಗಳನ್ನು ಡಾಕ್ಕಾಕ್ಕೆ ತೆಗೆದುಕೊಂಡು ಹೋದವರು. ಸುಲ್ತಾನ್ ಸೂಜನಿಗೆ ಸೇರಿದ ಪೆಟ್ಟಿಗೆ-ಪಿಠಾರಿಗಳನ್ನು ಹೇಗೋ ಮಾಡಿ ತೆರೆದು, ಅದರಲ್ಲಿದ್ದ ಅನೇಕ ಮುತ್ತು ರತ್ನಗಳನ್ನು ಸೂರೆಮಾಡಿದವರು ಇವರೆ. ಹೀಗೆ ಸೂರೆಮಾಡಿದ ಅಮೂಲ್ಯ ರತ್ನಗಳನ್ನು ಕೇಳಿದಷ್ಟು ಬೆಲೆಗೆ ಅರಕಾನ್‌ನಲ್ಲಿ ಮಾರಿಬಿಟ್ಟರು. ಡಚ್ಚರು ಮುಂತಾದ ಬುದ್ಧಿವಂತರು ಆ ರತ್ನಗಳು ಬಹಳ ಮೆತು ಎಂದು ಹೇಳಿ, ಅವುಗಳ ವಿಚಾರ ಅರಿಯದ ಆ ಕಡಲುಗಳ್ಳರಿಗೆ ಮೋಸಮಾಡಿ ಕಡಿಮೆ ಬೆಲೆಗೆ ಕೊಂಡುಕೊಂಡರು.

ಅರಕಾನ್ ರಾಜನ ಕಡೆಯ ಕಡಲುಗಳ್ಳರಿಂದಾಗಿ ಮೊಗಲ್ ಚಕ್ರವರ್ತಿಗೆ ಏನೆಲ್ಲಾ ತೊಂದರೆ ತಾಪತ್ರಯ ಕರ್ಚುವೆಚ್ಚಗಳು ಆಗುತ್ತಿದ್ದುವೆಂಬುದನ್ನು ಸಾಕಷ್ಟು ಹೇಳಿದ್ದೇನೆ. ಬಂಗಾಳ ರಾಜ್ಯದ ಒಳಭಾಗಕ್ಕೆ ಹೋಗುವ ಮಾರ್ಗಗಳನ್ನು ಆತ ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದ. ಆದರೂ ಬಂಗಾಳ ರಾಜ್ಯವನ್ನು ಕಡಲುಗಳ್ಳರು ಹೊಕ್ಕು ಲೂಟಿ ಮತ್ತು ದರೋಡೆ ಮಾಡುವುದನ್ನು ಸಂಪೂರ್ಣ ತಪ್ಪಿಸಲು ಸಾಧ್ಯವಾಗಲಿಲ್ಲ. ಅವರ ನಾಲ್ಕೈದು ದೋಣಿಗಳು ಮೊಗಲನ ಹದಿನಾಲ್ಕು ಹದಿನೈದು ದೋಣಿಗಳನ್ನು ಸಲೀಸಾಗಿ ಧ್ವಂಸಮಾಡಿಯೋ ಅಥವಾ ವಶಪಡಿಸಿಕೊಂಡೋ ದರೋಡೆಯ ಕೆಲಸವನ್ನು ಪೂರ್ತಿಮಾಡಿಯೇ ಬಿಡುತ್ತಿದ್ದುವು.

ಷೈಸ್ತಾಖಾನನನ್ನು ಬಂಗಾಳದ ಸುಬೇದಾರನನ್ನಾಗಿ ಮಾಡಿದ ಮೇಲೆ ಈ ದರೋಡೆಗಾರರ ಹಾವಳಿಯಿಂದ ಬಂಗಾಳವನ್ನು ತಪ್ಪಿಸುವುದು ಅವನ ಅತಿ ಮುಖ್ಯವಾದ ಗುರಿಯಾಗಿತ್ತು. ಆದರೆ, ಅರಕಾನ್ ರಾಜನ ಸೊಕ್ಕು ಮುರಿಯಬೇಕು ಎಂಬುದು ಅವನ ಅಂತರಂಗದಲ್ಲಿ ಇದ್ದ ಉದ್ದೇಶ. ಇದನ್ನು ಷೈಸ್ತಾಖಾನ ಬಹು ವಿಚಕ್ಷಣೆಯಿಂದ ಸಾಧಿಸಿದ. ಅಸಂಖ್ಯಾತ ಹಳ್ಳಕೊಳ್ಳಗಳನ್ನೂ ನದಿಗಳನ್ನೂ ದಾಟಿ ಭಾರಿ ಸೈನ್ಯವನ್ನು ಅರಕಾನಿಗೆ ಸಾಗಿಸುವುದು ಅಸಾಧ್ಯದ ಮಾತಾಗಿತ್ತು. ಅಲ್ಲದೆ ಕಡಲುಗಳ್ಳರನ್ನು ನದಿಯ ಮೇಲೆ ಯುದ್ಧಮಾಡಿ ಸೋಲಿಸುವುದು ತುಂಬ ಕಷ್ಟವಾಗಿತ್ತು. ಇದನ್ನೆಲ್ಲಾ ಗಮನಿಸಿದ ಷೈಸ್ತಾಖಾನ್ ಅರಕಾನನ್ನು ಡಚ್ಚರ ಸಹಾಯದಿಂದ ಆಕ್ರಮಿಸಿಕೊಳ್ಳುವುದು ಸರಿಯಾದ ಮಾರ್ಗವೆಂದುಕೊಂಡು ಬಟೇವಿಯಾದಲ್ಲಿದ್ದ ಡಚ್ಚರ ಸೈನ್ಯಾಧಿಕಾರಿಯ ಬಳಿಗೆ ರಾಯಭ

ಭಾರವನ್ನು ಕಳುಹಿಸಿದ. ಇಬ್ಬರೂ ಕೂಡಿ ಅರಕಾನ್ ರಾಜ್ಯವನ್ನು ಆಕ್ರಮಣ ಮಾಡಬೇಕೆಂದು ನಿರ್ಣಯಿಸಿದರು. ಹಿಂದೆ ಓರ್ಮಸ್ ಬಗ್ಗೆ ಪರ್ಷಿಯಾದ ದೊರೆ ಷಾ ಅಬ್ಬಾಸನು ಇಂಗ್ಲಿಷರೊಡನೆ ಮಾಡಿಕೊಂಡ ನಿರ್ಣಯದಂತೆ ಈ ನಿರ್ಣಯವೂ ಇತ್ತು. ಇದು ಬಟೇವಿಯಾದ ಗೌರ್ನರನಿಗೆ ಒಪ್ಪಿಗೆಯಾಯಿತು. ಇಂಡೀಸಿನಲ್ಲಿ ಪೋರ್ಚುಗೀಸರ ಶಕ್ತಿಯನ್ನು ಮತ್ತಷ್ಟು ದಮನ ಮಾಡುವುದಕ್ಕೆ ಒಂದು ಅವಕಾಶ ತಾನೆ ಒದಗಿಬಂದಿತೆಂದು ಅರಿತುಕೊಂಡವನಾಗಿ ಆತನು ಎರಡು ಹಡಗುಗಳನ್ನು ಬಂಗಾಳಕ್ಕೆ ಕಳುಹಿಸಿಕೊಟ್ಟ. ಈ ಹಡಗುಗಳಲ್ಲಿ ಮೊಗಲನ ಸೈನ್ಯವನ್ನು ಚಿಟಗಾಂಗಿಗೆ ಸಾಗಿಸುವ ಉದ್ದೇಶವಿತ್ತು. ಆದರೆ ಈ ಮಧ್ಯೆ ಷೈಸ್ತಾಖಾನ ಅನೇಕ ಗ್ಯಾಲಿ ಹಡಗುಗಳನ್ನೂ ಮತ್ತಿತರ ತರಹೆ ಹಡಗುಗಳನ್ನೂ ಶೇಖರಿಸಿದ ; ಕಡಲುಗಳ್ಳರು ಮೊಗಲನಿಗೆ ಶರಣಾಗತರಾಗದಿದ್ದರೆ ಅವರನ್ನು ನಿರ್ನಾಮ ಮಾಡುವುದಾಗಿ ಬೆದರಿಸಿದ. ಆತ ಅವರಿಗೆ ಹೇಳಿದ : "ಮೊಗಲ್ ಚಕ್ರವರ್ತಿ ಅರಕಾನ್ ರಾಜನನ್ನು ಸದೆಬಡಿಯುವ ಮನಸ್ಸು ಮಾಡಿದ್ದಾನೆ. ಡಚ್ಚರ ನೌಕಾಪಡೆಯೂ ನಮ್ಮ ಸಹಾಯಕ್ಕೆ ಬರುತ್ತಿದೆ. ನಿಮಗೆ ಬುದ್ಧಿಯಿದ್ದರೆ ಮತ್ತು ನಿಮ್ಮ ಹೆಂಡತಿ ಮಕ್ಕಳ ಯೋಗಕ್ಷೇಮದ ಮೇಲೆ ಕಣ್ಣಿದ್ದರೆ, ಅರಕಾನ್ ರಾಜನ ಸೇವೆಯನ್ನು ತ್ಯಜಿಸಿ ಔರಂಗಜೇಬನನ್ನು ಸೇರಿಕೊಳ್ಳಿ. ನಿಮಗೆ ಅವಶ್ಯಕವಾದಷ್ಟು ಭೂಮಿಯನ್ನು ಬಂಗಾಳದಲ್ಲಿಯೇ ಕೊಡುತ್ತೇನೆ. ಈಗ ನಿಮಗೆ ಸಿಗುವುದಕ್ಕಿಂತ ಎರಡರಷ್ಟು ಸಂಬಳ ಮಾಡುತ್ತೇನೆ." ಇದೇ ವೇಳೆಯಲ್ಲಿ ಕಡಲುಗಳ್ಳರು ಅರಕಾನ್ ರಾಜನ ಕಡೆಯ ಮುಖ್ಯ ಅಧಿಕಾರಿಗಳಲ್ಲಿ ಒಬ್ಬನನ್ನು ಕೊಂದುಹಾಕಿದ್ದರು. ಇದಕ್ಕಾಗಿ ಅರಕಾನ್ ರಾಜ ತಮ್ಮ ಮೇಲೆ ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲವೆಂದು ಭಾವಿಸಿಯೋ, ಅಥವಾ ಷೈಸ್ತಾಖಾನನು ತೋರಿಸಿದ ಆಸೆಗಳಿಗೆ ಬಲಿಯಾಗಿಯೋ ಆ ಅಯೋಗ್ಯ ಪೋರ್ಚುಗೀಸರು ಇದ್ದಕ್ಕಿದ್ದಂತೆ ಒಂದು ದಿನ ತಮ್ಮ ನಲವತ್ತು ಐವತ್ತು ಹಡಗುಗಳ ಸಮೇತ ಬಂಗಾಳಕ್ಕೆ ಹೊರಟುಹೋದರು. ಈ ಕೆಲಸವನ್ನು ಬಹಳ ತರಾತುರಿಯಿಂದ ಮಾಡಿದ ಕಾರಣ ಅವರು ತಮ್ಮ ಹೆಂಡತಿ ಮಕ್ಕಳನ್ನೂ ಸಾಮಾನು ಸರಂಜಾಮುಗಳನ್ನೂ ತಮ್ಮೊಡನೆ ಸಾಗಿಸುವುದಕ್ಕೆ ತುಂಬಾ ಪ್ರಯಾಸ ಪಡಬೇಕಾಯಿತು. ಅಂತೂ ಪೋರ್ಚುಗೀಸರು ತಮ್ಮ ಹೆಂಡತಿ ಮಕ್ಕಳ ಸಮೇತ ಬಂಗಾಳಕ್ಕೆ ಬಂದುಬಿಟ್ಟರು.

ಈ ಪೋರ್ಚುಗೀಸರನ್ನು ಷೈಸ್ತಾಖಾನ ತೋಳ್ತೆರೆದು ಸ್ವಾಗತಿಸಿದ. ಅವರಿಗೆ ಕೈ ತುಂಬ ಹಣ ಕೊಟ್ಟ. ಅವರ ಹೆಂಡತಿ ಮಕ್ಕಳಿಗೆ ಇರಲು ಡಾಕ್ಕಾದಲ್ಲಿ ಅತ್ಯುತ್ತಮವಾದ ಮನೆಗಳನ್ನು ಒದಗಿಸಿದ. ಈ ಸೌಕರ್ಯಗಳಿಂದ ಸಂತೋಷಗೊಂಡ ಪೋರ್ಚುಗೀಸರು ಮೊಗಲ್ ಸೈನ್ಯದೊಡನೆ ಕೂಡಿಕೊಂಡರು. ಅವರು ಅರಕಾನ್ ರಾಜನ ವಶವಾಗಿದ್ದ ಸಂದೀಪದ ಮೇಲೆ ಬಿದ್ದರು. ಅದನ್ನು ಸ್ವಾಧೀನ ಪಡಿಸಿಕೊಂಡು, ಅಲ್ಲಿಂದ ಚಿಟ್ಟಗಾಂಗಿಗೆ ಹೊರಟರು. ಇಷ್ಟರಲ್ಲಿ ಬಟೇವಿಯಾದಿಂದ ಡಚ್ಚರ ಎರಡು ಹಡಗುಗಳು ಬಂದುವು.

ಆದರೆ ಷೈಸ್ತಾಖಾನ ಆ ಹಡಗುಗಳ ಸಹಾಯ ಈಗ ತನಗೆ ಬೇಕಿಲ್ಲವೆಂದು ಹೇಳಿದ. ಬಂದ ಹಡಗುಗಳನ್ನು ಹಿಂದಕ್ಕೆ ಕಳುಹಿಸಿ, ಬಟೇವಿಯಾ ಗೌರ್ನರಿಗೆ ತನ್ನ ವಂದನೆ ಸಲ್ಲಿಸಿದ. ಈ ಹಡಗುಗಳನ್ನು ನಾನು ಬಂಗಾಳದಲ್ಲಿ ನೋಡಿದೆ. ಅದರ ಅಧಿಕಾರಿಗಳ ಜೊತೆ ಸ್ವಲ್ಪ ಕಾಲವನ್ನೂ ಕಳೆದೆ. ಈ ಇಂಡಿಯನನು (ಷೈಸ್ತಾಖಾನನು) ಒಪ್ಪಿಸಿದ ವಂದನೆಗಳು ಅವನು ಮಾತಿಗೆ ತಪ್ಪಿದ ಮಹಾಪರಾಧಕ್ಕೆ ಸಾಟಿಯಲ್ಲ ಎಂದು ಅಧಿಕಾರಿಗಳು ಗೊಣಗಾಡಿದರು.

ಇನ್ನು ಷೈಸ್ತಾಖಾನನು ಪೋರ್ಚುಗೀಸರನ್ನು ನೋಡಿಕೊಳ್ಳುವ ಬಗ್ಗೆ ಹೇಳುವುದಾದರೆ, ಅವರನ್ನು ಅವರಿಗೆ ತಕ್ಕ ರೀತಿಯಲ್ಲೇ ಅವನು ನೋಡಿಕೊಳ್ಳುತ್ತಾನೆಂಬುದರಲ್ಲಿ ಸಂದೇಹವಿಲ್ಲ. ಅವರನ್ನು ಚಿಟಗಾಂಗಿನಿಂದ ದೂರ ಸಾಗಿಸಿದ್ದಾನೆ. ಅವರ ಹೆಂಡತಿ ಮಕ್ಕಳು ಅವನ ಕೈಯಲ್ಲಿದ್ದಾರೆ. ಪೋರ್ಚುಗೀಸರ ಸಹಾಯ ಅವನಿಗೆ ಬೇಕಾಗಿರಲಿಲ್ಲ. ಈ ಕಾರಣ ಅವರಿಗೆ ಕೊಟ್ಟ ಯಾವ ಮಾತನ್ನೂ ಆತ ಅನುಸರಿಸಬೇಕಾಗಿರಲಿಲ್ಲ. ತಿಂಗಳುಗಟ್ಟಲೆ ಸಂಬಳ ಇಲ್ಲದೆ ಅವರನ್ನು ಸತಾಯಿಸುತ್ತಿದ್ದಾನೆ. ನಂಬಿಕೆಗೆ ಅರ್ಹರಲ್ಲದ ರಾಜದ್ರೋಹಿಗಳೆಂದು ಅವರನ್ನು ದಾಕ್ಷಿಣ್ಯವಿಲ್ಲದೆ ಬಯ್ಯುತ್ತಿದ್ದಾನೆ. ಅನೇಕ ವರ್ಷಗಳ ಕಾಲ ಯಾರ ಉಪ್ಪು ತಿಂದರೋ ಆ ರಾಜನಿಗೆ ಎರಡು ಬಗೆದ ಮಹಾಪಾತಕಿಗಳೆಂದು ಹಿಯ್ಯಾಳಿಸುತ್ತಿದ್ದಾನೆ. ಈ ರೀತಿ ಷೈಸ್ತಾಖಾನ ಆ ಠಕ್ಕರ ಸೊಕ್ಕನ್ನು ಮುರಿದುಹಾಕಿದ. ಯಾರು ಕೆಳ ಬಂಗಾಳ ಪ್ರದೇಶವನ್ನು ನಿರ್ಜನವಾಗಿ ಮಾಡಿ, ಅಲ್ಲಿಯ ಜನರ ಬಾಳನ್ನೇ ನಿರ್ನಾಮಮಾಡಿದರೋ ಅವರಿಗೆ ತಕ್ಕ ಶಾಸ್ತಿ ಆಯಿತು. ಇದೇ ರೀತಿಯ ವಿಜಯವನ್ನು ಷೈಸ್ತಾಖಾನ ಅರಕಾನ್ ರಾಜನ ಮೇಲೆ ಸಾಧಿಸುವನೋ ಇಲ್ಲವೋ ಎಂಬುದನ್ನು ಮುಂದೆ ನೋಡಬೇಕು.

ಈಗ ಔರಂಗಜೇಬನ ಇಬ್ಬರು ಮಕ್ಕಳ ವಿಚಾರ: ಸುಲ್ತಾನ್ ಮಹಮ್ಮದ್ ಇನ್ನೂ ಗ್ವಾಲಿಯರ್ ಕೋಟೆಯಲ್ಲೇ ಇದ್ದಾನೆ. ಆದರೆ ಆತನಿಗೆ ಅಲ್ಲಿಯ ಖೈದಿಗಳಿಗೆ ಕುಡಿಯಲು ಕೊಡುವ 'ಪೌಸ್ತ್' (poust) ಕೊಡುತ್ತಿಲ್ಲ ಎಂದು ಹೇಳುತ್ತಾರೆ. ಸುಲ್ತಾನ್ ಮಜುಂ ತನ್ನ ವ್ಯವಹಾರ ಕುಶಲತೆ ಹಾಗೂ ಚತುರತೆಗಳಿಂದ ತಂದೆಯ ಸಿಟ್ಟಿಗೆ ಕಾರಣನಾಗದೆ ಇದ್ದಾನೆ. ಆದರೆ ಔರಂಗಜೇಬ ತೋರಿಸಿದ ಒಂದು ವರ್ತನೆಯಿಂದ ಆತ ತನ್ನ ಮಗನ ಬಗ್ಗೆ ಹೊಟ್ಟೆಯಲ್ಲಿ ಏನಿಟ್ಟುಕೊಂಡಿದ್ದಾನೆಂದು ಹೇಳುವುದು ಕಷ್ಟ. ಸಿಂಹವೊಂದು ಬೆಟ್ಟದಿಂದ ಬಯಲಿಗೆ ಇಳಿದುಬಂದು ತುಂಬಾ ಹಾವಳಿ ಮಾಡುತ್ತಿತ್ತು. ಈ ಸಿಂಹವನ್ನು ಬೇಟೆಯಾಡಬೇಕೆಂದು ಔರಂಗಜೇಬನು ಮಗ ಮಜುಮನಿಗೆ ತುಂಬಿದ ಸಭೆಯಲ್ಲಿ ತಿಳಿಸಿದ. ಮಿಾರ್ ಷಿಕಾರ್ ಬೇಟೆಯ ಸಿಬ್ಬಂದಿಯ ಮುತ್ತು ಬಲೆಗಳ ಸಹಾಯದಿಂದ ಬೇಟೆಯಾಡುವುದು ಒಳ್ಳೆಯದು ಎಂದು ಸಲಹೆ ಮಾಡಿದ. ದೊಡ್ಡ ದೊಡ್ಡ ಬಲೆಗಳನ್ನು ಇಂಥ ಅಪಾಯಕರವಾದ ಬೇಟೆಯ ವೇಳೆ ಉಪಯೋಗಿಸಲಾಗುತ್ತಿತ್ತು. ಔರಂಗಜೇಬ, "ಬಲೆಯೇಕೆ ಬೇಕು ? ಅದಿಲ್ಲದೆಯೇ ನನ್ನ ಮಗ ಸಿಂಹವನ್ನು

ಬೇಟೆಯಾಡಲಿ. ನಾನು ರಾಜಕುಮಾರನಾಗಿದ್ದಾಗ ಬಲೆಗಳಿಲ್ಲದೆ ಬೇಟೆಯಾಡಿದ್ದೇನೆ !" ಎಂದು ಮಗನಿಗೆ ಹುರಿದುಂಬಿಸಲು ಪ್ರಯತ್ನಿಸಿದ. ಹುರಿದುಂಬಿಸುವ ಈ ಮಾತುಗಳು ಆಜ್ಞೆಯೋಪಾದಿಯಲ್ಲಿದ್ದ ಕಾರಣ ಔರಂಗಜೇಬನ ತೀರ್ಮಾನಕ್ಕೆ ಮುಜಂ ತಲೆಬಾಗ ಬೇಕಾಯಿತು. ಬಲೆಗಳಿಲ್ಲದೆ ಆತ ಬೇಟೆಯಾಡುವ ಧೈರ್ಯಮಾಡಿದ. ಆ ಮಹಾ ಮೃಗವಾದ ಸಿಂಹದ ಮೇಲೆ ಎರಗಿದ. ಎರಗಿ ಅದನ್ನು ಕೊಂದುಹಾಕಿದ. ಇಬ್ಬರು ಮೂವರು ಜನ ಸಿಂಹಕ್ಕೆ ಬಲಿಯಾದರು. ಹಲವು ಕುದುರೆಗಳು ಅದರ ಬಾಯಿಗೆ ತುತ್ತಾದುವು. ಆ ಸಿಂಹ ಸುಲ್ತಾನನು ಕುಳಿತ ಆನೆಯ ತಲೆಯನ್ನು ಅಪ್ಪಳಿಸಿ ಗಾಯ ಮಾಡಿತು. ಇಷ್ಟು ಮಾಡಿ, ಅದು ಕೊನೆಗೆ ಸುಲ್ತಾನನ ಬಾಣಕ್ಕೆ ಬಲಿಯಾಯಿತು. ಈ ಶೌರ್ಯ ಪ್ರದರ್ಶನದ ನಂತರ ಔರಂಗಜೇಬನಿಗೆ ಮಗನ ಮೇಲೆ ಮಮತೆ ಹೆಚ್ಚಾಗಿದೆ. ಆತನನ್ನು ಡೆಕನ್ ರಾಜ್ಯದ ಸುಬೇದಾರನನ್ನಾಗಿ ನೇಮಿಸಿದ್ದಾನೆ. ಆದರೂ ಅಷ್ಟೇನೂ ಅಧಿಕಾರವಿಲ್ಲದ ಮತ್ತು ಹಣಕಾಸಿನ ಕೊರತೆಯಿರುವ ಸುಲ್ತಾನ್ ಮುಜಂ ಸುಮ್ಮನೆ ಕುಳಿತುಕೊಳ್ಳುವವನಲ್ಲ. ಒಂದಲ್ಲ ಒಂದು ದಿನ ಆತ ತಂದೆಗೆ ತಾಪತ್ರಯ ಉಂಟು ಮಾಡುವವನೇ ಎಂದು ಅನಿಸುತ್ತದೆ.

ಇನ್ನು ಕಾಬೂಲಿನ ಸುಬೇದಾರನಾಗಿದ್ದ ಮೊಹಬತ್‌ಖಾನನ ವಿಚಾರ. ಆ ಪದವಿ ಯಿಂದ ನಿವೃತ್ತಿ ಮಾಡಿದ ಮೇಲೆ ಆತನಿಗೆ ಶಿಕ್ಷೆಯನ್ನು ವಿಧಿಸಲು ಔರಂಗಜೇಬ ಹೋಗಲಿಲ್ಲ. ಅಂಥ ಸಿಪಾಯಿಯ ಪ್ರಾಣವನ್ನು ಸುಲಭವಾಗಿ ತೆಗೆಯಬಾರದೆಂದು ಔರಂಗಜೇಬ ಬಹಿರಂಗವಾಗಿ ಹೇಳಿದ. ಷಾಜಹಾನನ ಉಪ್ಪು ತಿಂದು ಅವನಿಗೆ ಎರಡು ಬಗೆಯದ ಆ ಸಿಪಾಯಿಯನ್ನು ಮೆಚ್ಚಬೇಕಾದದ್ದೇ ಎಂದು ಔರಂಗಜೇಬನ ಅಭಿಪ್ರಾಯ ವಾಗಿತ್ತು. ಈ ಕಾರಣ ಆತನನ್ನು ಜಸ್ವಂತ ಸಿಂಗನ ಬದಲು ಗುಜರಾತಿನ ಸುಬೇದಾರ ನಾಗಿ ನೇಮಿಸಿದ. ಜಸ್ವಂತ ಸಿಂಗನನ್ನು ಕದನ ರಂಗವಾದ ಡೆಕನಿಗೆ ಕಳುಹಿಸಿದನು. ಈ ರೀತಿ ಮೊಹಬತ್‌ಖಾನನ ಬಗ್ಗೆ ಔರಂಗಜೇಬ ವರ್ತಿಸಲು ಆತನು ಒಪ್ಪಿಸಿದ ಹಲವು ಬೆಲೆಯಾದ ಬಹುಮಾನಗಳು ಕಾರಣವಾಗಿದ್ದರೂ ಆಗಿರಬಹುದು. ರೋಷನಾರಾ ಬೇಗಮಳಿಗೆ ಕೊಟ್ಟದ್ದನ್ನು ಬಿಟ್ಟರೆ, ಮೊಹಬತ್‌ಖಾನ ಚಕ್ರವರ್ತಿಗೆ ಹದಿನೈದು ಸಾವಿರ ಚಿನ್ನದ ನಾಣ್ಯಗಳನ್ನೂ, ಪರ್ಷಿಯಾದೇಶದ ಅನೇಕ ಕುದುರೆ ಒಂಟೆಗಳನ್ನೂ ಒಪ್ಪಿಸಿದನು.

ಕಾಬೂಲ್ ಎಂಬ ಹೆಸರು ಹೇಳಿದಾಗ ಅದರ ನೆರೆ ರಾಜ್ಯವಾದ ಕಂದಹಾರ್ ರಾಜ್ಯದ ಜ್ಞಾಪಕ ಬರುತ್ತದೆ. ಈ ರಾಜ್ಯ ಈಗ ಪರ್ಷಿಯಾಕ್ಕೆ ಅಧೀನವಾಗಿದೆ. ಇದರ ಮೇಲಿನ ಆಧಿಪತ್ಯದ ಬಗ್ಗೆ ಪರ್ಷಿಯಾ ಮತ್ತು ಹಿಂದೂಸ್ಥಾನದ ರಾಜರುಗಳಲ್ಲಿ ಆಗಾಗ್ಗೆ ಮನಸ್ತಾಪಗಳು ಬರುತ್ತಲೇ ಇವೆ. ಅದನ್ನು ವಶಪಡಿಸಿಕೊಳ್ಳಬೇಕೆಂದು ಔರಂಗಜೇಬ ಸೈನ್ಯ ಸಿದ್ಧತೆಮಾಡಿಕೊಳ್ಳುತ್ತಿರುವಲ್ಲಿ ಪರ್ಷಿಯ ರಾಜ ಸತ್ತುಹೋದನೆಂಬ ಸುದ್ದಿ ಬಂದಿತು. ಅವನ ತರುವಾಯ ಸಿಂಹಾಸನವನ್ನೇರಿದ ಮಗುವಿನ ಮೇಲೆ ಯುದ್ಧ

ಮಾಡುವುದು ತಕ್ಕುದಲ್ಲ ಎಂದು ನಟಿಸಿ ಔರಂಗಜೇಬ ಈಗ ಸುಮ್ಮನಿದ್ದಾನೆ. 'ಮಗು' ಎಂದು ಯಾರನ್ನು ಔರಂಗಜೇಬ ಕರೆದನೋ ಆತನ –ಷಾ ಸುಲೇಮಾನನ –ವಯಸ್ಸು ಇಪ್ಪತ್ತೈದು ವರ್ಷಗಳಿಗೆ ಕಡಿಮೆ ಇಲ್ಲವೆಂದು ನನ್ನ ಭಾವನೆ !

ಇನ್ನು ತನ್ನ ಪಕ್ಷವನ್ನು ವಹಿಸಿದ್ದ ಬೇರೆಯವರಿಗೆ ಔರಂಗಜೇಬ ಏನೇನು ಮಾಡಿದ ಎಂಬುದನ್ನು ನೋಡೋಣ. ಷೈಸ್ತಾಖಾನನ ವಿಚಾರ ಆಗಲೇ ಹೇಳಿದೆ. ಆತ ಬಂಗಾಳದ ಸುಬೇದಾರನಾದ. ಮೀರ್‌ಖಾನ ಕಾಬೂಲಿನ ಸುಬೇದಾರನಾದ. ಲಾಹೋರಿನ ಸುಬೇದಾರನಾಗಿ ಖಲೀಲುಲ್ಲಾಖಾನ್ ನೇಮಿಸಲ್ಪಟ್ಟ. ಎಲಬಾಸಿಗೆ (ಅಲಹಾಬಾದಿಗೆ) ಮೀರ್ ಬಾಬಾ ಹೋದ. ಪಟ್ಣಾದ ಆಡಳಿತ ಲಷ್ಕರ್‌ಖಾನನಿಗೆ ವಹಿಸಲ್ಪಟ್ಟಿತು. ಯಾರ ಸಲಹೆಯಿಂದ ಸುಲ್ತಾನ್ ಸೂಜ ಕಡ್ಜೌವ್ (Kadjove)ಯುದ್ಧವನ್ನು ಕಳೆದು ಕೊಂಡನೋ ಆ ಅಲ್ಲಾವೆರ್ದಿಖಾನನ ಮಗ ಸಿಂಧ್ ಸುಬೇದಾರನಾದ. ಯಾರ ಮಾತಿಗೆ ಬಹು ಬೆಲೆ ಕೊಡುತ್ತಿದ್ದನೋ ಆ ಫಜಲ್‌ಖಾನನನ್ನು ಔರಂಗಜೇಬ ತನ್ನ ಅರಮನೆಯ 'ಖಾನ್ಸಾಮನ್' (Khansaman ಮನೆವಾರ್ತೆಗಾರ) ಆಗಿ ನೇಮಿಸಿದ. ದನೇಷ್‌ಮಂಡ್‌ಖಾನ ದಿಲ್ಲಿಯ ಸುಬೇದಾರನಾದ. ಈತನಿಗೆ ಗ್ರಂಥಗಳ ಅಭ್ಯಾಸದಲ್ಲಿ ತುಂಬಾ ಆಸಕ್ತಿ. ಅಲ್ಲದೆ ರಾಜ್ಯದ ವಿದೇಶಿ ವ್ಯವಹಾರಗಳಲ್ಲಿ ಹೆಚ್ಚು ಕಾಲವನ್ನು ಕಳೆಯುತ್ತಿದ್ದ. ಇದನ್ನು ಔರಂಗಜೇಬನು ಗಮನಿಸಿ ಆತನು ರಾಜಸಭೆಗೆ ದಿನಕ್ಕೆರಡು ಸಲ ಹಾಜರಾಗಿ ಸಲಾಂ ಸಲ್ಲಿಸುವ ಕರ್ತವ್ಯದಿಂದ ವಿನಾಯಿತಿ ಕೊಟ್ಟಿದ್ದಾನೆ. ದಿನಕ್ಕೆರಡು ಸಲ ಅಮೀರರು ಹಾಜರಾಗಿ ಸಲಾಂ ಹಾಕದಿದ್ದರೆ ದಂಡ ತೆರಬೇಕಾಗುತ್ತದೆ. ಪುಟ್ಟದಾದ ಮತ್ತು ಸುಲಭವಾಗಿ ಹೋಗಿಬರಲು ಸಾಧ್ಯವಿಲ್ಲದ ಆ ಕಾಶ್ಮೀರ ರಾಜ್ಯಕ್ಕೆ ದಿಯಾನತ್‌ಖಾನ್ ಸುಬೇದಾರನಾಗಿದ್ದಾನೆ. ಕಾಶ್ಮೀರವು ಇಂಡೀಸಿನ ಭೂಸ್ವರ್ಗ ಎಂದು ಪರಿಗಣಿಸಲ್ಪಟ್ಟಿದೆ. ಅಕ್ಬರನು ಉಪಾಯದಿಂದ ಈ ದೇಶವನ್ನು ವಶಪಡಿಸಿ ಕೊಂಡನು. ಕಾಶ್ಮೀರಕ್ಕೆ ಸಪ್ರಮಾಣವಾದ ಇತಿಹಾಸವುಂಟು[1] ; ಅದರದೇ ಆದ ಭಾಷೆ ಉಂಟು. ಈ ಭಾಷೆಯಲ್ಲಿ ರಚಿತವಾದ ಪುರಾತನ ರಾಜರ ಪರಂಪರೆಯ ಕಥೆಯುಂಟು. ಈ ದೇಶದ ರಾಜರುಗಳು ಕೆಲವು ವೇಳೆ ಇಡೀ ಹಿಂದೂಸ್ಥಾನವನ್ನು, ಅಂದರೆ ಸಿಲೋನಿನ ವರೆಗೆ, ಗೆಲ್ಲುವಷ್ಟು ಶಕ್ತಿವಂತರಾಗಿದ್ದುದುಂಟು. ಈ ದೀರ್ಘ ಇತಿಹಾಸಗಳ ಸಂಕ್ಷಿಪ್ತ ಕೈಪಿಡಿಯನ್ನು ಜಹಾಂಗೀರ್ ಪಾರಸಿ ಭಾಷೆಯಲ್ಲಿ ಬರೆಸಿದ್ದ. ಅದರ ಒಂದು ಪ್ರತಿ ನನ್ನ ಬಳಿಇದೆ.

ಇನ್ನು ಜಸ್ವಂತಸಿಂಗ್ ಮತ್ತು ಜಯಸಿಂಗರ ವಿಚಾರ. ಇವರ ಬಗ್ಗೆ ಕೊಂಚ ಅಸ್ಪಷ್ಟತೆ ಇದೆ. ಅದನ್ನು ಈಗ ನಾನು ಪರಿಹರಿಸಲು ಪ್ರಯತ್ನಿಸುತ್ತೇನೆ. ವಿಜಾಪುರದ ಜೆಂಟೈಲನ ನಾಯಕತ್ವದಲ್ಲಿ ದಂಗೆಯೊಂದು ಎದ್ದಿತು. ಆ ಜೆಂಟೈಲ ಆ ನಾಡಿನ ಒಬ್ಬ

[1]ಇದೇ ಪ್ರಸಿದ್ಧವಾದ ಕಲ್ಹಣನ "ರಾಜತರಂಗಿಣಿ".

ರಾಜನಿಗೆ ಸೇರಿದ ಹಲವಾರು ಮುಖ್ಯ ಕೋಟೆಕೊತ್ತಲುಗಳನ್ನೂ ಒಂದೆರಡು ಬಂದರು ಗಳನ್ನೂ ವಶಪಡಿಸಿಕೊಂಡ. ಆ ಧೈರ್ಯವಂತನಾದ ಜೈಂಟ್ಲೆಲ ಯಾರೆಂದರೆ ಶಿವಾಜಿ (Seva-Gi) ಅಥವಾ ಶಿವದೇವ (Lord Shiva). ಪ್ರಾಣದ ಮೇಲಿನ ಭಯಭೀತಿ ಗಳನ್ನು ತೊರೆದು ಮುನ್ನುಗ್ಗಿ ಕಾರ್ಯಸಾಧಿಸುವ ಶೂರ ಆತ. ಷೈಸ್ತಾಖಾನ ಡೆಕನಿ ನಲ್ಲಿದ್ದಾಗ, ವಿಜಾಪುರದ ರಾಜ ಮತ್ತು ಅವನೊಡನೆ ಸಾಮಾನ್ಯವಾಗಿ ಕೂಡಿಕೊಳ್ಳುವ 'ರಾಜ'ರುಗಳಿಗೆ ಆ ಶಿವಾಜಿ ಪ್ರಬಲನಾದ ಶತ್ರು ಎಂದು ಗೊತ್ತಾಯಿತು. ಆತನ ಗುಂಡಿಗೆ ಎಷ್ಟೆಂಬುದನ್ನು ಆತ ಷೈಸ್ತಾಖಾನನನ್ನು ಸೆರೆಹಿಡಿಯಲು ಮಾಡಿದ ಪ್ರಯತ್ನ ದಿಂದ ಅರಿತುಕೊಳ್ಳಬಹುದು. ಔರಂಗಾಬಾದ್ ಕೋಟೆಯಲ್ಲಿ ಷೈಸ್ತಾಖಾನ ತನ್ನ ಸೈನ್ಯದೊಡನೆ ಇರುವಲ್ಲಿ, ಒಂದು ದಿನ ಶಿವಾಜಿ ಕೆಲವೇ ಸಿಪಾಯಿಗಳೊಡಗೂಡಿ ಷೈಸ್ತಾ ಖಾನನು ಇದ್ದ ಕೋಟೆಯನ್ನು ಪ್ರವೇಶಿಸಿದ. ಹಾಗೆ ಪ್ರವೇಶಿಸಿ ಷೈಸ್ತಾಖಾನನನ್ನು ಇನ್ನೇನು ಬಂಧಿಸಬೇಕು, ಆಗ ಅದು ಗೊತ್ತಾಗಿಬಿಟ್ಟಿತು. ಕಿಟಕಿಯನ್ನು ಹಾರಿ ತಪ್ಪಿಸಿ ಕೊಂಡ ಷೈಸ್ತಾಖಾನನಿಗೆ ಭಾರಿ ಪೆಟ್ಟುಕೊಟ್ಟ. ಕತ್ತಿ ಇರಿದು ಮೇಲೆ ಬಿದ್ದ ಷೈಸ್ತಾ ಖಾನನ ಮಗ ಸತ್ತುಹೋದ.

ಇನ್ನೊಂದು ಸಾಹಸ ಕೆಲಸ ಮಾಡಿದ ಶಿವಾಜಿ. ಎರಡು ಮೂರು ಸಾವಿರ ಸೈನಿಕರೊಡಗೂಡಿ ಆತ ತನ್ನ ಪಾಳೆಯದಿಂದ ಗುಟ್ಟಾಗಿ ಹೊರಟ. ಮೊಗಲ್ ಆಸ್ಥಾನಕ್ಕೆ ಹೋಗುತ್ತಿರುವ 'ರಾಜ'ನೊಬ್ಬನಂತೆ ನಟಿಸಿದ. ಸೂರತ್ತನ್ನು ಸಮೀಪಿಸುತ್ತಿದ್ದಾಗ ಆತನಿಗೆ ಅಲ್ಲಿಯ ಕೊತ್ವಾಲನು ಸಿಕ್ಕಿದನು. ತಾನು ನಗರವನ್ನು ಪ್ರವೇಶಿಸದೆ ತನ್ನ ಪ್ರಯಾಣವನ್ನು ಮುಂದುವರಿಸುವವನಂತೆ ನಟಿಸಿದ. ಆದರೆ, ಆತನ ಮುಖ್ಯ ಉದ್ದೇಶ ಆ ಹೆಸರಾಂತ ಹಾಗೂ ಶ್ರೀಮಂತ ಬಂದರು–ಪಟ್ಟಣವನ್ನು ಕೊಳ್ಳೆಹೊಡೆಯುವುದೇ ಆಗಿತ್ತು. ಕೈಯಲ್ಲಿ ಕತ್ತಿ ಹಿಡಿದು ಆತ ಪಟ್ಟಣವನ್ನು ಪ್ರವೇಶಿಸಿ ಅಲ್ಲಿ ಮೂರು ದಿವಸ ಗಳ ಕಾಲ ಇದ್ದ. ಜನರಿಗೆ ಚಿತ್ರಹಿಂಸೆ ಕೊಟ್ಟು ಅವರು ತಮ್ಮ ಗುಪ್ತ ಧನವನ್ನು ತೋರಿಸುವಂತೆ ಮಾಡಿದ. ತನ್ನೊಡನೆ ತೆಗೆದುಕೊಂಡು ಹೋಗಲು ಸಾಧ್ಯವಾಗದುದನ್ನು ಸುಟ್ಟುಹಾಕಿದ. ಯಾರ ಅಡೆತಡೆಯೂ ಇಲ್ಲದೆ ಬೇಕಾದಷ್ಟು ಭಂಡಾರವನ್ನು ಸೂರೆ ಮಾಡಿದ. ಚಿನ್ನಬೆಳ್ಳಿಗಳೇ ಹಲವಾರು ಮಿಲಿಯ ಬೆಲೆಬಾಳುತ್ತಿತ್ತು. ರೇಷ್ಮೆ ಬಟ್ಟೆ, ನಯವಾದ ಹತ್ತಿ ಬಟ್ಟೆ ಮುಂತಾದ ಬಹು ಬೆಲೆಯುಳ್ಳ ವ್ಯಾಪಾರದ ಸರಕುಗಳನ್ನು ಕೊಳ್ಳೆಹೊಡೆದು ಹೇರಿಕೊಂಡು ಹೋದ. ಈತನಿಗೂ ಜಸ್ವಂತಸಿಂಗನಿಗೂ ಏನೋ ಗುಟ್ಟಾದ ಒಪ್ಪಂದ ಆಗಿತ್ತೆಂದು ಸಂದೇಹ ಪಡುತ್ತಾರೆ. ಜಸ್ವಂತಸಿಂಗನ ಚಿತಾವಣೆ ಯಿಂದಾಗಿಯೇ ಶಿವಾಜಿ ಷೈಸ್ತಾಖಾನನ ಮೇಲೆ ಬಿದ್ದದ್ದು ಮತ್ತು ಸೂರತನ್ನು ಕೊಳ್ಳೆ ಹೊಡೆದದ್ದು ಎಂಬುದಾಗಿಯೂ ಹೇಳುತ್ತಾರೆ. ಈ ಕಾರಣದಿಂದ ಔರಂಗಜೇಬ ಜಸ್ವಂತ ಸಿಂಗನನ್ನು ಡೆಕನಿನಿಂದ ವಾಪಸು ಕರೆಸಿಕೊಂಡನು. ಆದರೆ, ಆ ರಾಜ ದೆಹ್ಲಿಗೆ ಹೋಗುವ ಬದಲು ತನ್ನ ರಾಜ್ಯಕ್ಕೆ ಹೊರಟುಹೋದ.

ಒಂದು ವಿಚಾರ ಹೇಳುವುದನ್ನು ಮರೆತು ಬಿಟ್ಟೆ. ಸೂರತ್ ನಗರವನ್ನು ಕೊಳ್ಳೆ ಹೊಡೆಯುವಾಗ ಶಿವಾಜಿ, ಆ ಪವಿತ್ರ ಶಿವಾಜಿ, ಕಾಪುಚಿನ್ ಮಿಷನರಿಯ ಫಾದರ್ ಅಂಬ್ರೋಸರ ತಂಟೆಗೆ ಹೋಗದಿದ್ದುದೇ ಆ ವಿಚಾರ. "ಫರಂಗಿ 'ಪಾದ್ರಿ'ಗಳು ಒಳ್ಳೆಯ ಜನ. ಅಂಥವರ ತಂಟೆಗೆ ಹೋಗುವುದು ಬೇಡ" ಎಂದನಂತೆ ಶಿವಾಜಿ. ಹಾಗೆಯೇ, ಡಚ್ಚರ ಕಡೆಯ ಒಬ್ಬ ಹಿಂದೂ 'ದೆಲಾಲ್' (Delale=ದಾಲಾಳ್=ದಲ್ಲಾಳಿ)ನ ಮನೆಯನ್ನು ಶಿವಾಜಿ ಉಳಿಸಿದ. ಇದಕ್ಕೆ ಕಾರಣ, ಆತ ಬದುಕಿದ್ದಾಗ ತುಂಬಾ ದಾನಧರ್ಮ ಮಾಡಿದ್ದ ಎಂಬುದು. ಅಂತೆಯೇ, ಶಿವಾಜಿ ಇಂಗ್ಲಿಷರು ಮತ್ತು ಡಚ್ಚರ ವಾಸದ ಮನೆಗಳ ತಂಟೆಗೆ ಹೋಗಲಿಲ್ಲ. ಅವರ ತಂಟೆಗೆ ಹೋಗದಿದ್ದುದು ಅವರ ಮೇಲಿನ ದಯಾ ದಾಕ್ಷಿಣ್ಯಕ್ಕಾಗಿ ಅಲ್ಲ. ಅವರು ಧೈರ್ಯದಿಂದ ಇವನನ್ನು ಎದುರಿಸಿದ ಕಾರಣದಿಂದಾಗಿ. ಇಂಗ್ಲಿಷರು ತಮ್ಮ ಹಡಗುಗಳ ಸಿಬ್ಬಂದಿಯನ್ನು ಕಟ್ಟಿಕೊಂಡು ಅದ್ಭುತವಾಗಿ ಹೋರಾಡಿದರು. ಹೀಗೆ ಹೋರಾಡಿ, ತಮ್ಮ ಮನೆಗಳನ್ನಷ್ಟೇ ಅಲ್ಲದೆ ನೆರೆಹೊರೆಯವರ ಮನೆಗಳನ್ನೂ ಉಳಿಸಿದರು. ಕಾನ್ಸ್ಟಂಟಿನೋಪಲಿನ ಒಬ್ಬ ಯಹೂದನ ಛಲವಂತೂ ಎಲ್ಲರನ್ನೂ ಅಚ್ಚರಿಗೊಳಿಸಿತು. ಔರಂಗಜೇಬನಿಗೆ ಮಾರುವುದಕ್ಕಾಗಿ ಆತನು ತನ್ನ ಬಳಿ ಬಹು ಬೆಲೆಯಾದ ಮಾಣಿಕ್ಯವನ್ನು ಇಟ್ಟುಕೊಂಡಿದ್ದನೆಂಬುದು ಶಿವಾಜಿಗೆ ಗೊತ್ತಿತ್ತು. ಆದರೆ ಅವು ತನ್ನಲ್ಲಿ ಇಲ್ಲವೆಂದೇ ಸಾಧಿಸಿದ. ಆತನನ್ನು ಮಂಡಿಯೂರಿ ಕುಳ್ಳಿರಿಸಿ, ಮೂರು ಸಲ ಕಡಿಯಲು ಕತ್ತಿಯನ್ನೆತ್ತಿದರೂ ಆತ ತುಟಿ ಪಿಟಕ್ಕೆನ್ನಲಿಲ್ಲ. ಯಹೂದನಿಗೆ ತಕ್ಕಂತೆ ವರ್ತಿಸಿದ, ಆತ. ಯಹೂದಿಗಳಿಗೆ ಪ್ರಾಣಕ್ಕಿಂತ ದುಡ್ಡೆ ಹೆಚ್ಚಲ್ಲವೆ !

ಜಸ್ವಂತಸಿಂಗನ ಬದಲು ಜಯಸಿಂಗ ಡೆಕನ್ ಸೈನ್ಯದ ಸೇನಾಧಿಪತ್ಯವನ್ನು ವಹಿಸಿಕೊಳ್ಳಬೇಕೆಂದು ಹೇಳಿ ಔರಂಗಜೇಬ ಆತನನ್ನು ಒಪ್ಪಿಸಿದ. ಅವನ ಜೊತೆಗೆ ತನ್ನ ಮಗ ಸುಲ್ತಾನ್ ಮಜುಮುನನ್ನೂ ಕಳುಹಿಸಿಕೊಟ್ಟ. ಜಯಸಿಂಗನು ಮೊಟ್ಟ ಮೊದಲು ಶಿವಾಜಿಯ ಪ್ರಧಾನ ಕೋಟೆಯ ಮೇಲೆ ಎರಗಿದನು. ಅದಕ್ಕೆ ಮುತ್ತಿಗೆ ಹಾಕುವುದರ ಜೊತೆಗೆ ಆತ ತನ್ನ ಪ್ರಿಯವಾದ ಕಲೆಯನ್ನು, ಅಂದರೆ ರಾಜಸಂಧಾನವನ್ನು, ಅನುಸರಿಸಿದ. ಕೋಟೆಯನ್ನು ಧ್ವಂಸಮಾಡುವ ಮುನ್ನವೇ ಅದು ಶರಣಾಗತವಾಯಿತು. ಶಿವಾಜಿ ಮೊಗಲನೊಡನೆ ಸೇರಿಕೊಂಡು ವಿಜಾಪುರದ ಮೇಲೆ ಯುದ್ಧ ಮಾಡುವಂತೆ ರಾಜೀ ಸಂಧಾನವಾಯಿತು. ಔರಂಗಜೇಬ ಶಿವಾಜಿಯನ್ನು 'ರಾಜ'ನೆಂದು ಘೋಷಿಸಿದನು. ಮತ್ತು ಆತನಿಗೆ ತನ್ನ ರಕ್ಷಣೆಯನ್ನೂ ಆತನ ಮಗನಿಗೆ ಅಮೀರನಿಗೆ ಕೊಡುವಷ್ಟು ವೇತನವನ್ನೂ ನಿಗದಿ ಮಾಡಿದ.

ಇದಾದ ಸ್ವಲ್ಪ ಕಾಲದ ಮೇಲೆ ಔರಂಗಜೇಬ ಪರ್ಷಿಯಾದ ಮೇಲೆ ಯುದ್ಧ ಮಾಡುವ ಆಲೋಚನೆ ಮಾಡಿದ. ಶಿವಾಜಿಯ ಧೈರ್ಯಶೌರ್ಯಗಳನ್ನು ಕೊಂಡಾಡಿ, ಔರಂಗಜೇಬ ಆತನನ್ನು ದಿಲ್ಲಿಗೆ ಆಹ್ವಾನಿಸಿದನು. ಜಯಸಿಂಗ ಶಿವಾಜಿಯ ಪ್ರಾಣ

ಸಂರಕ್ಷಣೆ ಮಾಡುವುದಾಗಿ ಪ್ರಮಾಣ ಪೂರ್ವಕವಾದ ವಚನಕೊಟ್ಟನು. ಆ ವೇಳೆ ಯಲ್ಲಿ ಔರಂಗಜೇಬನ ಸಂಬಂಧಿಕಳಾದ ಷೈಸ್ತಾಖಾನನ ಹೆಂಡತಿ ದಿಹ್ಲಿಯಲ್ಲಿದ್ದಳು. ಆಕೆ ತನ್ನ ಮಗನನ್ನು ಕೊಂದ, ಗಂಡನನ್ನು ಗಾಯಗೊಳಿಸಿದ ಮತ್ತು ಸೂರತ್ತನ್ನು ಹಾಳುಮಾಡಿದ ಶಿವಾಜಿಯನ್ನು ಬಂಧಿಸಲೇಬೇಕೆಂದು ಒಂದೇ ಸಮನೆ ಔರಂಗಜೇಬನ ಕಿವಿ ಊದುತ್ತಲೇ ಇದ್ದಳು. ಇದನ್ನು ಸೂಕ್ಷ್ಮವಾಗಿ ಅರಿತ ಶಿವಾಜಿ ತನ್ನ ಡೇರೆಯನ್ನು ಕಾಯುತ್ತಿದ್ದ ಮೂರು ನಾಲ್ಕು ಅಮೀರರುಗಳ ಕಣ್ಣಿಗೆ ಮಣ್ಣೆರಚಿ ವೇಷಮರೆಸಿಕೊಂಡು ಕತ್ತಲೆಯಲ್ಲಿ ತಪ್ಪಿಸಿಕೊಂಡುಬಿಟ್ಟ. ಇದು ಆಸ್ಥಾನದಲ್ಲಿ ಅಲ್ಲೋಲಕಲ್ಲೋಲ ವನ್ನುಂಟುಮಾಡಿತು. ಜಯಸಿಂಗನ ಮಗ ಇದಕ್ಕೆ ಶಾಮೀಲಾಗಿದ್ದನೆಂಬ ಗುಮಾನಿಯ ಮೇಲೆ ಆತನು ಆಸ್ಥಾನಕ್ಕೆ ಬರಕೂಡದೆಂದು ಆಜ್ಞೆಯಾಯಿತು. ಔರಂಗಜೇಬ ಮಗನನ್ನು ಅಷ್ಟೇ ಅಲ್ಲ, ತಂದೆಯನ್ನೂ ಅನುಮಾನದಿಂದ ನೋಡಿದ. ಇದೇ ಒಂದು ನೆಪಮಾಡಿ ಕೊಂಡು ಔರಂಗಜೇಬ ಎಲ್ಲಿ ತನ್ನ ರಾಜ್ಯವನ್ನು ಕಿತ್ತುಕೊಳ್ಳುವನೋ ಎಂದು ಹೆದರಿದ ಜಯಸಿಂಗ ಡೆಕನ್ ಸೈನ್ಯದ ಸೇನಾಧಿಪತ್ಯವನ್ನು ತೊರೆದು ತನ್ನ ರಾಜ್ಯದ ರಕ್ಷಣೆಗೆ ಧಾವಿಸಿದ. ಆದರೆ ಆತ ದಾರಿಯಲ್ಲಿ ಬ್ರಹ್ನಪುರದ ಬಳಿ ಸತ್ತುಹೋದ. ಈ ದುಃಖ ವಾರ್ತೆಯನ್ನು ಕೇಳಿದ ಔರಂಗಜೇಬ ಜಯಸಿಂಗನ ಮಗನಿಗೆ ತನ್ನ ಹೃತ್ಪೂರ್ವಕ ಸಂತಾಪ ಗಳನ್ನು ಸೂಚಿಸಿದನಲ್ಲದೆ, ತಂದೆಗೆ ಕೊಡುತ್ತಿದ್ದ ಸಂಭಾವನೆಯನ್ನು ಮಗನಿಗೂ ಕೊಡು ವಂತೆ ಆಜ್ಞೆಮಾಡಿದ. ಇದನ್ನು ಕಂಡ ಅನೇಕ ಜನ ಔರಂಗಜೇಬನ ಸಮ್ಮತಿಯಿಂದಲೇ ಶಿವಾಜಿ ತಪ್ಪಿಸಿಕೊಂಡಿರಬೇಕೆಂದು ಅಭಿಪ್ರಾಯಪಟ್ಟರು. ಶಿವಾಜಿ ಆಸ್ಥಾನದಲ್ಲಿರುವುದು ಔರಂಗಜೇಬನಿಗೆ ಪೇಚಾಟವನ್ನುಂಟು ಮಾಡಿರಬೇಕು. ಏಕೆಂದರೆ, ಅಂತಃಪುರದ ಸ್ತ್ರೀಯರು ಶಿವಾಜಿಯ ಮೇಲೆ ಕೆಂಡ ಕಾರುತ್ತಿದ್ದರು. ಆಪ್ತರ ಮತ್ತು ಸಂಬಂಧಿಗಳ ರಕ್ತದಲ್ಲಿ ಕೈ ಅದ್ದಿದ ಆತ ಒಂದು ಪೆಡಂಭೂತವೆಂದು ಅವರು ಭಾವಿಸಿದ್ದರು.

ಈಗ ನಾನು ಡೆಕನ್ ರಾಜ್ಯದ ಇತಿಹಾಸದ ಸೂಕ್ಷ್ಮ ಪರಿಚಯ ಮಾಡಿಕೊಡಲು ಇಚ್ಛಿಸುತ್ತೇನೆ. ಕಳೆದ ನಲವತ್ತು ವರ್ಷಗಳಿಂದ ಈ ರಾಜ್ಯ ರಣರಂಗವಾಗಿ ಬಿಟ್ಟಿದೆ. ಈ ಕಾರಣ ಮೊಗಲನು ಪ್ರಬಲರಾದ ಗೋಲ್ಕೊಂಡಾ ಮತ್ತು ಬಿಜಾಪುರ ರಾಜರು ಗಳೊಡನೆಯೂ, ಇನ್ನಿತರ ಸಣ್ಣಪುಟ್ಟ ರಾಜರುಗಳೊಡನೆಯೂ ಸತತವಾದ ಯುದ್ಧದಲ್ಲಿ ತೊಡಗಿದ್ದಾನೆ. ಕೆಲವು ಮುಖ್ಯವಾದ ಘಟನೆಗಳನ್ನು ಅರಿಯದೆಯೇ ಹಿಂದೂಸ್ಥಾನದ ಈ ಪ್ರದೇಶದಲ್ಲಿ ನಡೆಯುವ ಜಗಳಗಳಿಗೆ ಕಾರಣವನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ. ಮಹಾಪರ್ಯಾಯ ದ್ವೀಪವಾದ ಇಂಡಿಯಾ, ಪಶ್ಚಿಮದ ಕ್ಯಾಂಬೆಯಿಂದ ಪೂರ್ವದ ಬಳಿ ಜಗನ್ನಾಥ ಪಟ್ಟಣದ ಇರುವ ಬಂಗಾಳದವರೆಗೆ, ಉತ್ತರದ ಕೆಲವು ಪರ್ವತ ಪ್ರದೇಶಗಳನ್ನು ಬಿಟ್ಟು ದಕ್ಷಿಣದ ಕೇಪ್‌ಕಾಮೋರಿನ್‌ವರೆಗೆ ಒಬ್ಬ ನಿರಂಕುಶ ರಾಜನ ಅಧೀನಕ್ಕೊಳಪಟ್ಟು ಸುಮಾರು ಇನ್ನೂರು ವರ್ಷಗಳಾದವು. ಈ ರಾಜನ ಹೆಸರು ರಾಮ್-ರಾಸ್ (Ram-ras = ರಾಮರಾಜ್) ಎಂದು. ಆತನೇ ಆ ಅಖಂಡ

ರಾಜ್ಯದ ಕೊನೆಯ ರಾಜ. ಅವನ ಅವಿವೇಕದಿಂದಾಗಿ ರಾಜ್ಯವು ಒಡೆದು ಹಲವು ಹೋಳಾಯಿತು ; ಬೇರೆ ಬೇರೆ ಮತಧರ್ಮಗಳಿಗೆ ಸೇರಿದವರು ರಾಜರಾಗಿಬಿಟ್ಟರು.[1]

ರಾಮರಾಸನ ಸೇವೆಯಲ್ಲಿ ಮೂವರು ಜಾರ್ಜಿಯನ್ ಗುಲಾಮರಿದ್ದರು (Georgian slaves). ರಾಜ ಅವರನ್ನು ಬಹಳ ಮೆಚ್ಚಿ ಮರ್ಯಾದೆ ಮಾಡತೊಡಗಿ, ಕೊನೆಗೆ ಮೂರು ದೊಡ್ಡ ಜಿಲ್ಲೆಗಳ(Districts)ಅಧಿಕಾರ ನಿರ್ವಹಿಸುವುದಕ್ಕೆ ನೇಮಿಸಿದ. ಒಬ್ಬನನ್ನು ಈಗ ಮೊಗಲನ ಅಧೀನದಲ್ಲಿರುವ ಇಡೀ ಡೆಕನ್ ಪ್ರದೇಶಕ್ಕೆ ನೇಮಿಸಿದ. ಈ ಪ್ರದೇಶವು ಬೀದರ್‌ನಿಂದ ಪುರಂದ್[2] ಮತ್ತು ಸೂರತ್ ಹಾಗೂ ನರ್ಮದಾವರೆಗೆ ಹಬ್ಬಿತ್ತು. ಅದರ ರಾಜಧಾನಿ ದೌಲತಾಬಾದ್. ಈಗಿನ ಯಾವ ಬಿಜಾಪುರ ರಾಜ್ಯ ಇದೆಯೋ ಅದು, ರಾಮರಾಸನ ಮೆಚ್ಚಿಗೆಗೆ ಪಾತ್ರನಾದ ಎರಡನೆಯವನಿಗೆ ಸಿಕ್ಕಿತು. ಈಗಿನ ಗೋಲ್ಕೊಂಡಾವೆಂಬ ರಾಜ್ಯದ ಭಾಗ ಮೂರನೆಯವನದಾಯಿತು.

ಈ ಮೂರು ಜನ ಗುಲಾಮರು ಬಹು ಶ್ರೀಮಂತರೂ ಶಕ್ತಿವಂತರೂ ಆಗಿಬಿಟ್ಟರು. ಇವರು ಷಿಯಾ ಪಂಥಕ್ಕೆ ಸೇರಿದ ಮಹಮ್ಮದೀಯರಾದ ಕಾರಣ, ಅದೇ ಪಂಥಕ್ಕೆ ಸೇರಿದವರಾಗಿ ರಾಮರಾಸನ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಮೊಗಲರ ಬೆಂಬಲ ಸಿಕ್ಕಿತು. ಮನಸುಮಾಡಿದರೂ ಅವರು ಜೆಂಟೈಲ್ ಮತಕ್ಕೆ ಸೇರುವಂತಿರಲಿಲ್ಲ. ಏಕೆಂದರೆ, ಇಂಡಿಯಾದ ಜೆಂಟೈಲರು ತಮ್ಮ ಮತಕ್ಕೆ ಬೇರೆಯವರನ್ನು ಸೇರಿಸಿಕೊಳ್ಳುವುದಿಲ್ಲ. ಆ ಮೂರು ಜಾರ್ಜಿಯನ್ ಗುಲಾಮರು ಸೇರಿ ಎಬ್ಬಿಸಿದ ದಂಗೆ ರಾಮರಾಸನ ಕೊಲೆಯಲ್ಲಿ(1565) ಸಮಾಪ್ತಿಯಾಯಿತು. ಆಮೇಲೆ ಅವರು ತಮ್ಮ ತಮ್ಮ ರಾಜ್ಯಗಳಿಗೆ ಹಿಂದಿರುಗಿ 'ಷಾ' ಎಂಬ ಬಿರುದನ್ನು ಹಚ್ಚಿಕೊಂಡು ಮೆರೆಯಲಾರಂಭಿಸಿದರು. ರಾಮರಾಸನ ಮಕ್ಕಳು ಅವರೊಡನೆ ಸೆಣಸಲಾರದೆ 'ಕರ್ನಾಟಕ್' (Karnateck) ಎಂದು ಸಾಮಾನ್ಯವಾಗಿ ಕರೆಯಲ್ಪಡುವ ದೇಶದಲ್ಲಿ ತೆಪ್ಪಗೆ ಇದ್ದುಬಿಟ್ಟರು. ಈ ಕರ್ನಾಟಕ್ ದೇಶವನ್ನು ನಮ್ಮ

---

[1]ಇಲ್ಲಿ ಹೇಳಲ್ಪಟ್ಟಿರುವ ಸಾಮ್ರಾಜ್ಯ ಯಾವುದೆಂದರೆ ವಿಜಯನಗರ ಸಾಮ್ರಾಜ್ಯ. ಈ ಸಾಮ್ರಾಜ್ಯ ತನ್ನ ವೈಭವದ ಶಿಖರವನ್ನು ಮುಟ್ಟಿದ್ದು ಕೃಷ್ಣದೇವರಾಯನ ಕಾಲದಲ್ಲಿ. ಕೃಷ್ಣದೇವರಾಯ ೧೫೩೯ ರಲ್ಲಿ ಕಾಲವಾಗುವ ಮುನ್ನ ತನ್ನ ಬಲತಮ್ಮ ಅಚ್ಯುತರಾಯನನ್ನು ಮುಂದಿನ ರಾಜನೆಂಬುದಾಗಿ ಘೋಷಿಸಿದನು. ಕೃಷ್ಣದೇವರಾಯನಿಗೆ ಹದಿನೆಂಟು ತಿಂಗಳ ಗಂಡು ಮಗುವೊಂದಿತ್ತು. ಆ ಮಗುವನ್ನು ರಾಜ್ಯದ ಪ್ರಧಾನಿಯಾದ ರಾಮರಾಯ ರಾಜನನ್ನಾಗಿ ಮಾಡುವ ಪ್ರಯತ್ನಮಾಡಿದ. ಆದರೆ ಅದು ವಿಫಲವಾಯಿತು. ಕೊನೆಗೆ ಮಗುವೂ ತೀರಿ ಹೋಯಿತು. ಅಚ್ಯುತರಾಯನೇ ರಾಜನೆಂಬುದು ಖಚಿತವಾಯಿತು. ಅಚ್ಯುತ ಕಾಲವಾದ ನಂತರ ಒಂದನೇ ವೆಂಕಟನು ರಾಜನಾದರೂ, ರಾಮರಾಯನೇ ನಿಜವಾದ ರಾಜನಂತೆ ಮೆರೆದ. ಈ ರಾಮರಾಯನನ್ನೇ ಬೆರ್‌ನ್ಯೇ ರಾಮರಾಸನೆಂದು ಕರೆದಿರುವಂತೆ ಕಾಣುತ್ತದೆ.

[2]ಪುರಂದ: ಪೂಣೆಗೆ ಸುಮಾರು 20 ಮೈಲಿ ದೂರದಲ್ಲಿರುವ ಪುರಂದರ.

ಭೂಪಟಗಳಲ್ಲಿ 'ಬಿಸ್ನಗರ್' (Bisnaguer ವಿಜಯನಗರ) ಎಂದು ಕರೆಯುತ್ತಾರೆ. ಇಂದಿಗೂ ಕೂಡ ರಾಮರಾಸನ ಸಂತತಿಯವರು ರಾಜರಾಗಿದ್ದಾರೆ.

ಮೇಲೆ ಹೇಳಿದ ಕಾಲದಲ್ಲಿಯೇ ಇಂಡಿಯಾ ಪರ್ಯಾಯದ್ವೀಪದ ಉಳಿದ ಭಾಗವೂ ಒಡೆದುಹೋಯಿತು. ಈಗಲೂ ಆ ಸಣ್ಣಪುಟ್ಟ ರಾಜ್ಯಗಳು ಉಳಿದುಕೊಂಡು ಬಂದಿವೆ. ಅವುಗಳನ್ನು 'ರಾಜರು'ಗಳು (Rajas), 'ನಾಯಕರು'ಗಳು (Naiques) ಮತ್ತು ಇತರ ಸಣ್ಣಪುಟ್ಟ ಪಾಳೆಯಗಾರರು (Kinglets) ಆಳಿಕೊಂಡು ಬರುತ್ತಿದ್ದಾರೆ.

ಎಲ್ಲಿಯವರೆಗೆ ಆ ಮೂವರು ಗುಲಾಮರು ಪರಸ್ಪರ ಸ್ನೇಹ ಸೌಹಾರ್ದಗಳಿಂದ ಇದ್ದರೊ ಅಲ್ಲಿಯವರೆಗೆ ತಮ್ಮ ರಾಜ್ಯಗಳನ್ನು ರಕ್ಷಿಸಿಕೊಳ್ಳುತ್ತಾ ಬಂದರಲ್ಲದೆ, ಮೊಗಲರ ಮೇಲೆ ಭಾರಿ ಭಾರಿ ಯುದ್ಧಗಳನ್ನು ಮಾಡಲು ಸಹ ಶಕ್ತಿವಂತರಾಗಿದ್ದರು. ಆದರೆ ಅವರಲ್ಲಿ ಯಾವಾಗ ಅಸೂಯೆಯ ಬೀಜಗಳು ಹುಟ್ಟಿಕೊಂಡುವೋ ಆಗ ಅವರು ನೆರೆ ರಾಜ್ಯದ ಸಹಾಯವಿಲ್ಲದೆ ತಮಗೆ ತಾವೇ ಸ್ವತಂತ್ರರಾಗಿ ವರ್ತಿಸಲಾರಂಭಿಸಿದರು ; ಅನೈಕಮತ್ಯದ ಅಪಾಯಕ್ಕೆ ಒಳಗಾದರು. ಇದನ್ನು ಸದುಪಯೋಗಿಸಿಕೊಂಡ ಮೊಗಲನು ನೈಜಾಮ್ ಷಾನ ರಾಜ್ಯದ ಮೇಲೆ ದಂಡೆತ್ತಿಹೋದ. ನೈಜಾಂ ಷಾ ಮೊದಲನೆ ಗುಲಾಂ ರಾಜನ ಸಂತತಿಯಲ್ಲಿ ಐದನೆಯವನೋ ಆರನೆಯವನೋ ಆಗಿದ್ದ. ಮೊಗಲನು ದಂಡೆತ್ತಿಹೋಗಿ ರಾಜ್ಯವನ್ನು ವಶಪಡಿಸಿಕೊಂಡನು. ನೈಜಾಂ ಷಾ ಮೊದಲಿಗೆ ತನ್ನ ರಾಜಧಾನಿಯಾಗಿದ್ದ ದೌಲತಾಬಾದಿನಲ್ಲಿ ಬಂಧನದಲ್ಲಿರುವಾಗ ಸತ್ತುಹೋದ.

ಆಗಿನಿಂದ ಗೋಲ್ಕೊಂಡಾ ರಾಜರುಗಳು ಹೊರಗಿನ ದಾಳಿಯಿಂದ ಮುಕ್ತರಾಗಿದ್ದಾರೆ. ಇದಕ್ಕೆ ಕಾರಣ ಅವರ ಬಲವಾದ ಶಕ್ತಿಯಲ್ಲ. ಉಳಿದ ಎರಡು ಸೋದರಿ ರಾಜ್ಯಗಳು ಮೊಗಲ ಸೈನ್ಯಕ್ಕೆ ಸಾಕಷ್ಟು ತಾಪತ್ರಯ ಕೊಡುತ್ತಿರುವುದೇ ಇದಕ್ಕೆ ಕಾರಣವಾಗಿದೆ. ಅಲ್ಲದೆ ಮೊಗಲನು ಗೋಲ್ಕೊಂಡಾ ಮೇಲೆ ತಕ್ಕ ರೀತಿಯಲ್ಲಿ ದಾಳಿಮಾಡುವುದಕ್ಕೆ ಮುಂಚೆ ಅಂಬೆರ್ (Amber), ಪರಂದ (Paranda) ಮತ್ತು ಬೀದರ್ (Bider) ಇವುಗಳನ್ನು ಗೆದ್ದುಕೊಳ್ಳುವ ಆವಶ್ಯಕತೆಯೂ ಕಾರಣವಾಗಿತ್ತದೆ. ಆ ಎರಡೂ ರಾಜ್ಯಗಳು ಕ್ಷೇಮದಿಂದಿರುವುದಕ್ಕೆ ಅವುಗಳ ವಿವೇಕಯುತವಾದ ರೀತಿ ನೀತಿಗಳೂ ಕಾರಣ ಎಂದು ಹೇಳಬಹುದು. ಅಪಾರ ಐಶ್ವರ್ಯವನ್ನು ಪಡೆದಿರುವ ಅವು ಗುಟ್ಟಾಗಿ ವಿಜಾಪುರದ ರಾಜನಿಗೆ ಹಣ ಸಹಾಯ ಮಾಡಿ, ಆತ ತಮ್ಮ ರಾಜ್ಯಗಳ ರಕ್ಷಣೆಮಾಡುವಂತೆ ಏರ್ಪಡಿಸಿಕೊಂಡಿವೆ. ಹೀಗಾಗಿ ವಿಜಾಪುರಕ್ಕೆ ಏನಾದರೂ ಅಪಾಯ ಒದಗಿದೆ ಎಂದರೆ ಗೋಲ್ಕೊಂಡಾ ರಾಜ ತಪ್ಪದೆ ತನ್ನ ಸೈನ್ಯವನ್ನು ಗಡಿಗೆ ಕಳುಹಿಸಿಕೊಡುತ್ತಾನೆ. ಹೀಗೆ ಮಾಡಿ ಮೊಗಲನಿಗೆ ವಿಜಾಪುರವು ತನ್ನ ರಕ್ಷಣೆಯನ್ನು ತಾನು ಮಾಡಿಕೊಳ್ಳಬಲ್ಲುದೆಂದು ತೋರಿಸಿಕೊಂಡಿರುವುದಲ್ಲದೆ, ಸಮಯದಲ್ಲಿ ತನ್ನ ರಕ್ಷಣೆಗೆ ಬೇರೊಬ್ಬರು ಸಿದ್ಧರಾಗಿದ್ದಾರೆಂದೂ ಯುಕ್ತಿಯಿಂದ ತೋರಿಸಿಕೊಂಡಿದೆ. ಇದಲ್ಲದೆ, ಗೋಲ್ಕೊಂಡಾ ರಾಜ್ಯವು ಮೊಗಲನ ಸೈನ್ಯದ ದಂಡನಾಯಕರುಗಳಿಗೆ ಅಪಾರವಾಗಿ ಲಂಚಕೊಟ್ಟು ಒಲಿಸಿ

ಕೊಂಡು, ಅವರು ಗೋಲ್ಕೊಂಡಾ ಬದಲು ದೌಲತಾಬಾದಿಗೆ ಹತ್ತಿರವಾದ ವಿಜಾಪುರದ ಮೇಲೆ ಬೀಳುವುದು ಸೂಕ್ತ ಎಂಬ ಸಲಹೆಯನ್ನು ಮೊಗಲನಿಗೆ ಮಾಡುವಂತೆ ಒಳಸಂಧಾನ ನಡೆಸುತ್ತಿದ್ದರೂ ಇರಬಹುದು. ವಾಸ್ತವವಾಗಿ ಔರಂಗಜೇಬನಿಗೂ ಈಗಿನ ಗೋಲ್ಕೊಂಡಾ ರಾಜನಿಗೂ ನಾನಾಗಲೇ ಹೇಳಿದ ಒಪ್ಪಂದ ಆದ ಮೇಲೆ ಔರಂಗಜೇಬನಿಗೆ ಗೋಲ್ಕೊಂಡಾ ಮೇಲೆ ಬೀಳುವುದಕ್ಕೆ ಮನಸ್ಸಾಗುತ್ತಿಲ್ಲ. ಬಹುಶಃ, ಆತ ಅದನ್ನು ತನ್ನ ರಾಜ್ಯವೇ ಎಂದು ಪರಿಗಣಿಸಿರಬಹುದು. ಬಹಳ ಕಾಲದಿಂದ ಗೋಲ್ಕೊಂಡಾ ಮೊಗಲ್ ಚಕ್ರಾಧಿಪತ್ಯದ ಅಧೀನರಾಜ್ಯವಾಗಿದೆ. ವರ್ಷೇ ವರ್ಷೇ ಅದು ಬಹಳಷ್ಟು ನಗದು ಹಣವನ್ನೂ ಕೈಕುಶಲಗಾರಿಕೆಯ ಬಹು ಸೊಗಸಾದ ವಸ್ತುಗಳನ್ನೂ ಪೆಗು, ಸಯಾಂ ಮತ್ತು ಸಿಲೋನಿನಿಂದ ತರಿಸಿದ ಆನೆಗಳನ್ನು ಕೊಡುತ್ತಿದೆ. ಈಗ ಗೋಲ್ಕೊಂಡಾ ದೌಲತಾಬಾದುಗಳ ಮಧ್ಯೆ ಅಂಥ ಗಣನೀಯವಾದ ಕೋಟೆಯೇ ಇಲ್ಲ. ಹೀಗಾಗಿ, ಔರಂಗಜೇಬ ಭಾವಿಸಿರಬಹುದು, ಒಂದೇ ಒಂದು ದಂಡಯಾತ್ರೆ ಸಾಕು, ಆ ದೇಶವನ್ನು ಗೆದ್ದುಕೊಳ್ಳಲು ಎಂದು. ಆದರೆ ನನ್ನ ಅಭಿಪ್ರಾಯದಲ್ಲಿ ಆ ರೀತಿ ಮಾಡುವುದಕ್ಕೆ ಯಾವ ಅಡ್ಡಿಯೂ ಬಂದಿಲ್ಲ. ಅವನಿಗೆ ಗೊತ್ತು, ತನ್ನ ನೆರೆಯವನು ಬಿದ್ದರೆ ತನ್ನ ಅವನತಿ ಅನಿವಾರ್ಯ ಎಂದು.

ನಾನು ಮೇಲೆ ಹೇಳಿದ ವಿಷಯದಿಂದಾಗಿ ಮೊಗಲನಿಗೆ ಸಂಬಂಧಪಟ್ಟಂತೆ ಗೋಲ್ಕೊಂಡಾ ರಾಜನ ಈಗಿನ ಪರಿಸ್ಥಿತಿಯು ಅರಿವಾಗಬಹುದು. ಆತನು ರಾಜ್ಯದ ಮೇಲೆ ಅಧಿಕಾರ ನಡೆಸುವುದು ಬಹು ಅನಿಶ್ಚಿತವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಗೋಲ್ಕೊಂಡಾದಲ್ಲಿ ಮೀರ್ ಜುಮ್ಲಾನು ಯೋಚಿಸಿದ ಅತಿ ದುಷ್ಟ ಕಾರ್ಯವನ್ನು ಔರಂಗಜೇಬನು ನಿರ್ವಹಿಸಿದಂದಿನಿಂದ, ರಾಜ ತನ್ನ ಬುದ್ಧಿಶಕ್ತಿಯನ್ನೆಲ್ಲಾ ಕಳೆದುಕೊಂಡು ರಾಜ್ಯದ ಸೂತ್ರಗಳನ್ನು ಸಡಿಲಬಿಟ್ಟಿದ್ದಾನೆ. ದೇಶದ ಪದ್ಧತಿಗನುಸಾರವಾಗಿ ದರ್ಬಾರು ನಡೆಸುವ ಮತ್ತು ನ್ಯಾಯ ತೀರ್ಮಾನ ಮಾಡುವ ಕೆಲಸಗಳನ್ನು ಬಿಟ್ಟೇ ಬಿಟ್ಟಿದ್ದಾನೆ. ಗೋಲ್ಕೊಂಡಾ ಕೋಟೆಯ ಹೊರಗಡೆ ತಲೆಹಾಕುವುದೇ ಇಲ್ಲ. ಹೀಗಾದರೆ ಅವ್ಯವಸ್ಥೆ ಹಾಗೂ ದುರಾಡಳಿತ ಅನಿವಾರ್ಯ ಹಾಗೂ ಸ್ವಾಭಾವಿಕ. ದೊರೆಯ ಬಗ್ಗೆ ಪ್ರೀತಿಯಾಗಲೀ ಭೀತಿಯಾಗಲಿ ಇಲ್ಲದ ಆಸ್ಥಾನದ ಹಿರಿಯರು ಅವನ ಮಾತಿಗೆ ಮೂರುಕಾಸಿನ ಬೆಲೆಕೊಡದೆ ಹೇಯವಾದ ಉಪದ್ರವ ಕೊಡಲು ಆರಂಭಿಸಿದ್ದಾರೆ. ಈ ಪೀಡೆಯ ನೊಗವನ್ನು ಕಿತ್ತೆಸೆಯಲು ಕಾತುರರಾಗಿರುವ ಪ್ರಜೆಗಳು ಹೆಚ್ಚು ನ್ಯಾಯದಿಂದ ಕೂಡಿದ ಔರಂಗಜೇಬನ ಆಡಳಿತಕ್ಕೆ ಸಂತೋಷವಾಗಿ ಒಪ್ಪಿಕೊಳ್ಳುವರು.

ಗೋಲ್ಕೊಂಡಾದ ಆ ಹೊಲಸು ರಾಜ ಯಾವ ಕೀಳ್ಮಟ್ಟಕ್ಕೆ ಇಳಿದಿದ್ದಾನೆ ಎಂಬುದಕ್ಕೆ ನಾಲ್ಕೈದು ನಿದರ್ಶನಗಳನ್ನು ಹೇಳಲಿಚ್ಛಿಸುತ್ತೇನೆ. ಮೊದಲನೆಯದು ಯಾವುದೆಂದರೆ, ನಾನು ೧೬೬೭ರಲ್ಲಿ ಗೋಲ್ಕೊಂಡಾದಲ್ಲಿ ಇದ್ದಾಗ ಔರಂಗಜೇಬನ ರಾಯಭಾರಿಯೊಬ್ಬ ರಾಜನ ಆಸ್ಥಾನಕ್ಕೆ ಬಂದದ್ದು. ಆತ ಬಂದ ಉದ್ದೇಶ, ಔರಂಗಜೇಬನು ವಿಜಾಪುರದ ಮೇಲೆ ಮಾಡಬೇಕೆಂದಿರುವ ಯುದ್ಧಕ್ಕೆ ೧೦,೦೦೦ ಅಶ್ವದಳವನ್ನು ಒದಗಿಸ

ಬೇಕೆಂದು ಕೇಳಲು. ಅಷ್ಟು ದಳವನ್ನು ರಾಜ ಒದಗಿಸಲಿಲ್ಲ. ಆದಕ್ಕಿಂತಲೂ ಹೆಚ್ಚಾಗಿ ಅಷ್ಟೊಂದು ಅಶ್ವದಳಕ್ಕೆ ಬೇಕಾಗಿದ್ದ ಹಣವನ್ನು ಒದಗಿಸಿದನು. ರಾಯಭಾರಿಯನ್ನು ಬಹಳ ಮರ್ಯಾದೆಯಿಂದ ಕಂಡು ಅವನಿಗೆ ಅಪಾರ ಬಹುಮಾನಗಳನ್ನಿತ್ತು ಗೌರವಿಸಿದನು.

ಇನ್ನೊಂದು ವಿಚಾರವೆಂದರೆ, ಗೋಲ್ಕೊಂಡಾ ರಾಜನ ಆಸ್ಥಾನದಲ್ಲಿರುವ ಔರಂಗಜೇಬನ ಸಾಮಾನ್ಯ ರಾಯಭಾರಿ ತಾನೇ ರಾಜಾಜ್ಞೆ ಹೊರಡಿಸುವುದು. ಆತನ ಪರವಾಗಿ (passport) ಕೊಡುತ್ತಾನೆ, ಜನರನ್ನು ಹೇಗೆಂದರೆ ಹಾಗೆ ಗದರಿಸುತ್ತಾನೆ, ಮತ್ತು ಮನಬಂದಂತೆ ಹಿಯ್ಯಾಳಿಸುತ್ತಾನೆ. ಒಟ್ಟಿನಲ್ಲಿ ತಾನೇ ಸರ್ವಸ್ವತಂತ್ರ ರಾಜನಂತೆ ವರ್ತಿಸುತ್ತಾನೆ.

ಮತ್ತೊಂದು ವಿಚಾರ, ಮೀರ್ ಜುಮ್ಲಾನ ಮಗ ಮಹಮ್ಮದ್ ಎಮೀರ್ ಖಾನನಿಗೆ ಸಂಬಂಧಪಟ್ಟದ್ದು. ಈತ ಔರಂಗಜೇಬನ ಅನೇಕ ಅಮೀರರುಗಳಲ್ಲಿ ಒಬ್ಬ. ಆದರೆ ಈತನಿಗೆ ಗೋಲ್ಕೊಂಡಾದಲ್ಲಿ ಬಹಳ ಮರ್ಯಾದೆ. ಆದರಲ್ಲಿಯು ಮಸುಲಿಪಟ್ಟದಲ್ಲಿ ಇನ್ನೂ ಹೆಚ್ಚು. ಅಲ್ಲಿ ಇವನ 'ತಪ್ತಪ' (Taptapa=agent=broker=ದಲ್ಲಾಳಿ) ಆಗಿರುವವನು ಆಡಿದ್ದೇ ಆಟ. ಅವನೇ ಬಂದರಿನ ಒಡೆಯನೆಂಬಂತೆ ವರ್ತಿಸುತ್ತಾನೆ. ಕೊಳ್ಳುವುದು, ಮಾರುವುದು, ಹಡಗಿನಲ್ಲಿ ಸರಕುಗಳನ್ನು ಸುಂಕ ಸಾರಿಗೆಗಳಿಲ್ಲದೆ ಬಂದರಿಗೆ ತರಿಸುವುದು, ಕಳುಹಿಸುವುದು—ಹೀಗೆಲ್ಲಾ ಯಾರನ್ನೂ ಹೇಳದೆ ಕೇಳದೆ ಮಾಡುತ್ತಾನೆ. ಹೀಗೆ, ಹಿಂದೆ ಮೀರ್ ಜುಮ್ಲಾ ನಡೆಸಿದ ಮಿತಿಯಿಲ್ಲದ ದರ್ಪಕ್ಕೆ ಅವನ ಮಗ ವಾರಸುದಾರನೋ ಎಂಬಂತೆ ನಡೆದುಕೊಳ್ಳುತ್ತಾನೆ.

ಕೆಲವು ವೇಳೆ ಡಚ್ಚರು ಗೋಲ್ಕೊಂಡಾದ ವ್ಯಾಪಾರಿ ಹಡಗುಗಳನ್ನು ಬಂದರಿನಲ್ಲಿ ತಡೆದು ನಿಲ್ಲಿಸುತ್ತಾರೆ. ಆಗ ಹಡಗುಗಳು ಹೋಗುವುದಕ್ಕಾಗಲಿ ಬರುವುದಕ್ಕಾಗಲಿ ಬಿಡುವುದಿಲ್ಲ. ರೇವಿನಲ್ಲಿ ಹಡಗುಗಳ ಸುಲಭ ಸಂಚಾರಕ್ಕೆ ಗೋಲ್ಕೊಂಡಾ ರಾಜ ಅವರು ಕೇಳಿದ್ದನ್ನು ಕೊಡಬೇಕು.

ಗೋಲ್ಕೊಂಡಾ ರಾಜ್ಯದ ಅವನತಿಯ ಮತ್ತೊಂದು ಕುರುಹು ಎಂದರೆ, ಈಗ ಚಲಾವಣೆಯಲ್ಲಿರುವ ನಾಣ್ಯದ ಕೀಳ್ಮಟ್ಟ. ವ್ಯಾಪಾರಕ್ಕೆ ಇದರಿಂದ ತುಂಬಾ ಹಾನಿ.

ಕೊನೆಯದಾಗಿ ಒಂದು ವಿಚಾರ. ಆ ಹೊಲಸು ಪೋರ್ಚುಗೀಸರು ಸೆಂಟ್ ಥೋಮಿನಲ್ಲಿ ಇದ್ದಾರಷ್ಟೆ. ಆ ಸ್ಥಳವು ಎಲ್ಲಿ ಡಚ್ಚರಿಗೆ ಹೋಗಿಬಿಡುವುದೋ ಎಂದು ಅವರು ಅದನ್ನು ಗೋಲ್ಕೊಂಡಾ ರಾಜನಿಗೆ ವಹಿಸಿಬಿಟ್ಟಿದ್ದಾರೆ. ಈಗ ಅದನ್ನು ವಾಪಸು ಕೊಡದಿದ್ದರೆ ಮಸುಲಿಪಟ್ಟವನ್ನು ಕೊಳ್ಳೆಹೊಡೆಯುತ್ತೇವೆ, ಬೇರೆ ಊರುಗಳನ್ನು ಧ್ವಂಸ ಮಾಡುತ್ತೇವೆ, ಹಾಗೆ ಹೀಗೆ ಎಂದು ಹೆದರಿಸುತ್ತಿದ್ದಾರೆ. ಗೋಲ್ಕೊಂಡಾ ರಾಜ ಇಷ್ಟು ನಿಸ್ಸಹಾಯಕ ಸ್ಥಿತಿಗೆ ಇಳಿದಿದ್ದಾನೆ.

ಆದರೆ ಅನೇಕ ಜನ ಬುದ್ಧಿವಂತರು ಹೇಳುತ್ತಾರೆ, ರಾಜನೇನೋ ತಿಳಿವಳಿಕಸ್ತನೇ ;

ಆದರೆ ಅವನು ಹೀಗೆ ಇರುವುದು ತನ್ನ ಶತ್ರುಗಳನ್ನು ಮೋಸಗೊಳಿಸಲು ಎಂಬುದಾಗಿ. ಆತನಿಗೊಬ್ಬ ಮಗನಿರುವನೆಂದೂ, ಅರಮನೆಯಲ್ಲಿ ಗುಟ್ಟಾಗಿ ರಕ್ಷಿಸಲ್ಪಟ್ಟ ಆತ ಬಹಳ ಧೈರ್ಯಶಾಲಿಯೆಂದೂ, ಸಮಯ ಕಾದು ಆತನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಔರಂಗಜೇಬನೊಡನೆ ಮಾಡಿಕೊಂಡಿರುವ ಕೌಲು ಕರಾರುಗಳನ್ನು ಮುರಿದುಹಾಕಲು ಪ್ರಯತ್ನಿಸುತ್ತಿದ್ದಾನೆಂದೂ ಹೇಳುತ್ತಾರೆ. ಇದರ ನಿಜಾಂಶವನ್ನು ಕಾಲದ ತೀರ್ಮಾನಕ್ಕೆ ಬಿಟ್ಟು, ಈಗ ವಿಜಾಪುರದ ಬಗ್ಗೆ ನಾಲ್ಕು ಮಾತು ಹೇಳುತ್ತೇನೆ.

ವಿಜಾಪುರ ಆಗಾಗ್ಗೆ ಮೊಗಲನನ್ನು ಎದುರಿಸಬೇಕಾಗಿಬಂದರೂ ಅದು ಸ್ವತಂತ್ರ ರಾಜ್ಯವಾಗಿ ಉಳಿದುಕೊಂಡು ಬಂದಿದೆ. ನಿಜವಾದ ವಿಷಯ ಏನು ಎಂದರೆ, ವಿಜಾಪುರದ ಮೇಲೆ ಯುದ್ಧಮಾಡಲು ನೇಮಿಸಲ್ಪಟ್ಟ ದಂಡನಾಯಕರು ರಾಜ್ಯದ ಪ್ರತಿಯೊಂದು ಉದ್ಯೋಗದಲ್ಲಿ ತೊಡಗಿರುವ ಮುಖ್ಯಸ್ಥರಂತೆ, ಸೈನ್ಯದ ದಂಡನಾಯಕತನಕ್ಕೆ ಹಿಗ್ಗಿ ಆಸ್ಥಾನದಿಂದ ಆದಷ್ಟು ದೂರ ಇದ್ದುಕೊಂಡು ರಾಜರಂತೆ ಮೆರೆಯಲು ಆಸೆಪಡುತ್ತಿರುವುದು. ಯುದ್ಧ ನಡೆದರೆ ತಾನೆ ಅವರಿಗೆ ಲಾಭ! ಹೀಗಾಗಿ ಪ್ರತಿಯೊಂದು ಯುದ್ಧವನ್ನೂ ಬೇಕಾಬಿಟ್ಟಿಮಾಡಿ, ಅದನ್ನು ಮುಂದುವರಿಸಿಕೊಂಡುಹೋಗುವ ಆಲೋಚನೆಮಾಡುತ್ತಿದ್ದಾರೆ. ಒಂದು ಗಾದೆಯೇ ಆಗಿದೆ, 'ಹಿಂದೂಸ್ಥಾನದ ಸಿಪಾಯಿಗಳ ರೊಟ್ಟಿ ಮತ್ತು ಬೆಣ್ಣೆ ಎಂದರೆ ಡೆಕನ್' ಎಂಬುದಾಗಿ. ಇನ್ನೊಂದು ವಿಚಾರ ಹೇಳಬೇಕು. ಅದೇನೆಂದರೆ: ವಿಜಾಪುರ ರಾಜ್ಯದಲ್ಲಿ ಬಹು ಬಲವಾದ ಕೋಟೆಗಳೂ ದುರ್ಗಗಳೂ ಇವೆ. ಅಲ್ಲದೆ, ಮೊಗಲನ ರಾಜ್ಯದ ತುದಿಯಲ್ಲಿರುವ ವಿಜಾಪುರ ರಾಜ್ಯದ ಪ್ರದೇಶದಲ್ಲಿ ಹುಲ್ಲು ನೀರು ಸಿಕ್ಕುವುದು ಕಷ್ಟ. ವಿಜಾಪುರ ರಾಜಧಾನಿ ಬಹು ಭದ್ರವಾಗಿದ್ದರೂ, ಬೆಂಗಾಡು ಪ್ರದೇಶದಲ್ಲಿರುವ ಆ ಊರಿನಲ್ಲಿ ಕುಡಿಯಲು ಸಿಹಿನೀರು ಸಿಕ್ಕುವುದು ಕೋಟೆಯ ಒಳಗೆ ಮಾತ್ರ.

ಆದರೆ ವಿಜಾಪುರವೂ ಕ್ಷಯದ ಹಾದಿ ಹಿಡಿದಿದೆ. ಈ ರಾಜ್ಯಕ್ಕೆ ಬೀಗದ ಕೈಯಂತಿರುವ ಪರಂದ (ಪುರಂದರ) ಔರಂಗಜೇಬನ ಕೈವಶವಾಗಿದೆ. ಹಾಗೆಯೇ ಭದ್ರವಾದ ಹಾಗೂ ಸುಂದರವಾದ ಬೀದರ್ ಪಟ್ಟಣವೂ ಬೇರೆ ಮುಖ್ಯ ಊರುಗಳೂ ಅವನಿಗೆ ಸೇರಿಹೋಗಿವೆ. ಗಂಡುಮಕ್ಕಳಿಲ್ಲದ ರಾಜ ಸತ್ತುಹೋಗಿರುವ ಕಾರಣದಿಂದಾಗಿಯೂ ರಾಜ್ಯಕ್ಕೆ ಅಪಾಯವುಂಟು. ಗೋಲ್ಕೊಂಡಾ ರಾಜನ ಸಹೋದರಿ ವಿಜಾಪುರದ ರಾಜನ ಹೆಂಡತಿ. ಆಕೆಯ ದತ್ತುಮಗನೊಬ್ಬ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಆತನೇನೊ ವಿದ್ಯಾವಂತನಾದ ಯುವಕ. ಆದರೆ ರಾಣಿಗೂ ಆ ಹುಡುಗನಿಗೂ ಏಕೋ ಮನಸ್ತಾಪ. ರಾಣಿ ಇತ್ತೀಚೆಗೆ ಮೆಕ್ಕಾದಿಂದ ಹಿಂದಿರುಗಿದಳು. ಆಗ ಅವಳಿಗೆ ದೊರೆತ ಸ್ವಾಗತದಲ್ಲಿ ಏನೇನೂ ಕಳೆ ಇರಲಿಲ್ಲ. ಇದಕ್ಕೆ ಆ ಯುವಕ ರಾಜನು ಕೊಡುವ ಕಾರಣವೇನೆಂದರೆ, ಆಕೆಯು ಮೆಕಾಕ್ಕೆ ಡಚ್ ಹಡಗಿನಲ್ಲಿ ಹೋದಾಗ ಆಕೆ ತನ್ನ ಸ್ತ್ರೀತನಕ್ಕೂ ಹಾಗೂ ಘನತೆಗೂ ಭಂಗಬರುವ ರೀತಿಯಲ್ಲಿ ನಡೆದುಕೊಂಡಳು ಎಂಬುದು. ಆಕೆ ಹಡಗಿನ ಇಬ್ಬರು ಮೂವರು ಸಿಬ್ಬಂದಿ ಜನರೊಡನೆ ಅನೀತಿಯ ಸಂಬಂಧ ಬೆಳೆಸಿದ

ಕೆಂದು ಹೇಳುತ್ತಾರೆ. ಆ ಜನರು ಹಡಗನ್ನು ತ್ಯಜಿಸಿ ರಾಣಿಯೊಡನೆ ಮೆಕ್ಕಾಕ್ಕೊ ಹೋಗಿದ್ದರಂತೆ.

ಜೆಂಟೈಲ್ ನಾಯಕನಾದ ಶಿವಾಜಿ ವಿಜಾಪುರದಲ್ಲಿ ತಲೆದೋರಿರುವ ಅನಾಯಕತೆಯನ್ನು ಉಪಯೋಗಿಸಿಕೊಂಡು ಅನೇಕ ಕೋಟೆಕೊತ್ತಳಗಳನ್ನೂ ಅದರಲ್ಲಿಯು ಬೆಟ್ಟಗುಡ್ಡಗಳಲ್ಲಿರುವವುಗಳನ್ನೂ ತನ್ನ ವಶಪಡಿಸಿಕೊಂಡಿದ್ದಾನೆ. ತಾನೊಬ್ಬ ಸ್ವತಂತ್ರ ರಾಜನಂತೆ ನಡೆದುಕೊಳ್ಳುತ್ತಿದ್ದಾನೆ. ಮೊಗಲನ ಹೆದರಿಕೆ ಮತ್ತು ವಿಜಾಪುರದ ಬೆದರಿಕೆಗಳನ್ನು ತಾತ್ಸಾರದಿಂದ ಕಂಡು ನಕ್ಕುಬಿಡುತ್ತಾನೆ. ಸೂರತ್ತಿನಿಂದ ಹಿಡಿದು ಗೋವಾ ಹೆಬ್ಬಾಗಿಲಿನವರೆಗೆ ದೇಶವನ್ನು ತಡೆಯಿಲ್ಲದೆ ಕೊಳ್ಳೆಹೊಡೆಯುತ್ತಿದ್ದಾನೆ. ಆದರೆ ಒಂದು ವಿಚಾರದಲ್ಲಿ ಅನುಮಾನವಿಲ್ಲ. ಅವನು ವಿಜಾಪುರವನ್ನು ಎಷ್ಟೇ ವಿಧವಾಗಿ ಗಾಯಗೊಳಿಸಲಿ, ನಾಳೆ ಅದಕ್ಕೆ ಅನುಭವಸ್ತನೂ ಶಕ್ತಿವಂತನೂ ಆದ ಸಹಾಯಕನು ಯಾರೆಂದರೆ ಅವನೇ. ಆತ ತನ್ನ ಧೈರ್ಯಶೌರ್ಯಗಳಿಂದ ಹಾಗೂ ಸತತವಾದ ಸಾಹಸದಿಂದ ಔರಂಗಜೇಬನಿಗೆ ತಲೆನೋವಾಗಿದ್ದಾನೆ. ದಿನಬೆಳಗೆದ್ದರೆ ಅವನನ್ನು ನೋಡಿಕೊಳ್ಳಬೇಕಾದ ಮೊಗಲ್ ಸೈನ್ಯಕ್ಕೆ ವಿಜಾಪುರದ ಕಡೆ ಗಮನಹರಿಸಲು ಸಾಧ್ಯವೇ ಆಗಿಲ್ಲ. "ಶಿವಾಜಿಯನ್ನು ಹೇಗೆ ಅಡಗಿಸುವುದು"?—ಇದೊಂದೇ ಔರಂಗಜೇಬನ ಮಹತ್ ಪ್ರಶ್ನೆಯಾಗಿದೆ. ಸೂರತ್ತಿನಲ್ಲಿ ಶಿವಾಜಿ ಏನು ಮಾಡಿದನೆಂದು ಆಗಲೇ ನೋಡಿದ್ದೇವೆ. ಅನಂತರ ಆತ ಗೋವಾ ದ್ವೀಪಕ್ಕೆ ಹೊಂದಿಕೊಂಡಿರುವ ಬಾರ್ದೇಶವನ್ನು (Bardesh) ಪೋರ್ಚುಗೀಸರಿಂದ ಕಸಿದುಕೊಂಡ.

ಕೊನೆಯದಾಗಿ, ನಾನು ದಿಲ್ಲಿಯನ್ನು ಬಿಟ್ಟು ಗೋಲ್ಕೊಂಡಾ ಮಾರ್ಗವಾಗಿ ಸ್ವದೇಶಕ್ಕೆ (ಫ್ರಾನ್ಸಿಗೆ) ಹಿಂದಿರುಗುವಾಗ ನಡೆದ ವಿಷಯ ಈಗ ಹೇಳುತ್ತೇನೆ: ಗೋಲ್ಕೊಂಡಾದಲ್ಲಿರುವಾಗ ಷಾಜಹಾನ್ ತೀರಿಹೋದನೆಂದೂ, ತಂದೆಯ ಮರಣದಿಂದ ಮಗ ಔರಂಗಜೇಬನು ಬಹಳ ದುಃಖಪಟ್ಟನೆಂದೂ ಗೊತ್ತಾಯಿತು. ತಂದೆಯ ಮರಣ ವಾರ್ತೆಯನ್ನು ಕೇಳಿದ ಕೂಡಲೇ ಆತ ಆಗ್ರಾಕ್ಕೆ ಹೊರಟುಬಿಟ್ಟನೆಂತಲೂ, ಅಲ್ಲಿ ಆತನನ್ನು ಬೇಗಂ ಸಾಹೇಬಳು ಬಹಳ ಮರ್ಯಾದೆಯಿಂದ ಕಂಡಳೆಂದೂ ತಿಳಿಯಿತು. ಆಕೆ ಮಸೀದಿಯನ್ನು ಬಹು ಬೆಲೆಯಾದ ಕಿಂಕಾಪು ಬಟ್ಟೆಗಳಿಂದ ಅಲಂಕಾರಮಾಡಿಸಿದ್ದಳಂತೆ. ಹಾಗೆಯೇ ಕೋಟೆಯ ಬಳಿ ಔರಂಗಜೇಬನು ಇಳಿದು ಒಳಕ್ಕೆ ಹೋಗುವ ಸ್ಥಳವನ್ನೂ ಚಂದಮಾಡಿಸಿದ್ದಳಂತೆ. ಔರಂಗಜೇಬ ಅಂತಃಪುರವನ್ನು ಹೊಕ್ಕಾಗ ಆಕೆ ಮುತ್ತು ರತ್ನಗಳ ಆಭರಣಗಳಿಂದ ತುಂಬಿದ ಚಿನ್ನದ ಬೋಗುಣಿಯನ್ನು ಒಪ್ಪಿಸಿದಳೆಂದೂ ಗೊತ್ತಾಯಿತು. ಆ ಆಭರಣಗಳೆಲ್ಲಾ ಆಕೆಗೂ ತಂದೆ ಷಾಜಹಾನನಿಗೂ ಸೇರಿದವುಗಳಾಗಿದ್ದುವು. ಈ ವೈಭವದ ಸ್ವಾಗತಕ್ಕೂ ಸಹೋದರಿಯ ಪ್ರೀತಿಗೂ ಮನಸೋತ ಔರಂಗಜೇಬ ಆಕೆಯ ಹಿಂದಿನ ವರ್ತನೆಯನ್ನು ಮನ್ನಿಸಿ, ಅಂದಿನಿಂದ ಆಕೆಯನ್ನು ಬಹು ಪ್ರೀತಿಯಿಂದ ಕಾಣುತ್ತಾ ಬಂದಿದ್ದಾನಂತೆ.

ಇಲ್ಲಿಗೆ ನಾನು ಹೇಳುತ್ತಿರುವ ಕಥೆ ಮುಗಿಯಿತು. ಈಗ ಆಳುತ್ತಿರುವ ಔರಂಗ ಜೇಬನು ಪ್ರಭುತ್ವದ ಪರಾಕಾಷ್ಠೆಗೆ ಏರಲು ಅನುಸರಿಸಿದ ಮಾರ್ಗಗಳನ್ನು ನನ್ನ ಓದುಗರು ಖಂಡಿಸುವುದರಲ್ಲಿ ಅನುಮಾನವಿಲ್ಲ. ಅವನು ಅನುಸರಿಸಿದ ಮಾರ್ಗಗಳು ಅನ್ಯಾಯವೂ ಕ್ರೂರವೂ ಆಗಿದ್ದುವೆಂಬುದು ನಿಜ. ಆದರೆ ಯೂರೋಪಿನ ರಾಜರುಗಳು ಅನುಸರಿಸುವ ಕಟ್ಟುನಿಟ್ಟಾದ ನಿಯಮಗಳಿಂದ ಆತನನ್ನು ನಾವು ಅಳೆಯುವುದು ಸರಿ ಯಾಗಲಾರದು. ನಮ್ಮಲ್ಲಿ ಹಿರಿಯ ಮಗನು ರಾಜ್ಯಕ್ಕೆ ಉತ್ತರಾಧಿಕಾರಿಯೆಂದು ವಿವೇಕಯುತವೂ ನಿರ್ದಿಷ್ಟವೂ ಆದ ನಿಯಮಗಳಲ್ಲಿ ಹೇಳಿಬಿಟ್ಟಾಗಿದೆ. ಆದರೆ ಹಿಂದೂ ಸ್ಥಾನದಲ್ಲಿ ಸತ್ತ ರಾಜನ ಮಕ್ಕಳೆಲ್ಲ ರಾಜ್ಯಕ್ಕೆ ಸಾಮಾನ್ಯವಾಗಿ ಹಾತೊರೆಯುತ್ತಾರೆ. ಪ್ರತಿಯೊಬ್ಬನೂ ತನ್ನ ಸಹೋದರನನ್ನು ಬಲಿಕೊಟ್ಟು, ಸಿಂಹಾಸನವನ್ನೇರಲು ಹವಣಿಸು ತ್ತಾನೆ ; ಅಥವಾ ಇನ್ನೊಬ್ಬನ ಅಧಿಕಾರ ರಕ್ಷಣೆ ಹಾಗೂ ಭದ್ರತೆಗೆ ತಾನೇ ಬಲಿಯಾಗು ತ್ತಾನೆ. ಆದರೂ ದೇಶದ ಪರಿಸ್ಥಿತಿ, ಹುಟ್ಟು, ವಿದ್ಯಾಭ್ಯಾಸ—ಇವು ಔರಂಗಜೇಬನು ಅನುಸರಿಸಿದ ವಿಧಾನಗಳ ತೀವ್ರತೆಯನ್ನು ಕಡಿಮೆಮಾಡಲಾರವೆಂದು ಹೇಳುವವರೂ ಸಹ ಒಪ್ಪಿಕೊಳ್ಳಬೇಕು, ಆತ ಬಹುಮುಖವಾದ ಹಾಗೂ ಅಪೂರ್ವವಾದ ಪ್ರತಿಭೆಯುಳ್ಳ ರಾಜಕುಮಾರ, ಪರಿಪೂರ್ಣ ರಾಜನೀತಿಜ್ಞ ಹಾಗೂ ಒಬ್ಬ ಮಹಾರಾಜ ಎಂದು.

# ಫ್ರಾನ್ಸ್ವಾಸ್ ಬೆರ್ನ್ಯೇ ಬರೆದ ಪತ್ರಗಳು

## II

ಬೆರ್ನ್ಯೇ ಮೊಗಲ್ ಸಿಂಹಾಸನಕ್ಕಾಗಿ ನಡೆದ ದೀರ್ಘ ಹೋರಾಟದ ಕಥೆಯನ್ನು ಹೇಳಿದ ತರುವಾಯ ಪತ್ರರೂಪದಲ್ಲಿ ಹಿಂದೂಸ್ಥಾನವನ್ನು ಕುರಿತು ಹಲವು ವಿಷಯಗಳನ್ನು ಹೇಳುತ್ತಾನೆ. ಆತ ಮೂವರಿಗೆ ಪತ್ರಗಳನ್ನು ಬರೆದ. ಅವರು ಯಾರೆಂದರೆ : ಫ್ರಾನ್ಸ್ ದೇಶದ ಮೊನ್‌ಸಿನ್ಯೋ ಕಾಲ್ಬೇರ್ (Mon Seigneur Colbert), ಮೆಸ್ಯ ಡ್ಯೆ ಲಮೋತೆ ಲೆ ವಯೇರ್ (Monsieur De La Mothe Le Vayer), ಮೆಸ್ಯರ್ ಷಾಪ್ಲನ್ (Monsieur Chapelain) ಮತ್ತು ಮೆಸ್ಯ ಡ್ಯೆ ಮರ್ವೀಯೆಸ್ (Monsieur De Mervilles). ಮೊದಲ ಮೂವರಿಗೆ ಒಂದೊಂದು ಪತ್ರ ಬರೆದರೆ, ನಾಲ್ಕನೆಯವನಿಗೆ ಒಂಬತ್ತು ಪತ್ರಗಳ ಮಾಲೆ ಯನ್ನೇ ಬರೆದನು. ಷ್ಯಾ ಡ್ಯೆ ತೇವನೋ (Jean De Thevnot) ಎಂಬ ಮತ್ತೊಬ್ಬ ಪ್ರವಾಸಿಯು (೧೬೩೩–೧೬೬೭) ಕೇಳಿದ ಐದು ಪ್ರಶ್ನೆಗಳಿಗೆ ಉತ್ತರಗಳನ್ನು ಸಹ ಒಂಬತ್ತನೆಯ ಪತ್ರದಲ್ಲಿ ಸೇರಿಸಿದ್ದಾನೆ. ಇವೆಲ್ಲ ಪತ್ರಗಳಲ್ಲಿ ಹೇಳಿರುವ ವಿಷಯಗಳು ತುಂಬ ಉಪಯುಕ್ತ ವಾದುವು ಎಂಬುದರಲ್ಲಿ ಸಂದೇಹವಿಲ್ಲ. ಒಂದೊಂದಾಗಿ ಈ ಪತ್ರಗಳನ್ನು ಯಥಾವತ್ತಾಗಿ ಕೊಡಲಾಗಿದೆ.

## ಮೊನ್‌ಸಿನ್ಯೋ ಕಾಲ್ಬೇರ್ ಎಂಬಾತನಿಗೆ ಬರೆದ ಪತ್ರ

ನನ್ನೊಡೆಯ, ಏಷ್ಯಾದಲ್ಲಿ ದೊಡ್ಡವರನ್ನು ನೋಡುವಾಗ ಬರಿಗೈಯಲ್ಲಿ ಹೋಗುವಂತೆಯೇ ಇಲ್ಲ. ನನಗೆ ಔರಂಗಜೇಬನನ್ನು ಕಂಡು ಗೌರವ ಸಲ್ಲಿಸುವ ಅವಕಾಶ ಸಿಕ್ಕಿದಾಗ ಎಂಟು 'ರೂಪಾಯಿ'ಗಳ (roupies)[1] ನಜರು ಒಪ್ಪಿಸಿದೆ. ಫಜೆಲ್‌ಖಾನನಿಗೆ ಚೂರಿ ಇಡುವ ಒಂದು ಪೆಟ್ಟಿಗೆ, ಮುಳ್ಳು ಚಮಚ (fork) ಮತ್ತು ಅಂಬರ್ ಲೋಹದಲ್ಲಿ[2] ಕೂರಿಸಿದ ಒಂದು ಸಣ್ಣ ಚಾಕು–ಇಷ್ಟನ್ನು ಒಪ್ಪಿಸಿದೆ. ಈ ಫಜೆಲ್‌ಖಾನ ಚಕ್ರಾಧಿಪತ್ಯದ ಅತಿ ಮಹತ್ವದ ವಿಷಯಗಳನ್ನು ನೋಡಿಕೊಳ್ಳುವ ಮಂತ್ರಿ. ಅವನು ತೀರ್ಮಾನಿಸಿದಂತೆ ನನ್ನ ವೈದ್ಯವೃತ್ತಿಗೆ ಸಂಬಳ ಸಿಗುತ್ತಿತ್ತು. ನಾನು ಫ್ರಾನ್ಸಿಗೆ ಹಿಂದಿರುಗಿದಾಗ ಅಲ್ಲಿ ಹೊಸ ಸಂಪ್ರದಾಯಗಳನ್ನು ಬಳಕೆಗೆ ತರುವ ಉದ್ದೇಶವಿಲ್ಲದಿದ್ದರೂ ಹಿಂದೂಸ್ಥಾನದಿಂದ ಬಂದಕೂಡಲೇ ಮೇಲೆ ಹೇಳಿದ ಸಂಪ್ರದಾಯಗಳನ್ನು ಸುಲಭವಾಗಿ ಮರೆಯಲು ಸಾಧ್ಯವಾಗುವುದಿಲ್ಲ. ಔರಂಗಜೇಬನ ಮುಂದೆ ಹಾಜರಾದಾಗ ನನ್ನಲ್ಲಿ ಯಾವ ಭಾವನೆಗಳು ಹುಟ್ಟಿದುವೋ ಅದಕ್ಕೆ ತೀರಾ ವಿರುದ್ಧವಾದ ಭಾವನೆಗಳನ್ನು ಹುಟ್ಟಿಸುವ ದೊರೆಯ (ಫ್ರೆಂಚ್ ದೊರೆಯ) ಮುಂದಾಗಲಿ, ಅಥವಾ ಫಜಲ್‌ಖಾನನಿಗೆ ನಾನು ಸಲ್ಲಿಸುವ ಗೌರವಕ್ಕಿಂತ ಬಹು ಪಾಲು ಹೆಚ್ಚು ಗೌರವಕ್ಕೆ ಅರ್ಹರಾದ ತಮ್ಮ ಮುಂದಾಗಲಿ, ನಾನು ಹಾಜರಾದಾಗ ನಿಮಗೆ ನನ್ನ ಕೈಯಿಂದ ಕೊಡಲು ಸಾಧ್ಯವಿರುವುದಕ್ಕೂ ಹೆಚ್ಚಾಗಿ ಅಪೂರ್ವವಾದ ವಸ್ತುವೊಂದನ್ನು ಅರ್ಪಿಸಿದರೆ ಅನ್ಯಥಾ ಭಾವಿಸಬಾರದೆಂದು ಬೇಡುತ್ತೇನೆ. ಹಿಂದೂಸ್ಥಾನದಲ್ಲಿ ಇತ್ತೀಚೆಗೆ ನಡೆದ ಕ್ರಾಂತಿ ಅಸಾಧಾರಣ ಘಟನೆಗಳಿಂದ ತುಂಬಿದೆ. ಆ ಕ್ರಾಂತಿಯತ್ತ ದೊರೆ ಗಮನ ಹರಿಸುವುದು ಸೂಕ್ತ ಎಂದು ನನ್ನ ಭಾವನೆ. ನಾನು ಬರೆಯುತ್ತಿರುವ ಈ ಪತ್ರ, ಅದರಲ್ಲಿ ಹೇಳಿರುವ ವಿಷಯಗಳ ಪ್ರಾಮುಖ್ಯದಿಂದ ನಮ್ಮ ದೊರೆಯ ಮಂತ್ರಿಮಂಡಲದಲ್ಲಿ ನಿಮಗಿರುವ ಸ್ಥಾನಮಾನಕ್ಕೆ ಅನುಚಿತವಾಗಲಾರದೆಂದು ಭಾವಿಸಿದ್ದೇನೆ.[3]

---

[1]ರೂಪಾಯಿ : ಬೆರ್‌ನ್ಯೇ ಹೇಳುವಂತೆ, ಆಗ ಅಂದರೆ ಸುಮಾರು ೧೬೭೦ರಲ್ಲಿ, ಒಂದು ರೂಪಾಯಿಗೆ ಮೂವತ್ತು ಸೋಲ್‌ಗಳು. ಒಂದು ಸೋಲಿಗೆ ೦.೯ ಪೆನ್ನಿಯಂತಾದರೆ ಒಂದು ರೂಪಾಯಿಗೆ ೨ ಷಿಲ್ಲಿಂಗ್ ೩ ಪೆನ್ನಿ.

[2]ನಾಲ್ಕು ಭಾಗ ಚಿನ್ನವನ್ನೂ ಒಂದು ಭಾಗ ಬೆಳ್ಳಿಯನ್ನೂ ಸೇರಿಸಿ ಕರಗಿಸಿ ಮಾಡಿದ ಮಿಶ್ರಲೋಹ.

[3]ಬೆರ್‌ನ್ಯೇ ಈ ಪತ್ರ ಯಾರಿಗೆ ಬರೆದಿದ್ದಾನೋ ಆ ಮಹಾಶಯನ ಹೆಸರು ಪ್ಲಾ ಡ್ಯ ಬಪ್‌ತೀಸ್ಟ್ ಕಾಲ್ಬೇರ್ (Jean De Baptiste Colbert) ಎಂದು. ಈತ ೧೬೧೯ರಲ್ಲಿ ಹುಟ್ಟಿ ೧೬೮೩ರಲ್ಲಿ ಕಾಲವಾದ. ಇಲ್ಲಿ ಹೇಳಿರುವ ದೊರೆ ಫ್ರಾನ್ಸಿನ ಹದಿನಾಲ್ಕನೇ ಲೂಯಿ (Louis XIV of France : ೧೬೩೮–೧೭೧೫). ಈ ದೊರೆಯ ಮಂತ್ರಿಮಂಡಲದಲ್ಲಿ ಕಾಲ್ಬೇರ್ ಅರ್ಥ ಸಚಿವನಾಗಿದ್ದ.

ಒಡೆಯ, ನಿಮ್ಮ ಕೀರ್ತಿ ಹಿಂದೂಸ್ಥಾನದವರೆಗೂ ಹಬ್ಬಿದೆ. ನಾನು ಹಿಂದೂಸ್ಥಾನದಲ್ಲಿ ಹನ್ನೆರಡು ವರ್ಷಗಳನ್ನು ಕಳೆದು, ಈಗ ತಾನೆ ಫ್ರಾನ್ಸಿಗೆ ಹಿಂತಿರುಗುತ್ತಿದ್ದೇನೆ. ಇಲ್ಲಿಗೆ ಬಂದಮೇಲೆ ಫ್ರಾನ್ಸ್ ಎಷ್ಟು ಸುಖ ಸಂತೋಷಗಳಲ್ಲಿದೆಯೆಂಬ ಸಂಗತಿ ತಿಳಿಯಿತು. ಈ ಸಂತೋಷಕ್ಕೆ ತಮ್ಮ ಸತತ ಪ್ರಯತ್ನ ಹಾಗೂ ಅದ್ಭುತ ಶಕ್ತಿಸಾಮರ್ಥ್ಯಗಳು ಕಾರಣವೆಂದು ಕೇಳಿ ಸಂತೋಷಪಟ್ಟೆ. ಈ ವಿಚಾರವಾಗಿ ನಾನು ಬೇಕಾದಷ್ಟು ಹೇಳುತ್ತಾ ಹೋಗಬಹುದು. ಆದರೆ ಎಲ್ಲರಿಗೂ ತಿಳಿದಿರುವುದನ್ನು ಮತ್ತೆ ಮತ್ತೆ ಹೇಳುವುದು ಅನಾವಶ್ಯಕವೆಂದು ಭಾವಿಸಿ, ನಾನು ಹೇಳಬೇಕಾದ ಹೊಸ ಹೊಸ ವಿಚಾರಗಳ ಬಗ್ಗೆ ಈಗ ಬರೆಯುತ್ತಿದ್ದೇನೆ.

ಏಷ್ಯಾದ ಭೂಪಟಗಳು ಮಹಾ ಮೊಗಲ್ ಚಕ್ರವರ್ತಿಯ ಚಕ್ರಾಧಿಪತ್ಯದ ಅಗಾಧ ವಿಸ್ತೀರ್ಣವನ್ನು ತೋರಿಸಿಕೊಡುತ್ತವೆ. ಈ ಚಕ್ರಾಧಿಪತ್ಯವನ್ನು ಸಾಮಾನ್ಯವಾಗಿ 'ಇಂಡೀಸ್' ಅಥವಾ 'ಹಿಂದೂಸ್ಥಾನ್'(Hindustan) ಎಂದು ಕರೆಯುತ್ತಾರೆ. ನಾನು ಈ ದೇಶವನ್ನು ಗಣಿತಶಾಸ್ತ್ರ ರೀತಿಯಾಗಿ ಖಚಿತವಾಗಿ ಅಳೆದುನೋಡಿಲ್ಲ. ಆದರೆ ಒಂದು ದಿನದಲ್ಲಿ ಸಾಮಾನ್ಯವಾಗಿ ಎಷ್ಟು ಪ್ರಯಾಣಮಾಡಬಹುದೋ ಅಷ್ಟು ದೂರದ ಲೆಕ್ಕಾಚಾರದಂತೆ, ಗೋಲ್ಕೊಂಡಾದಿಂದ ಘಜ್ನಿಯವರೆಗಿನ ದೂರ ಮೂರು ತಿಂಗಳ ಪ್ರಯಾಣದಷ್ಟು ಆಗುತ್ತದೆ. ಅಂದರೆ, ಈ ದೂರ ಐನೂರು ಫ್ರೆಂಚ್ ಹರಿದಾರಿಗಳಿಗೆ (French Leagues) ಸಮನಾಗುತ್ತದೆ ಅಥವಾ ಪ್ಯಾರಿಸಿನಿಂದ ಲ್ಯೆಯನ್ಸ್(Lyons) ನಗರಕ್ಕೆ ಇರುವ ದೂರಕ್ಕೆ ಐದರಷ್ಟು ಆಗುತ್ತದೆ.

ಈ ವಿಶಾಲ ದೇಶದ ಬಹು ಭಾಗ ಅತ್ಯಂತ ಫಲವತ್ತಾಗಿದೆ ಎಂಬ ವಿಚಾರವನ್ನು ಮುಖ್ಯವಾಗಿ ಗಮನಿಸಬೇಕು. ಬಹು ದೊಡ್ಡ ರಾಜ್ಯವಾದ ಬಂಗಾಳವೊಂದನ್ನೇ ತೆಗೆದುಕೊಂಡರೆ, ಅದು ಈಜಿಪ್ಟನ್ನೂ ಮೀರಿಸುತ್ತದೆ. ಅಕ್ಕಿ ಮುಂತಾದ ದವಸ ಧಾನ್ಯಗಳಲ್ಲಿ, ಅಷ್ಟೇ ಅಲ್ಲದೆ ಈಜಿಪ್ಟಿನಲ್ಲಿ ತಯಾರಾಗದ ರೇಷ್ಮೆ, ಹತ್ತಿ, ಮತ್ತು ನೀಲಿ—ಇವುಗಳಲ್ಲಿ ಆ ದೇಶವನ್ನು ಹಿಂದೆಬೀಳಿಸುತ್ತದೆ. ಚೆನ್ನಾಗಿ ಸಾಗುವಳಿಯಾದ ಭೂಮಿಯುಳ್ಳ ಹಾಗೂ ಜನಭರಿತವಾದ ಪ್ರದೇಶಗಳು ಇಂಡೀಸಿನಲ್ಲಿ ಇಷ್ಟೋ ಇವೆ. ಇಲ್ಲಿಯ ಕುಶಲ ಕೆಲಸಗಾರರು ಸ್ವಭಾವತಃ ಸೋಮಾರಿಗಳಾದರೂ, ಹೊಟ್ಟೆಯಪಾಡಿಗಾಗಿ ಜಮಖಾನ, ಕಿಂಕಾಪು ಬಟ್ಟೆ, ಕಸೂತಿ ಬಟ್ಟೆ, ಚಿನ್ನ ಬೆಳ್ಳಿಯ ಜರತಾರಿ ಬಟ್ಟೆ, ತರಹ ತರಹ ರೇಷ್ಮೆ ಮತ್ತು ಹತ್ತಿಬಟ್ಟೆ—ಇವುಗಳ ತಯಾರಿಕೆಯಲ್ಲಿ ತೊಡಗಿದ್ದಾರೆ. ಇವರು ತಯಾರಿಸುವ ವಸ್ತುಗಳಲ್ಲಿ ಕೆಲವು ಇಲ್ಲಿಯೇ ಉಪಯೋಗವಾಗುತ್ತವೆ ; ಮತ್ತೆ ಕೆಲವು ಪರದೇಶಗಳಿಗೆ ರವಾನೆಯಾಗುತ್ತವೆ.

ಇನ್ನೊಂದು ವಿಚಾರ ನಿಮ್ಮ ಗಮನಕ್ಕೆ ಬಾರದೆಹೋಗಬಾರದು. ಅದೇನೆಂದರೆ, ಪ್ರಪಂಚದಲ್ಲೆಲ್ಲಾ ಸುತ್ತಾಡಿದ ಚಿನ್ನ ಬೆಳ್ಳಿಗಳು ಕೊನೆಗೆ ಹಿಂದೂಸ್ಥಾನದಲ್ಲಿ ನೆಲೆಯಾಗಿ ನಿಲ್ಲುವ ವಿಚಾರ. ಅಮೆರಿಕಾವನ್ನು ಬಿಟ್ಟ ಚಿನ್ನ ಬೆಳ್ಳಿಯ ಒಂದು ಭಾಗ ಯೂರೋಪಿನ

ರಾಜ್ಯಗಳಲ್ಲಿ ಅಡ್ಡಾಡಿ, ಹಲವಾರು ಮಾರ್ಗಗಳ ಮೂಲಕ ತುರ್ಕಿಗೆ ಬರುತ್ತದೆ. ಆ ದೇಶದಿಂದ ತರಿಸಿಕೊಂಡ ಸಾಮಾನುಗಳಿಗೆ ಪ್ರತಿಯಾಗಿ ಚಿನ್ನ ಬೆಳ್ಳಿಯನ್ನು ಕೊಡಲಾಗುತ್ತದೆ. ಇನ್ನೊಂದು ಭಾಗ ಸ್ಮಿರ್ನಾ ಮೂಲಕ ಪರ್ಷಿಯಾಕ್ಕೆ ಆ ದೇಶದಿಂದ ತರಿಸಿಕೊಂಡ ರೇಷ್ಮೆಗಳಿಗಾಗಿ ಹೋಗುತ್ತದೆ. ಯಮೆನ್ ಅಥವಾ ಅರೇಬಿಯಾ ಫೆಲಿಕ್ಸ್‌ಗಳಿಂದ 'ಕಾಫಿ'[1] ತರಿಸಿಕೊಳ್ಳದಿದ್ದರೆ ತುರ್ಕಿಗೆ ಗತಿಯೇ ಇಲ್ಲ. ಅಂತೆಯೆ, ಇಂಡೀಸಿನ ಉತ್ಪನ್ನಗಳು ಇಲ್ಲದಿದ್ದರೆ ತುರ್ಕಿ, ಯೆಮೆನ್ ಮತ್ತು ಪರ್ಷಿಯಾಗಳಿಗೆ ಆಗುವುದೇ ಇಲ್ಲ. ಹೀಗಾಗಿ ಈ ದೇಶಗಳು ತಮ್ಮಲ್ಲಿಗೆ ಬಂದ ಚಿನ್ನ ಬೆಳ್ಳಿಗಳ ಸ್ವಲ್ಪ ಭಾಗವನ್ನು ಮೋಕಾ, ಬಸ್ಸೋರಾ, ಬಂದರ್ ಅಬ್ಬಾಸಿ ಅಥವಾ ಬಂದರ್ ಗೊಮೆರೊನ್–ಈ ಸ್ಥಳಗಳಿಗೆ ಅನಿವಾರ್ಯವಾಗಿ ರವಾನಿಸಲೇಬೇಕು. ಅಲ್ಲಿಗೆ ಹೋದ ಚಿನ್ನ ಬೆಳ್ಳಿಗಳು ಪ್ರತಿ ವರ್ಷ 'ಮೌಸೆಂ' (mousem =monsoon =ಮಾರುತ) ಕಾಲಗಳಲ್ಲಿ ಬರುವ ಹಡಗುಗಳಲ್ಲಿ ಹಿಂದೂಸ್ಥಾನಕ್ಕೆ ರವಾನಿಸಲ್ಪಡುತ್ತವೆ. ಹಿಂದೂಸ್ಥಾನದಿಂದ ಬರುವ ಸರಕುಗಳ ಬದಲು ಈ ಚಿನ್ನ ಬೆಳ್ಳಿಗಳನ್ನು ಕೊಡಲಾಗುತ್ತದೆ. ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ವಿಷಯವೇನೆಂದರೆ, ಮೋಕಾ, ಬಸ್ಸೋರ ಮತ್ತು ಬಂದರ್ ಅಬ್ಬಾಸಿಯಿಂದ ಹೋದ ಚಿನ್ನ ಬೆಳ್ಳಿಗಳಿಗೆ ಯಾವ ಗತಿಯೋ ಅದೇ ಗತಿ ಹಿಂದೂಸ್ಥಾನದಿಂದ ಪೆಕೆಗೂ, ತನಸ್ಸೆರಿ, ಸಯಾಂ, ಸಿಲೋನ್, ಅಚೀನ್ (ಸುಮಾತ್ರಾದಲ್ಲಿರುವುದು), ಮಕಸ್ಸರ್, ಮಾಲ್ದೀವ್, ಮೊಸಾಂಬಿಕ್ ಮುಂತಾದ ಕಡೆಗಳಿಗೆ ಸರಕುಗಳನ್ನು ಹೊತ್ತು ಹೋಗುವ ಇಂಡಿಯನ್ ಹಡಗುಗಳು ಹಿಂದಿರುಗುವಾಗ ಆ ದೇಶಗಳಿಂದ ಇಂಡಿಯಾಕ್ಕೆ ತರುವ ಅಪಾರ ಚಿನ್ನ ಬೆಳ್ಳಿಗಳಿಗೂ ಆಗುತ್ತದೆ. 'ಇಂಡಿಯನ್–ಹಡಗು'ಗಳೆಂದರೆ ಇಂಡಿಯನರಿಗೆ ಸೇರಿದ, ಅಥವಾ ಡಚ್ಚರು, ಇಂಗ್ಲಿಷರು ಮತ್ತು ಪೋರ್ಚುಗೀಸರಿಗೆ ಸೇರಿದ ಹಡಗುಗಳು. ಜಪಾನಿನಲ್ಲಿ ಸಹ ಚಿನ್ನ ಬೆಳ್ಳಿಯ ಗಣಿಗಳಿವೆ. ಅಲ್ಲಿಂದ ಡಚ್ಚರು ತರುವ ಆ ಅಮೂಲ್ಯ ಲೋಹಗಳಲ್ಲಿ ಸ್ವಲ್ಪ ಭಾಗ ಹಿಂದೂಸ್ಥಾನಕ್ಕೆ ಹೋಗುತ್ತದೆ. ಪೋರ್ಚುಗಲ್‌ನಿಂದಾಗಲಿ ಅಥವಾ ಫ್ರಾನ್ಸಿನಿಂದಾಗಲಿ ಇಂದೂಸ್ಥಾನಕ್ಕೆ ಹೋಗುವ ಚಿನ್ನ ಬೆಳ್ಳಿ ಅಲ್ಲಿಂದ ಹೊರಬರುವುದೇಇಲ್ಲ. ಅದರ ಬದಲು ವ್ಯಾಪಾರದ ಸರಕುಗಳು ಬರುತ್ತವೆ.

'ಹಾಗಿದ್ದರೆ ಇಂದೂಸ್ಥಾನ ಯಾವ ಸರಕನ್ನೂ ಅಮದು ಮಾಡಿಕೊಳ್ಳುವುದಿಲ್ಲವೆ?' ಎಂದು ಕೇಳಬಹುದು. ಇದಕ್ಕೆ 'ಹೌದು' ಎಂದು ಉತ್ತರ ಹೇಳಬೇಕಾಗುತ್ತದೆ. ಆದರೆ ಇಲ್ಲಿಗೆ ಸರಕುಗಳನ್ನು ಕಳುಹಿಸಿದ ವರ್ತಕರಿಗೆ ಬೇಕಾಗಿರುವುದು ಚಿನ್ನ ಬೆಳ್ಳಿಯಲ್ಲ ; ಈ

---

[1]ಕಾಫಿ : ಮೂಲದಲ್ಲಿ **Kauve** ಎಂದಿದ್ದುದನ್ನು ಉಚ್ಚಾರದಲ್ಲಿ **Cauve** ಎಂದಿದ್ದಾನೆ ಬೆರ್ನ್ಯೇ. **Kauve** ಎಂಬ ಪದವನ್ನು ಅರಬ್ಬೀ ಭಾಷೆಯ '**Kauve**' ಎಂಬುದರೊಡನೆ ಹೋಲಿಸಿ. (ಹೆಚ್ಚು ವಿಷಯಗಳಿಗೆ ನಾಗೇಗೌಡರ 'ಬೆಟ್ಟದಿಂದ ಬಟ್ಟಲಿಗೆ ಅಥವಾ ಕಾಫಿಯ ಕಥೆ' ಎಂಬ ಗ್ರಂಥವನ್ನು ನೋಡಿ).

ದೇಶದಲ್ಲಿ ತಯಾರಾದ ಸರಕುಗಳು. ಇಂಡಿಯಾಕ್ಕೆ ಆಮದಾಗುವ ಸರಕುಗಳು ಯಾವು ವೆಂದರೆ : ಜಪಾನ್, ಮೊಲಕ್ಕಾ, ಸಿಲೋನ್ ಮತ್ತು ಯೂರೋಪುಗಳಿಂದ ಡಚ್ಚರು ಕಳುಹಿಸುವ ತಾಮ್ರ, ಲವಂಗ, ಜಾಕಾಯಿ, ದಾಲ್ಚಿನ್ನಿ, ಆನೆ ಮುಂತಾದವು. ಸೀಸವೂ ಇಂಡಿಯಾಕ್ಕೆ ಬೇಕು. ಇದರಲ್ಲಿ ಬಹು ಭಾಗ ಇಂಗ್ಲೆಂಡಿನಿಂದ ಬರುತ್ತದೆ. ಫ್ರಾನ್ಸಿನಿಂದ ಕಿಂಕಾಪಿನ ಬಟ್ಟೆ ಮುಂತಾದ ಸರಕುಗಳು ಬರುತ್ತವೆ. ಹಿಂದೂಸ್ಥಾನಕ್ಕೆ ಬಹಳ ಸಂಖ್ಯೆಯಲ್ಲಿ ವಿದೇಶದ ಕುದುರೆಗಳು ಬೇಕು. ಉಸ್ಬೆಕ್‌ನಿಂದ ಪ್ರತಿ ವರ್ಷ ಇಪ್ಪತ್ತೈದು ಸಹಸ್ರ ಕುದುರೆಗಳು ಬರುತ್ತವೆ. ಕಂದಹಾರ್ ಮೂಲಕ ಪರ್ಷಿಯಾ ದಿಂದಲೂ ಕುದುರೆಗಳು ಬರುತ್ತವೆ. ಹಿಂದೂಸ್ಥಾನ ಅಪಾರವಾದ ಹೊಸ ಹಣ್ಣು ಹಂಪಲಗಳನ್ನು ಉಪಯೋಗಿಸುತ್ತದೆ. ಈ ಹಣ್ಣುಗಳು ಸಮರ್‌ಖಂಡ್, ಬೊಖಾರ, ಮತ್ತು ಪರ್ಷಿಯಾಗಳಿಂದ ಬರುತ್ತವೆ. ಈ ಹೊಸ ಹಣ್ಣುಗಳು ಯಾವುವೆಂದರೆ : ಕಲ್ಲಂಗಡಿ, ಸೇಬು, ಪೇರು ಮತ್ತು ದ್ರಾಕ್ಷಿ ಇವು ದಿಹ್ಲಿಯಲ್ಲಿ ಹೆಚ್ಚು ಉಪಯೋಗಿಸಲ್ಪಡು ತ್ತವೆ. ಹೆಚ್ಚು ಬೆಲೆ ಕೊಟ್ಟಾದರೂ ಇಡೀ ಚಳಿಗಾಲದಲ್ಲಿ ಇವನ್ನು ಜನರು ಬಹಳವಾಗಿ ಕೊಳ್ಳುತ್ತಾರೆ. ಅಲ್ಲದೆ, ಇಡೀ ವರ್ಷ ಉಪಯೋಗಿಸಬಹುದಾದ ಬಾದಾಮಿ, ಒಣದ್ರಾಕ್ಷಿ ಮುಂತಾದುವುಗಳನ್ನು ಇಲ್ಲಿಗೆ ತರಿಸುತ್ತಾರೆ. ಚಿಲ್ಲರೆ ನಾಣ್ಯದಂತೆ ಚಲಾ ವಣೆಗೆ ಬೇಕಾದ ಸಣ್ಣ ಕವಡೆಗಳನ್ನು ಮಾಲ್ದೀವ್ ಮತ್ತು ಮೊಸಾಂಬಿಕ್ ದ್ವೀಪಗಳಿಂದ ತರಿಸಿಕೊಳ್ಳುತ್ತಾರೆ. ಏಕಶೃಂಗಿಯ ಕೊಂಬು, ಆನೆಯ ದಂತ,—ಇವುಗಳನ್ನು ಇಥಿಯೋಪಿಯಾದಿಂದ, ಕಸ್ತೂರಿ ಮತ್ತು ಪಿಂಗಾಣಿ ವಸ್ತುಗಳನ್ನು ಚೀನಾದಿಂದ, ಮುತ್ತುಗಳನ್ನು ಬೆಹರೆನ್ ತುತುಕೊಡಿ (ಕೋರ ಮಂಡಲತೀರ) ಮತ್ತು ಸಿಲೋನ್ ಗಳಿಂದ ಮತ್ತು ಗುಲಾಮರನ್ನು ಇಥಿಯೋಪಿಯಾದಿಂದ ತರಿಸಿಕೊಳ್ಳುತ್ತಾರೆ.

ಇನ್ನೊಂದು ವಿಚಾರವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಅದೇನೆಂದರೆ, ಎಲ್ಲ ಅಮೀರರುಗಳಿಗೂ ಮತ್ತು ಮನ್ಸಬ್‌ದಾರರಿಗೂ ಸಾರ್ವಭೌಮನಾದ ಮಹಾ ಮೊಗಲನೇ ಉತ್ತರಾಧಿಕಾರಿ. ಅತ್ಯಂತ ಮಹತ್ವದ ವಿಚಾರವೆಂದರೆ, ಚಕ್ರಾಧಿಪತ್ಯದ ಪ್ರತಿಯೊಂದು ಎಕರೆ ಭೂಮಿಗೂ ಆತನೇ ಒಡೆಯ. ಎಲ್ಲೋ ಕೆಲವು ಮನೆ ಮತ್ತು ತೋಟತುಡಿಕೆ ಗಳನ್ನು ಮಾತ್ರ ಆತನ ಪ್ರಜೆಗಳು ಕೊಳ್ಳಬಹುದು, ಮಾರಬಹುದು ಅಥವಾ ಬೇರೆ ರೀತಿ ವಿಲೇವಾರಿ ಮಾಡಬಹುದು, ಅಷ್ಟೆ.

ಹೀಗಾಗಿ, ಹಿಂದೂಸ್ಥಾನದಲ್ಲಿ ಚಿನ್ನ ಬೆಳ್ಳಿಗಳ ಗಣಿಗಳಿಲ್ಲದಿದ್ದರೂ ಆ ಲೋಹಗಳು ಅಪಾರ ಮೊತ್ತದಲ್ಲಿವೆ ಎಂಬುದನ್ನು ನಾನು ತೋರಿಸಿದ್ದಾಗಿದೆ. ಮೊಗಲ್ ಚಕ್ರವರ್ತಿಗೆ ಬರುವ ಆದಾಯವೂ ಅಪಾರವಾದದ್ದು. ಅವನ ಶ್ರೀಮಂತಿಕೆಯಂತೂ ಹೇಳತೀರದು. ಆದರೆ ಈ ಅಪಾರ ಐಶ್ವರ್ಯವನ್ನು ಸಮತೋಲನಮಾಡುವ ಅಗತ್ಯ ಪರಿಸ್ಥಿತಿಗಳೂ ಇಲ್ಲಿವೆ. ಮೊಟ್ಟಮೊದಲನೆಯದಾಗಿ, ಹಿಂದೂಸ್ಥಾನ ಚಕ್ರಾಧಿಪತ್ಯದಲ್ಲಿರುವ ವಿಶಾಲವಾದ ಪ್ರದೇಶಗಳು ಮರಳುಗಾಡೋ ಅಥವಾ ಬೆಟ್ಟ ಗುಡ್ಡಗಳೋ ಆಗಿವೆ. ಸರಿಯಾದ

ಬೇಸಾಯವಿಲ್ಲ ; ಮತ್ತು ಜನವಸತಿ ಬಹಳ ಕಡಿಮೆ. ಫಲವತ್ತಾದ ಭೂಮಿಯೂ ಸಹ ಕೂಲಿಯವರಿಲ್ಲದೆ ಬಂಜರು ಬಿದ್ದಿದೆ. ಅನೇಕ ಜನ ಕೂಲಿಯವರು ಸುಬೇದಾರರುಗಳ ಹಿಂಸೆಗೆ ತುತ್ತಾಗಿ ಸತ್ತೇಹೋಗುತ್ತಾರೆ. ಈ ಬಡಜನರು ಆ ದುರಾಸೆಯ ಒಡೆಯರು ಕೇಳಿದ್ದನ್ನು ಕೊಡಲಾರದೆ ತಮ್ಮ ಜೀವನಾಧಾರವಾದುವನ್ನೆಲ್ಲ ಕಳೆದುಕೊಳ್ಳುವುದಲ್ಲದೆ, ತಮ್ಮ ಮಕ್ಕಳುಮರಿಗಳನ್ನೂ ಕಳೆದುಕೊಳ್ಳುತ್ತಾರೆ. ಈ ಮಕ್ಕಳುಮರಿಗಳನ್ನು ಜನರು ಕೊಂಡು ತಮ್ಮ ಸೇವೆಗೆ ಉಪಯೋಗಿಸಿಕೊಳ್ಳುತ್ತಾರೆ. ಇಂಥ ಅಸಹ್ಯ ಪೀಡೆಗೆ ಒಳಗಾದ ಬಡ ರೈತರು ದಿಕ್ಕುಕಾಣದೆ ತಮ್ಮ ಊರನ್ನೇ ಬಿಟ್ಟು, ಜೀವನಕ್ಕೆ ಬೇರೊಂದು ಉಪಾಯ ಹುಡುಕಿಕೊಂಡು ಪಟ್ಟಣಗಳಿಗೋ ಅಥವಾ ಬೀಡುಗಳಿಗೋ ವಲಸೆಹೋಗುತ್ತಾರೆ. ಹೊರೆ ಹೊರುವ, ನೀರು ಹೊರುವ ಮತ್ತು ಕುದುರೆ ಆಳುಗಳ ವೃತ್ತಿಗಳಿಗೆ ಸೇರಿಕೊಳ್ಳುತ್ತಾರೆ. ಕೆಲವು ವೇಳೆ ಅಕ್ಕಪಕ್ಕದ ರಾಜ್ಯಗಳಿಗೆ ಓಡಿಹೋಗುತ್ತಾರೆ. ಅಲ್ಲಿ ಇಷ್ಟೊಂದು ದಬ್ಬಾಳಿಕೆಯಿಲ್ಲ ; ಜೀವನ ಅಷ್ಟೋ ಇಷ್ಟೋ ಸುಖವಾಗಿ ಸಾಗುತ್ತದೆ.

ಎರಡನೆಯದಾಗಿ, ಮೊಗಲ್ ಚಕ್ರಾಧಿಪತ್ಯದಲ್ಲಿ ಹಲವಾರು ನಾಡುಗಳು (Nations) ಸೇರಿವೆ. ಅವುಗಳ ಮೇಲೆಲ್ಲಾ ಸಾಮ್ರಾಟನಿಗೆ ಸಂಪೂರ್ಣ ಹತೋಟಿಯಿಲ್ಲ. ಬಹತೇಕ ನಾಡುಗಳಲ್ಲಿ ಪಾಳೆಯಗಾರರು ಮುಂತಾದವರು ಆಳುತ್ತಿರುತ್ತಾರೆ. ಅವರು ಮೊಗಲನ ಒತ್ತಾಯಕ್ಕೆ ಮಾತ್ರ ಪೊಗದಿ ಕೊಡುತ್ತಾರೆ ಹಾಗೂ ಗೌರವ ಸಲ್ಲಿಸುತ್ತಾರೆ. ಅನೇಕ ವೇಳೆ ಈ ಪೊಗದಿ ಬಹಳ ಕಡಿಮೆ. ಕೆಲವು ರಾಷ್ಟ್ರಗಳಂತೂ ಏನೂ ಕೊಡಬೇಕಾಗಿಲ್ಲ. ಮತ್ತೆ ಕೆಲವು ರಾಷ್ಟ್ರಗಳು ಅವು ಕೊಡುವುದು ಹೋಗಲಿ, ಅವೇ ಈಸಿಕೊಳ್ಳುತ್ತವೆ. ಇದಕ್ಕೆ ಉದಾಹರಣೆ ಪರ್ಷಿಯಾದ ಗಡಿಯಲ್ಲಿರುವ ಸಣ್ಣಪುಟ್ಟ ಪಾಳೆಯಗಾರರು, ಬಲೂಚಿಗಳು, ಆಗನರು (Augan) ಮತ್ತು ಇತರ ಬೆಟ್ಟಗುಡ್ಡವಾಸಿಗಳು.

ಪಠಾಣರು ಬಹು ಮೊಂಡ ಜನಾಂಗ. ಅವರೂ ಮುಹಮ್ಮದೀಯರೆ. ಹಿಂದೆ ಬಂಗಾಳದ ಕಡೆಗಿರುವ ಗಂಗಾನದಿ ಪ್ರದೇಶದಲ್ಲಿ ನೆಲೆಸಿದ್ದರು. ಮೊಗಲರು ಇಂಡಿಯಾದಮೇಲೆ ಧಾಳಿಮಾಡುವುದಕ್ಕಿಂತ ಹಿಂದೆ ಈ ಪಠಾಣರು ಹಲವಾರು ಕಡೆಗಳಲ್ಲಿ ಪ್ರಬಲರಾಗಿದ್ದರು. ಮುಖ್ಯವಾಗಿ ದಿಲ್ಲಿಯಲ್ಲಿ ಅವರ ಪ್ರಾಬಲ್ಯ ಹೆಚ್ಚಿತ್ತು. ಸುತ್ತಮುತ್ತಲ ರಾಜರುಗಳು ಇವರಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದರು.[1] ಈ ಪಠಾಣ್ ರಾಷ್ಟ್ರದ ಕೆಲಸಗಾರರೂ, ನೀರು ಹೊರುವವರೂ ಬಹಳ ಎದೆಗಾರಿಕೆಯ ಜನ. 'ಹಾಗಿಲ್ಲದಿದ್ದರೆ ನಾವೆಲ್ಲಿ ದಿಲ್ಲಿ ಸಿಂಹಾಸನವನ್ನೇರುತ್ತಿದ್ದೆವು!' ಎಂದು ಅವರು ಹೇಳಿಕೊಳ್ಳುತ್ತಾರೆ. ತಾವು ಹೇಳು

---

[1]ದಿಲ್ಲಿಯ ಪಠಾಣ ಸುಲ್ತಾನರು ೧೧೯೩ರಿಂದ ೧೫೨೬ರವರೆಗೆ, ಅಂದರೆ ಸುಮಾರು ಮೂರುವರೆ ಶತಮಾನಗಳ ಕಾಲ, ಆಳಿದರು. ಆರು ಸಂತತಿಗಳೂ ನಲವತ್ತು ರಾಜರುಗಳೂ ದಿಲ್ಲಿ ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರಮಾಡಿದರು.

ವುದನ್ನು ಸಮರ್ಥಿಸಿಕೊಳ್ಳಲು. ಇವರು ಇಂಡಿಯನರನ್ನು, ಅವರು ಜೆಂಟೈಲರಾಗಿರಲಿ ಅಥವಾ ಮೊಗಲರಾಗಿರಲಿ, ಬಹಳ ನಿಕೃಷ್ಟತೆಯಿಂದ ಕಾಣುತ್ತಾರೆ. ತನ್ನ ಪೂರ್ವಿಕರಿಂದ ರಾಜ್ಯವನ್ನು ಕಸಿದುಕೊಂಡ ಮೊಗಲರನ್ನಂತೂ ಕಂಡರೆ ಇವರಿಗೆ ಆಗುವುದಿಲ್ಲ.

ಮೊಗಲನಿಗೆ ಸೊಪ್ಪುಹಾಕದ ಬೇರೆ ರಾಜರುಗಳೆಂದರೆ, ವಿಜಾಪುರ ಮತ್ತು ಗೋಲ್ಕೊಂಡಾ ರಾಜರುಗಳು. ಇವರಲ್ಲದೆ, ನೂರಾರು ರಾಜರುಗಳು ಪೊಗದಿಗಳನ್ನು ಕೊಡುತ್ತಿಲ್ಲ. ಈ ರಾಜರುಗಳಲ್ಲಿ 'ಮಹಾರಾಜ' ಎನಿಸಿಕೊಂಡಿರುವ ರಾಣಾ, ಜಯಸಿಂಗ ಮತ್ತು ಜಸ್ವಂತ್‌ಸಿಂಗ—ಈ ಮೂವರೂ ಒಟ್ಟುಗೂಡಿದರೆ ಮೊಗಲರನ್ನು ಎದುರಿಸಬಲ್ಲಷ್ಟು ಶಕ್ತಿ ಹೊಂದಿದ್ದಾರೆ. ಇವರಲ್ಲಿ ಅಶ್ವಸವಾರರನ್ನು 'ರಜಿಪೂ' (Ragipou) ಎಂದರೆ 'ರಾಜರ ಮಕ್ಕಳು' ಎಂದು ಕರೆಯುತ್ತಾರೆ. ಇವರ ಸೈನಿಕ ವೃತ್ತಿ ತಂದೆಯಿಂದ ಮಗನಿಗೆ ಬರುತ್ತದೆ. ಪ್ರತಿಯೊಬ್ಬನಿಗೂ ಇಂತಿಷ್ಟು ಭೂಮಿ ಎಂದು ಕೊಟ್ಟಿದ್ದಾರೆ. ಅದಕ್ಕೆ ಪ್ರತಿಯಾಗಿ ವಿಧಿಸಿರುವ ನಿರ್ಬಂಧವೆಂದರೆ, ಬೇಕೆಂದಾಗ ಕುದುರೆಯನ್ನೇರಿ ರಾಜನನ್ನು ಅನುಸರಿಸುವುದು. ಈ ಜನ ಯಾವ ಕಷ್ಟವನ್ನಾದರೂ ಸಹಿಸಬಲ್ಲರು. ಇವರು ಅತ್ಯುತ್ತಮ ಸಿಪಾಯಿಗಳಾಗಲು ಬೇಕಾದದ್ದು ಶಿಸ್ತು, ಅಷ್ಟೆ.

ಮೊಗಲ್ ಚಕ್ರವರ್ತಿ ಸುನ್ನಿ ಪಂಥಕ್ಕೆ ಸೇರಿದ ಮಹಮದೀಯ. ಆದರೆ ಅವನ ಬಹುತೇಕ ಆಸ್ಥಾನೀಕರು ಷಿಯಾ ಪಂಥಕ್ಕೆ ಸೇರಿದವರು. ಅಲ್ಲದೆ, ಮೊಗಲನು ಹಿಂದೂಸ್ಥಾನದಲ್ಲಿ ಪರದೇಶದವ. ಏಕೆಂದರೆ, ಆತ ಟಾರ್ಟರಿಯ ಮೊಗಲರಿಗೆ ಮುಖ್ಯಸ್ಥನಾಗಿದ್ದ ತಾಮೆರ್‌ಲೇನ್ ಸಂತತಿಗೆ ಸೇರಿದವ. ಈ ತಾಮೆರ್‌ಲೇನ್ ೧೪೦೧ರಲ್ಲಿ ಇಂಡೀಸಿನ ಮೇಲೆ ಧಾಳಿ ನಡೆಸಿ ಅದನ್ನು ತನ್ನ ವಶಪಡಿಸಿಕೊಂಡನು. ಹೀಗಾಗಿ, ಮೊಗಲ್ ಚಕ್ರವರ್ತಿ ತನಗಾಗದ, ಅಥವಾ ಹೆಚ್ಚು ಕಡಿಮೆ ಹಾಗೆ ಇರುವ, ದೇಶದಲ್ಲಿ ಇದ್ದಾನೆಂದು ಹೇಳಬಹುದು.

ಒಬ್ಬ ಮೊಗಲ ಅಥವಾ ಒಬ್ಬ ಮಹಮ್ಮದೀಯನಿಗೆ ನೂರು ಜನ ಜೆಂಟೈಲರಿದ್ದಾರೆ. ಈ ಕಾರಣ ಆತ ಸದಾ, ದೇಶದಲ್ಲಿ ಶಾಂತಿ ಸಮಾಧಾನಗಳಿರುವಾಗಲೂ, ಭಾರಿ ಸೈನ್ಯವನ್ನು ಇಟ್ಟುಕೊಳ್ಳಬೇಕಾಗಿ ಬಂದಿದೆ. ಈ ಸೈನ್ಯದಲ್ಲಿ ಸ್ಥಳೀಯರಾದ ರಜಪೂತರು, ಪಠಾಣರು ಅಥವಾ ಅಪ್ಪಟ ಮೊಗಲರು ಇದ್ದಾರೆ. ಮೊದಲಿದ್ದಂತೆ ಆಸ್ಥಾನದಲ್ಲಿ ನಿಜವಾದ ಮೊಗಲರು ಇಲ್ಲ. ಈಗ ಉಸ್ಬೆಕರು, ಪರ್ಷಿಯನರು, ಅರಬರು ಮತ್ತು ತುರುಕರು, ಅಥವಾ ಇವರೆಲ್ಲರ ಸಂತತಿಗೆ ಸೇರಿದವರು ಕೂಡಿ ಕಲಸುಮೇಲೋಗರ ಆಗಿದೆ. ಆದರೆ ಒಂದು ವಿಚಾರ. ಅದೇನೆಂದರೆ, ಹೊಸದಾಗಿ ಈ ದೇಶಕ್ಕೆ ಬಂದ ಮೊಗಲರಿಗೆ, ಹಿಂದಿನ ಮೂರನೇ ಅಥವಾ ನಾಲ್ಕನೇ ಸಂತತಿಯ ಕಂದುಬಣ್ಣದ ಇಲ್ಲಿಯ ನಿಸ್ತೇಜಕವಾದ ನಡೆನುಡಿಗಳವರಿಗೆ ಸಿಕ್ಕುವುದಕ್ಕಿಂತ ಹೆಚ್ಚಿನ ಗೌರವ ಮತ್ತು ಸ್ಥಾನಮಾನಗಳು ಸಿಕ್ಕುತ್ತವೆ. ಇಲ್ಲಿಯವರು ಕಾಲ್ದಳದಲ್ಲಿ ಅಥವಾ ಅಶ್ವದಳದಲ್ಲಿ ಖಾಸಗಿ ಸಿಪಾಯಿ ಕೆಲಸ ಸಿಕ್ಕಿದರೆ ಸಾಕೆಂದು ಖುಷಿಯಾಗಿಬಿಡುತ್ತಾರೆ.

ಈಗ ಪ್ರಭುಗಳಾದ ನಿಮಗೆ ಮಹಾ ಮೊಗಲನ ಸೈನ್ಯದ ವಿಚಾರ ಹೇಳುತ್ತೇನೆ. ಮೊದಲಿಗೆ ನಾಟಿ ಸೈನ್ಯದ ವಿಚಾರ. ಈ ಸೈನ್ಯದಲ್ಲಿ ಜಯಸಿಂಗ ಮತ್ತು ಜಸ್ವಂತಸಿಂಗನ ರಜಪೂತರು ಸೇರಿರುತ್ತಾರೆ. ಮೊಗಲನು ಈ ಇಬ್ಬರು ರಾಜರುಗಳಿಗೂ ಇನ್ನಿತರ 'ರಾಜ'ರುಗಳಿಗೂ ಅವರ ಸೇವೆಗಾಗಿ ಭಾರೀ ಹಣ ಕೊಡುತ್ತಾನೆ. ಈ ರಾಜರುಗಳು ಕ್ಲುಪ್ತ ಪ್ರಮಾಣದ ರಜಪೂತ ಸೈನ್ಯವನ್ನು ಯಾವಾಗಲೂ ಸಿದ್ಧವಾಗಿಟ್ಟಿರಬೇಕು. ಈ ರಾಜರುಗಳ ಸ್ಥಾನಮಾನ ಪರದೇಶಿ ಅಮೀರರ ಮತ್ತು ಮಹಮದೀಯ ಅಮೀರರ ಸ್ಥಾನಮಾನದಷ್ಟೇ ಇದೆ. ಅಮೀರರಿಗೆ ಅನ್ವಯಿಸುವ ಕಟ್ಟುಕಟ್ಟಳೆಗಳು ಇವರಿಗೂ ಅನ್ವಯಿಸುತ್ತವೆ. ಅವರಂತೆ ಇವರೂ ಮೊಗಲನಿಗಾಗಿ ಕಾವಲುನಿಲ್ಲಬೇಕು. ಆದರೆ ಒಂದು ವ್ಯತ್ಯಾಸ. ಅದೇನೆಂದರೆ, ರಜಪೂತರು ಅಮೀರರುಗಳಂತೆ ಕೋಟೆಯೊಳಗೆ ಕಾವಲು ನಿಲ್ಲುವುದಿಲ್ಲ. ಕೋಟೆಯೊಳಗೆ ಕಾವಲುನಿಲ್ಲುವುದು ಇಪ್ಪತ್ತನಾಲ್ಕು ಘಂಟೆಗಳ ಬಂಧನದಲ್ಲಿ ಇದ್ದಂತೆ ಎಂದು ರಜಪೂತರು ಭಾವಿಸುತ್ತಾರೆ. ಅಷ್ಟೇ ಅಲ್ಲ, ಕೋಟೆಯನ್ನು ಪ್ರವೇಶಿಸಬೇಕಾದರೆ ತಮ್ಮ ರಕ್ಷಣೆಗೆ ಸಾಕಷ್ಟು ಸೈನ್ಯ ತಮ್ಮೊಡನೆ ಇರಬೇಕು ಎಂಬ ಷರತ್ತುಹಾಕುತ್ತಾರೆ. ಏನೇ ಬಂದರೂ ಪ್ರಾಣ ಕೊಡಲು ಸಿದ್ಧರಾದ ಸಿಪಾಯಿಗಳು ಸಂಗಡ ಇದ್ದರೆ ಮಾತ್ರ ರಾಜರು ಕೋಟೆಯನ್ನು ಪ್ರವೇಶಿಸುತ್ತಾರೆ. ರಜಪೂತ ಸಿಪಾಯಿಗಳ ಇಂಥ ನಿಷ್ಠೆ ಒಮ್ಮೆ ಪರೀಕ್ಷೆಗೆ ಒಳಗಾಯಿತು. ಕೋಟೆಯನ್ನು ಪ್ರವೇಶಿಸಿದ ರಾಜನೊಬ್ಬನನ್ನು ಮೋಸದಿಂದ ಕೊಲ್ಲಬೇಕೆಂದು ಹವಣಿಸಿದ್ದು ಅವನ ರಜಪೂತ ಅಂಗರಕ್ಷಕರ ಪ್ರಾಣಾರ್ಪಣೆಯಿಂದ ತಪ್ಪಿತು.

ಮೊಗಲ್ ಚಕ್ರವರ್ತಿ ರಾಜರನ್ನು ತನ್ನ ಸೇವೆಯಲ್ಲಿ ಇರಿಸಿಕೊಳ್ಳುವುದಕ್ಕೆ ಹಲವಾರು ಕಾರಣಗಳುಂಟು. ಒಂದನೆಯದು, ರಜಪೂತರು ಅತ್ಯಂತ ಶ್ರೇಷ್ಠ ಸಿಪಾಯಿಗಳು. ಅಲ್ಲದೆ, ಕೆಲವು ರಾಜರುಗಳು ಬೇಕೆಂದರೆ ಒಂದೇ ದಿನದಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ಸೈನ್ಯವನ್ನು ರಣರಂಗಕ್ಕೆ ಕಳುಹಿಸಬಲ್ಲರು. ಎರಡನೆಯದು, ಮೊಗಲನ ಸೇವೆಯಲ್ಲಿಲ್ಲದ ರಾಜರುಗಳನ್ನು ಹತೋಟಿಯಲ್ಲಿಡುವುದಕ್ಕೆ ಅವರು ಬೇಕೇ ಬೇಕು. ಮೂರನೆಯದು, ರಾಜರುಗಳಲ್ಲಿಯೇ ಕೆಲವರನ್ನು ಏರಿಸಿ ಇಳಿಸಿ, ಪರಸ್ಪರ ದ್ವೇಷಾಸೂಯೆಗಳನ್ನು ಹುಟ್ಟಿಸುವುದು ಮೊಗಲನ ರಾಜನೀತಿಯಾಗಿದೆ. ತನಗೆ ಅನುಕೂಲವೆಂದು ಕಂಡುಬಂದಾಗ ಅವರವರಲ್ಲೇ ಜಗಳ ಹತ್ತಿಸಿ ಅವನು ತಮಾಷೆ ನೋಡುತ್ತಾನೆ. ನಾಲ್ಕನೆಯದು, ಪಠಾಣರ ಮೇಲೊ ಅಥವಾ ದಂಗೆಯೆದ್ದ ಅಮೀರರು ಮತ್ತು ಸುಬೇದಾರುಗಳ ಮೇಲೊ ಎತ್ತಿಕಟ್ಟುವುದಕ್ಕೆ ಈ ರಾಜರುಗಳು ಅವಶ್ಯಕ. ಐದನೆಯದು, ಗೋಲ್ಕೊಂಡಾ ರಾಜ ತಾನು ಕೊಡಬೇಕಾದ ಪೊಗದಿಯನ್ನು ಕೊಡಲು ತಪ್ಪಿದರೆ ಅಥವಾ ಆತ ವಿಜಾಪುರದ ರಾಜನ ಅಥವಾ ಅಕ್ಕಪಕ್ಕದ ಇತರ ರಾಜರ ಪಕ್ಷವನ್ನು ವಹಿಸಿದರೆ, ಅವರನ್ನು ಬಗ್ಗಿಸಲು ಈ ರಾಜರುಗಳು ಬೇಕು. ಅಮೀರರ ಬದಲು ರಾಜರನ್ನು ಕಳಿಸುವ ಉದ್ದೇಶವೇನೆಂದರೆ, ಅಮೀರರು ಗೋಲ್ಕೊಂಡಾ ರಾಜನ ಧರ್ಮಪಂಥವಾದ ಷಿಯಾಪಂಥಕ್ಕೆ ಸೇರಿದವರು.

ಆರನೆಯದು, ಪರ್ಷಿಯದ ಮೇಲೆ ಹಗೆತನವನ್ನು ಸಾಧಿಸುತ್ತಿದ್ದರೆ ಮಾತ್ರ ರಾಜರುಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಬಹುದು. ಅಮೀರರು ತಮ್ಮ ಪಂಥಕ್ಕೆ ಸೇರಿದ ಪರ್ಷಿಯನ್ನರ ಮೇಲೆ ಯುದ್ಧಮಾಡಲು ಹಿಂಜರಿಯುತ್ತಾರೆ. ಮೊಗಲನು ರಜಪೂತರನ್ನು ಯಾವ ಕಾರಣದಿಂದ ಸೇರಿಸಿಕೊಂಡಿದ್ದಾನೊ ಅದೇ ಕಾರಣಕ್ಕಾಗಿ ಪಠಾಣರನ್ನೂ ಸೇರಿಸಿಕೊಂಡಿದ್ದಾನೆ.

ಒಟ್ಟಿನಲ್ಲಿ, ಮೊಗಲನು ಈ ಪರದೇಶೀಯ ಅಂದರೆ ಮೊಗಲರ ಸೈನ್ಯಗಳನ್ನು ಪೋಷಿಸಿಕೊಂಡು ಬರುವುದು ಅನಿವಾರ್ಯವಾಗಿಬಿಟ್ಟಿದೆ. ಈ ಸೈನ್ಯಗಳೆ, ರಾಜ್ಯದ ಪ್ರಧಾನ ಶಕ್ತಿ. ಇವುಗಳನ್ನು ಸಾಕುವುದಕ್ಕೆ ಮಾಡುವ ವೆಚ್ಚ ಅಗಾಧವಾದುದು. ಹೀಗಿರುವಾಗ ಈ ಸೈನ್ಯಗಳ ವಿವರಣೆ ಇಲ್ಲಿ ಅನಾವಶ್ಯಕವಾಗಲಾರದು.

ಈ ಸೈನ್ಯಗಳನ್ನು, ಅವು ಅಶ್ವದಳವಾಗಿರಲಿ ಅಥವಾ ಕಾಲ್ದಳವಾಗಿರಲಿ, ಎರಡು ಮುಖ್ಯ ಭಾಗಗಳಾಗಿ ವಿಭಜಿಸಲಾಗಿದೆ. ಒಂದು ಭಾಗ ಯಾವಾಗಲೂ ಮೊಗಲನು ಇರುವ ಕಡೆ ಇರುತ್ತದೆ. ಇನ್ನೊಂದು ಭಾಗದ ಸೈನ್ಯವನ್ನು ರಾಜ್ಯದ ನಾನಾ ಕಡೆಗಳಲ್ಲಿ ಹರಡಿದಂತೆ ಇರಿಸಿದೆ. ರಾಜನ ಬಳಿ ಇರುವ ಅಶ್ವದಳದ ವಿಚಾರ ಮೊದಲು ಹೇಳುತ್ತೇನೆ.

ಮೊಗಲ್ ಆಸ್ಥಾನದ ಅಮೀರರು ನಮ್ಮ ಫ್ರಾನ್ಸಿನ ಕುಲೀನ ಮನೆತನಗಳವರಂತೆ ಹಿರಿಯ ಮನೆತನಗಳಿಗೆ ಸೇರಿದವರೆಂದು ಭಾವಿಸಬಾರದು. ರಾಜ್ಯದಲ್ಲಿರುವ ಎಲ್ಲಾ ಭೂಮಿಗೂ ರಾಜನೇ ಒಡೆಯನಾದ ಕಾರಣ, ನಮ್ಮಲ್ಲಿರುವಂತೆ 'ಡ್ಯೂಕ್‌ಡಮ್' (Dukedom—ಡೂಕ್‌ಪದವಿ) ಆಗಲೀ ಅಥವಾ 'ಮಾರ್ಕ್ವಿಸೇಟ್ (Marquisate—ಶ್ರೀಮಂತಪದವಿ)ಆಗಲಿಕ್ಕೆ ಇಲ್ಲ. ಅಂತೆಯೇ, ತಮ್ಮದೇ ಆದ ಭೂಮಿಕಾಣಿಯಿಂದ ಸಂಪಾದಿಸಿದ ಶ್ರೀಮಂತಿಕೆಯಿಂದ ಬಾಳುವ ಸಂಸಾರಸ್ಥರೇ ಇಲ್ಲ ಇಲ್ಲಿ. ಆಸ್ಥಾನಿಕರನೇಕರು ಅಮೀರರುಗಳ ಸಂತತಿಗೆ ಸೇರಿದವರೇ ಅಲ್ಲ. ಏಕೆಂದರೆ, ಎಲ್ಲದಕ್ಕೂ ರಾಜನೇ ಉತ್ತರಾಧಿಕಾರಿ. ಅಮೀರನು ಸತ್ತನೆಂದರೆ ಅವನ ಆಸ್ತಿಯೆಲ್ಲವೂ ರಾಜನಿಗೆ ಸೇರಿಹೋಗಿ, ಅವನ ಕುಟುಂಬ ನಿರ್ನಾಮವಾಗಿಬಿಡುತ್ತದೆ. ಅವನ ಮಕ್ಕಳು, ತಪ್ಪಿದರೆ ಅವನ ಮೊಮ್ಮಕ್ಕಳು, ಬೀದಿಯ ಭಿಕಾರಿಗಳ ಮಟ್ಟಕ್ಕಿಳಿದು, ಸಧ್ಯ ಯಾರಾದರೂ ಒಬ್ಬ ಅಮೀರನ ಕುದುರೆಯ ಆಳಾಗಿ ಸೇರಿಕೊಂಡರೆ ಸಾಕೆನ್ನುವಂತಾಗುತ್ತದೆ. ಸತ್ತ ಅಮೀರನ ಹೆಂಡತಿ ಮಕ್ಕಳಿಗೆ ಮೊಗಲನು ಸಾಮಾನ್ಯವಾಗಿ ಒಂದಿಷ್ಟು ವಿಶ್ರಾಂತಿವೇತನ ಕೊಡುತ್ತಾನೆ. ಅಮೀರನು ದೀರ್ಘ ಕಾಲ ಬದುಕಿದರೆ ಅವನ ಮಕ್ಕಳು ರಾಜನ ಕೃಪಾ ಕಟಾಕ್ಷಕ್ಕೆ ಒಳಗಾಗಬಹುದು. ಬಣ್ಣ ಬೆಳ್ಳಗಿದ್ದು ಅವರು ಅಪ್ಪಟ ಮೊಗಲರಂತೆ ಕಂಡರೆ, ಅವರಿಗೆ ಹೆಚ್ಚಿನ ಕೃಪೆ ತೋರಿಸಲಾಗುವುದು. ಆದರೆ, ಈ ಕೃಪೆ ಪೂರ್ಣ ಕೈಗೂಡಬೇಕಾದರೆ ಬಹು ಕಾಲ ಬೇಕು. ಮೊದಲು ಬಹಳ ಕಡಿಮೆ ಸಂಬಳದಿಂದಲೋ ಅಥವಾ ಸಣ್ಣಪುಟ್ಟ ಹುದ್ದೆಗಳಿಂದಲೋ ಆರಂಭವಾಗಿ, ಕ್ರಮೇಣ ದೊಡ್ಡ ದೊಡ್ಡ ಪದವಿಗಳಿಗೆ ಏರಬೇಕು. ಹೀಗಾಗಿ, ಆಸ್ಥಾನದ ಅಮೀರರು ನಾನಾ ರಾಷ್ಟ್ರಗಳಿಂದ ಬಂದ ಸಾಹಸಿಗಳೆಂದೇ ಹೇಳಬಹುದು. ಇವರು ಬಹುತೇಕ ಸಣ್ಣ ಮನೆತನಕ್ಕೆ ಸೇರಿದವರೋ ಅಥವಾ

ಮೊದಲಿಗೆ ಗುಲಾಮರೋ ಆಗಿದ್ದವರು. ಬಹುಮುಂದಿಗೆ ವಿದ್ಯೆ ಎಂಬುದೇ ಇರುವುದಿಲ್ಲ. ಮೊಗಲ್ ಚಕ್ರವರ್ತಿ ತನಗೆ ಖುಷಿಬಂದಂತೆ ಇವರನ್ನು ಮುಗಿಲಿಗೇರಿಸುತ್ತಾನೆ ಅಥವಾ ಪಾತಾಳಕ್ಕೆ ತುಳಿಯುತ್ತಾನೆ.

ಅಮೀರರು ಎಷ್ಟು ಕುದುರೆಗಳ ಮಾಲೀಕರಾಗಿರುವರೊ ಆ ಲೆಕ್ಕದ ಮೇಲೆ 'ಹಜಾರಿ' (ಸಾವಿರ), 'ದೋನ್ ಹಜಾರಿ' (ಎರಡು ಸಾವಿರ), 'ಪೆಂಜೀ' (Penge = ಪಾಂಚ್ = ಐದು ಸಾವಿರ), 'ಹೆಸ್ಟ್' (Hecht = ಏಳು ಸಾವಿರ), 'ಡೆಹ್‌ಹಜಾರಿ' Deh Hazary = ಹತ್ತು ಸಾವಿರ) ಕುದುರೆಗಳ ಸರದಾರರೆಂಬ ಬಿರುದನ್ನು ಹೊಂದುತ್ತಾರೆ. ಕೆಲವು ವೇಳೆ 'ದೌಆಜ್ದ್ ಹಜಾರಿ' (Dueazden Hazary = ಹನ್ನೆರಡು ಸಾವಿರ) ಕುದುರೆಗಳ ಸರದಾರರೂ ಇರುವುದುಂಟು. ಚಕ್ರವರ್ತಿಯ ಹಿರಿಯ ಮಗನಿಗೆ ಈ ಬಿರುದುಂಟು.

ಈ ಸರದಾರರುಗಳಿಗೆ ಕೊಡುವ ತಲಬನ್ನು ಅವರು ಇಟ್ಟುಕೊಂಡಿರುವ ಯೋಧರ ಪ್ರಕಾರ ಲೆಕ್ಕಹಾಕದೆ, ಕುದುರೆಗಳ ಮೇಲೆ ಲೆಕ್ಕ ಹಾಕುತ್ತಾರೆ. ಒಬ್ಬ ಕುದುರೆ ರಾವುತನಿಗೆ (trooper) ಸಾಮಾನ್ಯವಾಗಿ ಎರಡು ಕುದುರೆಗಳನ್ನು ಸಾಕುವ ಜವಾಬ್ದಾರಿ ವಹಿಸಲಾಗಿರುತ್ತದೆ. ಎರಡಕ್ಕಿಂತ ಹೆಚ್ಚು ಕುದುರೆಗಳನ್ನು ವಹಿಸಿದರೆ ಸಾಕುವುದು ಕಷ್ಟ. ಏಕೆಂದರೆ, "ಬಿಸಿಲು ದೇಶಗಳಲ್ಲಿ, ಒಂಟಿ ಕುದುರೆರಾವುತನ ಒಂದು ಕಾಲು ನೆಲದ ಮೇಲೆ" ಎಂಬ ಮಾತಿದೆ. ಆದರೆ ಮೇಲೆ ಹೇಳಿದ ಏಳುಸಾವಿರ ಕುದುರೆ ಸರದಾರನಾಗಲಿ ಅಥವಾ ಹನ್ನೆರಡುಸಾವಿರ ಕುದುರೆ ಸರದಾರನಾಗಲಿ ಅಷ್ಟೊಂದು ಕುದುರೆಗಳನ್ನು ಇಟ್ಟುಕೊಂಡಿರುತ್ತಾನೆಂದು ಭಾವಿಸಬಾರದು. ಈ ಬಿರುದುಗಳೆಲ್ಲ ಸುಲಭವಾಗಿ ನಂಬುವ ಜನರನ್ನು ನಂಬಿಸುವುದಕ್ಕೆ ಹಾಗೂ ಪರದೇಶದವರನ್ನು ಮೋಸಗೊಳಿಸುವುದಕ್ಕೆ ಮಾತ್ರ. ಹೆಸರಿಗೆ ಅಷ್ಟೊಂದು ಕುದುರೆಗಳ ಸರದಾರನಾದರೂ ಅವನೆಷ್ಟು ಕುದುರೆಗಳನ್ನು ವಾಸ್ತವವಾಗಿ ಇಟ್ಟುಕೊಂಡಿರಬೇಕೆಂಬುದನ್ನು ರಾಜನೇ ನಿರ್ಧರಿಸುತ್ತಾನೆ. ಅಷ್ಟು ಕುದುರೆಗಳಿಗೆ ಮಾತ್ರ ತಲಬು ಸಂದಾಯವಾಗುತ್ತದೆ. ಇದರಲ್ಲಿಯೂ ಅಮೀರರ ಮೋಸದ ಕೈವಾಡವಿದೆ. ಅವರು ತಮ್ಮ ರಾವುತರಿಗೆ ಕೊಡಬೇಕಾದಷ್ಟನ್ನು ಕೊಡದೆ ಉಳಿಸಿಕೊಳ್ಳುತ್ತಾರೆ. ಅಲ್ಲದೆ, ಸರಿಯಾಗಿ ಇಟ್ಟುಕೊಳ್ಳಬೇಕಾದಷ್ಟು ಕುದುರೆಗಳನ್ನು ಇಟ್ಟುಕೊಳ್ಳದೆ, ಅದರಲ್ಲಿಯೂ ಮೋಸಮಾಡಿ ದುಡ್ಡು ಹೊಡೆಯುತ್ತಾರೆ. ಇವೆಲ್ಲ ಸೇರಿ ಅಮೀರರಿಗೆ ಸಿಕ್ಕುವ ಹಣ ಭಾರಿ ಮೊತ್ತವೇ ಆಗುತ್ತದೆ.

ಈ ಸಂಬಳದ ಬದಲು 'ಜಹಗೀರ್' (Jah—ghir) ಜಮೀನು ಕೊಟ್ಟಿದ್ದರಂತೂ ಅವನ ಅದೃಷ್ಟ ಖುಲಾಯಿಸಿದಂತೆಯೇ. ಉದಾಹರಣೆಗೆ, ನಾನು ಯಾವ ಪೆಂಜೆ ಹಜಾರಿ, ಅಂದರೆ ಐದುಸಾವಿರ, ಕುದುರೆ ಸರದಾರನ ಬಳಿ ಕೆಲಸಕ್ಕಿದ್ದೆನೊ ಆತನು ವಾಸ್ತವವಾಗಿ ಇಟ್ಟುಕೊಳ್ಳಬೇಕಾಗಿದ್ದ ಕುದುರೆಗಳ ಸಂಖ್ಯೆ ಐನೂರು. ಅವನು ಎಲ್ಲಾ ಖರ್ಚು ಕಳೆದು ತಿಂಗಳಿಗೆ ಐದುಸಾವಿರ ಕ್ರೌನುಗಳಷ್ಟು ಹಣ ಮಿಗಿಸುತ್ತಿದ್ದ. ಆತ 'ನಗ್ದಿ'

(Nagdy) ಆಗಿದ್ದ. ಅಂದರೆ, ನಗದಾಗಿ ಹಣ ಪಡೆಯುವ ಸರದಾರನಾಗಿದ್ದ ; ಅವನಿಗೆ ಜಹಗೀರಿ ಇರಲಿಲ್ಲ.

ಅಮೀರರುಗಳಿಗೆ ಇಷ್ಟೊಂದು ಆದಾಯವಿದ್ದರೂ ನನಗೆ ಶ್ರೀಮಂತರಾದವರು ಬಹಳ ಜನ ಕಾಣಲಿಲ್ಲ. ಅದರ ಬದಲು ಅನೇಕ ಜನ ಏನೇನೊ ತಾಪತ್ರಯಗಳ ಕಾರಣ ದಿಂದಾಗಿ ಬಹಳ ಸಾಲಸೋಲ ಮಾಡಿಕೊಂಡಂತೆ ಕಂಡಿತು. ಈ ಸಾಲಸೋಲಗಳನ್ನು ಮಾಡಿಕೊಂಡು ಅವರು ಹಾಳಾಗುವುದು ಇತರ ದೇಶಗಳ ಶ್ರೀಮಂತರಂತೆ ಔತನಕೂಟ ಗಳನ್ನೇರ್ಪಡಿಸಿ ತಿಂದು ತೇಗುವ ವೆಚ್ಚದಿಂದಲ್ಲ. ವರ್ಷದಲ್ಲಿ ನಡೆಯುವ ಕೆಲವು ಹಬ್ಬ ಗಳಲ್ಲಿ ಅಮೀರರು ರಾಜನಿಗೆ ಕೊಡಬೇಕಾದ ಬೆಲೆಯಾದ ನಜರುಗಳು, ಅವರು ಕಾಪಾಡ ಬೇಕಾದ ತಮ್ಮ ಹೆಂಡತಿಯರು, ಆಳುಕಾಳುಗಳು, ಕುದುರೆಗಳು ಮತ್ತು ಒಂಟೆಗಳು- ಇವುಗಳ ಭಾರಿ ಸಿಬ್ಬಂದಿಗಳಿಂದ.

ಪ್ರಾಂತಗಳಲ್ಲಿ, ಸೈನ್ಯಗಳಲ್ಲಿ ಮತ್ತು ಆಸ್ಥಾನದಲ್ಲಿ ಇರುವ ಅಮೀರರುಗಳ ಸಂಖ್ಯೆ ಅಪಾರ. ಎಷ್ಟು ಎಂದು ಕರಾರುವಾಕ್ ಸಂಖ್ಯೆಯನ್ನು ತಿಳಿದುಕೊಳ್ಳಲು ಸಾಧ್ಯವಾಗ ಲಿಲ್ಲ. ಒಂದು ಸಾವಿರದಿಂದ ಹನ್ನೆರಡು ಸಾವಿರ ಕುದುರೆ ಸರದಾರರೆನಿಸಿಕೊಂಡವರು ಆಸ್ಥಾನದಲ್ಲಿ ಇಪ್ಪತ್ತೈದು ಮೂವತ್ತು ಮಂದಿ ಇರಬಹುದು.

ಈ ಅಮೀರರುಗಳೆ ದೇಶದ ದೊಡ್ಡ ದೊಡ್ಡ ಹುದ್ದೆಗಳನ್ನೂ ಸ್ಥಾನಮಾನಗಳನ್ನೂ ಪಡೆಯುವವರು. ಇವರೇ ಹೇಳಿಕೊಳ್ಳುವಂತೆ, ಇವರು ದೇಶದ ಆಧಾರಸ್ತಂಭಗಳು. ಇವ ರಿಂದಲೇ ಆಸ್ಥಾನದ ವೈಭವ ಮೆರೆಯುವುದು. ಇವರು ಹೊರಗಡೆ ಕಾಣಿಸುವುದೇ ಇಲ್ಲ. ಕಾಣಿಸಿಕೊಂಡರೆ ಬಹು ಭವ್ಯವಾದ ಉಡುಪಿನಲ್ಲಿ ಆನೆಯ ಮೇಲೋ ಕುದುರೆಯ ಮೇಲೋ ಒಮ್ಮೊಮ್ಮೆ ಪಾಲಕಿಯ ಮೇಲೋ ಕಾಣಿಸಿಕೊಳ್ಳುತ್ತಾರೆ. ಅವರ ಸುತ್ತ ಮುತ್ತ ಕುದುರೆ ಸವಾರರೂ ಅಸಂಖ್ಯಾತ ಕಾಲಾಳುಗಳೂ ಇರುತ್ತಾರೆ. ಈ ಕಾಲಾಳು ಗಳ ಕೆಲಸವೆಂದರೆ ದಾರಿ ಬಿಡಿಸುವುದು, ಕುದುರೆಗಳ ಮೇಲೆ ಕುಳಿತ ನೊಣಗಳನ್ನು ಓಡಿಸುವುದು ಮತ್ತು ನವಿಲುಗರಿದಂಡೆ ಹಿಡಿದು ಧೂಳು ಹೊಡೆಯುವುದು, 'ಪಿಕ್ವೊ ದೆಂಟ್' (Picqiedent = ಪೀಕದಾನಿ)ಯನ್ನು ಹಿಡಿಯುವುದು, ಅಮೀರನ ದಾಹ ಶಮನಕ್ಕಾಗಿ ನೀರು ಕೊಡುವುದು, ಮತ್ತು ಕೆಲವು ವೇಳೆ ಲೆಕ್ಕದಪುಸ್ತಕಗಳನ್ನೋ ಅಥವಾ ಬೇರೆ ಕಾಗದ ಪತ್ರಗಳನ್ನೋ ಹಿಡಿದುಕೊಂಡಿರುವುದು. ದಿನಕ್ಕೆರಡು ಸಲ, ಅಂದರೆ ಹತ್ತು ಅಥವಾ ಹನ್ನೊಂದು ಗಂಟೆಗೆ ಮತ್ತು ಸಂಜೆ ಆರು ಗಂಟೆಗೆ, ಪ್ರತಿಯೊಬ್ಬ ಸರದಾರನೂ ಆಸ್ಥಾನದಲ್ಲಿ ಹಾಜರಿರಬೇಕು. ಹಾಗೆ ಹಾಜರಾಗದೆಹೋದರೆ ಭಾರಿ ದಂಡ ತೆರಬೇಕಾಗುತ್ತದೆ. ಆಸ್ಥಾನದಲ್ಲಿ ಹಾಜರಾಗಿ ರಾಜನಿಗೆ ಮುಜರೆ ಸಲ್ಲಿಸ ಬೇಕು. ಇಷ್ಟಲ್ಲದೆ, ವಾರಕ್ಕೊಂದು ದಿನ ಇಪ್ಪತ್ತುನಾಲ್ಕು ಗಂಟೆಗಳ ಕಾಲ ಪ್ರತಿಯೊಬ್ಬ ಅಮೀರನೂ ಸರದಿಯ ಮೇಲೆ ಕೋಟೆಯೊಳಗೆ ಕಾವಲು ಕಾಯಬೇಕು. ಆಗ ಆತ ತನ್ನ ಹಾಸಿಗೆ, ಜಮಖಾನ ಮತ್ತು ಇತರ ಸಾಮಾನು ಸರಂಜಾಮುಗಳನ್ನು ಕೋಟೆ

ಯೊಳಕ್ಕೆ ಕಳುಹಿಸುತ್ತಾನೆ. ರಾಜನು ಅರಮನೆಯಿಂದ ಊಟವನ್ನು ಮಾತ್ರ ಒದಗಿಸು ತ್ತಾನೆ. ಈ ಊಟವನ್ನು ತೆಗೆದುಕೊಳ್ಳುವಾಗ ವಿಚಿತ್ರ ಪದ್ಧತಿಯನ್ನು ಅನುಸರಿಸುತ್ತಾರೆ. ಅದೇನೆಂದರೆ, ಅಮೀರ ಅರಮನೆಯ ಕಡೆ ಮುಖಮಾಡಿ ನಿಂತು, ಮೂರು ಸಲ 'ತಸ್ಲೀಂ' (taslim = ಸಲಾಂ) ಮಾಡುವುದು. ಬಲಗೈಯಿಂದ ನೆಲ ಮುಟ್ಟಿ ಅದನ್ನು ತಲೆಯ ವರೆಗೆ ಎತ್ತುವುದೇ ಈ 'ತಸ್ಲೀಂ'.

ರಾಜನೇನಾದರೂ 'ಪಾಲಕಿ'ಯಲ್ಲೋ, ಆನೆಯ ಮೇಲೋ, ಅಥವಾ 'ತಕ್ತ್-ರವಾನ್' (tact-ravan)ನಲ್ಲೋ ಸಂಚಾರ ಹೊರಟರೆ ಅಮೀರರುಗಳೆಲ್ಲಾ ಅವನನ್ನು ಹಿಂಬಾಲಿಸಬೇಕು. 'ತಕ್ತ್-ರವಾನ್' ಎಂದರೆ ಸಂಚರಿಸುವ ಸಿಂಹಾಸನ ಎಂದರ್ಥ. ಇದನ್ನು ಎಂಟು ಜನ ಹೆಗಲ ಮೇಲೆ ಹೊರುತ್ತಾರೆ. ಬೇಕಾದಾಗ ಇನ್ನೆಂಟು ಜನ ಬಂದು ಬಹು ಸಲೀಸಾಗಿ ಹೆಗಲು ಬದಲಾಯಿಸುತ್ತಾರೆ. ರಾಜನನ್ನು ಅಮೀರರು ಹಿಂಬಾಲಿಸಡೆಹೋದರೆ ದೊಡ್ಡ ತಪ್ಪು ಮಾಡಿದಂತೆಯೇ ಸರಿ. ಕಾಯಿಲೆ ಕಸಾಲೆ ಯಿಂದಲೊ, ವಯಸ್ಸಿನ ಕಾರಣವೊ ಅಥವಾ ಅವರಿರುವ ಹುದ್ದೆಯ ಕೆಲಸದ ಒತ್ತಡ ದಿಂದಲೊ ಈ ಖುದ್ದು ಹಾಜರಿಯಿಂದ ವಿನಾಯಿತಿ ಪಡೆಯಬಹುದೆ ವಿನಃ ಅನ್ಯಥಾ ಪಡೆಯುವ ಹಾಗಿಲ್ಲ. ಹೀಗೆ ವಿನಾಯತಿ ಪಡೆಯದ ಅಮೀರುಗಳೆಲ್ಲ ಕುದುರೆಯ ಮೇಲೆ ಕುಳಿತು ಚಳಿ ಮಳೆ ಗಾಳಿ ಬಿಸಿಲೆನ್ನದೆ ಮತ್ತು ಏಳುವ ಧೂಳನ್ನು ಗಮನಿಸದೆ ರಾಜನನ್ನು ಹಿಂಬಾಲಿಸಬೇಕು. ರಾಜನು ಬೇಟೆಗೆ ಹೊರಡಲಿ, ಸೈನ್ಯದೊಡನೆ ಸಾಗುತ್ತಿರಲಿ ಅಥವಾ ಒಂದು ನಗರದಿಂದ ಇನ್ನೊಂದು ನಗರಕ್ಕೆ ಪ್ರಯಾಣಮಾಡುತ್ತಿರಲಿ, ಅವನಿಗೆ ಸಂಪೂರ್ಣ ರಕ್ಷಣೆ ಇರುತ್ತದೆ. ಕೆಲವು ವೇಳೆ, ಉದಾಹರಣೆಗೆ ನಗರದ ಹೊರವಲಯಕ್ಕೆ ಮಾತ್ರ ಹೋದಾಗ, ಅಥವಾ ತನ್ನ ಹಳ್ಳಿಮನೆಗೆ ಹೋದಾಗ ಅಥವಾ ಮಸೀದಿಗೆ ಹೋಗುವಾಗ ದೊಡ್ಡ ಪರಿವಾರ ಸಮೇತ ಹೋಗುವುದಿಲ್ಲ. ಆಗ ಕೋಟೆಯ ರಕ್ಷಣೆಯಲ್ಲಿರುವ ಅಮೀರರುಗಳನ್ನು ಮಾತ್ರ ಕರೆದುಕೊಂಡುಹೋಗುತ್ತಾನೆ.

'ಮನ್‌ಸಬ್' ಸಂಬಳ ಪಡೆಯುವ ಕುದುರೆ ಸವಾರರನ್ನು 'ಮನ್‌ಸಬ್ದಾರ್' (Mansebdar) ಎಂದು ಕರೆಯುತ್ತಾರೆ. 'ಮನ್‌ಸಬ್' ಎಂಬುದು ಒಂದು ಬಗೆಯ ವಿಶೇಷ ಸಂಬಳ. ಅದರಲ್ಲಿ ಗೌರವವೂ ಉಂಟು ; ಕೈತುಂಬ ಹಣವೂ ಉಂಟು. ಅದು ಅಮೀರರ ಸಂಬಳಕ್ಕೆ ಸಮನಲ್ಲದಿದ್ದರೂ ಸಾಮಾನ್ಯರಿಗೆ ಕೊಡುವುದಕ್ಕಿಂತ ಹೆಚ್ಚು. ಈ ಕಾರಣ ಇವರನ್ನು 'ಪುಟ್ಟ ಅಮೀರ'ರೆಂದು ಕರೆಯುತ್ತಾರೆ. ಈ ವರ್ಗದವರಿಂದಲೇ ಅಮೀರರನ್ನು ಆರಿಸಿಕೊಳ್ಳುವುದು. ರಾಜನೇ ಇವರ ಧಣಿ. ಅಮೀರರಿಗೆ ಏನು ಕೆಲಸವೋ ಅದೇ ಕೆಲಸ ಇವರಿಗೂ. ಕುದುರೆ ಇಟ್ಟುಕೊಳ್ಳುವಂತಿದ್ದರೆ ಇವರೂ ಅಮೀರರಿಗೆ ಸಮನಾಗುತ್ತಿದ್ದರು. ಹಿಂದೆ ಇವರೂ ಕುದುರೆಗಳನ್ನು ಇಟ್ಟುಕೊಳ್ಳಬಹು ದಾಗಿತ್ತು. ಆದರೆ ಈಗ ಎರಡೋ, ನಾಲ್ಕೋ ಅಥವಾ ಆರೋ ಕುದುರೆಗಳನ್ನು ಮಾತ್ರ ಇಟ್ಟುಕೊಳ್ಳಬಹುದು. ಈ ಕುದುರೆಗಳಿಗೆ ರಾಜನ ಮೊಹರಿನ ಗುರುತುಹಾಕಿರುತ್ತಾರೆ.

ಕೆಲವು ಮನ್ಸಬ್‌ದಾರರ ಸಂಬಳ ತಿಂಗಳಿಗೆ ನೂರು ರೂಪಾಯಿಗಳಷ್ಟು ಕಡಿಮೆ ಇರುತ್ತದೆ. ಯಾರಿಗೂ ತಿಂಗಳಿಗೆ ಏಳುನೂರಕ್ಕಿಂತ ಹೆಚ್ಚಿಲ್ಲ. ಇವರ ಸಂಖ್ಯೆ ಎಷ್ಟೆಂಬುದು ನಿಗದಿಯಾಗಿಲ್ಲ. ಆದರೆ ಅಮೀರರುಗಳ ಸಂಖ್ಯೆಗಿಂತ ಇವರ ಸಂಖ್ಯೆ ಬಹಳ ಹೆಚ್ಚು. ಪ್ರಾಂತಗಳಲ್ಲಿ ಮತ್ತು ಸೈನ್ಯದಲ್ಲಿ ಇರುವವರನ್ನು ಬಿಟ್ಟರೆ ಆಸ್ಥಾನದಲ್ಲಿ ಇರುವವರ ಸಂಖ್ಯೆ ಇನ್ನೂರು ಮುನ್ನೂರು ಆಗುತ್ತದೆ.

'ರೋಜಿದಾರ್'' (Rouzindar) ಎಂದರೆ, ಇವರ ಹೆಸರೇ ಸೂಚಿಸುವಂತೆ, ದಿನದ ಸಂಬಳದವರು. ಆದರೆ ಇವರ ಸಂಬಳ ಕೆಲವು ವೇಳೆ ಮನ್ಸಬ್‌ದಾರರಿಗಿಂತ ಹೆಚ್ಚಿರುತ್ತದೆ. ಸಂಬಳಸಾರಿಗೆ ಹೆಚ್ಚಿದ್ದರೂ ಅಷ್ಟು ಮರ್ಯಾದೆ ಇಲ್ಲ. ಈ ರೋಜಿದಾರರುಗಳಿಗೆ ಮನ್ಸಬ್‌ದಾರರಂತೆ 'ಅಗೆನಾ'ಗಳನ್ನು (Agena) ತೆಗೆದುಕೊಳ್ಳಲೇಬೇಕಾದ ನಿರ್ಬಂಧವಿಲ್ಲ. ರಾಜನ ಅರಮನೆಯಲ್ಲಿ ಉಪಯೋಗಿಸಲ್ಪಟ್ಟ ಜಮಖಾನಗಳು ಮುಂತಾದ ಸಾಮಾನು ಸರಂಜಾಮುಗಳನ್ನು, ಅಂದರೆ 'ಅಗೆನಾ'ಗಳನ್ನು, ನಿಗದಿಯಾದ ಬೆಲೆಗೆ ಮನ್ಸಬ್‌ದಾರರು ಕೊಂಡುಕೊಳ್ಳಲೇಬೇಕು. ಕೆಲವು ವೇಳೆ ವಿನಾಕಾರಣ ದುಬಾರಿ ಬೆಲೆಹಾಕಿ ಅವರ ತಲೆಗೆ ಕಟ್ಟುವುದುಂಟು. ರೋಜಿದಾರರ ಸಂಖ್ಯೆ ಅಪಾರ. ಸಣ್ಣಪುಟ್ಟ ನೌಕರಿಗಳಲ್ಲೆಲ್ಲಾ ಅವರೇ ಇರುವುದು. ಗುಮಾಸ್ತರಾಗಿ ಅವರ ಕೆಳಗೆ ಮತ್ತು ಅಧೀನ ಗುಮಾಸ್ತರಾಗಿ ಬಹಳ ಜನ ಕೆಲಸಮಾಡುತ್ತಾರೆ. ಕೆಲನರು 'ಬರಾತ್'' (Baratte)ಗಳಿಗೆ ರಾಜನ ಮುದ್ರೆ ಒತ್ತುವ ಕೆಲಸದಲ್ಲಿ ನೇಮಕವಾಗಿದ್ದಾರೆ. 'ಬರಾತ್'' ಎಂದರೆ ಎಷ್ಟು ದುಡ್ಡು ಕೊಡಬೇಕೆಂಬುದನ್ನು ತಿಳಿಸುವ ಆಜ್ಞಾಪತ್ರ. ಇದನ್ನು ಕೊಡುವಾಗ ಲಂಚ ಪಡೆದು ಕೈಬೆಚ್ಚಗೆ ಮಾಡಿಕೊಳ್ಳದೆ ಕೊಡುವುದೇ ಇಲ್ಲ.[1]

ಸಾಮಾನ್ಯ ದರ್ಜೆಯ ಕುದುರೆ ರಾವುತರು ಅಮೀರರ ಬಳಿ ಸೇವೆ ಸಲ್ಲಿಸುತ್ತಾರೆ. ಇವರಲ್ಲಿ ಎರಡು ವರ್ಗ: ಒಂದನೆಯದು, ಅಮೀರರು ರಾಜನಿಗಾಗಿ ಇಟ್ಟುಕೊಳ್ಳಲೇ

---

[1]ಬರಾತ್ : ನಗದು ಹಣ ಪಾವತಿಮಾಡಲು ಕೊಡುವ ಫರ್ಮಾನಿಗೆ 'ಬರಾತ್' ಎಂಬ ಹೆಸರಿತ್ತು. ಇದು ಹೆಚ್ಚು ಕಮ್ಮಿ ಈಗಿನ 'ಚೆಕ್' ಇದ್ದಂತೆ. ಯಾವನಾದರೂ ಒಬ್ಬ ಮಾಡಿದ ಕೆಲಸವೇನು ಮತ್ತು ಆ ಕೆಲಸಕ್ಕೆ ಸಲ್ಲಬೇಕಾದ ಹಣ ಎಷ್ಟು ಎಂಬುದನ್ನು ಈ ಬರಾತ್‌ನಲ್ಲಿ ತೋರಿಸಲಾಗುತ್ತಿತ್ತು. ಇದನ್ನು ತೋರಿಸಿ ಹಣ ಪಡೆಯುವುದಕ್ಕೆ ಮುಂಚೆ ಇದು ಹಲವಾರು ಜನರ ಕೈದಾಟಿ ಮೇಲ್ 'ರುಜು' (counter signature) ಪಡೆಯಬೇಕಾಗಿತ್ತು. ಅಕ್ಬರ್ ಚಕ್ರವರ್ತಿ ಇದನ್ನು ತನ್ನ ರಾಜ್ಯದ ವಿವಿಧ ಇಲಾಖೆಗಳಲ್ಲಿ ಬಹಳ ಚೆನ್ನಾಗಿ ಜಾರಿಗೆ ತಂದು, ಹಣ ಪಡೆಯುವವರು ಆದಷ್ಟು ಜಾಗ್ರತೆ ಅದನ್ನು ಪಡೆಯಲಿ ಎಂಬ ಉದ್ದೇಶದಿಂದ ಬರಾತ್ ಮತ್ತು ಇನ್ನಿತರ ಹಲವು ವಿಧದ ಕಾಗದ ಪತ್ರಗಳನ್ನು ತನ್ನ ಮುಂದೆ ಇಟ್ಟು ಹುಕುಂ ಪಡೆಯಬೇಕಾಗಿಲ್ಲ ಎಂದು ಆಜ್ಞೆ ಹೊರಡಿಸಿದ್ದನು. ಈ ಪದ್ಧತಿ ಅವನ ತರುವಾಯವೂ ಮುಂದುವರಿದುಕೊಂಡು ಬಂದಂತೆ ಬೆರ್‌ನ್ಯೇನ ಮಾತಿನಿಂದ ವ್ಯಕ್ತವಾಗುತ್ತದೆ.

ಬೇಕಾದ ಕುದುರೆಗಳ ಪೈಕಿ ಎರಡೆರಡು ಕುದುರೆಗಳನ್ನು ನೋಡಿಕೊಳ್ಳುವವರ ವರ್ಗ. ಈ ವರ್ಗದ ಕುದುರೆಗಳ ಬಾಲದ ಕಡೆ ಅಮೀರನ ಮೊಹರಿನ ಗುರುತು ಇರುತ್ತದೆ. ಒಂದೇ ಕುದುರೆಯನ್ನು ನೋಡಿಕೊಳ್ಳುವವರು ಎರಡನೆ ವರ್ಗದವರು. ಮೊದಲನೆ ವರ್ಗದ ವರಿಗೆ ಹೆಚ್ಚು ಗೌರವ ಹಾಗೂ ಹೆಚ್ಚು ಸಂಬಳ. ಕುದುರೆ ರಾವುತರ ಸಂಬಳ ಅಮೀರರ ಉದಾರತೆಯನ್ನು ಅವಲಂಬಿಸಿರುತ್ತದೆ. ಅವರು ತಮಗಿಷ್ಟಬಂದಷ್ಟು ಕೊಡಬಹುದು. ಒಂದು ಕುದುರೆ ನೋಡುವವನಿಗೆ ತಿಂಗಳಿಗೆ ಕನಿಷ್ಠ ಪಕ್ಷ ಇಪ್ಪತ್ತೈದು ರೂಪಾಯಿಗಳಿ ಗಿಂತ ಕಡಿಮೆ ಕೊಡಕೂಡದೆಂದು ಮೊಗಲ್ ರಾಜನು ಹೇಳಿದ್ದಾನೆ. ಆದರೆ, ವಾಸ್ತವ ವಾಗಿ ಕೊಡುವುದು ಕಡಿಮೆಯಾಗಿಯೇ ಇರುತ್ತದೆ. ಸರಿಯಾಗಿ ಲೆಕ್ಕಾಚಾರಮಾಡಿಯೆ ರಾಜ ಅಮೀರನಿಗೆ ಹಣ ಪಾವತಿಮಾಡುವುದು.

ಕಾಲ್ದಳದ ಸಿಪಾಯಿಗಳಿಗೆ ಸಿಕ್ಕುವುದು ಎಲ್ಲರಿಗಿಂತ ಅತ್ಯಂತ ಕಡಿಮೆ ಸಂಬಳ. ನಿಜವಾಗಿಯೂ ಹೇಳಬೇಕೆಂದರೆ, ಬಂದೂಕು ಸಿಪಾಯಿಗಳ ಸ್ಥಿತಿ ನೋಡುವುದಕ್ಕಾಗುವು ದಿಲ್ಲ. ಅವರು ಕುಳಿತುಕೊಳ್ಳಬೇಕಾದಾಗ ತಮ್ಮ ಬಂದೂಕಗಳನ್ನು ತಮ್ಮೊಡನೆ ಇರುವ ತಿಕಡಿಗೆ ಆನಿಸಿ ಇಡುತ್ತಾರೆ. ಆಗ ಅವರ ಪರಿಸ್ಥಿತಿ ತುಂಬಾ ಹಾಸ್ಯಾಸ್ಪದವಾಗಿರುತ್ತದೆ. ಬಂದೂಕವು ಹಾರಿಬಿಟ್ಟು ತಮ್ಮ ಕಣ್ಣಲ್ಲಿ ತೂತುಬಿದ್ದುಬಿಡುವುದೋ ಅಥವಾ ತಮ್ಮ ಉದ್ದನೆಯ ಗಡ್ಡವೆಲ್ಲಿ ಸೀದುಹೋಗುವುದೋ ಎಂದು ಬಹಳ ಭಯಪಟ್ಟುಕೊಂಡು ಕುಳಿತುಕೊಳ್ಳುತ್ತಾರೆ. ಯಾವುದಾದರೂ ದೆವ್ವವೋ ಪಿಶಾಚಿಯೋ ಬಂದೂಕು ಹಾರಿಸಿ ಬಿಟ್ಟರೆ ಏನು ಗತಿಯೆಂಬ ಹೆದರಿಕೆಯಂತೂ ಹೇಳತೀರದು. ಇವರಿಗೆ ತಿಂಗಳ ಸಂಬಳ ಹತ್ತರಿಂದ ಇಪ್ಪತ್ತು ರೂಪಾಯಿಗಳು. ಆದರೆ ಗೋಲಂದಾಜ ಪಡೆಯವರಿಗೆ, ಅದರಲ್ಲಿಯೂ ಫರಂಗಿಗಳಿಗೆ ಅಥವಾ ಕ್ರೈಸ್ತರಿಗೆ, ಬಹಳ ಹೆಚ್ಚು ಸಂಬಳ. ಹಿಂದೆ, ಮೊಗಲರಿಗೆ ಫಿರಂಗಿ ಗಳನ್ನು ಹಾರಿಸುವುದರಲ್ಲಿ ಹೆಚ್ಚು ಅನುಭವ ಇರಲಿಲ್ಲ. ಆಗ ಯೂರೋಪಿಯನರಿಗೆ ಇನ್ನೂ ಹೆಚ್ಚು ಸಂಬಳ ಸಿಕ್ಕುತ್ತಿತ್ತು. ಈಗಲೂ ತಿಂಗಳಿಗೆ ಇನ್ನೂರು ರೂಪಾಯಿ ಪಡೆಯುವ ಸಂಬಳದಾರರೂ ಇದ್ದಾರೆ. ಆದರೆ, ಈಚೆಗೆ ಆ ಕೆಲಸ ಸಿಕ್ಕುವುದೇ ಕಷ್ಟ. ಸಂಬಳವೂ ಮೂವತ್ತೆರಡು ರೂಪಾಯಿಗಿಂತ ಹೆಚ್ಚಿಲ್ಲ.

ಫಿರಂಗಿಗಳಲ್ಲಿ ಎರಡು ತರಹ : ಭಾರವಾದದ್ದು ಮತ್ತು ಹಗುರವಾದದ್ದು. ಹಗುರ ವಾದುದನ್ನು 'ರಿಕಾಪಿನ ಫಿರಂಗಿ' (artillery of the stirrup) ಎಂದು ಕರೆಯು ತ್ತಾರೆ. ಈ ಎರಡು ತರಹ ಫಿರಂಗಿಗಳನ್ನು ಹಿತ್ತಾಳೆಯಿಂದ ತಯಾರುಮಾಡಿರುತ್ತಾರೆ.

ಪ್ರಾಂತಗಳಲ್ಲಿರುವ ಸೈನ್ಯಕ್ಕೂ ರಾಜನ ಬಳಿ ಇರುವ ಸೈನ್ಯಕ್ಕೂ ಇರುವ ಒಂದೇ ವ್ಯತ್ಯಾಸವೆಂದರೆ, ರಾಜನ ಬಳಿಯಿರುವ ಸೈನ್ಯ ದೊಡ್ಡದು. ಪ್ರಾಂತಗಳಲ್ಲಿ ಸೈನ್ಯ ಚಿಕ್ಕದು. ಪ್ರತಿ ಜಿಲ್ಲೆಯಲ್ಲಿಯೂ ಅಮೀರರು, ಮನ್ಸಬ್‌ದಾರರು, ರೋಜಿನ್‌ದಾರರು,

ಕುದುರೆ ರಾವುತರು, ಕಾಲ್ದಳ ಮತ್ತು ಗೋಲಂದಾಜ ಪಡೆಯವರು ಇದ್ದೇ ಇರುತ್ತಾರೆ. ಡೆಕನ್ ಒಂದರಲ್ಲೇ ಇಪ್ಪತ್ತು ಇಪ್ಪತ್ತೈದು ಸಾವಿರ ಸೈನ್ಯವಿದೆ. ಕೆಲವು ವೇಳೆ ಇದು ಮೂವತ್ತು ಸಾವಿರಕ್ಕೆ ಏರುವುದೂ ಉಂಟು. ಅಲ್ಲಿರುವ ಸೈನ್ಯ ಗೋಲ್ಕೊಂಡಾ ರಾಜನ ಶಕ್ತಿಯನ್ನು ಎದುರಿಸುವಷ್ಟು ಮತ್ತು ವಿಜಾಪುರ ಮತ್ತು ಇತರ 'ರಾಜ'ರುಗಳ ಮೇಲೆ ಯುದ್ಧಮಾಡುವಷ್ಟು ಬಲಯುತವಾಗಿದೆ. ಕಾಬೂಲಿನಲ್ಲಿರುವ ಸೈನ್ಯದಲ್ಲಿ ಹನ್ನೆರಡು ಹದಿನೈದು ಸಾವಿರ ಸೈನಿಕರಿಗಿಂತ ಕಡಿಮೆ ಜನರಿಲ್ಲ. ಕಾಶ್ಮೀರದಲ್ಲಿ ನಾಲ್ಕು ಸಾವಿರಕ್ಕೂ ಹೆಚ್ಚು ಯೋಧರಿಂದ ಕೂಡಿದ ಸೈನ್ಯವಿದೆ. ಪದೇಪದೇ ಯುದ್ಧಗಳಾಗುವ ಬಂಗಾಳದಲ್ಲಿ ಸೈನ್ಯದ ಸಂಖ್ಯೆ ಬಹಳ ಹೆಚ್ಚು. ಯಾವ ಪ್ರಾಂತವೇ ಆಗಲಿ ತನಗೆ ಸೈನ್ಯ ಬೇಡ ಎನ್ನುವಂತಿಲ್ಲ. ಹೀಗಾಗಿ, ಇಡೀ ಹಿಂದೂಸ್ಥಾನದಲ್ಲಿರುವ ಒಟ್ಟು ಸೈನ್ಯದ ಸಂಖ್ಯೆ ನಂಬಲಸಾಧ್ಯವಾದುದು.

ಕಾಲ್ದಳವನ್ನು ಗಮನಕ್ಕೆ ತೆಗೆದುಕೊಳ್ಳದೆ, ಮತ್ತು ಸುಳ್ಳಾಗಿ ಲೆಕ್ಕದಲ್ಲಿ ತೋರಿಸಿರುವ ಕುದುರೆಗಳನ್ನು ಬಿಟ್ಟರೆ, ಸರಿಯಾದ ಲೆಕ್ಕದಂತೆ ರಾಜನ ಬಳಿ ಅಶ್ವದಳದಲ್ಲಿ ಮೂವತ್ತು ಅಥವಾ ಮೂವತ್ತೈದು ಸಾವಿರ ಕುದುರೆಗಳಿವೆ. ಇದಕ್ಕೆ ಪ್ರಾಂತಗಳಲ್ಲಿರುವವುಗಳನ್ನು ಸೇರಿಸಿದರೆ ಒಟ್ಟು ಸಂಖ್ಯೆ ಎರಡು ಲಕ್ಷ ಕುದುರೆಗಳಿಗಿಂತ ಹೆಚ್ಚಾಗುತ್ತದೆ.

ರಾಜನ ಸುತ್ತಮುತ್ತ ಕಾಲ್ದಳದ ಸಂಖ್ಯೆ ಹದಿನೈದು ಸಾವಿರ ಇರಬಹುದು. ಇದರಲ್ಲಿ ಬಂದೂಕು ಸಿಪಾಯಿಗಳು, ಗೋಲಂದಾಜರು, ಮತ್ತು ಗೋಲಂದಾಜಪಡೆಗೆ ಸಂಬಂಧಿಸಿದವರೆಲ್ಲಾ ಸೇರಿದ್ದಾರೆ. ಇದರಿಂದ ಲೆಕ್ಕಹಾಕಿಕೊಳ್ಳಬಹುದು, ಪ್ರಾಂತಗಳಲ್ಲಿ ಇರುವ ಕಾಲ್ದಳದ ಸೈನ್ಯ ಎಷ್ಟು ಎಂದು. ಜನರು ಮೊಗಲನ ಸೈನ್ಯದ ಅಪಾರತೆಯನ್ನು ವರ್ಣಿಸುವಾಗ ಸೈನ್ಯದೊಡನೆ ಹೋಗುವ ಆಳುಕಾಳುಗಳು, ಶಿಬಿರ ವ್ಯಾಪಾರಿಗಳು (Sutlers), ವರ್ತಕರು, ಮತ್ತು 'ಬಜಾರಿ'ನಲ್ಲಿ ಅದು ಇದು ಚಿಲ್ಲರೆ ಕೆಲಸಮಾಡುವ ಜನಗಳು, ನರ್ತಕಿಯರು, ಹಾಸ್ಯಗಾರರು—ಇವರನ್ನೆಲ್ಲಾ ಸೇರಿಸಿ ಹೇಳಿಬಿಡುತ್ತಾರೆ. ಇವರನ್ನು ಸೇರಿಸಿಕೊಂಡರೂ ರಾಜನ ಸುತ್ತಮುತ್ತ ಇರುವ ಸೈನ್ಯ ಎರಡು ಮೂರು ಲಕ್ಷಕ್ಕಿಂತ ಹೆಚ್ಚಿರಲಾರದು. ಇದು ಬಹಳ ಹೆಚ್ಚಾಯಿತು ಎಂದು ಯಾರೂ ಭಾವಿಸಬಾರದು, ಏಕೆಂದರೆ, ಸೈನ್ಯದೊಡನೆ ಅಸಂಖ್ಯಾತ ಡೇರೆಗಳು, ಪಾಕಶಾಲೆಗಳು, ಹಾಸಿಗೆ, ಹೊದಿಕೆ, ಪೀಠೋಪಕರಣಗಳು—ಇವೆಲ್ಲಾ ಸಾಗಬೇಕು. ಸಾಮಾನ್ಯವಾಗಿ ಹೆಂಗಸರೂ ಸೈನ್ಯದೊಡನೆ ಹೋಗುತ್ತಾರೆಂದರೆ, ಸಾಮಾನು ಸರಂಜಾಮುಗಳೆಷ್ಟು ಎಂದು ನೀವೇ ಊಹಿಸಿಕೊಳ್ಳಿ. ಸಾಮಾನು ಸರಂಜಾಮುಗಳನ್ನೂ ಜನರನ್ನೂ ಸಾಗಿಸುವುದಕ್ಕೆ ಅನೇಕ ಆನೆ, ಒಂಟೆ, ಎತ್ತು, ಕುದುರೆಗಳೂ ಮತ್ತು ತಲೆಹೊರೆಯ ಜನರೂ ಬೇಕು. ಈ ದೇಶದಲ್ಲಿ ರಾಜನೇ ಭೂಮಿಗೆಲ್ಲಾ ಒಡೆಯನಾಗಿರುವ ಕಾರಣ, ದಿಲ್ಲಿ ಅಥವಾ ಆಗ್ರಾದಂತಹ ರಾಜಧಾನಿಯ ನಿವಾಸಿಗಳಿಗೆ ಸೈನ್ಯವೇ ಜೀವನಾಧಾರ. ಹೆಚ್ಚು ಕಾಲ ರಾಜನು ರಾಜಧಾನಿ

ಯನ್ನು ಬಿಟ್ಟು ಹೊರಗಡೆ ಮೊಕ್ಕಾಂಮಾಡಿದರೆ ಅವನೊಡನೆ ಸೈನ್ಯವೂ, ಆ ಸೈನ್ಯಕ್ಕೆ ಸಾಮಾನು ಸರಬರಾಜು ಮಾಡುವ ಜನರೂ ಹೋಗಬೇಕಾಗುತ್ತದೆ. ದಿಲ್ಲಿ ಅಥವಾ ಆಗ್ರಾ ನಗರಗಳನ್ನು, ಪ್ಯಾರಿಸ್ ಪಟ್ಟಣವೊಂದನ್ನು ಬಿಟ್ಟು ಬೇರೆ ಯಾವುದಕ್ಕಾದರೂ ಹೋಲಿಸಬಹುದು. ಈ ನಗರಗಳನ್ನು ದಂಡು ಬೀಡುಬಿಟ್ಟ ಪಾಳೆಯಗಳೆಂದು ಕರೆಯುವುದು ಸೂಕ್ತ.

ಅಮೀರನಿಂದ ಹಿಡಿದು ಖಾಸಗಿ ಸಿಪಾಯಿಯವರೆಗೆ ಎಲ್ಲರಿಗೂ ಪ್ರತಿ ಎರಡು ತಿಂಗಳುಗಳಿಗೊಮ್ಮೆ ಸಂಬಳ ಪಾವತಿಮಾಡಲೇಬೇಕಾದುದು ಗ್ರಹಿಸಬೇಕಾದ ಮುಖ್ಯ ವಿಷಯ. ಏಕೆಂದರೆ, ಅವರಿಗೆಲ್ಲಾ ಸಂಬಳ ಬಿಟ್ಟರೆ ಬೇರೆ ಗತಿಯಿಲ್ಲ. ಸಮಯ ಸಂದರ್ಭಗಳಲ್ಲಿ ಫ್ರಾನ್ಸಿನ ಸೈನಿಕರು ಸಂಬಳ ಇಲ್ಲದಿದ್ದರೂ ತಮ್ಮ ಸ್ವಂತ ಆದಾಯದಿಂದ ಬದುಕಬಲ್ಲರು. ಆದರೆ ಇಂಡೀಸಿನಲ್ಲಿ ಹಾಗಲ್ಲ. ಸಂಬಳ ಕೊಡುವುದು ಒಂದು ದಿನ ನಿಧಾನವಾದರೆ ಅನಾಹುತ ತಪ್ಪಿದ್ದಲ್ಲ. ಸಿಪಾಯಿಗಳು ತಮ್ಮ ಬಳಿ ಇರುವ ಸಣ್ಣ ಪುಟ್ಟ ಸಾಮಾನುಗಳನ್ನೆಲ್ಲಾ ಮಾರಿ ತಿಂದ ಮೇಲೆ ಸಾಯದೆ ವಿಧಿಯೇ ಇಲ್ಲ ಈ ಹಿಂದೆ ಹೇಳಿದ ಅಂತರ್ಯುದ್ಧ ಮುಗಿಯುವ ವೇಳೆಗೆ ಕುದುರೆರಾವುತರು ತಮ್ಮ ಕುದುರೆಗಳನ್ನೇ ಮಾರುವುದಕ್ಕೆ ಆರಂಭಿಸಿದ್ದರು. ಆದರೆ ಯುದ್ಧ ಮುಂದುವರಿದ ಕಾರಣ ಹಾಗಾಗುವುದು ತಪ್ಪಿತು. ಇದನ್ನು ಕೇಳಿ ಅಚ್ಚರಿಪಡಬೇಡಿ, ಒಡೆಯರೆ ! ಮೊಗಲನ ಸೈನ್ಯದಲ್ಲಿ ಮದುವೆಯಾಗದ ಸಿಪಾಯಿ ಸಿಕ್ಕುವುದೇ ಕಷ್ಟ. ಮದುವೆಯಾದ ಮೇಲೆ ಅವನಿಗೆ ಹೆಂಡತಿ, ಮಕ್ಕಳು, ಆಳುಕಾಳು ಹಾಗೂ ಗುಲಾಮರು ಇದ್ದೇ ಇರುತ್ತಾರೆ. ಇವರನ್ನೆಲ್ಲಾ ಸಾಕಬೇಕು ಆ ಸಿಪಾಯಿ. ರಾಜನ ಬೊಕ್ಕಸದಿಂದ ಜೀವನಮಾಡುವ ಜನರ ಸಂಖ್ಯೆ ಎಷ್ಟೆಂಬುದನ್ನು ಲೆಕ್ಕಹಾಕಲು ಪ್ರಯತ್ನಿಸಿ ಅನೇಕ ಜನ ತಮ್ಮ ತಲೆ ಕೆಡಿಸಿಕೊಂಡಿದ್ದಾರೆ. ಅಷ್ಟೊಂದು ಜನಕ್ಕೆ ದುಡ್ಡನ್ನು ಎಲ್ಲಿ ತರುವುದು ಎಂದು ಕೇಳುತ್ತಾರೆ. ಆದರೆ ಅವರಿಗೆ ಗೊತ್ತಿಲ್ಲ, ಮಹಾ ಮೊಗಲನ ಆದಾಯವೆಷ್ಟು ಎಂದು, ಮತ್ತು ಹಿಂದೂಸ್ಥಾನವನ್ನು ಆಳುವ ವಿಚಿತ್ರ ರೀತಿ ಏನು ಎಂದು.

ಮೊಗಲನ ಖರ್ಚುವೆಚ್ಚ ಇಷ್ಟೇ ಎಂದು ಭಾವಿಸಬೇಡಿ. ಇನ್ನೂ ಅನೇಕ ಬಾಬುಗಳಿವೆ. ತುರ್ತು ಸಂದರ್ಭಕ್ಕೆ ಇರಲಿ ಎಂದು ಮೊಗಲನು ದಿಲ್ಲಿ ಮತ್ತು ಆಗ್ರಾಗಳಲ್ಲಿ ಎರಡು ಮೂರು ಸಾವಿರ ಒಳ್ಳೆಯ ಕುದುರೆಗಳನ್ನು ಸಾಕಿದ್ದಾನೆ. ಎಂಟೊಂಬತ್ತು ನೂರು ಆನೆಗಳನ್ನೂ ಅನೇಕ ಹೇರುಕುದುರೆಗಳನ್ನೂ ಹೇಸರಗತ್ತೆಗಳನ್ನೂ ತಲೆ ಹೊರೆಯ ಜನರನ್ನೂ ಇಟ್ಟಿದ್ದಾನೆ. ಅಸಂಖ್ಯಾತವಾದ ಹಾಗೂ ಭಾರಿಭಾರಿಯಾದ ಡೇರೆ ಗುಡಾರಗಳನ್ನೂ, ಅವುಗಳಿಗೆ ಬೇಕಾದ ಹಗ್ಗ ಗೂಟ ಮುಂತಾದುವುಗಳನ್ನೂ, ಹೆಂಗಸರು ಮತ್ತು ಊಳಿಗದ ಅವ್ವೆಯರನ್ನೂ, ಪೀಠೋಪಕರಣಗಳನ್ನೂ, ಪಾಕಶಾಲೆಯ

ಪಾತ್ರೆಪರಟೆಗಳನ್ನೂ, ಗಂಗಾನದಿಯ ನೀರನ್ನೂ[1], ಮತ್ತಿತರ ಬಿಡಾರದ ಸಲಕರಣೆಗಳನ್ನೂ ಸಾಗಿಸುವುದಕ್ಕೆ ಈ ಆನೆ ಕುದುರೆಗಳನ್ನು ಉಪಯೋಗಿಸುತ್ತಾರೆ. ಮೊಗಲನು ಹೊರಗಡೆ ಇದ್ದರೂ ಅರಮನೆಯಲ್ಲಿ ಇರುವಂತೆಯೇ ಇರಬೇಕು. ಯುರೋಪಿನಲ್ಲಿ ನಾವು ಅನಾವಶ್ಯಕವೆಂದು ಭಾವಿಸುವುದು ಇವರಿಗೆ ಆವಶ್ಯಕ.

ಮೇಲೆ ಹೇಳಿದ ಖರ್ಚು ಬಾಬುಗಳಲ್ಲದೆ ಮೊಗಲನ ಅಂತಃಪುರದ ಖರ್ಚು ಹೇಳತೀರದು. ಅಂತಃಪುರದವರಿಗೆ ಒದಗಿಸಬೇಕಾದ ಜರತಾರಿ ಬಟ್ಟೆಗಳು, ಕಿಂಕಾಪಿನ ವಸ್ತ್ರಗಳು, ರೇಷ್ಮೆ ಉಡುಪುಗಳು, ಕಸೂತಿಯ ವಸ್ತ್ರಗಳು, ಮುತ್ತುಮಾಣಿಕ್ಯಗಳು, ಕಸ್ತೂರಿ ಪುನಗು ಮುಂತಾದ ಜವಾಜಿ ವಸ್ತುಗಳು—ಇವೆಲ್ಲವುಗಳ ಖರ್ಚು ಎಷ್ಟೆಂದು ಲೆಕ್ಕಹಾಕುವುದಕ್ಕೆ ಸಾಧ್ಯವೇ ಇಲ್ಲ.

ಹೀಗಾಗಿ ಮಹಾ ಮೊಗಲನ ಆದಾಯ ಅಪಾರವಾಗಿದ್ದರೂ ಅದೆಲ್ಲ ವೆಚ್ಚವಾಗಿ ಉಳಿಯುವುದು ಅಷ್ಟು ಕಷ್ಟ.[2] ಅನೇಕರು ಭಾವಿಸಿರುವಂತೆ ರಾಜನ ಬಳಿ ಅಷ್ಟೇನೂ ಹೆಚ್ಚಿನ ನಗದು ಹಣ ಇಲ್ಲ. ಮೊಗಲನ ಆದಾಯ ತುರ್ಕಿ ಸುಲ್ತಾನ (Grand Seignior)

---

[1] ಒಳ್ಳೆಯ ನೀರನ್ನು ಪಡೆಯಲು ಮೊಗಲ್ ಚಕ್ರವರ್ತಿಗಳು ಏನೆಲ್ಲಾ ವ್ಯವಸ್ಥೆ ಮಾಡಿದ್ದರೆಂಬುದನ್ನು ಐನಿ ಅಕ್ಬರಿಯಿಂದ ತಿಳಿದುಕೊಳ್ಳಬಹುದು. ನೀರಿನ ವ್ಯವಸ್ಥೆಗೆ ಒಂದು ಇಲಾಖೆ ಇತ್ತು. ಅದಕ್ಕೆ 'ಅಬ್ದರ್‌ಖಾನಾ' ಎಂಬ ಹೆಸರಿತ್ತು. ಈ ಇಲಾಖೆಯ ಕೆಲಸ ಒಳ್ಳೆಯ ನೀರನ್ನು ತಂದು, ಅದನ್ನು ತಣ್ಣಗೆಮಾಡಿ, ಕುಡಿಯಲು ಕೊಡುವುದು. ಹಿಮಾಲಯದಿಂದ ಮಂಜುಗಡ್ಡೆಯನ್ನು ತರಿಸುವುದೂ ಈ ಇಲಾಖೆಯ ಒಂದು ಕೆಲಸ. ಅಕ್ಬರನು ನೀರನ್ನು 'ಅಮೃತ' ಎಂದು ಕರೆಯುತ್ತಿದ್ದನಂತೆ. ಅವನು ಹೆಚ್ಚಾಗಿ ನೀರು ಕುಡಿಯದಿದ್ದರೂ ಅದರ ಬಗ್ಗೆ ಬಹಳ ಆಸಕ್ತಿ ವಹಿಸುತ್ತಿದ್ದನು. ಅರಮನೆಯಲ್ಲಿರಲಿ ಅಥವಾ ಹೊರಗಡೆ ಪ್ರವಾಸ ಹೋಗಲಿ, ಅವನು ಗಂಗಾನದಿಯ ನೀರನ್ನೇ ಕುಡಿಯುತ್ತಿದ್ದುದು. ನಂಬಿಕೆಗೆ ಅರ್ಹರಾದ ಜನರನ್ನು ಆತ ಗಂಗಾನದಿಯ ಬಳಿ ಇಟ್ಟಿದ್ದನು. ಅವರು ಹೂಜಿಗಳಲ್ಲಿ ನೀರು ತುಂಬಿ ಮೊಹರು ಮಾಡಿ ಅವನಿರುವ ಕಡೆಗೆ ರವಾನಿಸುತ್ತಿದ್ದರು. ಅವನು ಆಗ್ರಾದಲ್ಲಿ ಅಥವಾ ಫತೇಪುರದಲ್ಲಿ ಇರುವಾಗ ನೀರು ಸಾರೂನ್ (Sarun=Saron) ಎಂಬಲ್ಲಿಂದ ಬರುತ್ತಿತ್ತು. ಪಂಜಾಬಿನಲ್ಲಿರುವಾಗ ಹರಿದ್ವಾರದಿಂದ ಬರುತ್ತಿತ್ತು. ಅಡಿಗೆಗೆ ಮಳೆಯ ನೀರನ್ನೋ ಅಥವಾ ಯಮುನಾ ಮತ್ತು ಚಿನಾಬ್ ನದಿಗಳ ನೀರನ್ನೋ ಉಪಯೋಗಿಸುತ್ತಿದ್ದರು. ಆದರೂ ಮೇಲೊಂದಷ್ಟು ಗಂಗಾನದಿಯ ನೀರನ್ನು ಸೇರಿಸುತ್ತಿದ್ದರು. ಚಕ್ರವರ್ತಿ ಪ್ರಯಾಣಮಾಡುವಾಗಲೂ ಬೇಟೆಯಾಡುವಾಗಲೂ ಒಳ್ಳೆಯ ನೀರನ್ನೆ ಕುಡಿಯಬೇಕೆಂದುಕೊಂಡು ಅನುಭವಸ್ಥರಾದ ಜನರಿಂದ ನೀರಿನ ರುಚಿನೋಡಿಸಿ ಆಮೇಲೆ ಕುಡಿಯುತ್ತಿದ್ದ.

[2] ಬೇರೊಂದು ಸಂದರ್ಭದಲ್ಲಿ ಈ ವಿಚಾರವನ್ನು ಕುರಿತು ಬೆರ್ನ್ಯೆ ಹೇಳಿದ್ದಾನೆ. ಈತನ ಪ್ರಕಾರ ಮೊಗಲ್ ಚಕ್ರಾಧಿಪತ್ಯದ ಆದಾಯ ಭೂಮಿಯೊಂದರಿಂದಲೇ ೨೨ ಕೋಟಿ ರೂಪಾಯಿಗಳು ಇತ್ತಂತೆ; ಅದರ ವಿವರಗಳು ಹೀಗಿವೆ ;

೧. ಜೆಹಾನಾಬಾದ್ ಅಥವಾ ದಿಲ್ಲಿ : ಇದೇ ವೊದಲ 'ಸುಭಾ' ಅಂದರೆ ಪ್ರಾಂತ್ಯ. ಇದಕ್ಕೆ ೧೬ 'ಸರ್ಕಾರ್'ಗಳೂ ೨೩೦ ಪರ್ಗಾಣಗಳೂ ಅಧೀನವಾಗಿದ್ದುವು* — ೧,೯೫,೨೫,೦೦

೨. ಆಗ್ರಾ ಅಥವಾ ಅಕ್ಬರಾಬಾದ್. ಇದು ಎರಡನೆ ಸುಭಾ. ೧೪ ಸರ್ಕಾರಗಳು ಮತ್ತು ೧೬ ಪರ್ಗಾಣಗಳು — ೨,೫೨,೨೫,೦೦೦

೩. ಲಾಹೋರ್ : ೧೪ ಸರ್ಕಾರಗಳು ವುತ್ತು ೩೧೪ ಪರ್ಗಾಣಗಳು — ೨,೪೬,೯೫,೦೦೪

೪. ಹಸ್ಮೇರ್ (ಅಜ್ಮೀರ) ಸುಭಾ. ಇದು 'ರಾಜ'ನೊಬ್ಬನಿಗೆ ಸೇರಿದೆ. ಆತ ಚಕ್ರವರ್ತಿಗೆ ಕೊಡುವ ಪೊಗದಿ — ೨,೧೯,೭೦,೦೦೦

೫. ಗುಜರಾತ್ : ಅಹಮ್ಮದಾಬಾದ್ ಸುಭೆಯ ರಾಜಧಾನಿ. ೯ ಸರ್ಕಾರಗಳು ಮತ್ತು ೧೯೦ ಪರ್ಗಾಣಗಳು — ೧,೩೩,೯೫,೦೦೦

೬. ಕಾಂದಹಾರ್ ರಾಜ್ಯ : ಇದು ಪರ್ಷಿಯಾ ರಾಜನಿಗೆ ಸೇರಿದ್ದರೂ, ವೊಗಲ್ ಚಕ್ರವರ್ತಿಗೆ ಅಧೀನವಾಗಿರುವ ೧೫ ಪರ್ಗಾಣಗಳಿಂದ ಕೂಡಿದೆ. — ೧೯,೯೨,೫೦೦

೭. ಮಾಳ್ವ : ೯ ಸರ್ಕಾರಗಳು ; ಮತ್ತು ೧೯೦ ಪರ್ಗಾಣಗಳು — ೯೧,೬೨,೫೦೦

೮. ಪಟ್ಣಾ ಅಥವಾ ಬಿಯರಾ (Beara ಬಿಹಾರ್) : ೮ ಸರ್ಕಾರಗಳು ಮತ್ತು ೨೪೫ ಪರ್ಗಾಣಗಳು — ೯೫,೮೦,೦೦೦

೯. ಎಲಬಾಸ್ (ಅಹಮದಾಬಾದ್) ೧೭ ಸರ್ಕಾರಗಳು ಮತ್ತು ೨೧೬ ಪರ್ಗಾಣಗಳು — ೯೪,೭೦,೦೦೦

೧೦. ಹೌದ್ (Haoud ಔಂಧ್ ?) : ೫ ಸರ್ಕಾರಗಳು ಮತ್ತು ೧೪೯ ಪರ್ಗಾಣಗಳು — ೬೮,೩೦,೦೦೦

೧೧. ಮುಲ್ತಾನ್ : ೪ ಸರ್ಕಾರಗಳು ಮತ್ತು ಪರ್ಗಾಣಗಳು — ೧,೧೮,೪೦,೫೦೦೦

೧೨. ಜಗನ್ನಾತ್ (ಒರಿಸ್ಸಾ) ಬಂಗಾಳ ಸೇರಿ : ೭ ಸರ್ಕಾರಗಳು ವೀತ್ತು ೧೨ ಪರ್ಗಾಣಗಳು — ೭೨,೭೦,೦೦೦

೧೩. ಕಾಶ್ಮೀರ : ೫ ಸರ್ಕಾರಗಳು ವುತ್ತು ೪೫ ಪರ್ಗಾಣಗಳು — ೩೫,೦೦,೦೦೦

೧೪. ಕಾಬೂಲ್ : ೩೫ ಪರ್ಗಾಣಗಳು — ೩೨,೭೨,೫೦೦

೧೫. ತಟಾ (Tata–Sind–ಸಿಂದ್) : ೪ ಸರ್ಕಾರಗಳು ಮತ್ತು ೫೪ ಪರ್ಗಾಣಗಳು — ೨೩,೨೦,೦೦೦

೧೬. ಔರಂಗಬಾದ್ (ಹಿಂದೆ ದೌಲತಾಬಾದ್) : ೮ ಸರ್ಕಾರಗಳು ಮತ್ತು ೭೯ ಪರ್ಗಾಣಗಳು. — ೧,೭೨,೨೭,೫೦೦

---

*'ಸರ್ಕಾರ್' (Sircar ಅಥವ circar) ಎಂದರೆ 'The Exchequer of the King's income from all sources'. 'ಪರ್ಗಾಣ' ಎಂದರೆ ಅನೇಕ ಗ್ರಾಮಗಳು ಸೇರಿದ ಪ್ರದೇಶ ಅಥವಾ ಹೋಬಳಿ.

ಮತ್ತು ಪರ್ಷಿಯಾದ ದೊರೆ–ಇವರಿಬ್ಬರ ಒಟ್ಟು ಆದಾಯವನ್ನು ಮೀರಿಸುತ್ತದೆ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಈತನನ್ನು ನಾನು 'ಶ್ರೀಮಂತ ಚಕ್ರವರ್ತಿ' ಎಂದು ಕರೆಯಬೇಕೆಂದರೆ ಯಾವ ಅರ್ಥದಲ್ಲಿ ಎಂದರೆ, ಬೇಕಾದಷ್ಟು ಹಣವನ್ನು ಒಂದು ಕೈಯಿಂದ ಈಸಿಕೊಂಡು ಇನ್ನೊಂದು ಕೈಯಿಂದ ಕೊಡುವ ಖಜಾಂಚಿಯ ರೀತಿಯ ಅರ್ಥದಲ್ಲಿ. ಯಾವ ರಾಜನು ಪ್ರಜೆಗಳನ್ನು ಪೀಡಿಸದೆ ಸಾಕಷ್ಟು ಆದಾಯವನ್ನು ಪಡೆದು ತನ್ನ ವೈಭವದ ಆಸ್ಥಾನವನ್ನು ನಡೆಸುತ್ತಾನೋ, ಭವ್ಯವೂ ಉಪಯುಕ್ತವೂ ಆದ ಕಟ್ಟಡಗಳನ್ನು ಕಟ್ಟಿಸುತ್ತಾನೋ, ಪಾತ್ರಾಪಾತ್ರವರಿತು ದಾನಧರ್ಮಗಳನ್ನು ಮಾಡುತ್ತಾನೋ, ತನ್ನ ರಾಜ್ಯದ ರಕ್ಷಣೆಗೆ ಅತ್ಯಾವಶ್ಯಕವಾದ ಸೈನ್ಯವನ್ನು ಇಟ್ಟಿರುತ್ತಾನೋ, ಇಷ್ಟೆಲ್ಲ ಮಾಡಿ ತನ್ನ ನೆರೆಹೊರೆ ರಾಜರುಗಳೊಡನೆ ಮನಸ್ತಾಪ ಉಂಟಾದಾಗ ಅವರನ್ನು

| | | |
|---|---|---|
| ೧೭. | ವರದ (Varada–ಬಿರಾರ್) : ೨೦ ಸರ್ಕಾರಗಳು ಮತ್ತು ೧೯೧ ಪರ್ಗಾಣಗಳು | ೧,೫೮,೭೫,೦೦೦ |
| ೧೮. | ಕ್ಯಾಂಡೀಸ್ (Candays–ರಾಜಧಾನಿ ಬ್ರಹ್ಮಪುರ) : ೩ ಸರ್ಕಾರಗಳು ಮತ್ತು ೩೦೦ ಪರ್ಗಾಣಗಳು | ೧,೮೫,೫೦,೦೦೦ |
| ೧೯. | ತಲೆಂಗಾಂಡ್ (Talengand–Telingana–ತೆಲಿಂಗಾಣ) : ೪೩ ಪರ್ಗಾಣಗಳು | ೭,೮,೮೫,೦೦೦ |
| ೨೦. | ಬಾಗನಲಾ (Baganala–Baglan–ಬಾಗ್ಲಾನ್ ಅಥವಾ ಬಗ್ಲಾನ. ಪೋರ್ಚುಗೀಸರ ರಾಜ್ಯದ ಗಡಿಯಲ್ಲಿದೆ ಹಾಗೂ ಶಿವಾಜಿಯ ರಾಜ್ಯದ ಬೆಟ್ಟಗುಡ್ಡಗಳ ಸಮೀಪದಲ್ಲಿದೆ) : ೧೨ ಸರ್ಕಾರಗಳು ಮತ್ತು ೮ ಪರ್ಗಾಣಗಳು | ೫,೦೦,೦೦೦ |
| | **ಒಟ್ಟು ಆದಾಯ | ೨೨,೫೯,೩೫,೫೦೦ |

**ಬೇರೆ ಬೇರೆ ಮೊಗಲ್ ಚಕ್ರವರ್ತಿಗಳ ಕಾಲದಲ್ಲಿ ಆದಾಯ ಎಷ್ಟಿತ್ತೆಂಬುದನ್ನು ಎಡ್ವರ್ಡ್ ಥಾಮಸ್, ಎಫ್. ಆರ್. ಎಸ್. (Edward Thomas, F. R. S.) ಎಂಬ ಈಸ್ಟ್ ಇಂಡಿಯಾ ಕಂಪನಿ ಅಧಿಕಾರಿ ಬರೆದ *The Revenue Resources of the Mughal Empire in India, from AD 1593 to AD 1707* (London, Trubner, 1871) ಎಂಬ ಬಹು ಉಪಯುಕ್ತವಾದ ಗ್ರಂಥದಿಂದ ತಿಳಿದುಬರುತ್ತದೆ. ಅದರ ಪ್ರಕಾರ ಬೇರೆ ಬೇರೆ ಚಕ್ರವರ್ತಿಗಳ ಕಾಲದಲ್ಲಿ ಇದ್ದ ಆದಾಯ ಎಷ್ಟೆಂದರೆ :

| | |
|---|---|
| ಅಕ್ಬರ್ (೧೫೯೪) | ೧೪,೧೯,೦೯,೫೭೭ ರೂಪಾಯಿಗಳು |
| ಷಾಜಹಾನ್ (೧೬೪೮) | ೨೨,೦೦,೦೦,೦೦೦ ,, |
| ಔರಂಗಜೇಬ್ (೧೬೫೪) | ೨೬,೭೪,೯೯,೭೦೨ ,, |

ಎದುರಿಸುವುದಕ್ಕೆ ಬೇಕಾದಷ್ಟು ಹಣ ಉಳಿಸುತ್ತಾನೋ ಅವನೇ ಶ್ರೀಮಂತ ರಾಜ. ಇಂಡೀಸಿನ ಚಕ್ರವರ್ತಿಗೆ ಈ ಎಲ್ಲ ಅರ್ಹತೆಗಳೂ ಉಂಟು. ಆದರೆ ಅವು ಬೇರೆಯವರು ಭಾವಿಸಿರುವಷ್ಟು ಮಟ್ಟದಲ್ಲಿಲ್ಲ. ರಾಜನು ಅನಿವಾರ್ಯವಾಗಿ ಮಾಡಬೇಕಾದ ಅಗಾಧ ಖರ್ಚುವೆಚ್ಚಗಳನ್ನು ಕೇಳಿ ನಿಮಗೂ ಇದೇ ಅಭಿಪ್ರಾಯ ಬಂದಿರಬಹುದು.

ಮುಂದೆ ನಾನು ಹೇಳಲಿರುವ ಎರಡು ವಿಷಯಗಳಿಂದ ಮೊಗಲ್ ಚಕ್ರವರ್ತಿಯ ಆದಾಯಮೂಲಗಳ ಬಗೆಗೂ ಸಹ ಉತ್ಪ್ರೇಕ್ಷೆಮಾಡುತ್ತಾರೆ ಎಂದು ನನಗೆ ಅನಿಸುತ್ತದೆ. ಒಂದನೆಯ ವಿಷಯ ಯಾವುದೆಂದರೆ, ಕೇವಲ ಐದು ವರ್ಷಗಳು ಮಾತ್ರ ಒಳಯುದ್ಧ ನಡೆದರೂ ಮತ್ತು ಸೈನ್ಯದ ಸಂಬಳ ಮಾಮೂಲಿಗಿಂತ ಕಡಮೆ ಇದ್ದರೂ ತನ್ನ ಸೈನ್ಯಕ್ಕೆ ಕೊಡಬೇಕಾದ ಸಂಬಳ ಸಾರಿಗೆಗಳ ಬಗ್ಗೆ ಔರಂಗಜೇಬ ಪೇಚಾಡಬೇಕಾಗಿಬಂದುದು. ಬಂಗಾಳವೊಂದನ್ನು ಬಿಟ್ಟರೆ ಬೇರೆಲ್ಲ ಪ್ರಾಂತಗಳಲ್ಲಿ ಶಾಂತಿ ನೆಲೆಸಿತ್ತು ; ಮತ್ತು ತಂದೆ ಷಾಜಹಾನನ ಭಂಡಾರದಲ್ಲಿದ್ದ ನಗನಾಣ್ಯಗಳಲ್ಲಿ ಬಹು ಭಾಗ ಆತನ ಕೈಸೇರಿತ್ತು. ಆದರೂ ಸೈನ್ಯದ ಸಂಬಳ ಕೊಡುವುದಕ್ಕೆ ಪರದಾಡಿದ. ದೊಡ್ಡ ಅರ್ಥಶಾಸ್ತ್ರಜ್ಞನಾದ ಷಾಜಹಾನನ ಬಳಿ, ಅಂದರೆ ಯಾರು ನಲವತ್ತು ವರ್ಷಗಳ ದೀರ್ಘಕಾಲ ಯಾವ ಯುದ್ಧಗಳೂ ಇಲ್ಲದೆ ಆಳಿದನೋ ಆತನ ಬಳಿ, ಆರು 'ಕೊರೋರ್' (Kourour = ಕೋಟಿ) ರೂಪಾಯಿಗಳಿಗಿಂತ ಹೆಚ್ಚಿಗೆ ಹಣ ಇರಲಿಲ್ಲ. ಆದರೆ, ಇದರಲ್ಲಿ ಆತನ ಬಳಿ ಇದ್ದ ಭಾರಿ ಪ್ರಮಾಣದ ಚಿನ್ನ ಬೆಳ್ಳಿಯ ನಗಗಳೂ ಮುತ್ತುರತ್ನಗಳೂ ಸೇರಿಲ್ಲ. ಈ ತರಹ ಶ್ರೀಮಂತಿಕೆ ಬೇರೆ ಯಾವ ದೊರೆಗಾದರೂ ಇದೆಯೆ ಎಂದು ನನಗೆ ಸಂದೇಹ. ಮೊಗಲನು ಕುಳಿತುಕೊಳ್ಳುವ ಮುತ್ತುರತ್ನ ಖಚಿತವಾದ ಸಿಂಹಾಸನವೊಂದೇ ಮೂರು ಕೋಟಿ ರೂಪಾಯಿಗಳಾಗುತ್ತದೆ! ಇವೆಲ್ಲ ಹಿಂದಿನಿಂದ ಆಳಿಕೊಂಡುಬಂದ ಪಠಾಣರೂ, ಅರಸರುಗಳೂ ಸಂಪಾದಿಸಿಕೊಂಡುಬಂದವುಗಳು ಪ್ರತಿಯೊಬ್ಬ ಚಕ್ರವರ್ತಿಯೂ ತನ್ನ ರಾಜ್ಯಭಾರದ ಅವಧಿಯಲ್ಲಿ ಹಿಂದಿನವರು ಮಾಡಿದ ಸಂಪಾದನೆಗೆ ತನ್ನ ಸಂಪಾದನೆಯನ್ನು ಸೇರಿಸುತ್ತಾ ಹೋಗುತ್ತಾನೆ. ಆ ಭಂಡಾರವೆಲ್ಲ ರಾಜನಿಗೆ ಸೇರಿದ್ದೆಂದೂ, ಮುಟ್ಟಿದರೆ ಮಹಾಪರಾಧ ಮಾಡಿದಂತಾಗುವುದೆಂದೂ ಹೇಳುತ್ತಾರೆ. ಆದರೆ ಇಷ್ಟೊಂದು ಭಂಡಾರವನ್ನು ದೀಡು ಮಾಡಿದರೂ ರಾಜನಿಗೆ ಸಮಯ ಸಂದರ್ಭಗಳಲ್ಲಿ ಮೂರು ಕಾಸು ಕೊಡುವವರು ಯಾರೂ ಇರುವುದಿಲ್ಲ.

ಈ ಪತ್ರ ಮುಗಿಸುವ ಮುನ್ನ ಒಂದು ವಿಷಯ. ಮೊಗಲ್ ಚಕ್ರಾಧಿಪತ್ಯವು ಚಿನ್ನಬೆಳ್ಳಿಯ ಕಣಜವೆಂದು ಪ್ರಸಿದ್ಧವಾಗಿದ್ದರೂ ಅವು ಬೇರೆ ಕಡೆಗಳಿಗಿಂತ ಇಲ್ಲಿಯೇ ಹೆಚ್ಚೆಂದು ನಾನು ಹೇಳಲಾರೆ. ವಾಸ್ತವವಾಗಿ ಇಲ್ಲಿಯ ಜನರನ್ನು ಪ್ರಪಂಚದ ಬೇರೆ ಜನಗಳಿಗೆ ಹೋಲಿಸಿದರೆ, ಇವರು ದುಡ್ಡಿದ್ದವರಂತೆ ಕಾಣುವುದೇ ಇಲ್ಲ. ಇದಕ್ಕೆ ಕಾರಣಗಳೇನು ಎಂಬುದನ್ನು ಹೇಳುತ್ತೇನೆ, ಕೇಳಿ. ಇಲ್ಲಿಯ ಜನ ಚಿನ್ನಬೆಳ್ಳಿಗಳನ್ನು ಮತ್ತೆ ಮತ್ತೆ ಕರಗಿಸುವುದರಲ್ಲಿಯೇ ಎಷ್ಟೋ ಹಾಳುಮಾಡಿ, ಅವನ್ನು ಹೆಂಗಸರ ಕೈಬಳೆ,

ಕಾಲ್ಗಡಗ, ಕೊರಳ ಹಾರ, ಕಿವಿಯ ಓಲೆ, ಕಿವಿಯ ಮೂಗುತಿ, ಕೈಯುಂಗರ ಮುಂತಾದವುಗಳಿಗೆ ಉಪಯೋಗಿಸುತ್ತಾರೆ. ಇವಕ್ಕಿಂತಲೂ ಹೆಚ್ಚು ಚಿನ್ನಬೆಳ್ಳಿಗಳನ್ನು ಕಸೂತಿಗೂ ಜರತಾರಿಗೂ ಉಪಯೋಗಿಸುತ್ತಾರೆ. 'ಅಲಾಚ' (alacha) ಎಂಬ ಪಟ್ಟೆ ಪಟ್ಟೆ ರೇಷ್ಮೆ ವಸ್ತ್ರಗಳು, 'ತೌರಾ' (taura) ಎಂಬ ರುಮಾಲಿನ ಸರಿಗೆ, ಚಿನ್ನದ ಮತ್ತು ಬೆಳ್ಳಿಯ ಜರತಾರಿ ಬಟ್ಟೆಗಳು, ತಲೆಗೆ ಸುತ್ತಿಕೊಳ್ಳುವ ಬಟ್ಟೆಗಳು, ರುಮಾಲುಗಳು ಮತ್ತು ಕಿನ್ಕಾಪು ಬಟ್ಟೆಗಳು–ಇವುಗಳಿಗೆಲ್ಲ ಉಪಯೋಗಿಸುವ ಚಿನ್ನ ಬೆಳ್ಳಿ ಲೆಕ್ಕಹಾಕಲಾರದಷ್ಟು. ಸೈನ್ಯದವರೆಲ್ಲರೂ, ಅಮೀರನಿಂದ ಹಿಡಿದು ಕೊನೆಯ ಸಿಪಾಯಿಯವರೆಗೆ ಎಲ್ಲರೂ ಗಿಲೀಟು ಮಾಡಿದ ಆಭರಣಗಳನ್ನು ತೊಡುವವರೆ. ಒಬ್ಬ ಖಾಸಗಿ ಸಿಪಾಯಿಯೂ ಸಹ ತನ್ನ ಇಡೀ ಸಂಸಾರ ಹೊಟ್ಟೆಗಿಲ್ಲದೆ ತೊಳಲಾಡುತ್ತಿದ್ದರೂ ಹೆಂಡತಿ ಮಕ್ಕಳಿಗೆ ಈ ಒಡವೆ ಗಳನ್ನು ಇಲ್ಲ ಎನ್ನುವುದಿಲ್ಲ. ಇದು ಎಲ್ಲರಿಗೂ ಅನ್ವಯಿಸುವ ಮಾತು.

ಎರಡನೆಯ ವಿಷಯ ಏನೆಂದರೆ, ರಾಜ ತಾನೆಲ್ಲ ಭೂಮಿಯ ಒಡೆಯನಾಗಿರುವ ಕಾರಣ ಸೈನ್ಯದ ಜನರಿಗೆ ಒಂದಷ್ಟು ಭೂಮಿಯನ್ನು ಸಂಬಳದ ಬದಲು ಕೊಡುವುದು. ಈ ಮಾನ್ಯವನ್ನು (grant) 'ಜಹ್–ಘೀರ್' (jah-ghir) ಎಂದು ಕರೆಯುತ್ತಾರೆ. ತುರ್ಕಿಯಲ್ಲಿ ಇದನ್ನು 'ತಿಮರ್, (timar) ಎನ್ನುತ್ತಾರೆ. 'ಜಹ–ಘೀರ್' ಎಂಬ ಪದಕ್ಕೆ ಅರ್ಥ ಏನೆಂದರೆ, ಯಾವುದರಿಂದ ಪಡೆಯಬಹುದೋ ಆ ಸ್ಥಳ, ಅಥವಾ ಪಡೆಯುವ ಸಂಬಳದ ಮೂಲ ಎಂದು. ಇದೇ ರೀತಿಯ ಮಾನ್ಯಗಳನ್ನು ಸುಬೇದಾರರಿಗೂ ಸಹ ಅವರ ಸಂಬಳಕ್ಕೆ ಬದಲು ಅಥವಾ ಅವರು ಇಟ್ಟುಕೊಳ್ಳಬೇಕಾದ ಸೈನ್ಯದ ವೆಚ್ಚದ ಬದಲು ಕೊಡಲಾಗುತ್ತದೆ. ಈ ಮಾನ್ಯಕ್ಕೆ ಹಾಕುವ ಒಂದೇ ಒಂದು ನಿಬಂಧನೆಯೆಂದರೆ, ಹೆಚ್ಚುವರಿಯಾದ ಆದಾಯವನ್ನು ಪ್ರತಿ ವರ್ಷ ರಾಜನಿಗೆ ಕೊಡಬೇಕು ಎಂಬುದು. ಈ ರೀತಿ ಕೊಡದೆ ಉಳಿದ ಭೂಮಿಯೆಲ್ಲವೂ ರಾಜನ ವ್ಯಾಪ್ತಿಗೊಳಪಟ್ಟದ್ದು. ರಾಜನು ಈ ಭೂಮಿಯನ್ನು ಗೇಣಿದಾರರಿಗೆ ಕೊಟ್ಟು, ಅವರಿಂದ ವರ್ಷಕ್ಕೆ ಇಷ್ಟೆಂದು ಆದಾಯ ಪಡೆಯುತ್ತಾನೆ.

ಹೀಗೆ ರಾಜನಿಂದ ಭೂಮಿಯನ್ನು ಪಡೆದ ಜಹಘಿರ್‌ದಾರರು, ಸುಬೇದಾರರು ಮತ್ತು ಗುತ್ತಿಗೆದಾರರುಗಳಿಗೆ ಭೂಮಿಯನ್ನು ಸಾಗುವಳಿಮಾಡುವ ರೈತರ ಮೇಲೆ ಸಂಪೂರ್ಣ ಅಧಿಕಾರವುಂಟು. ಹೆಚ್ಚು ಕಡಮೆ ಇದೇ ರೀತಿಯ ಅಧಿಕಾರ ಅವರ ಅಧೀನದಲ್ಲಿರುವ ಜಿಲ್ಲೆಯ ಪಟ್ಟಣಗಳು ಮತ್ತು ಹಳ್ಳಿಗಳಲ್ಲಿರುವ ಕುಶಲಕೆಲಸಗಾರರು ಮತ್ತು ವರ್ತಕರು ಗಳು–ಇವರ ಮೇಲೂ ಉಂಟು. ಈ ಅಧಿಕಾರವನ್ನು ಕ್ರೌರ್ಯದಿಂದ ಹಾಗೂ ದಬ್ಬಾಳಿಕೆ ಯಿಂದ ಚಲಾಯಿಸುತ್ತಾರೆ. ಅದಕ್ಕಿಂತ ಹೆಚ್ಚಿನ ಕ್ರೌರ್ಯವುಳ್ಳದ್ದು ಯಾವುದೂ ಇರಲಾ ರದು. ರೈತನಾಗಲಿ, ಕುಶಲಕೆಲಸಗಾರನಾಗಲಿ ಅಥವಾ ವರ್ತಕನಾಗಲಿ ತನ್ನ ಗೋಳನ್ನು ಯಾರ ಮುಂದೆ ಹೇಳಿಕೊಂಡಾನು ! ಈ ನಿರ್ದಯರಾದ ದಬ್ಬಾಳಿಕೆಗಾರರ ಹಿಂಸಾಕೃತ್ಯ ವನ್ನು ತಡೆಯುವುದಕ್ಕೆ ಫ್ರಾನ್ಸಿನಲ್ಲಿರುವಂತೆ ಮಹಾಪ್ರಭುಗಳಾಗಲಿ, ಪಾರ್ಲಿಯಮೆಂಟು

ಗಳಾಗಲಿ ಅಥವಾ ಸ್ಥಳೀಯ ನ್ಯಾಯಾಧೀಶರಾಗಲಿ ಇಲ್ಲ. 'ಕಾದಿ' (Kadi= ಖಾಜೀ) ಗಳೆಂಬ ನ್ಯಾಯಾಧಿಕಾರಿಗಳಿಗೆ ಈ ನತದೃಷ್ಟ ಜನಗಳಿಗಾಗುವ ಅನ್ಯಾಯವನ್ನು ಸರಿಪಡಿಸಲು ಸಾಕಷ್ಟು ಅಧಿಕಾರ ಕೊಟ್ಟಿಲ್ಲ. ದಿಹ್ಲಿ ಆಗ್ರಾಗಳಂತಹ ರಾಜಧಾನಿಗಳ ಸುತ್ತಮುತ್ತಲೂ ದೊಡ್ಡ ದೊಡ್ಡ ಪಟ್ಟಣಗಳು ಮತ್ತು ಬಂದರುಗಳಲ್ಲಿಯೂ ರಾಜನು ವಹಿಸಿಕೊಟ್ಟ ಅಧಿಕಾರದ ದುರುಪಯೋಗ ಹೆಚ್ಚು ಕಾಣಿಸದಿರಬಹುದು. ಏಕೆಂದರೆ, ಇಂಥ ಸ್ಥಳಗಳಲ್ಲಿ ಆಗುವ ಅನ್ಯಾಯವನ್ನು ರಾಜನಿಂದ ಮರೆಮಾಚುವುದು ಸುಲಭವಲ್ಲ.

ಈ ಹೀನಾಯವಾದ ಗುಲಾಮಿ ಪದ್ಧತಿ ವ್ಯಾಪಾರೋದ್ಯಮಗಳ ಮುನ್ನಡೆಗೆ ಅಡ್ಡಿಬಂದಿದೆ. ಅಷ್ಟೇ ಅಲ್ಲ, ಪ್ರತಿಯೊಬ್ಬ ವ್ಯಕ್ತಿಯ ನಡೆನುಡಿ ಹಾಗೂ ಜೀವನ ರೀತಿ ನೀತಿಗಳ ಮೇಲೂ ಪರಿಣಾಮವನ್ನುಂಟುಮಾಡಿದೆ. ವಾಣಿಜ್ಯೋದ್ಯಮಗಳಲ್ಲಿ ತೊಡಗಲು ಯಾವ ಪ್ರೋತ್ಸಾಹವೂ ಇಲ್ಲ. ಯಾವುದಕ್ಕಾದರೂ ಕೈಹಾಕಿ ನಾಲ್ಕು ಕಾಸು ಸಂಪಾದನೆ ಮಾಡಿ ಸುಖವಾಗಿರೋಣ ಎಂದರೆ, ಆಗಲೇ ಪೀಡೆ ಆರಂಭವಾಗಿಬಿಡುತ್ತದೆ. ವಕ್ರದೃಷ್ಟಿಯ ಆ ಪೀಡಕ ಜನರು ಕೈಗಾರಿಕೆಯಿಂದ ದುಡಿದದ್ದನ್ನೆಲ್ಲಾ ತನ್ನ ದರ್ಪ ಹಾಗೂ ಜಬರ್ದಸ್ತು ಗಳನ್ನುಪಯೋಗಿಸಿ ಅವರಿಂದ ಕಸಿದುಕೊಂಡುಬಿಡುತ್ತಾನೆ. ಹೀಗಾಗಿ, ಯಾರಾದರೂ ಹಣ ಸಂಪಾದಿಸಿ ಅನುಕೂಲವಂತನಾದರೆ ಆತ ಹೆಚ್ಚಿನ ಸೌಕರ್ಯಗಳಿಂದಲೂ ಸ್ವತಂತ್ರನಾಗಿಯೂ ಇರುವ ಬದಲು ಏನೂ ಇಲ್ಲದವನಂತೆ ನಟಿಸಲು ಪ್ರಯತ್ನಿಸುತ್ತಾನೆ. ಅವನ ಮನೆಮಠ ಉಡುಪು ಇತ್ಯಾದಿಗಳು ಮೊದಲಿನಂತೆಯೇ ಇರುತ್ತವೆ. ಊಟೋಪಚಾರ ಗಳಲ್ಲಿ ಸಾಮಾನ್ಯ ವ್ಯಕ್ತಿಯಂತೆ ಇರುತ್ತಾನೆ. ಸಂಪಾದಿಸಿದ ಚಿನ್ನ ಬೆಳ್ಳಿಗಳನ್ನು ಯಾರಿಗೂ ಕಾಣದಂತೆ ಭೂಮಿಯಲ್ಲಿ ಹೂತಿಡುತ್ತಾನೆ. ಹೀಗೆ ಹೂಳಿಡುವುದು ರೈತರ, ಕುಶಲಕೆಲಸಗಾರರ ಹಾಗೂ ವರ್ತಕರ ಸರ್ವೇಸಾಮಾನ್ಯವಾದ ಪದ್ಧತಿ. ಮಹಮ್ಮದೀಯರು ಮತ್ತು ಜೆಂಟೈಲರು—ಈ ಇಬ್ಬರಲ್ಲಿಯೂ ಈ ಪದ್ಧತಿ ಉಂಟು. ಜೆಂಟೈಲರಲ್ಲಿ ಹೆಚ್ಚು. ಇವರೇ ದೇಶದ ವ್ಯಾಪಾರೋದ್ಯಮಗಳಲ್ಲಿ ಬಹುಮಟ್ಟಿಗೆ ತೊಡಗಿರುತ್ತಾರೆ. ಬದುಕಿದ್ದಾಗ ಬಚ್ಚಿಟ್ಟ ಹಣ ಮುಂದೆ ಸತ್ತಮೇಲೆ ಉಪಯೋಗವಾಗುತ್ತೆ ಎಂಬುದು ಇವರ ನಂಬಿಕೆ. ಹೀಗಾಗಿ, ರಾಜನಿಂದ ಅಥವಾ ಅಮೀರನಿಂದ ಸಂಪಾದನೆಮಾಡಿದವರು ಅಥವಾ ಬಲಾಢ್ಯನೊಬ್ಬನ ಆಶ್ರಯವಿರುವ ಒಬ್ಬಿಬ್ಬರು ಮಾತ್ರ ಬಡತನದ ಸೋಗು ಹಾಕಿಕೊಳ್ಳದೆ ಎಲ್ಲರಿಗೂ ಕಾಣುವಂತೆ ಶ್ರೀಮಂತಿಕೆಯ ಜೀವನ ನಡೆಸುತ್ತಾರೆ.

ಹಿಂದೂಸ್ಥಾನದಲ್ಲಿ ಚಿನ್ನ ಬೆಳ್ಳಿ ಮುಂತಾದ ಬೆಲೆಯಾದ ಲೋಹಗಳನ್ನು ಬಚ್ಚಿಟ್ಟು, ಅವು ಚಲಾವಣೆಯಲ್ಲಿ ಇಲ್ಲದಂತೆ ಮಾಡಿರುವುದರಿಂದಲೇ ತೋರಿಕೆಗೆ ಅವುಗಳ ಅಭಾವ ಕಂಡುಬರಲು ಕಾರಣವಾಗಿರುವುದು.

ನಾನು ಈಗ ಹೇಳಿದುದನ್ನೆಲ್ಲಾ ಕೇಳಿದ ಮೇಲೆ ಒಂದು ಪ್ರಶ್ನೆ ಏಳಬಹುದು. 'ರಾಜನು ಭೂಮಿಯ ಒಡೆತನವನ್ನು ಬಿಟ್ಟುಕೊಟ್ಟು, ನಮ್ಮಲ್ಲಿರುವಂತೆ ಇಂಡೀಸಿನಲ್ಲಿಯೂ ಯಾರು ಬೇಕಾದರೂ ಖಾಸಗಿ ಆಸ್ತಿಯನ್ನು ಹೊಂದಬಹುದಾದರೆ ಅದರಿಂದ ರಾಜನಿಗೂ

ಪ್ರಜೆಗಳಿಗೂ ಅನುಕೂಲವಾಗುವುದಿಲ್ಲವೆ?" ಎಂಬುದೇ ಆ ಪ್ರಶ್ನೆ. ಖಾಸಗಿ ಆಸ್ತಿಯನ್ನು ಹೊಂದಿರಬಹುದಾದ ಯುರೋಪಿನ ದೇಶಗಳ ಸ್ಥಿತಿಗಳನ್ನೂ ಅಂತಹ ಆಸ್ತಿಯನ್ನು ಹೊಂದಿಲ್ಲದ ದೇಶಗಳ ಸ್ಥಿತಿಗಳನ್ನೂ ನಾನು ಸೂಕ್ಷ್ಮವಾಗಿ ಹೋಲಿಸಿ ನೋಡಿದ್ದೇನೆ. ಖಾಸಗಿ ಆಸ್ತಿ ಇಲ್ಲದಿದ್ದರೆ ರಾಜನ ಹಿತಕ್ಕೆ ಧಕ್ಕೆ ಎಂಬುದು ನನಗೆ ಸ್ಪಷ್ಟವಾಗಿದೆ. ದುಡಿದು ಸಂಪಾದಿಸುವವರ ಮೇಲೆ ಎಂತಹ ದೌರ್ಜನ್ಯಗಳು ನಡೆದರೂ ರಾಜನು ಅದನ್ನು ತಡೆಯು ಲಾಗುವುದಿಲ್ಲ ಎಂಬುದನ್ನು ಈಗಾಗಲೆ ನಾವು ನೋಡಿದ್ದೇವೆ. ಈ ಕಾರಣ ಸಂಪಾದಿಸಿ ಹೂತಿಟ್ಟ ಚಿನ್ನ ಬೆಳ್ಳಿ ಭೂಮಿಯ ಪಾಲು ; ಎಲ್ಲಿ ಏನು ಕಂಡರೆ ಕಿತ್ತುಕೊಳ್ಳುತ್ತಾರೋ ಎಂಬ ಭಯ ಭೀತಿ. ಹೊಟ್ಟೆಗಿಲ್ಲದೆ ಸಾಯುವಾಗ ಹೆಂಡತಿ ಮಕ್ಕಳೇಕೆ ? ಮಕ್ಕಳಿದ್ದರೂ, ಅವು ಹಸುಗೂಸಾಗಿರುವಾಗಲೇ ಅಸುನೀಗುತ್ತವೆ. ರೈತ ಈ ಯಾತನೆಗಳನ್ನು ಸಹಿಸ ಲಾರದೆ ಇನ್ನೊಂದು ಊರಿಗೆ ಓಡಿಹೋಗುತ್ತಾನೆ. ಅಲ್ಲಿ ತನ್ನ ಬಾಳು ಒಂದಷ್ಟು ಸುಖ ವಾದೀತೇನೋ ಎಂಬ ಆಸೆ. ಅಲ್ಲಿಯೂ ಇದೇ ಗತಿಯಾದರೆ ಕೊನೆಗೆ ಸೈನ್ಯದಲ್ಲಿ ಆಳು ಕಾಳಾಗಿ ಸೇರಿಕೊಂಡು ಹೇಗೋ ಹೊಟ್ಟೆಹೊರೆದುಕೊಳ್ಳುತ್ತಾನೆ. ಒತ್ತಾಯವಿಲ್ಲದೆ ಭೂಮಿಯನ್ನು ಸಾಗುವಳಿಮಾಡುವುದು ಅಪರೂಪ. ನೀರಿನ ಕಾಲುವೆ ಕಂದಕಗಳನ್ನು ಸ್ವತಃ ದುರಸ್ತುಮಾಡುವ ಮನಸ್ಸು ಯಾರಿಗೂ ಇಲ್ಲ. ಹೀಗಾಗಿ ಇಡೀ ದೇಶದಲ್ಲಿ ಸಾಗುವಳಿ ಸರಿಯಾಗಿ ನಡೆಯುವುದಿಲ್ಲ. ಬಹು ಭಾಗ ಭೂಮಿ ಬಂಜರುಬೀಳುತ್ತವೆ. ಮನೆಮಠಗಳೂ ಹಾಳುಬೀಳುತ್ತವೆ. ಹೊಸ ಮನೆಗಳನ್ನು ಕಟ್ಟುವುದು ಹೋಗಲಿ, ಇರುವ ಮನೆಗಳನ್ನು ಸರಿಯಾಗಿ ಇಟ್ಟುಕೊಳ್ಳುವ ಮನಸ್ಸಿರುವುದಿಲ್ಲ. "ಇಂದು ದುಡಿ ದದ್ದು ನಾಳೆ ಇನ್ನೊಬ್ಬನ ಬಾಯಿಗೆ ಹೋಗುವುದಾದರೆ ನಾನೇಕೆ ದುಡಿಯಬೇಕು ?" ಎಂಬ ಭಾವನೆ ರೈತರಲ್ಲಿ ಬೆಳೆದಿದೆ. ಇದು ರೈತನ ಭಾವನೆಯಾದರೆ, ಜಹಗೀರ್‌ದಾರರು, ಸುಬೇದಾರರು ಮತ್ತು ಗುತ್ತಿಗೆದಾರರು "ಭೂಮಿ ಹಾಳಾದರೆ ಹಾಳಾಯಿತು, ನನು ಗೇನು ? ಯಾವ ಗಳಿಗೆಯಲ್ಲೆಂದರೆ ಆ ಗಳಿಗೆ ಈ ಒಡೆತನ ನಮ್ಮ ಕೈತಪ್ಪ ಬಹುದು. ಹೀಗಿರುವಾಗ, ನಾವೇಕೆ ಹಣಹಾಕಿ ಅದನ್ನು ಅಭಿವೃದ್ಧಿಪಡಿಸಬೇಕು? ಕ್ಷಣಿಕ ವಾದ ಈ ಒಡೆತನ ನಮ್ಮ ಕೈತಪ್ಪಿದರೆ ನಮಗಾಗಲೀ ನಮ್ಮ ಮಕ್ಕಳಿಗಾಗಲೀ ಏನೂ ಪ್ರಯೋಜನವಿಲ್ಲ. ರೈತ ಸಾಯಲಿ ಬದುಕಲಿ, ನಾವು ಭೂಮಿಯಿಂದ ಆದಷ್ಟು ಹೀರಿ ಕೊಂಡು ಬೇಕೆಂದಾಗ ಬಿಟ್ಟುಕೊಟ್ಟರೆ ಸಾಕಲ್ಲ !" ಎಂದು ಆಲೋಚಿಸುತ್ತಾರೆ.

ನಾನು ತಿಳಿಸಿರುವ ವಿಷಯಗಳಿಂದ ಏಷ್ಯಾಖಂಡದ ದೇಶಗಳು ಏಕೆ ಹೀನಸ್ಥಿತಿಗೆ ಇಳಿಯುತ್ತಿವೆ ಎಂಬುದಕ್ಕೆ ಕಾರಣಗಳನ್ನು ಅರಿತುಕೊಳ್ಳಬಹುದು. ಈ ಹೊಲಸು ಪದ್ಧತಿಯ ಕಾರಣವಾಗಿಯೇ ಹಿಂದೂಸ್ಥಾನದ ಅನೇಕ ಪಟ್ಟಣಗಳಲ್ಲಿ ಮನೆ ಮಠಗಳನ್ನು ಮಣ್ಣಿನಿಂದಲೂ ಹುಲ್ಲುಸೊಪ್ಪುಗಳಿಂದಲೂ ಕಟ್ಟಿರುವುದು. ಈಗಾಗಲೇ ಹಾಳಾಗಿರುವ ಅಥವಾ ಪಾಳುಬಿದ್ದಿರುವ ಊರುಗಳ ವಿಚಾರ ಹಾಗಿರಲಿ, ಈಗ ಹಾಲಿ ಇರುವ ಯಾವ ಪಟ್ಟಣವಾಗಲೀ ನಗರವಾಗಲೀ ಕ್ಷೀಣದೆಸೆಯಲ್ಲಿರುವುದನ್ನು ಕಾಣಬಹುದು. ನನ್ನೀ

ಮಾತನ್ನು ದೂರದೇಶಗಳಿಗೆ ಅನ್ವಯಿಸದೆ ಹತ್ತಿರದ ದೇಶಗಳಿಗೆ ಅನ್ವಯಿಸಿದರೂ ಸತ್ಯವು ಹೊರಬೀಳುತ್ತದೆ. ಅಡೆತಡೆಗಳಿಲ್ಲದ ನಿರಂಕುಶ ಪ್ರಭುತ್ವ ಹಾಗೂ ದೌರ್ಜನ್ಯಗಳಿಂದಾಗಿ ಮೆಸೊಪೊಟಾಮಿಯಾ, ಅನಟೋಲಿಯ, ಪ್ಯಾಲೆಸ್ಟೈನ್ ಮತ್ತು ಅಂಟಿಯೋಕ್‌ಗಳು ಈಗ ಯಾವ ಸ್ಥಿತಿಗೆ ಇಳಿದಿವೆ ನೋಡಿ. ಒಮ್ಮೆ ಫಲವತ್ತಾದ ಭೂಮಿಗಳಿಂದ ಕೂಡಿ ಹೈರುಪಚ್ಚೆಗಳಿಂದ ತುಂಬಿ ಜನಭರಿತವಾಗಿದ್ದ ಆ ದೇಶಗಳು ಇಂದು ಪಾಳುಬಿದ್ದಿವೆ. ಅನೇಕ ಪ್ರದೇಶಗಳು ಜೌಗೆದ್ದು, ಮಾರಕ ಜಾಡ್ಯಗಳಿಂದ ಕೂಡಿ, ಮನುಷ್ಯನ ಇರುವಿಕೆಗೆ ಅನರ್ಹವಾಗಿವೆ. ಗುಲಾಮಿ ಪದ್ಧತಿಗೊಳಗಾದ ಈಜಿಪ್ತಿನ ಗತಿಯೂ ಇದೇ ಆಗಿದೆ. ಆ ಪ್ರದೇಶದಲ್ಲಿ ಹತ್ತನೇ ಒಂದು ಭಾಗ ಭೂಮಿ ಕಳೆದ ಎಂಬತ್ತು ವರ್ಷಗಳಲ್ಲಿ ಬೇಸಾಯ ದಿಂದ ತಪ್ಪಿಹೋಗಿದೆ. ಏಕೆಂದರೆ, ಸಾಗುವಳಿ–ನಾಲೆಗಳನ್ನು ದುರಸ್ತುಮಾಡುವವರು ಯಾರೂ ಇಲ್ಲ. ದಡ ಮೀರಿ ಹರಿಯುವ ನೈಲ್ ನದಿಯನ್ನು ಹತೋಟಿಗೆ ತರುವ ಗೋಜಿಗೆ ಯಾರೂ ಹೋಗುತ್ತಿಲ್ಲ. ಹೀಗಾಗಿ, ತಗ್ಗು ಪ್ರದೇಶಗಳಿಗೆ ನದಿಯ ನೀರು ನುಗ್ಗಿ ಮರಳನ್ನು ಎಳೆದಿದೆ. ಆ ಮರಳನ್ನು ತೆಗೆಯಬೇಕಾದರೆ ಬಹಳ ಜನರೂ ಹಣವೂ ಬೇಕು.

ಇಂತಹ ಪರಿಸ್ಥಿತಿಗಳಲ್ಲಿ ಒಳ್ಳೆಯ ಸರ್ಕಾರವಿರುವ ಕಡೆಗಳಲ್ಲಿ ಅಥವಾ ಸುಖದ ನೆಲೆ ವೀಡಾಗಿರುವ ಫ್ರಾನ್ಸ್‌ನಲ್ಲಿ ಬೆಳೆದಂತೆ ಕಲೆಗಳು ಬೆಳೆಯಲು ಸಾಧ್ಯವೇ ? ತೀರಾ ನಿರ್ಗತಿಕ ರಿರುವ ಕಡೆಗಳಲ್ಲಾಗಲಿ ಅಥವಾ ಅನುಕೂಲಸ್ಥರಾಗಿದ್ದರೂ ಬಡವರಂತೆ ಸೋಗು ಹಾಕಿ ಕೊಳ್ಳುವ ಜನರು ಇರುವ ಕಡೆಗಳಲ್ಲಾಗಲಿ ಕಲಾವಂತನು ಮನಸಿಟ್ಟು ತನ್ನ ಕಲೆಯನ್ನು ಬೆಳಸಲು ಸಾಧ್ಯವಾದೀತೆ ? ಬಡತನವಿರುವ ಕಡೆಗಳಲ್ಲಿ ಜನ ಒಂದು ವಸ್ತುವಿನ ಅಂದ ಚೆಂದಕ್ಕೆ ಗಮನಕೊಡುವ ಬದಲು ಆ ವಸ್ತುವಿನ ಬೆಲೆಗೆ ಗಮನಕೊಡುತ್ತಾರೆ. ದುಡ್ಡಿ ರುವ ಶ್ರೀಮಂತ ಏನು ಮಾಡುತ್ತಾನೆ ಗೊತ್ತೆ ? ಒಳ್ಳೆಯ ಕಲಾತ್ಮಕವಾದ ವಸ್ತು ಸಿಕ್ಕಿ ದರೆ ಅದನ್ನು ಅಡ್ಡಾದಿಡ್ಡಿ ಬೆಲೆಗೆ ಕೇಳುತ್ತಾನೆ. ಕೇಳಿದ ಬೆಲೆಗೆ ಕೊಡದಿದ್ದರೆ ಆ ನತದೃಷ್ಟ ಕಲಾವಂತನೋ ಅಥವಾ ವ್ಯಾಪಾರಸ್ಥನೋ 'ಕೊರ್ರಾಹ್'ದ (korrah = ಕೊರಡ) ರುಚಿ ನೋಡಬೇಕು. ಉದ್ದವಾದ ಆ ಕರಾಳ ಕೊರಡೆ ಪ್ರತಿ ಅಮೀರನ ಮನೆಯ ಬಾಗಿಲಿನಲ್ಲಿ ನೇತಾಡುತ್ತಿರುತ್ತದೆ. ತನ್ನ ಕಲಾನೈಪುಣ್ಯಕ್ಕೆ ಮನ್ನಣೆಯಿಲ್ಲ ವೆಂಬ ಭಾವನೆ ಬಂದರೆ ಉತ್ತಮ ಕಲಾಕೃತಿಗಳನ್ನು ಸೃಷ್ಟಿಸಲು ಯಾವ ಕಲೆಗಾರನಿಗೆ ತಾನೆ ಮನಸ್ಸು ಬಂದೀತು ? ಹೋಗಲಿ, ಕಲೆಯಿಂದ ಸಂಪಾದಿಸಿದ ಹಣದಿಂದ ಏನಾ ದರೂ ಭೂಮಿಕಾಣಿ ಮಾಡಿಕೊಂಡು, ಅಥವಾ ಯಾವುದಾದರೂ ಸ್ಥಾನಮಾನಗಳಿಸಿ ಕೊಂಡು ಸಂಸಾರ ಸಮೇತ ಸುಖವಾಗಿರೋಣವೆಂದರೆ ಅದಕ್ಕೂ ಅವಕಾಶವಿಲ್ಲ. ಆತ ತನ್ನಲ್ಲಿ ಏನೂ ಇಲ್ಲ ಎನ್ನುವಂತೆ ತೋರಿಸಿಕೊಳ್ಳಬೇಕು. ತನ್ನ ಸ್ಥಿತಿಗತಿ ಚೆನ್ನಾಗಿರು ವುದರ ಕುರುಹುಗಳಾದ ಒಳ್ಳೆಯ ಬಟ್ಟೆ ಹಾಕಿಕೊಳ್ಳುವುದನ್ನಾಗಲಿ, ಊಟೋಪಚಾರ ಗಳನ್ನಾಗಲಿ ಮಾಡಕೂಡದು. ಇಂಡೀಸಿನ ಕುಶಲಕಲೆಗಳು, ಅವುಗಳಿಗೆ ಈಗ ಸಿಕ್ಕು ತ್ತಿರುವ ಅಲ್ಪಸ್ವಲ್ಪ ಪ್ರೋತ್ಸಾಹ ಇಲ್ಲದೆಹೋಗಿದ್ದರೆ ಅವುಗಳ ಅಂದ ಚೆಂದ ಹಾಗೂ

ನಯನಾಜೂಕುಗಳನ್ನು ಎಂದೋ ಕಳೆದುಕೊಳ್ಳುತ್ತಿದ್ದುವು. ಚಕ್ರವರ್ತಿಯೂ, ಪ್ರಮುಖ ಅಮೀರರುಗಳೂ ಅನೇಕ ಜನ ಕುಶಲಕೆಲಸಗಾರರನ್ನು ತಮ್ಮತಮ್ಮ ಮನೆ ಗಳಲ್ಲಿ ಇರಿಸಿಕೊಂಡು ಸಂಬಳಕೊಟ್ಟು ಸಾಕುತ್ತಿದ್ದಾರೆ. ಕುಶಲಕೆಲಸಗಾರರು ಕೆಲಸ ಮಾಡುವುದರ ಜೊತೆಗೆ ಮಕ್ಕಳಿಗೆ ಪಾಠಹೇಳಿಕೊಟ್ಟು ಜೀವನ ಸಾಗಿಸುತ್ತಿದ್ದಾರೆ. ಮುಂದೆ ತಮ್ಮ ಭವಿಷ್ಯ ಒಳ್ಳೆಯದಾದೀತಲ್ಲ ಎಂಬ ಆಸೆ ಮತ್ತು ಕೊರಡೆಯ ಶಿಕ್ಷೆಯ ಭೀತಿ—ಇವು ಅವರನ್ನು ಕೆಲಸಕ್ಕೆ ತೊಡಗುವಂತೆ ಮಾಡಿವೆ. ಪ್ರಭಾವಶಾಲಿಗಳಾದ ಆಶ್ರಯದಾತರು ಶ್ರೀಮಂತ ವರ್ತಕರಿಗೂ ವ್ಯಾಪಾರಿಗಳಿಗೂ ಕೊಡುತ್ತಿರುವ ರಕ್ಷಣೆ ಕುಶಲಕಲೆ ಅಳಿಯದೆ ಉಳಿಯದಂತೆ ಮಾಡಿದೆ. ಏಕೆಂದರೆ, ಆ ಶ್ರೀಮಂತರಾದ ವ್ಯಾಪಾರಿ ಗಳೇ ಕುಶಲಕೆಲಸಗಾರರಿಗೆ ಹೆಚ್ಚು ಕೂಲಿನಾಲಿ ಕೊಡುವವರು. ಹೆಚ್ಚು ಕೂಲಿ ಕೊಡುತ್ತಾರೆಂದ ಮಾತ್ರಕ್ಕೆ ಶ್ರೀಮಂತ ವರ್ತಕ ಕಲೆಗಾರರನ್ನು ಬಹಳ ಮರ್ಯಾದೆ ಯಿಂದ ಕಾಣುತ್ತಾನೆಂದು ಭಾವಿಸಬಾರದು ; ಮತ್ತು ಆ ಕೂಲಿಯಿಂದ ಕುಶಲ ಕೆಲಸ ಗಾರ ಸ್ವತಂತ್ರನಾಗಿ ಬಾಳಬಹುದೆಂದು ತಿಳಿಯಬಾರದು. ಹೊಟ್ಟೆಪಾಡಿಗಾಗಿ ಅಥವಾ ಕೊರಡೆಯ ಹೆದರಿಕೆಯಿಂದಾಗಿ ಅವನು ಕೆಲಸಮಾಡುತ್ತಾನೆ, ಅಷ್ಟೆ. ತಾನೆಂದೂ ಶ್ರೀಮಂತನಾಗಲಾರನೆಂಬುದು ಆತನಿಗೆ ಗೊತ್ತು. ಹೊಟ್ಟೆಗೆ ಒಂದು ತುತ್ತು ಅನ್ನ, ಮೈಗೆ ಒಂದು ತುಂಡು ಬಟ್ಟೆ—ಇಷ್ಟಿದ್ದರೆ ಆತನಿಗೆ ಸ್ವರ್ಗವೇ ಸಿಕ್ಕಿದಂತೆ. ಹೆಚ್ಚು ಹಣ ಸಂಪಾದನೆ ಆದರೆ ಅದು ಅವನ ಜೇಬಿಗಲ್ಲ, ವರ್ತಕನ ಬೊಕ್ಕಸಕ್ಕೆ. ಬಡವರು ಬೆವರು ಸುರಿಸಿ ಸಂಪಾದಿಸಿದ ಹಣವನ್ನು ಆ ವರ್ತಕನು ಮೇಲಿನವರ ಕಣ್ಣಿಗೆ ಮಣ್ಣೆರಚಿ ತನ್ನ ದಾಗಿ ಮಾಡಿಕೊಳ್ಳುತ್ತಾನೆ.

ನಾನು ವರ್ಣಿಸಿದಂತಹ ಸಮಾಜದಲ್ಲಿ ಎಲ್ಲೆಲ್ಲೂ ಅಜ್ಞಾನ ತಾಂಡವಾಡುವುದು ಸ್ವಾಭಾವಿಕವೇ ಸರಿ. ಇಂಥ ಅಜ್ಞಾನ—ಸಮಾಜದ ಹಿಂದೂಸ್ಥಾನದಲ್ಲಿ ಸಾಹಿತ್ಯ ಸಂಸ್ಥೆ ಗಳೂ, ವಿದ್ಯಾಪೀಠಗಳೂ ಸ್ಥಾಪನೆಯಾಗುವುದಾದರೂ ತಾನೇ ಹೇಗೆ ? ಅವನ್ನು ಸ್ಥಾಪಿ ಸುವ ದಾನಿಗಳು ತಾನೆ ಎಲ್ಲಿ ಸಿಕ್ಕಿಯಾರು ? ಸ್ಥಾಪಿಸಿದರೂ ಸಹ ಅವುಗಳಲ್ಲಿ ಓದುವವ ರ್ಯಾರು ? ಮಕ್ಕಳನ್ನು ಮಹಾವಿದ್ಯಾಪೀಠಗಳಲ್ಲಿ ಓದಿಸುವಷ್ಟು ಆದಾಯವುಳ್ಳ ಆಸ್ತಿ ಯನ್ನು ಪಡೆದಿರುವವರು ಯಾರಿದ್ದಾರು ? ಅಂಥ ಆಸ್ತಿ ಉಳ್ಳವರು ಇದ್ದರೂ ತಮ್ಮ ಅನುಕೂಲತೆಯನ್ನು ತೋರಿಸಿಕೊಳ್ಳುವ ಧೈರ್ಯವಂತರು ಯಾರಿದ್ದಾರೆ ? ಹೋಗಲಿ, ಯಾರಾದರೂ ಒಬ್ಬ ಅಂಥ ಭಾರಿ ದಡ್ಡತನದ ಕೆಲಸವನ್ನು ಮಾಡಿದನೆಂದು ಇಟ್ಟು ಕೊಂಡರೆ, ಅವನ ಯೋಗ್ಯತೆ ಹಾಗೂ ಜ್ಞಾನವನ್ನು ಉಪಯೋಗಿಸಿಕೊಳ್ಳುವಂತಹ ಪುಣ್ಯಾತ್ಮರು ಯಾರಿದ್ದಾರು ? ಸಂಸ್ಥೆಗಳಾಗಲಿ, ಸ್ಥಾನಮಾನಗಳಾಗಲಿ, ಗೌರವ ಹಾಗೂ ಘನತೆಯ ಹುದ್ದೆಗಳಾಗಲಿ ಇಲ್ಲಿ ಯಾವು ಇವೆ ?

ಅಂತೆಯೇ, ಇಂಥ ಆಡಳಿತವಿರುವ ದೇಶದಲ್ಲಿ ವಾಣಿಜ್ಯ ಹೇಗೆ ತಾನೆ ಅಭಿವೃದ್ಧಿ ಹೊಂದೀತು ? ಯೂರೋಪಿನಲ್ಲಿ ನಾವು ಕಾಣುವಂತಹ ವಾಣಿಜ್ಯ ಚಟುವಟಿಕೆಗಳು

ಇಲ್ಲಿರಲು ಸಾಧ್ಯವಿಲ್ಲ. ಧೈರ್ಯಮಾಡಿ ವ್ಯಾಪಾರ ವಾಣಿಜ್ಯಗಳಲ್ಲಿ ತೊಡಗಿ, ಅದರ ಕಷ್ಟನಷ್ಟಗಳನ್ನು ಅನುಭವಿಸಿ ಸಂಪಾದನೆ ಮಾಡಿದರೆ, ಆ ಸಂಪಾದನೆ ಇನ್ನೊಬ್ಬರ ಬಾಯಿಗೆ ಹೋಗುವುದಾದರೆ, ಏಕೆ ಅದೆಲ್ಲ ತಾಪತ್ರಯವೆಂದು ಆ ಕೆಲಸಕ್ಕೆ ಕೈಹಾಕು ವುದೇ ಇಲ್ಲ. ವರ್ಷವೆಲ್ಲ ಕಷ್ಟಪಟ್ಟು ಸಂಪಾದಿಸಿದ್ದು ಒಂದು ದಿನ ಸುಬೇದಾರನ ಜೇಬಿಗೆ ಹೋಗಬೇಕಾಗುತ್ತದೆ. ಸಂಪಾದನೆ ಮಾಡಿದವನು ತನ್ನ ಸಂಪಾದನೆಯನ್ನು ತೋರಿಸಿ ಕೊಳ್ಳುವಂತಿಲ್ಲ. ಊಟ ಉಡಿಗೆಗಳಲ್ಲಿ ಬಡವರಂತೆಯೇ ಕಾಣಿಸಿಕೊಳ್ಳಬೇಕು. ಯಾರಾ ದರೂ ಪ್ರತಿಷ್ಠಿತ ಸೈನ್ಯಾಧಿಕಾರಿಯ ಬೆಂಬಲದಿಂದ ಒಬ್ಬ ವರ್ತಕ ಧೈರ್ಯಮಾಡಿ ಸಂಪಾದನೆಮಾಡಿದನೆಂದು ಇಟ್ಟುಕೊಳ್ಳಿ, ಆಗ ಆತ ಆ ಪ್ರತಿಷ್ಠಿತ ವ್ಯಕ್ತಿಯ ಸೇವಕ ನಾಗಿ, ಅವನು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕು.

ಮೊಗಲ್ ಚಕ್ರವರ್ತಿ ತನ್ನ ಸೇವೆಗೆ ರಾಜಕುಮಾರರನ್ನಾಗಲಿ, ಹಿರಿಯ ಮನೆ ತನದ ಶ್ರೀಮಂತ ಸರದಾರರನ್ನಾಗಲಿ, ತನ್ನ ಪ್ರಜೆಗಳ, ವರ್ತಕರ ಅಥವಾ ಸಾಮಾನು ತಯಾರಿಸುವವರ ಮಕ್ಕಳನ್ನಾಗಲಿ, ನಡೆನುಡಿಯಲ್ಲಿ ನಯವಿನಯಗಳಿರುವ ವಿದ್ಯಾ ವಂತರನ್ನಾಗಲಿ, ಮನೆತನದ ಘನತೆಗೌರವಗಳನ್ನು ಉಳಿಸಿಕೊಂಡು ತಮ್ಮ ಸ್ವಂತ ಕಾಲುಗಳ ಮೇಲೆ ನಿಲ್ಲುವ ಶಕ್ತಿಯುಳ್ಳ ಯೋಗ್ಯವಂತರನ್ನಾಗಲಿ ನೇಮಿಸಿಕೊಳ್ಳಲಾರ. ಅಂಥವರ ಬದಲು, ಗುಲಾಮರೂ ದಡ್ಡರೂ ಹಾಗೂ ಕ್ರೂರಿಗಳೂ ಅವನ ಸುತ್ತಮುತ್ತ ಸೇರಿಕೊಂಡಿದ್ದಾರೆ. ಸಮಾಜದ ಅತಿ ಕೀಳ್ಮಟ್ಟದಿಂದ ಬಂದ ಪರಜೀವಿಗಳೇ ಅವನನ್ನು ಸುತ್ತುವರಿದಿರುವುದು. ನಿಷ್ಠೆ ಹಾಗೂ ರಾಷ್ಟ್ರಭಕ್ತಿಗಳೆಂಬುದನ್ನು ಆ ನೀಚರು ಕಂಡರಿ ಯರು. ಅವರಲ್ಲಿ ಇರುವುದೆಲ್ಲಾ ಕೇವಲ ಒಣಜಂಭ. ಧೈರ್ಯ ಸ್ಥೈರ್ಯಗಳಾಗಲಿ, ನೀತಿ ನಿಯಮಗಳ ಗಂಧವಾಗಲಿ ಇಲ್ಲದೆ ಕೇವಲ ಬಡಾಯಿಕೊಚ್ಚಿಕೊಳ್ಳುವ ಜನ, ಆ ಜನ.

ಭಾರಿ ಆಸ್ಥಾನವನ್ನು ಸಕಲ ವೈಭವದಿಂದ ನಡೆಸುವುದಕ್ಕೂ, ಜನರನ್ನು ಹತೋಟಿ ಯಲ್ಲಿಡಲು ಇಟ್ಟಿರುವ ಸೈನ್ಯವನ್ನು ಕಾಪಾಡುವುದಕ್ಕೂ ಅಪಾರ ಹಣ ವೆಚ್ಚವಾಗುತ್ತಿದೆ. ಅದರಿಂದ ದೇಶವೇ ನಾಶವಾಗುತ್ತಿದೆ. ಜನರು ಎಷ್ಟು ಕಷ್ಟಪಡುತ್ತಿರುವರೆಂಬುದನ್ನು ನಾನು ನಿಮಗೆ ವರ್ಣಿಸಿ ಹೇಳಲಾರೆ. ಚಾವಟಿ ಹಾಗೂ ಕೊರಡೆಗಳು ಅವರನ್ನು ಪರರ ಸುಖಕ್ಕಾಗಿ ಒಂದೇ ಸಮನೆ ದುಡಿಯುವಂತೆ ಮಾಡುತ್ತಿವೆ. ಕ್ರೂರ ಶಿಕ್ಷೆಗಳಿಗೆ ಗುರಿಯಾಗಿ ನಿರಾಶೆಗೊಂಡ ಅವರು ದಂಗೆಯೇಳುವುದಕ್ಕೂ ಸಾಧ್ಯವಿಲ್ಲ, ಓಡಿಹೋಗುವುದಕ್ಕೂ ಸಾಧ್ಯವಿಲ್ಲ. ಏಕೆಂದರೆ, ಸೈನ್ಯ ಅವರ ಬೆನ್ನಹಿಂದೆಯೇ ಕಾದುನಿಂತಿದೆ.

ಈ ಹತದೃಷ್ಟ ದೇಶದ ಜನರ ನರಕಯಾತನೆ ಮತ್ತೊಂದು ಕಾರಣದಿಂದಲೂ ಹೆಚ್ಚಾಗುತ್ತಿದೆ. ಸಾಮಾನ್ಯವಾಗಿ, ಭಾರಿ ಯುದ್ಧ ಆರಂಭವಾಗಲಿದೆ ಎನ್ನುವಾಗ, ಇಲ್ಲಿ ಒಂದು ಸಾರ್ವತ್ರಿಕ ಪದ್ಧತಿ ಇದೆ. ಅದೇನೆಂದರೆ, ದೇಶದ ನಾನಾ ರಾಜ್ಯಗಳ ಅಧಿಕಾರಸ್ಥಾನಗಳನ್ನು ನಗದು ಹಣಕ್ಕೆ ಮಾರಿಬಿಡುವುದು. ಹೀಗೆ ಹಣ ಕೊಟ್ಟು ಸುಬೇದಾರ ಪದವಿಯನ್ನು ಕೊಂಡುಕೊಂಡವನು ತಾನು ದುಬಾರಿ ಬಡ್ಡಿಯ ಮೇಲೆ

ಮಾಡಿದ ಸಾಲವನ್ನು ತೀರಿಸುವುದಕ್ಕಾಗಿ ಜನರನ್ನು ಸುಲಿಗೆಮಾಡುತ್ತಾನೆ. ಅಲ್ಲದೆ, ಸುಬೇದಾರರೂ ಚಕ್ರವರ್ತಿಯ ಜಮೀನನ್ನು ಗುತ್ತಿಗೆಗೆ ಪಡೆದ 'ತಿಮರಿಯೊಟ್' (Timariot)ನೂ, ಗುತ್ತಿಗೆದಾರರೂ ಪ್ರತಿ ವರ್ಷ ವಜೀರನಿಗೂ, ಅಂತಃಪುರದ ಅಮ್ಮಾವರುಗಳಿಗೂ ಮತ್ತು ಆಸ್ಥಾನದಲ್ಲಿ ಯಾರ ಮರ್ಜಿಯಿಂದ ತಮ್ಮ ಕೆಲಸ ಆಗಬೇಕಾಗಿದೆಯೋ ಅಂಥವರಿಗೂ ಬೆಲೆಬಾಳುವ ವಸ್ತುಗಳನ್ನು ನಜರ್ ಮೂಲಕ ಅರ್ಪಿಸ ಬೇಕಾಗುತ್ತದೆ. ಸುಬೇದಾರನಾದವನು ತನ್ನ ರಾಜನಿಗೆ ಕಾಲಕಾಲಕ್ಕೆ ಸಲ್ಲಬೇಕಾದ ಕಪ್ಪಕಾಣಿಕೆಗಳನ್ನು ತಪ್ಪದೆ ಒಪ್ಪಿಸಬೇಕು. ಹೀಗೆ ವೈತುಂಬ ಸಾಲಸೋಲ ಮಾಡಿಕೊಂಡು, ಯಾವ ಪಿತ್ರಾರ್ಜಿತ ಆಸ್ತಿಪಾಸ್ತಿಯೂ ಇಲ್ಲದೆ ಸುಬೇದಾರನಾದವನು ಭಾರಿ ಶ್ರೀಮಂತನಾಗಿ ಬಿಡುತ್ತಾನೆ.

ಹೀಗಾಗಿ, ನಾಡೆಲ್ಲ ಹಾಳಾಗಿ ದಿಕ್ಕೆಟ್ಟುಹೋಗಿದೆ. ಪ್ರಾಂತದ ಪ್ರತಿಯೊಬ್ಬ ಸುಬೇದಾರನೂ ನಾನಾಗಲೇ ಹೇಳಿದಂತೆ ನಿರಂಕುಶ ಪ್ರಭು ಇದ್ದಂತೆ. ಅವನು ಆಡಿದ್ದೇ ಆಟ. ಅವನು ಏನೇ ಮಾಡಿದರೂ ಪ್ರಜೆಗಳು ತೆಪ್ಪಗೆ ಅನುಭವಿಸಬೇಕು.

ಮೊಗಲ್ ಚಕ್ರವರ್ತಿ ತನ್ನ ಪ್ರಾಂತಗಳಿಗೆಲ್ಲ 'ವಾಕಿಯ ನೆವಿಸ್' ಎಂಬ ವರದಿಗಾರರನ್ನು ಕಳುಹಿಸುತ್ತಾನೆ, ನಿಜ. ರಾಜ್ಯದಲ್ಲಿ ಏನೇನು ನಡೆಯುತ್ತದೆಯೋ ಅದನ್ನೆಲ್ಲಾ ಚಕ್ರವರ್ತಿಗೆ ವರದಿಮಾಡುವುದು ಅವರ ಕೆಲಸ. ಆದರೆ ಅವರೂ ಸುಬೇದಾರರೂ ಶಾಮೀಲಾಗಿಬಿಟ್ಟರೆ ಮಾಡುವುದೇನು ? ಈ ಕಾರಣ ವರದಿಗಾರರಿದ್ದರೂ ಜನಗಳ ಮೇಲೆ ನಡೆಯುವ ದಬ್ಬಾಳಿಕೆ ತಪ್ಪಿದಂತಾಗುವುದಿಲ್ಲ.

ರಾಜ್ಯದ ಪ್ರಮುಖ ಆಡಳಿತಹುದ್ದೆಗಳನ್ನು ಮಾರುವ ಪದ್ಧತಿ ತುರ್ಕಿಯಲ್ಲಿ ಇನ್ನೂ ಹೆಚ್ಚು. ಅಲ್ಲಿ ದಿನ ಬೆಳಗೆದ್ದರೆ ರಾಜಾರೋಷಾಗಿ ಅವುಗಳ ಮಾರಾಟ ನಡೆಯುತ್ತದೆ. 'ರಾಜಾರೋಷಾಗಿ' ಎಂದು ನಾನೇಕೆ ಹೇಳುತ್ತಿದ್ದೇನೆಂದರೆ, ಅಲ್ಲಿ ಪ್ರಾಂತದ ಅಧಿಪತಿಗಳು ಆಗಾಗ್ಗೆ ಒಪ್ಪಿಸಬೇಕಾದ ನಜರಿನ ಬೆಲೆ ಅದನ್ನು ಕೊಂಡುಕೊಂಡಷ್ಟೇ ಆಗುತ್ತದೆ. ಹಿಂದೂಸ್ಥಾನದಲ್ಲಿ, ತುರ್ಕಿಯಲ್ಲಿ ರೂಢಿಯಲ್ಲಿರುವಂತೆ ಸುಬೇದಾರರುಗಳನ್ನು ಆಗಾಗ್ಗೆ ಬದಲಾಯಿಸುವುದಿಲ್ಲ. ಅವರು ಹೆಚ್ಚು ಕಾಲ ಇದ್ದಷ್ಟು ದೌರ್ಜನ್ಯ ಕಡಿಮೆ. ಏಕೆಂದರೆ, ಬದಲಾವಣೆಗಳು ಆಗಾಗ್ಗೆ ಆಗುತ್ತಿದ್ದರೆ ಹೊಸದಾಗಿ ಬಂದವರೆಲ್ಲ ಸುಲಿಗೆಯಲ್ಲಿ ನಿರತರಾಗಿ ಬಿಡುತ್ತಾರೆ. ಅವರು ಸುಲಿಗೆಯನ್ನು ಕಡಿಮೆ ಮಾಡುವುದಕ್ಕೆ ಇನ್ನೊಂದು ಕಾರಣವೇನೆಂದರೆ, ಹೆಚ್ಚು ಸುಲಿಗೆಯಾದರೆ ಜನರು ತಾವಿರುವ ಪ್ರಾಂತವನ್ನೇ ಬಿಟ್ಟು ಮತ್ತೊಬ್ಬ ರಾಜನ ದೇಶಕ್ಕೆ ಹೋಗಿಬಿಡಬಹುದು. ವಾಸ್ತವವಾಗಿ ಬಹು ಜನ ಹಾಗೆಯೇ ಮಾಡುತ್ತಾರೆ.

ತುರ್ಕಿಯಲ್ಲಿರುವಂತೆ ಪರ್ಷಿಯಾದಲ್ಲಿಯೂ ಪ್ರಾಂತಗಳ ಮುಖ್ಯಹುದ್ದೆಗಳನ್ನು ಆಗಾಗ್ಗೆ ಮತ್ತು ರಾಜಾರೋಷಾಗಿ ಮಾರುವ ಕ್ರಮವಿಲ್ಲ. ಅಲ್ಲಿ ಒಬ್ಬ ಪ್ರಾಂತಾಧಿಕಾರಿ ಸತ್ತರೆ ಅವನ ಸಂತತಿಯವರೇ ಅವನ ಉತ್ತರಾಧಿಕಾರಿಗಳಾಗುವುದು ಸಾಮಾನ್ಯ.

ಇಂಥ ಉತ್ತಮ ಪರಿಸ್ಥಿತಿ ಇರುವ ಕಾರಣವೇ ಅಲ್ಲಿಯ ಜನ ತುರ್ಕಿಯ ಜನರಿಗಿಂತ ಎಷ್ಟೋ ನೆಮ್ಮದಿಯಿಂದ ಇದ್ದಾರೆ. ಪರ್ಷಿಯನರು ತುರ್ಕಿಯವರಿಗಿಂತ ಹೆಚ್ಚು ಸೌಜನ್ಯ ಶೀಲರೂ ವಿದ್ಯಾಬುದ್ಧಿಗಳುಳ್ಳವರೂ ಆಗಿದ್ದಾರೆ.

ಈ ಮೂರು ದೇಶಗಳಲ್ಲಿ, ಅಂದರೆ ತುರ್ಕಿ, ಪರ್ಷಿಯಾ ಮತ್ತು ಹಿಂದುಸ್ಥಾನಗಳಲ್ಲಿ, ಜನರು ಭೂಮಿ–ಕಾಣಿಗಳ ಬಗ್ಗೆ ಒಡೆತನದ ತತ್ವವೇನೆಂಬುದನ್ನೇ ಅರಿಯರು. ಆಸ್ತಿಯ ಮೇಲಿನ ಒಡೆತನವೇ ಪ್ರಪಂಚದ ಒಳ್ಳೆಯ ಹಾಗೂ ಉಪಯುಕ್ತವಾದ ಸಂಪತ್ತಿನ ಮೂಲ. ಅದಿಲ್ಲದಿರುವ ಈ ಮೂರು ದೇಶಗಳೂ ಒಂದೇ ತರಹ ಇದ್ದು, ಹಾನಿಕರವಾದ ಒಂದೇ ತರಹ ತಪ್ಪುಗಳನ್ನು ಮಾಡುತ್ತಿವೆ. ಒಂದಲ್ಲ ಒಂದು ದಿನ ಅವು ದಬ್ಬಾಳಿಕೆ, ದುಸ್ಥಿತಿ ಹಾಗೂ ವಿನಾಶದ ಹಾದಿ ಹಿಡಿಯಲೇ ಬೇಕು.

ಓ ನನ್ನ ದೊರೆಯೇ, ನಮ್ಮ ದೇಶಗಳಲ್ಲಿ ರಾಜರುಗಳು ಭೂಮಾಲೀಕರಾಗಿಲ್ಲದಿರುವುದು ಎಷ್ಟೊಂದು ಕ್ಷೇಮಕರ! ದೇವರಿಗೆ ನಾವು ಕೃತಜ್ಞರಾಗಿರಬೇಕಲ್ಲವೆ? ಹಾಗೇನಾದರೂ ಅವರು ಭೂಮಾಲೀಕರಾಗಿಬಿಟ್ಟದ್ದರೆ ಸಂವೃದ್ಧವಾದ ಬೆಳೆಗಳಿಂದ ತುಂಬಿ ತುಳುಕುವಂತಹ ಸುಭದ್ರವೂ ಶ್ರೀಮಂತವೂ ಆದ ನಗರಗಳನ್ನೂ ಸಂತೃಪ್ತವಾದ ಜನರ ನಾಡನ್ನೂ ನಾವು ಹುಡುಕಬೇಕಾಗುತ್ತಿತ್ತು. ಆ ಹಾನಿಕರ ಹಕ್ಕು ಇದ್ದಿದ್ದ ಪಕ್ಷದಲ್ಲಿ ಯೂರೋಪಿನ ರಾಜರುಗಳ ನಿಜವಾದ ಶ್ರೀಮಂತಿಕೆ ಬೇರೊಂದಾಗುತ್ತಿತ್ತು. ಅವರನ್ನು ಓಲೈಸುವ ಜನರ ರಾಜಭಕ್ತಿ ಹಾಗೂ ನಿಷ್ಠೆ ಬೇರೊಂದು ತೆರನಾಗುತ್ತಿದ್ದುವು. ರಾಜರುಗಳು ನಿರ್ಜನ ಪ್ರದೇಶಗಳ ಮೇಲೂ ಮರುಭೂಮಿಗಳ ಮೇಲೂ ಪ್ರಭುತ್ವವನ್ನು ಹೊಂದಿ ತಿರುಪೆಯುವರನ್ನೂ ಅನಾಗರಿಕರನ್ನೂ ಆಳಬೇಕಾಗುತ್ತಿತ್ತು.

ದೇವರ ಹಾಗೂ ಪ್ರಕೃತಿಯ ನಿಯಮಗಳಿಗನುಸಾರ ಪಡೆಯಬೇಕಾದುದಕ್ಕಿಂತಲೂ ಹೆಚ್ಚು ಪಡೆದು, ಸರ್ವಾಧಿಕಾರಿಗಳಾಗಿ ಮದಾಂಧತೆಯಿಂದಲೂ ಕ್ರೂರತನದಿಂದಲೂ ಆಳಬೇಕೆಂಬ ದುರಾಶೆಯನ್ನು ಹೊಂದಿದ ಈ ಏಷ್ಯಾ ರಾಜರು ಎಲ್ಲವನ್ನು ತಾವೇ ಬಾಚಿ ಕೊಳ್ಳಲು ಪ್ರಯತ್ನಿಸುತ್ತಾರೆ. ಹಾಗೆ ಮಾಡಲುಹೋಗಿ ಕೊನೆಗೆ ಎಲ್ಲವನ್ನೂ ಕಳೆದು ಕೊಳ್ಳುತ್ತಾರೆ. ಸಾಕಷ್ಟು ಆದಾಯದ ಮೂಲಗಳಿಲ್ಲದಿದ್ದರೆ ಅವನ್ನು ಪಡೆಯಲು ಹೋಗಿ ನಿರಾಶರಾಗುತ್ತಾರೆ. ನಮ್ಮಲ್ಲಿಯೂ ಇದೇ ತರಹ ರಾಜ್ಯಾಡಳಿತ ಇದ್ದಿದ್ದರೆ ನಿಮ್ಮನ್ನು ಕೇಳುತ್ತೇನೆ, ರಾಜಕುಮಾರರು, ಮಠಾಧಿಪತಿಗಳು, ಕುಲೀನ ಜನಗಳು, ಸುಖವಾಗಿ ಬಾಳುವ ಪ್ರಜೆಗಳು, ಚೆನ್ನಾಗಿ ಸಂಪಾದಿಸುವ ವರ್ತಕರುಗಳು, ಕುಶಲ ಕೈಗಾರಿಕೆಗಳಲ್ಲಿ ತೊಡಗಿದ ಜನಗಳು ಹಾಗೂ ವಸ್ತುಗಳ ತಯಾರಿಕೆಯಲ್ಲಿ ನಿರತರಾದವರು—ಇಂಥವರು ಎಲ್ಲಿರುತ್ತಿದ್ದರು ಎಂದು; ಪ್ಯಾರಿಸ್, ಲ್ಯೋಸ್, ತೂಲೂಜ್, ರೂನ್, ಬೇಕೆಂದರೆ ಲಂಡನ್ ಮತ್ತಿತರ ನಗರಗಳನ್ನು ಕಾಣುವುದಕ್ಕಾಗುತ್ತಿತ್ತೆ, ಎಂದು. ಆ ಅಸಂಖ್ಯಾತ ಪಟ್ಟಣಗಳನ್ನೂ ಹಳ್ಳಿಗಳನ್ನೂ ಎಲ್ಲಿ ನೋಡುವುದು. ಆ ಸುಂದರವಾದ ಹಳ್ಳಿಯಮನೆಗಳನ್ನೂ ಶ್ರಮವಹಿಸಿ ಮನಸಿಟ್ಟು ಬೇಸಾಯಮಾಡಿದ ಅಚ್ಚಹಸುರಿನ ಪೈರುಗಳಿಂದ

ಕಂಗೊಳಿಸುವ ಹೊಲಗದ್ದೆಗಳನ್ನೂ ಮನೋಹರವಾದ ಕಣಿವೆಗಳನ್ನೂ ಹಾಗೂ ಬೆಟ್ಟ ಗುಡ್ಡಗಳನ್ನೂ ಎಲ್ಲಿ ನೋಡುವುದು ! ಅಷ್ಟೊಂದು ಕೈಗಾರಿಕೆಗಳಿಂದ ಬರುವ ಅಪಾರ ಆದಾಯದ ಗತಿಯೇನಾಗಬೇಕು ! ಪ್ರಜೆಗಳಿಗೂ ಸಾರ್ವಭೌಮನಿಗೂ ಸುಖವುಂಟು ಮಾಡುತ್ತಿರುವ ಆದಾಯ ಏನಾಗಬೇಕು ! ಈ ಸೊಗಸಿನ ಚಿತ್ರ ತಲೆಕೆಳಕಾಗಿಬಿಡುವು ದೆಂದು ನಾನು ಹೇಳಬೇಕಾಗಿಲ್ಲ. ಆ ಹೊಲಸು ವಾತಾವರಣದ ಕಾರಣವಾಗಿ ನಮ್ಮ ಪಟ್ಟಣಗಳು ವಾಸಕ್ಕೆ ಅಯೋಗ್ಯವಾಗುವುವು. ಊರುಗಳು ಪಾಳುಬಿದ್ದು ಯಾರಿಗೂ ಬೇಡವಾದ ಸ್ಥಳಗಳಾಗುವುವು. ಫಲವತ್ತಾದ ಗುಡ್ಡಗಾಡುಗಳ ಕಡೆ ಯಾರೂ ಗಮನ ಕೊಡುವುದಿಲ್ಲ. ಹೊಲಗದ್ದೆಗಳಲ್ಲಿ ಮುಳ್ಳುಗಿಡಗಳು ಬೆಳೆದುಕೊಳ್ಳುವುವು. ಪ್ರವಾಸಿಗರಿಗೆ ಇರುವ ಅತ್ಯುತ್ತಮವಾದ ವಸತಿ ಸೌಕರ್ಯಗಳು ಕಣ್ಮರೆಯಾಗುವುವು. ಉದಾಹರಣೆಗೆ, ಪ್ಯಾರಿಸಿಗೂ ಲ್ಯೋಸ್ ನಗರಕ್ಕೂ ಮಧ್ಯೆ ಇರುವ ಒಳ್ಳೆಯ ಸತ್ರಗಳು ಹತ್ತು ಹನ್ನೆರಡು ಕಾರವಾನ್ ಸರಾಯಿಗಳಾಗಿಬಿಡುವುವು. ಹಾಗಾದರೆ, ಪ್ರಯಾಣಿಕರು ಜಿಪ್ಸಿಗಳಂತೆ ಎಲ್ಲವನ್ನೂ ತಮ್ಮ ಬೆನ್ನ ಮೇಲೆ ಸಾಗಿಸಬೇಕಾಗಿಬರುವುದು. ಪೂರ್ವ ದೇಶಗಳಲ್ಲಿರುವ ಕಾರವಾನ್‌ಸರಾಯ್‌ಗಳು, ಅಂದರೆ ತಂಗುದಾಣಗಳು, ದೊಡ್ಡ ಕೊಟ್ಟಿಗೆಗಳಂತೆ (barns) ಇರುತ್ತವೆ. ನೂರಾರು ಜನರು ದನ, ಕುದುರೆ, ಕತ್ತೆ ಮೊದಲಾದ ಹೇರು ಪ್ರಾಣಿಗಳೊಂದಿಗೆ ಅಲ್ಲಿ ತಂಗಬೇಕು. ಬೇಸಗೆಯಲ್ಲಿ ಆ ಸರಾಯ್‌ಗಳಲ್ಲಿ ಸೆಕೆ ಅಂದರೆ ಸೆಕೆ ; ಉಸಿರುಕಟ್ಟಿದಂತಾಗಿಬಿಡುತ್ತದೆ. ಚಳಿಗಾಲದಲ್ಲಾದರೋ ಪ್ರಾಣಿಗಳ ಬೆಚ್ಚನೆಯ ಉಸಿರಿಲ್ಲದಿದ್ದರೆ ಚಳಿಯಿಂದ ಸಾಯಬೇಕು.

ತುರ್ಕಿಯಂಥ ವಿಶಾಲವೂ ಫಲಭರಿತವೂ ಆದ ದೇಶ ಶ್ರೀಮಂತವೂ ಶಕ್ತಿ ಯುತವೂ ಆಗಿರಬೇಕಲ್ಲವೆ ! ಆದರೆ ಅದರ ಶ್ರೀಮಂತಿಕೆ ಹಾಗೂ ಶಕ್ತಿ ಎಷ್ಟು ಗೌಣ ಎಂಬುದನ್ನು ನೋಡಬಹುದು. ನಾನು ತುರ್ಕಿಯಲ್ಲೆಲ್ಲಾ ಅಡ್ಡಾಡಿ ನೋಡಿದ್ದೇನೆ. ಅದು ಹಾಳಾಗುತ್ತಿರುವುದನ್ನು ನೋಡಿದರೆ ಮನಸ್ಸಿಗೆ ಬಹಳ ವೇದನೆಯಾಗುತ್ತದೆ. ಇದೇ ರೀತಿಯ ಆಡಳಿತ ವ್ಯವಸ್ಥೆ ಮತ್ತಷ್ಟು ಕಾಲ ಮುಂದುವರಿದರೆ ಆ ದೇಶ ತನ್ನ ದುರ್ಬಲತೆಯಿಂದಲೇ ನಾಶವಾಗುವುದು.

ಹಾಗಿದ್ದರೆ, ಪೂರ್ವ ರಾಷ್ಟ್ರಗಳಲ್ಲಿ ಆದೇಕೆ ಒಳ್ಳೆಯ ಕಾನೂನುಕಟ್ಟಲೆಗಳಿರ ಬಾರದು, ಜನಗಳು ಚಕ್ರವರ್ತಿಗೆ ಏಕೆ ದೂರುಹೇಳಿಕೊಳ್ಳಬಾರದು—ಎಂದು ನೀವು ಕೇಳ ಬಹುದು ; ಅಥವಾ ದೊರೆಯ ತನಕ ದೂರುಹೇಳಿಕೊಳ್ಳುವುದರಲ್ಲಿ ತಪ್ಪೇನು ಎಂದು— ಪ್ರಶ್ನಿಸಬಹುದು. ಏಷ್ಯಾ ದೇಶಗಳಲ್ಲಿ ಒಳ್ಳೆಯ ಕಾನೂನುಕಟ್ಟಲೆಗಳಿಲ್ಲವೆಂದು ನಾನು ಹೇಳಬಯಸುವುದಿಲ್ಲ. ಇರುವವುಗಳನ್ನು ಸರಿಯಾಗಿ ಚಲಾಯಿಸಿದರೆ ಏಷ್ಯಾ ಖಂಡವು ಪ್ರಪಂಚದ ಇತರ ಪ್ರದೇಶಗಳಂತೆ ಯೋಗ್ಯವಾದ ಸ್ಥಳವಾಗುವುದರಲ್ಲಿ ಸಂದೇಹ ವಿಲ್ಲ. ಆದರೆ ಆಚರಿಸಲಾಗದ ಒಳ್ಳೆಯ ಕಾನೂನುಗಳಿದ್ದರೆ ಏನು ಪ್ರಯೋಜನ ? ಅವನ್ನು ಆಚರಿಸುವಂತೆ ಮಾಡದಿದ್ದರೆ ಏನು ಪ್ರಯೋಜನ ? ಪ್ರಜೆಗಳ ಕಷ್ಟಗಳನು

ಪರಿಹಾರಮಾಡಬಲ್ಲ ಅಧಿಕಾರವಿರುವ ರಾಜರುಗಳು ಮತ್ತು ಮಹಾ ವಜೀರರುಗಳಲ್ಲವೆ ಪ್ರಾಂತಗಳಿಗೆ ಅಧಿಪತಿಗಳನ್ನು ನೇಮಿಸುವವರು ? ದಬ್ಬಾಳಿಕೆ ನಡೆಸುವವರನ್ನು ಬಿಟ್ಟರೆ ಬೇರೊಬ್ಬರನ್ನ ಪ್ರಾಂತಗಳ ಅಧಿಪತಿಗಳನ್ನಾಗಿ ನೇಮಿಸುವುದಕ್ಕೆ ಅವರಿಗೆ ಸಾಧ್ಯವಿಲ್ಲ ಎಂಬ ವಿಷಯ ಸತ್ಯವಲ್ಲವೆ ? ರಾಜನೋ ಅಥವಾ ವಜೀರನೋ ಪ್ರಾಂತ ವನ್ನು ಅಲ್ಲಿಯ ಅಧಿಪತಿಗೆ ಮಾರುವುದು ಸುಳ್ಳೆ ? ಒಂದು ಪಕ್ಷ ರಾಜನೋ ಅಥವಾ ವಜೀರನೋ ಪ್ರಜೆಗಳ ದೂರುಗಳನ್ನು ಕೇಳಲು ಸಿದ್ಧನಿದ್ದಾನೆಂದು ಇಟ್ಟುಕೊಳ್ಳೋಣ. ಯಾವ ರೈತನಿಗೆ ದಾಸತ್ತಿದೆ, ನೂರಿನ್ನೂರು ಹರಿದಾರಿಗಳ ದೂರದಲ್ಲಿರುವ ರಾಜಧಾನಿಗೆ ಹೋಗಿ ತನ್ನ ಕಷ್ಟ ಹೇಳಿಕೊಳ್ಳುವುದಕ್ಕೆ ? ಆತ ದಾರಿಯಲ್ಲಿ ಕಳ್ಳಕಾಕರ ಕೈಗೆ ಸಿಕ್ಕಿ ಪ್ರಾಣ ಕಳೆದುಕೊಳ್ಳಬೇಕು, ಇಲ್ಲ ಅಧಿಕಾರಿಗಳ ಕೈಗೆ ಸಿಕ್ಕಿ ಮತ್ತೆ ಸುಲಿಗೆಗೆ ಬಲಿಯಾಗ ಬೇಕು. ಇವೆಲ್ಲಾ ತಾಪತ್ರಯಗಳಿಂದ ಪಾರಾಗಿ ಆತ ರಾಜನ ಅರಮನೆಯನ್ನು ಮುಟ್ಟಿದ ಅನ್ನಿ. ಅಲ್ಲಿ ಸತ್ಯವನ್ನು ಸುಳ್ಳೆಂದು ಹೇಳುವ ಮತ್ತು ಬೆಳ್ಳಗಿರುವುದನ್ನು ಕಪ್ಪಗೆಮಾಡಿ ರಾಜನ ಮುಂದಿಡುವ ಪ್ರಾಂತಾಧಿಕಾರಿಯ ಕಡೆಯ ಪುಡಾರಿ ಜನ ಇದ್ದೇ ಇರುತ್ತಾರೆ. 'ಸರ್ವಾಧಿಕಾರಿ' ಎಂಬ ಪದದ ಸಂಪೂರ್ಣ ಅರ್ಥದಲ್ಲಿ ಸುಬೇದಾರ ನಿಜವಾಗಿಯೂ ಸರ್ವಾಧಿಕಾರಿ. ಅವನೇ ನ್ಯಾಯಾನ್ಯಾಯ ವಿಮರ್ಶಕ. ಅವನೇ ಪಾರ್ಲಿಯಮೆಂಟ್. ಅವನೇ ಮುಖ್ಯ ನ್ಯಾಯಾಧೀಶ. ಅವನೇ ರಾಜನಿಗೆ ಸಲ್ಲಬೇಕಾದ ಕಂದಾಯಕವಳಿಗೆ ಗಳನ್ನು ನಿರ್ಧರಿಸುವವ ಮತ್ತು ಅವುಗಳನ್ನು ವಸೂಲುಮಾಡುವವ. ಈ ದುರಾಸೆಯ ಸುಬೇದಾರರನ್ನೂ ಭೂಮಿಯನ್ನು ಗುತ್ತಿಗೆಗೆ ಪಡೆದಿರುವವರನ್ನೂ ಒಬ್ಬ ಪಾರಸಿ ದೇಶಿಗ "ಇವರು ಮರಳಿನಲ್ಲಿ ಎಣ್ಣೆ ತೆಗೆಯುವವರು" ಎಂದು ವರ್ಣಿಸಿದ್ದಾನೆ ! ಇವರ ಹಿಂಡು ಗಟ್ಟಲೆ ಹಿಮ್ಮೇಳಕರನ್ನೂ ಹೆಂಡತಿ ಮಕ್ಕಳನ್ನೂ ಗುಲಾಮರನ್ನೂ ಹಾಗೂ ಪರಿಚಾರಕರ ತಂಡವನ್ನೂ ಸಾಕುವುದಕ್ಕೆ ಎಷ್ಟು ಆದಾಯ ಬಂದರೆ ತಾನೆ ಸಾಕಾದೀತು !

ನಮ್ಮ ರಾಜರುಗಳಿಗೆ ಸೇರಿದ ಸ್ವಂತ ಭೂಮಿಯ ಸಾಗುವಳಿ ಚೆನ್ನಾಗಿ ಆಗುತ್ತಿದೆ ಯಲ್ಲ, ಮತ್ತು ಅಲ್ಲಿ ಬೇರೆ ಕಡೆಗಳಂತೆ ಜನವಸತಿ ಇರುವುದಲ್ಲ—ಎಂದು ನೀವು ಪ್ರಶ್ನಿಸುವುದಾದರೆ, ಕೇವಲ ಒಂದಷ್ಟು ಭೂಪ್ರದೇಶದ ಮೇಲೆ ಒಡೆತನವಿರುವ ರಾಜನಿಗೂ ಇಡೀ ರಾಜ್ಯದ ಭೂಮಿಗೆಲ್ಲಾ ಒಡೆಯನಾಗಿರುವ ರಾಜನಿಗೂ ತುಂಬಾ ವ್ಯತ್ಯಾಸವಿದೆ ಎಂಬುದೇ ನನ್ನ ಉತ್ತರ. ಫ್ರಾನ್ಸಿನಲ್ಲಿ ಕಾನೂನುಕಟ್ಟಲೆಗಳು ರೀತಿನೀತಿಯಿಂದ ಕೂಡಿ ರಲು ಕಾರಣವೇನೆಂದರೆ, ಅವುಗಳನ್ನು ಮೊದಲು ಪರಿಪಾಲಿಸುವವನು ರಾಜ. ಆತನಿಗೆ ಸೇರಿದ ಭೂಮಿ ಯಾವ ಹಕ್ಕುಬಾಧ್ಯತೆಗಳಿಗೂ ಒಳಪಟ್ಟಿಲ್ಲ. ಅವನು ತನ್ನ ಗೇಣಿದಾರರ ಮೇಲೆ ದಾವಾಹಾಕಬಹುದು. ಕಷ್ಟಕ್ಕೊಳಗಾದ ಅಥವಾ ಅನ್ಯಾಯಕ್ಕೊಳಗಾದ ರೈತನೊ ಕೆಲಸಗಾರನೊ ನಿಜವಾಗಿಯೂ ನ್ಯಾಯ ಪಡೆಯಬಹುದು. ಆದರೆ ಪ್ರಾಚ್ಯ ದೇಶಗಳಲ್ಲಿ ಬಡಬಗ್ಗರನ್ನು ಕೇಳುವವರೇ ಇಲ್ಲ. ಎಲ್ಲ ವಾದವಿವಾದಗಳನ್ನು ತೀರ್ಮಾನ

ಮಾಡುವ ಒಂದೇ ಒಂದು ಕಾನೂನೆಂದರೆ, ಬಾಸುಂಡೆ ಬರಿಸುವ ಬೆತ್ತ ಮತ್ತು ಸುಬೇದಾರನ ಚಿತ್ತ !

ನಿರಂಕುಶ ಪ್ರಭುತ್ವದಲ್ಲಿಯೂ ಸರ್ವಾಧಿಕಾರದಲ್ಲಿಯೂ ವಿಶಿಷ್ಟವಾದ ಕೆಲವು ಅನುಕೂಲಗಳಿವೆಯೆಂದು ಕೆಲವರು ಹೇಳಬಹುದು. ಅಂಥ ಆಡಳಿತ ಪದ್ಧತಿಯಲ್ಲಿ ಲಾಯರುಗಳು ಕಡಿಮೆ; ದಾವಾ ಮೊಕದ್ದಮೆಗಳೂ ಕಡಿಮೆ. ಇರುವಷ್ಟು ಕಡಿಮೆ ದಾವೆಗಳು ಕ್ಷಿಪ್ರವಾಗಿ ತೀರ್ಮಾನವಾಗುತ್ತವೆ. ಪರ್ಷಿಯಾದಲ್ಲಿ, "ನಿಧಾನವಾಗಿ ದೊರೆಯುವ ನ್ಯಾಯಕ್ಕಿಂತ ಆತುರದ ತೀರ್ಮಾನ ಲೇಸು" ಎಂಬ ಗಾದೆ ಇದೆ. ಸುಮ್ಮನೆ ಎಳೆದಾಡಲ್ಪಡುವ ದಾವಾ ಮೊಕದ್ದಮೆಗಳು, ಯಾವ ದೇಶದಲ್ಲಿಯಾಗಲಿ ಸರಿ ಎನ್ನಲಾರದ ಕೇಡುಗಳು ಎಂದು ನಾನು ಒಪ್ಪಿಕೊಳ್ಳುತ್ತೇನೆ. ಅಂಥ ಕೇಡುಗಳ ನಿವಾರಣೆಗೆ ಸೂಕ್ತ ವ್ಯವಸ್ಥೆ ಮಾಡುವುದು ಪ್ರಭುವಿನ ಕರ್ತವ್ಯ. ಖಾಸಗಿ ಆಸ್ತಿಯ ಹಕ್ಕಿನ ನಿರ್ನಾಮದಂತಹ ಫಲಪ್ರದವಾದ ನಿವಾರಣೆ ಬೇರೊಂದು ಇರಲಾರದು, ನಿಜ. ಯಾರಿಗೂ ಸ್ಥಿರ ಆಸ್ತಿಯ ಮೇಲೆ ಹಕ್ಕಿಲ್ಲ ಎಂದುಬಿಟ್ಟರೆ ಕೋರ್ಟು ಕಚೇರಿಗಳ ಮೆಟ್ಟಲು ಹತ್ತಲೇ ಬೇಕಾಗಿಲ್ಲ. ಅನೇಕ ಜನ ನ್ಯಾಯಾಧಿಕಾರಿಗಳೂ ಬೇಕಾಗಿಲ್ಲ. ಅಂತೆಯೇ ಹಿಂಡುಗಟ್ಟಲೆ ವಕೀಲರುಗಳೂ ಲಾಯರುಗಳೂ ಬೇಕಾಗಿಲ್ಲ. ಆದರೆ ಕಾಯಿಲೆಗಿಂತ ಕಷಾಯ ಹೆಚ್ಚು ಅಪಾಯಕಾರಿಯಾಗಬಾರದಷ್ಟೆ ! ಹಾಗೇನಾದರೂ ಆದರೆ ದೇಶದಲ್ಲಿ ತಲೆದೋರಬಹುದಾದ ದುಃಖ ದುಮ್ಮಾನಗಳನ್ನು ಊಹಿಸುವುದು ಕಷ್ಟ. ಆಗ ರಾಜನು ನ್ಯಾಯನಿಷ್ಠೆಯುಳ್ಳ ನ್ಯಾಯಾಧಿಕಾರಿಗಳನ್ನು ನಂಬಿಕೊಳ್ಳುವ ಬದಲು, ನಾನು ಮೇಲೆ ವರ್ಣಿಸಿದಂತಹ ಆಡಳಿತಗಾರರ ದಯಾದಾಕ್ಷಿಣ್ಯಗಳನ್ನು ನಂಬಿಕೊಳ್ಳಬೇಕಾಗುತ್ತದೆ. ಏಷ್ಯಾದಲ್ಲಿ ನ್ಯಾಯ ತೀರ್ಮಾನ ಸರಿಯಾಗಿ ಆಗುತ್ತಿದ್ದರೆ ಅದು ಕೆಳಮಟ್ಟದ ಜನರಲ್ಲಿ, ನ್ಯಾಯಾಧಿಕಾರಿಗಳಿಗೆ ಲಂಚ ಕೊಡಲು ದುಡ್ಡಿಲ್ಲದ ಬಡವರಲ್ಲಿ ಮತ್ತು ಸುಳ್ಳು ಸಾಕ್ಷಿಗಳನ್ನು ಕೊಂಡುಕೊಳ್ಳಲು ಹಣವಿಲ್ಲದ ನಿರ್ಗತಿಕರಲ್ಲಿ. ಸುಳ್ಳು ಸಾಕ್ಷಿ ಹೇಳುವುದಕ್ಕೆ ನಾಮುಂದು ತಾಮುಂದು ಎಂದು ಬರುವ ಅಸಂಖ್ಯಾತ ಜನ ಕಾಸಿಗೊಬ್ಬರು ಕೊಸರಿಗೊಬ್ಬರು ಸಿಕ್ಕುತ್ತಾರೆ. ಆದರೆ ಅವರನ್ನು ಶಿಕ್ಷಿಸುವವರು ಯಾರೂ ಇಲ್ಲವಲ್ಲ ! ಹಲವಾರು ವರ್ಷಗಳ ಅನುಭವದಿಂದ ನಾನೀ ಮಾತುಗಳನ್ನು ಹೇಳುತ್ತಿದ್ದೇನೆ. ಹಲವಾರು ಮೂಲಗಳಿಂದ ವಿಷಯಗಳನ್ನು ಸಂಗ್ರಹಿಸಿ, ನೂರಾರು ಜನರಿಂದ ಕೇಳಿ, ಈ ದೇಶದಲ್ಲಿ ನೆಲೆಸಿರುವ ಯೂರೋಪಿನ ವರ್ತಕರಿಂದ ತಿಳಿದು, ರಾಯಭಾರಿಗಳು ಮತ್ತು ದುಭಾಷಿಗಳು ಮುಂತಾದವರನ್ನು ಕಂಡು ನಾನು ಈ ಅಭಿಪ್ರಾಯಕ್ಕೆ ಬಂದಿದ್ದೇನೆ. ನಮ್ಮ ಅನೇಕ ಮಂದಿ ಪ್ರವಾಸಿಗರು ಹೇಳಿರುವುದಕ್ಕಿಂತ ನಾನು ಹೇಳಿರುವುದು ಭಿನ್ನವಾಗಿದೆಯೆಂಬುದು ನನಗೆ ಗೊತ್ತಿದೆ. ಅವರು ಬಹುಶಃ ಊರುಗಳ ಮೂಲಕ ಹಾದುಹೋಗುವಾಗ ಒಬ್ಬಿಬ್ಬರು ಬಡಬಗ್ಗರನ್ನು ಖಾಜಿಯ ಮುಂದೆ ಕಂಡಿರಬೇಕು. ಖಾಜಿಯ ತೀರ್ಮಾನದಂತೆ ಆ ತಪ್ಪಿತಸ್ಥರಿಗೆ ಒಂದೆರಡು ಏಟು ಹೊಡೆಯುವುದನ್ನು ನೋಡಿರಬೇಕು. ಇದನ್ನು

ಕಂಡು ನಮ್ಮ ಪ್ರವಾಸಿಗರು ಇಲ್ಲಿಯ ನ್ಯಾಯವಿತರಣೆಯನ್ನು ಹೊಗಳಿರಬೇಕು ; ಆ ಖಾಜಿಗಳು ನಮ್ಮ ಫ್ರಾನ್ಸಿನ ಮ್ಯಾಜಿಸ್ಟ್ರೇಟರುಗಳ ಮಾದರಿ ಎಂದು ಮೆಚ್ಚಿಕೊಂಡಿರಬೇಕು. ಆದರೆ ಅವರಿಗೆ ಗೊತ್ತಿಲ್ಲ, ತಪ್ಪುಮಾಡಿದ ಅಪರಾಧಿಯ ಕೈಯಲ್ಲಿ ಖಾಜಿಗೋ ಅಥವಾ ಅವನ ಕಾರಕೂನರುಗಳಿಗೋ ಕೊಡಲು ಒಂದೆರಡು ರೂಪಾಯಿಗಳು ಇದ್ದರೆ ಅವರ ನ್ಯಾಯ ನಿಷ್ಠೆ ಹೇಗಿರುತ್ತಿತ್ತು ಎಂಬುದು. ಅವರ ಕೈಬೆಚ್ಚಗೆಮಾಡಿದರೆ ಮತ್ತು ದುಡ್ಡು ಕೊಟ್ಟು ಸುಳ್ಳುಸಾಕ್ಷಿ ಹೇಳಿಸಿದರೆ ಅಪರಾಧಿಯು ತನಗೆ ಬೇಕಾದಂತೆ ತೀರ್ಪು ಪಡೆಯಬಹುದು, ಅಥವಾ ತನಗಿಷ್ಟಬಂದಷ್ಟು ದಿವಸ ಮೊಕದ್ದಮೆಯ ವಿಚಾರಣೆಯನ್ನು ಮುಂದಕ್ಕೆ ಹಾಕಿಸಿಕೊಳ್ಳಬಹುದು.

ನನ್ನೊಡೆಯ, ನಾನೀ ಪತ್ರವನ್ನು ಮುಗಿಸುವ ಮುನ್ನ ಮತ್ತೊಮ್ಮೆ ನನ್ನ ಅಭಿಪ್ರಾಯಗಳ ಸಾರಾಂಶ ಹೇಳಿಬಿಡುತ್ತೇನೆ. 'ಭೂಮಿಯ ಮೇಲೆ ಯಾರಿಗೂ ಹಕ್ಕಿಲ್ಲ' ಎಂದು ಹೇಳಿಬಿಡಲಿ, ಆಗ ಹಿಂಸೆ, ಗುಲಾಮತನ, ಅನ್ಯಾಯ, ತಿರುಪೆ ಮತ್ತು ಅನಾಗರಿಕತನ ಆರಂಭವಾಗುವುವು. ಯಾರೂ ಆಗ ಭೂಮಿಯನ್ನು ಉಳುವ ಗೋಜಿಗೆ ಹೋಗುವುದಿಲ್ಲ ತಿಳಿಯಿರಿ. ಅದು ಪಾಳುಬಿದ್ದು ಕಾಡಾಗಿಬಿಡುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ರಾಜರುಗಳ ಅವನತಿಗೂ ರಾಷ್ಟ್ರಗಳ ನಾಶಕ್ಕೂ ದಾರಿಮಾಡಿಕೊಟ್ಟಂತೆ. ತನ್ನ ದುಡಿಮೆಗೆ ತಕ್ಕ ಪ್ರತಿಫಲ ಇದೆ ಎಂಬ ಭಾವನೆ, ಆ ದುಡಿಮೆಯನ್ನು ತಾನಿಟ್ಟುಕೊಳ್ಳುವೆನೆಂಬ ಭರವಸೆ, ಅದನ್ನು ತನ್ನ ಮುಂದಿನ ಸಂತತಿಗೆ ಬಿಟ್ಟುಹೋಗಬೇಕೆಂಬ ಬಯಕೆ—ಇವೇ ಅಲ್ಲವೆ ಈ ಪ್ರಪಂಚದಲ್ಲಿ ಅತ್ಯುತ್ತಮವಾದ ಹಾಗೂ ಉಪಯುಕ್ತವಾದ ಪ್ರತಿಯೊಂದಕ್ಕೂ ಭದ್ರ ಬುನಾದಿ ? ಪ್ರಪಂಚದ ನಾನಾ ರಾಷ್ಟ್ರಗಳನ್ನು ಪರಿಗಣಿಸಿದರೆ ಅವುಗಳ ಉಳಿವು ಅಳಿವು ಈ ಮೂಲತತ್ತ್ವದ ಪುರಸ್ಕಾರ ಹಾಗೂ ತಿರಸ್ಕಾರಗಳನ್ನು ಅವಲಂಬಿಸಿರುವುದನ್ನು ಕಾಣಬಹುದು. ಒಂದೇ ಮಾತಿನಲ್ಲಿ ಹೇಳುವುದಾದರೆ, ಈ ತತ್ತ್ವದ ಪುರಸ್ಕಾರ ಅಥವಾ ತಿರಸ್ಕಾರಗಳೇ ಈ ಪ್ರಪಂಚದ ಮುಖವನ್ನು ಬದಲಿಸುತ್ತವೆ ಮತ್ತು ವೈವಿಧ್ಯಗೊಳಿಸುತ್ತವೆ.

* * * * *

ದೆಹಲಿಯಿಂದ ೧೬೬೩ ರ ಜುಲೈ ೧ ರಂದು ಮೆಸ್ಯು ಡ್ಯೆ ಲ ಮೊತೆ ಲೆ ವಯೇರ್ (*Monsieur De la Mothe le Voyer*) ಎಂಬಾತನಿಗೆ[1] ಬರೆದ ಪತ್ರ :

---

[1]ಈತ ೧೫೮೮ರಲ್ಲಿ ಹುಟ್ಟಿ ೧೬೭೨ರಲ್ಲಿ ಕಾಲವಾದ ಒಬ್ಬ ಫ್ರೆಂಚ್ ಲೇಖಕ. ಇವನು ಬರೆದಿರುವುದು ಬಹಳಷ್ಟು ಇದೆಯೆಂದೂ, ಬಹು ಶಕ್ತಿಯುತವಾಗಿ ಬರೆಯುತ್ತಿದ್ದನೆಂದೂ ಗೊತ್ತಾಗುತ್ತದೆ. ಇವನು ಬರೆಯುತ್ತಿದ್ದ ವಿಷಯಗಳು ಜನಾಂಗ, ಭೂಗೋಳ ಮತ್ತು ಐತಿಹಾಸಿಕ ವಿಷಯಗಳಿಗೆ ಸಂಬಂಧಪಟ್ಟದ್ದುವು. ಈ ವಿಷಯಗಳ ಬಗ್ಗೆ ಮೊದಲು ಮೊದಲು ಬರೆಯುತ್ತಿದ್ದ ಆತ ಕೊನೆಗೆ ಬರೆಯುವುದನ್ನು ನಿಲ್ಲಿಸಿ ವಕೀಲಿ ವೃತ್ತಿ ಅನುಸರಿಸಿದನಂತೆ. ಆತನಿಗೂ ಬೆರ್ನ್ಯೇಗೂ ಬಹಳ ಗೆಳೆತನ. ಆತ ಸಾಯುವ ಕಾಲ ಸಮೀಪಿಸಿದಾಗ ಹತ್ತಿರ ಬಂದ ಬೆರ್ನ್ಯೇಯನ್ನು ಕುರಿತು ಕೇಳಿದನಂತೆ, "ಮೊಗಲನ ಬಗ್ಗೆ ಏನು ಸುದ್ದಿ ತಂದಿದ್ದೀ ?" ಎಂದು.

ಅಯ್ಯ, ನಾನು ಫ್ರಾನ್ಸಿಗೆ ಹಿಂದಿರುಗಿದ ಕೂಡಲೇ ಭೂಗೋಳವಿಜ್ಞಾನಿಗಳಾದ ನೀವು ಮೊದಲು ಕೇಳುವ ಪ್ರಶ್ನೆ, ಈ ಚಕ್ರಾಧಿಪತ್ಯದ ಮುಖ್ಯ ನಗರಗಳ ವಿಚಾರವಾಗಿ ಎಂಬುದು ನನಗೆ ಗೊತ್ತು. ದಿಲ್ಲಿ ಮತ್ತು ಆಗ್ರಾಗಳು ಪ್ಯಾರಿಸನ್ನು ಅಂದಚೆಂದದಲ್ಲಿ, ವಿಸ್ತೀರ್ಣದಲ್ಲಿ ಹಾಗೂ ಜನಸಂಖ್ಯೆಯಲ್ಲಿ ಮೀರಿಸುವುವೇ ಎಂದು ನೀವು ಕೇಳಲು ಕಾತುರರಾಗಿರುವಿರೆಂಬುದನ್ನು ನಾನು ಬಲ್ಲೆ. ಈಗ ನಾನು ಆ ವಿಷಯಗಳ ಬಗ್ಗೆ ಹೇಳಿ ನಿಮ್ಮ ಕುತೂಹಲವನ್ನು ಶಮನಮಾಡಬೇಕೆಂದಿದ್ದೇನೆ. ಹಾಗೆ ಹೇಳುವಾಗ ಬೇರೆ ಕೆಲವು ವಿಷಯಗಳನ್ನೂ ಹೇಳಬೇಕಾದ್ದು ಅನಿವಾರ್ಯ.

ಈ ಪಟ್ಟಣಗಳ ಅಂದಚೆಂದದ ವಿಚಾರ ಮಾತನಾಡುವಾಗ, ಇಂಡೀಸಿನಲ್ಲಿ ನೆಲೆಸಿರುವ ವಿದೇಶಿ ವರ್ತಕರು ಅವುಗಳ ಬಗ್ಗೆ ಬಹಳ ನಿಕೃಷ್ಟವಾಗಿ ನುಡಿಯುವುದನ್ನು ಕೇಳಿ ನಾನು ಕೆಲವು ವೇಳೆ ಅಚ್ಚರಿಗೊಂಡಿದ್ದೇನೆ. ಪಾಶ್ಚಾತ್ಯ ಪ್ರಪಂಚದಲ್ಲಿರುವ ಕಟ್ಟಡಗಳಿಗಿಂತ ಇಲ್ಲಿರುವ ಕಟ್ಟಡಗಳು ಅಂದಚೆಂದದಲ್ಲಿ ಬಹಳ ಕಡಿಮೆ ಎಂದು ಹೇಳುತ್ತಾರೆ ಅವರು. ಆದರೆ, ಒಂದು ವಿಚಾರ ಮರೆತುಬಿಡುತ್ತಾರೆ. ಅದೇನೆಂದರೆ, ಆಯಾ ದೇಶದ ಹವಾಮಾನಗಳಿಗೆ ತಕ್ಕಂತಹ ಬೇರೆ ಬೇರೆ ರೀತಿಯ ಕಟ್ಟಡಗಳನ್ನು ಕಟ್ಟಬೇಕಾಗುತ್ತದೆ ಎಂಬುದನ್ನು. ಪ್ಯಾರಿಸ್, ಲಂಡನ್, ಅಥವಾ ಆಮ್‌ಸ್ಟರ್‌ಡಾಂಗಳಿಗೆ ಸರಿಯಾದುದು ದಿಲ್ಲಿಗೆ ಏನೇನೂ ಸರಿಯಾಗುವುದಿಲ್ಲ. ಒಂದು ಪಕ್ಷ ಆ ಮಹಾನಗರಗಳನ್ನು ಇಂಡೀಸಿನ ಯಾವುದಾದರೂ ರಾಜಧಾನಿಗೆ ಅದಲು ಬದಲು ಮಾಡಿಕೊಳ್ಳುವುದು ಸಾಧ್ಯವಾದರೆ, ಆಗ ಆ ನಗರಗಳ ಬಹು ಭಾಗವನ್ನು ತೆಗೆದುಹಾಕಿ ಇಲ್ಲಿ ಹೊಸದಾಗಿಯೇ ಕಟ್ಟಬೇಕಾಗುತ್ತದೆ. ಯೂರೋಪಿನ ನಗರಗಳ ಅಂದಚೆಂದದ ಬಗ್ಗೆ ಜಂಭಕೊಚ್ಚಿಕೊಳ್ಳುವುದು ಸರಿಯಿರಬಹುದು. ಚಳಿಯ ಹವೆಗೆ ತಕ್ಕಂತಹ ರೀತಿಯಲ್ಲಿ ಕಟ್ಟಿದ ಊರುಗಳು ಅವು. ಅದರಿಂದಾಗಿ ಅವು ಅವುಗಳದೇ ಆದ ಅಂದಚೆಂದವನ್ನು ಹೇಳಿಕೊಳ್ಳಬಹುದು. ಹಾಗೆಯೇ ಬಿಸಿಲು ದೇಶಕ್ಕೆ ತಕ್ಕಂತಹ ಸೊಗಸನ್ನು ತಾನು ಹೊಂದಿರುವುದಾಗಿ ದಿಲ್ಲಿ ಹೇಳಿಕೊಳ್ಳಬಹುದು.

ಹಿಂದೂಸ್ಥಾನದಲ್ಲಿ ಎಷ್ಟೊಂದು ಸೆಕೆ ಎಂದರೆ, ಯಾರೂ, ರಾಜನು ಸಹ, ಕಾಲುಚೀಲ ಹಾಕಿಕೊಳ್ಳುವುದಿಲ್ಲ. ಪಾದಗಳಿಗೆ ರಕ್ಷೆ ಎಂದರೆ 'ಬಬೂಷೆ' (babouche : ಪಾಪೋಷ್=ಪಾದರಕ್ಷೆ )ಗಳು ; ತಲೆಗೆ ಬಹು ನವುರಾದ ಬಟ್ಟೆಯ ರುಮಾಲು ಅಷ್ಟೆ. ಉಳಿದ ಉಡುಪುಗಳು ಅದಷ್ಟು ಹಗುರ. ಬೇಸಿಗೆಯಲ್ಲಿ ಮನೆಯ ಗೋಡೆಯ ಮೇಲೆ ಕೈಯಿಡಲು ಆಗುವುದಿಲ್ಲ; ದಿಂಬಿನ ಮೇಲೆ ತಲೆಯಿಡಲು ಸಹ ಸಾಧ್ಯವಿಲ್ಲ—ಅಷ್ಟು ಬಿಸಿಲಿನ ತಾಪ ! ಆರು ತಿಂಗಳುಗಳಿಗಿಂತ ಹೆಚ್ಚು ಕಾಲ ಬಹು ಜನರು ಏನೂ ಹೊದ್ದುಕೊಳ್ಳದೆ ಬಯಲಿನಲ್ಲಿ ಮಲಗಿಕೊಳ್ಳುತ್ತಾರೆ. ಬಡಬಗ್ಗರು ಬೀದಿಗಳಲ್ಲಿ ಮಲಗಿಕೊಂಡರೆ, ವರ್ತಕರೂ ಅನುಕೂಲಸ್ಥರೂ ಅವರ ಮನೆಯ ಅಂಗಳದಲ್ಲಿಯೋ ಅಥವಾ ಮನೆಯ ಬಿಸಿಲು ಮಾಳಿಗೆಗಳ ಮೇಲೋ ಮಲಗಿಕೊಳ್ಳುತ್ತಾರೆ. ಆಗ ಅವರನ್ನು ಎಚ್ಚರಿಕೆಯಿಂದ

ಕಾವಲುಗಾರರು ನೋಡಿಕೊಳ್ಳುತ್ತಾರೆ. ಹೀಗಿರುವಾಗ, ಸ್ಟ್ಯಾ ಷಾಕ್ಸ್ (S. Jaques) ಅಥವಾ ಸ್ಟ್ಯಾ ಡನೀ (S. Danis) ಬೀದಿಗಳನ್ನು ಇಲ್ಲಿಗೆ ತಂದುಬಿಟ್ಟೆವೆಂದು ಇಟ್ಟು ಕೊಂಡರೆ, ಆ ಒತ್ತೊತ್ತಾದ ಮನೆಗಳಲ್ಲಿ ಹಾಗೂ ಲೆಕ್ಕವಿಲ್ಲದಷ್ಟು ಮಹಡಿಗಳಲ್ಲಿ ವಾಸ ಮಾಡುವುದು ಸಾಧ್ಯವೆ ? ಅಥವಾ, ರಾತ್ರಿ ಹೊತ್ತು ಅವುಗಳಲ್ಲಿ ಮಲಗಲು ಸಾಧ್ಯವೆ ? ಇಲ್ಲಿ ರಾತ್ರಿ ಹೊತ್ತು ಗಾಳಿ ಇಲ್ಲದೆ ಉಸಿರುಕಟ್ಟಿ ಒದ್ದಾಡಬೇಕಾಗುತ್ತದೆ. ನಮ್ಮಲ್ಲಿ ಒಬ್ಬ ಕುದುರೆಸವಾರ ಬಿಸಿಲು ಮತ್ತು ಧೂಳಿನಿಂದ ಸುಸ್ತಾಗಿ, ಬೆವರಿನಿಂದ ಒದ್ದೆಯಾಗಿ ಮನೆಗೆ ಬಂದ ಎಂದು ಇಟ್ಟುಕೊಳ್ಳಿ. ಅಂಥವನು ಕಿರಿದಾದ ಹಾಗೂ ಕತ್ತಲೆಯಾದ ಮೆಟ್ಟಿಲುಗಳನ್ನೇರಿ ತನ್ನ ನಾಲ್ಕನೆ ಮಹಡಿಗೊ ಐದನೆ ಮಹಡಿಗೊ ಹೋಗಿ, ಅಲ್ಲಿ ಸೆಕೆ ಯಲ್ಲಿ ಒದ್ದಾಡಬೇಕಾದಾಗ 'ಸುಖ'ವನ್ನು ಊಹಿಸಿಕೊಳ್ಳಿ. ಇಂಡೀಸಿನಲ್ಲಿ ಅಂಥ ಕೆಲಸದ ತಾಪತ್ರಯವೇ ಇಲ್ಲ. ಕುದುರೆಯಿಂದ ಇಳಿದು ಒಂದು ಲೋಟ ತಣ್ಣೀರನ್ನೊ ಅಥವಾ ಪಾನಕವನ್ನೊ ಕುಡಿದು, ಬಟ್ಟೆ ಬಿಚ್ಚಿಹಾಕಿ, ಕೈಕಾಲು ಮುಖ ತೊಳೆದುಕೊಂಡು, ನೆರಳಿರುವ ಕಡೆ ಹಾಸಿಗೆಯ ಮೇಲೆ ಬಿದ್ದುಕೊಂಡರೆ ತೀರಿತು. ಒಬ್ಬಿಬ್ಬರು ಸೇವಕರು ಬಂದು ದೊಡ್ಡ 'ಪನ್ಹಾ' (Panha= ಪಂಖಾ)ಗಳಲ್ಲಿ ಗಾಳಿ ಬೀಸುತ್ತಾರೆ.

ಈಗ ನಾನು ದಿಹ್ಲಿ ಹೇಗಿದೆ ಎಂಬುದರ ಬಗ್ಗೆ ವಾಸ್ತವಿಕ ಚಿತ್ರವನ್ನು ಕೊಡು ತ್ತೇನೆ. ಅದರಿಂದ ಅದು ಅಂದದ ನಗರ ಎಂಬ ಮೆಚ್ಚಿಗೆಯ ಮಾತಿಗೆ ಹೇಗೆ ಅರ್ಹ ಎಂಬುದು ಸ್ಪಷ್ಟವಾಗುವುದು.

ಈಗ ಮೊಗಲ್ ಚಕ್ರವರ್ತಿಯಾಗಿರುವ ಔರಂಗಜೇಬನ ತಂದೆ ಷಾಜಹಾನ ಪುರಾತನ ದಿಹ್ಲಿಯ ಬಳಿ ನಗರವೊಂದನ್ನು ನಿರ್ಮಿಸಿ ತನ್ನ ಹೆಸರನ್ನು ಶಾಶ್ವತಗೊಳಿಸ ಬೇಕೆಂದು ಇಲ್ಲಿಗೆ ಸುಮಾರು ನಲವತ್ತು ವರ್ಷಗಳ ಹಿಂದೆ ಮನಸ್ಸುಮಾಡಿದ. ಈ ಹೊಸ ನಗರವನ್ನು ತನ್ನ ಹೆಸರಿನಲ್ಲಿಯೇ ಕರೆದ. ಷಾಜಹಾನಾಬಾದ್ ಅಥವಾ ಜಹಾನಾಬಾದ್ ಎಂಬ ಹೆಸರು ಇದಕ್ಕೆ. ಇದರ ಅರ್ಥ 'ಷಾಜಹಾನನ ವಸಾಹತು' (colony) ಎಂದು. ಆಗ್ರಾದ ಬಿಸಿಲನ್ನು ತಡೆಯಲಸಾಧ್ಯವೆಂಬ ಕಾರಣದ ಮೇಲೆ ಆತ ತನ್ನ ಆಸ್ಥಾನವನ್ನು ಅಲ್ಲಿಂದ ಇಲ್ಲಿಗೆ ಬದಲಾಯಿಸಿದ. ಹಾಳಾದ ಹಳೆಯ ನಗರ ಬಹು ಸಮೀಪದಲ್ಲಿಯೇ ಇದ್ದ ಕಾರಣದಿಂದ ಹೊಸ ನಗರವನ್ನು ಕಟ್ಟುವುದು ಸುಲಭವಾಯಿತು. ಈಗ ಇಂಡೀಸಿ ನಲ್ಲಿ 'ದಿಹ್ಲಿ'ಯ ವಿಚಾರ ಮಾತಾಡುವುದೇ ಅಪರೂಪ. ಎಲ್ಲರ ಬಾಯಲ್ಲೂ 'ಜಹಾನಾ ಬಾದ್' ಎಂದೇ ಬರುತ್ತದೆ. ನನಗಿನ್ನೂ ಜಹಾನಾಬಾದ್ ಎಂಬ ಹೆಸರು ಅಷ್ಟು ಒಗ್ಗಿಲ್ಲವಾದ ಕಾರಣ, ನಾನು ಅದನ್ನು 'ದಿಹ್ಲಿ' ಎಂಬ ಹೆಸರಿನಿಂದಲೇ ಕರೆದು ಅದರ ವಿಚಾರ ಹೇಳುತ್ತೇನೆ.

ಈಗ ದಿಹ್ಲಿ ಪೂರ್ತ ಹೊಸ ನಗರ. ಅದನ್ನು ಸಮತಲ ಪ್ರದೇಶದಲ್ಲಿ ಜಮುನಾ ನದಿಯ ದಂಡೆಯ ಮೇಲೆ ಕಟ್ಟಲಾಗಿದೆ. ನಗರದಿಂದ ನದಿಯನ್ನು ದಾಟಿ ಮತ್ತೊಂದು ದಡಕ್ಕೆ ಹೋಗಬೇಕಾದರೆ ಇರುವುದು ದೋಣಿಗಳ ಸೇತುವೆ ಒಂದೇ. ನದಿಯ ಕಡೆ

ಬಿಟ್ಟು ಉಳಿದ ಮೂರು ಕಡೆ ಇಟ್ಟಿಗೆಯ ಗೋಡೆ (ಕೋಟೆ) ಇದೆ. ನಗರವನ್ನು ಕೋಟೆ ಕೊತ್ತಲಗಳಿಂದ ಸುರಕ್ಷಿತವಾಗಿ ಮಾಡಿದ್ದಾರೆಂದು ಹೇಳುವಂತಿಲ್ಲ. ಕಟ್ಟಿರುವ ಗೋಡೆಯ ಸುತ್ತು ಅಷ್ಟು ದೊಡ್ಡದೆಂದು ಹೇಳುವಂತಿಲ್ಲ. ಏಕೆಂದರೆ, ನಾನು ಕುದುರೆಯ ಮೇಲೆ ಕುಳಿತು ಕೇವಲ ಮೂರು ಗಂಟೆಗಳಲ್ಲಿ ಅದನ್ನು ಸುತ್ತುಹಾಕಿದೆ. ಗಂಟೆಗೊಂದು ಹರಿ ದಾರಿಯಂತೆ ನಾನು ಸವಾರಿಮಾಡಿರಬಹುದು. ಈ ಸುತ್ತಿನಲ್ಲಿ ಸಾಕಷ್ಟು ವಿಸ್ತಾರವಾದ ಬಡಾವಣೆಗಳೂ, ಹಳೆಯ ನಗರದ ಅವಶೇಷಗಳೂ ಮತ್ತು ಮೂರು ನಾಲ್ಕು ಇನ್ನೂ ಸಣ್ಣ ಬಡಾವಣೆಗಳೂ ಸೇರಿಲ್ಲ. ವಿಸ್ತಾರವಾದ ಬಡಾವಣೆಗಳು ಲಾಹೋರ್ ಕಡೆಗೆ ಇವೆ. ಅವನ್ನೆಲ್ಲಾ ಸೇರಿಸಿ ಒಂದು ನೆಟ್ಟಗೆರೆ ಎಳೆದರೆ, ಉದ್ದ ಒಂದೂವರೆ ಹರಿದಾರಿ ಆಗಬಹುದು. ಇದರ ಸುತ್ತಳತೆ ಎಷ್ಟು ಎಂದು ಹೇಳಲಾರೆ. ಏಕೆಂದರೆ, ಈ ಬಡಾ ವಣೆಗಳ ಮಧ್ಯೆ ಅಲ್ಲಲ್ಲಿ ಉದ್ಯಾನಗಳೂ ಬಯಲು ಪ್ರದೇಶಗಳೂ ಇವೆ.

ನಾನು ಇನ್ನು ಮುಂದೆ ಆಗಾಗ್ಗೆ ಹೇಳಲಿರುವ 'ಮೆಹೆಲ್ಲೆ (Mehelle= ಮಹಲ್) ಅಥವಾ ಅರಮನೆಯನ್ನು ಒಳಗೊಂಡ ಕೋಟೆ ಚಕ್ರಾಕಾರವಾಗಿ, ಅಥವಾ ಸರಿಯಾಗಿ ಹೇಳಬೇಕೆಂದರೆ, ಅರ್ಧಚಂದ್ರಾಕಾರವಾಗಿ ಇದೆ. ಒಂದು ಕಡೆಗೆ ನದಿಯ ನೋಟವನ್ನು ಪಡೆಯಬಹುದು. ಆ ನದಿಗೂ ಕೋಟೆಯ ಗೋಡೆಗೂ ಮಧ್ಯೆ ವಿಶಾಲವಾದ ಮರಳು ಪ್ರದೇಶವಿದೆ. ರಾಜನು ತನ್ನ ಅರಮನೆಯ ಕಟಾಂಜನಗಳಲ್ಲಿ ಕುಳಿತು ಆನೆಗಳ ಕಾದಾಟ ವನ್ನೂ, ಅಮೀರರು ಅಥವಾ ರಾಜರುಗಳ ಸೈನ್ಯದ ಕವಾಯಿತನ್ನೂ ನೋಡುತ್ತಾನೆ. ಅರಮನೆಯ ಸುತ್ತ ಕೋಟೆಯ ಗೋಡೆಗಳು. ಅವುಗಳ ರಚನೆ ಹಾಗೂ ಗುಮ್ಮಟ ಶಿಖರ ಗಳು ನಗರದವುಗಳಂತೆಯೇ ಇವೆ. ಆದರೆ ಅವನ್ನು ಇಟ್ಟಿಗೆಗಳಷ್ಟೇ ಅಲ್ಲದೆ ಅಮೃತಶಿಲೆಯಂತಹ ಕೆಂಪು ಕಲ್ಲುಗಳಿಂದ ಸಹ ಕಟ್ಟಿರುವುದರಿಂದ ನೋಡಲು ಇನ್ನೂ ಚೆನ್ನಾಗಿ ಕಾಣುತ್ತವೆ. ಕೋಟೆಯ ಗೋಡೆಗಳು ಭದ್ರತೆಯ ದೃಷ್ಟಿಯಿಂದ ನಗರದ ಗೋಡೆಗಳಿಗಿಂತ ಉನ್ನತವಾಗಿವೆ. ನದಿಯ ಕಡೆಯ ಭಾಗವನ್ನು ಬಿಟ್ಟರೆ ಉಳಿದ ಕಡೆಗಳಲ್ಲಿ ಆಳವಾದ ಕಂದಕವಿದೆ. ಈ ಕಂದಕದ ದಡಗಳನ್ನು ಗೆಯ್ದ ಕಲ್ಲಿನಿಂದ ಕಟ್ಟಿದ್ದಾರೆ. ನೀರು ತುಂಬಿದ ಈ ಕಂದಕಗಳಲ್ಲಿ ಮೀನುಗಳನ್ನು ಸಾಕಿದ್ದಾರೆ. ನೋಡಲಿಕ್ಕೆ ಭಾರಿ ಎಂದು ಕಾಣುವ ಈ ರಕ್ಷಣಾ ವಿಧಾನಗಳು ನಿಜವಾಗಿಯೂ ಅಷ್ಟು ಭದ್ರವಾದವುಗಳಲ್ಲ. ಈ ಕೋಟೆ ಕೊತ್ತಲಗಳನ್ನು ನೆಲಸಮಮಾಡಲು ಸಾಧಾರಣ ತುಪಾಕಿಗಳ ಹೊಡೆತ ಸಾಕು.

ಕಂದಕಕ್ಕೆ ತಾಗಿದಂತೆ ದೊಡ್ಡ ಉದ್ಯಾನವೊಂದಿದೆ. ಇದು ಯಾವಾಗಲೂ ಬಣ್ಣ ಬಣ್ಣದ ಹೂವುಗಳಿಂದಲೂ ಹಸಿರು ಲತಾಕುಂಜಗಳಿಂದಲೂ ತುಂಬಿ ಕಂಗೊಳಿಸುತ್ತದೆ. ಆ ಭಾರಿ ಕೆಂಪು ಕೋಟೆಯ ಹಿನ್ನೆಲೆಯಲ್ಲಿ ಈ ಉದ್ಯಾನವನ್ನು ನೋಡಿದರೆ ಬಹು ರಮಣೀಯವಾಗಿ ಕಾಣುತ್ತದೆ. ಉದ್ಯಾನ ಆದ ಮೇಲೆ ಮಹಾ ರಾಜ ಚೌವಟ್ಟ (Great Royal Squre) ಇದೆ. ಈ ಚೌವಟ್ಟಿಗೆಯ ಒಂದು ಕಡೆ ಕೋಟೆಯ ಹೆಬ್ಬಾ

ಗಲುಗಳಿವೆ. ಅವಕ್ಕೆ ಎದುರುಗಡೆ ನಗರದ ಎರಡು ಪ್ರಮುಖ ಬೀದಿಗಳು ಬಂದು ಸೇರು ತ್ತವೆ. ಚಕ್ರವರ್ತಿಯ ಸಿಬ್ಬಂದಿಗೆ ಸೇರಿದವರ ಮತ್ತು ವಾರಕ್ಕೊಂದು ಸಲ ಸರದಿಯ ಮೇಲೆ ಕಾವಲು ಕಾಯುವ 'ರಾಜರ' ಕಾವಲುಪಡೆಯವರ ಗುಡಾರಗಳನ್ನು ಈ ಚೌವಟ್ಟಿಯಲ್ಲಿ ಹೊಡೆದಿದ್ದಾರೆ. ಈ ರಾಜರುಗಳು ಕೋಟೆಯ ಒಳಗಡೆ ಇರಲು ತೀವ್ರವಾದ ಆಕ್ಷೇಪಣೆ ತೆಗೆಯುವ ಕಾರಣ, ಅವರಿಗೆ ಈ ಚೌವಟ್ಟಿಯಲ್ಲಿ ಡೇರೆ ಹೊಡೆಯಲು ಅವಕಾಶ ಮಾಡಿ ಕೊಡಲಾಗಿದೆ. ಕೋಟೆಯಒಳಗಡೆ ಕಾವಲು ಕಾಯುವವನರು ಅಮೀರರು ಮತ್ತು ಮನ್ಸಬ್‌ದಾರರು.

ಈ ಚೌವಟ್ಟಿಯ ಹತ್ತಿರದಲ್ಲಿಯೇ ಇರುವ ಚಕ್ರವರ್ತಿಯ ಲಾಯದಿಂದ ಕುದುರೆ ಗಳನ್ನು ತಂದು ಪಳಗಿಸುವುದು ಇಲ್ಲಿಯೇ. ಕೊಬತ್-ಖಾನನು (Kobotkan or Grand Muster Master) ಕುದುರೆಗಳ ಹಾಜರಿ ತೆಗೆಯುವುದು ಇಲ್ಲಿಯೇ. ಪ್ರತಿ ಯೊಂದು ಕುದುರೆಯನ್ನು ಚೆನ್ನಾಗಿ ಪರೀಕ್ಷಿಸಿದ ತರುವಾಯವೇ ಅದನ್ನು ಚಕ್ರವರ್ತಿಯ ಅಶ್ವಾಲಯಕ್ಕೆ ಸೇರಿಸಿಕೊಳ್ಳುವುದು. ತುರ್ಕಿ ಕುದುರೆಯಾಗಿದ್ದರೆ ಅಥವಾ ಟಾರ್ಟರಿಯ ಕುದುರೆಯಾಗಿದ್ದರೆ ಆ ಕುದುರೆಯ ಬಾಲದ ಕಡೆ ರಾಜನ ಮುದ್ರೆಯನ್ನೂ ಮತ್ತು ಯಾವ ಅಮೀರನಿಗೆ ಆ ಕುದುರೆಯನ್ನು ವಹಿಸಿಕೊಡಲಾಗುವುದೋ ಆ ಅಮೀರನ ಮುದ್ರೆಯನ್ನೂ ಒತ್ತಲಾಗುವುದು.[1] ಹೀಗೆ ಮುದ್ರೆಯೊತ್ತಿರುವ ಕಾರಣ ಒಂದೇ ಕುದುರೆ ಯನ್ನು ಇನ್ನೊಬ್ಬ ಅಮೀರ ತಂದು ತೋರಿಸುವುದನ್ನು ತಪ್ಪಿಸಿದಂತಾಗುತ್ತದೆ.

ಇದೇ ಚೌವಟ್ಟಿಯಲ್ಲಿ ಅಸಂಖ್ಯಾತ ಸಾಮಾನುಗಳನ್ನು ಮಾರುವ 'ಬಜಾರು' ಅಥವಾ ಮಾರುಕಟ್ಟೆ ಇದೆ. ನಾನಾ ತರಹ ದೊಂಬರಾಟ ಮುಂತಾದ ಆಟಪಾಟಗಳ ನ್ನಾಡುವವರೂ ಇಲ್ಲಿದ್ದಾರೆ. ಇಲ್ಲಿಗೆ ಮಹಮ್ಮದೀಯ ಜ್ಯೋತಿಷ್ಕರೂ ಹಿಂದೂ ಜ್ಯೋತಿ ಷ್ಕರೂ ಬರುತ್ತಾರೆ. ಈ ಜ್ಯೋತಿಷ್ಕರು ಬಿಸಿಲಿನಲ್ಲಿ ಧೂಳು ತುಂಬಿದ ಜಮಖಾನದ ಮೇಲೆ ಕೈಯಲ್ಲಿ ಎಂಥದೋ ಒಂದು ಹಳೆಯ ಗಣಿತಶಾಸ್ತ್ರಕ್ಕೆ ಸಂಬಂಧಪಟ್ಟ ಉಪಕರಣವನ್ನು ಆಡಿಸುತ್ತಾ ತಮ್ಮ ಮುಂದೆ ಗ್ರಹಕುಂಡಲಿಗಳುಳ್ಳ ದೊಡ್ಡ ಪುಸ್ತಕ ಗಳನ್ನು ತೆರೆದಿಟ್ಟು ಕುಳಿತುಕೊಂಡಿರುತ್ತಾರೆ. ಈ ರೀತಿಯಾಗಿ ಕುಳಿತು ಅಲ್ಲಿ ಅಡ್ಡಾ ಡುವ ಜನರನ್ನು ಆಕರ್ಷಿಸಿ, ಏನೇನೊ ಹೇಳಿ ಮೋಸಗೊಳಿಸುತ್ತಾರೆ. ಬಡವನೊಬ್ಬ ಒಂದು 'ಪಯ್ಸಾ' (Payssa) ಕೊಟ್ಟರೆ ಸಾಕು, ಅವನ ಭವಿಷ್ಯ ಹೇಳಿಬಿಡುತ್ತಾರೆ. ಅವನ ಹಸ್ತವನ್ನೂ ಮುಖವನ್ನೂ ನೋಡಿ, ಆ ದೊಡ್ಡ ಪುಸ್ತಕದ ಹಾಳೆಗಳನ್ನು ತಿರುವಿ ಹಾಕಿ, ಏನೋ ಲೆಕ್ಕಾಚಾರಹಾಕಿದಂತೆ ನಟಿಸಿ, ಯಾವ ಸಾಹೆತ್ (Sahet= Saat = ಗಳಿಗೆ) ನಲ್ಲಿ ಆತನ ಮನಸ್ಸಿನಲ್ಲಿರುವ ಕೆಲಸವನ್ನು ಆರಂಭಿಸಬಹುದೆಂದು ಹೇಳುತ್ತಾರೆ.

---

[1] ಈ ಪದ್ಧತಿ ಮಧ್ಯಯುಗದ ಮಂಗೋಲರಲ್ಲಿದ್ದಿತು. ಮೊದಮೊದಲು ದೂರ ಪ್ರಾಚ್ಯ ದಲ್ಲಿ ಪ್ರವಾಸಮಾಡಿದ ಮಾರ್ಕೊ ಪೋಲೊ ಈ ವಿಷಯವನ್ನು ತಿಳಿಸಿದ್ದಾನೆ.

ಬಿಳಿಯ ಬಟ್ಟೆಯಲ್ಲಿ ಮೈಕೈಯನ್ನೆಲ್ಲಾ ಮುಚ್ಚಿಕೊಂಡ ಮತಿಗೆಟ್ಟ ಮಹಿಳೆಯರು ಬಂದು ಈ ಜ್ಯೋತಿಷ್ಕರನ್ನು ಮುತ್ತಿಕೊಳ್ಳುತ್ತಾರೆ. ತಮ್ಮ ಮನಸ್ಸಿನಲ್ಲಿರುವ ಗುಟ್ಟುಗಳನ್ನೆಲ್ಲಾ ಅವರಲ್ಲಿ ಹೇಳಿಬಿಡುತ್ತಾರೆ. ದಡ್ಡರೂ ಅವಿವೇಕಿಗಳೂ ಆದ ಈ ಜನ, ಗ್ರಹಗತಿಗಳ ಮೇಲೆ ಈ ಜ್ಯೋತಿಷ್ಕರಿಗೆ ಏನೋ ಹತೋಟಿ ಇದೆ ಎಂದು ನಿಜವಾಗಿಯೂ ಭಾವಿಸುತ್ತಾರೆ. ನಾನು ಕಂಡ ಬಹು ಠಕ್ಕರಾದ ಜ್ಯೋತಿಷ್ಕರಲ್ಲಿ ಗೋವಾದಿಂದ ಬಂದ ಒಬ್ಬ ಬೆರಕೆ ಪೋರ್ಚ್‌ಗೀಸ ಎತ್ತಿದಕೈಆಗಿದ್ದ. ಎಲ್ಲರಂತೆ ಈತನು ಸಹ ಜಮಖಾನದ ಮೇಲೆ ಸಕಲ ಗ್ರಹಬಲಗಳನ್ನೂ ತಿಳಿದ ಜ್ಞಾನಿಯಂತೆ ಬಹು ಗಾಂಭೀರ್ಯದಿಂದ ಕುಳಿತುಕೊಳ್ಳುತ್ತಿದ್ದ. ಅವನಿಗೆ ಓದಲು ಬರೆಯಲು ಬರದಿದ್ದರೂ ಜನ ಅವನನ್ನು ಮುತ್ತಿಕೊಳ್ಳುತ್ತಿದ್ದರು. ಅವನ ಬಳಿ ಇದ್ದ ವಸ್ತುಗಳೆಂದರೆ ಹಳೆಯ ರೋಮನ್ ಕ್ಯಾಥೋಲಿಕ್ ಮತದ ಪುಸ್ತಕಗಳು. ಆ ಪುಸ್ತಕಗಳಲ್ಲಿದ್ದ ಚಿತ್ರಗಳನ್ನು ಯೂರೋಪಿಯನ್‌ಗ್ರಹಗಳೆಂದು ಹೇಳಿ ಮೋಸಮಾಡುತ್ತಿದ್ದ. ರೆವರೆಂಡ್ ಫಾದರ್ ಬೂಜೆ (Buze) ಎಂಬ ಜೆಸೂಯಿಟ್ ಪಾದ್ರಿ ಇವನನ್ನು ಕಂಡು ಇದೆಲ್ಲಾ ಏನು ಎಂದು ಕೇಳಿದಾಗ ಆತ "ಈ ಮೃಗಗಳಿಗೆ ತಕ್ಕ ಜ್ಯೋತಿಷ್ಯ !" ಎಂದು ಉತ್ತರಿಸಿದ.

ನಾನು ಮೇಲೆ ಹೇಳಿದ್ದು ಬಡವರಾದ ಬೀದಿಜ್ಯೋತಿಷ್ಕರ ವಿಚಾರ. ದೊಡ್ಡ ಮನುಷ್ಯರ ಮನೆಗೆ ಹೋಗುವ ಜ್ಯೋತಿಷ್ಕರನ್ನು ಮಹಾಪಂಡಿತರೆಂದು ಹೇಳುತ್ತಾರೆ. ಅವರು ಹೇರಳವಾಗಿ ಹಣ ಸೆಳೆದು ಶ್ರೀಮಂತರಾಗಿದ್ದಾರೆ. ಈ ಮೂಢ ನಂಬಿಕೆಯಲ್ಲಿ ಇಡೀ ಏಷ್ಯಾ ತೊಳಲಾಡುತ್ತಿದೆ. ಈ ಚತುರ ಭವಿಷ್ಯಕಾರರು ರಾಜರಿಂದಲೂ ಶ್ರೀಮಂತರಿಂದಲೂ ಭಾರಿ ಸಂಬಳಸಾರಿಗೆಗಳನ್ನು ಪಡೆಯುತ್ತಾರೆ. ಇವರನ್ನು ಕೇಳದೆ ಅವರು ಯಾವ ಕೆಲಸವನ್ನೂ ಮಾಡುವುದಿಲ್ಲ.

ಮೇಲೆ ಹೇಳಿದ ಎರಡು ಬೀದಿಗಳ ಅಗಲ ಇಪ್ಪತ್ತೈದು ಮೂವತ್ತು ದಾಪುಗಳಿರಬಹುದು. ನೋಟಬೀಳುವಷ್ಟು ದೂರವೂ ಇವು ನೆಟ್ಟಗೆ ಕಾಣುತ್ತವೆ. ಬೀದಿಯ ಎರಡು ಕಡೆಯೂ ಅಂಗಡಿ ಮುಂಗಟ್ಟುಗಳೂ ಒಂದೊಂದು ಅಂಗಡಿಯ ಹಿಂದೆ ಮಳಿಗೆಗಳೂ ಇವೆ. ಮಳಿಗೆಗಳ ಮೇಲೆ ವರ್ತಕರ ಮನೆಗಳಿವೆ. ಬೀದಿಯಿಂದ ನೋಡಿದರೆ ಲಕ್ಷಣವಾಗಿ ಕಾಣುತ್ತವೆ. ಮನೆಯ ಒಳಭಾಗ ವಿಶಾಲವಾಗಿದೆ. ಗಾಳಿ ಬೆಳಕು ಧಾರಾಳವಾಗಿ ಬರುವಂತೆ, ಧೂಳಿನಿಂದ ದೂರವಾಗಿ ಕಟ್ಟಿದ ಈ ಮನೆಗಳ ಮುಂಬಾಗಿಲುಗಳನ್ನು ಅಂಗಡಿ ಮುಂಗಟ್ಟುಗಳ ಮೇಲಿನ ತಾರಸಿಯ ಕಡೆಗೆ ಇಟ್ಟಿರುತ್ತಾರೆ. ಈ ತಾರಸಿ ರಾತ್ರಿ ಹೊತ್ತು ಮಲಗಿಕೊಳ್ಳಲು ಅನುಕೂಲವಾಗಿದೆ. ಆದರೆ ಬೀದಿಗಳ ಉದ್ದಕ್ಕೂ ಮನೆಗಳಿಲ್ಲ ಎಂಬುದನ್ನು ಗ್ರಹಿಸಿರಿ. ನಗರದ ಕೆಲವೇ ಕೆಲವು ಭಾಗಗಳಲ್ಲಿ ಈ ತರಹ ಒಳ್ಳೆಯ ತಾರಸಿ ಮನೆಗಳಿವೆ. ಶ್ರೀಮಂತ ವರ್ತಕರು ನಗರದ ಇತರ ಕಡೆಗಳಲ್ಲಿ ತಮ್ಮ ವಾಸದ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ವ್ಯಾಪಾರದ ಹೊತ್ತು ಮುಗಿದ ಮೇಲೆ ಅವರು ತಮ್ಮ ಮನೆಗಳಿಗೆ ಹೋಗಿಬಿಡುತ್ತಾರೆ.

ಮೇಲೆ ಹೇಳಿದ ಎರಡು ಮುಖ್ಯ ಬೀದಿಗಳಲ್ಲದೆ, ಇನ್ನೂ ಐದು ಬೀದಿಗಳಿವೆ. ಆದರೆ ಅವು ಅಷ್ಟು ನೇರವಾಗಿಯೂ ಉದ್ದವಾಗಿಯೂ ಇಲ್ಲ. ಈ ಬೀದಿಗಳಲ್ಲದೆ ಅನೇಕಾನೇಕ ಅಡ್ಡಬೀದಿಗಳೂ ಇವೆ. ಇವುಗಳ ಮೇಲೆಲ್ಲಾ ಕಮಾನುದಾರಿಗಳು (arcade) ಇವೆ. ಇವನ್ನು ಬೇರೆ ಬೇರೆ ಕಾಲಗಳಲ್ಲಿ ಕಟ್ಟಿದ ಕಾರಣ ಇವುಗಳ ರಚನೆಯಲ್ಲಿ ಒಂದು ಕ್ರಮ ಇಲ್ಲ ; ಭದ್ರತೆಯೂ ಇಲ್ಲ.

ನಾನು ಮೇಲೆ ಹೇಳಿದ ಬೀದಿಗಳಲ್ಲಿ ವಾಸಮಾಡುವವರು ಯಾರೆಂದರೆ, ಮನ್ಸಬ್ ದಾರರು, ನ್ಯಾಯಾಧೀಶರುಗಳು, ಶ್ರೀಮಂತ ವರ್ತಕರು ಮತ್ತು ಇತರರು. ಈ ಮನೆಗಳಲ್ಲಿ ಬಹುತೇಕ ಮನೆಗಳು ನೋಡಲು ಸಾಕಷ್ಟು ಚೆನ್ನಾಗಿವೆ. ಪೂರ್ತ ಇಟ್ಟಿಗೆ ಅಥವಾ ಕಲ್ಲಿನಿಂದ ಕಟ್ಟಿದ ಮನೆಗಳು ಬಹಳ ಕಡಿಮೆ. ಹಲವಾರು ಮನೆಗಳನ್ನು ಹುಲ್ಲು ಮತ್ತು ಮಣ್ಣಿನಿಂದ ಕಟ್ಟಿದ್ದಾರೆ. ಆದರೂ ಗಾಳಿ ಬೆಳಕು ಬರುವಂತೆ ಅನುಕೂಲವಾಗಿವೆ. ನೋಡಲಿಕ್ಕೂ ಅಂದವಾಗಿವೆ. ಬಹುತೇಕ ಮನೆಗಳ ಒಳಗೆ ಅಂಗಳವೂ ಹಿತ್ತಿಲಭಾಗದಲ್ಲಿ ತೋಟವೂ ಇವೆ. ಅಂಗಳವು ವಿಶಾಲವಾಗಿದ್ದು, ಒಳ್ಳೆಯ ಪೀಠೋಪಕರಣಗಳಿಂದ ಕೂಡಿದೆ. ಮಣ್ಣಿನ ಗೋಡೆಗೆ ಸುಣ್ಣ ಹೊಡೆದು, ಮೇಲ್ಛಾವಣಿಗೆ ಉದ್ದನೆಯ ಬಿದಿರನ್ನು ಹಾಸಿ ಹುಲ್ಲು ಹೊದಿಸಿರುತ್ತಾರೆ.

ಈ ತರಹ ಮನೆಗಳ ಮಧ್ಯೆ ಅಲ್ಲಲ್ಲಿ ಅನೇಕ ಸಣ್ಣಪುಟ್ಟ ಹುಲ್ಲು ಮನೆಗಳಿವೆ. ಇವುಗಳಲ್ಲಿಯೇ ಕುದುರೆ ಸವಾರರೂ ಆಸ್ಥಾನದ ಹಾಗೂ ಸೈನ್ಯದ ಅಸಂಖ್ಯಾತ ಸೇವಕರು ಮತ್ತು ಸಿಬ್ಬಂದಿಯವರೂ ಇರುವುದು.

ಹುಲ್ಲು ಹೊದಿಸಿದ ಗುಡಿಸಲುಗಳು ಇರುವ ಕಾರಣವೇ ದಿಲ್ಲಿಯಲ್ಲಿ ಆಗಾಗ್ಗೆ ಬೆಂಕಿ ಕಾಣಿಸಿಕೊಳ್ಳುವುದು. ಹೋದ ವರ್ಷ ಮೂರು ಸಲ ಹೊತ್ತಿಕೊಂಡ ಬೆಂಕಿಯಲ್ಲಿ ಅರವತ್ತು ಸಾವಿರಕ್ಕಿಂತಲೂ ಹೆಚ್ಚು ಮನೆಗಳು ಬೆಂದುಹೋದುವು. ಸಾಮಾನ್ಯವಾಗಿ ಬೇಸಗೆ ಕಾಲದಲ್ಲಿ ಬೀಸುವ ಬಿರುಗಾಳಿಗಳಿಂದಾಗಿ ಬೆಂಕಿ ಹೊತ್ತಿಕೊಳ್ಳುತ್ತದೆ. ಕಳೆದ ವರ್ಷ ಬಿರುಸಿನಿಂದ ಬೀಸಿದ ಗಾಳಿಗೆ ಹೊತ್ತಿಕೊಂಡ ಬೆಂಕಿಯಲ್ಲಿ ಅನೇಕ ಒಂಟೆಗಳೂ ಕುದುರೆಗಳೂ ಬೆಂದುಹೋದುವು. ಅಂತಃಪುರದ ಅನೇಕ ಹೆಂಗಸರು ಸತ್ತುಹೋದರು. ಈ ಹೆಂಗಸರು ಎಷ್ಟು ನಾಚಿಕೊಳ್ಳುತ್ತಾರೆಂದರೆ, ಬೇರೆಯವರನ್ನು ಕಂಡರೆ ಸಾಕು ಮುಖ ಮುಚ್ಚಿಕೊಂಡು ಒಳಗೆ ಹೋಗಿ ಸೇರಿಕೊಳ್ಳುತ್ತಾರೆ ! ಇಂಥ ಬೆಂಕಿ ಆಕಸ್ಮಿಕಗಳಲ್ಲಿ ಓಡಿಹೋಗಲಾರದೆ ಬೆಂಕಿಯಲ್ಲಿ ಸಿಕ್ಕಿಕೊಂಡು ಸಾಯುತ್ತಾರೆ.

ಈ ಕಚಡ ಹುಲ್ಲುಗುಡಿಸಲುಗಳನ್ನು ಕಂಡೇ ನಾನು ದಿಲ್ಲಿಯನ್ನು ಅನೇಕ ಹಳ್ಳಿಗಳು ಕೂಡಿದ ಊರು ಅಥವಾ ಸಾಮಾನ್ಯ ಊರುಗಳಲ್ಲಿ ಇರದ ಸೌಕರ್ಯಗಳನ್ನು ಹೊಂದಿದ ಸೈನ್ಯದ ಪಾಳ್ಯ ಎಂದು ಕರೆಯುವುದು. ಅಮೀರರ ಮನೆಗಳು ನದಿಯ ಪಕ್ಕದಲ್ಲಿ ಅಲ್ಲೊಂದು ಇಲ್ಲೊಂದು ಇವೆ. ಬಿಸಿಲಿನ ಈ ದೇಶದಲ್ಲಿ ಯಾವ ಮನೆಗೆ ಗಾಳಿ ಬೆಳಕು ಚೆನ್ನಾಗಿ ಬರುವುದೋ ಮತ್ತು ಯಾವ ಮನೆ ವಿಶಾಲವಾಗಿರುವುದೋ ಅದೇ ಚೆಂದದ

ಮನೆಯೆಂದು ಭಾವಿಸುತ್ತಾರೆ. ಉತ್ತರದ ಕಡೆಯಿಂದ ಗಾಳಿ ಬರುವ ಮನೆ ಮತ್ತಷ್ಟು ಒಳ್ಳೆಯದು. ಒಂದು ಒಳ್ಳೆಯ ಮನೆಯಲ್ಲಿ ಇರುವ ಸೌಕರ್ಯಗಳೆಂದರೆ: ಅಂಗಳ, ತೋಟಗಳು, ಮರಗಿಡಗಳು, ನೀರಿನ ತೊಟ್ಟಿಗಳು, ಬಾಗಿಲು ದಾಟಿದರೆ ಅಥವಾ ಹಜಾರ ದಲ್ಲಿ ನೀರಿನಚಿಲುಮೆಗಳು ಮತ್ತು ದೊಡ್ಡ ದೊಡ್ಡ ಪಂಖಾಗಳುಳ್ಳ ನೆಲಗೋಣೆಗಳು. ಮಧ್ಯಾಹ್ನ ಹನ್ನೆರಡರಿಂದ ಸಂಜೆ ನಾಲ್ಕು ಅಥವಾ ಐದು ಗಂಟೆವರೆಗೆ ಜನರು ಈ ನೆಲ ಗೋಣೆಗಳ ತಂಪಿನಲ್ಲಿ ಇರುತ್ತಾರೆ. ಈ ಅವಧಿಯಲ್ಲಿ ಸೆಕೆ ತಡೆಯುವುದಕ್ಕಾಗುವು ದಿಲ್ಲ. ಕೆಲವರು ಈ ನೆಲಗೋಣೆಗಳ ಬದಲು ಖಸ್ ಖಸ್ ಹುಲ್ಲಿನಿಂದ ಕಟ್ಟಿದ ಕೋಣೆ ಗಳಲ್ಲಿ ಇರುತ್ತಾರೆ. ಈ ಹುಲ್ಲಿನ ತಡಿಕೆಗಳಿಗೆ ಆಗಾಗ್ಗೆ ನೀರು ಹಾಕುತ್ತಿದ್ದರೆ ಒಂದು ತರಹ ಪರಿಮಳದ ತಂಪು ಕೋಣೆಯಲ್ಲಿರುತ್ತದೆ. ಬಹಳ ಮೆಚ್ಚಿಕೆಗೆ ಅರ್ಹವಾದ ಮನೆ ಯೆಂದರೆ, ಹೂದೋಟದ ಮಧ್ಯದಲ್ಲಿದ್ದು ಒಂದಾಳು ಎತ್ತರದಲ್ಲಿ ನಿರ್ಮಿಸಿದ ನಾಲ್ಕೈದು 'ದಿವಾನ್'ಗಳುಳ್ಳ, ನಾಲ್ಕೂ ಕಡೆಗಳಿಂದ ಗಾಳಿಬರುವಂತಹ ವೇದಿಕೆ. ವಾಸ್ತವವಾಗಿ, ಯಾವ ಮನೆಗೇ ಆಗಲಿ ರಾತ್ರಿ ಹೊತ್ತು ಎಲ್ಲರೂ ಮಲಗಿಕೊಳ್ಳಬಹುದಾದ ತಾರಸಿ ಇಲ್ಲದೆ ಇಲ್ಲ. ಮಳೆ ಬಂದಾಗ, ಧೂಳು ಎದ್ದಾಗ, ಬೆಳಗಿನ ಚಳಿ ಆದಾಗ, ಕೈಕಾಲು ಹಿಡಿದುಕೊಳ್ಳುವಂತೆಮಾಡುವ ಹಿಮ ಬೀಳುವಾಗ ಸುಲಭವಾಗಿ ಮಂಚಗಳನ್ನು ಹಜಾರಕ್ಕೆ ನೂಕುವುದಕ್ಕೆ ಅನುಕೂಲಮಾಡಿಕೊಂಡಿರುತ್ತಾರೆ.

ಒಳ್ಳೆಯ ಮನೆಯ ಒಳಭಾಗದ ಇಡೀ ನೆಲಕ್ಕೆಲ್ಲಾ ನಾಲ್ಕು ಅಂಗುಲ ಮಂದದ ಹತ್ತಿ ಹಾಸಿಗೆ ಹಾಸಿ, ಮೇಲೆ ಬೇಸಗೆಯಲ್ಲಿ ಬೆಳ್ಳನೆಯ ಬಿಳೀ ಬಟ್ಟೆಯನ್ನೂ ಚಳಿಗಾಲ ದಲ್ಲಿ ರೇಷ್ಮೆ ಜಮಖಾನವನ್ನೂ ಹಾಸಿರುತ್ತಾರೆ. ಕೋಣೆಯ ಒಂದು ಕಡೆ ಮನೆಯ ಯಜಮಾನನಿಗೆ ಅಥವಾ ಮನೆಗೆ ಬಂದ ದೊಡ್ಡ ಮನುಷ್ಯರಿಗೆ ಮೀಸಲಾದ ಒಂದೆರಡು ಹಾಸಿಗೆಗಳನ್ನು ಸುರುಳಿ ಸುತ್ತಿ ಇಟ್ಟಿರುತ್ತಾರೆ. ಈ ಹಾಸಿಗೆಗಳಲ್ಲದೆ ತಲೆದಿಂಬುಗಳೂ ಒರಗುದಿಂಬುಗಳೂ ಇರುತ್ತವೆ. ಇವನ್ನು ರೇಷ್ಮೆ, ಮಖಮಲ್ಲು ಮತ್ತು ವೆಲ್ವೆಟ್ಟು ಗಳಿಂದ ತಯಾರಿಸಿರುತ್ತಾರೆ. ನೆಲದಿಂದ ನಾಲ್ಕೈದು ಅಡಿ ಎತ್ತರದಲ್ಲಿ ಗೋಡೆಯೊಳಗೆ ಮಾಡಿರುವ ಸುಂದರವಾದ ಗೂಡುಗಳಿದ್ದು, ಅವುಗಳಲ್ಲಿ ಹೂಕುಂಡಗಳನ್ನೂ ಪಿಂಗಾಣಿ ಕುಂಡಗಳನ್ನೂ ಇಟ್ಟಿರುತ್ತಾರೆ. ದಿವಾನಿನ ಮಾಳಿಗೆಗೆ ಗಿಲೀಟುಮಾಡಿರುತ್ತಾರೆ. ಮನುಷ್ಯನ ಅಥವಾ ಮೃಗಗಳ ಚಿತ್ರಗಳನ್ನು ಬರೆದಿರುವುದಿಲ್ಲ. ಏಕೆಂದರೆ, ಈ ದೇಶದ ಮತಕ್ಕನು ಸಾರವಾಗಿ (ಮಹಮ್ಮದೀಯರ ಮತಾನುಸಾರ) ಇವುಗಳನ್ನು ಬರೆಯುವಂತಿಲ್ಲ.

ಈ ಪ್ರದೇಶಗಳಲ್ಲಿರುವ ಒಳ್ಳೆಯ ಮನೆಗಳ ವರ್ಣನೆ ಇದು. ನಾನು ಹೇಳಿದ ರೀತಿಯ ಸೌಕರ್ಯಗಳೂ ಅಂದಚೆಂದಗಳೂ ಇರುವ ಮನೆಗಳು ದಿಲ್ಲಿಯಲ್ಲಿ ಅನೇಕವು ಇರುವುದರಿಂದ, ಹಿಂದೂಸ್ಥಾನದ ರಾಜಧಾನಿಯಲ್ಲಿ ಒಳ್ಳೆಯ ಮನೆಗಳಿಗೆ ಅಭಾವವಿಲ್ಲ ಎಂದು ಹೇಳಬಹುದು. ಈ ಮನೆಗಳಿಗೂ ನಮ್ಮ ಯೂರೋಪ್ ದೇಶದ ಮನೆಗಳಿಗೂ

ಏನೇನೂ ಹೋಲಿಕೆ ಇಲ್ಲದಿರಬಹುದು. ಹಾಗೆಂದ ಮಾತ್ರಕ್ಕೆ ಇವು ಒಳ್ಳೆಯ ಮನೆಗಳಲ್ಲ ಎಂದು ಹೇಳಲಿಕ್ಕಾಗುವುದಿಲ್ಲ.

ಯುರೋಪಿನ ಪಟ್ಟಣಗಳಿಗೆ ಶೋಭಾಯಮಾನವಾದದ್ದು ಅಲ್ಲಿಯ ಅಂಗಡಿ ಮುಂಗಟ್ಟುಗಳ ಸೌಂದರ್ಯ. ಅಂಥ ಸೊಗಸು ದಿಲ್ಲಿಯಲ್ಲಿ ಇಲ್ಲ. ದಿಲ್ಲಿ ಬಹು ವೈಭವ ದಿಂದ ಕೂಡಿದ ರಾಜನ ಆಸ್ಥಾನಕ್ಕೆ ಪ್ರಸಿದ್ಧವಾದ ರಾಜಧಾನಿಯಾದರೂ, ಅನೇಕಾನೇಕ ಶ್ರೀಮಂತವಸ್ತುಗಳು ಇಲ್ಲಿದ್ದರೂ, ನಮ್ಮ ಸ್ಟಾ ಡನೀ (S. Danis) ಬೀದಿಯಂತಹ ಬೀದಿ ಇಲ್ಲಿಲ್ಲ. ಇಲ್ಲೇ ಏನು, ಇಡೀ ಏಷ್ಯಾದಲ್ಲಿಯೇ ಇಲ್ಲ. ಇಲ್ಲಿ ಬೆಲೆಯಾದ ಸರಕು ಗಳನ್ನೆಲ್ಲಾ ಮಳಿಗೆಗಳಲ್ಲಿ ಇಡುತ್ತಾರೆ. ಅಂಗಡಿಗಳಲ್ಲಿ ಬೆಲೆಯಾದ ಮತ್ತು ಉತ್ತಮ ವಾದ ಮಾಲುಗಳನ್ನು ಜೋಡಿಸಿ ತೋರಿಸುವುದಿಲ್ಲ. ಎಲ್ಲೋ ಒಂದೊಂದು ಅಂಗಡಿಯಲ್ಲಿ ಸೊಗಸಾದ ಬಟ್ಟೆಗಳು, ರೇಷ್ಮೆ ವಸ್ತ್ರಗಳು, ಜರತಾರಿ ಉಡುಪುಗಳು, ಸರಿಗೆ ರುಮಾಲು ಗಳು, ಕಿಂಕಾಪಿನ ಉಡುಪುಗಳು ಇದ್ದರೆ, ಇನ್ನಿಪ್ಪತ್ತೈದು ಅಂಗಡಿಗಳಲ್ಲಿ ಎಣ್ಣೆಯ ಗಡಿಗೆಗಳೋ, ಬೆಣ್ಣೆಯ ಪಾತ್ರೆಗಳೋ, ಅಕ್ಕಿ ಬೇಳೆ ಮುಂತಾದ ದವಸ ಧಾನ್ಯಗಳ ಕುಕ್ಕೆಗಳೋ ಇರುತ್ತವೆ. ಅಕ್ಕಿ, ಬೇಳೆ ಮುಂತಾದ ದವಸ ಧಾನ್ಯಗಳೇ ಜೆಂಟೈಲರ ಆಹಾರ. ಇವರು ಮಾಂಸಾಹಾರ ಮಾಡುವುದಿಲ್ಲ. ಅಕ್ಕಿ ಬೇಳೆಗಳನ್ನು ಹೆಚ್ಚಾಗಿ ಅವಲಂಬಿಸಿರುವವರು ಬೇರೆ ಯಾರು ಎಂದರೆ, ಕೆಳದರ್ಜೆಯ ಮಹಮ್ಮದೀಯರು ಮತ್ತು ಬಹು ಮಂದಿ ಸೈನಿಕ ಸಿಬ್ಬಂದಿಯವರು.

ನೋಡಲಿಕ್ಕೆ ಚೆನ್ನಾಗಿ ಕಾಣುವ ಒಂದು ಹಣ್ಣಿನ ಅಂಗಡಿಬೀದಿಯೇನೋ ಇದೆ. ಇಲ್ಲಿರುವ ಅನೇಕ ಅಂಗಡಿಗಳಲ್ಲಿ ಪರ್ಷಿಯಾ, ಬಾಲ್ಖ್, ಬೊಖಾರಾ ಮತ್ತು ಸಮರ್ ಖಂಡಗಳಿಂದ ತರಿಸಿದ ಬಾದಾಮಿ, ಪಿಸ್ತಬೀಜ (pistachio), ಲಕ್ಷೋಟ (walnut), ಅರೆಯೊಣಗಿಸಿದ ದ್ರಾಕ್ಷಿ (raisins), ಒಣಗಿಸಿದ 'ಪ್ಲಂ' ಹಣ್ಣು (prune), ಎಪ್ರಿಕಾಟ್ ಹಣ್ಣು (apricot), ಚಳಿಗಾಲದಲ್ಲಿ ಹತ್ತಿಯಲ್ಲಿ ಸುತ್ತಲ್ಪಟ್ಟ ಹೊಸ ಬಿಳಿ ಮತ್ತು ಕಪ್ಪು ದ್ರಾಕ್ಷಿ, ಮೂರು ನಾಲ್ಕು ತರಹ ಪೇರುಹಣ್ಣು ಮತ್ತು ಸೇಬುಹಣ್ಣು, ಇಡೀ ಚಳಿಗಾಲವೆಲ್ಲ ಕೆಡದಂತಹ ಆ ಸೊಗಸಾದ ಕಲ್ಲಂಗಡಿ ಕರಬೂಜ ಹಣ್ಣು—ಇವು ಮಾರಾಟಕ್ಕೆ ಇರು ತ್ತವೆ. ಆದರೆ ಈ ಹಣ್ಣುಗಳ ಬೆಲೆ ಬಹಳ ಹೆಚ್ಚು. ಒಂದು ಕರಬೂಜ ಹಣ್ಣಿಗೆ ಒಂದೂವರೆ ಕ್ರೌನುಗಳಷ್ಟು ಬೆಲೆ ! ಆದರೆ ತಿಂದರೆ ಈ ಹಣ್ಣು ತಿನ್ನಬೇಕು. ಅಮೀರರು ಗಳಿಗೆ ಹೆಚ್ಚು ಖರ್ಚೆಂದರೆ ಈ ಹಣ್ಣಿನದೇ. ನನ್ನ ಹಿತೈಷಿ ಆಗಾಖಾನ ಬೆಳಗಿನ ಉಪ ಹಾರಕ್ಕೆ ಇಪ್ಪತ್ತು ಕ್ರೌನುಗಳಷ್ಟು ಹಣವನ್ನು ಹಣ್ಣುಗಳಿಗೆ ಖರ್ಚುಮಾಡುತ್ತಿದ್ದುದನ್ನು ನಾನು ಅನೇಕ ಸಲ ನೋಡಿದ್ದೇನೆ.

ಬೇಸಗೆಯಲ್ಲಿ ಇಲ್ಲಿ ಬೆಳೆಯುವ ಕಲ್ಲಂಗಡಿ ಕರಬೂಜಗಳ ಧಾರಣೆ ಕಡಮೆ. ಆದರೆ ಅಷ್ಟು ಒಳ್ಳೆಯ ಹಣ್ಣಲ್ಲ ಅವು. ಒಳ್ಳೆಯ ಹಣ್ಣುಗಳು ಬೇಕೆಂದರೆ ಪರ್ಷಿಯಾದಿಂದ ಬೀಜ ತರಿಸಿ ನೆಟ್ಟು ಸರಿಯಾದ ರೀತಿಯಲ್ಲಿ ಕೃಷಿಮಾಡಬೇಕು. ಆದರೂ ಸಹ ಒಳ್ಳೆಯ

ಹಣ್ಣು ಬೆಳೆಯುವುದು ಕಷ್ಟ. ಒಂದು ವರ್ಷ ಆದಮೇಲೆ ಸಪ್ಪೆ ಭೂಮಿಯ ಕಾರಣ ಹಣ್ಣಿನ ತಳಿ ನಿಸ್ಸಾರವಾಗಿಬಿಡುತ್ತದೆ.

'ಅಂಬಸ್' ಅಥವಾ 'ಮಾಂಗೂಸ್' (ambas or manguos=ಮಾವಿನ ಹಣ್ಣುಗಳು) ಬೇಸಗೆಯಲ್ಲಿ ಅಗ್ಗ. ಆಗ ಅವು ಹೇರಳವಾಗಿ ಸಿಕ್ಕುತ್ತವೆ. ಆದರೆ ದಿಹ್ಲಿಯಲ್ಲಿ ಬೆಳೆಯುವ ಹಣ್ಣು ಅಷ್ಟು ಶ್ರೇಷ್ಠವಲ್ಲ. ಬಂಗಾಳ, ಗೋವಾ ಮತ್ತು ಗೋಲ್ಕೊಂಡಾದಿಂದ ಬರುವ ಹಣ್ಣುಗಳು ಬಹು ರುಚಿ. ಈ ಹಣ್ಣುಗಳ ಸಿಹಿಗಿಂತ ಹೆಚ್ಚಾದ ಸಿಹಿತಿಂಡಿಯನ್ನು ನಾನು ಸವಿದಿಲ್ಲ.

'ಪಟೇಕ್' (pateque), ಅಂದರೆ ಕಲ್ಲಂಗಡಿ ಹಣ್ಣು (water melon), ಹೆಚ್ಚು ಕಮ್ಮಿ ಇಡೀ ವರ್ಷವೆಲ್ಲ ಸಿಕ್ಕುತ್ತದೆ. ಆದರೆ ದಿಹ್ಲಿಯ ಹಣ್ಣುಗಳು ಮೆತುವಾಗಿವೆ, ಅಲ್ಲದೆ ಬಣ್ಣವೂ ಇಲ್ಲ, ರುಚಿಯೂ ಇಲ್ಲ. ಹೊರಗಡೆಯಿಂದ ಬೀಜ ತರಿಸಿ ಹಾಕಿ ಅನುಕೂಲಸ್ತರ ಮನೆಯಲ್ಲಿ ಬೆಳೆಸಿದ ಹಣ್ಣುಗಳು ರುಚಿಯಾಗಿದ್ದರೂ ಇರಬಹುದು.

ಪಟ್ಟಣದಲ್ಲಿ ಅನೇಕ ಸಿಹಿತಿಂಡಿಯ ಅಂಗಡಿಗಳಿವೆ. ಆದರೆ ಈ ತಿಂಡಿಗಳನ್ನು ಸರಿಯಾಗಿ ಮಾಡಿರುವುದಿಲ್ಲ ; ಇವಕ್ಕೆ ನೊಣ ಮತ್ತು ಧೂಳು ಮುತ್ತಿಕೊಂಡಿರುತ್ತವೆ.

ರೊಟ್ಟಿ ಮಾಡುವವರೂ ಬೇಕಾದಷ್ಟು ಜನರಿದ್ದಾರೆ. ಆದರೆ ರೊಟ್ಟಿ ಒಲೆಗಳು ನಮ್ಮಂಥವುಗಳಂತೆ ಇಲ್ಲ. ಅವನ್ನು ಸರಿಯಾಗಿ ಕಟ್ಟಿರುವುದೇ ಇಲ್ಲ. ಹೀಗಾಗಿ ರೊಟ್ಟಿ ಸರಿಯಾದ ಆಕಾರದಲ್ಲಿರುವುದಿಲ್ಲ ; ಮತ್ತು ಬೆಂದಿರುವುದೂ ಇಲ್ಲ. ಕೋಟೆಯೊಳಗೆ ಮಾರಾಟವಾಗುವ ರೊಟ್ಟಿ ಉತ್ತಮ. ಅಮೀರರು ರೊಟ್ಟಿಗಳನ್ನು ಮನೆಗಳಲ್ಲೆ ತಯಾರಿಸಿಕೊಳ್ಳುತ್ತಾರೆ. ಈ ಕಾರಣ ಅವರು ತಿನ್ನುವ ರೊಟ್ಟಿ ಬೇರೆ ರೊಟ್ಟಿಗಿಂತ ಎಷ್ಟೋ ಉತ್ತಮ. ರೊಟ್ಟಿ ಮಾಡುವವರು ಅದಕ್ಕೆ ಹಾಕಬೇಕಾದ ಹೊಸ ಬೆಣ್ಣೆ, ಹಾಲು ಮತ್ತು ಮೊಟ್ಟೆಗಳಿಗೆ ಹಿಂದುಮುಂದು ನೋಡುವುದಿಲ್ಲ. ಆದರೆ ಅದು ಉಬ್ಬಿಕೊಂಡಿದ್ದರೂ ಸುಟ್ಟರುಚಿ ಕೊಡುತ್ತದೆ. ಪ್ಯಾರಿಸ್ಸಿನಲ್ಲಿ ದೊರೆಯುವಂತಹ ರೊಟ್ಟಿ ಇಲ್ಲೆಲ್ಲಿಯೂ ದೊರೆಯಲಾರದು.

ಬಜಾರಿನಲ್ಲಿ ಮಾಂಸವನ್ನು ಮಸಾಲೆ ಹಾಕಿ ಬೇಯಿಸಿ ಮಾರುವ ಅಂಗಡಿಗಳಿವೆ. ಆದರೆ ಎಂತಹ ಮಾಂಸ ಮಾರುತ್ತಾರೆ ಎಂದು ಹೇಳುವಂತಿಲ್ಲ. ನನಗೆ ಗೊತ್ತಿರುವಂತೆ, ಒಂಟೆ ಮಾಂಸ ಮತ್ತು ಕುದುರೆ ಮಾಂಸಗಳನ್ನೂ ಬೆರೆಸಿರುತ್ತಾರೆ. ಸತ್ತ ದನಗಳ ಮಾಂಸ ಸೇರಿಸಿದ್ದರೂ ಸೇರಿಸಿರಬಹುದು. ಮನೆಯಲ್ಲಿ ಮಾಡದ ಯಾವ ಆಹಾರವನ್ನೂ ನಾವು ನಂಬುವಂತಿಲ್ಲ.

ನಗರದ ಪ್ರತಿ ಭಾಗದಲ್ಲೂ ಮಾಂಸ ಮಾರಾಟವಾಗುತ್ತದೆ. ಆಡಿನ ಮಾಂಸ ಕೊಡು ಎಂದರೆ ಕುರಿಯ ಮಾಂಸ ಸೇರಿಸಿ ಕೊಟ್ಟುಬಿಡುತ್ತಾರೆ. ಆದ್ದರಿಂದ ಈ ಮೋಸ ಆಗದಂತೆ ನೋಡಿಕೊಳ್ಳಬೇಕು. ಕುರಿಯ ಮಾಂಸ ಮತ್ತು ದನದ ಮಾಂಸ—ಇವೆರಡೂ ಹೆಚ್ಚು ಉಷ್ಣ. ಆದರಲ್ಲಿಯೂ ಕುರಿಯ ಮಾಂಸ ಇನ್ನೂ ಹೆಚ್ಚು ಉಷ್ಣ. ಅದು

ನಾಲಗೆಗೆ ರುಚಿಯಾಗಿದ್ದರೂ ದೇಹಕ್ಕೆ ಉಷ್ಣ ಮತ್ತು ವಾಯು. ಅಲ್ಲದೆ ಜೀರ್ಣವಾಗುವುದು ನಿಧಾನ. ಮರಿಗಳ ಮಾಂಸ ಅತ್ಯುತ್ತಮವಾದುದು. ಆದರೆ ಅದರ ಮಾರಾಟ ಬಹಳ ಅಪರೂಪ. ಕುರಿಮರಿಗಳನ್ನು ಕೊಂದ ಕೂಡಲೆ ತಿನ್ನುವುದೊಳ್ಳೆಯದು. ಏಕೆಂದರೆ, ಕೊಯ್ದ ಮರಿಯ ಮಾಂಸವನ್ನು ಬೆಳಗಿನಿಂದ ಸಂಜೆಯುವರೆಗೆ ಇಟ್ಟರೆ ಕೆಟ್ಟುಹೋಗುತ್ತದೆ. ಅಲ್ಲದೆ, ಕೊಬ್ಬು ಗಿಬ್ಬು ಇಲ್ಲದ ಕಾರಣ ಬಾಯಿಗೆ ರುಚಿ ಕೊಡುವುದಿಲ್ಲ. ಅಂಗಡಿಯಲ್ಲಿ ಸಿಕ್ಕುವ ಆಡಿನ ಮಾಂಸ ಬಹುತೇಕ ಹೆಣ್ಣು ಆಡಿನದು. ಈ ಮಾಂಸದಲ್ಲಿ ಚರಬಿ ಇರುವುದಿಲ್ಲ; ಅಲ್ಲದೆ ತಿನ್ನಲು ಬಹಳ ಬಿಗಿ.

ನಾನು ಈ ರೀತಿ ಗೊಣಗುವುದು ಸರಿಯಲ್ಲ ಎಂದು ಕಾಣುತ್ತದೆ. ಏಕೆಂದರೆ, ಇಲ್ಲಿಯ ಜನರ ಜೀವನ ವಿಧಾನಗಳಿಗೆ ನಾನು ಎಷ್ಟು ಹೊಂದಿಕೊಂಡಿದ್ದೇನೆಂದರೆ, ಇವರ ಮಾಂಸ ಹಾಗೂ ರೊಟ್ಟಿ ನನಗೆ ಈಗಾಗಲೇ ಒಗ್ಗಿಕೊಂಡುಬಿಟ್ಟಿವೆ. ನಾನು ನನ್ನ ಸೇವಕನನ್ನು ಕೋಟೆಯೊಳಗಿರುವ ರಾಜನ ಆಹಾರ ಸರಬರಾಜು ಮಾಡುವ ಅಧಿಕಾರಿಯ ಬಳಿಗೆ ಕಳುಹಿಸಿ ನನ್ನ ಊಟವನ್ನು ತರಿಸಿಕೊಳ್ಳುತ್ತೇನೆ. ಊಟದ ಖರ್ಚು ಅವನಿಗೆ ಕಡಿಮೆ ಬಿದ್ದರೂ ನಾನು ಹೆಚ್ಚು ದುಡ್ಡು ಕೊಡುವುದರಿಂದ ಗೊಣಗಾಡದೆ ಸಂತೋಷ ದಿಂದ ಕಳುಹಿಸಿಕೊಡುತ್ತಾನೆ. ವರ್ಷಾನುಗಟ್ಟಲೆ ಈ ರೀತಿ ಊಟ ತರಿಸಿಕೊಂಡು ತಿನ್ನುತ್ತಿದ್ದೇನೆಂದು ಕೇಳಿ ನನ್ನ ಹಿತೈಷಿಯಾದ ಆಗಾ ಹುಸಿನಗೆ ನಕ್ಕನು. ಆತ ತಿಂಗಳಿಗೆ ಕೊಡುತ್ತಿದ್ದ ೧೫೦ ಕ್ರೌನ್ ಸಂಬಳ ಹೊಟ್ಟೆಗೆ ಬೇಕಾದ ಅನ್ನ ದೊರಕಿಸಿಕೊಳ್ಳುವಷ್ಟು ಸಾಕಾಗುತ್ತಿತ್ತು. ಆದರೆ ಫ್ರಾನ್ಸಿನಲ್ಲಿ ಅರ್ಧ ರೂಪಾಯಿ ಕೊಟ್ಟರೆ ರಾಜನ ಭೋಜನ ದಂತಹ ಊಟಮಾಡಬಹುದು.

ಇಡಮಾಡಿ ಸಾಕಿದ ಹುಂಜಗಳು (capon) ಸಿಕ್ಕುವುದೇ ಇಲ್ಲ. ಏಕೆಂದರೆ, ಈ ಜನರು ಮನುಷ್ಯರನ್ನು ಬಿಟ್ಟು ಉಳಿದೆಲ್ಲ ಪ್ರಾಣಿಗಳ ಬಗ್ಗೆ ಬಹಳ ದಯಾಪರರು. ಇಡಮಾಡಿದ ಮನುಷ್ಯರು ಅರಮನೆಗೆ ಬೇಕು. ಮಾರುಕಟ್ಟೆಯಲ್ಲಿ ಹುಂಜ, ಕೋಳಿ ಕೊಕ್ಕರೆಗಳು ಅಗ್ಗವಾಗಿ ಸಿಕ್ಕುತ್ತವೆ. ಈ ಕೋಳಿಗಳಲ್ಲಿ ಒಂದು ಸಣ್ಣ ಜಾತಿಯ ಕೋಳಿ ಇದೆ. ಇದು ಬಹಳ ರುಚಿ. ಇದರ ಚರ್ಮ ಕಪ್ಪಗಿರುವುದರಿಂದ ನಾನು ಇದಕ್ಕೆ 'ಇಥಿಯೋಪಿಯುನ್' ಎಂದು ಹೆಸರಿಟ್ಟಿದ್ದೇನೆ.

ಪಾರಿವಾಳಗಳನ್ನು ಮಾರುತ್ತಾರೆ. ಆದರೆ ಎಳೆಯ ಪಾರಿವಾಳಗಳು ಸಿಕ್ಕುವುದಿಲ್ಲ. ಬಹಳ ಎಳೆಯ ಮರಿಪಾರಿವಾಳಗಳನ್ನು ಕೊಲ್ಲುವುದು ಪಾಪ ಅನ್ನುತ್ತಾರೆ ಈ ಇಂಡಿಯನರು.

ಇಲ್ಲ ಕವುಜಗ ಹಕ್ಕಿಗಳನ್ನು ಮಾರುತ್ತಾರೆ. ಇವು ನಮ್ಮ ದೇಶದವುಗಳಿಗಿಂತ ಸಣ್ಣ. ಬಲೆ ಬೀಸಿ ಹಿಡಿದು ಬಹಳ ದೂರದಿಂದ ತಂದಿರುವ ಕಾರಣ ಇವು ಕೋಳಿಯಷ್ಟು ರುಚಿಯಿಲ್ಲ. ಈ ಮಾತು ಪಂಜರಗಳಲ್ಲಿ ತುಂಬಿ ತರುವ ಬಾತುಗಳಿಗೂ ಮೊಲಗಳಿಗೂ ಅನ್ವಯಿಸುತ್ತದೆ.

ದಿಲ್ಲಿಯ ಸುತ್ತಮುತ್ತಲ ಬೆಸ್ತರು ಮೀನು ಹಿಡಿಯುವುದರಲ್ಲಿ ಅಷ್ಟೇನೂ ಆಸಕ್ತಿ ವಹಿಸುವುದಿಲ್ಲ. ಆದರೂ ಕೆಲವು ವೇಳೆ ಒಳ್ಳೆಯ ಮೀನು ಸಿಕ್ಕುತ್ತವೆ. ಅದರಲ್ಲಿಯು 'ಸಿಂಗಾಲ' (=singala) ಮತ್ತು 'ರಾವು' (rau = rohu = ರೋಹೂ) ಇವೆರಡು ಜಾತಿಯ ಮೀನುಗಳು ಬಹು ರುಚಿ. ಸಿಂಗಾಲ ಎಂಬುದು ನಮ್ಮ ಸಿಹಿನೀರಿನ ಪೈಕ್ (pike) ಮೀನಿನಂತೆಯೂ, ರಾವು ಎಂಬುದು ಕಾರ್ಪ್ ಎಂಬ (carp) ನಮ್ಮ ಇನ್ನೊಂದು ಜಾತಿ ಸೀನೀರಿನ ಮೀನಿನಂತೆಯೂ ಇವೆ. ಚಳಿ ಹವೆಯಲ್ಲಿ ಮೀನುಹಿಡಿಯುವ ಗೋಜಿಗೇ ಹೋಗುವುದಿಲ್ಲ. ಏಕೆಂದರೆ, ಯೂರೋಪಿಯನರು ಸೆಖೆಗೆ ಹೆದರುವುದಕ್ಕಿಂತ ಹೆಚ್ಚಾಗಿ ಈ ಜನ ಚಳಿಗೆ ಹೆದರುತ್ತಾರೆ. ಇಂಥ ಕಾಲದಲ್ಲಿ ಮಾರುಕಟ್ಟೆಯಲ್ಲಿ ಎಲ್ಲಿಯಾದರು ಮೀನು ಕಂಡರೆ ಸಾಕು, ಅವನ್ನು ಖೋಜಾಗಳು ಕೊಂಡುಕೊಂಡು ಬಿಡುತ್ತಾರೆ. ಅವರಿಗೆ ಮೀನು ತುಂಬಾ ಇಷ್ಟ. ಏಕೆ ಎಂದು ಹೇಳಲಾರೆ. ಅಮೀರರು ತಮ್ಮ ಮನೆಯ ಮುಂದೆ ಸದಾ ತೂಗುಹಾಕಿರುವ ಕೊರಡೆ ಉಪಯೋಗಿಸಿ ಹೆದರಿಸಿ ಬೆಸ್ತರಿಂದ ಮೀನುಹಿಡಿಸಿ ತಿನ್ನುತ್ತಾರೆ.

ಇಷ್ಟೆಲ್ಲಾ ಕೇಳಿದ ಮೇಲೆ ಸುಖ ಸಂತೋಷದಲ್ಲಿರಬೇಕೆಂಬ ಮನುಷ್ಯ ಪ್ಯಾರಿಸ್ ಬಿಟ್ಟು ದಿಲ್ಲಿ ನೋಡಲು ಬರುವುದು ಸರಿಯೆ ? ದಿಲ್ಲಿಯಲ್ಲಿ ದೊಡ್ಡವರಿಗೆ ಎಲ್ಲಾ ವಸ್ತುಗಳು ಸಿಕ್ಕುತ್ತವೆ. ಹಾಗೆ ಸಿಕ್ಕುವುದು ಅನೇಕ ಜನರ ದುಡಿಮೆಯಿಂದ ಮತ್ತು ಕೊರಡೆ ಏಟನಿಂದ ; ಇಲ್ಲ, ಹಣದಿಂದ. ದಿಲ್ಲಿಯಲ್ಲಿ ಮಧ್ಯಮವರ್ಗ ಎಂಬುದೇ ಇಲ್ಲ. ಒಬ್ಬನು ಅತ್ಯಂತ ಶ್ರೀಮಂತನಾಗಿರಬೇಕು, ಇಲ್ಲ ಕಡುಬಡವನಾಗಿರಬೇಕು. ನನಗೆ ಬರುವ ಸಂಬಳ ಕಡಿಮೆಯಾದುದೇನಲ್ಲ ; ಖರ್ಚು ಮಾಡಲೂ ಹಿಂದುಮುಂದು ನೋಡುವುದಿಲ್ಲ. ಆದರೂ ಒಮ್ಮೊಮ್ಮೆ ಹೊಟ್ಟೆಗಿಲ್ಲದೆ ತಾಪತ್ರಯ ಪಡಬೇಕಾಗುತ್ತದೆ. ಬಜಾರುಗಳಲ್ಲಿ ಬೇಕಾದ್ದು ಸಿಕ್ಕುವುದಿಲ್ಲ. ಅನೇಕ ವೇಳೆ ಶ್ರೀಮಂತರು ತಿಂದು ಬಿಟ್ಟದ್ದೇ ಅಲ್ಲಿ ಮಾರಾಟವಾಗುವುದು.

ಸತ್ಕಾರ ಸಮಾರಂಭಗಳಿಗೆ ಅತ್ಯಾವಶ್ಯಕವಾದ ಮದ್ಯ (wine) ದಿಲ್ಲಿಯ ಅಂಗಡಿಗಳಲ್ಲಿ ಸಿಕ್ಕುವುದೇ ಇಲ್ಲ. ಇಲ್ಲಿಯೇ ಬೆಳೆಯುವ ದ್ರಾಕ್ಷಿಯಿಂದ ಮದ್ಯವನ್ನು ತಯಾರು ಮಾಡಬಹುದಾದರೂ, ಜೆಂಟೈಲರೂ ಮಹಮ್ಮದೀಯರೂ ಅದರ ಸೇವನೆಯನ್ನು ನಿಷೇಧಿಸಿದ್ದಾರೆ. ನಾನು ಇದನ್ನು ಅಹಮದಾಬಾದ್ ಮತ್ತು ಗೋಲ್ಕೊಂಡಾಗಳಲ್ಲಿ ಡಚ್ಚರು ಮತ್ತು ಇಂಗ್ಲೀಷರ ಮನೆಗಳಲ್ಲಿ ಒಂದಷ್ಟು ಕುಡಿದಿದ್ದೆ. ರುಚಿ ಪರವಾಯಿಲ್ಲ. ಒಮ್ಮೊಮ್ಮೆ ಮೊಗಲ್ ಸಾಮ್ರಾಜ್ಯದಲ್ಲಿ ವೈನು ಸಿಕ್ಕುತ್ತದೆ. ಆದರೆ ಅದು ಷಿರಾಜ್‌ನಿಂದಲೋ ಅಥವಾ ಕೆನರಿ ದ್ವೀಪಗಳಿಂದಲೋ ಬಂದದ್ದು. ನಮ್ಮ ಕಡೆಯ ಮಾತಿನಲ್ಲಿ "ಬೆಲೆಯಿಂದ ರುಚಿ ಹಾಳಾಯಿತು" ಎಂಬಂತೆ ಇವೆರಡೂ ಬಹು ದುಬಾರಿ. ಪ್ಯಾರಿಸ್ ಪೈಂಟ್ ಅಳತೆಗಳಷ್ಟಿರುವ ಒಂದು ಸೀಸೆ ಆರೇಳು ಕ್ರೌನುಗಳಿಗಿಂತ ಕಡಿಮೆ ಬೆಲೆಗೆ ಸಿಕ್ಕುವುದಿಲ್ಲ. ಈ ದೇಶದ ವಿಶಿಷ್ಟವಾದ ಪಾನೀಯವೆಂದರೆ 'ಅರಾಕ್' (arac). ಇದನ್ನು ಬೆಲ್ಲದಿಂದ

ಭಟ್ಟಿ ಇಳಿಸುತ್ತಾರೆ. ಇದರ ಮಾರಾಟವನ್ನು ಬಹಳ ಕಟ್ಟುನಿಟ್ಟಾಗಿ ನಿಷೇಧಿಸಿದ್ದಾರೆ. ಇದನ್ನು ಕ್ರೈಸ್ತರು ಮಾತ್ರ ಬಹಿರಂಗವಾಗಿ ಕುಡಿಯಬಹುದು. ಪೋಲೆಂಡಿನಲ್ಲಿ ಧಾನ್ಯಗಳಿಂದ ತಯಾರಿಸುವ ಮದ್ಯದಷ್ಟೇ ಈ ಅರಾಕ್ ಒಗರಿರುತ್ತದೆ ಮತ್ತು ಹೊಟ್ಟೆ ಸುಡುತ್ತದೆ. ಮಿತಿಮೀರಿ ಕುಡಿದರೆ ಸಾಕು ಏನೇನೂ ವಾಸಿಮಾಡಲಾಗದ ಉದರವ್ಯಾಧಿ ಯುಂಟಾಗುತ್ತದೆ. ಬುದ್ಧಿವಂತನಾದ ಮನುಷ್ಯ ಇಲ್ಲಿ ತಿಳಿನೀರನ್ನೋ ಅಥವಾ ಶರಬತ್ತನ್ನೋ ಕುಡಿದುಕೊಂಡಿರುವುದೊಳ್ಳೆಯದು. ಶರಬತ್ತಿನ ಬೆಲೆ ಅಗ್ಗ. ಅಲ್ಲದೆ, ಕುಡಿಯುವುದರಿಂದ ದೇಹಕ್ಕೆ ಯಾವ ತೊಂದರೆಯೂ ಇಲ್ಲ. ನಿಜ ಹೇಳಬೇಕೆಂದರೆ, ಈ ಬಿಸಿಲು ದೇಶದಲ್ಲಿ 'ವೈನ್ 'ದ್ರಾಕ್ಷಾಮದ್ಯವನ್ನು ಅಪೇಕ್ಷಿಸುವ ಜನ ಬಹಳ ಕಡಿಮೆ. ಇಲ್ಲಿಯ ಜನರಿಗೆ ಅನೇಕ ವ್ಯಾಧಿಗಳ ಅರಿವಿಲ್ಲದಿರುವುದಕ್ಕೆ ಇವರು ಕುಡಿಯದಿರುವುದೇ ಕಾರಣವೆಂದು ಹೇಳಬಹುದು. ಯಾವಾಗಲೂ ಬೆವರುತ್ತಿರುವುದು ಇವರ ಆರೋಗ್ಯಕ್ಕೆ ಇನ್ನೊಂದು ಕಾರಣ. ಸಂಧಿವಾತ, ಮೂತ್ರಕೋಶದ ಕಲ್ಲಿನರೋಗ (ಅಶ್ಮರಿ), ಮೂತ್ರಪಿಂಡದ ರೋಗ, ಮೂಗಿನಲ್ಲಿ ನೀರು ಸುರಿಯುವ ರೋಗ, ನಾಲ್ಕನೇ ಚಳಿಜ್ವರ—ಈ ರೋಗಗಳನ್ನು ಇಲ್ಲಿಯ ಜನ ಕಂಡೇ ಇಲ್ಲವೆಂದು ಹೇಳಬಹುದು. ಈ ಕಾಯಿಲೆಗಳಿಂದ ನರಳುವ ಹೊರದೇಶದವರು ಯಾರಾದರೂ ಇಲ್ಲಿಗೆ ಬಂದರೆ ಜಾಗ್ರತೆ ಗುಣಮುಖರಾಗುತ್ತಾರೆ. ನನಗೂ ಹಾಗೆಯೇ ಆಯಿತು. ಹಿಂದೂಸ್ಥಾನದಲ್ಲಿ ಸಾಮಾನ್ಯವಾಗಿ ಕಂಡುಬರುವ ಮೇಹ ರೋಗವು ಪ್ರಪಂಚದ ಬೇರೆ ಕಡೆಗಳಲ್ಲಿ ಉಲ್ಬಣಿಸುವಂತೆ ಉಲ್ಬಣಿಸುವುದಿಲ್ಲ. ಹೀಗೆ ಜನರ ಆರೋಗ್ಯ ಚೆನ್ನಾಗಿದ್ದರೂ ಅವರ ದೇಹದಲ್ಲಿ ಶಕ್ತಿ ಕಡಿಮೆ. ನಮ್ಮ ಚಳಿ ದೇಶದ ಜನರಷ್ಟು ಇಲ್ಲಿಯ ಜನ ಗಟ್ಟಿ ಮುಟ್ಟಾಗಿಲ್ಲ. ಬಿಸಿಲಿನ ಬೇಗೆಯು ಕಾರಣ ಎಲ್ಲ ವರ್ಗದ ಜನರ ದೈಹಿಕ ಹಾಗೂ ಮಾನಸಿಕ ಶಕ್ತಿಗಳು ಬೆಂದುಬೆಂಡಾಗಿವೆ. ಯುರೋಪಿಯ ನರು ಈ ಬಿಸಿಲಿಗೆ ಇನ್ನೂ ಒಗ್ಗಿ ಕೊಂಡಿಲ್ಲ.

ದಿಲ್ಲಿಯಲ್ಲಿ ಕುಶಲ ಕೆಲಸಗಾರರು ಕೆಲಸಮಾಡುವ ಕಾರ್ಯಾಲಯಗಳು ಹುಡುಕಿದರೂ ಸಿಕ್ಕುವುದಿಲ್ಲ. ಇದಕ್ಕೆ ಜನಗಳ ಅನಾಸಕ್ತಿ ಕಾರಣವಲ್ಲ. ಇಂಡೀಸಿನ ಪ್ರತಿಯೊಂದು ಭಾಗದಲ್ಲಿಯೂ ಕರ ಕುಶಲರಾದ ಜನ ಇದ್ದಾರೆ. ಯಾವ ಗುರುವಿನಿಂದಲೂ ಕಲಿಯದೆ ಮತ್ತು ಯಾವ ಉಪಕರಣಗಳ ಸಹಾಯವೂ ಇಲ್ಲದೆ ಮಾಡಿರುವ ವಸ್ತುಗಳು ಅಸಂಖ್ಯಾತ ಇವೆ. ಕೆಲವು ವೇಳೆ ಯುರೋಪಿನಲ್ಲಿ ಮಾಡಿದ ವಸ್ತುಗಳನ್ನು ಅನುಕರಿಸಿ ಒಂದಕ್ಕೊಂದಕ್ಕೆ ಏನೂ ವ್ಯತ್ಯಾಸ ಕಾಣದಂತೆ ಈ ಜನ ತಯಾರಿಸಬಲ್ಲರು. ಇವರು ತಯಾರು ಮಾಡುವ ವಸ್ತುಗಳಲ್ಲಿ ಬಂದೂಕಗಳು, ಹಕ್ಕಿ ಶಿಕಾರಿಯ ಹಗುರ ಬಂದೂಕಗಳು ಮತ್ತು ಚಿನ್ನದ ಆಭರಣಗಳು—ಇವು ಅತ್ಯುತ್ತಮವಾದವು. ಇವುಗಳ ರಚನೆಯಲ್ಲಿನ ಕುಶಲ ಕಲೆಯನ್ನು ನೋಡಿದಾಗ ನಮ್ಮ ಯುರೋಪಿನ ಚಿನಿವಾರರು ಹೀಗೆ ಮಾಡಬಲ್ಲರೇ ಎಂದೆನಿಸುತ್ತದೆ. ಇವರು ಬರೆಯುವ ಚಿತ್ರಪಟಗಳ ಹಾಗೂ ತಸಬೀರುಗಳ ಸೌಂದರ್ಯ

ಹಾಗೂ ಸೂಕ್ಷ್ಮ ಕೃತಿಗಳನ್ನು ಕಂಡು ನಾನು ಅಚ್ಚರಿಗೊಂಡಿದ್ದೇನೆ. ಏಳು ವರ್ಷಗಳ ಸತತ ಶ್ರದ್ಧೆಯಿಂದ ಗುರಾಣಿಯ ಮೇಲೆ ಅಕ್ಬರನ ಸಾಹಸಗಳನ್ನು ಚಿತ್ರಿಸಿರುವ ಒಬ್ಬ ಹೆಸರಾಂತ ಕಲಾವಿದನ ಅದ್ಭುತ ಕಲೆಗೆ ನಾನು ತಲೆದೂಗಿದ್ದೇನೆ. ಇಂಡಿಯನ್ ಚಿತ್ರಗಾರರಿಗೆ ದೇಹದ ಅಂಗಾಂಗಗಳನ್ನು ಸೂಕ್ತ ಪ್ರಮಾಣದಲ್ಲಿ ತೋರಿಸುವುದರಲ್ಲಿ ಮತ್ತು ಮುಖಚರ್ಯೆಗಳ ಯಥಾವತ್ತಾದ ಚಿತ್ರಣದಲ್ಲಿ ಕೌಶಲ್ಯ ಕಡಿಮೆ. ಆದರೆ ಸರಿಯಾದ ಗುರುವಿನಿಂದ ಕಲೆಯ ನಿಯಮಗಳನ್ನು ಹೇಳಿಸಿಕೊಂಡರೆ ಈ ಲೋಪಗಳನ್ನು ಒಂದು ಗಳಿಗೆಯಲ್ಲಿ ತಿದ್ದಿಕೊಳ್ಳಬಲ್ಲಷ್ಟು ಬುದ್ಧಿವಂತರು, ಈ ಜನ.

ಉನ್ನತ ಮಟ್ಟದ ಕಲಾಕೃತಿಗಳನ್ನು ದಿಲ್ಲಿ ರಾಜಧಾನಿಯಲ್ಲಿ ತೋರಿಸದಿರುವುದಕ್ಕೆ ಪ್ರತಿಭೆ ಇಲ್ಲದಿರುವುದು ಕಾರಣವಲ್ಲ. ಕಲಾವಂತರಿಗೂ ಸಾಮಾನು ತಯಾರಿಕರಿಗೂ ಸೂಕ್ತವಾದ ಉತ್ತೇಜನ ದೊರೆತಲ್ಲಿ ಉಪಯುಕ್ತವೂ ಲಲಿತವೂ ಆದ ಕಲೆಗಳು ಬೆಳೆಯುತ್ತವೆ. ಆದರೆ ಬಡತನದಲ್ಲೆ ನರಳುವ ಈ ನತದೃಷ್ಟ ಕಲಾವಂತರನ್ನು ತಿರಸ್ಕಾರದಿಂದಲೂ ಕ್ರೌರ್ಯದಿಂದಲೂ ಕಾಣುತ್ತಾರೆ. ಕೊಡುವ ಸಂಭಾವನೆಯಂತೂ ಅತ್ಯಲ್ಪ. ಶ್ರೀಮಂತ ತನಗೆ ಬೇಕಾದುದನೆಲ್ಲಾ ಅಗ್ಗದ ಬೆಲೆಗೆ ಪಡೆಯುತ್ತಾನೆ. ಅಮೀರರು ಮತ್ತು ಮನ್ಸಬ್ದಾರರು ತಮಗೆ ಕುಶಲಕೆಲಸಗಾರನಿಂದ ಏನಾದರೂ ಆಗಬೇಕಾದರೆ ಆತನನ್ನು ಕರೆತರಲು ಬಜಾರಿಗೆ ಕಳುಹಿಸುತ್ತಾರೆ. ಒಳ್ಳೆ ಮಾತಿಗೆ ಆತ ಬಂದರೆ ಸರಿ, ಇಲ್ಲವಾದರೆ ಒದ್ದು ಹಿಡಿದುಕೊಂಡು ಬರುತ್ತಾರೆ. ಅವನಿಂದ ಬೇಕಾದ ಕೆಲಸಮಾಡಿಸಿಕೊಂಡು, ನಿಷ್ಕರುಣೆಯಾದ ಯಜಮಾನರು ಅವನ ಕೆಲಸಕ್ಕೆ ತಕ್ಕ ಕೂಲಿ ಕೊಡದೆ, ತಮ್ಮದೇ ಆದ ಲೆಕ್ಕಾಚಾರ ಮಾಡಿ, ಒಂದಿಷ್ಟು ದುಡ್ಡು ಕೈಗೆ ಹಚ್ಚಿ ಕಳುಹಿಸಿಬಿಡುತ್ತಾರೆ. ಸಧ್ಯ, ಕೊರಡೆ ಏಟು ಬೀಳಲಿಲ್ಲವಲ್ಲ ಎಂದು ಕೆಲಸಗಾರ ಸಮಾಧಾನಪಟ್ಟುಕೊಳ್ಳಬೇಕು! ಹೀಗಿರುವಾಗ ಕುಶಲ ಕೆಲಸಗಾರನಾಗಲಿ ಅಥವಾ ಸಾಮಾನು ತಯಾರಿಸುವವನಾಗಲಿ ಯಾವ ಉತ್ತೇಜನದಿಂದ ಕೆಲಸಮಾಡಬೇಕು? ಒಳ್ಳೊಳ್ಳೆಯದನ್ನು ತಯಾರಿಸಿ ಹೆಸರು ಗಳಿಸುವ ಬದಲು ಹೇಗೋ ಒಂದು ಕೆಲಸಮಾಡಿಬಿಟ್ಟು ಒಂದು ಚೂರು ರೊಟ್ಟಿಗೆ ಕಾಸು ಗಿಟ್ಟಿಸಿಕೊಳ್ಳಬೇಕೆಂದು ಆಲೋಚಿಸುತ್ತಾನೆ. ಹೆಸರಾಂತ ಕಲಾವಂತರು ಯಾರೆಂದರೆ, ಚಕ್ರವರ್ತಿಯ ಬಳಿಯೇ ಕೆಲಸಕ್ಕೆ ಸೇರಿಕೊಂಡಿರುವವರು. ಅವರು ಬೇರೆ ಯಾರ ಬಳಿಗೂ ಹೋಗದೆ ಅವನ ಆಶ್ರಯದಲ್ಲೆ ಕೆಲಸಮಾಡಿಕೊಂಡಿರುತ್ತಾರೆ.

ಕೋಟೆಯಲ್ಲಿ ಅರಮನೆಯೂ ಇತರ ರಾಜಗೃಹಗಳೂ ಇವೆ. ಆದರೆ ಇವು ಲೂರ್ವ್ (Louvre) ಅಥವಾ ಎಸ್ಕುರಿಯಾಲ್ (Escurial) ನಂತಹ ಕಟ್ಟಡಗಳೆಂದು ಭಾವಿಸಬೇಡಿ. ಕೋಟೆಯೊಳಗಿರುವ ಯಾವ ಭವನವೂ ಯೂರೋಪಿನ ಮಾದರಿಯಲ್ಲಿಲ್ಲ. ಈಗಾಗಲೆ ನಾನು ಹೇಳಿರುವ ಕಾರಣದಿಂದ ಅವು ಫ್ರಾನ್ಸಿನ ಮತ್ತು ಸ್ಪೈಯಿನ್

ದೇಶದ ಶಿಲ್ಪಕಲೆಯಂತೆ ಇರಬೇಕಾಗಿಯೂ ಇಲ್ಲ. ಇಲ್ಲಿಯ ಹವೆಗೆ ತಕ್ಕಂತಹ ಭವ್ಯತೆಯನ್ನು ಹೊಂದಿದ್ದರೆ ಸಾಕು.[1]

ಕೋಟೆಯ ಹೆಬ್ಬಾಗಿಲು, ಅಲ್ಲಿನ ಎರಡು ಕಲ್ಲಿನ ಆನೆಗಳನ್ನು ಬಿಟ್ಟರೆ ಅಷ್ಟೇನೂ ಹೇಳಿಕೊಳ್ಳುವಂತಹ ರೀತಿಯಲ್ಲಿಲ್ಲ. ಹೆಬ್ಬಾಗಿಲಿನ ದ್ವಿಪಾರ್ಶ್ವಗಳಲ್ಲಿರುವ ಆ ಎರಡು ಕಲ್ಲಿನ ಆನೆಗಳ ಮೇಲೆ ಚಿತ್ತೂರಿನ ಪ್ರಸಿದ್ಧ ರಾಣಾ ಜಯಮಲ್ಲನ ವಿಗ್ರಹವೂ ಅವನ ಸಹೋದರ ಪೊಲ್ತಾ (Polta= ಪತ್ತಾ ಅಥವಾ ಫತ್ತಾ)ನ ವಿಗ್ರಹವೂ ಇವೆ.[2] ಅಕ್ಬರನನ್ನು ಎದುರಿಸಿ ನಿಂತ ಆ ವೀರರ ಹೆಸರು ಚಿರಸ್ಮರಣೀಯವಾಗಿ ನಿಂತಿದೆ. ಅವರ ತಾಯಿ ಇನ್ನೂ ಹೆಚ್ಚಿನ ವೀರ ವನಿತೆ. ಪಟ್ಟಣಕ್ಕೆ ಅಕ್ಬರನು ಹಾಕಿದ ಮುತ್ತಿಗೆಯನ್ನು ಎದುರಿಸಿ ನಿಂತು ಕೊನೆಯ ಗಳಿಗೆಯಲ್ಲೂ ಶರಣಾಗತರಾಗದೆ, ತಾಯೊಡನೆ ವೀರಸ್ವರ್ಗವನ್ನೇರಿದ ಮಹಾಶೂರರು ಅವರು. ಅವರ ಶೌರ್ಯಧೈರ್ಯಗಳನ್ನು ಮೆಚ್ಚಿ, ಶತ್ರುವಾದ ಅಕ್ಬರನು ಅವರ ವಿಗ್ರಹಗಳನ್ನು ಮಾಡಿಸಿ ಗೌರವ ಸಲ್ಲಿಸಿದ್ದಾನೆ. ಅವರನ್ನು ಹೊತ್ತಿರುವಂತೆ ಕಡೆದಿರುವ ಆನೆಗಳನ್ನು ನೋಡಿದಷ್ಟೂ ನನಗೆ ಹೆಮ್ಮೆಯಾಗುತ್ತದೆ. ಅವುಗಳಲ್ಲಿ ಅಷ್ಟೊಂದು ಭವ್ಯತೆ ಇದೆ !

ಈ ಹೆಬ್ಬಾಗಿಲಿನ ಮೂಲಕ ಕೋಟೆಯನ್ನು ಪ್ರವೇಶಿಸಿದರೆ ವಿಶಾಲವಾದ ಬೀದಿಯೊಂದು (ಚಾಂದನಿಚೌಕ) ಸಿಕ್ಕುತ್ತದೆ. ಈ ಬೀದಿಯ ಮಧ್ಯೆ ನೀರಿನ ಕಾಲುವೆಯೊಂದು ಹರಿಯುತ್ತದೆ. ಬೀದಿಯ ಎರಡು ಕಡೆಯೂ ಐದಾರು ಅಡಿ ಎತ್ತರದ ಮತ್ತು ನಾಲ್ಕು ಅಡಿ ಅಗಲದ ದಿವಾನ್ (ಉದ್ದವಾದ ಜಗಲಿ) ಇದೆ. ಈ ದಿವಾನಿಗೆ ತಾಗಿದಂತೆ ಮುಚ್ಚಿದ ಕಮಾನುದಾರಿಗಳಿವೆ (arcades). ಇವು ಹೆಬ್ಬಾಗಿಲಿನೋಪಾದಿಯಲ್ಲಿ ದಾರಿಯ ಉದ್ದಕ್ಕೂ ಇವೆ. ಈ ಉದ್ದನೆಯ ದಿವಾನಿನ ಮೇಲೆ ಮಾರುಕಟ್ಟೆ ಮುಣೇಗಾರರೂ ಇತರ ಸಣ್ಣಪುಟ್ಟ ಅಧಿಕಾರಿಗಳೂ ಕುಳಿತುಕೊಂಡು ಸುಂಕ ಸಾರಿಗೆಗಳನ್ನು ವಸೂಲು ಮಾಡುತ್ತಾರೆ. ಅವರ ಕೆಲಸಕ್ಕೆ ಬೀದಿಯಲ್ಲಿ ಹೋಗುವ ಕುದುರೆಗಳಿಂದಾಗಲಿ ಜನ

---

[1] ಬೆರ್ನ್ಯೇ ದಿಲ್ಲಿಯ ಅರಮನೆಗಳನ್ನು ಕುರಿತು ಈ ರೀತಿ ಹೇಳಿದ್ದರು ಸಹ, ಚರಿತ್ರಕಾರ ಫರ್ಗುಸನ್ 'ದಿಲ್ಲಿಯಲ್ಲಿರುವ ಅರಮನೆಯಂಥ ಅರಮನೆ ಇಡೀ ಪೂರ್ವ ದೇಶಗಳಲ್ಲಿಯೇ ಇಲ್ಲ' ಎಂದು ಹೇಳುತ್ತಾನೆ. ಅರಮನೆಗೆ ಸೇರಿದ ಅಂತಃಪುರ ಮತ್ತು ಇತರ ಜನಾನಾ ಕಟ್ಟಡಗಳು ಎಸ್ಕುರಿಯಾಲ್‌ನ ಎರಡರಷ್ಟು ದೊಡ್ಡದಾಗಿದ್ದುವೆಂದು ಗೊತ್ತಾಗುತ್ತದೆ.

[2] ಈ ಇಬ್ಬರು ರಜಪೂತ ಶೂರರ ಹೆಸರು ರಾಜಾ ಜಯಮಲ್ ಮತ್ತು ಪತ್ತಾ ಅಥವಾ ಫತ್ತಾ. ಅಕ್ಬರ ಚಿತ್ತೂರಿಗೆ ಮುತ್ತಿಗೆ ಹಾಕಿ ಅದನ್ನು ೧೫೬೮ರಲ್ಲಿ ವಶಪಡಿಸಿಕೊಂಡನು. ಎರಡು ಆನೆಗಳಲ್ಲಿ ಈಗ ಒಂದು ದೆಹಲಿಯ ವಸ್ತುಸಂಗ್ರಹಾಲಯದಲ್ಲಿಯೂ ಇನ್ನೊಂದು ಸಾರ್ವಜನಿಕ ಉದ್ಯಾನವನದಲ್ಲಿಯೂ ಇದೆಯಂತೆ. ಈ ಶೂರರ ವಿಗ್ರಹಗಳು ಕೂಡ ಕೋಟೆಯೊಳಗೆ ಮಣ್ಣಿನಲ್ಲಿ ಹೂತುಹೋಗಿದ್ದುವೆಂದೂ, ಅವುಗಳನ್ನು ೧೮೬೩ರಲ್ಲಿ ಹೊರದೆಗೆದರೆಂದೂ ತಿಳಿದುಬರುತ್ತದೆ.

ರಿಂದಾಗಲಿ ಯಾವ ಅಡ್ಡಿ ಆತಂಕಗಳೂ ಇಲ್ಲ. ರಾತ್ರಿ ಹೊತ್ತು ಮನ್ಸಬ್‌ದಾರರೂ ಕೆಳ ದರ್ಜೆಯ ಅಮೀರರೂ ಈ ಎತ್ತರವಾದ ಜಗಲಿಯ ಮೇಲೆ ಪಹರೆ ಕಾಯುತ್ತಾರೆ. ಕಾಲುವೆಯ ನೀರು ಅರಮನೆಯಲ್ಲಿರುವ ಉಪಕಾಲುವೆಗಳ ಮೂಲಕ ಹರಿದು, ಕೊನೆಗೆ ಕೋಟೆಯ ಅಗಳಿಗೆ ಬೀಳುತ್ತದೆ. ಈ ನೀರನ್ನು ದಿಲ್ಲಿಗೆ ಐದಾರು ಹರಿದಾರಗಳ ದೂರದ ಜಮುನಾ ನದಿಯಿಂದ ಬಹಳ ವೆಚ್ಚಮಾಡಿ ಕಡಿಸಿದ ಕಾಲುವೆಗಳ ಮುಖಾಂತರ ತಂದಿದ್ದಾರೆ.

ಕೋಟೆಯ ಇನ್ನೊಂದು ಪ್ರಧಾನ ಹೆಬ್ಬಾಗಿಲನ್ನು ಪ್ರವೇಶಿಸಿದಾಗಲೂ ಇಷ್ಟೇ ಉದ್ದದ ಹಾಗೂ ಅಗಲದ ಇನ್ನೊಂದು ಬೀದಿ ಸಿಗುತ್ತದೆ. ಈ ಬೀದಿಯ ಎರಡು ಕಡೆಯೂ ಸಹ ಮೇಲೆ ಹೇಳಿದಂತಹ 'ದಿವಾನ್' ವೇದಿಕೆಗಳಿವೆ. ಅವುಗಳಿಗೆ ತಾಗಿದಂತೆ ಕಮಾನುದಾರಿಗಳ ಬದಲು ಅಂಗಡಿಗಳಿವೆ. ಸ್ಪಷ್ಟವಾಗಿ ಹೇಳುವುದಾದರೆ, ಈ ಬೀದಿ 'ಬಜಾರು' ಅಥವಾ ಅಂಗಡಿ ಸಾಲಿನಿಂದ ಕೂಡಿದೆ. ಈ ಅಂಗಡಿ ಸಾಲಿನ ಮೇಲ್ಭಾಗ ದಲ್ಲಿ ಕಟ್ಟಿರುವ ಎತ್ತರದ ಕಮಾನುಮೇಲ್ಛಾವಣಿಯಿಂದ ಬೇಸಗೆಯಲ್ಲಿ ಹಾಗೂ ಮಳೆ ಗಾಲದಲ್ಲಿ ತುಂಬಾ ಅನುಕೂಲವಿದೆ. ಮೇಲ್ಛಾವಣಿಯಲ್ಲಿ ಮಾಡಿರುವ ದೊಡ್ಡ ದೊಡ್ಡ ಗುಂಡನೆ ಬೆಳಕುಕಂಡಿಗಳಿಂದ ಗಾಳಿ ಬೆಳಕುಗಳು ಬರುತ್ತವೆ.

ಮೇಲೆ ಹೇಳಿದ ಎರಡು ಪ್ರಧಾನ ಬೀದಿಗಳಲ್ಲದೆ, ಕೋಟೆಯೊಳಗೆ ಅನೇಕ ಸಣ್ಣ ಪುಟ್ಟ ಬೀದಿಗಳುಂಟು. ಈ ಬೀದಿಗಳೆಲ್ಲ ಅಮೀರರು ಪಹರೆ ಕಾಯುವ ಸ್ಥಳದಲ್ಲಿ ಕೂಡು ತ್ತವೆ. ಅಮೀರರು ಸರದಿಯ ಮೇಲೆ ವಾರಕ್ಕೊಂದು ದಿನ ಪಹರೆ ಕಾಯುತ್ತಾರೆ. ಅವರು ಪಹರೆ ಕಾಯುವ ಠಾಣೆಗಳು ಭವ್ಯವಾಗಿವೆಯೆಂದು ಕರೆಯಲು ಯಾವ ಅಡ್ಡಿಯೂ ಇಲ್ಲ. ಏಕೆಂದರೆ, ಅಮೀರರು ಈ ಸ್ಥಳಗಳನ್ನು ತಮ್ಮ ಸ್ವಂತ ಖರ್ಚಿನಲ್ಲಿ ಸೊಗಸಾಗಿ ಅಲಂಕರಿಸಿಕೊಂಡಿರುತ್ತಾರೆ. ಅವರು ಪಹರೆ ಕಾಯುವಾಗ ಅವರ ಊಟ ತಿಂಡಿ ತೀರ್ಥ ಗಳೆಲ್ಲವೂ ಅರಮನೆಯಿಂದ ಸರಬರಾಜು ಆಗುತ್ತವೆ. ಈ ಉಪಚಾರಕ್ಕಾಗಿ ಅಮೀರರು ಅರಮನೆಯ ಕಡೆ ಮುಖಮಾಡಿ ನಿಂತು ಮೂರು ಸಲ 'ತಸ್ಲೀಂ' (taslim) ಮಾಡು ತ್ತಾರೆ.

ಮೇಲೆ ಹೇಳಿದವುಗಳಲ್ಲದೆ, ಕೋಟೆಯ ಬೇರೆ ಬೇರೆ ಸ್ಥಳಗಳಲ್ಲಿ ಅನೇಕ ದಿವಾನ್ ಗಳೂ ಡೇರೆಗಳೂ ಇವೆ. ಅಲ್ಲಿ ಸಾರ್ವಜನಿಕ ವ್ಯವಹಾರಕ್ಕೆ ಸಂಬಂಧಪಟ್ಟ ಕಛೇರಿಗಳು ನಡೆಯುತ್ತವೆ.

'ಕಾರ್-ಕಾನೆ' (Kar-Kanay) ಎಂದು ಕರೆಯಲಾದ ಕುಶಲಕಲೆಗಾರರು ಕೆಲಸಮಾಡುವ ವಿಶಾಲವಾದ ಹಜಾರಗಳನ್ನು ಅನೇಕ ಸ್ಥಳಗಳಲ್ಲಿ ನೋಡಬಹುದು. ಒಂದೊಂದು ಹಜಾರದಲ್ಲಿ ಒಂದೊಂದು ತರಹ ಸಾಮಾನುಗಳನ್ನು ತಯಾರಿಸುತ್ತಾರೆ. ಕಸೂತಿ, ಚಿನಿವಾರಿಕೆ, ಬಣ್ಣಹಾಕುವಿಕೆ, ಅರಗಿನ ಕೆಲಸ, ದರ್ಜಿ ಕೆಲಸ, ಚಮ್ಮಾರಿಕೆ, ನೇಯ್ಗೆ-ಹೀಗೆ ಹತ್ತಾರು ತರಹ ಕೆಲಸಮಾಡುವ ಜನರು ಒಂದೊಂದು ಹಜಾರದಲ್ಲಿ ಕೆಲಸ

ಮಾಡುತ್ತಿರುತ್ತಾರೆ. ಬಹಳ ನವುರಾದ ಬಟ್ಟೆಗಳನ್ನು ನೇಯಲು ಒಂದು ಹಜಾರ ಇದೆ. ಇಲ್ಲಿ ಎಷ್ಟು ನವುರಾದ ಬಟ್ಟೆಯನ್ನು ತಯಾರುಮಾಡುತ್ತಾರೆಂದರೆ, ಆ ಬಟ್ಟೆಯನ್ನು ಹೆಂಗಸು ಒಂದು ರಾತ್ರಿ ತೊಟ್ಟರೆ ಸಾಕು ಅದು ನವೆದುಹೋಗಿಬಿಡುತ್ತದೆ. ಕೆಲವೇ ಗಂಟೆಗಳ ಬಾಳಿಕೆ ಬರುವ ಇಂಥ ಬಟ್ಟೆಯ ಬೆಲೆ ಹತ್ತು ಹನ್ನೆರಡು ಕ್ರೌನುಗಳಷ್ಟಾಗ ಬಹುದು. ಕಸೂತಿ ಹಾಕಿದ್ದರೆ ಇನ್ನೊಂದಿಷ್ಟು ಹೆಚ್ಚು ಬೆಲೆ ಆಗಬಹುದು.

ಕೆಲಸಗಾರರು ಬೆಳಗ್ಗೆ ಕಾರ್-ಕಾನೆಗೆ ಬಂದು ಸಂಜೆಯವರೆಗೂ ಕೆಲಸಮಾಡು ತ್ತಾರೆ. ಸಂಜೆಯಲ್ಲಿ ಅವರವರ ಮನೆಗಳಿಗೆ ಹಿಂದಿರುಗುತ್ತಾರೆ. ಈ ರೀತಿ ಸದ್ದುಗದ್ದಲ ವಿಲ್ಲದೆ ಲೆಕ್ಕಾಚಾರವಾಗಿ ಅವರ ಕಾಲ ಕಳೆದುಹೋಗುತ್ತದೆ. ಬಾಳಿನಲ್ಲಿ ಸುಖಪಡ ಬೇಕೆಂಬ ಆಸೆಯೇ ಅವರಲ್ಲಿಲ್ಲ. ಕಸೂತಿ ಹಾಕುವವರು ತಮ್ಮ ಮಕ್ಕಳನ್ನು ಕಸೂತಿ ಕೆಲಸದಲ್ಲಿಯೇ ಮುಂದುವರಿಸುತ್ತಾರೆ. ಅಕ್ಕಸಾಲಿಗರ ಮಕ್ಕಳು ಅಕ್ಕಸಾಲಿಗರೇ ಆಗು ತ್ತಾರೆ. ನಗರದ ವೈದ್ಯರು ತಮ್ಮ ಮಕ್ಕಳಿಗೆ ವೈದ್ಯವೃತ್ತಿಯನ್ನೆ ಕಲಿಸುತ್ತಾರೆ. ಯಾರೂ ತಮ್ಮ ಕಸಬು ಅಥವಾ ವೃತ್ತಿಯವರಲ್ಲದ ಮನೆಯ ಹೆಣ್ಣು ತರುವುದಿಲ್ಲ. ಈ ನಿಯಮವನ್ನು ಜೆಂಟೈಲರು ಪಾಲಿಸಿದಂತೆಯೇ ಮಹಮ್ಮದೀಯರು ಸಹ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಜೆಂಟೈಲರ ಧರ್ಮಶಾಸ್ತ್ರಗಳಲ್ಲಿಯೇ ಇವನ್ನೆಲ್ಲಾ ಹೇಳಿಬಿಟ್ಟಿದೆ. ಈ ನಿಯಮಗಳಿಗೆ ಕಟ್ಟುಬಿದ್ದ ಕಾರಣ ಲಕ್ಷಣವಾಗಿ ಕಾಣುವ ಎಷ್ಟೋ ಹುಡುಗಿಯರು ತಮ್ಮ ಜಾತಿಯಲ್ಲಿ ಗಂಡು ಸಿಕ್ಕದೆ ಮದುವೆಯೇ ಆಗಿಲ್ಲ. ಬೇಕೆಂದರೆ, ಅವರ ಜಾತಿ ಯನ್ನು ಬಿಟ್ಟು ಬೇರೆ ಜಾತಿಗಳಲ್ಲಿ ಒಳ್ಳೊಳ್ಳೆಯ ಗಂಡುಗಳು ಸಿಕ್ಕುತ್ತವೆ.

ಮೇಲೆ ಹೇಳಿದ ಸ್ಥಳಗಳನ್ನು ಹಾದು ಮುಂದೆ ಹೋದರೆ ಅಮ್-ಖಾಸ್(Am-Kas : ಅಮ್‌ಖಾಸ್=ದರ್ಬಾರುಮಂದಿರ) ಸಿಕ್ಕುತ್ತದೆ. ಇದು ನಿಜವಾಗಿಯೂ ಬಹು ಭವ್ಯವಾದ ಮಂದಿರ. ಕಮಾನುಗಳನ್ನುಳ್ಳ ಚಚ್ಚೌಕವಾದ ಮಂದಿರ ಇದು. ಪ್ರತಿ ಕಮಾನಿಗೂ ಮಧ್ಯೆ ಗೋಡೆ ಇದೆ. ಆದರೂ ಈ ಗೋಡೆಯೊಳಗೆ ಒಂದರಿಂದ ಇನ್ನೊಂ ದಕ್ಕೆ ಹೋಗಲನುಕೂಲವಾದ ಬಾಗಿಲು ಇದೆ. ಈ ಭವನದ ಒಂದು ಪಾರ್ಶ್ವದ ಮಧ್ಯಭಾಗದಲ್ಲಿರುವ ಮಹಾದ್ವಾರದ ಮೇಲೆ ವಿಶಾಲವಾದ ದಿವಾನ್ ಇದೆ. ಇದನ್ನು 'ನಗಾರ್—ಕಾನೆ' (Nagar—Kanay) ಅಥವಾ ನಗಾರಿಖಾನೆ ಎನ್ನುತ್ತಾರೆ. ಇಲ್ಲಿ ನಗಾರಿ ನೌಪತ್ತು ಮುಂತಾದ ವಾದ್ಯಗಳನ್ನೂ, ಕೊಂಬು ಕಹಳೆಗಳನ್ನೂ ಇಟ್ಟಿದ್ದಾರೆ. ನಗಾರಿಯನ್ನು ಇಟ್ಟಿರುವ ಕಾರಣ ಇದಕ್ಕೆ ನಗಾರ್ ಕಾನೆ ಎಂಬ ಹೆಸರು ಬಂದಿದೆ. ಈ ನಗಾರಿ ಮುಂತಾದ ವಾದ್ಯಗಳನ್ನು ಹಗಲು ರಾತ್ರಿ ಕೆಲವು ಕ್ಲುಪ್ತ ಸಮಯಗಳಲ್ಲಿ ಮಾತ್ರ ಬಾರಿಸುತ್ತಾರೆ. ಹೊಸದಾಗಿ ಬಂದ ಯೂರೋಪಿಯನರಿಗೆ ಈ ಶಬ್ದ ಬಹಳ ವಿಚಿತ್ರವಾಗಿ ಕೇಳಿಸುತ್ತದೆ. ಏಕೆಂದರೆ, ಹತ್ತಾರು ಊದುವ ವಾದ್ಯಗಳು (haut-boys) ಮತ್ತು ಹತ್ತಾರು ಝಲ್ಲರಿ ಮತ್ತು ತಾಳಗಳನ್ನು ಒಟ್ಟಿಗೆ ಬಾರಿಸುತ್ತಾರೆ. 'ಕರ್ನಾ' (karna=ಕರ್ನಾಲು) ಎಂಬ ಊದುವ ವಾದ್ಯದ ಉದ್ದ ಒಂಬತ್ತು ಅಡಿಗಳಿ

ಗಿಂತ ಕಮ್ಮಿ ಇಲ್ಲ. ಅದರ ಬಾಯಿಯ ಅಗಲ ಒಂದಡಿಗಿಂತ ಹೆಚ್ಚು. ಹಿತ್ತಾಳೆ ಅಥವಾ ಕಬ್ಬಿಣದಿಂದ ಮಾಡಿದ ಕೆಲವು ಝಲ್ಲರಿಗಳ ಅಡ್ಡಳತೆ ಆರು ಅಡಿಗಳಷ್ಟಿದೆ. ಹೀಗಿರುವಾಗ ನಗಾರ್‌ಕಾನೆಯಿಂದ ಬರುವ ಶಬ್ದವೆಷ್ಟು ಎಂಬುದನ್ನು ಅರ್ಥಮಾಡಿಕೊಳ್ಳಿ. ಮೊಟ್ಟ ಮೊದಲು ಕೇಳಿದಾಗ ಆ ಶಬ್ದ ನನಗೆ ಸಹಿಸಲು ಅಸಾಧ್ಯವಾಯಿತು. ಆದರೆ ವಾಡಿಕೆಯ ಆಟ ಎಷ್ಟೆಂದರೆ, ಈಗ ಅದೇ ಶಬ್ದ ನನ್ನ ಕಿವಿಗಳಿಗೆ ಹಿತವಾಗಿದೆ. ರಾತ್ರಿಯ ಕಾಲ ದಲ್ಲಂತೂ ಮಾಳಿಗೆಯ ಮೇಲೆ ಹಾಸಿಗೆಯ ಮೇಲೆ ಮಲಗಿ ದೂರದಿಂದ ಬರುವ ಈ ವಾದ್ಯ ವನ್ನು ಕೇಳಿದಾಗ ಅದು ನನ್ನ ಕಿವಿಗಳಿಗೆ ಹಿತವಾಗಿಯೂ, ಮಧುರವಾಗಿಯೂ ಮತ್ತು ಭವ್ಯವಾಗಿಯೂ ಇರುತ್ತಿತ್ತು. ನನ್ನೀ ಮಾತನ್ನು ಕೇಳಿ ಯಾರೂ ಅಚ್ಚರಿಪಡಬೇಕಾಗಿಲ್ಲ. ಏಕೆಂದರೆ, ವಾದ್ಯಗಳನ್ನು ಬಾರಿಸುವವರು ಹುಟ್ಟಿದಂದಿನಿಂದ ಇದರಲ್ಲೇ ತರಬೇತಿ ಹೊಂದಿರುತ್ತಾರೆ. ಹತ್ತಿರದಲ್ಲಿ ಕರ್ಣಕಠೋರವಾಗಿ ಕೇಳುಸುವ ವಾದ್ಯಗಳ ನಾದವನ್ನು ದೂರದಿಂದ ಕೇಳಿದರೆ ಮಧುರ ಸಂಗೀತದಂತೆ ಕೇಳಿಸುತ್ತದೆ. ನಗಾರ್‌ಕಾನೆ ಎತ್ತರದಲ್ಲಿದ್ದು ರಾಜನು ವಾಸಮಾಡುವ ಕೋಣೆಗಳಿಂದ ದೂರವಾಗಿರುವುದರಿಂದ ರಾಜನಿಗೆ ಈ ವಾದ್ಯ ಗಳ ಶಬ್ದದಿಂದ ಯಾವ ತೊಂದರೆಯೂ ಆಗುವುದಿಲ್ಲ.

ನಗಾರ್ ಕಾನೆ ಇರುವ ಮಹಾದ್ವಾರಕ್ಕೆ ಎದುರಾಗಿ ವಿಶಾಲವೂ ಭವ್ಯವೂ ಆದ ಹಲವಾರು ಕಂಬಸಾಲುಗಳುಳ್ಳ ಹಜಾರ ಇದೆ. ಇಲ್ಲಿಯ ಕಂಬಗಳಿಗೂ ಮೇಲ್ಛಾವಣಿಗೂ ಚಿನ್ನದ ಮುಲಾಮು ಹಚ್ಚಿ ಅದರ ಮೇಲೆ ಚಿತ್ರಗಳನ್ನು ಬರೆದಿದ್ದಾರೆ. ನೆಲದಿಂದ ಎತ್ತರಿಸಿದ ಹಾಗೂ ಗಾಳಿ ಬೆಳಕು ಸಾಕಷ್ಟು ಬರುವ ಈ ಹಜಾರ ಮೂರು ಕಡೆಗಳಲ್ಲಿ ತೆರೆದುಕೊಂಡಿದೆ. ಹಜಾರವನ್ನು ಅರಮನೆಯಿಂದ ಪ್ರತ್ಯೇಕಿಸುವ ಗೋಡೆಯ ಮಧ್ಯದಲ್ಲಿ ಮನುಷ್ಯನಿಗೆ ನಿಲುಕದಷ್ಟು ಎತ್ತರದಲ್ಲಿ ದೊಡ್ಡ ಕಟಾಂಜನ (ಝರೋಖಾ)ಇದೆ. ಇಲ್ಲಿ ಚಕ್ರವರ್ತಿಪ್ರತಿ ಮಧ್ಯಾಹ್ನ ಸುಮಾರು ಹನ್ನೆರಡು ಗಂಟೆಯ ವೇಳೆಯಲ್ಲಿ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಾನೆ. ಅವನ ಕೆಲವು ಮಕ್ಕಳು ಅಕ್ಕಪಕ್ಕ ಕುಳಿತುಕೊಳ್ಳುತ್ತಾರೆ. ಅವನ ಬಳಿ ನಿಂತ ಖೋಜಾಗಳು ನವಿಲುಗರಿ ಬೀಸಿ ನೊಣಗಳನ್ನು ಓಡಿಸುತ್ತಲೋ, ಗಾಳಿಹಾಕುತ್ತಲೋ ಅಥವಾ ಕೆಲವರು ತದೇಕಚಿತ್ತದಿಂದ ತಲೆಬಾಗಿ ಹೇಳಿದ ಕೆಲಸ ಮಾಡಲು ಸಿದ್ಧರಾಗಿಯೋ ನಿಂತಿರುತ್ತಾರೆ. ಸಿಂಹಾಸನದ ಕೆಳಗೆ, ಅಂದರೆ ಮುಂಬದಿ ಯಲ್ಲಿ, ಬೆಳ್ಳಿಯ ಕಟಕಟೆ ಇರುವ ಆವರಣವಿದೆ. ಅಮೀರರೂ ರಾಜರೂ ರಾಯ ಭಾರಿಗಳೂ ಕೈಕಟ್ಟಿ ತಲೆ ತಗ್ಗಿಸಿಕೊಂಡು ನಿಂತಿರುತ್ತಾರೆ. ಸಿಂಹಾಸನಕ್ಕೆ ದೂರದಲ್ಲಿ ಗುಂಪು ಕೂಡಿದ ಮನ್ಸಬ್‌ದಾರರುಗಳೂ ಇದೇ ರೀತಿಯಲ್ಲಿ ನಿಂತುಕೊಂಡಿರುತ್ತಾರೆ. ವಿಶಾಲವಾದ ಹಜಾರದ ಇನ್ನುಳಿದ ಜಾಗದಲ್ಲಿ, ಅಷ್ಟೇ ಏಕೆ ಇಡೀ ಅಂಗಳದಲ್ಲಿ, ದೊಡ್ಡ ವರು ಚಿಕ್ಕವರೂ, ಬಡವರು ಬಲ್ಲಿದರೂ ತುಂಬಿರುತ್ತಾರೆ. ಏಕೆಂದರೆ, ಈ ಹಜಾರದಲ್ಲಿ ರಾಜ ಯಾವ ಭೇದಭಾವನೆಯೂ ಇಲ್ಲದೆ ಎಲ್ಲರಿಗೂ ಅವರವರ ಅಹವಾಲು ಹೇಳಿ ಕೊಳ್ಳಲು ಅವಕಾಶಮಾಡಿಕೊಡುತ್ತಾನೆ. ಈ ಕಾರಣವೇ ಇದಕ್ಕೆ 'ಅಮ್-ಖಾಸ್'

ಎಂದರೆ ಸರ್ವರ ಅಹವಾಲಿಗೂ ಸಮಾನ ಅವಕಾಶವಿರುವ ಭವನ—ಎಂಬ ಹೆಸರಿರುವುದು.

ರಾಜನು ಒಡ್ಡೋಲಗ ನಡೆಸುವ ಒಂದೂವರೆ ಅಥವಾ ಎರಡು ಗಂಟೆ ಸಮಯದಲ್ಲಿ ಅರಮನೆಯ ಕೆಲವು ಕುದುರೆಗಳನ್ನು ಸಿಂಹಾಸನದ ಮುಂದೆ ತಂದು ತೋರಿಸಿಕೊಂಡು ಹೋಗುತ್ತಾರೆ. ಅವುಗಳನ್ನು ಸರಿಯಾದ ರೀತಿಯಲ್ಲಿ ಸಾಕಲಾಗಿದೆಯೆ ಇಲ್ಲವೆ ಎಂಬುದನ್ನು ತಿಳಿದುಕೊಳ್ಳಲು ಈ ವ್ಯವಸ್ಥೆ ಇದೆ. ಕುದುರೆಗಳಾದ ಮೇಲೆ ಆನೆಗಳು ಬರುತ್ತವೆ. ಅವುಗಳ ಕೊಳಕು ಚರ್ಮವನ್ನು ಚೆನ್ನಾಗಿ ತೊಳೆದು, ಮೈಗೆಲ್ಲಾ ಬರೆಯುವ ಶಾಯಿಯಂತಹ ಕಪ್ಪುಬಣ್ಣ ಬಳಿದು, ತಲೆಯ ಮುಂಭಾಗದಲ್ಲಿ ಸೊಂಡಿಲ ತುದಿಯವರೆಗೆ ಎರಡು ಕೆಂಪು ಪಟ್ಟಿಗಳನ್ನು ಹಾಕಿರುತ್ತಾರೆ. ಅವುಗಳಿಗೆ ಕಸೂತಿ ಹಾಕಿದ ಬಟ್ಟೆ ಹೊದಿಸಿ, ಕೊರಳಿಗೆ ಹಾಕಿದ ಬೆಳ್ಳಿಯ ಭಾರಿ ಸರಪಣಿಗೆ ಬೆಳ್ಳಿಯ ಗಂಟೆಗಳನ್ನು ಕಟ್ಟಿರುತ್ತಾರೆ. ಟಿಬೆಟಿನಿಂದ ತರಿಸಿದ ಬೆಲೆಬಾಳುವ ಚಾಮರಗಳನ್ನು ಗಿರಿಜೆ ಮೀಸೆಗಳು ಕಾಣುವ ರೀತಿಯಲ್ಲಿ ಕಿವಿಗಳಿಗೆ ಡೊಂಕಾಗಿ ನೇತುಹಾಕಿರುತ್ತಾರೆ ಈ ಭಾರಿ ಆನೆಗಳ ಅಕ್ಕಪಕ್ಕ ಅವುಗಳ ಸೇವೆಗಾಗಿ ನೇಮಿಸಲ್ಪಟ್ಟವೆಯೋ ಎಂಬಂತೆ ಬಹು ಸುಂದರವಾದ ಹೊದಿಕೆಗಳನ್ನು (ಗೌಸುಗಳನ್ನು)ಹೊದಿಸಿದ ಎರಡು ಮರಿ ಆನೆಗಳು ಇರುತ್ತವೆ. ತಮಗೆ ಮಾಡಿರುವ ಅಲಂಕಾರದ ಅಪವಿನಿಂದ ಆನೆಗಳು ಹಿಗ್ಗಿವೆಯೋ ಎಂಬಂತೆ ಅವು ಬಹು ಠೀವಿಯಿಂದ ಹೆಜ್ಜೆಯಿಡುತ್ತಾ ಬಂದು, ಸಿಂಹಾಸನದ ಮುಂದೆ ನಿಂತು, ಮಾವುತನ ಸನ್ನೆಯಂತೆ ಮಂಡಿಯೂರಿ ಬಗ್ಗಿ, ಎತ್ತರಕ್ಕೆ ಸೊಂಡಲೆತ್ತಿ ಚೀರುತ್ತವೆ. ಇದನ್ನು ಜನರು ಆನೆ ಸಲಾಮು ಎಂದು ಹೇಳುತ್ತಾರೆ.[1]

ಆನೆ ಕುದುರೆಗಳಾದ ಮೇಲೆ, ಒಂದರೊಡನೊಂದು ಕಾದಾಡಲೆಂದೇ ಸಾಕಿ ಪಳಗಿಸಿದ ಜಿಗರಿಗಳು, 'ನೀಲ್‌ಗಾಕ್ಸ್' (Nilgaux=Nilgau : ನೀಲ್‌ಗಾಯ್ ; ನೀಲಿಹಸು) ಗಳೂ, ಘೇಂಡಾಮೃಗಗಳೂ, ಹುಲಿಸಿಂಹಗಳೊಡನೆ ಹೋರಾಡಬಲ್ಲ ಭಾರಿ ಕೊಂಬುಗಳುಳ್ಳ ಬಂಗಾಳದ ಕೋಣಗಳೂ [ಕಾಡುಕೋಣಗಳು ?], ಜಿಗರೆಗಳನ್ನು ಬೇಟೆಯಾಡಬಲ್ಲ ಪಳಗಿದ ಚಿರತೆಗಳೂ, ಉಸ್ಬೇಕ್‌ನಿಂದ ತರಿಸಿದ ಮತ್ತು ಕೆಂಪು ಬಣ್ಣದ ಹೊದಿಕೆ ಹೊದಿಸಿದ ನಾನಾ ತರಹೆ ಬೇಟೆನಾಯಿಗಳೂ, ಗೌವುಜಗ, ಕೊಕ್ಕರೆ, ಮೊಲ, ಜಿಗರೆ ಮುಂತಾದ ಪಕ್ಷಿಗಳನ್ನೂ ಮೃಗಗಳನ್ನೂ ಬೇಟೆಯಾಡಲು ಸಾಕಿಕೊಂಡಿರುವ ಹಿಂಸ್ರ ಪಕ್ಷಿ (ಡೇಗೆ, ರಣಹದ್ದು ಮುಂತಾದ ಪಕ್ಷಿ)ಗಳೂ ಸಿಂಹಾಸನದ ಮುಂದೆ ಬರುತ್ತವೆ.

ಪ್ರಾಣಿಗಳ ಈ ಮೆರವಣಿಗೆಯಾದ ಮೇಲೆ ಒಬ್ಬಿಬ್ಬರು ಅಮೀರರ ಅಶ್ವದಳಗಳು ರಾಜನ ಮುಂದೆ ಕವಾಯಿತು ಮಾಡುತ್ತವೆ. ಸವಾರರು ವಿಶೇಷ ರೀತಿಯ ಉಡುಪು

---

[1] ವಿಜಯನಗರದ ಸಾಮ್ರಾಟರ ಕಾಲದಲ್ಲಿ ಮತ್ತು ಹಿಂದೆ ಮೈಸೂರು ಅರಮನೆಯಲ್ಲಿ ದಸರಾ ದರ್ಬಾರು ನಡೆಯುತ್ತಿದ್ದಾಗ ಪ್ರತಿದಿನವೂ ಬಹುಮಟ್ಟಿಗೆ ಇದೇ ತರಹ ಪ್ರದರ್ಶನ ಆಗುತ್ತಿತ್ತೆಂಬುದನ್ನು ನಾವಿಲ್ಲಿ ನೆನೆಸಿಕೊಳ್ಳಬಹುದು.

ಧರಿಸಿರುತ್ತಾರೆ; ಕುದುರೆಗಳಿಗೆ ಕಬ್ಬಿಣದ ಕವಚ ತೊಡಿಸಿ ವಿಚಿತ್ರರೀತಿಯ ಅಲಂಕಾರ ಮಾಡಿರುತ್ತಾರೆ.

ರಾಜನಿಗೆ ಸಣ್ಣಕತ್ತಿಯ ಪ್ರಯೋಗವನ್ನು ನೋಡುವುದರಲ್ಲಿ ಸಂತೋಷ. ಕುರಿಯೊಂದನ್ನು ಕೊಯ್ದು, ಅದರ ಕರುಳು ಮುಂತಾದ ಒಳಅವಯವಗಳನ್ನು ತೆಗೆದುಹಾಕಿ, ಮತ್ತೆ ಕುರಿಯಂತೆ ಮಾಡಿ ಅದರ ನಾಲ್ಕು ಕಾಲುಗಳನ್ನು ಕಟ್ಟಿ ತಂದಿಡುತ್ತಾರೆ. ಯುವಕರಾದ ಅಮೀರರು, ಮನ್ಸಬ್‌ದಾರರು ಮತ್ತು 'ಗೌರ್ಜ್‌ಬೆರ್ದಾರರು'(Gouzber-dars : ಗರ್ಜ್‌ದಾರರು= ಮುಳ್ಳು ಗದಾಧಾರಿಗಳು) ತಮ್ಮ ಕೈಚಳಕವನ್ನು ತೋರಿಸುತ್ತಾರೆ; ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ, ಕಟ್ಟಿದ ನಾಲ್ಕು ಕಾಲುಗಳೂ ಸೇರಿದ ಹಾಗೆ ಕುರಿಯ ಇಡೀ ಶರೀರವನ್ನು ಒಂದೇ ಏಟಿಗೆ ಎರಡು ತುಂಡುಗಳಾಗಿ ಕತ್ತರಿಸಿಬಿಡುತ್ತಾರೆ.

ಇವೆಲ್ಲ ಹೆಚ್ಚು ಗಂಭೀರವಾದ ವಿಷಯಗಳ ಮಧ್ಯೆ ನಡೆಯುವ ಅನೇಕ ವಿನೋದ ಪ್ರಕರಣಗಳು, ಅಷ್ಟೆ. ರಾಜನು ತನ್ನ ಅಶ್ವಸೈನ್ಯವನ್ನು ವಿಶೇಷವಾಗಿ ಗಮನಿಸುವುದಿಲ್ಲ. ಯುದ್ಧ ನಿಂತಿರುವ ಕಾರಣ ಪ್ರತಿಯೊಬ್ಬ ಸಿಪಾಯಿಯ ಕಡೆಗೂ ಗಮನಕೊಡುತ್ತಾನೆ. ಒಳ್ಳೆಯ ಸೇವೆ ಸಲ್ಲಿಸಿದವರಿಗೆ ಸಂಬಳ ಹೆಚ್ಚುಮಾಡುತ್ತಾನೆ; ನಿಷ್ಠೆಯಿಂದ ಕೆಲಸಮಾಡದವರನ್ನು ಕೆಲಸದಿಂದ ವಜಾಮಾಡುತ್ತಾನೆ. ಅರ್ಜಿಗಳನ್ನು ಕೊಡಬೇಕೆನ್ನುವವರು ಆಮ್-ಕಾಸ್ ಬಳಿ ನಿಂತು ಅವುಗಳನ್ನು ಮೇಲೆತ್ತಿ ಹಿಡಿದುಕೊಂಡಿರುತ್ತಾರೆ. ಅವುಗಳನ್ನು ಈಸಿಕೊಂಡು ಬಂದು ರಾಜನ ಮುಂದೆ ಓದುತ್ತಾರೆ. ರಾಜ ಎಲ್ಲವನ್ನೂ ಕಿವಿಗೊಟ್ಟು ಕೇಳಿ, ತಾನೇನಾದರೂ ಪ್ರಶ್ನೆ ಹಾಕಬೇಕೆಂದಿದ್ದರೆ ಮನವಿಮಾಡಿಕೊಂಡಿರುವವರನ್ನು ಹತ್ತಿರಕ್ಕೆ ಕರೆಸಿಕೊಳ್ಳುತ್ತಾನೆ. ರಾಜನೆ ಅಹವಾಲನ್ನು ಕೇಳಿ ತಿಳಿದುಕೊಂಡು ಆ ಕೂಡಲೆ ಪರಿಹಾರ ನೀಡುತ್ತಾನೆ. ವಾರದಲ್ಲಿ ಒಂದು ದಿನ ತೀರ ನಿರ್ಗತಿಕರೆನಿಸಿಕೊಂಡ ಹತ್ತು ಜನರ ಅಹವಾಲುಗಳನ್ನು ಪ್ರತ್ಯೇಕವಾಗಿ ಕೇಳುತ್ತಾನೆ. ಈ ಹತ್ತು ಜನರನ್ನು ಆರಿಸಿ ಕರೆದುಕೊಂಡು ಬರುವ ಕೆಲಸವನ್ನು ಶ್ರೀಮಂತನೂ ವಯೋವೃದ್ಧನೂ ಆದವನೊಬ್ಬ ಅಧಿಕಾರಿ ಮಾಡುತ್ತಾನೆ. ವಾರದಲ್ಲಿ ಇನ್ನೊಂದು ದಿನ ರಾಜ ಅದಾಲತ್—ಕಾನೆ (Adalet-Kanay) ಎಂಬ ನ್ಯಾಯಾಲಯದಲ್ಲಿ ಕುಳಿತು, ಇಬ್ಬರು ಮುಖ್ಯ ಖಾಜಿ(Kadi)ಗಳು, ಅಂದರೆ ನ್ಯಾಯಾಧೀಶರೊಡನೆ ಕೂಡಿ ನ್ಯಾಯವಿಮರ್ಶೆಮಾಡುವ ಕೆಲಸವನ್ನು ನಿರ್ವಹಿಸುತ್ತಾನೆ. ಇದರಿಂದ ಸ್ಪಷ್ಟವಾಗಬಹುದು, ನಾವು ಯಾವ ಏಷ್ಯಾ ರಾಜರನ್ನು ಅನಾಗರಿಕರೆಂದು ಕರೆಯುವ ಸಂಭವವುಂಟೋ ಅಂಥ ರಾಜರು ತಮ್ಮ ಪ್ರಜೆಗಳ ಕಷ್ಟನಷ್ಟಗಳನ್ನು ವಿಚಾರಿಸುವುದರ ಬಗ್ಗೆ ಕಣ್ಣು ಮುಚ್ಚಿಕೊಂಡಿಲ್ಲ ಎಂಬುದು.

ಆಮ್-ಕಾಸ್‌ನಲ್ಲಿ ನಡೆಯುವ ಕಾರ್ಯಕ್ರಮಗಳು ವಿವೇಕಪೂರ್ಣವೂ ಗುರುತರವೂ ಆಗಿರುವಂತೆ ಕಂಡುಬರುತ್ತವೆ. ಆದರೆ ಅಲ್ಲಿಯ ಅಸಹ್ಯವಾದ ಹಾಗೂ ಹೇಯವಾದ ಹೊಗಳುಭಟ್ಟತನವನ್ನು ಹೇಳದೆ ಮುಚ್ಚಿಕೊಳ್ಳಲಾರೆ. ರಾಜನ ಬಾಯಿಂದ ಏನು ಬಂದರೂ ಸರಿಯೆ, ಅದು ಉದ್ದೇಶಪೂರ್ವಕವಾಗಿರಲಿ ಇಲ್ಲದಿರಲಿ, ಅಥವಾ ಅದು

ಎಷ್ಟೇ ಅಲ್ಪವಾಗಿರಲಿ, ಆ ಕೂಡಲೇ ಎಲ್ಲರ ಬಾಯಲ್ಲೂ ಅದೇ ಮಾತು. ಮುಖ್ಯ ಅಮೀರರು ಮೇಲಕ್ಕೆ ಕೈಯೆತ್ತಿ ಏನೋ ದೈವಾನುಗ್ರಹ ಪಡೆದವರಂತೆ 'ಕರಾಮತ್! ಕರಾಮತ್! ಅದ್ಭುತ, ಅಚ್ಚರಿ! ಎಂಥ ಚಮತ್ಕಾರದ ಮಾತುಗಳು!' ಎಂದು ಘೋಷಿಸುತ್ತಾರೆ. ಪರ್ಷಿಯಾದ ಒಂದು ಗಾದೆ ಇದೆ. ಅದನ್ನು ತಿಳಿಯದ ಮತ್ತು ಅದನ್ನು ಪದೇ ಪದೇ ನುಡಿಯದ ಮೊಗಲನು ಇಲ್ಲವೆಂದೇ ಹೇಳಬೇಕು :

ಹಗಲನು ಇರುಳೆನ್ನಲು ರಾಜನು
ಚಂದ್ರನು ಬೆಳಗುತ್ತಿಹನೆನಬೇಕು ನೀನು

ಈ ಹೊಗಳುಭಟ್ಟತನವನ್ನು ಎಲ್ಲ ವರ್ಗದ ಜನರಲ್ಲಿಯೂ ಕಾಣಬಹುದು. ಉದಾಹರಣೆಗೆ, ಮೊಗಲನು ನನಗೆ ಹೇಳಿಕಳುಹಿಸಿದನೆಂದು ಇಟ್ಟುಕೊಳ್ಳಿ. ಆಗ ನನ್ನನ್ನು ಕರೆಯಲು ಬಂದವನು ಪೀಠಿಕೆಯಾಗಿ 'ನೀವು ಈ ಯುಗದ ಅರಿಸ್ಟಾಟಲ್, ಹಿಪೊಕ್ರೆಟೀಸ್ ಮತ್ತು ಅವಿಸೆನ್ನಾ!' ಎಂದು ಮಾಮೂಲಿ ಹೊಗಳುತ್ತಾನೆ. ಮೊದಲು ಮೊದಲಿಗೆ ಇಂಥ ಹೊಗಳಿಕೆ ನನಗೆ ಬೇಕಿಲ್ಲವೆಂದೂ, ನಾನು ಅಂಥ ಮಹನೀಯರ ಮಟ್ಟಕ್ಕೆ ಬರಲಾರೆನೆಂದೂ ನಾನು ಹೇಳಿ ಅವನನ್ನು ತಡೆಯಲೆತ್ನಿಸಿದೆ. ಆದರೆ ನನ್ನ ನಮ್ರತೆ ಅವನ ಹೊಗಳುವಿಕೆಯನ್ನು ಇನ್ನೂ ಹೆಚ್ಚಿಸಿತು. ನಾನು ಈ ಜನರ ಸಂಗೀತಕ್ಕೆ ಹೇಗೆ ನನ್ನ ಕಿವಿಗಳನ್ನು ಒಗ್ಗಿಸಿಕೊಂಡೆನೊ ಹಾಗೆ ಅವನ ಹೊಗಳಿಕೆಗೂ ಒಗ್ಗಿಸಿಕೊಂಡೆ.

ಈ ಸಂದರ್ಭದಲ್ಲಿ ಇವರ ವೈಶಿಷ್ಟ್ಯವನ್ನು ಎತ್ತಿತೋರಿಸುವ ಒಂದು ದಂತಕಥೆ ಹೇಳಬೇಕೆನಿಸುತ್ತದೆ. ಒಬ್ಬ ಬ್ರಾಹ್ಮಣ ಪಂಡಿತನನ್ನು ನನ್ನ ಹಿತೈಷಿಯಾದ ಆಗಾನ ಸೇವೆಗೆ ಸೇರಿಸಿದೆ. ಪ್ರಶಂಸೆಮಾಡದಿದ್ದರೆ ಅವನು ತಿಂದ ಅನ್ನ ಅರಗುತ್ತಿರಲಿಲ್ಲ. ಅವನು ಆಗಾನನ್ನು ಪ್ರಪಂಚದ ಪ್ರಚಂಡ ವೀರರಿಗೆ ಹೋಲಿಸಿ, ಇಂದ್ರ ಚಂದ್ರನೆಂದು ಹೊಗಳಿ, ಕೊನೆಗೆ 'ಓ ದೊರೆಯೆ, ನೀವು ನಿಮ್ಮ ಕಾಲುಗಳನ್ನು ರಿಕಾಪಿನಲ್ಲಿಟ್ಟು ಮುನ್ನಡೆದರೆ ಭೂಮಿ ನಡುಗುವುದು ; ಅದನ್ನು ಹೊತ್ತಿರುವ ಅಷ್ಟ ದಿಗ್ಗಜಗಳು ತತ್ತರಿಸುವುವು!' ಎಂದನು. ಇದನ್ನು ಕೇಳಿ ಆಗಬೇಕಾದ ಪರಿಣಾಮ ಆಯಿತು. ನಾನು ನಗದೆ ಇರಲಾಗಲಿಲ್ಲ. ನನ್ನಂತೆ ನಕ್ಕ ಆಗಾನಿಗೆ ನಾನು ಹೇಳಿದೆ, 'ಕುದುರೆಯನ್ನೇರಿ ಭೂಕಂಪ ಉಂಟುಮಾಡಬೇಡಿ' ಎಂದು. ಹಿಂದು ಮುಂದು ನೋಡದೆ ಆತ, 'ಅಹುದು ಮಿತ್ರ, ಅದಕ್ಕೋಸ್ಕರವೆ ನಾನು ಹೆಚ್ಚಾಗಿ ಪಲಕಿ (ಪಲ್ಲಕ್ಕಿ) ಯಲ್ಲಿಯೇ ಆಡ್ಡಾಡುವುದು' ಎಂದು ಹೇಳಿದ.

ಮೇಲೆ ವರ್ಣಿಸಿದ ಆ ಅಮ್-ಕಾಸ್ ಭವನದಿಂದ 'ಗೋಸೆಲ್ ಕಾನೆ' (Gosel kanay =ಘುಸ್ಲ್ ಖಾನ) ಅಥವಾ ಸ್ನಾನದ ತೊಟ್ಟಿ ಎಂಬಲ್ಲಿಗೆ ಹೋಗಬಹುದು. ಅಲ್ಲಿ ಜನರ ಗಿಜಿಬಜಿ ಇಲ್ಲ. ಅದು ಅಮ್-ಕಾಸ್‌ನಷ್ಟು ವಿಶಾಲವಾಗಿಯೂ ಇಲ್ಲ. ಅಲ್ಲಿಗೆ ಹೋಗಲು ಕೆಲವರಿಗೆ ಮಾತ್ರ ಅವಕಾಶವುಂಟು. ಅಲ್ಲಿ ಎಲ್ಲ ರೀತಿಯ ಅಲಂಕಾರಗಳೂ ಉಂಟು. ಅಲ್ಲಿ ರಾಜ ಬಂದು ಪೀಠದಲ್ಲಿ ಕುಳಿತು, ಅಮೀರರುಗಳಿಂದ ಕೂಡಿ, ತನ್ನ

ಅಧಿಕಾರಿಗಳು ಒಪ್ಪಿಸುವ ವರದಿಗಳನ್ನು ಕೇಳುತ್ತಾನೆ ; ದೇಶದ ಆಗುಹೋಗುಗಳ ಬಗ್ಗೆ ವಿಚಾರಮಾಡುತ್ತಾನೆ. ಅಮೀರರು ಬೆಳಗ್ಗೆ ಅಮ್-ಕಾಸಿಗೆ ಬರದೆಹೋದರೆ ಯಾವ ಶಿಕ್ಷೆಗೆ ಗುರಿಯಾಗಬೇಕೊ, ಸಂಜೆ ಇಲ್ಲಿಗೆ ಬರದಿದ್ದರೆ ಅದೇ ತರಹ ಶಿಕ್ಷೆಗೆ ಗುರಿಯಾಗುತ್ತಾರೆ. ಈ ಹಾಜರಿಯಿಂದ ವಿನಾಯಿತಿ ಪಡೆದ ಘನವ್ಯಕ್ತಿಯೆಂದರೆ ನನ್ನ ಹಿತೈಷಿ ಆಗಾ ದನೇಷ್-ಮಂಡ್-ಖಾನ್ ಒಬ್ಬನೆ. ಆದರೆ ಆತನು ಸಹ ಕಾವಲು ನಿಲ್ಲುವ ದಿನಗಳಾದ ಬುಧವಾರಗಳು ಮಾತ್ರ ಬೇರೆ ಅಮೀರರುಗಳಂತೆ ಹಾಜರಿರುತ್ತಾನೆ.

ರಾಜನನ್ನು ದಿನಕ್ಕೆರಡು ಬಾರಿ ನೋಡುವ ಕ್ರಮ ಬಹಳ ಹಿಂದಿನಿಂದ ನಡೆದುಕೊಂಡುಬಂದದ್ದು. ಯಾವ ಅಮೀರನೂ ಈ ಬಗ್ಗೆ ಗೊಣಗಾಡುವಂತಿಲ್ಲ. ಏಕೆಂದರೆ, ರಾಜನೇ ತಪ್ಪದೆ ಹಾಜರಾಗುವಾಗ ಆಸ್ಥಾನಿಕರು ಬರುವುದಿಲ್ಲ ಎಂದರೆ ಆದೀತೆ ? ಬಹಳ ತುರ್ತು ಕೆಲಸವಿದ್ದರೆ, ಅಥವಾ ನಿಜವಾಗಿಯೂ ಸ್ವಸ್ಥವಿಲ್ಲದಿದ್ದರೆ ಮಾತ್ರ ರಾಜಸಭೆ ನಡೆಸುವುದಿಲ್ಲ. ಈ ಹಿಂದೆ ಔರಂಗಜೇಬನಿಗೆ ಸಖತ್ ಕಾಯಿಲೆಯಾಗಿದ್ದಾಗ, ಪರಿವಾರದವರು ಹೊತ್ತುಕೊಂಡುಬರುತ್ತಿದ್ದ ಅವನು ಎರಡು ಸಭೆಗಳಲ್ಲಿ ಒಂದಕ್ಕಾದರೂ ಹೋಗುತ್ತಿದ್ದ. ಇಪ್ಪತ್ತನಾಲ್ಕು ಗಂಟೆಗಳಲ್ಲಿ ಒಮ್ಮೆಯಾದರೂ ಜನಗಳ ಮುಂದೆ ಕಾಣಿಸಿಕೊಳ್ಳುವುದು ಅವಶ್ಯಕವೆಂದು ಆತ ಭಾವಿಸಿದ್ದ. ಆತನ ಆ ಸಖತ್ ಕಾಯಿಲೆಯಲ್ಲಿ ಜನ ಒಂದು ದಿನವಾದರೂ ಆತನನ್ನು ನೋಡದೆಹೋಗಿದ್ದರೆ ದೇಶಕ್ಕೆ ದೇಶವೇ ಅಲ್ಲೋಲ ಕಲ್ಲೋಲವಾಗಿಬಿಡುತ್ತಿತ್ತು ; ಮತ್ತು ಅಂಗಡಿ ಮುಂಗಟ್ಟುಗಳೆಲ್ಲ ಮುಚ್ಚಲ್ಪಡುತ್ತಿದ್ದುವು.

ಸಂಜೆ ಗೋಸೆಲ್-ಕಾನೆಯಲ್ಲಿ ರಾಜನು ಓಲಗ ನಡೆಸುವಾಗ ಒಂದು ವಿಚಿತ್ರ ಆಚರಣೆ ಜರಗುತ್ತದೆ. ಕಾವಲುಪಡೆಯಲ್ಲಿರುವ ಎಲ್ಲ ಮನ್ಸಬ್‌ದಾರರೂ ರಾಜನ ಮುಂದೆ ಕವಾಯತಿನಲ್ಲಿ ಹೋಗಿ ವಂದನೆ ಸಲ್ಲಿಸುತ್ತಾರಷ್ಟೆ. ಆಗ ಅವರು ತಮ್ಮ ಮುಂದೆ 'ಕೂರ್' (kour)ಗಳೆಂಬ ಭಾರಿ ಭಾರಿ ಬೆಳ್ಳಿ ಕೋಲುಗಳನ್ನೂ ಅಂದವಾಗಿ ಮಾಡಿದ ಬೆಳ್ಳಿ ವಿಗ್ರಹಗಳನ್ನೂ ಹಿಡಿದುಕೊಂಡು ಹೋಗುತ್ತಾರೆ. ಈ ವಿಗ್ರಹಗಳಲ್ಲಿ ಎರಡು ವಿಗ್ರಹಗಳು ಭಾರಿ ಮೀನುಗಳಂತೆಯೂ, ಇನ್ನೆರಡು 'ಇದೇಹ' (Eiedeha= Azhdaha : dragon)ಎಂಬ ಭಯಂಕರ ಪ್ರಾಣಿಗಳಂತೆಯೂ, ಉಳಿದವುಗಳಲ್ಲಿ ಕೆಲವು ಜೋಡಿ ಸಿಂಹಗಳಂತೆಯೂ, ಜೋಡಿ ಕೈಗಳಂತೆಯೂ (ಅಂದರೆ 'ಪಂಜ'ಗಳಂತೆಯೂ) ಮತ್ತಿತರ ವಿಚಿತ್ರ ಆಕೃತಿಗಳಂತೆಯೂ ಇವೆ. ಈ ಕೂರ್‌ಗಳು ಮತ್ತು ಮನ್ಸಬ್‌ದಾರರುಗಳ ಮಧ್ಯೆ ಅಲ್ಲಲ್ಲಿ 'ಗೌರ್ಜ್ ಬೆರ್ದಾರ'ರು ಸೇರಿಕೊಂಡಿರುತ್ತಾರೆ. ಎತ್ತರವಾಗಿಯೂ ಲಕ್ಷಣವಾಗಿಯೂ ಇರುವ ಈ ಗದಾಧಾರಿಗಳ ಕೆಲಸವೆಂದರೆ, ಸಭೆಗಳಲ್ಲಿ ಶಿಸ್ತನ್ನು ಪಾಲಿಸುವುದು ಮತ್ತು ರಾಜನ ಆಜ್ಞೆಯನ್ನು ಶಿರಸಾವಹಿಸಿ ತ್ವರಿತವಾಗಿ ನಡೆಸುವುದು.

ಮೇಲೆ ಹೇಳಿದ ಕೋಟೆಯೊಳಗಣ ಭಾಗಗಳನ್ನು ತೋರಿಸಿದ ಮೇಲೆ ಈಗ

ನಿಮ್ಮನ್ನು ಒಳಗಡೆಯ ರಾಣಿಮಹಲಿನೊಳಕ್ಕೆ (Seraglio)ಕರೆದೊಯ್ಯಲು ನನಗೆ ಸಂತೋಷವೆನಿಸುತ್ತದೆ. ಅರಮನೆಯ ಒಳಭಾಗವನ್ನು ಕೇವಲ ಕಣ್ಣುಗಳಿಂದ ನೋಡಿ ವರ್ಣಿಸಲು ಯಾವ ಪ್ರವಾಸಿಯಿಂದ ಸಾಧ್ಯ ! ರಾಜ ದಿಲ್ಲಿಯಲ್ಲಿ ಇಲ್ಲದಾಗ ನಾನು ಹಲವು ವೇಳೆ ಅದರೊಳಕ್ಕೆ ಹೋಗಿಬಂದಿದ್ದೇನೆ. ಒಮ್ಮೆ, ಅಂತಃಪುರದ ಹಿರಿಯ ಮಹಿಳೆಯೊಬ್ಬಳಿಗೆ ವಿಪರೀತ ಕಾಯಿಲೆಯಾದಾಗ ಆಕೆಗೆ ಔಷಧಿ ಕೊಡಲು ಮಹಲಿನ ತೀರಾ ಒಳಗಡೆಗೆ ಹೋಗಿದ್ದೆ. ಕಾಯಿಲೆಬಿದ್ದವರನ್ನು ಹೊರಬಾಗಿಲಿನ ಬಳಿಗೆ ಕರೆದು ತಂದು ತೋರಿಸುವುದು ಪದ್ಧತಿ. ಆದರೆ ಈ ಸ್ತ್ರೀಯ ಕಾಯಿಲೆಯ ಬಗ್ಗೆ ಅದು ಸಾಧ್ಯವಾಗದೆ, ನನ್ನನ್ನೇ ಒಳಕ್ಕೆ ಕರೆದುಕೊಂಡುಹೋಗಿದ್ದರು. ಹಾಗೆ ಹೋಗುವಾಗ ಇಲ್ಲಿಯ ಪದ್ಧತಿಗನುಸಾರ ಮೈತುಂಬಾ ಕಾಶ್ಮೀರಿ ಶಾಲು ಹೊದ್ದುಕೊಂಡು ಒಬ್ಬ ಖೋಜಾನ ಕೈ ಹಿಡಿದು ಕುರುಡನಂತೆ ಹೋದೆ. ಮಹಲಿನೊಳಗೆ ಬಹು ಅಂದವಾದ ಕೋಣೆಗಳಿವೆಯೆಂದು ಹೇಳಿದರು. ಈ ಕೋಣೆಗಳು ಸ್ತ್ರೀಯರ ಅಂತಸ್ತಿಗೆ ತಕ್ಕಂತೆ ವಿಶಾಲವಾಗಿಯೂ ಭವ್ಯವಾಗಿಯೂ ಇವೆಯಂತೆ. ಪ್ರತಿ ಕೋಣೆಯ ಬಾಗಿಲಿನ ಬಳಿ ಹರಿಯುವ ನೀರಿನ ಕಾಲುವೆಗಳಿವೆ. ಎತ್ತ ತಿರುಗಿದರೆ ಅತ್ತ ತೋಟಗಳು, ಸೊಗಸಾದ ಕಿರುದಾರಿಗಳು, ನೆರಳಿನ ತಾಣಗಳು, ಹರಿಯುವ ಝರಿಗಳು, ನೀರಿನ ಚಿಲುಮೆಗಳು ಹಗಲಿನ ಬಿಸಿಲಿನ ತಾಪದಿಂದ ಪಾರಾಗಲು ತಂಪಾದ ಗುಹೆಗಳು, ಎತ್ತರದ ವೇದಿಕೆಗಳು ಮತ್ತು ರಾತ್ರಿ ಹೊತ್ತು ಮಲಗಲು ಮಾಡುಗಳು—ಇವುಗಳನ್ನು ಕಾಣಬಹುದು. ಈ ಮನಮೋಹಕ ಮಹಲಿನಲ್ಲಿ ಸೆಕೆ ಇಲ್ಲ. ಪುಟ್ಟದಾದ ಒಂದು ಮಹಲನ್ನು ಬಹಳ ಹೊಗಳುತ್ತಾರೆ ಖೋಜಾಗಳು. ಅದು ನದಿಗೆ ಎದುರಾಗಿದೆಯಂತೆ. ಆಗ್ರಾದ ಎರಡು ಮಿನಾರತ್ತುಗಳಿಗೆ ಹೊದಿಸಿರುವಂತೆ ಆದರ ಗೋಡೆಗಳಿಗೆ ಚಿನ್ನದ ತಗಡು ಹೊದಿಸಿದ್ದಾರಂತೆ. ಮಹಲಿನಲ್ಲಿರುವ ಕೋಣೆಗಳ ಗೋಡೆಗಳನ್ನು ಚಿತ್ರಗಳಿಂದಲೂ ಭಾರಿ ಭಾರಿ ಕನ್ನಡಿಗಳಿಂದಲೂ ಬಹು ಸೊಗಸಾಗಿ ಅಲಂಕಾರಮಾಡಿರುವರಂತೆ.[1]

ಕೋಟೆಯ ವರ್ಣನೆ ಮುಗಿಸುವುದಕ್ಕೆ ಮುಂಚೆ ಅಮ್-ಕಾಸಿನ ಬಗ್ಗೆ ಮತ್ತೆ ಒಂದೆರಡು ಮಾತು ಹೇಳಬಯಸುತ್ತೇನೆ. ಅದನ್ನು ಕೆಲವು ವಿಶೇಷ ದಿನಗಳಲ್ಲಿ, ಅದರಲ್ಲಿಯೂ ಯುದ್ಧ ಮುಗಿದ ಮೇಲೆ ವಿಜಯೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ, ನೋಡಿದಾಗ ನನಗೆ ಹೇಗೆ ಕಂಡಿತು ಎಂಬುದನ್ನು ತಿಳಿಸುತ್ತೇನೆ. ಆಗ್ಗೆ ಅಲ್ಲಿ ನೋಡಿದ ವೈಭವವನ್ನು ಮತ್ತೊಮ್ಮೆ ನನ್ನ ಕಣ್ಣುಗಳು ನೋಡಲಾಗಲಿಲ್ಲ.

ರಾಜನು ಭವ್ಯವಾದ ಉಡುಪು ಧರಿಸಿ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಾನೆ. ಆತನ ನಡುವಂಗಿ ಬಿಳಿಯ ಸ್ಯಾಟಿನ್ ರೇಷ್ಮೆಯದು. ಅದಕ್ಕೆ ಬಹು ಸೂಕ್ಷ್ಮವಾದ ಹಾಗೂ ಸೊಗಸಾದ ಕಸೂತಿ. ತಲೆಯ ಮೇಲೆ ಚಿನ್ನದ ಜರತಾರಿ ರುಮಾಲು. ಈ

---

[1]ಇದೇ ಪ್ರಸಿದ್ಧವಾದ ಖಾಸ್ ಮಹಲ್

ರುಮಾಲಿನಲ್ಲಿ ಒಂದು 'ಶಿರ್‌ಪೇಷ್' ತುರಾಯಿ. ತುರಾಯಿಯ ಬುಡದಲ್ಲಿ ಬಹು ಬೆಲೆ ಬಾಳುವ ಭಾರಿ ಭಾರಿ ವಜ್ರಗಳು. ಅವುಗಳ ಜೊತೆಗೆ ಒಂದು ಗೋಮೇಧಿಕ. ಇದನ್ನು ಮೀರಿಸುವ ರತ್ನ ಯಾವುದೂ ಇಲ್ಲ. ಅದು ಸೂರ್ಯನಂತೆ ಥಳಥಳಿಸುತ್ತದೆ. ತೋರ ಮುತ್ತುಗಳ ಹಾರವೊಂದು ಕೊರಳಿನಿಂದ ನಾಭಿಯವರೆಗೆ ರಾರಾಜಿಸುತ್ತದೆ. ಜೆಂಟೈಲರು[1] ತಮ್ಮ ಜಪಸರವನ್ನು ಹಾಕಿಕೊಂಡಂತೆ ಅದು ಕಾಣುತ್ತದೆ. ಸಿಂಹಾಸನಕ್ಕೆ ಆರು ಭಾರಿ ಕಾಲುಗಳು. ಅವನ್ನು ಪೂರ್ತಾ ಚಿನ್ನದಿಂದಲೇ ಮಾಡಿದ್ದಾರೆಂದು ಹೇಳಿದರು. ಈ ಚಿನ್ನದ ಕಾಲುಗಳಿಗೆ ಅಲ್ಲಲ್ಲಿ ನವರತ್ನಗಳ ಜೋಡಣೆ. ಇಡೀ ಸಿಂಹಾಸನಕ್ಕೆ ಉಪಯೋಗಿಸಿರುವ ವಜ್ರ ವೈಡೂರ್ಯಗಳ ಸಂಖ್ಯೆಯನ್ನಾಗಲಿ ಬೆಲೆಯನ್ನಾಗಲಿ ಹೇಳಲಾರೆ. ಏಕೆಂದರೆ, ಯಾರೂ ಅದರ ಸಮೀಪಕ್ಕೆ ಹೋಗಿ ಅವುಗಳನ್ನು ಪರೀಕ್ಷೆ ಮಾಡುವಂತಿಲ್ಲ. ಇಷ್ಟು ಹೇಳಬಹುದು: ಸಮಸ್ತ ವಜ್ರವೈಡೂರ್ಯಗಳ ರಾಶಿಯೇ ಅಲ್ಲಿ ಸೇರಿರುತ್ತದೆ ಎಂದು. ನನಗೆ ಜ್ಞಾಪಕವಿರುವಂತೆ ಸಿಂಹಾಸನದ ಬೆಲೆ ನಾಲ್ಕು ಕೋಟಿ ರೂಪಾಯಿಗಳು. ಒಂದು ಕೋಟಿ ಎಂದರೆ ನೂರು ಲಕ್ಷಗಳೆಂಬುದನ್ನೂ, ಒಂದು ಲಕ್ಷ ಎಂದರೆ ನೂರು ಸಾವಿರಗಳೆಂಬುದನ್ನೂ ಮರೆಯಬೇಡಿ. ಅಂದರೆ, ಸಿಂಹಾಸನದ ಬೆಲೆ ನಲವತ್ತು ಮಿಲಿಯ ರೂಪಾಯಿಗಳು ಅಥವಾ ಹೆಚ್ಚುಕಮ್ಮಿ ಅರವತ್ತು ಮಿಲಿಯ ಪೌಂಡುಗಳು (ಲೀವ್ರ್‌ಗಳು).[2] ಈ ಸಿಂಹಾಸನದ ನಿರ್ಮಾಣಕ್ಕೆ ಕಾರಣನಾದವನು ಔರಂಗಜೇಬನ ತಂದೆ ಷಾಜಹಾನ. ಆತ ಬಹಳ ಹಿಂದಿನಿಂದ ರಾಜರೂ ಪಠಾಣರೂ ಕೊಡಿಟ್ಟ ಹೇರಳವಾದ ವಜ್ರವೈಡೂರ್ಯಗಳನ್ನೂ ವರ್ಷೆ ವರ್ಷೆ ಅಮೀರರು ಚಕ್ರವರ್ತಿಗೆ ಒಪ್ಪಿಸುವ ಬೆಲೆಬಾಳುವ ನಜರುಗಳನ್ನೂ ಉಪಯೋಗಿಸಿ ಈ ಸಿಂಹಾಸನವನ್ನು ಮಾಡಿಸಿದನು. ಆದರೆ ಇಷ್ಟೊಂದು ಬೆಲೆಯಾದ ವಜ್ರವೈಡೂರ್ಯಗಳನ್ನು ಉಪಯೋಗಿಸಿ ಶ್ರಮವಹಿಸಿ ತಯಾರಿಸಿರುವುದಾದರೂ ಸಿಂಹಾಸದ ರಚನೆ ಅಷ್ಟೇನೂ ಚೆನ್ನಾಗಿಲ್ಲ. ಆದರೂ ಎರಡು ನವಿಲುಗಳ ರಚನೆ ಮತ್ತು ಅವುಗಳಿಗೆ ಮಾಡಿರುವ ಮುತ್ತುರತ್ನಗಳ ಅಲಂಕಾರ ಮೆಚ್ಚತಕ್ಕದ್ದೇ ಸರಿ. ಇವುಗಳನ್ನು ಫ್ರೆಂಚ್ ದೇಶದವನೊಬ್ಬ ಮಾಡಿದನು[3]. ಆತ ಬಹಳ ಬುದ್ಧಿವಂತ. ಯುರೋಪಿನ

---

[1]ಬೆರ್ನ್ಯೇ ಹಿಂದುಗಳನ್ನು "ಜೆಂಟೈಲರು" ಅಥವಾ ಕ್ರಿಸ್ತನನ್ನು ನಂಬದವರು ಎಂದು ಕರೆದಿದ್ದಾನೆ. Gentile : A heathen or pagon.

[2]ಒಂದು ರೂಪಾಯಿಗೆ ಆಗಿನ ಲೆಕ್ಕಾಚಾರದಂತೆ ೨ ಷಿಲ್ಲಿಂಗ್ ೩ ಪೆನ್ನಿ. ಹಾಗಾದರೆ ಸಿಂಹಾಸನದ ಬೆಲೆ ೪೫ ಲಕ್ಷ ಪೌಂಡುಗಳಷ್ಟಾಯಿತು. ಆದರೆ ರತ್ನಪಡಿ ವ್ಯಾಪಾರಿಯಾದ ತೆವರ್ನ್ಯೇ ಇದರ ಬೆಲೆ ಸರಿಯಾಗಿ ಲೆಕ್ಕಹಾಕಿ ಒಂದು ಕೋಟಿ ಇಪ್ಪತ್ತು ಲಕ್ಷ ಪೌಂಡುಗಳೆಂದು ಹೇಳಿದ್ದಾನೆ.

[3]ಈ ಫ್ರೆಂಚ್ ದೇಶದವನ ಹೆಸರನ್ನು ಬೆರ್ನ್ಯೇ ಇಲ್ಲಿ ಹೇಳದಿದ್ದರೂ, ಕಲ್ಕತ್ತೆಯಲ್ಲಿ ೧೮೨೬ರಲ್ಲಿ ಸ್ಟೂವರ್ಟ್ ಎಂಬುವನು ಪ್ರಕಟಿಸಿದ ಬೆರ್ನ್ಯೇ ಪ್ರವಾಸಕಥನದಲ್ಲಿ ಆತನ ಹೆಸರನ್ನು ಲ ಗ್ರಾಂಜ್ (La Grange) ಎಂದು ತಿಳಿಸುತ್ತಾನೆ.

ಹಲವಾರು ರಾಜರುಗಳಿಗೆ ಖೋಟಾ ರತ್ನಗಳನ್ನು ಮಾರಿ ಟೋಪಿ ಹಾಕಿ, ಕೊನೆಗೆ ಮೊಗಲ್ ಆಸ್ಥಾನ ಸೇರಿ ಅಲ್ಲಿ ಅಪಾರ ಹಣ ಸಂಪಾದಿಸಿದ. ಖೋಟಾ ರತ್ನಗಳನ್ನು ಅವನೇ ತಯಾರಿಸುತ್ತಿದ್ದನಂತೆ.

ರಾಜನು ಕುಳಿತ ಸಿಂಹಾಸನದ ವೇದಿಕೆಯ ತಳಭಾಗದಲ್ಲಿ ಅಮೀರರುಗಳು ತಮ್ಮ ದಿವ್ಯವಾದ ಉಡುಪುಗಳಲ್ಲಿ ನೆರೆದಿದ್ದರು. ಅವಮ್–ಕಾಸಿನ ಕಂಬಗಳ ಸುತ್ತ ಕಿಂಕಾಪಿನ ಬಟ್ಟೆ ಇಳಿಯಬಿಟ್ಟಿದ್ದರು. ಹೂವು ಹಾಕಿದ ಸ್ಯಾಟಿನ್‌ಬಟ್ಟೆಯ ಮೇಲ್ಕಟ್ಟು ಇಡೀ ಸಭಾಂಗಣವನ್ನು ಆವರಿಸಿತ್ತು. ಈ ಮೇಲ್ಕಟ್ಟನ್ನು ಕೆಂಪು ರೇಷ್ಮೆದಾರಗಳಿಂದ ಕಟ್ಟಿದ್ದರು. ಈ ದಾರಗಳಿಂದ ದೊಡ್ಡದೊಡ್ಡ ರೇಷ್ಮೆ ಮತ್ತು ಜರತಾರಿ ಗೊಂಡೆಗಳನ್ನು, ಅಂದರೆ ಕುಚ್ಚುಗಳನ್ನು, ಇಳಿಯಬಿಟ್ಟಿದ್ದರು. ಇಡೀ ನೆಲಕ್ಕೆ ಬಹು ದೊಡ್ಡದಾದ ಮತ್ತು ಬಹು ಬೆಲೆಯಾದ ರೇಷ್ಮೆ ಜಮಖಾನಗಳನ್ನು ಹಾಸಿದ್ದರು. ಹೊರಗಡೆ 'ಅಸ್ಪೆಕ್' (aspek) ಎಂದು ಕರೆಯಲಾದ ಗುಡಾರ ಹಾಕಿದ್ದರು. ಅದು ಹಜಾರಕ್ಕಿಂತಲೂ ದೊಡ್ಡದಾಗಿದ್ದು, ಅದಕ್ಕೆ ಹೊಂದಿಕೊಂಡು ಪಠಾರದ ಅರ್ಧಭಾಗವನ್ನು ಆವರಿಸಿತ್ತು. ಸುತ್ತ ದೊಡ್ಡದಾದ ಕಟಾಂಜನ (balus trade) ಇತ್ತು. ಇದಕ್ಕೆ ಬೆಳ್ಳಿಯ ತಗಡು ಹೊದಿಸಿದ್ದರು. ಕಟಾಂಜನಕ್ಕೆ ಆಧಾರವಾಗಿ ಬೆಳ್ಳಿಯ ಕಂಬಗಳಿದ್ದುವು. ಈ ಕಂಬಗಳು ಮೂರು ಹಡಗಿನ ಪಟಸ್ತಂಭದಷ್ಟು ಎತ್ತರವಾಗಿಯೂ ದಪ್ಪವಾಗಿಯೂ ಇದ್ದುವು. ಉಳಿದವು ಅವಕ್ಕಿಂತ ಸಣ್ಣವಾಗಿದ್ದುವು. ಈ ಭವ್ಯವಾದ ಗುಡಾರದ ಹೊರಭಾಗ ಕೆಂಪಗಿತ್ತು. ಒಳಭಾಗಕ್ಕೆ ಮಸುಲಿಪಟ್ಟದ ಚೀಟಿಬಟ್ಟೆಯನ್ನು ಹೊಲೆದಿದ್ದರು. ಅಲ್ಲಲ್ಲಿ ಚಂದಕ್ಕೆ ತಕ್ಕಂತಹ ಹೂವುಗಳನ್ನು ಹಾಗೂ ಬಣ್ಣಗಳನ್ನು ಆ ಬಟ್ಟೆಗೆ ಹಾಕಲಾಗಿತ್ತು. ಕಸೂತಿಯ ಈ ಹೂವುಗಳು ನಿಜವಾದ ಹೂವುಗಳೋ ಎಂಬಂತೆ ಕಾಣುತ್ತಿದ್ದುವು. ಇಡೀ ಗುಡಾರ ಪುಷ್ಪವಾಟಿಕೆಯಂತೆ ಕಂಗೊಳಿಸುತ್ತಿತ್ತು.

ಹಜಾರದ ಸುತ್ತ ಇದ್ದ ಮೊಗಸಾಲೆಗಳ ಮತ್ತು ಕಮಾನುದಾರಿಗಳ (arcade galleries) ಬಗ್ಗೆ ಹೇಳಬೇಕೆಂದರೆ, ಒಂದೊಂದು ಮೊಗಸಾಲೆಯ ಹಾಗೂ ಕಮಾನು ದಾರಿಯ ಅಲಂಕಾರವನ್ನು ಒಬ್ಬೊಬ್ಬ ಅಮೀರನಿಗೆ ವಹಿಸಲಾಗಿತ್ತು. ಅವುಗಳನ್ನು ಚಕ್ರವರ್ತಿಗೆ ಮೆಚ್ಚಿಗೆಯಾಗುವ ರೀತಿಯಲ್ಲಿ ಅಲಂಕಾರಮಾಡಬೇಕಾಗಿತ್ತು. ಹೀಗಾಗಿ, ಎಲ್ಲ ಕಮಾನುದಾರಿಗಳನ್ನು ಹಾಗೂ ಮೊಗಸಾಲೆಗಳನ್ನು ಮೇಲಿನಿಂದ ಕೆಳಗಿನವರೆಗೆ ಕಿಂಕಾಪುವಸ್ತ್ರದಲ್ಲಿ ಮುಚ್ಚಲಾಗಿತ್ತು ; ನೆಲಕ್ಕೆ ರತ್ನಗಂಬಳಿಗಳನ್ನು ಹಾಸಲಾಗಿತ್ತು.

ಹಬ್ಬದ ಮೂರನೇ ದಿನ ಚಕ್ರವರ್ತಿಯನ್ನೂ ಆಮೇಲೆ ಅಮೀರರುಗಳನ್ನೂ, ಶಾಸ್ತ್ರೋಕ್ತವಾಗಿ ದೊಡ್ಡದೊಡ್ಡ ಚಿಂತಾಲುಗಳಲ್ಲಿ ತೂಕಮಾಡಿದರು. ಚಿಂತಾಲುಗಳೂ ತೂಕದ ಬಟ್ಟುಗಳೂ ಅಪ್ಪಟ ಚಿನ್ನದವುಗಳೆಂದು ಹೇಳಿದರು. ಹಿಂದಿನ ವರ್ಷಕ್ಕಿಂತ ಈ ವರ್ಷ ಔರಂಗಜೇಬನ ತೂಕ ಎರಡು ಪೌಂಡ್‌ಗಳಷ್ಟು ಹೆಚ್ಚಾಗಿತ್ತಂತೆ. ಇದನ್ನು ಕೇಳಿ ಆಸ್ಥಾನಿಕರೆಲ್ಲ ಬಹಳ ಸಂತೋಷಪಟ್ಟರೆಂಬುದು ನನಗೆ ಜ್ಞಾಪಕವಿದೆ.

ಈ ರೀತಿಯ ಉತ್ಸವಗಳನ್ನು ಪ್ರತಿ ವರ್ಷ ಆಚರಿಸುತ್ತಾರೆ. ಆದರೆ, ಇಷ್ಟೊಂದು ಅದ್ದೂರಿಯಾಗಿ ಹಾಗೂ ವೈಭವವಾಗಿ ಹಿಂದೆ ಯಾವಾಗಲೂ ನಡೆಯಲಿಲ್ಲ. ಈ ನಾಲ್ಕೈದು ವರ್ಷಗಳ ಯುದ್ಧದಿಂದ ವರ್ತಕರ ಬಳಿ ಮಾರಾಟವಾಗದೆ ಉಳಿದಿದ್ದ ಹೇರಳವಾದ ಕಿಂಕಾಪು ಬಟ್ಟೆಗಳು ಖರ್ಚಾಗಲಿ ಎಂದು ಚಕ್ರವರ್ತಿ ಉದ್ದೇಶಪಟ್ಟಿದ್ದು ಈ ರೀತಿಯ ವೈಭವಕ್ಕೆ ಮುಖ್ಯ ಕಾರಣ. ಉತ್ಸವದಲ್ಲಿ ಅಮೀರರುಗಳಿಗಾದ ಖರ್ಚು ಅಪಾರ. ಆದರೆ ಈ ಖರ್ಚಿನಲ್ಲಿ ಒಂದು ಭಾಗ ಸಾಮಾನ್ಯ ರಾಹುತರ ಮೇಲೆ ಬೀಳುತ್ತದೆ. ಏಕೆಂದರೆ, ಅಮೀರರು ಕೊಂಡುಕೊಂಡ ಕಿಂಕಾಪು ಬಟ್ಟೆಗಳನ್ನು ಆಮೇಲೆ ಆ ರಾವುತರು ಪಡೆ ಅವುಗಳಿಂದ ನಡುವಂಗಿಗಳನ್ನು ಹೊಲೆಸಿಕೊಳ್ಳಬೇಕು.

ಈ ವಾರ್ಷಿಕ ಉತ್ಸವದ ದಿನಗಳಲ್ಲಿ ಅಮೀರರಿಗೆ ತೀರಾ ಒಗ್ಗದ ಒಂದು ಪುರಾತನ ಪದ್ಧತಿ ಜರುಗುತ್ತದೆ. ಅದೇನೆಂದರೆ, ಈ ಅಮೀರರು ಅವರ ಆದಾಯಕ್ಕೆ ತಕ್ಕಂತಹ ನಜರನ್ನು ರಾಜನಿಗೆ ಒಪ್ಪಿಸುವುದು.[1] ಈ ಸಂದರ್ಭವನ್ನುಪಯೋಗಿಸಿಕೊಂಡು ಕೆಲವರು ರಾಜನ ಮರ್ಜಿ ಸಂಪಾದಿಸುವುದಕ್ಕೂ, ತಾವು ಮಾಡಿದ ತಪ್ಪುಗಳ ವಿಚಾರಣೆ ನಡೆಯು ವುದನ್ನು ತಪ್ಪಿಸಿಕೊಳ್ಳುವುದಕ್ಕೂ, ಮತ್ತೆ ಕೆಲವರು ತಮ್ಮ ಶ್ರೀಮಂತಿಕೆಯ ಪ್ರದರ್ಶ ನಕ್ಕೂ ಬಹು ಬೆಲೆಯಾದ ನಜರುಗಳನ್ನು ಒಪ್ಪಿಸುತ್ತಾರೆ. ಇನ್ನು ಕೆಲವರು ಮುತ್ತು ರತ್ನಗಳನ್ನೂ, ರತ್ನಖಚಿತ ಚಿನ್ನದ ಪಾತ್ರೆಗಳನ್ನೂ, ಒಂದೂವರೆ ಪಿಸ್ತೋಲ್ ಮೌಲ್ಯ ವುಳ್ಳ ನಾಣ್ಯಗಳನ್ನೂ ಒಪ್ಪಿಸುತ್ತಾರೆ.[2]

ಇಂಥ ಒಂದು ಹಬ್ಬದ ಸಮಯದಲ್ಲಿ ಔರಂಗಜೇಬ ತನ್ನ ವಜೀರನಾದ ಜಫರ ಖಾನನ[3] ಮನೆಗೆ ಹೋಗಿ ಬಂದನು. ಜಫರ್‌ಖಾನ ಒಂದು ಹೊಸಮನೆ ಕಟ್ಟಿಸಿದ್ದ. ಅದನ್ನು ನೋಡಲು ಆತನ ನೆಂಟನಾಗಿ ಔರಂಗಜೇಬ ಹೋಗಿದ್ದ. ಆಗ ಜಫರ್‌ಖಾನ ಒಂದು ಲಕ್ಷ ಕ್ರೌನುಗಳಷ್ಟು ಬೆಲೆಯ ಚಿನ್ನದ ಮೊಹರ್‌ಗಳನ್ನೂ, ಅಮೂಲ್ಯವಾದ ಮುತ್ತುಗಳನ್ನೂ ನಲವತ್ತು ಸಾವಿರ ಕ್ರೌನುಗಳಷ್ಟು ಬೆಲೆಯ ಒಂದು ಮಾಣಿಕ್ಯ ವನ್ನೂ ಅರ್ಪಿಸಿದನು. ರತ್ನ ಪರೀಕ್ಷೆಯಲ್ಲಿ ಪ್ರವೀಣನಾದ ಷಾಜಹಾನ ಈ ಮಾಣಿಕ್ಯದ ಬೆಲೆ ಐನೂರು ಕ್ರೌನ್‌ಗಳಿಗಿಂತ ಹೆಚ್ಚಿಲ್ಲವೆಂದು ಹೇಳಿಬಿಟ್ಟನಂತೆ. ಆಗ ಅದಕ್ಕೆ ಭಾರಿ ಬೆಲೆ ಕಟ್ಟಿದ್ದ ರತ್ನಪಡಿ ವ್ಯಾಪಾರಿಗಳೆಲ್ಲ ತಬ್ಬಿಬ್ಬಾಗಿಬಿಟ್ಟರು. ಅವರೆಲ್ಲ ಈ ವಿಚಾರದಲ್ಲಿ ಮೋಸಹೋಗಿದ್ದರು.

---

[1] ಈ ಕಾಣಿಕೆಯನ್ನು ಪೇಷ್–ಕಾಷ್' ಎಂದು ಕರೆಯುತ್ತಿದ್ದರು.

[2] ಒಂದು, ಪಿಸ್ತೂಲಿಗೆ ಆಗ 16ಷಿ. 9 ಪೆ.

[3] ಜಫರ್–ಖಾನ್ ಅಥವಾ ಜಫರ್‌ಖಾನ್ : ಈತನಿಗೆ ಉಮ್ದತ್–ಉಲ್–ಮುಲ್ಕ್ ಎಂಬ ಬಿರುದಿತ್ತು. ಈತ ಔರಂಗಜೇಬನ ಮುಖ್ಯಮಂತ್ರಿಯಾಗಿ ೧೬೬೩ರಲ್ಲಿ ನೇಮಿಸಲ್ಪಟ್ಟು ೧೬೭೦ರಲ್ಲಿ ಮೃತನಾಗುವವರೆಗೆ ಅದೇ ಹುದ್ದೆಯಲ್ಲಿದ್ದ.

ಮೇಲೆ ಹೇಳಿದ ಹಬ್ಬ ಮುಂತಾದ ಸಂದರ್ಭಗಳಲ್ಲಿ ಕೆಲವು ವೇಳೆ ಅರಮನೆಯಲ್ಲಿ, ಅಂದರೆ 'ಮಹಲ್'ನಲ್ಲಿ, ಒಂದು ರೀತಿಯ ವಿಚಿತ್ರ ಜಾತ್ರೆ (ಪರಿಷೆ) ನಡೆಯುತ್ತದೆ. ಬಹು ರೂಪವತಿಯರಾದ ಅಮೀರರ ಮತ್ತು ಮನ್ಸಬ್‌ದಾರರುಗಳ ಪತ್ನಿಯರು ಇದನ್ನು ವೈಭವದಿಂದ ನಡೆಸುತ್ತಾರೆ. ಈ ಪರಿಷೆಯಲ್ಲಿ ವ್ಯಾಪಾರಕ್ಕಾಗಿ ಅಂದಚಂದದ ಕಿಂಕಾಪು ಬಟ್ಟೆಗಳು, ಹೊಸ ಹೊಸ ರೀತಿಯಲ್ಲಿ ಹಾಕಿದ ಬಹು ಬೆಲೆ ಬಾಳುವ ಕಸೂತಿ ಬಟ್ಟೆಗಳು, ಚಿನ್ನದ ಜರತಾರಿ ಬಟ್ಟೆಯಲ್ಲಿ ನವುರಾಗಿ ತಯಾರಿಸಿದ ರುಮಾಲುಗಳು, ಶ್ರೀಮಂತ ಮಹಿಳೆಯರು ಧರಿಸುವ ತೆಳುವಾದ ಮಸ್ಲಿನ್ ಬಟ್ಟೆಗಳು ಮತ್ತು ಹೆಚ್ಚಿನ ಬೆಲೆಯ ಇನ್ನಿತರ ಮಾಲುಗಳು—ಇವನ್ನೆಲ್ಲ ಮಾರಾಟಕ್ಕೆ ಇಡುತ್ತಾರೆ. ಆ ಮನಮೋಹಿನಿಯರು ಮಾರಾಟಕ್ಕೆ ನಿಲ್ಲುತ್ತಾರೆ. ಕೊಂಡುಕೊಳ್ಳುವವರು ಯಾರೆಂದರೆ ಚಕ್ರವರ್ತಿ, ಅವನ ಬೇಗಮುರುಗಳು ಮತ್ತು ಮಹಲಿನ ಇನ್ನಿತರ ಗಣ್ಯ ಮಹಿಳೆಯರು. ಯಾರಾದರೂ ಒಬ್ಬ ಅಮೀರನಿಗೆ ಮಗಳೊಬ್ಬಳಿದ್ದರೆ ಅವಳು ತಾಯಿಯ ಜೊತೆ ಬರದೆಹೋಗುವುದಿಲ್ಲ. ಅಂದಗಾತಿಯಾದ ಆಕೆ ಚಕ್ರವರ್ತಿಯ ಕಣ್ಣಿಗೆ ಬೀಳಬೇಕು ಮತ್ತು, ಬೇಗಮುರು ಅವಳ ವಿಚಾರ ತಿಳಿದುಕೊಳ್ಳಬೇಕು ಎಂಬುದೇ ಅದರ ಉದ್ದೇಶ. ಈ ಪರಿಷೆಯ ಸೊಗಸು ಏನೆಂದರೆ, ಚಕ್ರವರ್ತಿ ವ್ಯಾಪಾರಮಾಡುವಾಗ ಒಂದೊಂದು ಕಾಸಿಗೂ ಚೌಕಾಸಿ ಮಾಡುವ ತೋರಿಕೆಯ ಪರಿಹಾಸ್ಯ. ಮಾರಾಟಮಾಡುತ್ತಿರುವ ಹೆಂಗಸು ಹೇಳಿದ ಬೆಲೆಗಿಂತ ಸಾಮಾನಿಗೆ ಬೆಲೆ ಹೆಚ್ಚು ಎನ್ನುವಂತೆಯೋ, ಬೇರೆ ಕಡೆ ಸಿಕ್ಕುವ ವಸ್ತುವಿಗೆ ಅದು ಸಮಾನವಾಗುವುದಿಲ್ಲವೆಂಬಂತೆಯೋ, ಆಕೆ ಹೇಳಿದ ಬೆಲೆಗೆ ತಾನು ಕೊಳ್ಳಲಾರೆ ಎಂಬಂತೆಯೋ ಚಕ್ರವರ್ತಿ ನಟಿಸುತ್ತಾನೆ. ಅಂತೆಯೇ, ಮಾರಾಟಕ್ಕೆ ನಿಂತ ಸುಂದರಿಯು ಸಹ ತನ್ನ ಮಾಲಿಗೆ ಆದಷ್ಟು ಹೆಚ್ಚಿಗೆ ಗಿಟ್ಟಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಯಾವಾಗ ಚಕ್ರವರ್ತಿ ತಾನು ಕೇಳಿದ ಬೆಲೆಯೇ ಸರಿಯೆಂದು ಪಟ್ಟುಹಿಡಿಯುತ್ತಾನೋ ಆಗ ಇಬ್ಬರಿಗೂ ಮಾತಿಗೆ ಮಾತು ಬೆಳೆಯುತ್ತದೆ. ಚಕ್ರವರ್ತಿ ಅಗ್ಗದ ಗಿರಾಕಿಯೆಂದು ಆಕೆ ಅಂಜದೆ ಹೇಳಿಬಿಡುತ್ತಾಳೆ ; ನಾಲಾಯಖ್ ವ್ಯಾಪಾರಿ ಎನ್ನುತ್ತಾಳೆ ; ಮಾಲಿನ ಮೌಲ್ಯ ಅರಿಯದ ಮೂಢ ಎಂದು ಮೂದಲಿಸುತ್ತಾಳೆ ; ಕೊಳ್ಳುವ ಯೋಗ್ಯತೆಯಿಲ್ಲದ ಭಿಕಾರಿ ಎಂದು ಬೈಯ್ಯುತ್ತಾಳೆ ; ಅಗ್ಗದಮಾಲು ಸಿಕ್ಕುವ ಕಡೆ ಹೋಗಬಹುದೆಂದು ಕೈತೋರಿಸುತ್ತಾಳೆ. ಈ ತರಹ ತಮಾಷೆಯ ಮಾತುಗಳು ಜರುಗುತ್ತವೆ. ಬೇಗಮುರುಗಳು ಸಾಧ್ಯವಾದರೆ ಮಾಲನ್ನು ಇನ್ನೂ ಅಗ್ಗವಾಗಿ ಪಡೆಯಲು ಯತ್ನಿಸುತ್ತಾರೆ.

ಪರಸ್ಪರ ಬಿರುಸಿನ ಮಾತುಗಳು ಜರುಗುತ್ತವೆ. ಕೊಂಡುಕೊಳ್ಳುವವರು ಮತ್ತು ಮಾರುವವರಲ್ಲಿ ಭಾರಿ ಕೂಗಾಟ ಹಾಗೂ ಕೀಳ್ಮಟ್ಟದ ಜಗಳಗಳ ನಾಟಕ ನಡೆದುಬಿಡುತ್ತದೆ. ಕೊನೆಗೆ ಇಬ್ಬರೂ ಒಂದು ತೀರ್ಮಾನಕ್ಕೆ ಬರುತ್ತಾರೆ. ಸಾಮಾನಿಗೆ ಬೆಲೆ ನಿಗದಿಯಾಗಿ ಚಕ್ರವರ್ತಿಯೂ ಬೇಗಮುರುಗಳೂ ನಗದು ದುಡ್ಡು ಕೊಟ್ಟು ಕೈತುಂಬ ಕೊಂಡುಕೊಳ್ಳುತ್ತಾರೆ. ಅನೇಕ ವೇಳೆ ಸುಂದರಿಯಾದ ವ್ಯಾಪಾರಗಾತಿಗೆಂದೋ ಅಥವಾ ಅವಳ

ಮುದ್ದು ಮಗಳಿಗೆಂದೋ ರೂಪಾಯಿಗಳ ಬದಲು ಹತ್ತಾರು ಚಿನ್ನದ ನಾಣ್ಯಗಳು ಕೈಯಿಂದ ಜಾರುತ್ತವೆ. ತಿಳಿಯದಂತೆ ಕೊಟ್ಟ ಈ ಬಹುಮಾನವನ್ನು ಅಷ್ಟೇ ತಿಳಿಯದ ರೀತಿಯಲ್ಲಿ ಈಸಿಕೊಳ್ಳುತ್ತಾರೆ. ಎಲ್ಲವೂ ಹಾಸ್ಯ, ವಿನೋದ ಹಾಗೂ ಗೇಲಿಗಳಲ್ಲಿ ಕೊನೆಗೊಳ್ಳುತ್ತವೆ.[1]

ಷಾಜಹಾನ ಹೆಣ್ಣೆಂದರೆ ಬಾಯಿಬಿಡುತ್ತಿದ್ದ. ಆತ ಪ್ರತಿ ಹಬ್ಬದಲ್ಲೂ ಈ ಪರಿಷೆ ನಡೆಯುವಂತೆ ಮಾಡಿದ್ದ. ಕೆಲವು ಅಮೀರರುಗಳಿಗೆ ಇದು ಒಪ್ಪಿಗೆಯಾಗದಿದ್ದರೂ ಹಬ್ಬಗಳಲ್ಲಿ ತಪ್ಪದೆ ಈ ಪರಿಷೆಗಳು ನಡೆಯುತ್ತಿದ್ದುವು. ಈ ಪರಿಷೆಗಳ ನೆವದಲ್ಲಿ ಆತ ತನ್ನ ಅಂತಃಪುರಕ್ಕೆ 'ಕೆಂಚೆನ್' (kenchen) ಎಂಬ ಗಾಯಕಿಯರನ್ನೂ ನರ್ತಕಿಯರನ್ನೂ ಸೇರಿಸಿಕೊಂಡು ಮರ್ಯಾದೆ ಮೀರಿ ನಡೆದುಕೊಂಡಿರುವುದು ನಿಜ. ಇಡೀ ರಾತ್ರಿ ಅವರನ್ನು ತನ್ನ ಅಂತಃಪುರದಲ್ಲಿ ಇಟ್ಟುಕೊಳ್ಳುತ್ತಿದ್ದ. ಈ ಕೆಂಚೆನರು ಬಜಾರಿನಲ್ಲಿ ಕಾಣ ಬರುವ ವೇಶ್ಯೆಯರಲ್ಲ ; ಅಮೀರರು ಮತ್ತು ಮನ್ಸಬ್‌ದಾರರುಗಳ ಮನೆಯಲ್ಲಿ ಆಗುವ ಮದುವೆಗಳಲ್ಲಿ ಗಾಯನ ಮತ್ತು ನೃತ್ಯಗಳನ್ನು ಮಾಡುವ ಗೌರವಸ್ಥ ಮನೆತನದ ಹೆಂಗಸರು. ಈ ಕೆಂಚೆನ್ ಹೆಂಗಸರು ಬಹು ಸುಂದರವಾಗಿದ್ದು ಸೊಗಸಾದ ವಸ್ತ್ರಾಭರಣಗಳನ್ನು ಧರಿಸಿಕೊಂಡಿರುತ್ತಾರೆ, ಸುಶ್ರಾವ್ಯವಾಗಿ ಹಾಡುತ್ತಾರೆ. ಬಳ್ಳಿಯಂತೆ ಬಳುಕುವ ಶರೀರದ ಈ ಯುವತಿಯರು ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ, ನೃತ್ಯದಲ್ಲಿ ಎತ್ತಿದ ಕೈಯಾಗಿರುವರು.

ಈ ಕೆಂಚೆನ್ ಸ್ತ್ರೀಯರು ಕೇವಲ ಪರಿಷೆಗೆ ಬಂದರೆ ಸಾಲದಾಗಿತ್ತು. ಅವರು ಹಿಂದಿನಿಂದ ನಡೆದುಕೊಂಡುಬಂದ ಪದ್ಧತಿಯ ಪ್ರಕಾರ ಪ್ರತಿ ಬುಧವಾರ ಆಮ್-ಕಾಸಿಗೆ ಬಂದು ಷಾಜಹಾನನೊಡನೆ ಇಡೀ ರಾತ್ರಿ ಜೆಲ್ಲಾಟದಲ್ಲಿ ತಲ್ಲೀನರಾಗಿರಬೇಕಾಗಿತ್ತು. ಈಗಿನ ಚಕ್ರವರ್ತಿ ಔರಂಗಜೇಬ ಇಂಥ ವಿಚಾರಗಳಲ್ಲಿ ಹೆಚ್ಚು ಕಟ್ಟುನಿಟ್ಟು. ಕೆಂಚೆನ್ ಸ್ತ್ರೀಯರು ಅಂತಃಪುರಕ್ಕೆ ಬರಕೂಡದೆಂದು ಕಟ್ಟುಮಾಡಿದ್ದಾನೆ. ಆದರೆ ಹಿಂದಿನಿಂದ ನಡೆದುಕೊಂಡುಬಂದ ಪದ್ಧತಿಯನ್ನು ತಪ್ಪಿಸಬಾರದೆಂದು ಪ್ರತಿ ಬುಧವಾರ ಅಮ್-ಕಾಸಿಗೆ ಬರುವುದಕ್ಕೆ ಅಡ್ಡಿಮಾಡಿಲ್ಲ. ಅಮ್-ಕಾಸಿಗೆ ಬಂದ ಇವರು ದೂರದಿಂದಲೇ ಸಲಾಂ ಮಾಡಿ ಹೊರಟುಹೋಗುತ್ತಾರೆ.

ಹಬ್ಬ ಹರಿದಿನಗಳು, ಜಾತ್ರೆ ಪರಿಷೆಗಳು, ಕೆಂಚೆನಿಯರು –ಇವರ ವಿಚಾರ ಹೇಳು ವಾಗ ನಮ್ಮ ದೇಶದವನಾದ ಬೆರ್ನಾರ್ (Bernard) ಎಂಬುವನ ಒಂದು ಕಥೆ ಹೇಳ ಬೇಕೆನಿಸುತ್ತದೆ. ಪ್ಲೂಟಾರ್ಕ್ (Plutark) ಹೇಳಿದ್ದಾನೆ, ಸಣ್ಣ ಪ್ರಸಂಗಗಳನ್ನು ಮರೆಮಾಚಬಾರದು ಮತ್ತು ಅವುಗಳಿಂದ ಅನೇಕ ವೇಳೆ ಜನರ ನಡೆ ನುಡಿ ಹಾಗೂ ಬುದ್ಧಿ ಪಂತಿಕೆಗಳು ದೊಡ್ಡ ಪ್ರಸಂಗಗಳಿಗಿಂತ ಹೆಚ್ಚು ಕರಾರ್‌ವಾಕಾಗಿ ತಿಳಿದುಬರುತ್ತವೆ ಎಂದು. ಈ ಮಾತನ್ನು ಒಪ್ಪಬೇಕೆನಿಸುತ್ತದೆ. ಪ್ಲೂಟಾರ್ಕನ ಮಾತಿನಂತೆ ನೋಡಿದರೆ ನಾನು

[1] ಈ ಪರಿಷೆಯನ್ನು ಅಕ್ಬರ್ "ಖುಷ್–ರೋಜ್" (ಖುಷಿ ದಿನ) ಎಂದು ಕರೆಯುತ್ತಿದ್ದ.

ಹೇಳುವ ಕಥೆ ತಮಾಷೆಯದಾದರೂ ಒಪ್ಪಬೇಕಾದದ್ದಾಗಿದೆ. ಜಹಂಗೀರನ ಆಡಳಿತದ ಕೊನೆಗಾಲದಲ್ಲಿ ಬೆರ್ನಾರ್ ಎಂಬುವನು ಆತನ ಆಸ್ಥಾನದಲ್ಲಿದ್ದ. ಒಳ್ಳೆಯ ವೈದ್ಯನೆಂದೂ ಶಸ್ತ್ರಚಿಕಿತ್ಸಾ ನಿಪುಣನೆಂದೂ ಹೆಸರುವಾಸಿಯಾಗಿದ್ದ. ಹೀಗಾಗಿ ಆತ ಮೊಗಲನಿಗೆ ಅಚ್ಚುಮೆಚ್ಚಿನವನಾಗಿಬಿಟ್ಟಿದ್ದ. ಊಟೋಪಚಾರಗಳಲ್ಲಿಯೂ ಮೊಗಲನನ್ನು ಬಿಟ್ಟಿರುತ್ತಿರಲಿಲ್ಲ. ಇಬ್ಬರೂ ಮಿತಿಮೀರಿ ಕುಡಿಯುತ್ತಿದ್ದರು. ರಾಜ ಮತ್ತು ಅವನ ವೈದ್ಯ—ಇವರಿಬ್ಬರ ಶುಚಿರುಚಿಗಳು ಒಂದೇ ಆಗಿದ್ದುವು. ಜಹಂಗೀರನಿಗೆ ತನ್ನ ವಿಷಯ ಸುಖಗಳಲ್ಲದೆ ಬೇರಾವ ಯೋಚನೆಗಳೂ ಇರಲಿಲ್ಲ. ತನ್ನ ರಾಜ್ಯಭಾರದ ಹೊರೆಯನ್ನೆಲ್ಲಾ ಹೆಂಡತಿ ನೂರ್‌ಜಹಾನಳಿಗೆ ವಹಿಸಿಬಿಟ್ಟಿದ್ದ. ಆಕೆ ಗಂಡನ ಸಹಾಯವಿಲ್ಲದೆ ರಾಜ್ಯ ಆಳಲು ಶಕ್ತಳೆಂದು ಆತನೇ ಹೇಳಿಕೊಳ್ಳುತ್ತಿದ್ದ. ಬೆರ್ನಾರನಿಗೆ ತಪ್ಪದೆ ದಿನಕ್ಕೆ ೧೦ ಕ್ರೌನ್‌ಗಳಷ್ಟು ಸಂಬಳ ಸಿಗುತ್ತಿತ್ತು. ಇದರ ಮೇಲೆ, ಅಂತಃಪುರದ ಸ್ತ್ರೀಯರೂ ಅಮೀರರೂ ಕೈತುಂಬ ಕೊಡುತ್ತಿದ್ದ ಸಂಭಾವನೆ ಬೇರೆ. ಅವನ ಹಸ್ತಗುಣ ಚೆನ್ನಾಗಿತ್ತು. ಮೇಲಾಗಿ ರಾಜನಿಗೆ ಬೇಕಾದವನು. ಹೀಗಿರುವಾಗ ಅವನ ಸಂಪಾದನೆ ಕೇಳಬೇಕೆ !

ಆದರೆ, ಹಣಕ್ಕೆ ಅಷ್ಟೇನೂ ಬೆಲೆ ಕೊಟ್ಟವನಲ್ಲ ಬೆರ್ನಾರ್. ಒಂದು ಕೈಯಲ್ಲಿ ಈಸಿಕೊಂಡದ್ದನ್ನು ಇನ್ನೊಂದು ಕೈಯಲ್ಲಿ ಕೊಟ್ಟುಬಿಡುತ್ತಿದ್ದ. ಹೀಗಾಗಿ ಎಲ್ಲರಿಗೂ ಅವನ ಬಗ್ಗೆ ಪ್ರೀತಿ ವಿಶ್ವಾಸ. ಅದರಲ್ಲಿಯೂ ಕಂಚೆನಿಯರಿಗೆ ಇನ್ನೂ ಹೆಚ್ಚು. ಅವರಿಗಂತೂ ಅವನ ಕೈ ಬಿಡುಗೈ. ಅವನೊಡನೆ ರಾತ್ರಿಯನ್ನು ಕಳೆಯುತ್ತಿದ್ದ ಇಂಥ ಹೆಂಗಸರಲ್ಲಿ ಬಹು ಸುಂದರ ಯುವತಿ ಒಬ್ಬಳಿದ್ದಳು. ಆಕೆ ನೃತ್ಯದಲ್ಲಿ ಬಹು ನುರಿತವಳು. ನಮ್ಮ ದೇಶದ ಜನ ಅವಳಲ್ಲಿ ಮೋಹಿತರಾಗಿಬಿಟ್ಟಿದ್ದರು. ಆದರೆ ಆಕೆಯ ತಾಯಿ ಅವಳ ಆರೋಗ್ಯದ ಹಾಗೂ ಶರೀರ ಸೌಂದರ್ಯದ ಮೇಲೆ ಗಮನವಿಟ್ಟು ಅವಳನ್ನು ಒಂಟಿಯಾಗಿ ಬಿಡದೆ ಸದಾ ಅವಳ ಮೇಲೆ ಕಣ್ಣಿಟ್ಟು ಕಾಯುತ್ತಾ ನಮ್ಮ ಬೆರ್ನಾರ್‌ನ ಬಲೆಗೆ ಬೀಳದಂತೆ ನೋಡಿಕೊಳ್ಳುತ್ತಿದ್ದಳು.

ತನ್ನ ಆಸೆ ಕೈಗೂಡದೆ ಬೆರ್ನಾರ್‌ನಿಗೆ ನಿರಾಶೆಯ ಕತ್ತಲು ಕವಿದಿರುವಾಗ ಒಂದು ದಿನ ಜಹಂಗೀರ ತನ್ನ ಕಾಯಿಲೆಯನ್ನು ಗುಣಪಡಿಸಿದ ಆತನ ಹಸ್ತಗುಣವನ್ನು ಪ್ರಶಂಸಿಸಿ ಇಡೀ ಅಮೀರರ ಮುಂದೆ ತಾನೊಂದು ಬಹುಮಾನ ಸಲ್ಲಿಸುವುದಾಗಿ ಹೇಳಿದ. ಆಗ ಬೆರ್ನಾರ್ "ಖಾವಿಂದ್, ಆ ಬಹುಮಾನಕ್ಕೆ ಬದಲು ನನಗೆ ಸಲಾಂ ಮಾಡಲು ಅಲ್ಲಿ ನಿಂತಿರುವ ಆ ಕಂಚೆನಿಯನ್ನು ಕೊಡಬೇಕೆಂದು ಬೇಡುತ್ತೇನೆ" ಎಂದು ಕೋರಿದ.

ರಾಜನು ಕೊಟ್ಟ ಬಹುಮಾನವನ್ನು ತಿರಸ್ಕರಿಸಿ ಅದರ ಬದಲು ಕ್ರೈಸ್ತನಾದ ತನಗೆ ಮುಹಮ್ಮದೀಯಳಾದ ಆ ಕಂಚೆನಿಯನ್ನು ಕೊಡಬೇಕೆಂದು ಬರ್ನಾರ್ ಕೇಳಿದಾಗ ಇಡೀ ಸಭೆ ನಕ್ಕಿತು. ಆದರೆ ಜಹಂಗೀರನಿಗೆ ಮತಗಿತಗಳ ಕಟ್ಟುಪಾಡುಗಳಿರಲಿಲ್ಲ. ಗಹಗಹಿಸಿ ನಗುತ್ತಾ ಆತ ಆ ಹುಡುಗಿಯನ್ನು ಆತನಿಗೆ ಕೊಟ್ಟುಬಿಡುವಂತೆ ಆಜ್ಞಾಪಿಸಿದ.

"ಆಕೆಯನ್ನು ಎತ್ತಿ ವೈದ್ಯ ಮಹಾಶಯನ ಹೆಗಲ ಮೇಲೆ ಕುಳ್ಳಿರಿಸಿ. ಆ ಕೆಂಜೆನಿಯನ್ನು ಆತ ಕೊಂಡೊಯ್ಯಲಿ !" ಎಂದು ಆಜ್ಞಾಪಿಸಿದ.

ಹೇಳಿದ ಕೂಡಲೇ ರಾಜಾಜ್ಞೆ ನೆರವೇರಿತು. ತುಂಬಿದ ಸಭೆಯಲ್ಲಿ ಆ ಹುಡುಗಿಯನ್ನು ಬೆರ್ನಾರನ ಬೆನ್ನ ಮೇಲೆ ಕುಳ್ಳಿರಿಸಿದರು. ಆತ ಆಕೆಯನ್ನು ಬಿಂಕದಿಂದ ಹೊತ್ತು ತನ್ನ ನಿವಾಸದ ಕಡೆ ಸಾಗಿದ.

ಹಬ್ಬ ಮುಂತಾದ ಉತ್ಸವಗಳು ವಿನೋದದಲ್ಲಿ ಕೊನೆಗೊಳ್ಳುತ್ತವೆ. ಈ ತರಹ ವಿನೋದಗಳು ಯುರೋಪಿನಲ್ಲಿ ಇಲ್ಲ. ಒಂದು ದೊಡ್ಡ ವಿನೋದವೆಂದರೆ, ಆನೆಗಳ ಕಾದಾಟ. ನೆರೆದೆಲ್ಲ ಜನರ ಮುಂದೆ ನದಿಯ ಮರಳಿನ ಮೇಲೆ ಇದು ನಡೆಯುತ್ತದೆ. ರಾಜನೂ, ಅಂತಃಪುರದ ಬೇಗಮರುಗಳು ಮುಂತಾದ ಸ್ತ್ರೀಯರೂ, ಪ್ರಮುಖ ಅಮೀರರೂ ಕೋಟೆಯ ಹಲವಾರು ಕಡೆಗಳಲ್ಲಿ ಕುಳಿತು ಈ ಕಾದಾಟವನ್ನು ನೋಡುತ್ತಾರೆ.

ಆನೆಗಳ ಕಾಳಗಕ್ಕೆ ಐದಾರು ಅಡಿ ಎತ್ತರವೂ ಮೂರು ನಾಲ್ಕು ಅಡಿ ಅಗಲವೂ ಇರುವ ಮಣ್ಣಿನ ಗೋಡೆ ಕಟ್ಟುತ್ತಾರೆ. ಈ ಗೋಡೆಯ ಆ ಕಡೆ ಈ ಕಡೆ ಎರಡು ಭಾರಿ ಆನೆಗಳು ಎದುರುಬದುರು ನಿಲ್ಲುತ್ತವೆ. ಆನೆಗಳ ಮೇಲೆ ನಾಲ್ಕಾರು ಜನ ಮಾವುತರು ಕುಳಿತಿರುತ್ತಾರೆ. ಅಂಕುಶ ಹಿಡಿದು ಕುಳಿತಿರುವ ಮಾವುತನೇನಾದರೂ ಕೆಳಕ್ಕೆ ಬಿದ್ದರೆ ಅವನ ಜಾಗದಲ್ಲಿ ಕುಳಿತುಕೊಳ್ಳುವುದಕ್ಕಾಗಿ ನಾಲ್ಕಾರು ಜನ ಆನೆಯ ಮೇಲೆ ಕುಳಿತುಕೊಂಡಿರುತ್ತಾರೆ. ಮಾವುತರು ತಮ್ಮ ತಮ್ಮ ಆನೆಗಳನ್ನು ಒಳ್ಳೆಯ ಮಾತಿನಿಂದಲೋ ಅಥವಾ ಹೇಡಿ ಎಂದು ಬೈಯ್ದೋ ಹೋರಾಟಕ್ಕೆ ಪ್ರಚೋದಿಸುತ್ತಾರೆ. ಹಿಮ್ಮಡಿಯಿಂದ ಮೈ ತಿವಿಯುತ್ತಾರೆ. ಆಗ ಆನೆಗಳು ಗೋಡೆಯನ್ನು ಸಮೀಪಿಸಿ ಕಾಳಗಕ್ಕೆ ಸಿದ್ಧವಾಗುತ್ತವೆ. ಆ ಬೃಹದಾಕಾರದ ಆನೆಗಳು ಒಂದಕ್ಕೊಂದು ಢಿಕ್ಕಿ ಹೊಡೆದು, ಕೋರೆಗಳಿಂದಲೂ ತಲೆಗಳಿಂದಲೂ ಸೊಂಡಿಲುಗಳಿಂದಲೂ ಹೋರಾಡುತ್ತವೆ. ಆಗಾಗ್ಗೆ ಅವು ಕಾದಾಟ ನಿಲ್ಲಿಸಿ ಮತ್ತೆ ಆರಂಭಿಸುತ್ತವೆ. ಕೊನೆಗೆ ಆವೆರಡರ ಮಧ್ಯೆ ಇರುವ ಗೋಡೆ ಉರುಳಿಬಿಡುತ್ತದೆ. ಆಗ ಎರಡರಲ್ಲಿ ಒಂದು ಆನೆ ಗೋಡೆ ದಾಟಿ ಇನ್ನೊಂದು ಆನೆಯ ಮೇಲೆ ಎರಗುತ್ತದೆ. ಇನ್ನೊಂದು ಆನೆ ಓಡಿಹೋಗಲೆತ್ನಿಸಿದರೂ ಬಿಡದೆ ಅದನ್ನು ಹಿಡಿದುಕೊಳ್ಳಲೆತ್ನಿಸುತ್ತದೆ. ಎರಡೂ ಒಂದಕ್ಕೊಂದು ಕೈಕ್ಕೆ ಹಾಕಿಕೊಂಡು ರೋಷಾವೇಶದಿಂದ ಹೋರಾಡುತ್ತವೆ. ಅವು ಸುಮ್ಮನೆ ಬಿಡಿಸಿಟ್ಟಿಗೆ ಬಿಡುವುದಿಲ್ಲ. ಆದಕ್ಕೋಸ್ಕರ 'ಚೆರ್ಕಿ'[1] (cherky=ಪಟಾಕಿ) ಹಾರಿಸಿ ಅವುಗಳನ್ನು ಬೇರೆ ಬೇರೆ ಮಾಡುತ್ತಾರೆ.

ಬೆಂಕಿ ಎಂದರೆ ಆನೆಗಳಿಗೆ ಭಯ. ಈ ಕಾರಣವೇ ಸೈನ್ಯದಲ್ಲಿ ಬಂದೂಕಗಳ

---

[1]ಚೆರ್ಕಿ : ಕೋಲಿನ ತುದಿಗೆ ಕಟ್ಟಿರುವ ಚಕ್ರ. ಆನೆಗಳನ್ನು ಬೆದರಿಸಲು ಪಟಾಕಿಯನ್ನು ಕೋಲಿನ ತುದಿಗೆ ಕಟ್ಟಿ ಹೊತ್ತಿಸಿ ಶಬ್ದಮಾಡುತ್ತಿದ್ದರೆಂದು ಕಾಣುತ್ತದೆ.

ಉಪಯೋಗ ಪ್ರಾರಂಭವಾದ ಮೇಲೆ ಆನೆಗಳನ್ನು ಯುದ್ಧದಲ್ಲಿ ಯಶಸ್ವಿಯಾಗಿ ಉಪಯೋಗಿಸಲು ಆಗುತ್ತಿಲ್ಲ. ಅತ್ಯಂತ ಧೈರ್ಯವುಳ್ಳ ಆನೆಗಳೆಂದರೆ ಸಿಲೋನಿನಿಂದ ಬಂದವುಗಳು. ಅವನ್ನು ಚೆನ್ನಾಗಿ ಪಳಗಿಸದ ಹೊರತು ಯುದ್ಧದಲ್ಲಿ ಉಪಯೋಗಿಸುವುದಿಲ್ಲ. ಅವುಗಳ ತಲೆಗೆ ಸಮೀಪದಲ್ಲಿ ಬಂದೂಕ ಹಾರಿಸಿಯೂ, ಕಾಲುಗಳ ಸಂದಿಯಲ್ಲಿ ಪಟಾಕಿ ಹಾರಿಸಿಯೂ ಅವಕ್ಕೆಲ್ಲಾ ಒಗ್ಗಿಕೊಂಡ ನಂತರವೇ ಅವುಗಳನ್ನು ಯುದ್ಧಕ್ಕೆ ತೆಗೆದುಕೊಂಡುಹೋಗುವುದು.

ಆನೆಗಳ ಕಾಳಗ ಬಹಳ ಹಿಂಸೆಯಿಂದ ಕೂಡಿರುತ್ತದೆ. ಅನೇಕ ವೇಳೆ ಆನೆಗಳು ಮಾವುತರನ್ನು ಕೆಳಗೆಳೆದುಕೊಂಡು ಕಾಲಿನ ಕೆಳಗೆ ಹಾಕಿ ಒಸಗಿಬಿಡುತ್ತವೆ. ಎದುರು ಆನೆಯ ಮೇಲೆ ಕುಳಿತ ಮಾವಟಿಗನ ಮೇಲೆ ಅವಕ್ಕೆ ಕಣ್ಣು. ಅವನನ್ನು ಸೊಂಡಿಲಿನಿಂದ ಬಡಿದು ಕೆಳಕ್ಕೆ ಕೆಡವಿ ಸಾಯಿಸಿಬಿಡುತ್ತವೆ. ಆನೆಯ ಕಾಳಗಕ್ಕೆ ಹೋದ ಮಾವಟಿಗರು ಸಾವಿನ ಶಿಕ್ಷೆಗೆ ಗುರಿಯಾದವರಂತೆ ಮನೆಯಲ್ಲಿ ಹೆಂಡತಿ ಮಕ್ಕಳಿಗೆ ಹೇಳಿ ಬಂದಿರುತ್ತಾರೆ. ಅಷ್ಟೊಂದು ಅಪಾಯ ಅವರಿಗೆ ಈ ಕಾದಾಟದಲ್ಲಿ. ಒಂದೇ ಒಂದು ಸಮಾಧಾನವೆಂದರೆ, ಅವರು ಸಾಯದೆ ಬದುಕಿದರೆ ರಾಜನು ಅವರ ಸಂಬಳ ಸಾರಿಗೆಗಳನ್ನು ಹೆಚ್ಚುಮಾಡುವುದು ಮತ್ತು 'ಪೈಸಾ'ಗಳ[1] ಒಂದು ಥೈಲಿಯನ್ನು ಬಹುಮಾನವಾಗಿ ಕೊಡುವುದು. ಬಹುಮಾನವನ್ನು ಮಾವಟಿಗರು ಆನೆಯಿಂದ ಇಳಿದ ಕೂಡಲೇ ಕೊಡುತ್ತಾರೆ. ಇನ್ನೊಂದು ಸಮಾಧಾನವೆಂದರೆ, ಹೋರಾಟದಲ್ಲಿ ಮಾವಟಿಗ ಸತ್ತರೆ ಅವನ ಹೆಂಡತಿಗೆ ಗಂಡನಿಗೆ ಕೊಡುತ್ತಿದ್ದ ಸಂಬಳವನ್ನು ಮುಂದುವರಿಸಿಕೊಂಡು ಹೋಗುವುದು ಮತ್ತು ಅವನ ಮಕ್ಕಳನ್ನು ಅದೇ ಕೆಲಸಕ್ಕೆ ನೇಮಿಸಿಕೊಳ್ಳುವುದು. ಈ ಆನೆ ಕಾಳಗದಲ್ಲಿ ಕೇವಲ ಮಾವಟಿಗರಷ್ಟೇ ಸಾಯುತ್ತಾರೆಂದು ಭಾವಿಸಬೇಡಿ. ಅನೇಕ ವೇಳೆ ಆನೆಗಳು ಸುತ್ತಮುತ್ತ ನೋಡುತ್ತಾ ನಿಂತಿರುವ ಗುಂಪಿನ ಮೇಲೆ ನುಗ್ಗಿ ಜನರನ್ನು ತುಳಿದು ಸಾಯಿಸುವುದುಂಟು ; ಅಥವಾ ಆ ನೂಕುನುಗ್ಗಲಿನಲ್ಲಿ ಜನಗಳೇ ಒಬ್ಬರನ್ನೊಬ್ಬರು ತುಳಿದು ಸಾಯಿಸುವುದುಂಟು. ನಾನು ಈ ಪ್ರದರ್ಶನವನ್ನು ಎರಡು ಸಲ ನೋಡಿದೆ. ಎರಡನೆಯ ಸಲ ನನ್ನ ಪ್ರಾಣ ಉಳಿದದ್ದು ನನ್ನ ಕುದುರೆ ಹಾಗೂ ಇಬ್ಬರು ಆಳುಗಳ ಪ್ರಯಾಸದಿಂದ.

---

[1]ಪೈಸಾ : ಒಂದು ಸಾವಿರ ಪೈಸಾಕ್ಕೆ ಆಗ ೨೫ ರೂಪಾಯಿಗಳು ಅಥವಾ ಸುಮಾರು ೫೦ ಫ್ರಾಂಕುಗಳು. 'ದಾಮ್' (Dam= ದಮ್ಮಡಿ) ಅನ್ನೇ ಆಗ ಪೈಸಾ ಎಂದು ಕರೆಯುತ್ತಿದ್ದರು. ಸಾವಿರ ದಮ್ಮಡಿಗಳ ಥೈಲಿ ಮಾಡಿ ಇಟ್ಟುಕೊಳ್ಳುತ್ತಿದ್ದರು, ಇಂಥ ಸಂದರ್ಭಗಳಲ್ಲಿ ಕೊಡುವುದಕ್ಕೆ.

ಈಗ ಕೋಟೆಯನ್ನು ಬಿಟ್ಟು ಹೊರಬಂದು ನಗರಕ್ಕೆ ಹೋಗೋಣ. ನಗರದಲ್ಲಿರುವ ಎರಡು ಕಟ್ಟಡಗಳ ವಿಚಾರ ಹೇಳಬೇಕಾದದ್ದೆ. ಒಂದು, ಮುಖ್ಯ 'ಮಾಸ್ಕೀ' (Mosquee = ಮಸೀದಿ).[1] ಇದನ್ನು ನಗರದ ಮಧ್ಯೆ ಬಂಡೆಯ ಮೇಲೆ ಕಟ್ಟಿರುವ ಕಾರಣ ಬಹು ದೂರಕ್ಕೂ ಕಾಣಿಸುತ್ತದೆ. ಬಂಡೆಯನ್ನು ಸಮಮಾಡಿ, ನಾಲ್ಕು ದಿಕ್ಕಿನಿಂದ ರಾಜಬೀದಿಗಳು ಬಂದು ಸೇರುವೆಡೆಯಲ್ಲಿ ಮಸೀದಿಯನ್ನು ಕಟ್ಟಿದ್ದಾರೆ. ಮಸೀದಿಯ ಮೂರು ಕಡೆ ಉದ್ದಕ್ಕೂ ಗೆಯ್ದ ಕಲ್ಲಿನ ಮೆಟ್ಟಿಲುಗಳನ್ನು ಮಾಡಿದ್ದಾರೆ. ಇನ್ನೊಂದು ಕಡೆ, ಅಂದರೆ ಹಿಂಭಾಗದಲ್ಲಿ, ಬಂಡೆಯ ಎತ್ತರದವರೆಗೆ ಭಾರಿ ಕಲ್ಲುಗೋಡೆ ಕಟ್ಟಿ ಭವ್ಯವಾಗಿ ಕಾಣುವಂತೆ ಮಾಡಿದ್ದಾರೆ. ಮಸೀದಿಗೆ ಇರುವ ಮೂರು ಕಡೆಯ ದ್ವಾರಗಳನ್ನು ಅಮೃತಶಿಲೆಯಿಂದ ಕಟ್ಟಿದ್ದಾರೆ. ದ್ವಾರಗಳ ಕದಗಳಿಗೆ ತಾಮ್ರದ ತಗಡು ಹೊದಿಸಿದ್ದಾರೆ. ಈ ಮೂರರಲ್ಲಿ ಬಹಳ ಭವ್ಯವಾಗಿ ಕಾಣುವ ಮುಂಭಾಗದ ಮಹಾದ್ವಾರದ ಮೇಲೆ ಅಮೃತಶಿಲೆಯ ಸಣ್ಣ ಮಿನಾರುಗಳಿವೆ. ಮಸೀದಿಯ ಹಿಂಬದಿಯಲ್ಲಿ ಅದೇ ಅಮೃತಶಿಲೆಯ ಮೂರು ಭಾರಿ ಗೋಳಗುಮ್ಮಟಗಳಿವೆ. ಈ ಮೂರರಲ್ಲಿ ಮಧ್ಯದ ಗುಮ್ಮಟ ಇನ್ನೆರಡಕ್ಕಿಂತ ದೊಡ್ಡದು. ಮಸೀದಿಯ ಕೊನೆಯ ಭಾಗವನ್ನು ಮಾತ್ರ ಮುಚ್ಚಲಾಗಿದೆ. ಮೂರು ಗೋಳಗುಮ್ಮಟಗಳಿಗೂ ಮತ್ತು ಮಹಾದ್ವಾರಕ್ಕೂ ಮಧ್ಯೆ ಇರುವ ಭಾಗಕ್ಕೆ ಮೇಲ್ಛಾವಣಿಯೇ ಇಲ್ಲ. ಸೆಕೆಯ ಕಾರಣ ಮೇಲ್ಛಾವಣಿ ಹಾಕುವುದನ್ನು ಕೈಬಿಡಲಾಗಿದೆ. ನೆಲಕ್ಕೆ ದೊಡ್ಡ ದೊಡ್ಡ ಅಮೃತಶಿಲೆಯ ಚಪ್ಪಡಿಗಳನ್ನು ಹಾಸಿದ್ದಾರೆ. ಈ ಕಟ್ಟಡವನ್ನು ಶಿಲ್ಪಕಲೆಯ ಎಲ್ಲ ನಿಯಮಗಳಿಗನುಸಾರವಾಗಿ ಕಟ್ಟದಿದ್ದರೂ, ಮನಸ್ಸಿಗೆ ಒಪ್ಪದ ಯಾವ ಅಕ್ರಮವೂ ಇಲ್ಲಿ ಆಗಿಲ್ಲ. ಪ್ರತಿಯೊಂದು ರಚನೆಯೂ ಸೂಕ್ತವಾದ ರೀತಿಯಲ್ಲಿಯೇ ಆಗಿದೆ. ಮಸೀದಿಯ ಮೇಲಿನ ಸಣ್ಣಗೋಪುರಗಳನ್ನೂ ಮೂರು ಗೋಳಗುಮ್ಮಟಗಳನ್ನೂ ಬಿಟ್ಟರೆ ಉಳಿದೆಲ್ಲ ಕಟ್ಟಡ ಕೆಂಪುಕಲ್ಲಿನದು. ಈ ಕೆಂಪುಕಲ್ಲು ಕಟ್ಟುವಾಗ ಅನುಕೂಲವಾಗಿದ್ದರೂ ಕಾಲ ಕ್ರಮದಲ್ಲಿ ಪದರ ಬಿಡುವ ಸಂಭವವುಂಟು.

ಸ್ಥಳದ ಜನರು ಈ ಕೆಂಪುಕಲ್ಲು ಒಂದೇ ಸಲ ಸಿಕ್ಕುವುದಿಲ್ಲವೆಂದೂ ಕಲ್ಲುಗಣಿಯಲ್ಲಿ ಬಂಡೆಗಳು ಬೆಳೆಯುತ್ತಾ ಹೋದಂತೆ ದೊರೆಯುವುದೆಂದೂ ಹೇಳುತ್ತಾರೆ. ಇದು ನಿಜವಾಗಿದ್ದ ಪಕ್ಷದಲ್ಲಿ ಆಚ್ಚರಿಯೇ ಸರಿ. ಅವು ಹಾಗೆ ಬೆಳೆಯುವುದಕ್ಕೆ ಪ್ರತಿ ವರ್ಷ ಗಣಿಗಳಲ್ಲಿ

---

[1]ಇದೇ ದೆಹಲಿಯ ಜುಮ್ಮಾ ಮಸೀದಿ. ಇದನ್ನು ಷಾಜಹಾನ್ ಚಕ್ರವರ್ತಿ ೧೬೪೪ರಲ್ಲಿ ಕಟ್ಟಿಸಲು ಆರಂಭಿಸಿ ೧೪ ವರ್ಷಗಳನಂತರ ಮುಗಿಸಿದ. 'ಇಂಡಿಯಾದಲ್ಲಾಗಲೀ ಅಥವಾ ಬೇರೆಲ್ಲಿಯೇ ಆಗಲಿ ಹೊರಗಡೆಯಿಂದ ನೋಡಿದಾಗ ಇಷ್ಟು ಭವ್ಯವಾಗಿ ಕಾಣುವ ಮಸೀದಿ ಬೇರೆಲ್ಲಿಯೂ ಇಲ್ಲ' ಎಂದು ಫರ್ಗುಸನರು ಹೇಳುತ್ತಾರೆ.

ನಿಲ್ಲುವ ನೀರು ಕಾರಣ ಎಂದು ಹೇಳುವುದನ್ನು ನಾನು ಸರಿಯೋ ತಪ್ಪೋ ಎಂದು ಹೇಳಲಾರೆ.[1]

ಪ್ರತಿ ಶುಕ್ರವಾರ ರಾಜನು ಮೇಲೆ ಹೇಳಿದ ಮಸೀದಿಗೆ ಪ್ರಾರ್ಥನೆ ಸಲ್ಲಿಸಲು ಹೋಗುತ್ತಾನೆ. ಮಹಮ್ಮದೀಯ ದೇಶಗಳಲ್ಲಿ ಶುಕ್ರವಾರ ನಮಗೆ ಭಾನುವಾರ ಇದ್ದಂತೆ. ರಾಜನು ಹೋಗುವ ಬೀದಿಗೆ ನೀರುಹಾಕಿ ಧೂಳಡಗಿಸಿ ತಂಪುಮಾಡುತ್ತಾರೆ. ಬೀದಿಯ ಎರಡು ಕಡೆಯೂ ಕೋಟೆಯ ಬಾಗಿಲಿನಿಂದ ಮಸೀದಿಯವರೆಗೆ ಇನ್ನೂರು ಮುನ್ನೂರು ಜನ ಬಂದೂಕು ಹಿಡಿದ ಸಿಪಾಯಿಗಳು ನಿಂತಿರುತ್ತಾರೆ. ಮಸೀದಿಗೆ ಹೋಗುವ ಅಗಲವಾದ ಬೀದಿಯಲ್ಲೂ ಇದಕ್ಕಿಂತ ಹೆಚ್ಚು ಜನ ಸಿಪಾಯಿಗಳಿರುತ್ತಾರೆ. ಈ ಸಿಪಾಯಿಗಳ ಬಳಿ ಇರುವ ಬಂದೂಕುಗಳು ಸಣ್ಣವಾದರೂ ಬಹು ನಾಜೂಕಾಗಿ ಮಾಡಿದವು. ಇವುಗಳಿಗೆ ಹೊದಿಸಿರುವ ಬಟ್ಟೆ ಕಡುಗೆಂಪು. ಬಂದೂಕಕ್ಕೆ ಒಂದು ಚಿಕ್ಕ ಚೂಪುಬಾವುಟ (streamer) ತಗುಲಿಸಿರುತ್ತಾರೆ. ಐದಾರು ಜನ ಕುದುರೆ ಸವಾರರು ಕೋಟೆಯ ಬಾಗಿಲಿನಿಂದ ಹೊರಟು, ರಾಜನಿಗೆ ಸ್ವಲ್ಪ ಮುಂದೆ ಹೋಗುತ್ತಾ ದಾರಿಬಿಡಿಸುತ್ತಾರೆ. ರಾಜ ಅಲಂಕೃತವಾದ ಆನೆಯ ಮೇಲೆ ಭವ್ಯ ಅಂಬಾರಿಯಲ್ಲಿ ಬರುತ್ತಾನೆ. ಕೆಲವು ವೇಳೆ ಎಂಟು ಮಂದಿ ಹೊರುವ ಪಲ್ಲಕ್ಕಿಯಲ್ಲಿ ಬರುತ್ತಾನೆ. ಪಲ್ಲಕ್ಕಿಯನ್ನು ಯುಕ್ತರೀತಿ ಅಲಂಕರಿಸಿರುತ್ತಾರೆ. ಅದನ್ನು ಹೊರುವ ಜನರು ಆಕರ್ಷಕವಾದ ರೀತಿಯಲ್ಲಿ ಬಟ್ಟೆಬರೆಗಳನ್ನು ಹಾಕಿಕೊಂಡಿರುತ್ತಾರೆಂದು ಹೇಳಬೇಕಾಗಿಲ್ಲ. ಅಮೀರರ ತಂಡವೂ ಸಹ ರಾಜನ ಹಿಂದೆ ಬರುತ್ತದೆ. ಕೆಲವರು ಕುದುರೆಗಳ ಮೇಲೂ, ಮತ್ತೆ ಕೆಲವರು ಪಲ್ಲಕ್ಕಿಗಳ ಮೇಲೂ ಬರುತ್ತಾರೆ. ಅಮೀರರೊಡನೆ ಮನ್ಸಬ್‌ದಾರರೂ, ಆಗಲೇ ಹೇಳಿದ ಬೆಳ್ಳಿ ದಂಡ ಹಿಡಿದವರೂ ಇರುತ್ತಾರೆ. ಈ ಮೆರವಣಿಗೆ ತುರ್ಕಿಯ ಸುಲ್ತಾನನ ಅಥವಾ ಯೂರೋಪಿನ ಚಕ್ರವರ್ತಿಗಳ ವೈಭವಯುತ ಮೆರವಣಿಗೆಯನ್ನು ಹೋಲುತ್ತದೆ ಎಂದು ಹೇಳಲಾರೆ. ಈ ವೈಭವದ ರೀತಿಯೇ ಒಂದು ತರಹ. ಆದರೂ ಇದು ರಾಜೋಚಿತವಲ್ಲವೆಂದು ಹೇಳಲಾಗುವುದಿಲ್ಲ.

ದಿಲ್ಲಿಯಲ್ಲಿ ಗಮನಿಸಬೇಕಾದ ಇನ್ನೊಂದು ಕಟ್ಟಡವೆಂದರೆ 'ಕಾರವಾನ್ಸರಾಯ್' (karavansara= ಕಾರವಾನ್‌ಸರಾಯ್) ಎಂದು ಕರೆಯಲ್ಪಡುವ ಸತ್ರ. ಇದನ್ನು

---

[1]ಮೈಸೂರಿನ ಮಲೆನಾಡು ಪ್ರಾಂತಗಳಲ್ಲಿ ಹಾಗೂ ಕರಾವಳಿ ತೀರಗಳಲ್ಲಿ ಸಿಕ್ಕುವ "ಜಂಬಿಟ್ಟಿಗೆ" ಎಂಬ ಕಲ್ಲಿನ. ಬಗ್ಗೆ ಜನಗಳು ಇದೇ ಅಭಿಪ್ರಾಯಪಡುತ್ತಾರೆ. ನೆಲ ಬಲಿತ ಮೇಲೆ ಮಾತ್ರ ಮಣ್ಣು ಇಟ್ಟಿಗೆಗೆ ಯೋಗ್ಯ ಎಂಬುದು ಅಲ್ಲಿಯ ಜನರ ನಂಬಿಕೆ. ಈ ಇಟ್ಟಿಗೆಗಳನ್ನು ಸುಡದೆ ಹಾಗೆಯೇ ಕಟ್ಟಡಕ್ಕೆ ಉಪಯೋಗಿಸುತ್ತಾರೆ.

ಕಟ್ಟಿಸಿದವಳು ಷಾಜಹಾನನ ಹಿರಿಯ ಮಗಳಾದ ಬೇಗಂ ಸಾಹೇಬಳು. ಅವಳಷ್ಟೇ ಅಲ್ಲ, ಎಲ್ಲ ಅಮೀರರೂ ಆ ಮುದಿರಾಜನ ಮರ್ಜಿ ಸಂಪಾದಿಸುವುದಕ್ಕೋಸ್ಕರ ತಮ್ಮ ಸ್ವಂತ ಖರ್ಚಿನಲ್ಲಿ ಹೊಸ ನಗರದಲ್ಲಿ ಕಟ್ಟಡಗಳನ್ನು ಕಟ್ಟಿ ಚೆಂದಗೊಳಿಸಿದ್ದಾರೆ. ಕಾರವಾನ್ಸರಾಯ್ ಕಮಾನುಗಳುಳ್ಳ ಚಚ್ಚೌಕವಾದ ದೊಡ್ಡ ಕಟ್ಟಡ. ಪ್ರತಿ ಕಮಾನಿಗೂ ಮಧ್ಯೆ ಗೋಡೆ ಹಾಕಿ, ಕೊನೆಯ ಭಾಗದಲ್ಲಿ ಕೋಣೆಗಳನ್ನು ಮಾಡಿದ್ದಾರೆ. ಮೇಲು ಗಡೆಯೂ ಇದೇ ರೀತಿ. ಇಲ್ಲಿ ಪರ್ಷಿಯಾ, ಉಸ್ಬೆಕ್ ಮತ್ತು ಇತರ ವಿದೇಶಗಳಿಂದ ವರ್ತಕರು ಬಂದ ತಂಗುತ್ತಾರೆ. ಇವರು ಕೋಣೆಗಳ ಒಳಗೆ ಇಲ್ಲದೆ ಹೊರಗೆ ಇದ್ದರೂ ಯಾವ ತೊಂದರೆ ಇಲ್ಲ. ಏಕೆಂದರೆ, ರಾತ್ರಿ ವೇಳೆ ಸರಾಯ್ ಬಾಗಿಲನ್ನು ಮುಚ್ಚಿ ಬಿಡುತ್ತಾರೆ.

ದಿಲ್ಲಿಯ ವಿಚಾರ ಹೇಳಿ ಮುಗಿಸುವ ಮುನ್ನ ನೀವು ಕೇಳಬಹುದಾದ ಪ್ರಶ್ನೆ ಯೊಂದಕ್ಕೆ ಮೊದಲೇ ಉತ್ತರ ಹೇಳಿಬಿಡುತ್ತೇನೆ. ನೀವು ಕೇಳಬಹುದು, 'ದಿಲ್ಲಿಯ ಪ್ರಜಾಸಂಖ್ಯೆ ಎಷ್ಟು ? ಗಣ್ಯ ವ್ಯಕ್ತಿಗಳ ಸಂಖ್ಯೆಯಲ್ಲಿ ಫ್ರಾನ್ಸಿನ ರಾಜಧಾನಿಗೂ ಇದಕ್ಕೂ ಇರುವ ವ್ಯತ್ಯಾಸವೇನು ?, ಎಂದು. ಪ್ಯಾರಿಸ್ ನಗರವು ಒಂದಲ್ಲ ನಾಲ್ಕಾರು ಅಂತಸ್ತುಗಳುಳ್ಳ ಮನೆಗಳ ನಗರವೆಂಬುದನ್ನು ಮನದಲ್ಲಿಟ್ಟುಕೊಳ್ಳಬೇಕು. ಒಂದೊಂದು ಮನೆಯಲ್ಲಿ ನೂರೆಂಟು ಸಂಸಾರಗಳು. ಕೆಳಗಿನಿಂದ ಮೇಲಿನವರೆಗೆ ಮನೆಗಳಲ್ಲಿ ಜನ ತುಂಬಿರುತ್ತಾರೆ. ಬೀದಿಗಳ ತುಂಬ ಜನ ನಡೆದುಕೊಂಡೋ, ಇಲ್ಲ ಕುದುರೆಯ ಮೇಲೋ ಓಡಾಡುತ್ತಿರುತ್ತಾರೆ. ಎತ್ತಿನಗಾಡಿ (carts) ಗಳು, ಒಂಟಿ ಕುದುರೆ ಅಥವಾ ಜೋಡುಗುದುರೆ ಕೋಚ್ ಗಾಡಿಗಳು, ಸಾರೋಟಿನ ಕುದುರೆ ಗಾಡಿಗಳು— ಬೀದಿಗಳಲ್ಲಿ ತುಂಬಿರುತ್ತವೆ. ಅಲ್ಲದೆ ಪ್ಯಾರಿಸಿನಲ್ಲಿ ದೊಡ್ಡ ದೊಡ್ಡ ಚೌಕಗಳಾಗಲಿ, ಅಂಗಣಗಳಾಗಲಿ ಅಥವಾ ಉದ್ಯಾನವನಗಳಾಗಲಿ ಇಲ್ಲ. ಇವನ್ನೆಲ್ಲಾ ಗಮನಿಸಿದಲ್ಲಿ ಪ್ಯಾರಿಸ್ ಪ್ರಪಂಚದ ಒಟ್ಟಲುಪಾತಿ ಎಂದು ಹೇಳಬಹುದು ಮತ್ತು ದಿಲ್ಲಿಯಲ್ಲಿ ಬಹುಮಂದಿ ಇದ್ದಾರೆಯೆ ಎಂಬ ಶಂಕೆಯುಂಟಾಗಬಹುದು. ಆದರೆ, ಇಂಡೀಸಿನ ಈ ರಾಜಧಾನಿಯನ್ನು ಸಮೀಕ್ಷಿಸಿದರೆ, ಅಲ್ಲಿನ ವಿಶಾಲ ಪ್ರದೇಶವನ್ನೂ ಅಸಂಖ್ಯಾತ ಅಂಗಡಿ ಮುಂಗಟ್ಟುಗಳನ್ನೂ ಗಮನಿಸಿದರೆ, ಅಮೀರರುಗಳಲ್ಲದೆ ಕನಿಷ್ಟಪಕ್ಷ ಮೂವತ್ತೈದು ಸಾವಿರಕ್ಕೆ ಕಡಿಮೆ ಇಲ್ಲದ ಸ್ಟೆನ್ಯವನ್ನು ನೋಡಿದರೆ, ಇವರೆಲ್ಲರಿಗೂ ಹೆಂಡತಿ ಮಕ್ಕಳೂ ಅನೇಕ ಜನ ಸೇವಕರೂ ಇದ್ದಾರೆಂಬುದನ್ನು ಅರಿತುಕೊಂಡರೆ, ಇವರೆಲ್ಲಾ ಬೇರೆಬೇರೆ ಮನೆಗಳಲ್ಲಿ ವಾಸಮಾಡುತ್ತಾರೆಂಬುದನ್ನು ನೋಡಿದರೆ, ಮನೆಯಲ್ಲಿ ಯಾವ ವರ್ಗದವರೇ ವಾಸಮಾಡಲಿ ಅದರ ತುಂಬ ಹೆಂಗಸರು ಮಕ್ಕಳು ತುಂಬಿರುವುದನ್ನು ಗಮನಿಸಿದರೆ, ತಂಪು ಹೊತ್ತಿನಲ್ಲಿ ಸಾಕಷ್ಟು ಅಗಲವಾದ ಮತ್ತು ಗಾಡಿ ಗಬಟೆಗಳಿಲ್ಲದ ಬೀದಿಗಳಲ್ಲಿ ಜನ ತುಂಬಿರುವುದನ್ನು ಕಂಡರೆ, ಪ್ಯಾರಿಸಿಗೂ ದಿಲ್ಲಿಗೂ ಜನಸಂಖ್ಯೆಯ ಬಗ್ಗೆ ಹೋಲಿಸಿ, ಹೀಗೆಯೇ ಎಂದು ಹೇಳುವುದಕ್ಕೆ ಹಿಂದುಮುಂದು ನೋಡಬೇಕಾಗುತ್ತದೆ. ಪ್ಯಾರಿಸಿ

ನಲ್ಲಿರುವಷ್ಟು ಜನ ದಿಲ್ಲಿಯಲ್ಲಿ ಇಲ್ಲದಿದ್ದರೂ, ಎರಡಕ್ಕೂ ಜನಸಂಖ್ಯೆಯಲ್ಲಿ ಅಂಥ ಭಾರಿ ವ್ಯತ್ಯಾಸವೇನೂ ಕಾಣುವುದಿಲ್ಲ.

'ಅನುಕೂಲಸ್ಥರು ದಿಲ್ಲಿಯಲ್ಲಿ ಹೆಚ್ಚೊ ಪ್ಯಾರಿಸಿನಲ್ಲಿ ಹೆಚ್ಚೊ ?' ಎಂದು ನೀವು ಕೇಳಬಹುದು. ಪ್ಯಾರಿಸಿನಲ್ಲಿಯೇ ಹೆಚ್ಚು ಎಂಬುದು ಎದ್ದು ಕಾಣುತ್ತದೆ. ಪ್ಯಾರಿಸಿನ ಬೀದಿಗಳಲ್ಲಿ ನಾವು ಕಾಣುವ ಹತ್ತು ಜನರಲ್ಲಿ ಏಳೆಂಟು ಜನರಾದರೂ ಒಳ್ಳೆ ಬಟ್ಟೆ ಧರಿಸಿ ಮರ್ಯಾದಸ್ಥರಂತೆ ಕಾಣುತ್ತಾರೆ. ಆದರೆ, ದಿಲ್ಲಿಯಲ್ಲಿ ಇಬ್ಬರೋ ಮೂವರೋ ಒಳ್ಳೆ ಬಟ್ಟೆ ಹಾಕಿಕೊಂಡಿರುತ್ತಾರೆ ; ಉಳಿದ ಏಳೆಂಟು ಜನ ಚಿಂದಿ ಚೂರು ಬಟ್ಟೆಯಲ್ಲಿರುತ್ತಾರೆ. ನಿರ್ಗತಿಕರಾದ ಈ ಬಡಜನ ಸೈನ್ಯದ ಕಾರಣವಾಗಿ ರಾಜಧಾನಿಗೆ ಬರುತ್ತಾರೆ. ಹೀಗಿದ್ದರೂ ಸೊಗಸಾದ ಬಟ್ಟೆಬರೆ ಹಾಕಿಕೊಂಡ, ಯೋಗ್ಯವಾದ ವಾಹನದಲ್ಲಿ ಓಡಾಡುವ ಮತ್ತು ಆಳುಕಾಳುಗಳ ಅನುಕೂಲಗಳನ್ನು ಹೊಂದಿದ ಜನರನ್ನು ನಾನು ಕಾಣಲಿಲ್ಲ ಎಂದು ಹೇಳುವುದಿಲ್ಲ. ಕೋಟೆಯ ಮುಂದಿನ ಮಹಾ ಚೌಕದಲ್ಲಿ ಅಮೀರರು, ರಾಜರು ಹಾಗೂ ಮನ್ಸಬ್‌ದಾರರು ಕಾವಲು ನಿಲ್ಲಲು ನೆರೆದಾಗ ಅಥವಾ ಅಮ್-ಕಾಸ್‌ನಲ್ಲಿ ದರ್ಬಾರಿಗೆ ಸೇರಿದಾಗ ನಾವು ಕಾಣಬಹುದಾದ ಭವ್ಯ ನೋಟ ಬೇರೆಲ್ಲಿಯೂ ಕಾಣದಂಥಾದ್ದು. ಮನ್ಸಬ್‌ದಾರರು ನಗರದ ನಾನಾ ಕಡೆಗಳಿಂದ ಕುದುರೆಗಳನ್ನೇರಿ ಸುಸಜ್ಜಿತರಾಗಿ ಹಿಂದಿಬ್ಬರು ಮತ್ತು ಮುಂದಿಬ್ಬರು ಸೇವಕರ ಸಮೇತ ಬರುತ್ತಾರೆ. ರಾಜರು ಮತ್ತು ಅಮೀರರು ಕುದುರೆಗಳ ಮೇಲೋ ಅಥವಾ ಆನೆಗಳ ಮೇಲೋ ಬರುತ್ತಾರೆ. ಬಹು ಮಂದಿ ಆರು ಜನ ಹೊರುವ 'ಪಲಕಿ'ಗಳಲ್ಲಿ ಮೆತ್ತೆಗಳನ್ನು ಒರಗಿ ಕುಳಿತು, 'ಬೆಟ್-ಲೇ' (bet-le'= ವೀಳೆಯ) ಅಗಿಯುತ್ತಾ ಆಗಮಿಸುತ್ತಾರೆ. ಈ ವೀಳೆಯದೆಲೆಯ ಸೇವನೆಯಿಂದ ಬಾಯಿ ಸುವಾಸನೆ ಮತ್ತು ತುಟಿ ಕೆಂಪು—ಇವೆರಡೂ ಆಗುತ್ತವೆ. ಪಲ್ಲಕ್ಕಿಯ ಒಂದು ಪಕ್ಕದಲ್ಲಿ ಪಿಂಗಾಣಿಯ ಅಥವಾ ಬೆಳ್ಳಿಯ 'ಪಿಕುದಾನ್' (Piquedan : ಪೀಕದಾನಿ =ಉಗಿಯುವ ಬಟ್ಟಲು) ಹಿಡಿದು ಒಬ್ಬ ಸೇವಕ ಬರುತ್ತಿರುತ್ತಾನೆ. ಇನ್ನೊಂದು ಪಕ್ಕದಲ್ಲಿ ಇಬ್ಬರು ಸೇವಕರು ಆ ಸುಖಜೀವಿಗೆ ಬೀಸಣಿಗೆ ಬೀಸಿ, ನೊಣಗಳನ್ನು ಓಡಿಸುತ್ತಾರೆ ; ಅಥವಾ ನವಿಲುಗರಿಗಳನ್ನು ಬೀಸಿ ಧೂಳು ಒರೆಸುತ್ತಾರೆ. ಮೂರು ನಾಲ್ಕು ಜನರು ಮುಂದೆ ಹೋಗುತ್ತಾ ದಾರಿ ಬಿಡಿಸುತ್ತಾರೆ. ಒಳ್ಳೆಯ ಕಟ್ಟುಮಸ್ತಾದ ಹಾಗೂ ಲಕ್ಷಣವಾದ ಸವಾರರು ಕುದುರೆಗಳನ್ನೇರಿ ಹಿಂದೆ ಬರುತ್ತಿರುತ್ತಾರೆ.

ದಿಲ್ಲಿಯ ಸುತ್ತಮುತ್ತ ಭೂಮಿ ಬಹು ಫಲವತ್ತಾಗಿದೆ. ದವಸ ಧಾನ್ಯ, ಕಬ್ಬು, 'ಅನೀಲಿ' (anil), ಅಂದರೆ ಇಂಡಿಗೋ (indigo), ಬತ್ತ, ದ್ವಿದಳ ಧಾನ್ಯಗಳು, ಮೂರು ನಾಲ್ಕು ತರಹ ಬೇಳೆಕಾಳುಗಳು—ಇವನ್ನೆಲ್ಲಾ ಹೇರಳವಾಗಿ ಬೆಳೆಯುತ್ತಾರೆ. ನಗರದಿಂದ ಆಗ್ರಾಕ್ಕೆ ಹೋಗುವ ದಾರಿಯಲ್ಲಿ ಎರಡು ಹರಿದಾರಿಗಳ ದೂರದಲ್ಲಿ ಮಹಮ್ಮದೀಯರು 'ಕೊಯಾ ಕೊತುಬ್-ಎದ್ದಿನೇ' (Koia Kotub-eddine) ಎಂದು ಕರೆಯುವ ಜಾಗದಲ್ಲಿ ಒಂದು ಬಹಳ ಹಳೆಯ ಕಟ್ಟಡವಿದೆ. ಇದು ಹಿಂದೆ 'ದೇವಾ್ರ'

(Deura =ದೇವಾಲಯ), ಅಂದರೆ ವಿಗ್ರಹಗಳ ದೇವಮಂದಿರ, ಆಗಿತ್ತು.[1] ಈ ಕಟ್ಟಡದಲ್ಲಿ ಕೆತ್ತಿಸಿರುವ ಶಿಲಾಲೇಖನ ಇಂಡೀಸಿನ ಯಾವ ಭಾಷೆಗೂ ಹೋಲದ ಮತ್ತು ಯಾರಿಗೂ ಅರ್ಥವಾಗದ ಪುರಾತನ ಭಾಷೆಯಲ್ಲಿದೆ.

ದಿಲ್ಲಿಯ ಬೇರೊಂದು ದಿಕ್ಕಿನಲ್ಲಿ ಎರಡು ಮೂರು ಹರಿದಾರಿಗಳ ದೂರದಲ್ಲಿ ರಾಜನ ವಿಹಾರ ಗೃಹವಿದೆ. ಇದನ್ನು ಷಾ-ಲಿಮಾರ್ (Chah-limar : ಷಾಲಿಮಾರ್) ಎನ್ನುತ್ತಾರೆ.[2] ಇದು ಸುಂದರವಾದ ಹಾಗೂ ಸೊಗಸಾದ ಕಟ್ಟಡ. ಆದರೆ ಇದನ್ನು ನಮ್ಮ ಫಂಟೇನ್‌ಬ್ಲೂ (Fontainbleau), ಸೆಂಟ್ ಜೇರ್‌ಮೇನ್ (Saint Germain) ಅಥವಾ ವರ್ಸೇಲ್ಸ್ (Versailles)—ಇವುಗಳಿಗೆ ಹೋಲಿಸುವುದಕ್ಕಾಗು ವುದಿಲ್ಲ. ದಿಲ್ಲಿಯ ಸುತ್ತಮುತ್ತಲೂ ಅಂತಹ ಸ್ಥಳಗಳಿಲ್ಲ. ಇಷ್ಟೇ ಅಲ್ಲ, ಯಾವ ಖಾಸಗಿ ಮನುಷ್ಯರಿಗೂ ಇಂಥ ಹಳ್ಳಿಯಮನೆಗಳಿಲ್ಲ. ಇದಕ್ಕೆ ಕಾರಣ ಹುಡುಕ ಬೇಕಾಗಿಲ್ಲ. ಸ್ವಂತ ಆಸ್ತಿಪಾಸ್ತಿಗಳನ್ನು ಹೊಂದುವುದಕ್ಕೆ ಅವಕಾಶವಿಲ್ಲದಿರುವುದೇ ಇದಕ್ಕೆ ಕಾರಣ. ಫ್ರಾನ್ಸಿನಲ್ಲಿ ಕಾಣಬಹುದಾದಂತಹ ಪಟ್ಟಣಗಳನ್ನು ದಿಲ್ಲಿಯಿಂದ ಆಗ್ರಾಕ್ಕೆ ಇರುವ ಐವತ್ತು ಅರವತ್ತು ಹರಿದಾರಿಗಳ ದೂರದಲ್ಲಿ ಎಲ್ಲಿಯೂ ಕಾಣುವಂತಿಲ್ಲ. ಇಡೀ ಪ್ರದೇಶದಲ್ಲಿ ಬಡತನದ ಕುರುಹುಗಳೇ ಕಾಣಿಸುತ್ತವೆ. ಮಥುರಾ (Matura) ನಗರವನ್ನು ಬಿಟ್ಟರೆ ಗಮನಿಸುವಂಥಾದ್ದು ಯಾವುದೂ ಇಲ್ಲ. ಮಥುರಾದಲ್ಲಿ ಈಗಲೂ ಬಹು ಪುರಾತನವೂ ಭವ್ಯವೂ ಆದ ವಿಗ್ರಹಗಳ ದೇವಸ್ಥಾನವನ್ನು ನೋಡಬಹುದು. ಅಲ್ಲಲ್ಲಿ, ಒಂದು ದಿನದ ಪ್ರಯಾಣದಷ್ಟು ದೂರದಲ್ಲಿ ಕೆಲವು ಒಳ್ಳೆಯ ಕಾರವಾನ್ ಸರಾಯ್‌ಗಳಿವೆ. ಈ ದಾರಿಯಲ್ಲಿ ಗಮನಿಸಬೇಕಾದ ಮತ್ತೊಂದು ವಿಶೇಷವೇನೆಂದರೆ, ಎರಡು ಕಡೆಯೂ ನೆಟ್ಟಿರುವ ಸಾಲುಮರಗಳು. ಈ ಮರಗಳನ್ನು ಜಹಂಗೀರನು ನೆಡಿಸಿದ. ಸುಮಾರು ೧೫೦ ಹರಿದಾರಿಗಳ ದೂರದವರೆಗೆ ಈ ಮರಗಳನ್ನು ಕಾಣಬಹುದು. ಪ್ರತಿ 'ಕೊಸೆ' (Kosse) ದೂರದಲ್ಲೂ ಸಣ್ಣ ಗೋಪುರಗಳನ್ನು (ಕೋಸ್‌ಮಿನಾರ್‌ಗಳನ್ನು) ಕಟ್ಟಿ, ಬೇರೆ ಬೇರೆ ಕಡೆಗಳಿಗೆ ಹೋಗುವ ದಾರಿಗಳನ್ನು ತೋರಿಸಲು ಏರ್ಪಾಡು ಮಾಡ

---

[1]ಇದು ಖಾಜಾ ಕುತುಬ್‌ಉದ್ದೀನ್ ಬಕ್ತ್ಯಾರ್‌ಕಾಕಿ ಎಂಬಾತನ ಹೆಸರಿನಲ್ಲಿ ಕಟ್ಟಿಸಿರುವ ಮಸೀದಿ. ಹಿಂದೆ ಇದ್ದ ಹಿಂದೂ ಮತ್ತು ಇತರ ದೇವಾಲಯಗಳನ್ನು ಕೆಡವಿ, ಅದರ ಮೇಲೆ ಈ ಮಸೀದಿಯನ್ನು ಕಟ್ಟಿದ್ದಾರೆಂಬುದು ಸ್ಪಷ್ಟ. ಇದನ್ನು ಕಟ್ಟಲು ಆರಂಭಿಸಿದ್ದು ಕ್ರಿ. ಶ. ೧೧೯೩ರಲ್ಲಿ ಎಂದು ತಿಳಿದುಬರುತ್ತದೆ.

[2]ಈ ಷಾಲಿಮಾರ್ ತೋಟಗಳನ್ನು ಷಾಜಹಾನನು ಪಟ್ಟಕ್ಕೆ ಬಂದ ನಾಲ್ಕು ವರ್ಷಗಳ ತರುವಾಯ, ಅಂದರೆ ೧೬೩೨ರಲ್ಲಿ, ಆರಂಭಿಸಲಾಯಿತು ಒಬ್ಬ ವೆನ್ನೀಸ್ ನಗಂದವ ಈ ತೋಟ ಗಳ ನಕ್ಷೆ ತಯಾರಿಸಿದನೆಂದು ಹೇಳಲಾಗಿದೆ.

ಲಾಗಿದೆ[1]. ದಾರಿಯ ಉದ್ದಕ್ಕೂ ಅಲ್ಲಲ್ಲಿ ಬಾವಿಗಳನ್ನು ತೋಡಿಸಿದ್ದಾರೆ. ಅವುಗಳ ನೀರು ಪ್ರಯಾಣಿಕರಿಗೆ ಕುಡಿಯುವುದಕ್ಕೂ, ಮರಗಿಡಗಳಿಗೆ ಹಾಕುವುದಕ್ಕೂ ಅನುಕೂಲ ವಾಗಿದೆ.

ದಿಹ್ಲಿಯನ್ನು ಕುರಿತು ಹೇಳಿದ ಹಲವಾರು ಅಂಶಗಳು ಆಗ್ರಾಕ್ಕೂ ಅನ್ವಯಿಸು ತ್ತವೆ. ಆಗ್ರಾ ನಗರವೂ ಜಮುನಾ ನದಿಯ ದಂಡೆಯ ಮೇಲಿದೆ ದಿಹ್ಲಿಯಲ್ಲಿರುವಂತಹ ಕೋಟೆ, ಅರಮನೆ ಮತ್ತು ಇತರ ಸಾರ್ವಜನಿಕ ಕಟ್ಟಡಗಳು ಆಗ್ರಾದಲ್ಲಿಯೂ ಇವೆ. ಆದರೆ ಅಕ್ಬರನ ಕಾಲದಿಂದ ಆಗ್ರಾ ಹಿಂದೂಸ್ಥಾನದ ಚಕ್ರವರ್ತಿಗಳ ಮೆಚ್ಚಿಗೆಯ ವಾಸ ಸ್ಥಾನವಾಗಿದ್ದ ಕಾರಣ ಅದು ದಿಹ್ಲಿಗಿಂತ ವಿಸ್ತೀರ್ಣದಲ್ಲಿ ದೊಡ್ಡದು. ಅಮೀರರ ಮತ್ತು ರಾಜರುಗಳ ಮನೆಗಳು ತುಂಬಾ ಇವೆ. ಕಲ್ಲು ಅಥವಾ ಇಟ್ಟಿಗೆಗಳಿಂದ ಕಟ್ಟಿದ ಸಾಮಾನ್ಯರ ಒಳ್ಳೆಯ ಮನೆಗಳೂ, ಪ್ರಯಾಣಿಕರ ಸೌಲಭ್ಯಕ್ಕಾಗಿ ಕಟ್ಟಿರುವ ಕಾರವಾನ್ ಸರಾಯ್‌ಗಳೂ ಆಗ್ರಾದಲ್ಲೇ ಹೆಚ್ಚು. ಅಕ್ಬರನು ಕಟ್ಟಿಸಿದ ಕಾರಣ ಮೊದಲು ಈ ನಗರಕ್ಕೆ 'ಅಕ್ಬರ್–ಅಬಾದ್' (Akbar–abad) ಎಂಬ ಹೆಸರಿತ್ತು.

ಆಗ್ರಾ ನಗರವು ಎರಡು ಸ್ಮಾರಕಮಂದಿರಗಳಿಗೆ ಹೆಸರಾಗಿದೆ. ಇವುಗಳ ವಿಚಾರ ಆಮೇಲೆ ಹೇಳುತ್ತೇನೆ. ಆದರೆ ಆಗ್ರಾಕ್ಕೆ ಕೋಟೆ ಇಲ್ಲದ ಕಾರಣ, ಬೇರೆ ರಾಜಧಾನಿ ಗಳಿಗೆ ಹೋಲಿಸಿದಾಗ ಆದರ ಕೊರತೆ ಎದ್ದು ಕಾಣುತ್ತದೆ. ವಿದ್ಯುಕ್ತ ಶಿಲ್ಪನಿಯಮ ಗಳನ್ನು ಅನುಸರಿಸಿ ಈ ನಗರವನ್ನು ಕಟ್ಟಿಲ್ಲ. ವಿಶಾಲವಾದ ಹಾಗೂ ಒಂದೇ ರೀತಿಯ ಬೀದಿ ಗಳು, ದಿಹ್ಲಿಯಲ್ಲಿರುವಂತೆ ಹೆಚ್ಚಾಗಿ ವ್ಯಾಪಾರ ವಾಣಿಜ್ಯಗಳಿಗೆ ಮೀಸಲಾದ ನಾಲ್ಕೈದು ಉದ್ದವಾದ ಬೀದಿಗಳು ಹಾಗೂ ಸುಮಾರಾಗಿರುವ ಮನೆಗಳು ಇವೆ. ಉಳಿದೆಲ್ಲ ಬೀದಿಗಳು ಮೋಟು, ಕಿರಿದು ಹಾಗೂ ಸೊಟ್ಟ–ಪಟ್ಟ. ಹೀಗಾಗಿ ರಾಜನ ಆಸ್ಥಾನ ಆಗ್ರಾದಲ್ಲಿರುವಾಗ ಬೀದಿಗಳಲ್ಲಿ ಬಹಳ ನೂಕುನುಗ್ಗಲು ಹಾಗೂ ಅವ್ಯವಸ್ಥೆ ಹೇಳತೀರದು. ಈ ರೀತಿ ಆಗ್ರಾ ದಿಹ್ಲಿಯಷ್ಟು ಚೆನ್ನಾಗಿಲ್ಲದಿದ್ದರೂ, ದೂರದಿಂದ ನೋಡಿದರೆ ಆಗ್ರಾ ಗ್ರಾಮೀಣ ನಗರದಂತೆ (country town) ಕಾಣಿಸುತ್ತದೆ. ಗ್ರಾಮಾಂತರ ಪ್ರದೇಶದಲ್ಲಿ ಇದ್ದಂತಾಗುತ್ತದೆ, ಆಗ್ರಾದಲ್ಲಿರುವಾಗ. ಅಮೀರರೂ ರಾಜರುಗಳೂ ತಮ್ಮ ತಮ್ಮ ಮನೆಗಳ ಹಿಂದೆ ಮುಂದೆ ನೆರಳಿಗಾಗಿ ಮರಗಿಡಗಳನ್ನು ಬೆಳೆಸಿದ್ದಾರೆ. ಎಲ್ಲೆಲ್ಲಿಯೂ

---

[1] ಮೊಗಲ್ ಚಕ್ರಾಧಿಪತ್ಯದ ಹಳೆಯ ಭೂಪಟಗಳಲ್ಲಿ ಈ ಸಾಲುಮರಗಳನ್ನು ಎದ್ದು ಕಾಣುವಂತೆ ತೋರಿಸುತ್ತಿದ್ದರು. ದೆಹಲಿ–ಆಗ್ರಾ ಮಾರ್ಗವಲ್ಲದೆ, ದೆಹಲಿ–ಲಾಹೋರ್ ಮಾರ್ಗ ದಲ್ಲಿಯೂ ಸಾಲುಮರಗಳನ್ನು ನೆಡಿಸಲಾಗಿತ್ತು. ಅಲ್ಲಲ್ಲಿ ಪ್ರತಿ ಕೋಶ (Koss =3 miles) ದೂರದಲ್ಲಿ ನೆಡಿಸಿದ 'ಕೋಸ್ ಮಿನಾರ್'ಗಳ ಸಂಖ್ಯೆ ೧೬೮ ಇದ್ದುವಂತೆ. ಐದು ಕೋಶಗಳ ದೂರವನ್ನು ಅಳೆದು ಸರಾಸರಿ ನೋಡಿದ್ದರಲ್ಲಿ ಒಂದು ಕೋಶದ ದೂರ ೨ ಮೈಲಿ, ೪ ಫರ್ಲಾಂಗ್, ೧೫೮ ಗಜಗಳಾಯಿತು.

ಹಸುರೇ ಕಾಣುತ್ತದೆ. ಈ ಹಸುರಿನ ಮಧ್ಯೆ ಮೇಲೆದ್ದು ಕಾಣುವ 'ಬನಿಯನರ', ಅಂದರೆ ಜೆಂಟ್ರಿಲರ, ಎತ್ತರದ ಕಲ್ಲುಮನೆಗಳನ್ನು ನೋಡಬಹುದು. ಬಿಸಿಲಿನ ಧಗೆಯ ಇಂಥ ಪ್ರದೇಶದಲ್ಲಿ ಈ ರೀತಿಯ ವಾತಾವರಣ ಮನಸ್ಸಿಗೆ ತುಂಬಾ ಆಹ್ಲಾದವನ್ನುಂಟು ಮಾಡುತ್ತದೆ ಎಂದು ಹೇಳಬೇಕಾಗಿಲ್ಲ.

ಪ್ರಪಂಚದಲ್ಲೇ ಬಹು ಸೊಗಸಾದ ಹಾಗೂ ಭವ್ಯವಾದ ನೋಟವನ್ನು ನೋಡಬೇಕಾದರೆ ನೀವು ಪ್ಯಾರಿಸ್ ಬಿಡಬೇಕಾಗಿಲ್ಲ. ಆ ನೋಟ ನಿಮಗೆ ಖಂಡಿತವಾಗಿಯೂ ಪ್ನೊ-ನೆವುಫ್ (Pont-neuf) ಎಂಬುದರ ಮೇಲೆ ನಿಂತರೆ ಸಿಗುವುದು. ಆ ಸೇತುವೆಯ ಮೇಲೆ ಹಗಲು ಹೊತ್ತು ನಿಂತುಕೊಂಡರೆ ಅಲ್ಲಿಯ ಜನಜಂಗುಳಿಯ ಹಾಗೂ ವಾಹನಗಳ ಓಡಾಟ, ಆ ಅಪೂರ್ವವಾದ ಸಂಭ್ರಮ, ನಿಮ್ಮ ಸುತ್ತಮುತ್ತ ಕಾಣುವ ಅಸಂಖ್ಯಾತ ವಸ್ತುಗಳು–ಇವುಗಳಿಗಿಂತ ಇನ್ನೇನು ಬೇಕು ? ಅದೇ ಸ್ಥಳಕ್ಕೆ ರಾತ್ರಿ ಹೋದರೆ ಆಗ ನಿಮಗೆ ಎಂತಹ ಮೆಚ್ಚಿಗೆಯ ನೋಟ ! ಎತ್ತರವಾದ ಮನೆಗಳ ಅನೇಕಾನೇಕ ಕಿಟಕಿಗಳಿಂದ ಬರುವ ಮಂದವಾದ ಬೆಳಕಿನಲ್ಲಿ ಹಗಲು ಇದ್ದ ಓಡಾಟ ಹಾಗೂ ಸಂಭ್ರಮ ಏನೂ ಕಡಿಮೆಯಾಗದೆ ಮಧ್ಯರಾತ್ರಿಯವರೆಗೆ ಸಾಗುತ್ತಿರುತ್ತದೆ. ಅಲ್ಲಿ ಸುಸಂಸ್ಕೃತರಾದ ನಿವಾಸಿಗಳೂ ಅವರ ಸುಲಕ್ಷಣವಾದ ಹೆಂಡತಿಯರೂ ಹೆಣ್ಣುಮಕ್ಕಳೂ ಬೀದಿಯಲ್ಲಿ ಮೋಸ ಅಥವಾ ಕಳ್ಳತನದ ಭಯವಿಲ್ಲದೆ ಅಡ್ಡಾಡುವುದನ್ನು ನೋಡಬಹುದು. (ಇದು ಏಷ್ಯಾದಲ್ಲಿ ಸಾಧ್ಯವೇ ಇಲ್ಲ). ಅಲ್ಲದೆ, ನೋಟದ ಚಿತ್ರ ಸಂಪೂರ್ಣವಾಗಲೋ ಎಂಬಂತೆ ಪ್ರತಿ ದಿಕ್ಕಿನಲ್ಲಿಯೂ ಪ್ರಕಾಶಮಾನವಾಗಿ ಉರಿಯುವ ದೀಪಗಳ ಮಾಲೆ. ಹವೆ ಚೆನ್ನಾಗಿರಲಿ ಅಥವಾ ಇಲ್ಲದಿರಲಿ ಇವು ಒಂದೇ ತರಹ ಉರಿಯುತ್ತಿರುತ್ತವೆ. ಗೆಳೆಯ, ನೀನು ಪ್ಯಾರೀಸಿನ ಪ್ನೊ-ನೆವುಫ್‌ನಲ್ಲಿರುವಾಗ (ನಾನು ನೋಡದ ಚೀನಾ ಮತ್ತು ಜಪಾನುಗಳನ್ನು ಬಿಟ್ಟು) ಪ್ರಪಂಚದಲ್ಲೇ ಭವ್ಯವಾದ ಮಾನವ ನಿರ್ಮಿತ ದೃಶ್ಯಗಳನ್ನು ನೋಡುತ್ತೀಯೆ ಎಂದರೆ ನನ್ನ ಮಾತನ್ನು ನಂಬು. ಇದರ ಜೊತೆಗೆ, ಲೂವ್ರೇ (Louvre) ಸೇತುವೆಯೂ ಮುಗಿದರೆ ಆಗ ಆ ದೃಶ್ಯ ಹಾಗೂ ಅಂದಚೆಂದಗಳು ಹೇಗಿರಬಹುದೆಂದು ಊಹಿಸಿಕೊ. ಸೇತುವೆ ಕೇವಲ ಕಾಗದದ ಯೋಜನೆ ಎಂದು ಭಾವಿಸಲಾಗಿತ್ತು. ಆದರೆ ಈಗ ಅದು ಮುಗಿಯುವ ಕಾಲ ಹತ್ತಿರವಾಗುತ್ತಿದೆ.[1]

ನಾನು ಬೇಕಾಗಿಯೇ'ಮಾನವನಿರ್ಮಿತ'(artificial)ಎಂಬ ಪದವನ್ನು ಉಪಯೋಗಿಸಿದ್ದೇನೆ. ಏಕೆಂದರೆ,ಸುಂದರ ದೃಶ್ಯಗಳೆಂದರೆ ಸಾಮಾನ್ಯವಾಗಿ ಎಲ್ಲರ ಭಾವನೆ ಪ್ರಕೃತಿ ಸೌಂದರ್ಯಕ್ಕೆ ಸಂಬಂಧಿಸಿದುವುಗಳು ಎಂಬುದಾಗಿದೆ. ಉದಾಹರಣೆಗೆ, ನಾನು ಮರೆಯಲಾರದ ಕಾನ್‌ಸ್ಟಾಂಟನೋಪಲಿನ ದೃಶ್ಯದ ಸೌಂದರ್ಯ ಪ್ರಾಕೃತಿಕವಾದುದು. ಆದರೆ

---

[1]ಈ ಸೇತುವೆ ನಿಜವಾಗಿಯೂ ಮುಗಿದದ್ದು ೧೬೬೪ರಲ್ಲಿ. ಬೆರ್ನ್ಯೇ ಅದರ ಬಗ್ಗೆ ಬರೆಯುವಾಗ ಅದರ ಕೆಲಸ ಅರ್ಧಂಬರ್ಧ ಸಾಗಿತ್ತು.

ಪ್ಯಾರಿಸಿನಲ್ಲಿ ಪ್ರತಿಯೊಂದೂ ಹೆಚ್ಚು ಕಡಮೆ ಕೃತಕವಾದುದು, ಅಂದರೆ ಮಾನವ ನಿರ್ಮಿತವಾದುದು. ನನಗನ್ನಿಸುತ್ತದೆ, ಈ ಮಾನವ ನಿರ್ಮಿತವಾದುದರಲ್ಲಿ ಮನುಷ್ಯ ಹೆಚ್ಚು ಆಸ್ಥೆ ವಹಿಸುತ್ತಾನೆ ಎಂದು. ಆದ್ದರಿಂದ ಆಗ್ರಾ ಮತ್ತು ಕಾನ್‌ಸ್ಟಾಂಟಿನೋಪಲ್ ನಗರಗಳ ಸೌಂದರ್ಯದ ಬಗ್ಗೆ ಹೇಳಬೇಕಾದ್ದನ್ನೆಲ್ಲಾ ಹೇಳಿದ ಮೇಲೆ ಪ್ಯಾರಿಸ್ಸಿನ ಬಗ್ಗೆ ಯಾವ ಪಕ್ಷಪಾತವೂ ಇಲ್ಲದೆ ಹೇಳಬಲ್ಲೆ : ಅದು ಪ್ರಪಂಚದಲ್ಲೇ ಅತಿ ಸುಂದರವಾದ, ಅತಿ ಶ್ರೀಮಂತವಾದ ಮತ್ತು ಒಟ್ಟನಲ್ಲಿ ಪ್ರಥಮ ದರ್ಜೆಯ ನಗರ.

ಆಗ್ರಾದಲ್ಲಿ ಜೆಸ್ಯೂಯಿಟರ ಒಂದು ಇಗರ್ಜಿ ಇದೆ. ಅಲ್ಲದೆ, ಅವರು 'ಕಾಲೇಜು' ಎಂದು ಕರೆಯುವ ಕಟ್ಟಡವೂ ಇದೆ. ಈ ಕಾಲೇಜಿನಲ್ಲಿ ಖಾಸಗಿಯಾಗಿ ಇಪ್ಪತ್ತೈದು ಮೂವತ್ತು ಕ್ರೈಸ್ತ ಸಂಸಾರಗಳ ಮಕ್ಕಳಿಗೆ ನಮ್ಮ ಧರ್ಮದ ಬೋಧನೆ ಮಾಡುತ್ತಿದ್ದಾರೆ. ಈ ಸಂಸಾರಗಳು ಆಗ್ರಾಕ್ಕೆ ಹೇಗೆ ಬಂದುವು ಎಂದು ಹೇಳಲಾರೆ. ಜೆಸ್ಯೂಯಿಟರು ಕೊಡುವ ದಾನಧರ್ಮಗಳ ಆಸೆಯಿಂದಾಗಿ ಅವರು ಇಲ್ಲಿಗೆ ಬಂದು ನೆಲಸಿರಬೇಕು. ಪೋರ್ಚುಗೀಸರು ಇಂಡಿಯಾದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿರುವಾಗ ಜೆಸ್ಯೂಯಿಟರು ಅಕ್ಬರನಿಂದ ಆಹ್ವಾನಿತರಾಗಿ ಇಲ್ಲಿಗೆ ಬಂದರು. ಆ ದೊರೆ ಇವರಿಗೆ ವಾರ್ಷಿಕ ಸಂಭಾವನೆ ಕೊಡುತ್ತಿದ್ದುದಲ್ಲದೆ, ಆಗ್ರಾ ಮತ್ತು ಲಾಹೋರುಗಳಲ್ಲಿ ಇಗರ್ಜಿಗಳನ್ನು ಕಟ್ಟಲು ಅನುಮತಿ ಕೊಟ್ಟನು. ಅವನ ಮಗ ಜಹಂಗೀರ ಜೆಸ್ಯೂಯಿಟರಿಗೆ ಪ್ರೋತ್ಸಾಹ ನೀಡುವುದರಲ್ಲಿ ತಂದೆಯನ್ನು ಮೀರಿಸಿದನು. ಆದರೆ ಷಾಜಹಾನ್ ರಾಜನಾದ ಮೇಲೆ ಆತ ಜೆಸ್ಯೂಯಿಟರನ್ನು ಬಲಿಹಾಕಲಾರಂಭಿಸಿದ. ಅವರಿಗೆ ಸಿಕ್ಕುತ್ತಿದ್ದ ವರ್ಷಾಸನಕ್ಕೆ ಕಲ್ಲು ಹಾಕಿದ. ಲಾಹೋರ್‌ನಲ್ಲಿದ್ದ ಇಗರ್ಜಿಯನ್ನು ಕೆಡವಿಸಿದ. ಆಗ್ರಾದಲ್ಲಿ ಇದ್ದ ಇಗರ್ಜಿಯನ್ನು ಅರ್ಧಂಬರ್ಧ ಉರುಳಿಸಿದ. ಈ ಇಗರ್ಜಿಯ ಗೋಪುರದಲ್ಲಿ ಹಾಕಿದ್ದ ಗಡಿಯಾರ ಆಗ್ರಾ ನಗರಕ್ಕೆಲ್ಲಾ ಕೇಳಿಸುತ್ತಿತ್ತು. ಆ ಗೋಪುರವನ್ನೇ ಷಾಜಹಾನ ಕೆಡವಿಸಿಬಿಟ್ಟ.

ಜಹಂಗೀರನ ಆಡಳಿತ ಕಾಲದಲ್ಲಿ ಕ್ರೈಸ್ತಮತ ಹಿಂದೂಸ್ಥಾನದಲ್ಲಿ ಪ್ರವರ್ಧಮಾನವಾಗುವುದೆಂದು ಪಾದ್ರಿಗಳು (ಫಾದರುಗಳು) ನಂಬಿದ್ದರು. ಏಕೆಂದರೆ, ಕೊರಾನ್ ಧರ್ಮವನ್ನು ಕಂಡರೆ ಜಹಂಗೀರನಿಗೆ ಆಗುತ್ತಿರಲಿಲ್ಲ. ಅಲ್ಲದೆ, ಆತ ಕ್ರೈಸ್ತಧರ್ಮದ ಬಗ್ಗೆ ತನ್ನ ಮೆಚ್ಚುಗೆಯನ್ನೂ ವ್ಯಕ್ತಪಡಿಸುತ್ತಿದ್ದ. ತನ್ನ ಭ್ರಾತೃಗಳಿಬ್ಬರಿಗೆ ಕ್ರೈಸ್ತಮತವನ್ನು ಅವಲಂಬಿಸಲು ಅನುಮತಿ ನೀಡಿದ್ದ. ಅರಮನೆಯಲ್ಲಿಯೇ ಬೆಳೆದ ಮಿರ್ಜಾ ಜುಲ್ಕರ್‌ನಿನ್ ಎಂಬುವನು ಸುನ್ನತ್ ಮಾಡಿಸಿಕೊಂಡಿದ್ದರೂ ಕ್ರೈಸ್ತಮತ ಸೇರಬಹುದೆಂದು ಹೇಳಿದ. ಇದಕ್ಕೆ ಕೊಟ್ಟ ನೆವ ಏನೆಂದರೆ, ಆತ ಕ್ರೈಸ್ತರಾದ ತಂದೆ ತಾಯಿಗಳ ಹೊಟ್ಟೆಯಲ್ಲಿ ಹುಟ್ಟಿದ್ದ ಎಂಬುದು. ಅತನ ತಾಯಿ ಒಬ್ಬ ಶ್ರೀಮಂತ ಆರ್ಮೀನಿಯನನ ಹೆಂಡತಿ. ಆಕೆ ಜಹಂಗೀರನ ಅಪೇಕ್ಷೆಯಂತೆ ಅಂತಃಪುರ ಸೇರಿದ್ದಳು.

ಕ್ರೈಸ್ತಮತವನ್ನು ಅವಲಂಬಿಸಬೇಕೆಂಬ ನಿರ್ಧಾರಕ್ಕೆ ಬಂದ ಚಕ್ರವರ್ತಿ ತನ್ನ

ಆಸ್ಥಾನದವರೆಲ್ಲ ಯೂರೋಪಿಯನ್ ಉಡುಪು ಧರಿಸಬೇಕೆಂಬ ಧೈರ್ಯದ ಯೋಚನೆ ಮಾಡಿದ್ದನೆಂದು ಜೆಸ್ಯೂಯಿಟರು ಹೇಳುತ್ತಾರೆ. ಈ ಯೋಜನೆಗನುಸಾರವಾಗಿ ಉಡುಪುಗಳೂ ಸಿದ್ಧವಾಗಿದ್ದುವಂತೆ. ಸ್ವಂತಃ ರಾಜನೇ ಏಕಾಂತದಲ್ಲಿ ಉಡುಪು ಧರಿಸಿಕೊಂಡು ನೂತನ ಉಡುಪಿನಲ್ಲಿ ಹೇಗೆ ಕಾಣುತ್ತೇನೆ ಎಂದು ತನ್ನ ಮೆಚ್ಚಿನವನಾದ ಅಮೀರನನ್ನು ಕೇಳಿದನಂತೆ. ಇದಕ್ಕೆ ಅಮೀರನು ಕೊಟ್ಟ ಉತ್ತರ ಎಷ್ಟು ಗಾಬರಿಪಡಿಸಿತು ಎಂದರೆ, ಜಹಂಗೀರ ತನ್ನ ಯೋಜನೆಯನ್ನು ಕೈಬಿಟ್ಟು, ಅದೆಲ್ಲಾ ಬರೀ ತಮಾಷೆಯೆಂದು ಹೇಳಿಬಿಟ್ಟನಂತೆ.[1]

ಜಹಂಗೀರ ಸಾಯುವಾಗ ತಾನು ಕ್ರೈಸ್ತನಾಗಿ ಸಾಯಬೇಕೆಂದು ಅಪೇಕ್ಷಿಸಿ ಪಾದ್ರಿಗಳಿಗೆ ಹೇಳಿಕಳುಹಿಸಿದನೆಂದೂ, ಆದರೆ ಆ ವಿಷಯವನ್ನು ಯಾರೂ ಪಾದ್ರಿಗಳಿಗೆ ತಿಳಿಸಲೇ ಇಲ್ಲನೆಂದೂ ಜೆಸ್ಯೂಯಿಟರು ಹೇಳುತ್ತಾರೆ. ಆದರೆ ಇದು ನಿಜವಲ್ಲವೆಂದು ಬಹು ಜನರ ಅಭಿಪ್ರಾಯ. ಜಹಂಗೀರ ಬದುಕಿರುವಾಗ ಯಾವ ಮತಕ್ಕೂ ಸೇರಿರಲಿಲ್ಲವೆಂದೂ, ಹಾಗೆಯೆ ಸಾಯುವಾಗಲೂ ಯಾವ ಮತಕ್ಕೂ ಸೇರದೆ ಸತ್ತುಹೋದನೆಂದೂ, ಕೊನೆಯವರೆಗೆ ಅಕ್ಬರನಂತೆ ತಾನೊಂದು ಹೊಸ ಧರ್ಮವನ್ನು ಬೋಧಿಸಿದ ಪ್ರವಾದಿಯೆಂದು ಹೇಳಿಕೊಳ್ಳಬೇಕೆಂಬ ಆಸೆ ಇಟ್ಟುಕೊಂಡಿದ್ದನೆಂದೂ ಹೇಳುತ್ತಾರೆ.

ಜಹಂಗೀರನ ಮನೆವಾರ್ತೆಗೆ ಸೇರಿದ ಮಹಮ್ಮದೀಯನೊಬ್ಬ ಒಂದು ಸಂಗತಿ ಹೇಳಿದ. ಅದೇನೆಂದರೆ, ಜಹಂಗೀರ ಕುಡಿದು ಮತ್ತನಾಗಿರುವಾಗ ಹಲವಾರು 'ಮುಲ್ಲಾ' ಪಂಡಿತರಿಗೂ, ಒಬ್ಬ ಫ್ಲೋರೆಂಟೈನ್ (ಕ್ರೈಸ್ತ) ಪಾದ್ರಿಗೂ ಹೇಳಿಕಳುಹಿಸಿದನು. ಪಾದ್ರಿಯನ್ನು ಜಹಂಗೀರ್ 'ಆಟೇಷ್' (Atach) ಎಂದು ಕರೆಯುತ್ತಿದ್ದ.[2] ಆತನ ಬೆಂಕಿಯಂಥ ಸ್ವಭಾವದ ಕಾರಣ ಆಟೇಷನಿಗೆ ಆ ಹೆಸರು ಬಂದಿತ್ತು. ಆಟೇಷ್ ಮಹಮ್ಮದೀಯ ಮತದ ಸುಳ್ಳುಪೊಳ್ಳುಗಳನ್ನು ಖಂಡಿಸಿ ತನ್ನ ಧರ್ಮದ ಹಿರಿಮೆಯನ್ನು

---

[1] ಕತ್ರೂ (Catrou) ಎಂಬ ಇತಿಹಾಸಕಾರನು ಹೇಳುವ ಕಥೆಯೆ ಬೇರೆ. ಅದೇನೆಂದರೆ, ಜಹಂಗೀರನು ಕೊರಾನಿನಲ್ಲಿ ನಿಷೇಧಿಸಿರುವ ಮಾಂಸಗಳನ್ನು ತಿನ್ನುತ್ತಿದ್ದ. ಇದಕ್ಕೆ ಮುಸ್ಲಿಂ ಹಿರಿಯರು ಆಕ್ಷೇಪಣೆ ಎತ್ತಿದರು. ಈ ಆಕ್ಷೇಪಣೆ ಕೇಳಿ ಜಹಂಗೀರ ಕೇಳಿದನಂತೆ, "ಯಾವ ಧರ್ಮದಲ್ಲಿ ತಾನೆ ಎಲ್ಲ ಪ್ರಾಣಗಳ ಮಾಂಸ ತಿನ್ನಬೇಕೆಂದು ಹೇಳಿದೆ ? ಎಲ್ಲ ಪಾನೀಯಗಳನ್ನು ಕುಡಿಯಬೇಕೆಂದು ಹೇಳಿದೆ ?' ಎಂದು. ಈ ಪ್ರಶ್ನೆಗೆ ಆತನೇ ಕೊಟ್ಟ ಉತ್ತರ "ನಾವೆಲ್ಲರೂ ಕ್ರೈಸ್ತರಾಗುವುದೊಂದೇ ಸರಿ. ನಮ್ಮ ಉಡುಪುಗಳನ್ನು ಕೋಟುಗಳನ್ನಾಗಿಯೂ, ನಮ್ಮ ರುಮಾಲುಗಳನ್ನು ಹ್ಯಾಟುಗಳನ್ನಾಗಿಯೂ ಮಾಡಬಲ್ಲ ದರ್ಜಿಗಳಿದ್ದರೆ ಕರೆ ತನ್ನಿ, ನೋಡೋಣ !" ಎಂದು. ಇದನ್ನು ಕೇಳಿ ಮುಲ್ಲಾಗಳು ಚಕ್ರವರ್ತಿ ಕೊರಾನಿನಂತೆ ನಡೆಯಬೇಕಾಗಿಲ್ಲವೆಂದೂ, ಆತನು ಏನು ಬೇಕಾದರೂ ತಿನ್ನಬಹುದು ಕುಡಿಯಬಹುದು ಎಂದು ಹೇಳಿಬಿಟ್ಟರಂತೆ.

[2] ಆಟೇಷ್ = ಆಟಾಷ್ : ಆಟಾಷ್ ಎಂದರೆ ಪಾರಸಿ ಭಾಷೆಯಲ್ಲಿ ಬೆಂಕಿ ಎಂದರ್ಥ. ಈತನ ಸರಿಯಾದ ಹೆಸರು ಫಾದರ್ ಜೋಸೆಫ್ ಡ'ಕಾಸ್ಟ ಎಂದಿರಬೇಕು. ಈತ ಆಗ್ರಾ ಜೆಸ್ಯೂಯಿಟ್ ಸಂಘದ ಮುಖ್ಯಸ್ಥನಾಗಿದ್ದ.

ಕುರಿತು ಭಾರಿ ಉಪದೇಶ ಮಾಡಿದ. ಇದನ್ನು ಕೇಳಿದಮೇಲೆ ಜಹಂಗೀರ ಹೇಳಿದ, ಜೆಸ್ಸೂಯಿಟರಿಗೂ ಮುಲ್ಲಾಗಳಿಗೂ ಇರುವ ವಿವಾದವನ್ನು ಬಗೆಹರಿಸಬೇಕು ಎಂದು. 'ಒಂದು ಗುಂಡಿ ತೋಡಿ, ಅದರಲ್ಲಿ ಬೆಂಕಿಯ ಕೊಂಡ ಹಾಕಲಿ. ಪಾದ್ರಿ ಅವರು ಬೈಬಲ್ ಹಿಡಿದುಕೊಂಡೂ ಮುಲ್ಲಾಗಳು ಕೊರಾನ್ ಹಿಡಿದುಕೊಂಡೂ ಬೆಂಕಿಯಲ್ಲಿ ಬೀಳಲಿ. ಯಾರು ಬೆಂಕಿಗೆ ಆಹುತಿಯಾಗುವುದಿಲ್ಲವೋ ಅವರ ಧರ್ಮವನ್ನು ನಾನು ಅನುಸರಿಸುತ್ತೇನೆ' ಎಂದು ಹೇಳಿದ. ಪಾದ್ರಿ ಅಟೇಷ್ ಬೆಂಕಿಯಲ್ಲಿ ಬೀಳಲು ತಯಾರಾಗಿರುವೆನೆಂದು ತಿಳಿಸಿದ. ಆದರೆ ಮುಲ್ಲಾಗಳು ಹೆದರಿಹೋದರು. ಚಕ್ರವರ್ತಿ ಇಬ್ಬರ ಮೇಲೂ ದಯೆ ತೋರಿ 'ಹೋಗಲಿ ಬಿಡಿ' ಎಂದುಬಿಟ್ಟ.

ಈ ಕಥೆಯನ್ನು ನಂಬಬಹುದೋ ಇಲ್ಲವೋ ಹೇಳಲಾರೆ. ಅಂತೂ ಜಹಂಗೀರನ ಕಾಲದಲ್ಲಿ ಜೆಸ್ಸೂಯಿಟರಿಗೆ (ರೋಮನ್ ಕ್ಯಾಥೋಲಿಕ್ ಪಾದ್ರಿಗಳಿಗೆ) ಬಹಳ ಗೌರವ ದೊರಕುತ್ತಿತ್ತು. ಹೀಗಾಗಿ ಅವರು ಹಿಂದೂಸ್ಥಾನದಲ್ಲಿ ಕ್ರೈಸ್ತ ಧರ್ಮವನ್ನು ಸ್ಥಾಪಿಸಿಬಿಟ್ಟೆವೆಂಬ ಭಾವನೆ ಹೊಂದಿದರು. ಆದರೆ ಜಹಂಗೀರ ಕಾಲವಾದ ಮೇಲೆ ನಡೆದ ಸಂಗತಿಗಳೆಲ್ಲಾ ಅವರ ಆಸೆಯನ್ನು ಮಣ್ಣುಗೂಡಿಸಿದುವು. ದಾರಾ ಮತ್ತು ಫಾದರ್ ಬೂಜೇ (Buze)–ಇವರಿಬ್ಬರ ಪರಸ್ಪರ ಸ್ನೇಹವನ್ನು ಬಿಟ್ಟರೆ ಮತ್ತಾವ ಪ್ರೋತ್ಸಾಹವೂ ಮಿಷನುಗಳಿಗೆ (ಕ್ರೈಸ್ತಧರ್ಮ ಪ್ರಚಾರ ಸಂಸ್ಥೆಗಳಿಗೆ) ಸಿಕ್ಕಲಿಲ್ಲ.

ಈಗ ನಾನು ಅರಿಯದೆಯೆ ಮಿಷನುಗಳ ಪ್ರಸ್ತಾಪಮಾಡಿಬಿಟ್ಟಿರುವ ಕಾರಣ ಆ ಬಗ್ಗೆ ಕೆಲವು ವಿಷಯಗಳನ್ನು ಹೇಳಬೇಕೆಂದು ಬಯಸುತ್ತೇನೆ. ಹಿಂದೂಸ್ಥಾನದಲ್ಲಿ ಕ್ರೈಸ್ತ ಮಿಷನರಿಗಳು, ಅದರಲ್ಲಿಯೂ ಕಾಪುಚಿನರು ಮತ್ತು ಜೆಸ್ಸೂಯಿಟರು, ಮಾನವ ವರ್ಗದಲ್ಲಿ ಯಾವ ಭೇದಭಾವನೆಗೂ ಎಡೆಗೊಡದೆ ಮತ್ತು ಪಕ್ಷಪಾತ ತೋರಿಸದೆ ಧರ್ಮಬೋಧೆ ಮಾಡುತ್ತಿರುವುದಕ್ಕೆ ನನ್ನ ಪ್ರಶಂಸೆಯ ಮಾಲೆಯನ್ನು ಹಾಕಲು ಹಿಂಜರಿಯುವುದಿಲ್ಲ. ಮಾನವ ವರ್ಗದ ಯಾವ ಕ್ರೈಸ್ತರೇ ಆದರೂ—ಅವರು ಕ್ಯಾಥೋಲಿಕರಾಗಿರಲಿ, ಗ್ರೀಕರಾಗಿರಲಿ, ಅರ್ಮೀನಿಯರಾಗಿರಲಿ, ನೆಸ್ಟೋರಿಯನರಾಗಿರಲಿ, ಜಾಕೋಬಿಯನರಾಗಿರಲಿ ಅಥವಾ ಮತ್ತೆ ಯಾರೇ ಆಗಿರಲಿ—ಅವರೆಲ್ಲರಿಗೂ ತೋರಿಸುವ ದಯಾದಾಕ್ಷಿಣ್ಯ ಒಂದೇ ತೆರನಾಗಿರುತ್ತದೆ. ಕಷ್ಟನಷ್ಟಗಳಲ್ಲಿ ಸಿಕ್ಕಿದ ಅಪರಿಚಯಸ್ಥರಿಗೆ ಹಾಗೂ ಪ್ರವಾಸಿಗಳಿಗೆ ಅವರ ರಕ್ಷೆ ಹಾಗೂ ಸಮಾಧಾನ ದೊರಕುತ್ತವೆ. ಅವರು ತಮ್ಮ ಪಾಂಡಿತ್ಯ ಹಾಗೂ ಉದಾತ್ತವಾದ ನಡೆನುಡಿಗಳಿಂದ ಕ್ರೈಸ್ತೇತರರ ಅಜ್ಞಾನ ಹಾಗೂ ಸ್ವೇಚ್ಛಾವರ್ತನೆಗಳನ್ನು ಬಯಲಿಗೆಳೆದಿದ್ದಾರೆ. ಕೆಲವರು ದುರ್ನಡತೆಯವರು ಇದ್ದಾರೆ ನಿಜ. ಅವರು ತಮ್ಮ ನೀತಿಗೆಟ್ಟ ನಡತೆಯಿಂದ ಕ್ರೈಸ್ತಮತಕ್ಕೆ ಅಪಮಾನ ತರುತ್ತಿದ್ದಾರೆ. ಅಂಥವರನ್ನು ಮಿಷನರಿ ಕೆಲಸದ ಮೇಲೆ ಕಳುಹಿಸುವ ಬದಲು ಕಾನ್ವೆಂಟಿನ ನಾಲ್ಕು ಗೋಡೆಗಳೊಳಗೇ ಇಡುವುದೊಳ್ಳೆಯದು. ಅವರದು ಕೇವಲ ಬೂಟಾಟಿಕೆಯ ಧರ್ಮ.

ಅವರಿಂದ ಕ್ರೈಸ್ತಮತ ಪ್ರಸಾರಕ್ಕೆ ಅಡ್ಡಿಯೇ ಹೊರತು ಬೇರೊಂದಿಲ್ಲ. ಆದರೆ ಇವರ ಸಂಖ್ಯೆ ಬಹಳ ಕಡಿಮೆ ಇರುವುದು ಸಂತೋಷದ ವಿಷಯ.

ಮಿಷನುಗಳ ಸ್ಥಾಪನೆಗೆ ನನ್ನ ಸಂಪೂರ್ಣ ಅನುಮೋದನೆಯುಂಟು. ಅಂಥ ಮಿಷನುಗಳಿಗೆ ತಿಳಿದಂಥವರೂ ಸನ್ನಡತೆಯುಳ್ಳವರೂ ಆದಪಾದ್ರಿಗಳನ್ನು ಕಳುಹಿಸುವುದು ಒಳ್ಳೆಯದು. ಅಂಥವರ ಆವಶ್ಯಕತೆ ತುಂಬಾ ಉಂಟು. ಕ್ರೈಸ್ತನ ನೇರ ಶಿಷ್ಯರಾಗಿದ್ದ ದೂತರಂತಹ (Apostles) ಸನ್ನಡತೆ ಹಾಗೂ ಸದುದ್ದೇಶವುಳ್ಳ ಜನರನ್ನು ಪ್ರಪಂಚದ ಪ್ರತಿಯೊಂದು ಕಡೆಗೂ ಕಳುಹಿಸಬೇಕಾದ್ದು ಕ್ರೈಸ್ತರ ವಿಶಿಷ್ಟ ಹಕ್ಕು; ಅಷ್ಟೇ ಅಲ್ಲದೆ ಅವರಿಗೆ ಮಾನ್ಯತೆ ತರುವಂಥದ್ದೂ ಆಗಿದೆ. ಕ್ರೈಸ್ತನ ದೂತರು ಮಾಡಿದ ಒಂದೇ ಒಂದು ಬೋಧನೆಯಿಂದ ಆದ ಪರಿಣಾಮ ಈಗಿನ ಮಿಷನರಿಗಳಿಂದ ಆಗಬಲ್ಲುದು ಎಂಬ ನಿರೀಕ್ಷೆಯಿಂದ ನಾನು ಮಿಷನರಿಗಳ ಪರವಾಗಿ ಇಷ್ಟೊಂದು ವಾದ ಮಾಡುತ್ತಿದ್ದೇನೆಂದು ಭಾವಿಸಬಾರದು. ಕ್ರೈಸ್ತರಲ್ಲದವರೊಡನೆ ನಾನು ಸಾಕಷ್ಟು ಚರ್ಚೆ ಮಾಡಿದ್ದೇನೆ. ಒಂದು ದಿನದಲ್ಲಿ ಎರಡು ಮೂರು ಸಾವಿರ ಜನರನ್ನು ಕ್ರೈಸ್ತ ಮತಕ್ಕೆ ಮತಾಂತರ ಮಾಡಬಹುದೆಂಬುದನ್ನು ನಂಬಲು ನಾನು ಸಿದ್ಧನಾಗಿಲ್ಲ. ಮಹಮ್ಮದೀಯ ರಾಜರನ್ನೇ ಆಗಲಿ ಅಥವಾ ಮಹಮ್ಮದೀಯ ಪ್ರಜೆಗಳನ್ನೇ ಆಗಲಿ ಮತಾಂತರಗೊಳಿಸುವುದು ಬಹಳ ಕಷ್ಟ. ಪೌರ್ವಾತ್ಯದ ಹೆಚ್ಚು ಕಡಿಮೆ ಎಲ್ಲ ಮಿಷನರಿ ಕೇಂದ್ರಗಳನ್ನು ನೋಡಿದ ಮೇಲೆ ನನಗನ್ನಿಸುತ್ತದೆ, ಮಿಷನರಿಗಳ ಧಾನಧರ್ಮದಿಂದ ಹಾಗೂ ಬೋಧನೆಯಿಂದ ಜೆಂಟೈಲರಲ್ಲಿ (ಹಿಂದೂಗಳಲ್ಲಿ) ಪಡೆಯಬಹುದಾದ ಫಲಿತಾಂಶ ಮಹಮ್ಮದೀಯರಲ್ಲಿ ಸಾಧ್ಯವಿಲ್ಲ ಎಂದು. ಹತ್ತು ವರ್ಷಗಳಲ್ಲಿ ಒಬ್ಬ ಮಹಮ್ಮದೀಯನನ್ನಾದರೂ ಕ್ರೈಸ್ತ ಮತಕ್ಕೆ ಸೇರಿಸಬಹುದೆಂದು ನೀವು ಭಾವಿಸಿದ್ದರೆ ಅದು ಶುದ್ಧ ತಪ್ಪು. ಹೊಸ ಒಡಂಬಡಿಕೆ (New Testament)ಯ ಮತಧರ್ಮವನ್ನು ಮಹಮ್ಮದೀಯರು ಮೆಚ್ಚುತ್ತಾರೆ, ನಿಜ. ಜೀಸಸ್ ಕ್ರೈಸ್ತನ ಬಗ್ಗೆ ಗೌರವದಿಂದಲ್ಲದೆ ಬೇರೆ ರೀತಿಯಲ್ಲಿ ಮಾತಾಡುವುದಿಲ್ಲ. 'ಆಯ್ಸ' (Aysa), ಅಂದರೆ ಜೀಸಸ್, ಎಂಬ ಪದವನ್ನು 'ಹಜರತ್' ಎಂಬ ಗೌರವದ ಪದವನ್ನು ಸೇರಿಸದೆ ಅವರು ಆಡುವುದೇ ಇಲ್ಲ. ಕ್ರೈಸ್ತನು ತನ್ನ ದೈವಾಂಶವನ್ನು ಪ್ರಕಟಿಸಿ ಮಾತೆ ಮೇರಿಯಲ್ಲಿ ಹುಟ್ಟಿದನೆಂಬ ನಮ್ಮ ನಂಬಿಕೆಯನ್ನು ಅವರೂ ಒಪ್ಪುತ್ತಾರೆ. ಆತನು 'ಕಲಾಮುಲ್ಲಾ' ಮತ್ತು 'ರೂಹುಲ್ಲಾ' ಅಂದರೆ, ಆತನ ಮಾತು ದೇವವಾಣಿ ಮತ್ತು ಆತನ ಆತ್ಮ ದೇವಾತ್ಮ ಎಂದು ನಂಬುತ್ತಾರೆ. ಹೀಗಿದ್ದರೂ ಅವರು ಯಾವ ಧರ್ಮದಲ್ಲಿ ಹುಟ್ಟಿರುವರೋ ಆ ಧರ್ಮವನ್ನು ಬಿಡುತ್ತಾರೆನ್ನುವುದು, ಅಥವಾ ಮಹಮ್ಮದನು ಸುಳ್ಳು ಪ್ರವಾದಿಯೆಂದು ನಂಬುವುದು ವ್ಯರ್ಥವೇ ಸರಿ. ಆದರೂ ಯೂರೋಪಿನ ಕ್ರೈಸ್ತರು ಮಿಷನರಿಗಳಿಗೆ ಸಕಲ ರೀತಿಯ ಸಹಾಯ ಮಾಡುವುದು ಆವಶ್ಯಕ. ಮಿಷನರಿಗಳು ತಮ್ಮ ಧ್ಯಾನ, ಶಕ್ತಿ,

ಹಾಗೂ ಶ್ರೀಮಂತಿಕೆಗಳನ್ನು ನಮ್ಮನ್ನೆಲ್ಲಾ ಪಾಪದಿಂದ ವಿಮೋಚನೆ ಮಾಡಿದ ಆ ಕ್ರೈಸ್ತನ ಹಿರಿಮೆಯನ್ನು ಪ್ರಚಾರಮಾಡಲು ಉಪಯೋಗಿಸಬೇಕು.

ಮಿಷನರಿಗಳ ಖರ್ಚುವೆಚ್ಚಗಳನ್ನು ಯೂರೋಪಿಯನರೇ ವಹಿಸಿಕೊಳ್ಳಬೇಕು. ಅವನ್ನು ಬೇರೆಯವರ ಮೇಲೆ ಹೇರುವುದು ಸರಿಯಾದುದಲ್ಲ. ಖರ್ಚುವೆಚ್ಚಗಳಿಗೆ ಕೈಯಲ್ಲಿ ಕಾಸಿಲ್ಲದೆ ಮಿಷನರಿಗಳು ಹೀನಾಯವಾದ ಕೆಲಸಗಳಿಗೆ ಕೈಹಾಕದಂತೆ ಎಚ್ಚರಿಕೆ ವಹಿಸಬೇಕು. ಮಿಷನರಿಗಳಿಗೆ ಉದಾರವಾದ ರೀತಿಯಲ್ಲಿ ಸಹಾಯ ಸೌಕರ್ಯಗಳನ್ನು ಒದಗಿಸುವುದಲ್ಲದೆ, ಅವುಗಳಲ್ಲಿ ಬುದ್ಧಿವಂತರಾದ ಹಾಗೂ ಯೋಗ್ಯರಾದ ಜನರು ಇರುವಂತೆ ನೋಡಿಕೊಳ್ಳಬೇಕು. ಯಾವ ಶ್ರಮವನ್ನೂ ಲೆಕ್ಕಿಸದೆ ಸತತವಾದ ಉತ್ಸಾಹದಿಂದ ಒಡೆಯನ (ಭಗವಂತನ) ದ್ರಾಕ್ಷಿ ತೋಟದಲ್ಲಿ, ಎಲ್ಲಿ ಮತ್ತು ಯಾವ ಅವಕಾಶ ಸಿಕ್ಕಿದರೆ ಅದನ್ನು ಉಪಯೋಗಿಸಿಕೊಂಡು ಕೆಲಸಮಾಡುವ ಜನರು ಬೇಕು. ಪ್ರತಿಯೊಂದು ಕ್ರೈಸ್ತರಾಜ್ಯವೂ ಈ ರೀತಿ ನಡೆದುಕೊಳ್ಳುವುದು ಅದರ ಕರ್ತವ್ಯ. ಆದರೆ ಈ ಬಗ್ಗೆ ಮೋಸಹೋಗದಿರುವುದು ಅವಶ್ಯಕ. ಏನೇನೊ ಕಟ್ಟುಕಥೆಗಳನ್ನು ನಂಬಬಾರದು. ಮತಾಂತರವನ್ನು ಸುಲಭಸಾಧ್ಯವೆಂದು ಭಾವಿಸಬಾರದು. ಮಹಮ್ಮದೀಯ ಮತದ ಮೂಢನಂಬಿಕೆ ಅದರ ಭಕ್ತರ ಮೇಲೆ ಯಾವ ಹಿಡಿತ ಇಟ್ಟುಕೊಂಡಿದೆ ಎಂಬುದನ್ನು ನಾವು ಸರಿಯಾಗಿ ಅರಿತಿಲ್ಲ. ಕಾಮ ಕ್ರೋಧಗಳನ್ನು ನಮ್ಮ ಧರ್ಮ ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಬೋಧಿಸಿದರೆ, ಆ ಧರ್ಮ ಯಾವ ನಿರ್ಬಂಧವನ್ನೂ ಬೋಧಿಸುವುದಿಲ್ಲ. ಮಹಮ್ಮದೀಯ ಮತಧರ್ಮ ದುಷ್ಟಸೂತ್ರಗಳ ಕ್ರೋಡನೆ. ಅದರ ಸ್ಥಾಪನೆ ಕತ್ತಿಯ ಬಲದಿಂದ ಆದದ್ದು. ಈಗಲೂ ಅದನ್ನು ಮಾನವ ವರ್ಗದ ಮೇಲೆ ಅದೇ ಕರಾಳರೀತಿಯಿಂದ ಹೇರಲಾಗುತ್ತಿದೆ. ಕ್ರೈಸ್ತರು ಅದರ ನಾಶಕಾರಕವಾದ ಪ್ರಾಬಲ್ಯವನ್ನು ತಡೆಯಲು ಉತ್ಸಾಹವನ್ನೂ ನಾನಾಗಲೇ ಹೇಳಿದ ಮಾರ್ಗಗಳನ್ನೂ ಅನುಸರಿಸಬೇಕು. ಆ ಅಸಹ್ಯವಾದ ವಂಚನೆಯನ್ನು ದೇವರು ತನ್ನ ವಿಶೇಷ ಹಾಗೂ ದಯಾಪೂರ್ಣವಾದ ಶಕ್ತಿಯಿಂದ ಮಾತ್ರ ಪರಿಣಾಮಕಾರಿಯಾಗಿ ತಡೆಯಬಲ್ಲನಾದರೂ, ನಾವು ನಮ್ಮ ಉತ್ಸಾಹಪೂರಿತ ಕೆಲಸವನ್ನು ಮಾಡಲೇಬೇಕಾಗುತ್ತದೆ. ಇತ್ತೀಚೆಗೆ ಚೀನಾ ಮತ್ತು ಜಪಾನ್ ದೇಶಗಳಲ್ಲಿಯೂ, ಜಹಂಗೀರನಂಥವರಲ್ಲಿಯೂ ಕಂಡಂಥ ಉತ್ತೇಜನದಿಂದ ನಾವು ಧೈರ್ಯಪಡೆಯಬೇಕಾಗಿದೆ.

ಮತ್ತೊಂದು ಅಡೆತಡೆಯನ್ನು ನಮ್ಮ ಮಿಷನರಿಗಳು ಗಮನಿಸಬೇಕು. ಮಹಮ್ಮದೀಯರು ತಮ್ಮ ಮಸೀದಿಗಳಲ್ಲಿ ಪ್ರಾರ್ಥನೆ ಸಲ್ಲಿಸುವಾಗ ಅತ್ತ ಇತ್ತ ತಲೆ ತಿರುಗಿಸದಿರುವುದು ಒಂದೇ ಅಲ್ಲ, ಒಬ್ಬರಿಗೊಬ್ಬರು ಮಾತಾಡುವುದೂ ಇಲ್ಲ. ಬಹಳ ಧ್ಯಾನಮಗ್ನರಾಗಿರುವಂತೆ ಕಾಣುತ್ತಾರೆ. ಆದರೆ ಕ್ರೈಸ್ತರು ತಮ್ಮ ದೇವರು ಅಲ್ಲಿಯೇ ಪೀಠದಲ್ಲಿರುವನೆಂಬ ನಂಬಿಕೆಗೆ ವಿರುದ್ಧವಾಗಿ ಅಗೌರವವಾದ ರೀತಿಯಲ್ಲಿ ನಡೆದುಕೊಳ್ಳುತ್ತಾರೆ.

ಆ ಗ್ರಾಮದಲ್ಲಿ ಡಚ್ಚರಿಗೆ ಸೇರಿದ ಒಂದು ಫ್ಯಾಕ್ಟರಿ (ವ್ಯಾಪಾರದ ಕೋಠಿ) ಇದೆ.

ಇದರಲ್ಲಿ ನಾಲ್ಕೈದು ಜನರು ಇದ್ದಾರೆ. ಅವರು ಇಲ್ಲಿ ಭಾರೀ ವ್ಯಾಪಾರ ನಡೆಸುತ್ತಿದ್ದಾರೆ. ಬನಾತು ಬಟ್ಟೆ (broad cloth), ದೊಡ್ಡ ಕನ್ನಡಿಗಳು ಮತ್ತು ಚಿಕ್ಕ ಕನ್ನಡಿಗಳು, ಸಾಧಾರಣ ಕಸೂತಿ ಬಟ್ಟೆ, ಚಿನ್ನ ಬೆಳ್ಳಿ ಸರಿಗೆಯ ಕಸೂತಿಬಟ್ಟೆ ಮತ್ತು ಕಬ್ಬಿಣದ ಸಾಮಾನುಗಳು–ಇವನ್ನು ಮಾರಿಯೂ, ನೀಲಿಯನ್ನು ಕೊಂಡುಕೊಂಡೂ ದೊಡ್ಡ ವ್ಯಾಪಾರವನ್ನೇ ಮಾಡುತ್ತಿದ್ದಾರೆ. ನೀಲಿಯನ್ನು ಆಗ್ರಾ ಸುತ್ತುಮುತ್ತಲಿನ ಪ್ರದೇಶದಿಂದ, ಅದರಲ್ಲಿಯೂ ಎರಡು ದಿನಗಳ ದೂರದಲ್ಲಿರುವ ಬಿಯಾನ ಎಂಬಲ್ಲಿಂದ ಶೇಖರಿಸುತ್ತಾರೆ. ಬಿಯಾನಕ್ಕೆ ಪ್ರತಿ ವರ್ಷ ಹೋಗುವುದು ಬರುವುದು ಮಾಡುತ್ತಾರೆ. ಅವರಿಗೆ ಸೇರಿದ ಒಂದು ಮನೆ ಸಹ ಅಲ್ಲಿದೆ. ಜಲಪುರ ಮತ್ತು ಲಾಹೋರುಗಳಿಂದಲೂ ಬಹಳಷ್ಟು ಬಟ್ಟೆಯನ್ನು ಕೊಂಡುಕೊಳ್ಳುತ್ತಿದ್ದರು. ಈಗ ಅವರ ವ್ಯಾಪಾರ ಅಷ್ಟೇನೂ ಲಾಭ ದಾಯಕವಾಗಿಲ್ಲ ಎಂದು ಹೇಳುತ್ತಾರೆ. ಇದಕ್ಕೆ ಆರ್ಮೀನಿಯ ದೇಶದ ವ್ಯಾಪಾರಿಗಳ ಪೈಪೋಟಿಯೊ ಅಥವಾ ಆಗ್ರಾಕ್ಕೂ ಸೂರತ್ತಿಗೂ ಇರುವ ದೂರ ವೊಕಾರಣ ಇರಬೇಕು. ಗ್ವಾಲಿಯರ್ ಮತ್ತು ಬ್ರಹ್ಮಪುರಗಳ ಮೂಲಕ ಗುಡ್ಡಗಾಡುಗಳಲ್ಲಿ ಹೋಗುವ ಕಷ್ಟಕರ ವಾದ ಮಾರ್ಗವನ್ನು ಬಿಟ್ಟು ಅವರು ಅಹಮದಾಬಾದ್ ಮಾರ್ಗವನ್ನು ಹಿಡಿಯುತ್ತಾರೆ. ಈ ಮಾರ್ಗ ರಾಜರುಗಳ ನಾಡಿನಲ್ಲಿದೆ. ಪ್ರಯಾಣ ಕಾಲದಲ್ಲಿ ಅವರ ಕಾರವಾನುಗಳು[1] ಆಗಾಗ್ಗೆ ಕಳ್ಳಕಾಕರ ಕೊಳ್ಳೆಗೆ ಗುರಿಯಾಗಿಬಿಡುತ್ತವೆ. ಆದರೆ ಏನೇ ಕಷ್ಟನಷ್ಟಗಳು ಸಂಭವಿಸಿದರೂ ಇಂಗ್ಲಿಷರು ಮಾಡಿದಂತೆ ಡಚ್ಚರು ತಮ್ಮ ಆಗ್ರಾ ಫ್ಯಾಕ್ಟರಿಯನ್ನು ಮುಚ್ಚುತ್ತಾರೆಂದು ನಾನು ಭಾವಿಸಲಾರೆ. ಏಕೆಂದರೆ, ಈಗಲೂ ಅವರು ಸಂಬಾರದ ವಸ್ತುಗಳನ್ನು ಮಾರಿ ಹೇರಳವಾದ ಲಾಭ ಸಂಪಾದಿಸುತ್ತಿದ್ದಾರೆ. ಅಲ್ಲದೆ, ತಮ್ಮ ನಂಬಿ ಕಸ್ತರಾದವರು ರಾಜನ ಆಸ್ಥಾನದಲ್ಲಿ ಇರುವುದು ಒಳ್ಳೆಯದು ಎಂದು ತಿಳಿದಿದ್ದಾರೆ. ಅವರ ಮೂಲಕ ಬಂಗಾಳ, ಪಟ್ನಾ, ಸೂರತ್ ಮತ್ತು ಅಹಮದಾಬಾದ್‌ಗಳಲ್ಲಿರುವ ತಮ್ಮ ಸಿಬ್ಬಂದಿಗಳಿಗೆ ಸ್ಥಳದ ಸುಬೇದಾರರುಗಳಿಂದ ತಂಟೆತಕರಾರುಗಳು ಒದಗದಂತೆ ನೋಡಿಕೊಂಡಿದ್ದಾರೆ. ಹಾಗೇನಾದರೂ ಕಿರುಕುಳವಿದ್ದರೆ ಅದನ್ನು ಕೂಡಲೇ ರಾಜನ ಗಮನಕ್ಕೆ ತಂದು ಪರಿಹಾರ ಪಡೆಯುವುದು ಸಾಧ್ಯವೆಂದು ತಿಳಿದುಕೊಂಡಿದ್ದಾರೆ.

ಆಗ್ರಾ ಯಾವ ಅದ್ಭುತ ಸ್ಮಾರಕಮಂದಿರಗಳ ಕಾರಣದಿಂದ ಹೆಸರಾಗಿದೆಯೋ ಅವುಗಳ ವಿಚಾರ ಹೇಳಿ ಈ ಪತ್ರ ಮುಗಿಸುತ್ತೇನೆ. ಒಂದನ್ನು, ಜಹಂಗೀರ ತನ್ನ ತಂದೆ ಅಕ್ಬರನ ಗೌರವಾರ್ಥವಾಗಿ ಕಟ್ಟಿಸಿದ. ಇನ್ನೊಂದನ್ನು ಷಾಜಹಾನ ತನ್ನ ಮಡದಿ ತಾಜ್‌ಮಹಲಳ ಜ್ಞಾಪಕಾರ್ಥವಾಗಿ ಕಟ್ಟಿಸಿದ. ತಾಜ್‌ಮಹಲಳು ಸೌಂದರ್ಯಕ್ಕೆ ಹೆಸರಾಗಿದ್ದಳು. ಗಂಡನಾದ ಷಾಜಹಾನ್ ಆಕೆಯನ್ನು ಎಷ್ಟರಮಟ್ಟಿಗೆ ಪ್ರೀತಿಸು

---

[1]ಕಾರವಾನ್ : ಸರಕುಗಳನ್ನು ಹೊತ್ತ ಒಂಟೆ ಅಥವಾ ಇತರ ಪ್ರಾಣಿಗಳೊಡನೆ ಸಂಚರಿಸುವ ವ್ಯಾಪಾರಿಗಳ ತಂಡ.

ತ್ತಿದ್ದನೆಂದರೆ, ಅವಳು ಜೀವಂತಳಾಗಿರುವ ತನಕ ಆತ ಇನ್ನೊಬ್ಬಳ ಕಡೆಗೆ ಗಮನ ಹರಿಸುತ್ತಲೇ ಇರಲಿಲ್ಲವಂತೆ. ಆಕೆ ಸತ್ತಾಗ ಆತನಿಗೆ ಅತೀವ ದುಃಖವಾಗಿಬಿಟ್ಟು, ಆತನೂ ಆಕೆಯೊಡನೆ ಸಮಾಧಿಯಾಗಿಬಿಡುವನೋ ಎನ್ನುವಷ್ಟರ ಮಟ್ಟಿಗೆ ಆತ ತನ್ನ ಮಡದಿಗಾಗಿ ಪರಿತಪಿಸಿದ.

ಅಕ್ಬರನ ಹೆಸರಿನಲ್ಲಿ ಕಟ್ಟಿಸಿದ ಮಂದಿರದ[1] ವಿಚಾರ ಏನೂ ಹೇಳದೆ, ತಾಜಮಹಲಿನ ವಿಚಾರ ಹೇಳುತ್ತೇನೆ. ಏಕೆಂದರೆ, ಸಕಲ ಸೌಂದರ್ಯಗಳೆಲ್ಲಾ ಅದರಲ್ಲಿ ಹೆಚ್ಚಾಗಿ ಸೇರಿಕೊಂಡಿವೆ. ಆಗ್ರಾ ಬಿಟ್ಟು ಪೂರ್ವಕ್ಕೆ ವಿಶಾಲವಾದ ಹಾಸುಗಲ್ಲಿನ ಬೀದಿಯೊಂದರಲ್ಲಿ ಹೋದರೆ ಆ ಬೀದಿಯ ಒಂದು ಕಡೆ ಎತ್ತರವೂ ಉದ್ದವೂ ಆದ ಗೋಡೆ ಸಿಕ್ಕುತ್ತದೆ. ಈ ಗೋಡೆ ಚಚ್ಚೌಕವಾದ ಒಂದು ಉದ್ಯಾನದ ಒಂದು ಪಕ್ಕ. ಬೀದಿಯ ಮತ್ತೊಂದು ಕಡೆ ಕಮಾನುಗಳುಳ್ಳ ಹೊಸ ಮನೆಗಳು ಇವೆ. ಈ ಮನೆಗಳು ನಾನಾಗಲೇ ವರ್ಣಿಸಿದ ದಿಲ್ಲಿಯ ಮನೆಗಳಂತೆ ಇವೆ. ಗೋಡೆಯನ್ನೇ ಹಿಡಿದು ಅರ್ಧ ದೂರ ಹೋದರೆ ಬಲಗಡೆಗೆ, ಅಂದರೆ ಮನೆಗಳ ಕಡೆಗೆ, ಒಂದು ದೊಡ್ಡ ಬಾಗಿಲನ್ನು ನೋಡುತ್ತೇವೆ. ಇದೇ ಕಾರವಾನ್‌ಸರಾಯ್ ಪ್ರವೇಶದ್ವಾರ. ಗೋಡೆಯ ಎದುರುಗಡೆಗೆ ಅಲಂಕಾರಮಂಟಪವೂ, ಅದರಲ್ಲಿ ಒಂದು ಭವ್ಯವಾದ ಹೆಬ್ಬಾಗಿಲೂ ಇವೆ. ಮುಖಮಂಟಪವನ್ನು ಕೆಂಪು ಕಲ್ಲಿನಿಂದ ಕಟ್ಟಿದ್ದಾರೆ. ಈ ಹೆಬ್ಬಾಗಿಲಿನ ಮೂಲಕ ಒಳಗೆ ಹೋದರೆ ನಾನು ಹೇಳಬೇಕೆಂದಿರುವ ತಾಜ್‌ಮಹಲ್[2] ಕಾಣುತ್ತದೆ. ಇದು ಬೇರೆಲ್ಲ ಕಟ್ಟಡಗಳಿಗಿಂತ ಭಿನ್ನವೂ ವಿಶಿಷ್ಟವೂ ಆಗಿದೆ. ಆದರೂ ಈ ವಿಲಕ್ಷಣ ಕಟ್ಟಡವು ಮನಸ್ಸಿಗೆ ಒಂದು ರೀತಿಯ ಆಹ್ಲಾದವನ್ನುಂಟುಮಾಡದೆ ಇಲ್ಲ. ನನ್ನ ಅಭಿಪ್ರಾಯದಲ್ಲಿ ಇದಕ್ಕೆ ನಮ್ಮ ಶಿಲ್ಪಕಲೆಯ ಗ್ರಂಥಗಳಲ್ಲಿ ಸ್ಥಾನವುಂಟು. ಈ ಕಟ್ಟಡ ಕಮಾನುಗಳ ಕಟ್ಟಡ. ನೂರಾರು ರೀತಿಗಳಲ್ಲಿ ಕಟ್ಟಿದ ಕಮಾನುಗಳ ಮೇಲೆ ಕಮಾನುಗಳೂ, ಮೊಗಸಾಲೆಗಳ ಮೇಲೆ ಮೊಗಸಾಲೆಗಳೂ ಇವೆ. ಇಡೀ ಮಂದಿರವು ನೋಡಲಿಕ್ಕೆ ಭವ್ಯವಾಗಿ ಕಾಣುತ್ತದೆ. ಪೂರ್ತ ಕಟ್ಟಡದ ಕಲ್ಪನೆ ಹಾಗೂ ರಚನೆ ಬಹು ವಿಚಕ್ಷಣೆಯಿಂದ ಕೂಡಿದೆ. ಕಣ್ಣಿಗೆ ಬೇಡವಾದ್ದು ಯಾವುದೂ

---

[1]ಆಗ್ರಾಕ್ಕೆ ಸಮೀಪವಾಗಿ ಸಿಕಂದ್ರಾದಲ್ಲಿರುವ ಅಕ್ಬರನ ಸಮಾಧಿ ಮಂದಿರವನ್ನು ಅಕ್ಬರನೇ ತನ್ನ ಜೀವಿತ ಕಾಲದಲ್ಲಿ ಕಟ್ಟಿಸಲು ಆರಂಭಿಸಿದ. ಯಾವುದೋ ಒಂದು ಬೌದ್ಧ ಶಿಲ್ಪದ ಮಾದರಿಯನ್ನು ಆತ ಅನುಸರಿಸಿ ಆ ಮಂದಿರವನ್ನು ಕಟ್ಟಲು ಆರಂಭಿಸಿದನೆಂದು ಹೇಳುತ್ತಾರೆ. ಅದನ್ನು ಮುಗಿಸಿದವನು ಆತನ ಮಗ ಜಹಂಗೀರ್. ಅದು ಹಿಂದೆ ಅಥವಾ ಅದರ ತರುವಾಯ ಕಟ್ಟಿಸಿದ ಯಾವ ಮಂದಿರವನ್ನೂ ಹೋಲುವುದಿಲ್ಲ.

[2]ತಾಜ್‌ಮಹಲ್: ತಾಜಮಹಲು ಷಾಜಹಾನ್ ಚಕ್ರವರ್ತಿ ಹೆಂಡತಿ ಮಮ್‌ತಾಜ್‌ಳಿಗಾಗಿ ಕಟ್ಟಿಸಿದ ಸಮಾಧಿಭವನ. ಕಟ್ಟಡದರಚನೆ ೧೬೩೨ರಲ್ಲಿ ಪ್ರಾರಂಭವಾಗಿ ೧೬೫೦ರಲ್ಲಿ ಪೂರ್ತಿಗೊಂಡಿತು. ಪೂರ್ಣ ಹೆಸರು ಮಮ್‌ತಾಜ್ ಮಹಲ್.

ಇಲ್ಲ. ಆದರ ಬದಲು ಪ್ರತಿಯೊಂದು ಭಾಗವೂ ನಯನಮನೋಹರವಾಗಿದೆ. ನೋಡಿದಷ್ಟು ಮತ್ತೆ ಮತ್ತೆ ನೋಡಬೇಕೆನಿಸುತ್ತದೆ. ಕಳೆದ ಸಾರಿ ನಾನು ತಾಜ್‌ಮಹಲ್ ನೋಡಲು ಹೋದಾಗ ನನ್ನೊಡನೆ ಒಬ್ಬ ಫ್ರೆಂಚ್ ವರ್ತಕ ಇದ್ದ[1]. ಈ ಅಪೂರ್ವವಾದ ಶಿಲ್ಪ ಚಮತ್ಕಾರವನ್ನು ವರ್ಣಿಸುವುದು ಅಷ್ಟು ಸುಲಭವಲ್ಲ ಎಂದು ಆಗ ನಮಗಿಬ್ಬರಿಗೂ ಅನ್ನಿಸಿತು. ಆಗ ನಾನು ನನ್ನ ಅಭಿಪ್ರಾಯ ಹೇಳಲಿಲ್ಲ. ಇಂಡೀಸಿನಲ್ಲಿ ಬಹಳ ಕಾಲ ಇದ್ದ ಕಾರಣ ನನ್ನ ಅಭಿರುಚಿ ಕೆಟ್ಟಿರಬಹುದೆಂದು ಭಾವಿಸಿ, ನಾನು ಏನನ್ನೂ ಹೇಳುವ ಗೋಜಿಗೆ ಹೋಗಲಿಲ್ಲ. ನನ್ನ ಸಹಚರ ಈಚೆಗೆ ತಾನೆ ಫ್ರಾನ್ಸಿನಿಂದ ಬಂದಿದ್ದನಾದ ಕಾರಣ ಆತನ ಅಭಿಪ್ರಾಯವನ್ನು ಕೇಳಿ ನನಗೆ ತುಂಬಾ ಸಮಾಧಾನವಾಯಿತು. ಯುರೋಪಿನಲ್ಲಿ ಈ ರೀತಿಯ ಎದ್ದುಕಾಣುವ ಹಾಗೂ ಭವ್ಯವಾದ ಕಟ್ಟಡವನ್ನು ತಾನು ನೋಡಿಲ್ಲ ಎಂದು ಆತ ಹೇಳಿದ.

ಮೇಲೆ ಹೇಳಿದ ಅಲಂಕಾರಮಂಟಪವನ್ನು ಪ್ರವೇಶಿಸಿ ಉದ್ಯಾನದ ಕಡೆಗೆ ಸ್ವಲ್ಪ ದೂರ ಬಂದರೇ ನೀವು ಒಂದು ಎತ್ತರದ ಗುಮ್ಮಟದ ಕೆಳಕ್ಕೆ ಬರುವಿರಿ. ತಾಜ್‌ಮಹಲ್ ಕಡೆಗೆ ಹೋಗುವ ದಾರಿ ಇಡೀ ಉದ್ಯಾನವನ್ನು ಇಭ್ಭಾಗ ಮಾಡಿದೆ. ಈ ಹಾದಿ ಚಿಕ್ಕದೇನಲ್ಲ. ಆರು ಕುದುರೆಗಾಡಿಗಳು ಒಂದರ ಪಕ್ಕದಲ್ಲಿ ಒಂದು ಹೋಗುವಷ್ಟು ಅಗಲವಾಗಿದೆ. ತೋಟದ ಮಟ್ಟಕ್ಕಿಂತ ಎಂಟು ಫ್ರೆಂಚ್ ಅಡಿ ಎತ್ತರದಲ್ಲಿರುವ ಈ ಹಾದಿಗೆ ದೊಡ್ಡ ದೊಡ್ಡ ಕಲ್ಲಿನ ಚದರಬಿಲ್ಲೆಗಳನ್ನು ಹಾಸಿದ್ದಾರೆ. ಹಾದಿಯ ಮಧ್ಯೆ ಉದ್ದಕ್ಕೂ ನೀರ್ಗಾಲುವೆ ಇದೆ. ಈ ಕಾಲುವೆಯ ದಡಗಳಿಗೆ ಗೇದಕಲ್ಲುಗಳನ್ನು ಜೋಡಿಸಿದ್ದಾರೆ. ಅಲ್ಲಲ್ಲಿ ಕ್ಲುಪ್ತವಾದ ಸ್ಥಳಗಳಲ್ಲಿ ಕಾರಂಜಿಗಳನ್ನು ಕಟ್ಟಿ ಅಂದಗೊಳಿಸಿದ್ದಾರೆ.

ಈ ಎತ್ತರಿಸಿದ ಹಾದಿಯಲ್ಲಿ ಇಪ್ಪತ್ತೈದು ಮೂವತ್ತು ದಾಪು ಹೋದನಂತರ ಹಿಂದಿರುಗಿ ಅಲಂಕಾರಮಂಟಪವನ್ನು ಹಿಂಬದಿಯಿಂದ ನೋಡಿದರೆ, ಹಿಂಬಾಗ ಮುಂಭಾಗಕ್ಕೆ ಸರಿಸಮಾನವಾಗಿಲ್ಲದಿದ್ದರೂ ಎತ್ತರವಾಗಿ ಅದೇ ತರಹ ಶಿಲ್ಪದ ಮಾದರಿಯಲ್ಲಿ ಕಟ್ಟಿರುವ ಕಾರಣ ಬಹು ಸೊಗಸಾಗಿ ಕಾಣುತ್ತದೆ. ಮಂಟಪದ ಎರಡು ಕಡೆಯೂ ತೋಟದ ಗೋಡೆಯನ್ನು ಅನುಸರಿಸಿ ಉದ್ದವಾದ ಹಾಗೂ ಅಗಲವಾದ ಕಂಬಸಾಲಿನ ಪಡಸಾಲೆ ಇದೆ. ಇದೂ ಸಹ ಎತ್ತರಿಸಲ್ಪಟ್ಟಿದೆ. ಮಳೆಗಾಲದಲ್ಲಿ ವಾರಕ್ಕೆ ಮೂರು ದಿವಸ ಬಡವರಿಗೆ ಈ ಪಡಸಾಲೆಯಲ್ಲಿ ದಾನಧರ್ಮಗಳನ್ನು ಮಾಡಲಾಗುವುದು. ಈ ವ್ಯವಸ್ಥೆ ಸಾರೋದ್ಧಾರವಾಗಿ ನಡೆದುಕೊಂಡು ಹೋಗುವಂತೆ ಏರ್ಪಡಿಸಿದವನು ಷಾಜಹಾನ್.

ನಾವು ಮುನ್ನಡೆದರೆ ದೂರದಲ್ಲಿ ಭಾರಿ ಗುಮ್ಮಟವೊಂದು ಕಾಣಿಸುತ್ತದೆ. ಇದರ ಕೆಳಗಡೆಯೇ ಗೋರಿ ಇರುವುದು. ಈ ಗುಮ್ಮಟದ ಅಕ್ಕಪಕ್ಕ ಸ್ವಲ್ಪ ಕೆಳಮಟ್ಟದಲ್ಲಿ

[1] ಈತ ಬಹುಶಃ ತವೆರ್ನ್ಯೆ ಇರಬಹುದು.

ಹಲವಾರು ಉದ್ಯಾನವೀದಿಗಳೂ, ತರುಲತೆಗಳೂ, ಹೂವಿನ ವಾಟಿಗಳೂ ಇವೆ.

ನಡೆದು ಮುಂದೆ ಹೋದರೆ ನಿಮಗೆದುರಿಗಿರುವ ಗುಮ್ಮಟವಲ್ಲದೆ ನಿಮ್ಮ ಎಡಗಡೆಗೆ ಒಂದು, ಬಲಗಡೆಗೆ ಒಂದು–ಹೀಗೆ ಎರಡು ದೊಡ್ಡ ಮಂಟಪಗಳು ಕಾಣಿಸುತ್ತವೆ. ಇವನ್ನೂ ಈ ಹಿಂದೆ ಹೇಳಿದ ಮಂಟಪವನ್ನು ಕಟ್ಟಿದಂತಹ ಕೆಂಪುಕಲ್ಲಿನಿಂದಲೇ ಕಟ್ಟಿದ್ದಾರೆ. ಇವು ವಿಶಾಲವಾದ ಚಚ್ಚೌಕನೆಯ ಕಟ್ಟಡಗಳು. ನಾನು ಇವೆರಡು ಕಟ್ಟಡಗಳ ಒಳಭಾಗದ ವರ್ಣನೆಗೆ ಕೈಹಾಕುವುದಿಲ್ಲ. ಏಕೆಂದರೆ, ಇವು ನಾನೀಗ ವರ್ಣಿಸಲಿರುವ ಗುಮ್ಮಟದಂತೆಯೇ ಇವೆ. ನಡೆದುಬಂದ ಹಾದಿಯ ತುದಿಯಲ್ಲಿ ಹಾಗೂ ಈ ಗುಮ್ಮಟದ ಬದಿಯಲ್ಲಿ ವಿಶಾಲವೂ ಸುಂದರವೂ ಆದ ಜಾಗವಿದೆ. ಇದನ್ನೂ ನಾನು 'ನೀರಿನ ವಾಟಿಕೆ' (water parterre) ಎಂದು ಕರೆಯಲಿಚ್ಛಿಸುತ್ತೇನೆ. ಏಕೆಂದರೆ, ಯಾವ ಕಲ್ಲುಗಳ ಮೇಲೆ ನೀವು ನಡೆಯುವಿರೋ ಆ ಕಲ್ಲುಗಳನ್ನು ನಮ್ಮ ದೇಶದ ವಾಟಿಕೆಗಳ ಅಂಚುಗಳಿಗೆ ಹಾಕಿರುವ ಕಲ್ಲುಗಳಂತೆ ಗೇದು ವಿಧ ವಿಧ ರೀತಿಗಳಲ್ಲಿ ಜೋಡಿಸಿದ್ದಾರೆ. ಈ ಜಾಗದ ಮಧ್ಯೆ ನಿಂತು ನೋಡಿದರೆ ನಮಗೆ ಸಮಾಧಿ ಇರುವ ಮಂದಿರದ ಒಳ್ಳೆಯ ನೋಟ ಸಿಕ್ಕುತ್ತದೆ.

ಈಗ ಆ ಮಂದಿರದ ವರ್ಣನೆಯನ್ನು ನೀಡುತ್ತೇನೆ, ಕೇಳಿ : ಮಂದಿರವು ಅಮೃತಶಿಲೆಯ ಬೃಹತ್ ಗುಮ್ಮಟವಾಗಿದೆ. ಎತ್ತರ ಹೆಚ್ಚು ಕಡಿಮೆ ಪ್ಯಾರಿಸ್ಸಿನ ವಾಲ್ ಡ್ಯ ಗ್ರಾಸ್ (Val De Grace)ನಷ್ಟೇ[1] ಇದೆ. ಬೃಹತ್ ಗುಮ್ಮಟದ ಸುತ್ತ ಅಮೃತಶಿಲೆಯಲ್ಲಿ ಅನೇಕ ಕಿರುಗೋಪುರಗಳಿವೆ. ಇವು ಒಂದಕ್ಕಿಂತ ಒಂದು ತಗ್ಗಿನಲ್ಲಿದ್ದು ಕೆಳಕ್ಕೆ ಇಳಿಯುತ್ತಾ ಬರುತ್ತವೆ. ಇಡೀ ಮಂದಿರವು ನಾಲ್ಕು ಭಾರಿ ಕಮಾನುಗಳ ಮೇಲೆ ನಿಂತಿದೆ. ನಾಲ್ಕರಲ್ಲಿ ಮೂರು ಕಮಾನುಗಳು ತೆರೆದವುಗಳಾಗಿವೆ. ಇನ್ನೊಂದು ಕಮಾನನ್ನು ಕೋಣೆಯ ಗೋಡೆಗೆ ಸೇರಿದಂತೆ ಮುಚ್ಚಿದ್ದಾರೆ. ಈ ಕೋಣೆಯಲ್ಲಿ ಅದಕ್ಕೋಸ್ಕರವೇ ನೇಮಿಸಲ್ಪಟ್ಟ ಮುಲ್ಲಾಗಳು ತಾಜ್‌ಮಹಲಳ ಜ್ಞಾಪಕಾರ್ಥವಾಗಿ ಕೊರಾನಿನ ಸತತ ಪಠಣೆಯನ್ನು ಬಹಳ ಭಕ್ತಿಯಿಂದ ನಡೆಸುತ್ತಾರೆ. ಪ್ರತಿ ಕಮಾನಿನ ಮಧ್ಯೆ ಅಮೃತಶಿಲೆಯೊಳಗೆ ಕರಿಯಶಿಲೆಯಲ್ಲಿ ಕೆತ್ತಿ ಜೋಡಿಸಿರುವ ಅರಬ್ಬಿ ಲಿಪಿಯ ಉಲ್ಲೇಖಗಳು ಎದ್ದು ಕಾಣುತ್ತವೆ. ಗುಮ್ಮಟದ ಒಳಭಾಗಕ್ಕೂ ಅದರ ಗೋಡೆಗೂ ಮೇಲಿನಿಂದ ಕೆಳಭಾಗದವರೆಗೆ ಅಮೃತಶಿಲೆಯನ್ನು ಹೊದಿಸಲಾಗಿದೆ. ಶಿಲ್ಪಿಚಾತುರ್ಯದಿಂದ ಕೂಡಿಲ್ಲದ ಒಂದು ಕಲ್ಲನ್ನೂ ನಾವು ಕಾಣಲಾರೆವು. ಒಂದಲ್ಲ

---

[1] ವಾಲ್ ಡ್ಯ ಗ್ರಾಸ್ : ಈ ಗುಮ್ಮಟವನ್ನು ೧೬೪೫–೬೬ರ ಅವಧಿಯಲ್ಲಿ ಕಟ್ಟಲಾಯಿತು. ಇದು ರೋಮ್‌ನಗರದಲ್ಲಿರುವ ಸೆಂಟ್‌ಪೀಟರ್ ಮಂದಿರವನ್ನೇ ಹೋಲುವುದಂತೆ. ಇದರ ಎತ್ತರ ೧೩೩ ಅಡಿಯೂ, ವ್ಯಾಸ ೫೩ ಅಡಿಯೂ ಇದೆ. ತಾಜ್‌ಮಹಲಿನ ಮುಖ್ಯ ಗುಮ್ಮಟದ ಎತ್ತರ ೭೪ ಮತ್ತು ವ್ಯಾಸ ೫೬ ಅಡಿಗಳು.

ಒಂದು ರೀತಿಯ ಸೊಬಗನ್ನು ಬೀರದ ಯಾವ ಭಾಗವೂ ಇಲ್ಲಿಲ್ಲ. ಅಮೃತಶಿಲೆಯಲ್ಲದೆ ವಿಧವಿಧ ಅಮೂಲ್ಯ ಶಿಲೆಗಳನ್ನೂ ನಾನಾ ತರಹದ ವಿನ್ಯಾಸಗಳಲ್ಲಿ ಗೋಡೆಯ ಅಮೃತಶಿಲೆಗಳಿಗೆ ಸೇರಿಸಿದ್ದಾರೆ. ನೆಲಕ್ಕೆ ಹಾಸಿರುವ ಬಿಳಿ ಮತ್ತು ಕಪ್ಪುಶಿಲೆಗಳಲ್ಲೂ ಆ ಅಮೂಲ್ಯ ಶಿಲೆಗಳನ್ನು ಕೊರೆದು ಅತ್ಯಂತ ಅಂದವಾದ ಹಾಗೂ ಸೂಕ್ಷ್ಮವಾದ ರೀತಿಯಲ್ಲಿ ಜೋಡಿಸಿದ್ದಾರೆ.

ಗುಮ್ಮಟದ ಕೆಳಗೆ ಸಣ್ಣ ಕೋಣೆಯೊಂದಿದೆ. ಇಲ್ಲಿ ತಾಜ್‌ಮಹಲಗಳ ಗೋರಿ ಇದೆ. ಈ ಕೋಣೆಯನ್ನು ವರ್ಷಕ್ಕೊಂದೇ ಒಂದು ಸಲ ವಿಧಿವತ್ತಾದ ರೀತಿಯಲ್ಲಿ ತೆರೆಯಲಾಗುವುದು. ನಾನು ಇದರ ಒಳಭಾಗವನ್ನು ನೋಡಲಾಗಲಿಲ್ಲ. ಏಕೆಂದರೆ, ಅಲ್ಲಿಗೆ ಕ್ರೈಸ್ತರಿಗೆ ಪ್ರವೇಶವಿಲ್ಲ. ಕ್ರೈಸ್ತರು ಒಳಕ್ಕೆ ಹೋದರೆ ಅಪವಿತ್ರವಾಗುವುದಂತೆ. ನಾನು ನೋಡದಿದ್ದರೂ ಕೇಳಿದ್ದೇನೆ, ಅದಕ್ಕಿಂತ ಹೆಚ್ಚು ಶೋಭಾಯಮಾನವಾದದ್ದೂ ವೈಭವಯುತವಾದದ್ದೂ ಬೇರೆ ಯಾವುದೂ ಇಲ್ಲ ಎಂದು.

ಈಗ ನಾನು ಹೇಳಬೇಕಾಗಿರುವುದು ಗುಮ್ಮಟದಿಂದ ಉದ್ಯಾನದ ಕೊನೆಯವರೆಗೆ ಮಾಡಿರುವ ಎತ್ತರದ ದಾರಿ. ಇದು ಇಪ್ಪತ್ತೈದು ದಾಪು ಅಗಲವಾಗಿದ್ದು ಇನ್ನೂ ಹೆಚ್ಚು ಎತ್ತರವಾಗಿದೆ. ಇಲ್ಲಿ ನಿಂತು ನೋಡಿದರೆ ಕೆಳಗೆ ಹರಿಯುವ ಜಮುನಾ ನದಿ, ಕಂಗೊಳಿಸುವ ಸುಂದರವಾದ ಉದ್ಯಾನವನ, ಆಗ್ರಾ ನಗರದ ಒಂದು ಭಾಗ, ಕೋಟೆ, ನದಿಯದಂಡೆಯಲ್ಲಿ ಕಟ್ಟಿರುವ ಅಮೀರರುಗಳ ಮನೆಗಳು-ಇವನ್ನೆಲ್ಲಾ ನೋಡಬಹುದು. ಈ ಎತ್ತರದ ದಾರಿ ಉದ್ಯಾನದ ಒಂದು ಕಡೆಯ ಇಡೀ ಉದ್ದಕ್ಕೂ ಇದೆ ಎಂದರೆ ತಾಜ್‌ಮಹಲ್ ಅದ್ಭುತವಾದ ನಿರ್ಮಾಣವೆಂದು ನೀವು ಭಾವಿಸಲು ಸಾಕಷ್ಟು ಆಧಾರ ಒದಗಿಸಿದ್ದೇನೆಂದು ನನ್ನ ಭಾವನೆ. ನನಗೆ ಇಂಡಿಯಾದ ರುಚಿ ಹತ್ತಿದೆಯೆಂದು ನೀವು ಭಾವಿಸಬಹುದು. ಆದರೂ ಜಗದ ಅಚ್ಚರಿಗಳಲ್ಲಿ ಈ ಸ್ಮಾರಕಮಂದಿರ ಈಜಿಪ್ಟಿನ ಪಿರಮಿಡ್ಡುಗಳಿಗಿಂತ ಹೆಚ್ಚಿನದೆಂದು ಹೇಳಲು ನಾನು ಹಿಂದುಮುಂದು ನೋಡುವುದಿಲ್ಲ. ಪಿರಮಿಡ್ಡುಗಳಲ್ಲಿ ಹೇಳಿಕೊಳ್ಳುವಂಥಾದ್ದು ಏನಿದೆ ? ಯಾವ ರೂಪವೂ ಇಲ್ಲದ ಆ ಗುಡ್ಡೆಗಳನ್ನು ನಾನು ಎರಡು ಸಲ ನೋಡಿದೆ. ಎರಡು ಸಲವೂ ನನಗೆ ಏನೇನೂ ತೃಪ್ತಿಯಾಗಲಿಲ್ಲ. ಹೊರಗಡೆಯಿಂದ ನೋಡಿದರೆ ಅವು ಮೆಟ್ಟಲಿನೋಪಾದಿಯಲ್ಲಿ ಹಾಕಿದ ಕಲ್ಲುಗುಡ್ಡೆಗಳು. ಒಳಗಡೆಯಿಂದ ನೋಡಿದರೆ ಅಲ್ಲಿ ಮನುಷ್ಯನ ಚಾತುರ್ಯವಾಗಲಿ, ನೂತನ ವಿಧಾನವಾಗಲಿ ಕಂಡುಬರುವುದಿಲ್ಲ.

ಮೆಸ್ಯ ಷ್ಞಾ ಷಾಪ್ಲೆನ್ (Monsieur Jean Chapeline) ಎಂಬಾತನಿಗೆ ಪರ್ಷಿಯಾದ ಷಿರಾಜ್ ನಗರದಿಂದ ೧೬೬೭ರ ಅಕ್ಟೋಬರ್ ೪ರಂದು ಬರೆದ ಪತ್ರ.

ಮಿತ್ರ, ನಾನು ಎರಡು ಸೂರ್ಯ ಗ್ರಹಣಗಳನ್ನು ನೋಡಿದೆ. ಅವನ್ನು ನಾನು ಮರೆಯಲು ಸಾಧ್ಯವಿಲ್ಲ. ಒಂದನ್ನು ೧೬೫೪ರಲ್ಲಿ ಫ್ರಾನ್ಸಿನಲ್ಲಿಯೂ, ಇನ್ನೊಂದನ್ನು ೧೬೬೬ರಲ್ಲಿ ದಿಲ್ಲಿಯಲ್ಲಿಯೂ ನೋಡಿದೆ. ಮೊದಲ ಗ್ರಹಣದ ದೃಶ್ಯ ನನ್ನ ಕಣ್ಣಿಗೆ

ಕಟ್ಟಿದಂತಿದೆ. ಏಕೆಂದರೆ, ಆಗ ಮಕ್ಕಳಂತೆ ಸುಲಭವಾಗಿ ನಂಬುವ ಫ್ರೆಂಚ್ ಜನರ ಸ್ವಭಾವವನ್ನು ಕಂಡೆ. ಅವರ ಹೆದರಿಕೆಗೆ ಆಧಾರವಾಗಲೀ ಸಕಾರಣವಾಗಲೀ ಇರಲಿಲ್ಲ. ಜನರು ಎಷ್ಟೊಂದು ಹೆದರಿಬಿಟ್ಟಿದ್ದರೆಂದರೆ, ಕೆಲವರು ಸೂರ್ಯಗ್ರಹಣದಿಂದಾಗುವ ಅಪಾಯದ ನಿವಾರಣೆಗೆ ಔಷಧಿ ತೆಗೆದುಕೊಂಡರು ; ಕೆಲವರು ಮನೆಯ ಕಿಟಕಿ ಬಾಗಿಲುಗಳನ್ನು ಮುಚ್ಚಿಕೊಂಡು ಒಂದಿಷ್ಟೂ ಬೆಳಕುಬಾರದಂತಹ ಕೋಣೆಗಳಲ್ಲೋ ನೆಲಮಾಳಿಗೆಗಳಲ್ಲೋ ಸೇರಿಕೊಂಡರು ; ಸಾವಿರಾರು ಜನ ಅವರವರ ಚರ್ಚುಗಳಲ್ಲಿ ಗುಂಪು ಗುಂಪಾಗಿ ಸೇರಿಕೊಂಡರು ; ಕೆಲವರು ಗ್ರಹಣದಿಂದ ಬಹು ಅಪಾಯದ ಪರಿಣಾಮಗಳಾಗುತ್ತವೆಯೆಂದು ಹೆದರಿದರು ; ಮತ್ತೆ ಕೆಲವರು ಪ್ರಪಂಚದ ಕೊನೆ–ಪ್ರಳಯ–ಕಾದಿದೆಯೆಂದೇ ಭಾವಿಸಿದರು ; ಈ ರೀತಿಯ ನಮ್ಮ ದೇಶದ ಜನ ಅಸಂಗತ ಭಾವನೆಗಳನ್ನು ಹೊಂದಿದ್ದರು. ಆದರೆ, ಗಸ್ಸೇಂಡಿ (Gassendi)[1], ರಾಬೆರ್‌ವಾಲ್ (Roberval)[2] ಮುಂತಾದ ಜ್ಯೋತಿಶ್ಶಾಸ್ತ್ರಜ್ಞರೂ ತತ್ತ್ವಜ್ಞಾನಿಗಳೂ ಹೇಳಿಲ್ಲವೆ, ಗ್ರಹಣ ಏಕೆ ಆಗುತ್ತದೆ ಎಂದು ? ಗ್ರಹಣದಿಂದ ಯಾವ ಅಪಾಯವೂ ಇಲ್ಲವೆಂದೂ, ಈ ಸೂರ್ಯಗ್ರಹಣ ಆಗುವುದನ್ನು ಮುಂಚೆಯೇ ಹೇಳಲಾಗಿತ್ತೆಂದೂ ಮತ್ತು ಅದರಲ್ಲಿ ವಿಶೇಷವಾದುದೇನೂ ಇಲ್ಲವೆಂದೂ ಹೇಳಿತ್ತಲ್ಲವೆ? ಹಾಗಿದ್ದರೂ ದಡ್ಡರೂ ಮೋಸಮಾಡುವ ಸ್ವಭಾವದ ಜ್ಯೋತಿಷ್ಕರೂ ತಿಳಿಸುವ ಕಟ್ಟುಕಥೆಗಳನ್ನು ಜನ ನಂಬಿಬಿಟ್ಟರಲ್ಲ !

ದಿಲ್ಲಿಯಲ್ಲಿ ಕಂಡ ೧೬೬೬ರ ಸೂರ್ಯಗ್ರಹಣವೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಗ್ರಹಣಕಾಲದಲ್ಲಿ ಇಂಡಿಯನರು ನಗೆಪಾಟಲಿಗೆ ಗುರಿಯಾಗುವ ರೀತಿಯಲ್ಲಿ ನಡೆದುಕೊಂಡರು ; ಏನೇನೊ ಮೂಢನಂಬಿಕೆಗಳನ್ನು ತೋರಿಸಿಕೊಂಡರು. ಗ್ರಹಣ ಹಿಡಿಯುವ ಸಮಯ ಬಂದಾಗ ನಾನು ನನ್ನ ಮನೆಯ ಮೇಲೆ ನಿಂತು ಎಲ್ಲವನ್ನೂ ನೋಡಿದೆ. ಜಮುನಾ ನದಿಯ ಎರಡು ದಂಡೆಗಳಲ್ಲೂ ಒಂದು ಹರಿದಾರಿ ಉದ್ದಕ್ಕೂ ಜೆಂಟೈಲರು, ಅಂದರೆ ವಿಗ್ರಹಾರಾಧಕರು, ಬಹು ಸಂಖ್ಯೆಯಲ್ಲಿ ನೆರೆದಿದ್ದರು. ಎಲ್ಲರೂ ಸೊಂಟದುದ್ದ ನೀರಿನಲ್ಲಿ ನಿಂತು ಆಕಾಶದ ಕಡೆ ನೋಡುತ್ತಿದ್ದರು. ಚಿಕ್ಕ ಹುಡುಗರು ಮತ್ತು ಹುಡುಗಿಯರು ಹೆಚ್ಚು ಕಡಿಮೆ ಬೆತ್ತಲೆ ಇದ್ದರೆಂದೇ ಹೇಳಬೇಕು. ಗಂಡಸರು ಲಂಗೋಟಿಯಲ್ಲದೆ ಬೇರೆ ಬಟ್ಟೆ ತೊಟ್ಟಿರಲಿಲ್ಲ. ಮದುವೆಯಾದ ಹೆಂಗಸರು ಮತ್ತು ಆರೇಳು ವರ್ಷದ ಹುಡುಗಿಯರು ತುಂಡು ಬಟ್ಟೆಗಳನ್ನು ಸುತ್ತಿಕೊಂಡಿದ್ದರು. ಉನ್ನತ ಅಧಿಕಾರ ಮತ್ತು ಸ್ಥಾನಮಾನ ಹೊಂದಿದವರು, ಶ್ರೀಮಂತರು, ಸರಾಫರು, ಲೇವಾದೇವಿ ಮಾಡುವವರು, ರತ್ನಪಡಿ ವ್ಯಾಪಾರಿಗಳು ಮತ್ತು ಶ್ರೀಮಂತ ವರ್ತಕರು ನದಿಯ ಒಂದು

---

[1]ಗಸ್ಸೇಂಡಿ : ಪಿಯರ್ ಗಸ್ಸೇಂಡಿ. ಈತನ ಜೀವಿತಕಾಲ ಕ್ರಿ.ಶ. ೧೫೯೨ ರಿಂದ ೧೬೫೫ ಈತ್ ಫ್ರಾನ್ಸಿನ ತತ್ತ್ವಶಾಸ್ತ್ರಜ್ಞ. ಬೆರ್‌ನ್ಯೇ ಈತನ ಶಿಷ್ಯ.

[2]ರಾಬೆರ್‌ವಾಲ್ ಜೀವಿತಕಾಲ ಕ್ರಿಶ. ೧೬೦೨–೧೬೭೫, ಪ್ರಸಿದ್ಧ ಗಣಿತಶಾಸ್ತ್ರಜ್ಞ.

ದಂಡೆಯಿಂದ ಮತ್ತೊಂದು ದಂಡೆಗೆ ತನ್ನ ಸಂಸಾರ ಸಮೇತ ದಾಟಿ ಬಂದು, ದಡದ ನೀರಿನಲ್ಲಿ 'ಕನಟಿ' (kanate) ಗಳನ್ನು ನೆಟ್ಟು ಮರೆಮಾಡಿಕೊಂಡರು. ಇನ್ನೇನು ಸೂರ್ಯನ ಮೇಲೆ ಛಾಯೆ ಬೀಳುತ್ತದೆ ಎಂದಾದ ಕೂಡಲೇ ಎಲ್ಲರೂ ಒಂದೇ ಕಂಠದಲ್ಲಿ ಗಟ್ಟಿಯಾಗಿ ಕೂಗಿದರು. ಕೂಗುತ್ತಲೇ ನೀರಿನಲ್ಲಿ ನಾಲ್ಕಾರು ಸಲ ಮುಳುಗಿ ಎದ್ದರು. ಮುಳುಗಿ ಎದ್ದ ಮೇಲೆ ಸೂರ್ಯನ ಕಡೆ ಮುಖಮಾಡಿ ನಿಂತು ಬಾಯಲ್ಲಿ ಏನೋ ಹೇಳುತ್ತಾ ಹಲವಾರು ಸಲ ಬೊಗಸೆಯಲ್ಲಿ ನೀರುಬಿಟ್ಟರು. ದಿಕ್ಕು ದಿಕ್ಕಿಗೂ ತಿರುಗಿ ತಮ್ಮ ಪ್ರಣಾಮಗಳನ್ನು ಸಲ್ಲಿಸಿದರು. ಎಲ್ಲರೂ ಬಹಳ ಭಯಭಕ್ತಿಗಳಿಂದ ಕೂಡಿದ್ದರು. ಸೂರ್ಯಗ್ರಹಣ ಮುಗಿಯುವ ವರೆಗೆ ಭ್ರಾಂತಿಗೊಳಗಾದ ಈ ಜನ ಹೀಗೆಲ್ಲಾ ಮಾಡುತ್ತಾಹೋದರು. ನೀರಿನಿಂದ ಹೊರಗೆ ಬಂದ ಮೇಲೆ ಬೆಳ್ಳಿಯ ನಾಣ್ಯಗಳನ್ನು ನದಿಯ ಮಧ್ಯಕ್ಕೆ ಎಸೆದರು ; ಮತ್ತು ಈ ಅಸಂಬದ್ಧ ಆಚರಣೆಯ ಕಾಲದಲ್ಲಿ ಹಾಜರಾಗಲು ಮರೆಯದ ಬ್ರಾಹ್ಮಣರಿಗೆ (Bramen) ದಾನಧರ್ಮಗಳನ್ನು ಕೊಟ್ಟರು. ಸ್ನಾನಮಾಡಿ ದಂಡೆಗೆ ಬಂದ ಮೇಲೆ ಪ್ರತಿಯೊಬ್ಬರೂ ಹೊಸ ಬಟ್ಟೆಗಳನ್ನು ಹಾಕಿಕೊಂಡುದನ್ನು ನೋಡಿದೆ. ಬಹಳ ಭಕ್ತಿಯುಳ್ಳವರು ತಮ್ಮ ಹಳೆಯ ಬಟ್ಟೆಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟರು.

ನಾನು ನನ್ನ ಮನೆಯ ಮೇಲೆ ನಿಂತು ನೋಡಿದ ರೀತಿಯ ಗ್ರಹಣದ ಆಚರಣೆಯು 'ಇಂಡಸ್', 'ಗ್ಯಾಂಜಿಸ್' ಮುಂತಾದ ನದಿಗಳ ಬಳಿಯೂ, 'ತಲಾಬ್' (talab =ಕೆರೆ) ಗಳ ಬಳಿಯೂ, ಎಲ್ಲಕ್ಕಿಂತ ಹೆಚ್ಚಾಗಿ ತನಾಸರ್‌ನಲ್ಲಿಯೂ ನಡೆಯಿತಂತೆ. ತನಾಸರ್[1] ನಲ್ಲಿ ಹಿಂದೂಸ್ಥಾನ ಚಕ್ರಾಧಿಪತ್ಯದ ನಾನಾ ಕಡೆಗಳಿಂದ ಬಂದ ಒಂದೂವರೆ ಲಕ್ಷಕ್ಕಿಂತ ಹೆಚ್ಚು ಜನ ನೆರೆದಿದ್ದರಂತೆ. ಗ್ರಹಣಗಳ ಕಾಲದಲ್ಲಿ ಇಲ್ಲಿಯ ನೀರು ಬೇರೆಲ್ಲ ನೀರಿಗಿಂತ ಹೆಚ್ಚು ಪವಿತ್ರವೆಂಬ ಭಾವನೆಯ ಕಾರಣವೇ ಇಷ್ಟೊಂದು ಜನ ಇಲ್ಲಿ ಸೇರುತ್ತಾರಂತೆ.

ಮೊಗಲ್ ಚಕ್ರವರ್ತಿ ಮಹಮ್ಮದೀಯನಾದರೂ ಇಂಥ ಹಳೆಯ ಹಾಗೂ ಮೂಢ ಆಚರಣೆಗಳಿಗೆ ಅವಕಾಶಮಾಡಿಕೊಡುತ್ತಾನೆ. ಜೆಂಟೈಲರ ಧಾರ್ಮಿಕ ಆಚರಣೆಗಳಿಗೆ ಅತ ಅಡ್ಡಿಯಾಗುತ್ತಿಲ್ಲ. ಆದರೆ ನಾನು ಮೇಲೆ ಹೇಳಿದ ಗ್ರಹಣಕ್ಕೆ ಸಂಬಂಧಪಟ್ಟ ಆಚರಣೆಯನ್ನು ನಡೆಸುವುದಕ್ಕೆ ಮುಂಚೆ ಹಲವಾರು ಬ್ರಾಹ್ಮಣರು ಜನರ ಪರವಾಗಿ ರಾಜನನ್ನು ಕಂಡು ಒಂದು ಲಕ್ಷ ರೂಪಾಯಿಗಳನ್ನು ಒಪ್ಪಿಸಿದರು. ಇದಕ್ಕೆ ಪ್ರತಿಯಾಗಿ ರಾಜ ಕೊಟ್ಟದ್ದು ನಾಲ್ಕಾರು ಅಂಗಿಗಳು ಮತ್ತು ಒಂದು ಮುದಿ ಆನೆ, ಅಷ್ಟೆ.

ಈಗ ನಾನು ಗ್ರಹಣದ ಆಚರಣೆಗೆ ಈ ಜನ ಕೊಡುವ ಕಾರಣಗಳನ್ನು ಹೇಳುತ್ತೇನೆ. ಅವರು ಹೇಳುವುದೇನೆಂದರೆ : "ನಮ್ಮಲ್ಲಿ ನಾಲ್ಕು 'ಬೇತ್' (Beth= ವೇದ) ಗಳಿವೆ. ದೇವರೇ ಬ್ರಹ್ಮನ (Brahma) ಮೂಲಕ ಅವುಗಳನ್ನು ನಮಗೆ ದಯಪಾಲಿಸಿ

---

[1] ತನಾಸರ್ : (Tanaiser= ಥಾನೇಶ್ವರ್) ಪಂಜಾಬಿನ ಕರ್ನಾಲ್ ಜಿಲ್ಲೆಯಲ್ಲಿದೆ.

ದ್ದಾನೆ. ಈ ಗ್ರಂಥಗಳಲ್ಲಿ ಹೇಳಿದೆ, ಒಂದು 'ದೇವತಾ' (Devata= ರಾಹು) ಸೂರ್ಯನನ್ನು ಹಿಡಿಯುತ್ತದೆ ಎಂದು. ಆ ದೇವತೆ ಬಹು ಕ್ರೂರವಾದುದು ; ಅಲ್ಲದೆ ಕಪ್ಪು ಅಂದರೆ ಕಪ್ಪು ; ಅಪವಿತ್ರವೂ ಹೊಲಸೂ ಆದದ್ದು. ಇದು ಸೂರ್ಯನನ್ನು ಹಿಡಿದು ಅವನನ್ನು ಬರೆಯುವ ಮಸಿಯ ಬಣ್ಣಕ್ಕೆ ತಿರುಗಿಸುತ್ತದೆ ಮತ್ತು ಅವನನ್ನು ಹಿಡಿದು ಕೊಂಡುಬಿಡುತ್ತದೆ. ಸೂರ್ಯನೂ ದೇವತೆಯೇ. ಅವನು ಬಹು ಒಳ್ಳೆಯ ಹಾಗೂ ಪರಿಪೂರ್ಣ ಗುಣಗಳುಳ್ಳ ದೇವತೆ. ಕೆಟ್ಟ ದೇವತೆ ಅವನನ್ನು ಹಿಡಿದಾಗ ಅವನು ತುಂಬಾ ಕಷ್ಟಕ್ಕೆ ಸಿಕ್ಕಿಕೊಂಡು ನರಳುತ್ತಾನೆ. ಈ ರೀತಿ ಕಷ್ಟಕ್ಕೆ ಸಿಲುಕಿದ ಸೂರ್ಯನನ್ನು ಪಾರುಮಾಡುವುದು ಪ್ರತಿಯೊಬ್ಬರ ಕರ್ತವ್ಯ. ಇದು ಪ್ರಾರ್ಥನೆ, ಸ್ನಾನ, ಜಪತಪ, ದಾನಧರ್ಮಗಳಿಂದ ಮಾತ್ರ ಸಾಧ್ಯ. ಗ್ರಹಣದ ಕಾಲದಲ್ಲಿ ಈ ಆಚರಣೆಗಳು ತುಂಬಾ ಮಹತ್ವವುಳ್ಳವುಗಳು. ಆ ವೇಳೆಯಲ್ಲಿ ಮಾಡಿದ ಪ್ರಾರ್ಥನೆ ಹಾಗೂ ಕೊಟ್ಟ ದಾನ ಧರ್ಮ ನೂರ್ಮಡಿ ಪುಣ್ಯ ದೊರಕಿಸಿಕೊಡುತ್ತವೆ. ಹೀಗಿರುವಾಗ ಯಾರು ತಾನೆ ನೂರಕ್ಕೆ ನೂರು ಲಾಭ ಪಡೆಯಲು ಹಿಂದು ಮುಂದು ನೋಡುತ್ತಾರೆ, ಹೇಳಿ !"

ಗೆಳೆಯ, ನಾನು ಸುಲಭವಾಗಿ ಮರೆಯಲಾರದಂಥ ಗ್ರಹಣಗಳ ವಿಚಾರ ನಿಮಗೆ ಹೇಳಿದ್ದೇನೆ. ಗ್ರಹಣದ ಸಂದರ್ಭದಲ್ಲಿ ಆಚರಿಸಿದ ಹುಚ್ಚು ವರ್ತನೆಗಳನ್ನು ಕಂಡ ನನಗೆ, ಕ್ರೈಸ್ತರಲ್ಲದ ಈ ಬಡಪಾಯಿ ಜನರ (Heathens) ಇನ್ನಿತರ ಆಚಾರ ವಿಚಾರಗಳನ್ನು ಕುರಿತು ಹೇಳಬೇಕೆನಿಸುತ್ತದೆ. ನಾನು ಹೇಳುವುದನ್ನು ಕೇಳಿದ ಮೇಲೆ ನೀನು ನಿನ್ನದೇ ಆದ ತೀರ್ಮಾನಕ್ಕೆ ಬರಬಹುದು.

ಜಗನ್ನಾಥ್[1] ಎಂಬ ಪಟ್ಟಣವೊಂದಿದೆ. ಅಲ್ಲಿ ಅದೇ ಹೆಸರಿನ ವಿಗ್ರಹವಿರುವ ಹೆಸರಾಂತ ದೇವಸ್ಥಾನವಿದೆ. ವರ್ಷ ವರ್ಷ ಉತ್ಸವವೊಂದು ಎಂಟೊಂಬತ್ತು ದಿನಗಳವರೆಗೆ ನಡೆಯುತ್ತದೆ. ಹಿಂದೆ 'ಹಮ್ಮೋನ್' ದೇವಸ್ಥಾನದಲ್ಲಿ ನಡೆಯುತ್ತಿದ್ದಂತೆ ಮತ್ತು ಈಗ ಮೆಕ್ಕಾದಲ್ಲಿ ನೆರೆಯುತ್ತಿರುವಂತೆ, ಅಸಂಖ್ಯಾತ ಜನರು ಈ ಉತ್ಸವಕ್ಕೆ ನೆರೆಯುತ್ತಾರೆ. ಕೆಲವು ವೇಳೆ, ಸೇರುವ ಜನರ ಸಂಖ್ಯೆ ಒಂದೂವರೆ ಲಕ್ಷಗಳಷ್ಟಾಗುತ್ತದೆ ಎಂದು ಹೇಳುತ್ತಾರೆ. ಈ ಸಂದರ್ಭದಲ್ಲಿ ಬಹಳ ಭವ್ಯವಾದ ಮರದ ತೇರನ್ನು ಕಟ್ಟುತ್ತಾರೆ. ಇಂಥ ತೇರುಗಳನ್ನು ನಾನು ಇಂಡೀಸಿನಲ್ಲಿ ಅನೇಕ ಕಡೆ ನೋಡಿದ್ದೇನೆ. ಇದನ್ನು ನಾನಾ ತರಹ ವಕ್ರವಿಗ್ರಹಗಳಿಂದ ಅಲಂಕರಿಸಿರುತ್ತಾರೆ. ರಥಕ್ಕೆ ಹದಿನಾಲ್ಕು ಅಥವಾ ಹದಿನಾರು ಚಕ್ರಗಳು. ಐವತ್ತು ಅರವತ್ತು ಜನರು ಒಟ್ಟಿಗೆ ಕೂಡಿ ರಥ ಎಳೆಯುತ್ತಾರೆ. ಜಗನ್ನಾಥ ವಿಗ್ರಹವನ್ನು ಅಲಂಕರಿಸಿ ಚಂದಮಾಡಿ ರಥದ ಮೇಲಿಟ್ಟು ದೇವಸ್ಥಾನದಿಂದ ದೇವಸ್ಥಾನಕ್ಕೆ ಕೊಂಡೊಯ್ಯುತ್ತಾರೆ.

---

[1]ಜಗನ್ನಾಥ್ : ಒರಿಸ್ಸಾ ರಾಜ್ಯದ ಪುರಿ ಪಟ್ಟಣ. ಇದನ್ನು ಪುರಿ–ಜಗನ್ನಾಥ್ ಎಂದು ಸಹ ಕರೆಯಲಾಗಿದೆ. ಹಿಂದೆ ಇದನ್ನು ಗಜಪತಿಗಳೆಂಬ ಅರಸರು ಆಳಿದರು.

ಜಗನ್ನಾಥ ವಿಗ್ರಹವನ್ನು ಭಕ್ತಾದಿಗಳಿಗೆ ರಥೋತ್ಸವದ ಮೊದಲನೆಯ ದಿನ ತೋರಿಸುವಾಗ ನೋಡಲು ನೆರೆಯುವ ಜನ ಅಪಾರ. ಆ ಜನಸಂದಣಿಯಲ್ಲಿ ಹಾಗೂ ನೂಕುನುಗ್ಗಲಿನಲ್ಲಿ ನಡೆದು ಬೇಸತ್ತು ಸುಸ್ತಾಗುವ ಜನರಲ್ಲಿ ಕೆಲವರು ಸತ್ತೇಹೋಗುತ್ತಾರೆ. ಹಾಗೆ ಸತ್ತವರ ಪುಣ್ಯ ಹೆಚ್ಚೆಂದು ಹೊಗಳುತ್ತಾರೆ. ಆ ಬೃಹದಾಕಾರದ ರಥವು ನರಕಸದೃಶಸಂಭ್ರಮದಲ್ಲಿ (hellish triumph) ಸಾಗುತ್ತಿರುವಾಗ ಎಷ್ಟೋ ಜನ ತಮ್ಮ ದೇಹವನ್ನು ರಥದ ಚಕ್ರಗಳಿಗೆ ಒಡ್ಡಿಬಿಡುತ್ತಾರೆ. ಆ ಭಾರಿ ಚಕ್ರಗಳ ಅಡಿಯಲ್ಲಿ ಸಿಕ್ಕಿದವರು ನುಚ್ಚುನೂರಾಗುತ್ತಾರೆ. ನೋಡುತ್ತಿರುವ ಯಾರ ಮುಖದಲ್ಲಿಯೂ ಭಯವಾಗಲೀ ಅಚ್ಚರಿಯಾಗಲೀ ತೋರುವುದಿಲ್ಲ. ಈ ರೀತಿ ಬಲಿಯಾಗುವುದಕ್ಕಿಂತ ಬೇರೊಂದು ಪುಣ್ಯದ ಕೆಲಸ ಇಲ್ಲವೆಂದು ಈ ಜನರ ಭಾವನೆ. ಹೀಗೆ ಬಲಿಯಾದರೆ ತಮ್ಮನ್ನು ಜಗನ್ನಾಥನು ತನ್ನ ಪಾದಕ್ಕೆ ಸೇರಿಸಿಕೊಳ್ಳುವನೆಂದೂ, ಮುಂದೆ ತಮಗೆ ಒಳ್ಳೆಯ ಜನ್ಮ ಪ್ರಾಪ್ತವಾಗುವುದೆಂದೂ ಸಂಪೂರ್ಣ ನಂಬಿಕೆ ಈ ಜನರಲ್ಲಿದೆ.

ಬ್ರಾಹ್ಮಣರು ಇಂಥ ಮೂಢನಂಬಿಕೆಗಳನ್ನೂ, ಅಸಹ್ಯ ದುರ್ನಡತೆಗಳನ್ನೂ ಪ್ರೋತ್ಸಾಹಿಸುತ್ತಾರೆ. ಇದರಿಂದ ಅವರಿಗೆ ಎಲ್ಲ ರೀತಿಗಳಲ್ಲೂ ಅನುಕೂಲವೆ. ಮುಖ್ಯವಾದ ಗೂಢ ವಿಷಯಗಳಲ್ಲಿ ಪಾರಂಗತರಾದ ಅವರಿಗೆ ಜನರು ತುಂಬಾ ಗೌರವ ತೋರಿಸುತ್ತಾರೆ. ಜನರು ಕೊಡುವ ದಾನಧರ್ಮಗಳಿಂದ ಈ ಪುರೋಹಿತ ವರ್ಗದವರು ಶ್ರೀಮಂತರಾಗಿದ್ದಾರೆ. ಅವರ ಮೋಸ ಕುತಂತ್ರಗಳು ಎಷ್ಟು ಹೀನವಾಗಿವೆ ಹಾಗೂ ಅಸಹ್ಯಕರವಾಗಿವೆ ಎಂಬುದನ್ನು ನಾನು ಮೊದಲು ನಂಬಲು ಸಾಧ್ಯವಾಗಲಿಲ್ಲ. ಆಮೇಲೆ ಕಣ್ಣಿನಿಂದ ನೋಡಿದ ಮೇಲೆಯೇ ನಂಬಬೇಕಾಯಿತು. ಈ ಕಳ್ಳಗೊರವಮರು ಚೆಲುವೆಯಾದ ಕನ್ಯೆಯೊಬ್ಬಳನ್ನು ಆರಿಸಿ ಜಗನ್ನಾಥ ದೇವರಿಗೆ ದಾಸಿಬಿಡಿಸುತ್ತಾರೆ. ಆಕೆ ಉತ್ಸವದಲ್ಲಿ ಪಾಲುಗೊಂಡು ರಥದೊಡನೆ ದೇವಸ್ಥಾನಕ್ಕೆ ಬರುತ್ತಾಳೆ. ಆಕೆ ಅಲ್ಲಿ ಇಡೀ ರಾತ್ರಿ ಇರುತ್ತಾಳೆ. ದೇವರೇ ತನ್ನೊಡನೆ ಮಲಗುವನೆಂಬ ನಂಬಿಕೆ ಅವಳಿಗೆ. ದೇವರು ಬಂದಾಗ ಆಕೆ ಆತನಿಂದ ಅನೇಕ ವಿಚಾರಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದು ತಿಳಿಸಿರುತ್ತಾರೆ. ಮಳೆ ಬೆಳೆ ಹೇಗೆ, ಹಬ್ಬ ಹರಿದಿನಗಳಾವುವು, ಯಾವ ಪೂಜೆ ಪುರಸ್ಕಾರಗಳು ಆತನಿಗೆ ಸಲ್ಲಬೇಕು—ಇವುಗಳನ್ನು ಆಕೆ ಕೇಳಿ ತಿಳಿದುಕೊಂಡಿರಬೇಕು. ರಾತ್ರಿಯ ಕತ್ತಲ್ಲಿ ಆ ಕಳ್ಳಗೊರವಮರಲ್ಲಿ ಒಬ್ಬ ಹಿಂದಿನ ಕಿರುಬಾಗಿಲಿನಿಂದ ಒಳಹೊಕ್ಕು, ಆ ಅರಿಯದ ಕನ್ನೆಯನ್ನು ಭೋಗಿಸಿ, ಆಕೆಯ ಮನಸ್ಸಿನ ಭಾವನೆಗಳೆಲ್ಲ ಪೂರೈಕೆಯಾಗುವಂತೆ ನಡೆದುಕೊಳ್ಳುತ್ತಾನೆ. ಮಾರನೆಯ ದಿನ ಆಕೆಯನ್ನು ಜಗನ್ನಾಥನ ಪತ್ನಿಯೇ ಎಂಬಂತೆ ರಥದಲ್ಲಿ ಜಗನ್ನಾಥನ ಪಕ್ಕದಲ್ಲಿ ಕುಳ್ಳಿರಿಸಿ, ಇನ್ನೊಂದು ದೇವಸ್ಥಾನಕ್ಕೆ ಕರೆದುಕೊಂಡುಹೋಗುತ್ತಾರೆ. ಆಕೆ ಹಿಂದಿನ ರಾತ್ರಿ ಆ ಕಾಮಪಿಪಾಸೆಯ ಪುರೋಹಿತನಿಂದ ಏನೇನು ಕೇಳಿದಳೋ ಅವನ್ನೆಲ್ಲಾ ಜನರಿಗೆ ತಿಳಿಸುವಂತೆ ಬ್ರಾಹ್ಮಣರು ಹೇಳುತ್ತಾರೆ. ಆಕೆ ತಾನು ಕೇಳಿದ ಪ್ರತಿಯೊಂದು ಮಾತೂ ಜಗನ್ನಾಥನ ಬಾಯಿಂದಲೇ ಬಂದಿತೆಂಬಂತೆ ಬಣ್ಣಿಸುತ್ತಾಳೆ.

ಈಗ ಇನ್ನೊಂದು ಅನಾಚಾರವನ್ನು ತಿಳಿಸುತ್ತೇನೆ ಕೇಳಿ. ರಥದ ಮುಂದೆ ಮತ್ತು ದೇವರ ಮುಂದೆ ಹಬ್ಬಹರಿದಿನಗಳಲ್ಲಿ ವೇಶ್ಯೆಯರು ವಿಧ ವಿಧ ಭಂಗಿಗಳಲ್ಲಿ ನರ್ತನಮಾಡುತ್ತಾರೆ. ಈ ದೇವದಾಸಿ ಪದ್ಧತಿ ತಮ್ಮ ಧರ್ಮಕ್ಕನುಸಾರವಾಗಿಯೇ ಇದೆಯೆಂದು ಬ್ರಾಹ್ಮಣರು ಭಾವಿಸುತ್ತಾರೆ. ಬಹು ರೂಪವತಿಯರಾದ ಈ ಸ್ತ್ರೀಯರು ಮಹಮ್ಮದೀಯರು, ಕ್ರೈಸ್ತರು ಮತ್ತು ಕೆಲವು ವೇಳೆ ಹೊರಗಿನಿಂದ ಬಂದ ಜೆಂಟೈಲರು ಕೊಡುವ ಬೆಲೆಬಾಳುವ ಬಹುಮಾನಗಳನ್ನು ತಿರಸ್ಕರಿಸಿ, ತಾವು ದೇವರಿಗೆ ಮತ್ತು ದೇವರ ಪೂಜಾರಿಗಳಿಗೆ, ಅಂದರೆ ಬ್ರಾಹ್ಮಣರಿಗೆ, ಹಾಗೂ ದೇವಸ್ಥಾನದ ಸುತ್ತಮುತ್ತ ಬೂದಿಯ ಮೇಲೆ ಕುಳಿತುಕೊಂಡಿರುವ 'ಫಕೀರ'ರಿಗೆ ಮೀಸಲು ಎಂದು ಹೇಳಿಕೊಳ್ಳುತ್ತಾರೆ.

ಸ್ತ್ರೀಯರು ಗಂಡನ ಚಿತೆಯಲ್ಲಿ ಬೀಳುವ ವಿಷಯವನ್ನು ಎಷ್ಟೋ ಜನ ಪ್ರವಾಸಿಗರು ಈಗಾಗಲೇ ಹೇಳಿರುವುದರಿಂದ ಆ ವ್ಯಸನಕರವಾದ ವಿಚಾರದ ಬಗ್ಗೆ ನಮ್ಮ ಜನರು ಸಂದೇಹಪಡುತ್ತಿಲ್ಲವೆಂದು ನಾನು ಭಾವಿಸಿದ್ದೇನೆ. ಆದರೆ ಅದರ ಬಗ್ಗೆ ಹೇಳಿರುವ ವರದಿಗಳು ಹೆಚ್ಚು ಉತ್ಪ್ರೇಕ್ಷೆಯಿಂದ ಕೂಡಿವೆ. ಹಿಂದಿಗಿಂತ ಈಗ ಅಂಥ ಪ್ರಸಂಗಗಳು ಕಡಿಮೆ. ಈ ದೇಶವನ್ನು ಆಳುವ ಮಹಮ್ಮದೀಯರು ಈ ಕ್ರೂರ ಪದ್ಧತಿಯನ್ನು ತಡೆಯಲು ತಮ್ಮ ಶಕ್ತಿಮೀರಿ ಪ್ರಯತ್ನಿಸುತ್ತಿದ್ದಾರೆ. 'ಸತಿ' ಆಗುವುದನ್ನು ಅವರು ಕಾನೂನು ಕಟ್ಟಲೆ ಮಾಡಿ ತಪ್ಪಿಸುತ್ತಿಲ್ಲ. ಏಕೆಂದರೆ, ತಮಗಿಂತಲೂ ಎಷ್ಟೋ ಪಾಲು ಅಧಿಕ ಸಂಖ್ಯೆಯಲ್ಲಿರುವ ವಿಗ್ರಹಾರಾಧಕರನ್ನು ಅವರ ಮತಧರ್ಮದಂತೆ ನಡೆಯುವಂತೆ ಬಿಡುವುದು ಅವರ ನೀತಿಯಾಗಿದೆ. ಆದರೆ ಈ ಪದ್ಧತಿಯನ್ನು ಪರೋಕ್ಷವಾದ ರೀತಿಗಳಲ್ಲಿ ತಡೆಯಲೆತ್ನಿಸುತ್ತಿದ್ದಾರೆ. ಯಾವ ಸ್ತ್ರೀಯೂ ಪ್ರಾಂತಾಧಿಕಾರಿಯ ಅನುಮತಿಯಿಲ್ಲದೆ ಚಿತೆಯಲ್ಲಿ ಬೀಳುವಂತಿಲ್ಲ. ಅನುಮತಿ ನೀಡುವುದಕ್ಕೆ ಮುಂಚೆ ಅವನು ಆಕೆ ತನ್ನ ಮನಸ್ಸನ್ನು ಬದಲಿಸುವುದಿಲ್ಲ ಎಂಬುದನ್ನು ಖಚಿತಮಾಡಿಕೊಳ್ಳುತ್ತಾನೆ. ಆತ ಆ ವಿಧವೆಯ ಮನಸ್ಸನ್ನು ಬದಲಿಸಲು ಪ್ರಯತ್ನಪಡುತ್ತಾನೆ. ಆಕೆಯು ಮಾಡುತ್ತಿರುವುದು ಸರಿಯಲ್ಲವೆಂದು ವಾದಿಸುತ್ತಾನೆ. ಅವಳಿಗೆ ಏನೇನೊ ಆಸೆಗಳನ್ನು ತೋರಿಸುತ್ತಾನೆ. ಇವುಗಳಿಂದ ಆಕೆಯ ಮನಸ್ಸನ್ನು ಬದಲಿಸಲು ಸಾಧ್ಯವಿಲ್ಲದಿದ್ದರೆ ಆಕೆಯನ್ನು ತನ್ನ ಅಂತಃಪುರಕ್ಕೆ ಕಳುಹಿಸಿ ಅಲ್ಲಿರುವ ಸ್ತ್ರೀಯರಿಂದಲೂ ಹೇಳಿಸುತ್ತಾನೆ. ಇಷ್ಟೆಲ್ಲಾ ಅಡೆತಡೆಗಳಿದ್ದರೂ ಸತಿಯಾಗುತ್ತಿರುವವರ ಸಂಖ್ಯೆ ಇನ್ನೂ ಸಾಕಷ್ಟು ಇದೆಯೆಂದೇ ಹೇಳಬೇಕು. ಅದರಲ್ಲಿಯೂ ರಾಜರುಗಳ ನಾಡಿನಲ್ಲಿ ಇನ್ನೂ ಹೆಚ್ಚು. ಅಲ್ಲಿಯ ಅಧಿಪತಿಗಳು ಮಹಮ್ಮದೀಯರಲ್ಲ.

ಈಗ ನಾನು ನೋಡಿದ ಪ್ರತಿಯೊಂದು ಸಹಗಮನವನ್ನೂ ವರ್ಣಿಸುವ ಗೋಜಿಗೆ ಹೋಗದೆ, ಎರಡು ಮೂರು ದಾರುಣ ದೃಶ್ಯಗಳನ್ನು ಮಾತ್ರ ತಿಳಿಸುತ್ತೇನೆ: ಮೊಟ್ಟಮೊದಲು, ಬೆಂಕಿಗೆ ಬೀಳುವಂತೆ ಯಾವ ಸ್ತ್ರೀಯ ಮನಸ್ಸನ್ನು ಬದಲಿಸಲು ನಾನು ಪ್ರಯತ್ನಪಟ್ಟೆನೋ ಆಕೆಯ ವಿಚಾರ ಹೇಳುತ್ತೇನೆ. ನನ್ನ ಹಿತೈಷಿ ದನೇಷ್‌ಮಂಡ್ ಖಾನನ

ಬಳಿ ಬೆಂದಿದಾಸ್ ಎಂಬ ಹೆಸರಿನ ಮುಖ್ಯ ಕಾರಕೂನ ಇದ್ದ. ಆತ ಕ್ಷಯದ ಜ್ವರದಿಂದ ನರಳುತ್ತಿದ್ದ. ನಾನು ಎರಡು ವರ್ಷಗಳಿಗಿಂತಲೂ ಹೆಚ್ಚು ಕಾಲ ಆತನಿಗೆ ಔಷಧಿ ಕೊಡುತ್ತಿದ್ದೆ. ಕೊನೆಗೆ ಆತ ಸತ್ತುಹೋದ. ಅವನ ಹೆಂಡತಿ ತನ್ನ ಗಂಡನ ಚಿತೆಯಲ್ಲಿ ಬಿದ್ದು ಸಾಯುವುದಾಗಿ ತೀರ್ಮಾನ ಮಾಡಿಬಿಟ್ಟಳು. ಆಕೆಯ ನಂಟರು ಆಗಾನ ಬಳಿ ಕೆಲಸದಲ್ಲಿದ್ದರು. ಆತನ ಅಪೇಕ್ಷೆಯಂತೆ ಅವರು ಆಕೆಯ ಮನಸ್ಸನ್ನು ಬದಲಿಸಲು ಪ್ರಯತ್ನಪಟ್ಟರು ; ಅವರು ತಮ್ಮ ಕೈಲಾದುದನ್ನೆಲ್ಲಾ ಮಾಡಿದರು. ಆದರೆ ಆಕೆಯ ತೀರ್ಮಾನ ಒಬ್ಬ ಸಹಧರ್ಮಿಣಿಗೆ ತಕ್ಕಂಥದೇ ಆಗಿತ್ತು. "ಚಿಕ್ಕ ಮಕ್ಕಳ ಮುಖ ನೋಡಿ ನಿನ್ನ ಪ್ರಯತ್ನವನ್ನು ಕೈಬಿಡುವುದೊಳ್ಳೆಯದು; ಮಕ್ಕಳ ಮೇಲಿನ ನಿನ್ನ ಮಮತೆ ಸತ್ತ ಗಂಡನ ಮೇಲಿನ ಪ್ರೀತಿಯನ್ನು ಮೀರಿಸುವಂತಿರಬೇಕು"—ಈ ತರಹ ಹಿತವಚನಗಳು ಆಕೆಯ ಮೇಲೆ ಯಾವ ಪರಿಣಾಮವನ್ನು ಉಂಟುಮಾಡಲಿಲ್ಲ. ಆಗ ಅವರು ನನ್ನನ್ನು ಕೇಳಿಕೊಂಡರು, 'ನೀನಾದರೂ ಹೇಳಿ ನೋಡು' ಎಂದು. ಆಗಾನೂ ಹೇಳಿದ. ಸರಿ, ನಾನು ಆಕೆಯ ಮನೆಗೆ ಹೋದೆ. ಅಲ್ಲಿ ಒಂದು ಕೋಣೆಯಲ್ಲಿ ಏಳೆಂಟು ಜನ ಮುದಿ ಗೊಡ್ಡುಗಳ ಸೈತಾನ್‌ಸಭೆ (Sabath = Sabbath) ಸೇರಿತ್ತು. ನಾಲ್ಕೈದು ಜನ ಬ್ರಾಹ್ಮಣರು ಶವದ ಸುತ್ತ ತಾಳಹಾಕಿಕೊಂಡು ಭಯಂಕರವಾಗಿ ಕೂಗುತ್ತಿದ್ದರು. ಸತ್ತ ಗಂಡನ ಪಾದಗಳ ಬಳಿ ಆಕೆ ಕುಳಿತಿದ್ದಳು. ತಲೆ ಕೆದರಿತ್ತು; ಮುಖ ಬಿಳುಪೇರಿತ್ತು. ಆದರೂ ಆಕೆಯ ಕಣ್ಣಿನಲ್ಲಿ ಒಂದು ತೊಟ್ಟಾದರೂ ನೀರಿರಲಿಲ್ಲ. ಉಳಿದವರಂತೆ ಅವಳು ಸಹ ಕಿರುಚುತ್ತಿದ್ದಳು. ಆ ಕಿರುಚಾಟ ನಿಂತ ಮೇಲೆ ನಾನು ಆಕೆಯನ್ನು ಕುರಿತು ವಾತ್ಸಲ್ಯದಿಂದ ಹೀಗೆ ಹೇಳಿದೆ: "ದನೇಷ್ ಮಂಡ್ ಖಾನ್ ಕಳುಹಿಸಿಕೊಟ್ಟಿರುವುದರಿಂದ ನಾನಿಲ್ಲಿಗೆ ಬಂದಿದ್ದೇನೆ. ನಿನ್ನ ಮಕ್ಕಳಿಗಾಗಿ ನೀನು ಸತಿಯಾಗುವ ಯೋಚನೆಯನ್ನು ಬಿಟ್ಟುಬಿಡ. ಹಾಗೆ ಮಾಡಿದರೆ ನಿನ್ನ ಪ್ರತಿಯೊಂದು ಮಗುವಿಗೆ ತಿಂಗಳಿಗೆ ಎರಡು ಕ್ರೌನು ಗಳ ಸಹಾಯಧನ ಕೊಡುವುದಾಗಿ ಖಾನ್ ಹೇಳಿದ್ದಾರೆ. ನೀನು ಚಿತೆಯೇರುವುದನ್ನು ತಡೆಯುವ ವಿಧಾನಗಳು ಗೊತ್ತುಂಟು. ಯಾರು ನಿನ್ನನ್ನು ಈ ಕೆಲಸಕ್ಕೆ ಉತ್ತೇಜಿಸು ತ್ತಿದ್ದಾರೊ ಅವರನ್ನು ಶಿಕ್ಷಿಸುವುದಕ್ಕೂ ಅವಕಾಶವುಂಟು. ನಿನ್ನ ಮಕ್ಕಳಿಗಾಗಿ ನೀನು ಬದುಕಲೇಬೇಕೆಂದು ನೆಂಟರಿಷ್ಟರೆಲ್ಲರ ಆಸೆ. ಮಕ್ಕಳಿಲ್ಲದ ವಿಧವೆಯರು ಸತ್ತ ಗಂಡಂದಿ ರೊಡನೆ ಚಿತೆಯೇರದೆಹೋದರೆ ಒದಗುವ ಕಳಂಕಕ್ಕೆ ನೀನು ಗುರಿಯಾಗುವುದಿಲ್ಲ."

ಹೀಗೆ ನನ್ನ ವಾದವನ್ನು ಮನಸ್ಸಿಗೆ ನಾಟುವಂತೆ ಆಕೆಯ ಮುಂದಿಟ್ಟೆ. ಆದರೆ ಆಕೆಯ ತುಟಿ ಪಿಟಕ್ಕೆನ್ನಲಿಲ್ಲ. ಕೊನೆಗೆ ನನ್ನ ಕಡೆ ದುರುಗುಟ್ಟಿಕೊಂಡು ನೋಡುತ್ತಾ "ಚಿತೆಯನ್ನೇರಲು ನನಗೆ ಅಡ್ಡಿಯನ್ನುಂಟುಮಾಡಿದರೆ ಈ ತಲೆಯನ್ನು ಗೋಡೆಗೆ ಬಡಿದು ಪ್ರಾಣ ಕಳೆದುಕೊಳ್ಳುತ್ತೇನೆ !" ಎಂದುಬಿಟ್ಟಳು. ಇದನ್ನು ಕೇಳಿ ಅವ ಳಿಗೆ ಯಾವುದಾದರು ದೆವ್ವ ಹಿಡಿದಿದೆಯೋ ಎನ್ನಿಸಿಬಿಟ್ಟಿತು ನನಗೆ. ನಾನು ನನ್ನ ಸಿಟ್ಟನ್ನು ತೋರಗೊಡದೆ "ಹಾಗೆ ಆಗಲಿ. ಅದಕ್ಕೆ ಮುನ್ನ ನಿನ್ನೀ ಮಕ್ಕಳ ಕುತ್ತಿಗೆ ಕೊಯ್ದು,

ಅವರನ್ನು ಅದೇ ಚಿತೆಯಲ್ಲಿ ಹಾಕು. ಹಾಗೆ ಮಾಡದಿದ್ದರೆ ಅವರು ಹೊಟ್ಟೆಗಿಲ್ಲದೆ ಸಾಯಬೇಕಾತ್ತದೆ. ಏಕೆಂದರೆ, ನೀನು ಸಹಗಮನಮಾಡಿ ಸತ್ತರೆ ದನೇಷ್ ಮಂಡ್ ಖಾನ್ ಯಾವ ಸಹಾಯಧನವನ್ನೂ ಕೊಡುವುದಿಲ್ಲ" ಎಂದು ತಿಳಿಸಿದೆ.

ಈ ರೀತಿ ನಾನು ಜೋರಿನಿಂದಲೂ ಧೃಢನಿಶ್ಚಯದಿಂದಲೂ ಹೇಳಿದ್ದು ಆಕೆಯ ಮೇಲೆ ತಕ್ಕ ಪರಿಣಾಮವನ್ನುಂಟುಮಾಡಿತು. ಆಕೆ ಒಂದು ಮಾತೂ ಆಡದೆ ತನ್ನ ತಲೆಯನ್ನು ಮಂಡಿಯ ಮೇಲೆ ಇಟ್ಟುಕೊಂಡು ಕುಳಿತಳು. ಅನೇಕ ಮುದಿಗೂಬೆಗಳೂ ಬ್ರಾಹ್ಮಣರೂ ಬಾಗಿಲು ಕಡೆ ಸರಿದು ಮೆಲ್ಲಗೆ ಹೊರಟುಹೋದರು. ಆ ಹೆಂಗಸನ್ನು ಆಕೆಯ ಹಿತೈಷಿಗಳ ಆರೈಕೆಯಲ್ಲಿ ಬಿಟ್ಟು, ನಾನು ಕುದುರೆ ಹತ್ತಿ ನನ್ನ ಮನೆಗೆ ಹಿಂತಿರುಗಿದೆ. ಸಂಜೆ ನಾನು ದನೇಷ್ ಮಂಡ್‌ಖಾನನಿಗೆ ನಡೆದ ವಿಚಾರವನ್ನೆಲ್ಲ ತಿಳಿಸಬೇಕೆಂದು ಅವನ ಮನೆಗೆ ಹೋಗುತ್ತಿರುವಾಗ, ಆಕೆಯ ಸಂಬಂಧಿಗಳಲ್ಲಿ ಒಬ್ಬ ಸಿಕ್ಕಿ ಶವವನ್ನು ಮಾತ್ರ ದಹನ ಮಾಡಲಾಯಿತೆಂದೂ, ಆ ವಿಧವೆ ಬೆಂಕಿಯಲ್ಲಿ ಬೀಳಲಿಲ್ಲವೆಂದೂ ಹೇಳಿದ.

ಮನಃಪೂರ್ವಕವಾಗಿ ಚಿತೆಯಲ್ಲಿ ಬಿದ್ದ ಅನೇಕ ಸತಿಯರನ್ನು ನಾನು ನೋಡಿದ್ದೇನೆ. ನೋಡಿ ನೋಡಿ ನನಗೆ ಸಾಕಾಗಿಹೋಗಿದೆ. ಆದರೂ ನನ್ನ ಕಣ್ಣು ಮುಂದೆ ನಡೆದ ಒಂದು ಪ್ರಸಂಗವನ್ನು ಇಲ್ಲಿ ಹೇಳಲು ಅಪೇಕ್ಷಿಸುತ್ತೇನೆ. ಚಿತೆಯಲ್ಲಿ ಬೀಳುವ ಸತಿಯರ ಧೈರ್ಯಸ್ಥೈರ್ಯಗಳನ್ನು ನಿಮಗೆ ಮನದಟ್ಟಾಗುವಂತೆ ಹೇಳಲು ಸಾಧ್ಯವಿಲ್ಲ. ನೀವು ನೋಡದೆ ನಾನು ಹೇಳುವುದನ್ನು ನಂಬಲಾರಿರಿ.

ನಾನು ಒಮ್ಮೆ ರಾಜರುಗಳ ನಾಡುಗಳ ಮೂಲಕ ಅಹಮದಾಬಾದಿನಿಂದ ಆಗ್ರಾಕ್ಕೆ ಹೋಗುತ್ತಿದ್ದೆ. ನಮ್ಮ ಕಾರವಾನ್ ಮಧ್ಯಾಹ್ನ 'ಬೂರ್‌ಗದೇ'ಯದ (bourgade= ಬೂರುಗ ಅಥವಾ ಆಲದ) ಮರದಡಿ ನೆರಳಿನಲ್ಲಿ ತಂಗಿತ್ತು. ಒಬ್ಬ ಹೆಂಗಸು ಮೃತನಾದ ಗಂಡನೊಡನೆ ಸಹಗಮನಮಾಡಿ 'ಮಹಾಸತಿ' ಆಗುವಳೆಂದು ಯಾರೋ ಹೇಳಿದರು. ನಾನು ಆ ಕೊಡಲೇ ಆ ಸ್ಥಳಕ್ಕೆ ಓಡಿದೆ. ಅಲ್ಲಿ ಒಂದು ಕೆರೆ. ಬಹಳ ಮಟ್ಟಿಗೆ ಅದು ಬತ್ತಿ ಹೋಗಿತ್ತು. ಅದರ ಅಂಗಳದಲ್ಲಿ ಒಂದು ಆಳವಾದ ಗುಂಡಿ ತೋಡಿ ಸೌದೆ ತುಂಬಿ ಅದರ ಮೇಲೆ ಸತ್ತವನ ಶವವನ್ನು ಮಲಗಿಸಿದ್ದರು. ಅವನ ಹೆಂಡತಿ ಅದೇ ಸೌದೆಯ ಮೇಲೆ ಕುಳಿತಿದ್ದಳು. ನಾಲ್ಕಾರು ಜನ ಬ್ರಾಹ್ಮಣರು ಸುತ್ತ ಮುತ್ತ ನಿಂತು ಸೌದೆಗೆ ಬೆಂಕಿ ಹೊತ್ತಿಸುತ್ತಿದ್ದರು. ಐದಾರು ಜನ ಮಧ್ಯವಯಸ್ಸಿನ ಹೆಂಗಸರು ಒಬ್ಬರ ಕೈ ಒಬ್ಬರು ಹಿಡಿದುಕೊಂಡು ಹಾಡುತ್ತ ಕೊಂಡದ ಸುತ್ತ ಕುಣಿಯುತ್ತಿದ್ದರು. ಅನೇಕ ಜನ ಹೆಂಗಸರು ಗಂಡಸರು ಇದನ್ನು ನೋಡಲು ನೆರೆದಿದ್ದರು.

ಕೊಂಡಕ್ಕೆ ಯಥೇಚ್ಛವಾಗಿ ತುಪ್ಪವನ್ನೂ ಎಣ್ಣೆಗಳನ್ನೂ ಸುರಿದಿದ್ದರಿಂದ ಬೆಂಕಿ ತೋರಿಸಿದ ಕೂಡಲೇ ಧಗ್ಗೆಂದು ಹೊತ್ತಿಕೊಂಡಿತು. ಕೊಂಡದ ಮೇಲೆ ಕುಳಿತ ಹೆಂಗಸಿನ ಬಟ್ಟೆಗೆ ಬೆಂಕಿ ತಾಗಿತು. ಆಕೆಯ ಬಟ್ಟೆಗಳಿಗೆ ಸುಗಂಧತೈಲಗಳನ್ನು ಹಚ್ಚಿದ್ದರು. ಆಕೆಯ

ವ್ಯೆಗೆ ಶ್ರೀಗಂಧ ತೇದು ಸವರಿದ್ದರು. ಬೆಂಕಿ ಹೊತ್ತಿಕೊಂಡಾಗ ಆಕೆ ಮುಖವನ್ನು ಒಂದಿಷ್ಟಾದರೂ ಚುಳ್ಳಿಸಲಿಲ್ಲ. ಆಕೆ 'ಐದು' 'ಎರಡು' ಎಂಬ ಪದಗಳನ್ನು ಉಚ್ಚರಿಸಿದ ಳೆಂದು ಹೇಳಿದರು. "ಇದೇ ಗಂಡನೊಡನೆ ಇಲ್ಲಿಯವರೆಗೆ ಐದು ಸಲ ಚಿತೆಯನ್ನೇರಿದ್ದೇನೆ. ಇನ್ನೆರಡು ಸಲ ಚಿತೆ ಏರಿದರೆ ನಾನು ವೈಕುಂಠವಾಸಿಯಾಗಿ ಪುನರ್ಜನ್ಮದಿಂದ ಪಾರಾಗುವೆ" ಎಂಬುದು ಅದರ ಅರ್ಥವಂತೆ.

ಇದಿನ್ನೂ ಆ ಘೋರ ಕೃತ್ಯದ ಆರಂಭ ಅಷ್ಟೆ. ಕೊಂಡದ ಸುತ್ತ ಹೆಂಗಸರು ಹಾಡುತ್ತಾ ಕುಣಿಯುತ್ತಾ ಇದ್ದದ್ದು ಏನೋ ಒಂದು ಪದ್ಧತಿಯ ಕಾರಣ ಎಂದು ಭಾವಿ ಸಿದ್ದೆ. ಆದರೆ ಯಾವಾಗ ಒಬ್ಬಳ ಬಟ್ಟೆಗೆ ಬೆಂಕಿ ತಾಗಿತೋ ಆಗ ಆಕೆ ತಲೆಮುಂದಾಗಿ ಕೊಂಡದ ಗುಂಡಿಯಲ್ಲಿ ಬಿದ್ದಾಗ ನನಗಾದ ಅಚ್ಚರಿ ಅಷ್ಟಿಷ್ಟಲ್ಲ. ಇದರಂತೆಯೇ ತನ್ನ ಸೆರಗಿಗೆ ಬೆಂಕಿ ತಾಗಿದಾಗ ಮತ್ತೊಬ್ಬಳು ಸಹ ಹಾಗೆಯೇ ಮಾಡಿದಳು. ಕೊನೆಗೆ ಮೂವರು ಹೆಂಗಸರು ಕೈ ಕೈ ಹಿಡಿದು ಲಯಬದ್ಧವಾಗಿ ಕುಣಿಯುತ್ತಾ ಕುಣಿಯುತ್ತಾ ಒಬ್ಬರಾದ ಮೇಲೊಬ್ಬರು ಕೊಂಡದಲ್ಲಿ ಧುಮುಕಿದರು.

ನಾಲ್ಕಾರು ಜನರು ಬೆಂಕಿಗೆ ಬಿದ್ದ ಅರ್ಥವನ್ನು ಆ ಮೇಲೆ ಕೇಳಿದಾಗ ಆ ಐವರು ಹೆಂಗಸರು ಸತಿಯಾದವಳ ಸೇವಕಿಯರಾಗಿದ್ದರೆಂದೂ, ಗಂಡನ ಕಾಯಿಲೆಯಿಂದ ದುಃಖ ಪಡುತ್ತಿದ್ದ ಆಕೆಯನ್ನು ನೋಡಲಾರದೆ ಸೇವಕಿಯರು ತಾವೂ ಚಿತೆಯಲ್ಲಿ ಬಿದ್ದು ಸಾಯುವೆವೆಂದು ವಾಗ್ದಾನಮಾಡಿದ್ದರೆಂದೂ ಹೇಳಿದರು.

ಸತ್ತ ಗಂಡನೊಡನೆ ಏಕೆ ಚಿತೆಗೆ ಬೀಳುತ್ತಾರೆಂದು ನಾನು ಕೇಳಿದಾಗ ಅನೇಕರು ಹೇಳಿದರು, ಗಂಡನ ಮೇಲಿನ ಅಗಾಧ ಪ್ರೇಮವೇ ಇದಕ್ಕೆ ಕಾರಣ ಎಂದು. ಆದರೆ ಈ ಹೇಯ ಪದ್ಧತಿಗೆ ಮೂಲ ಕಾರಣ ಬೇರೊಂದು ಉಂಟು ಎಂದು ನನಗನಿಸುತ್ತದೆ. ಅದೇನೆಂದರೆ, ಸತ್ತ ಪತಿಯ ಬೂದಿಯಲ್ಲಿ ಪತ್ನಿಯಾದವಳು ತನ್ನ ಬೂದಿಯನ್ನು ಬೆರೆಸು ವುದು ಮಹಾ ಪುಣ್ಯ ; ಯಾವ ಮರ್ಯಾದೆಯ ಹೆಂಗಸೂ ಅಂಥ ಪುಣ್ಯದ ಕೆಲಸ ಮಾಡಲು ಹಿಂಜರಿಯ ಬಾರದು ಹೀಗೆಂದು ಪ್ರತಿಯೊಬ್ಬ ಹುಡುಗಿಯ ತಾಯಿ ತನ್ನ ಮಗಳಿಗೆ ಮೊದಲಿನಿಂದಲೇ ಬೋಧನೆಮಾಡುತ್ತಾಳೆ. ಈ ಬೋಧನೆಗಳನ್ನು ಹೆಂಗಸರಿಗೆ ಹೇಳಿ ಹೇಳಿ ಅವರನ್ನು ಸದಾ ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಗಂಡಸರು. ಪ್ರಯತ್ನಿಸುತ್ತಾರೆ ಕಾಯಿಲೆ ಕಸಾಲೆಗಳಲ್ಲಿ ತಮ್ಮ ಶುಶ್ರೂಷೆ ಮಾಡಿಕೊಂಡಿರುವಂತೆ ಹೆಂಗ ಸರಿಗೆ ಈ ನೀತಿ ಬೋಧನೆ ಆಗುತ್ತದೆಯೆಂದೂ, ತಮ್ಮನ್ನು ವಿಷ ಕೊಟ್ಟು ಸಾಯಿಸದಿರಲಿ ಎಂದು ಗಂಡಸರು ಇಂಥ ವೇದಾಂತ ಹೇಳಿ ಮರಳುಮಾಡುತ್ತಾರೆಂದೂ ನನ್ನ ಭಾವನೆ.

ಇನ್ನೊಂದು ಅಪೂರ್ವವಾದ ಪ್ರಸಂಗವನ್ನು ಹೇಳಲಿಚ್ಛಿಸುತ್ತೇನೆ. ಈ ಪ್ರಸಂಗದ ಮಾತೇ ಮಾತು ಇಡೀ ಇಂಡೀಸಿನಲ್ಲಿ. ಬಹುಶಃ, ಈ ಸುದ್ದಿ ಯೂರೋಪಿಗೂ ಹೋಗಿ ಅಲ್ಲಿ ನಿಮ್ಮ ಕಿವಿ ಮುಟ್ಟಿರಬಹುದು. ಅದೇನೆಂದರೆ ಒಬ್ಬ ಹೆಂಗಸಿಗೂ ನೆರೆಮನೆಯ ಮಹಮ್ಮದೀಯ ಯುವಕನಿಗೂ ಗೆಳೆತನ ಬೆಳೆಯಿತು. ಆ ಯುವಕ ವೃತ್ತಿಯಲ್ಲಿ ದರ್ಜಿ.

ಆತನಿಗೆ ತಂಬೂರಿ ನುಡಿಸಲು ಬರುತ್ತಿತ್ತು. ಆತನ ಮೇಲಿನ ಪ್ರೀತಿಗಾಗಿ ಆಕೆ ಕೈಹಿಡಿದ ಗಂಡನನ್ನು ವಿಷ ಹಾಕಿ ಸಾಯಿಸಿದಳು. ಆ ಯುವಕ ತನ್ನನ್ನು ಮದುವೆಯಾಗುವನೆಂದು ಆಕೆ ಭಾವಿಸಿಕೊಂಡು, ಆಕೆ ತಾನು ಮಾಡಿದ ಕೆಲಸವನ್ನು ತನ್ನ ಪ್ರಿಯತಮನಿಗೆ ತಿಳಿಸಿದಳು; ಕೂಡಲೇ ಇಬ್ಬರೂ ಓಡಿಹೋಗೋಣವೆಂದು ಹೇಳಿದಳು. ನಿಧಾನಮಾಡಿದರೆ ತಾನು ಗಂಡನ ಶವದೊಡನೆ ಚಿತೆಯಲ್ಲಿ ಬೀಳಬೇಕಾಗುತ್ತದೆ ಎಂದು ತನ್ನ ಕಾತುರವನ್ನು ವ್ಯಕ್ತಪಡಿಸಿದಳು. ಇದನ್ನು ಕೇಳಿದ ದರ್ಜಿ, ಓಡಿಹೋದರೆ ತುಂಬಾ ಅಪಾಯಕ್ಕೆ ಸಿಕ್ಕಿಬೀಳಬೇಕಾಗುತ್ತದೆ ಎಂದು ಹೆದರಿ, ಅದಾಗುವುದಿಲ್ಲ ಎಂದು ಹೇಳಿಬಿಟ್ಟ. ಈ ತಿರಸ್ಕಾರದಿಂದ ನಿರಾಶಳಾದ ಆಕೆ ತನ್ನ ಗಂಡ ಅಕಸ್ಮಾತ್ ಸತ್ತನೆಂಬ ಸುದ್ದಿಯನ್ನು ನೆಂಟರಿಷ್ಟರಿಗೆ ತಿಳಿಸಿ, ತಾನು ಚಿತೆಯಲ್ಲಿ ಬೀಳುವ ನಿರ್ಧಾರ ಕೈಗೊಂಡಳು.

ಗಂಡನ ಶವವನ್ನು ದಹನಮಾಡಲು ಕೊಂಡ ಸಿದ್ಧವಾಯಿತು. ಕೊಂಡದ ಸೌದೆಯ ಮೇಲೆ ಶವವನ್ನು ಇರಿಸಿದ್ದಾಯಿತು. ಹೆಂಡತಿ ತನ್ನ ನೆಂಟರಿಷ್ಟರಿಂದ ಬೀಳ್ಕೊಳ್ಳುವ ಉದ್ದೇಶದಿಂದ ಕೊಂಡದ ಸುತ್ತ ಬಂದಳು. ಜನ ಸೇರಿದ್ದರು. ಅವರಲ್ಲಿ ಆಕೆಯ ಪ್ರಿಯತಮನಾದ ಆ ದರ್ಜಿಯೂ ಇದ್ದ. ವಾದ್ಯ ಸಾಗಿತ್ತು. ಆತನನ್ನು ತಂಬೂರಿ ಬಾರಿಸಲು ಕರೆದುತಂದಿದ್ದರು. ಇದು ಈ ದೇಶದ ಪದ್ಧತಿ. ಆಕೆ ತನ್ನ ಪ್ರಿಯತಮನನ್ನು ಸಮೀಪಿಸಿ, ಆತನಿಂದ ಬೀಳ್ಕೊಳ್ಳುವ ರೀತಿಯ ನೋಟವನ್ನು ಬೀರಿ ನೋಡುತ್ತ ಇದ್ದಕ್ಕಿದ್ದಂತೆ ಆತನ ಅಂಗಿಯನ್ನು ಹಿಡಿದು ಕೊಂಡದ ಗುಂಡಿಯ ಬಳಿಗೆ ಎಳೆದುಕೊಂಡು ಬಂದು, ಆತನ ಸಮೇತ ಧಗಧಗ ಉರಿಯುತ್ತಿದ್ದ ಬೆಂಕಿಯಲ್ಲಿ ಬಿದ್ದುಬಿಟ್ಟಳು !

ನಾನು ಸೂರತ್ತಿನಿಂದ ಪರ್ಷಿಯಾಕ್ಕೆ ಹೊರಟುಬರುತ್ತಿರುವಾಗ ಒಬ್ಬ ವಿಧವೆ ಚಿತೆಯಲ್ಲಿ ಬೀಳುವುದನ್ನು ಕಂಡೆ. ಅಲ್ಲಿ ಇಂಗ್ಲಿಷರು, ಡಚ್ಚರು ಮತ್ತು ಪ್ಯಾರಿಸಿನ ಮೆಸ್ಯ ಷಾರ್‌ಡ್ಡ್ಯಾ (Monsieur Chardin)[1]–ಇವರೆಲ್ಲ ಇದ್ದರು. ಮಧ್ಯವಯಸ್ಸಿನ ಆಕೆ ಸಾಕಷ್ಟು ಅಂದವಾಗಿದ್ದಳು. ಆಕೆಯ ಕೆಟ್ಟಧೈರ್ಯ ಹಾಗೂ ದಿಟ್ಟನಡಗೆಗಳನ್ನು ವರ್ಣಿಸಲು ನನಗೆ ಶಕ್ತಿ ಸಾಲದು. ಹೆದರದ ಹೆಜ್ಜೆ, ಎಲ್ಲರೊಡನೆ ಆಡುತ್ತಿದ್ದ ಸಲಿಗೆಯ

---

[1]ಮೆಸ್ಯ ಷಾರ್‌ಡ್ಡ್ಯಾ (ಸರ್ ಜಾನ್ ಷಾರ್‌ಡ್ಡ್ಯಾ)—ಈತನೂ ಒಬ್ಬ ಪ್ರಸಿದ್ಧ ಫ್ರೆಂಚ್ ಪ್ರವಾಸಿ. ಪ್ಯಾರಿಸಿನಲ್ಲಿ ೧೬೪೩ರಲ್ಲಿ ಜನಿಸಿದ ಈತ ಮೊಟ್ಟಮೊದಲನೆಯ ಸಲ ಪರ್ಷಿಯಾಕ್ಕೂ ಇಂಡಿಯಾಕ್ಕೂ ಬಂದದ್ದು ೧೬೬೫ರಲ್ಲಿ. ಐದು ವರ್ಷಗಳ ಅನಂತರ ಪ್ಯಾರಿಸಿಗೆ ಹಿಂದಿರುಗಿ ಮಾರನೆಯ ವರ್ಷ ಮತ್ತೆ ಇಂಡಿಯಾ ಮತ್ತು ಪರ್ಷಿಯಾಗಳಿಗೆ ಬಂದು, ೧೬೭೦ರಲ್ಲಿ ಸ್ವದೇಶಕ್ಕೆ ಹಿಂದಿರುಗಿದ. ಪ್ರಾಟೆಸ್ಟೆಂಟ್ ಧರ್ಮಪಂಥದ ಈತನಿಗೆ ಫ್ರಾನ್ಸಿನಲ್ಲಿ ಕೊಟ್ಟ ಕಿರುಕುಳದಿಂದಾಗಿ ಈತ ಲಂಡನಿಗೆ ಓಡಿಹೋದ. ಅಲ್ಲಿ ಎರಡನೇ ಚಾರ್ಲ್ಸ್ ದೊರೆಯ ಆಸ್ಥಾನದ ಒಡವೆಗಳನ್ನು ತಯಾರಿಸುವ ಕೆಲಸಕ್ಕೆ (jeweller) ನೇಮಿಸಲ್ಪಟ್ಟು, ನೈಟ್ ಬಿರುದನ್ನು ಪಡೆದು, ೧೭೧೩ರಲ್ಲಿ ಕಾಲವಾದನು. ಈತನಿಗೂ ಬೆರ್‌ನೈೕಗೂ ಬಹುಶಃ ಸೂರತ್ತಿನಲ್ಲಿ ೧೬೬೭ರಲ್ಲಿ ಭೇಟಿಯಾಗಿರಬೇಕು.

ಮಾತಿನ ರೀತಿ, ಒಂದಿಷ್ಟೂ ಚಿತ್ತಚಾಂಚಲ್ಯವಿಲ್ಲದೆ ಸ್ನಾನಮಾಡಿಸಿಕೊಳ್ಳುತ್ತಿದ್ದ ವಿಧಾನ, ನೋಡುತ್ತಾ ನಿಂತ ನಮ್ಮ ಕಡೆ ಆಕೆ ಬೀರುತ್ತಿದ್ದ ಉಪೇಕ್ಷಾದೃಷ್ಟಿ, ನಿರುತ್ಸಾಹವಿಲ್ಲದ ಆ ಸರಳತನ, ಏನೂ ತಬ್ಬಿಬ್ಬಾಗದೆ ಆಕೆ ತನ್ನ ಜೊಂಡುಹುಲ್ಲಿನ ಬುಟ್ಟಿಯನ್ನು ಹುಡುಕು ತ್ತಿದ್ದ ರೀತಿ—ಇವುಗಳನ್ನು ನಾನು ಏನೆಂದು ಹೇಳಲಿ! ಕೊಂಡದ ಮೇಲೆ ಒಂದು ಗೂಡನ್ನು ಮಾಡಿದ್ದರು. ಆಕೆ ಅದರ ಒಳಹೊಕ್ಕು ಕೊಂಡದ ಮೇಲೆ ಕುಳಿತಳು. ಸತ್ತ ಗಂಡನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡಳು. ತನ್ನ ಕೈಯಿಂದಲೇ ಬೆಂಕಿ ಹೊತ್ತಿಸಿಕೊಂಡಳು. ಹೊರಗಿನಿಂದಲೂ ಬ್ರಾಹ್ಮಣರು ಬೆಂಕಿ ಹೊತ್ತಿಸಿದರು. ಈ ದೃಶ್ಯ ವನ್ನು ನಾನು ಹೇಗೆ ವರ್ಣಿಸಬೇಕೊ ಕಾಣೆ. ಲೇಖನಿಯಾಗಲಿ ಅಥವಾ ಬಣ್ಣದ ಕುಂಚ ವಾಗಲಿ ಆ ಅಪೂರ್ವ ಘಟನೆಯನ್ನು ಚಿತ್ರಿಸಲಾರದು ಎಂದು ವ್ಯಥೆಪಡುತ್ತೇನೆ. ಅದರ ನೆನಪು ಇನ್ನೂ ನನ್ನಲ್ಲಿ ಹಸಿಹಸಿಯಾಗಿದೆ ; ನಿನ್ನೆ ಮೊನ್ನೆ ಕಂಡೆನೋ ಎಂಬ ಭಾವನೆ ಬರುತ್ತಿದೆ. ಆ ಕರಾಳ ವಾಸ್ತವ ಘಟನೆ ಘೋರಸ್ವಪ್ನವೆಂದು ಭಾವಿಸಲು ನಾನು ಶತಪ್ರಯತ್ನ ಮಾಡುತ್ತಿದ್ದೇನೆ.

ಕೆಲವು ನತದೃಷ್ಟ ವಿಧವೆಯರು ಬೆಂಕಿಯಲ್ಲಿ ಬೀಳಲು ಹಿಂದುಮುಂದು ನೋಡು ತ್ತಾರೆ ಎಂಬ ವಿಚಾರ ಕೇಳಿದ್ದೇನೆ. ಆ ನಿಷ್ಕರುಣಿ ಬ್ರಾಹ್ಮಣರು ಅವಕಾಶ ಕೊಟ್ಟರೆ ಅವರು ತಮ್ಮ ಉದ್ದೇಶವನ್ನು ಕೈಬಿಡುತ್ತಾರೆಂದು ನನ್ನ ಭಾವನೆ. ಆದರೆ ಆ ಪಿಶಾಚಿ ಗಳು ದಿಕ್ಕೆಟ್ಟ ಆ ವಿಧವೆಯರನ್ನು ಭೀತಿಪಡಿಸಿಬಿಡುತ್ತಾರೆ. ಅವರೇ ಆಗಿ ಬೆಂಕಿಯಲ್ಲಿ ನೂಕಿಯೂಬಿಡುತ್ತಾರೆ. ಒಬ್ಬ ಚಿಕ್ಕ ಪ್ರಾಯದ ಹೆಂಗಸು ಬೆಂಕಿಗೆ ಹೆದರಿ ನಾಲ್ಕೈದು ಹೆಜ್ಜೆ ಹಿಂದೆಗೆದಾಗ ಆಕೆಯನ್ನು ಮುಂದಕ್ಕೆ ನೂಕಿದ್ದನ್ನು ನಾನೇ ಕಣ್ಣಾರ ಕಂಡಿದ್ದೇನೆ. ಕೊಂಡದ ಮೇಲೆ ಕುಳಿತ ಕೆಲವು ಬಡಪಾಯಿ ಹೆಂಗಸರು ಸುತ್ತ ಆವರಿಸಿ ಬರುವ ಬೆಂಕಿಗೆ ಹೆದರಿ ಎದ್ದು ಓಡಿಬರಲು ಪ್ರಯತ್ನಮಾಡಿದಾಗ ಆ ಬ್ರಾಹ್ಮಣ ಪಾಪಿಗಳು ಉದ್ದವಾದ ಗಳುಗಳನ್ನು ಹಾಕಿ ಅವರನ್ನು ಅದುಮಿ ಹಿಡಿದುಕೊಂಡದ್ದನ್ನು ನಾನು ನೋಡಿದ್ದೇನೆ.

ಕೆಲವು ವೇಳೆ ವಿಧವೆಯರು ಆ ಕಟುಕರಾದ ಬ್ರಾಹ್ಮಣರ ಕಣ್ಣಿಗೆ ಮಣ್ಣೆರಚಿದ ಪ್ರಸಂಗಗಳೂ ಉಂಟು. ಸ್ಮಶಾನದಲ್ಲಿ ಶವಗಳ ದಹನಮಾಡುವಾಗ 'ಸ್ಕ್ಯಾವೆಂಜರ್' ಗಳು[1] ಬಂದಿರುತ್ತಾರೆ. ಚಿತೆಯಲ್ಲಿ ಬೀಳಲು ಬರುವ ಹೆಂಗಸು ಚಿಕ್ಕವಯಸ್ಸಿನವಳಾಗಿ ಚೆಲುವೆಯಾಗಿದ್ದರೆ ಮತ್ತು ಸ್ಮಶಾನಕ್ಕೆ ಬರುವ ನೆಂಟರಿಷ್ಟರು ಅಷ್ಟೇನೂ ಗಮನಾರ್ಹ ವಾಗಿಲ್ಲದಿದ್ದರೆ ಸ್ಕ್ಯಾವೆಂಜರುಗಳು ಅಧಿಕ ಸಂಖ್ಯೆಯಲ್ಲಿ ಸೇರುತ್ತಾರೆ. ಹೀಗೆ ಸೇರಿ, ಬೆಂಕಿಗೆ ಬೀಳಬೇಕೆಂದು ಮನಸ್ಸುಮಾಡಿದವಳನ್ನು ಸೆಳೆದುಕೊಂಡು ಹೊರಟುಹೋಗು ತ್ತಾರೆ. ನಾನು ಒಬ್ಬ ಹೆಂಗಸಿನ ಜೊತೆ ಆಗಾಗ್ಗೆ ಇರುತ್ತಿದ್ದೆ. ಆಕೆ ಬೆಂಕಿಯಲ್ಲಿ ಬಿದ್ದು

---

[1] Scaenger : ಜಾಡಮಾಲಿಗಳು ; ಹಲಾಲ್‌ಖೋರರು.

ಸಾಯುವುದನ್ನು ಸ್ಕ್ಯಾವೆಂಜರುಗಳ ರಕ್ಷಣೆ ಪಡೆದು ತಪ್ಪಿಸಿಕೊಂಡವಳಾಗಿದ್ದಳು. ಆದರೆ ಹೀಗೆ ತಪ್ಪಿಸಿಕೊಂಡವರು ಆಮೇಲೆ ತಮ್ಮ ಬಾಳಿನಲ್ಲಿ ದುಃಖಪಡಬೇಕಾಗುತ್ತದೆ. ಏಕೆಂದರೆ, ಅವರು ಮತ್ತೊಮ್ಮೆ ಜೆಂಟೈಲರೊಡನೆ ಬಾಳುವಂತಿಲ್ಲ. ಯಾರೊಬ್ಬರೂ ಅವರ ಬಗ್ಗೆ ಒಂದಿಷ್ಟಾದರೂ ದಯೆ ತೋರುವುದಿಲ್ಲ. ತಿದ್ದಲಾಗದ ಅಪಕೀರ್ತಿಗೆ ಅವರು ಗುರಿಯಾಗಿರುವರೆಂದು ಎಲ್ಲರ ಭಾವನೆ. ಹೀಗಾಗಿ, ಅವರು ಆ ಕೀಳು ಜನರ ಚಿತ್ರಹಿಂಸೆಗೆ ಗುರಿಯಾಗುತ್ತಾರೆ.

ಚಿತೆಯಲ್ಲಿ ಬೀಳಲು ಮುಂದಾದ ಹೆಂಗಸನ್ನು ತಡೆಯುವುದಕ್ಕಾಗಲಿ ಅಥವಾ ಬ್ರಾಹ್ಮಣರ ಹಿಡಿತದಿಂದ ಆಕೆಯನ್ನು ಬಿಡಿಸುವುದಕ್ಕಾಗಲಿ ಯಾವ ಮೊಗಲ್ ಚಕ್ರವರ್ತಿಯೂ ಧೈರ್ಯಮಾಡಲಾರ. ಹಾಗೆ ಮಾಡಿದರೆ ಅದರ ಪರಿಣಾಮ ಬಹಳ ಅಸಹನೀಯವಾಗಿ ಬಿಡುತ್ತದೆ. ಆದರೆ ಎಲ್ಲಿ ಸಾಧ್ಯವೊ ಅಲ್ಲಿ ಪೋರ್ಚುಗೀಸರು ಅನೇಕ ವಿಧವೆಯರನ್ನು ಬದುಕಿಸಿದ್ದಾರೆ. ಆ ಬಡಪಾಯಿ ಹೆಂಗಸರನ್ನು ಚಿತೆಗೆ ಆಹುತಿಮಾಡುವುದನ್ನು ಕಂಡಾಗ ನನಗೆ ರೋಷ ಉಕ್ಕಿಬಂದು, ಆ ಅನಿಷ್ಟ ಬ್ರಾಹ್ಮಣರ ವಂಶವನ್ನೇ ನಿರ್ಮೂಲಮಾಡಿ ಬಿಡುವ ಅವಕಾಶ ನನಗೆ ದೊರೆಯಬಾರದೇ ಎಂದು ಪರಿತಪಿಸುತ್ತೇನೆ.

ನಾನು ಒಮ್ಮೆ ಲಾಹೋರಿನಲ್ಲಿ ಸುಮಾರು ಹನ್ನೆರಡು ವರ್ಷ ವಯಸ್ಸಿನ ಅತಿ ಚೆಲುವೆಯಾದ ವಿಧವೆಯನ್ನು ನೋಡಿದೆ. ಕೊಂಡದಲ್ಲಿ ಬೀಳಬೇಕೆಂದಾಗ ಆಕೆಯ ಹೇಳತೀರ ಮುಖದ ಮೇಲೆ ಭಯಭೀತಿಗಳು ಎದ್ದು ಕಾಣುತ್ತಿದ್ದುವು. ಆಕೆಯ ಮನಸ್ಸಿನ ಸಂಕಟದಾಗಿತ್ತು. ಗಡಗಡನೆ ನಡುಗುತ್ತಿದ್ದ ಆಕೆ ಗೋಳೋ ಎಂದು ಅಳುತ್ತಿದ್ದಳು.ಆದರೆ ಬ್ರಾಹ್ಮಣರು ಬಿಟ್ಟಾರೆಯೇ ? ಆಕೆಯನ್ನು ತನ್ನ ತೋಳಿನಲ್ಲಿ ಹಿಡಿದುಕೊಂಡಿದ್ದ ಮುದುಕಿಯ ಸಹಾಯ ಪಡೆದು ಮೂರು ನಾಲ್ಕು ಜನ ಬ್ರಾಹ್ಮಣರು ಬೆಂಕಿಗೆ ಬೀಳಲು ಹಿಂಜರಿಯುತ್ತಿದ್ದ ಆ ನತದೃಷ್ಟ ಬಾಲೆಯನ್ನು ಮುಂದಕ್ಕೆ ತಳ್ಳಿ, ಸೌದೆಯ ಮೇಲೆ ಹಾಕಿದರು. ಓಡಿ ಹೋಗದಂತೆ ಕೈಕಾಲು ಕಟ್ಟಿದರು. ಕೊನೆಗೆ ಆ ಅರಿಯದ ಕಿಶೋರಿಯನ್ನು ಉರಿಯುವ ಜ್ವಾಲೆಯಲ್ಲಿ ಜೀವಸಹಿತ ಸುಟ್ಟರು. ಇದನ್ನು ನೋಡಿ ನನಗೆ ಸಹಿಸಲಾಗಲಿಲ್ಲ. ಸಿಟ್ಟಿಗೆದ್ದು ಕೂಗಾಡಿದೆ, ರೇಗಾಡಿದೆ. ಆದರೆ ಕೊನೆಗೆ ನಾನೇ ಸಮಾಧಾನಮಾಡಿಕೊಂಡೆ. ಈ ಜನರ ಹೇಯವಾದ ಮೂಢನಂಬಿಕೆಗೆ ಮರುಗಿದೆ. ತಂದೆ, ಅಗಮೆಮ್ನಾನ್[1] ತನ್ನ ಮಗಳಾದ ಇಫಿಜೀನಿಯಾಳನ್ನು[2] ಡಯಾನ ದೇವತೆಗೆ ಬಲಿಕೊಡುವಾಗ ಉಸುರಿದ ಕವಿವಾಣಿಯಲ್ಲಿ ಸಮಾಧಾನ ತಂದುಕೊಂಡೆ.

---

[1]ಅಗಮೆಮ್ನಾನ್ : (Agamemnon) : ಟ್ರಾಯ್ ಪಟ್ಟಣದ ಮುತ್ತಿಗೆಯಲ್ಲಿ ಭಾಗವಹಿಸಿದ ಗ್ರೀಕ್ ಯೋಧ ; ಮೈಸಿನೇ ರಾಜ್ಯದ ದೊರೆ. ಯುದ್ಧದಿಂದ ಹಿಂತಿರುಗಿದಾಗ ಪತ್ನಿ ಕ್ಲೈಟಿಮನೆಸ್ಟ್ರಾ ಎಂಬಾಕೆಯಿಂದ ಕೊಲೆಗೀಡಾದ.

[2]ಇಫಿಜೀನಿಯಾ (Iphigenia) : ಅಗಮೆಮ್ನಾನನ ಮಗಳು. ಟ್ರಾಯ್ ಪಟ್ಟಣಕ್ಕೆ ಗ್ರೀಕರ ಹಡಗುಗಳು ಹೊರಡುವಾಗ ವಾಯುದೇವತೆಗಳಿಗೆ ಇವಳನ್ನು ಬಲಿಕೊಡಲು ಪ್ರಯತ್ನಿಸಿದರು. ಆರ್ಟಮಿಸ್ (ಡಯಾನ) ದೇವತೆ ಆಕೆಯನ್ನು ಬಿಡಿಸಿದಳು.

ಈ ಬ್ರಾಹ್ಮಣ ರಾಕ್ಷಸರ ಕ್ರೂರತನ ಹಾಗೂ ಕರಾಳ ಕೃತ್ಯಗಳು ಎಷ್ಟೆಂಬುದನ್ನೆಲ್ಲಾ ನಾನು ಹೇಳಿಲ್ಲ. ಇಂಡೀಸಿನ ಕೆಲವು ಕಡೆಗಳಲ್ಲಿ ಗಂಡನೊಡನೆ ಸಾಯಬೇಕೆಂದು ಮನಸ್ಸುಮಾಡಿದ ಹೆಂಗಸರನ್ನು ಸುಡುವ ಬದಲು ಜೀವಸಹಿತ ಹೂಳಿಸುತ್ತಾರೆ, ಈ ಬ್ರಾಹ್ಮಣರು. ಗುಂಡಿ ತೋಡಿ, ಅದರಲ್ಲಿ ಹೆಂಗಸನ್ನು ನಿಲ್ಲಿಸಿ ನಿಧಾನವಾಗಿ ಮಣ್ಣು ಹೇರುತ್ತಾ ಹೋಗುತ್ತಾರೆ. ಕುತ್ತಿಗೆಯ ಮಟ್ಟಕ್ಕೆ ಬಂದಾಗ ಇದ್ದಕ್ಕಿದ್ದಂತೆ ಇಬ್ಬರು ಮೂವರು ಆ ಬಡಪಾಯಿಯ ಕುತ್ತಿಗೆಯನ್ನು ಹಿಡಿದು ತಿರುಚಿ ಸಾಯಿಸುತ್ತಾರೆ. ಆಗ ಮಂಕರಿಗಟ್ಟಲೆ ಮಣ್ಣು ಹಾಕಿ ಮುಚ್ಚಿ ತಲೆಯನ್ನು ಕಾಲಿನಿಂದ ಧುಮ್ಮಸುಮಾಡುತ್ತಾರೆ.

ಜೆಂಟೈಲರಲ್ಲಿ ಬಹುಮಂದಿ ಸತ್ತವರನ್ನು ಸುಡುತ್ತಾರೆ. ಕೆಲವರು ಶರೀರವನ್ನು ಅರ್ಧಂಬರ್ಧ ಸುಟ್ಟು ನದಿಗೆ ಬಿಸಾಡುತ್ತಾರೆ. ಗಂಗಾನದಿಯ ಬಳಿ ನಡೆಯುವ ಈ ಶವ ಸಂಸ್ಕಾರಗಳನೇಕವನ್ನು ನಾನು ನೋಡಿದ್ದೇನೆ. ನೀರಿಗೆಸೆದ ಹೆಣವನ್ನು ತಿನ್ನಲು ಮೀನು ಮೊಸಳೆಗಳ ಜೊತೆಗೆ ಕಾಗೆಗಳ ಹಿಂಡೇ ಹೆಣದ ಮೇಲೆ ಹಾರಾಡುವುದನ್ನು ನೋಡಿದ್ದೇನೆ.

ಕೆಲವರು ಸಾಯುತ್ತಿರುವ ಮನುಷ್ಯನನ್ನು ನದಿಯ ಬಳಿಗೆ ತೆಗೆದುಕೊಂಡು ಹೋಗಿ ಅವನ ಕಾಲಿಗೆ ನೀರು ತಾಗುವಂತೆ ಮಲಗಿಸುತ್ತಾರೆ. ಪ್ರಾಣ ಹೋಗುತ್ತಾ ಬಂದಂತೆ ಶರೀರವನ್ನು ನೀರಿಗೆ ನೂಕುತ್ತಾಹೋಗಿ, ಕೊನೆಗೆ ಪ್ರಾಣಹೋಯಿತು ಎನ್ನುವಾಗ ಪೂರ್ತಾ ನೂಕಿಬಿಟ್ಟು ಗೊಳೋ ಎಂದು ಅಳುತ್ತಾರೆ. ಶರೀರದಲ್ಲಿರುವ ಆತ್ಮ ಅದನ್ನು ಬಿಡುವಾಗ ಗಂಗಾಜಲದಲ್ಲಿ ಪರಿಶುದ್ಧವಾಗಿ ಮೇಲೇರಲಿ ಎಂಬುದು ಈ ಕಠೋರ ಪದ್ಧತಿಯ ಉದ್ದೇಶವಂತೆ. ಈ ನಂಬಿಕೆ ಸಾಮಾನ್ಯ ಜನರಲ್ಲಿ ಮಾತ್ರ ಇದೆಯೆಂದು ಭಾವಿಸಬೇಡಿ ; ಮಹಾಪಂಡಿತರೆನಿಸಿಕೊಂಡವರು ಸಹ ಈ ನಂಬಿಕೆಯನ್ನು ಸಮರ್ಥಿಸುತ್ತಾರೆ.

ಇಂಡೀಸಿನಲ್ಲಿ ಬಹು ಸಂಖ್ಯೆಯ ಹಾಗೂ ಅನೇಕ ತರಹ ಫಕೀರರು, ಅಂದರೆ ದರ್ವಿಷೆಗಳು, ಸಾಧು ಸಂತರು, ಅಂದರೆ ಜೆಂಟೈಲ್ ಆಷಾಡಭೂತಿಗಳು, ಇದ್ದಾರೆ. ಇವರಲ್ಲಿ ಅನೇಕರು ಒಂದು ರೀತಿಯ 'ಕಾನ್‌ವೆಂಟ್' (Convent=ಮಠ)ಗಳಲ್ಲಿ ಇದ್ದುಕೊಂಡು ಬ್ರಹ್ಮಚರ್ಯ, ಜಪತಪ ಮುಂತಾದ ನೇಮನಿಯಮಗಳನ್ನು ಆಚರಿಸುತ್ತಾರೆ. ಇವರ ಜೀವನ ಬಹಳ ವಿಚಿತ್ರ. ನಾನು ಅದನ್ನು ಹೇಳಿದರೆ ನೀವು ನಂಬುತ್ತೀರಿ ಎಂದು ಭಾವಿಸಲಾರೆ. ಅದರಲ್ಲಿಯೂ 'ಜೋಗಿ' (Jougiu) ಎಂಬ ಜನರನ್ನು ಗಮನದಲ್ಲಿಟ್ಟುಕೊಂಡು ನಾನು ಈ ಮಾತು ಹೇಳುತ್ತಿದ್ದೇನೆ. ಹಗಲೂ ರಾತ್ರಿ ಒಂದೇ ಸಮನೆ ಬೆತ್ತಲೆಯಾಗಿ ಬೂದಿಯ ಮೇಲೆ ಬಿದ್ದುಕೊಂಡಿರುವ ಎಷ್ಟೋ ಜನ ಜೋಗಿಗಳನ್ನು ನಾನು ನೋಡಿದ್ದೇನೆ. ಇವರನ್ನು ಸಾಮಾನ್ಯವಾಗಿ ಕೆರೆ ಕುಂಟೆ ಕೊಳಗಳ ಬಳಿ ಇರುವ ದೊಡ್ಡ ದೊಡ್ಡ ಮರಗಳ ಕೆಳಗೋ ಅಥವಾ ದೇವಸ್ಥಾನದ ಸುತ್ತಲ ಜಗಲಿಗಳ ಮೇಲೋ ಕಾಣ

ಬಹುದು. ಕೆಲವರು ಕೂದಲನ್ನು ಹಿಮ್ಮಡಿಯವರೆಗೆ ಇಳಿಯಬಿಟ್ಟಿರುತ್ತಾರೆ. ಕೆಲವರ ಕೂದಲು ನಮ್ಮ ನಾಯಿಗಳ ಕೂದಲಿನಂತೆ ಜಡೆ ಹೆಣೆದುಕೊಂಡಿರುತ್ತದೆ. ಮತ್ತೆ ಕೆಲವರ ಕೂದಲು ಪೋಲಿಷ್ ಕಾಯಿಲೆ (Polish disease= *plica polonic*) ಬಂದವರ ಕೂದಲಿನಂತೆ ಇರುತ್ತದೆ. ಕೆಲವರು ತಲೆಯ ಮೇಲೆ ಒಂದೇ ಸಮನೆ ಒಂದು ಕೈಯನ್ನೋ ಅಥವಾ ಎರಡು ಕೈಗಳನ್ನೋ ಎತ್ತಿ ಹಿಡಿದುಕೊಂಡಿರುವುದನ್ನು ನೋಡಿದ್ದೇನೆ. ಕೆಲವರ ಉಗುರುಗಳು ಬೆಳೆದು ಸುರುಟಿಕೊಂಡಿರುತ್ತವೆ. ನಾನೇ ಕೆಲವು ಉಗುರುಗಳನ್ನು ಅಳೆದು ನೋಡಿದಾಗ, ಅವು ನನ್ನ ಕಿರುಬೆರಳಿನ ಅರ್ಧದಷ್ಟಿದ್ದುದನ್ನು ಕಂಡೆ. ಅವರ ತೋಳುಗಳು ನಿಶ್ಪ್ರಾಣವಾಗಿ ಬಡಕಲಾದವರ ತೋಳುಗಳಂತೆ ಸಣ್ಣಗಿರುತ್ತವೆ. ಯಾವಾಗಲೂ ಎತ್ತಿಕೊಂಡೇ ಇರುವ ಕಾರಣ ಅವುಗಳನ್ನು ಕೆಳಗಿಳಿಸಿ ಬಾಯಿಯ ಒಳಗೆ ತರುವುದೇ ಕಷ್ಟ. ಈ ಜೋಗಿಗಳಿಗೆ ಅಡ್ಡಬೀಳುವ ಭಕ್ತರ ವೃಂದಕ್ಕೆ ಕೊರತೆಯಿಲ್ಲ. ಪಾತಕವನ್ನು ದಂಡಿಸಲು ಪಾತಾಳ ಲೋಕದಿಂದ ಬರುವ ಹಾವುಗೂದಲಿನ ಯಾವ ಸ್ತ್ರೀದೇವತೆಯೂ ಬೆತ್ತಲೆ ಶರೀರದ, ಕರಿಯ ಚರ್ಮದ, ಉದ್ದನೆಯ ಜಡೆಗೂದಲಿನ, ಸೊಟ್ಟತೋಳಿನ, ಉದ್ದನೆಯ ಸುರುಟಿದ ಉಗುರಿನ, ಮೇಲೆ ಹೇಳಿದ ಭಂಗಿಯಲ್ಲಿ ಕುಳಿತ ಯಾವ ಜೋಗಿಯನ್ನೂ ಕರಾಳತನದಲ್ಲಿ ಮೀರಿಸಲಾರಳು.

ಒಬ್ಬ ರಾಜನ ನಾಡಿನಲ್ಲಿ ಈ ಫಕೀರರ ತಂಡಗಳನ್ನು ನಾನು ಅನೇಕ ಸಲ ಕಂಡಿದ್ದೇನೆ. ಮೇಲೆ ಹೇಳಿದಂತೆ ಎತ್ತಿದ ಕೈಗಳು, ಜಡೆಯಾದ ತಲೆಗೂದಲು–ಇಂಥ ಈ ಜನರನ್ನು ನೋಡಲು ಬಹು ಅಸಹ್ಯ. ಕೆಲವರು ತಮ್ಮ ತಲೆಗೂದಲನ್ನು ತಲೆಯ ಸುತ್ತ ಸುತ್ತಿಕೊಂಡಿರುತ್ತಾರೆ. ಕೆಲವರು ಹುಲಿಯ ಒಣಗಿದ ಒರಟು ಚರ್ಮವನ್ನು ಬೆನ್ನಿನ ಮೇಲೆ ಹಾಕಿಕೊಂಡಿರುತ್ತಾರೆ. ಈ ರೀತಿಯ ವೇಷದಲ್ಲಿ ಬೆತ್ತಲೆಯಾಗಿ ದೊಡ್ಡ ಪಟ್ಟಣವೊಂದರ ಬೀದಿಯಲ್ಲಿ ಹೆಂಗಸರು, ಗಂಡಸರು, ಮಕ್ಕಳುಗಳು ನೋಡುತ್ತಿರುವಂತೆಯೇ ನಡೆದುಹೋಗುತ್ತಿದ್ದರು. ಜನರು ಯಾವೊಂದು ವಿಕಾರ ಭಾವನೆಯೂ ಇಲ್ಲದೆ ಅವರನ್ನು ನೋಡುತ್ತಿದ್ದರು. ನಮ್ಮ ಬೀದಿಗಳಲ್ಲಿ ವಿರಕ್ತರು ಹೋದರೆ ಹೇಗೆ ಜನ ನೋಡುತ್ತಾರೋ ಹಾಗೆ ಇಲ್ಲಿ ಈ ಜನರನ್ನು ನೋಡುತ್ತಿದ್ದರು. ಹೆಂಗಸರು ಬಹಳ ಭಯಭಕ್ತಿಗಳಿಂದ ಅವರಿಗೆ ಭಿಕ್ಷೆ ನೀಡುತ್ತಿದ್ದರು.

ಒಬ್ಬ ಹೆಸರಾಂತ ಫಕೀರ ಇದ್ದ. ಆತನ ಹೆಸರು ಸರ್ಮೆಟ್ (Sarmet) ಎಂದು. ಈತ ದಿಲ್ಲಿಯ ಬೀದಿಗಳಲ್ಲಿ ಹುಟ್ಟು ಬೆತ್ತಲೆಯಲ್ಲಿ ತಿರುಗುತ್ತಿದ್ದ. ಇವನನ್ನು ಕಂಡರೆ ನನಗೆ ರೇಗಿಹೋಗುತ್ತಿತ್ತು. ಔರಂಗಜೇಬನ ಬೆದರಿಕೆಗಳಿಗೂ ಆತ ಗಮನಕೊಡದೆ ಬೀದಿಗಳಲ್ಲಿ ಬೆತ್ತಲೆ ತಿರುಗುತ್ತಿದ್ದ. ಕೊನೆಗೆ ಬಟ್ಟೆಹಾಕಿಕೊಳ್ಳಲು ಆತ ನಿರಾಕರಿಸಿದ ಕಾರಣ, ಆತನ ತಲೆಯನ್ನು ಕಡಿದುಹಾಕಲಾಯಿತು.

ಈ ಫಕೀರರಲ್ಲಿ ಹಲವರು ದೂರದ ಸ್ಥಳಗಳಿಗೆ ತೀರ್ಥಯಾತ್ರೆ ಹೋಗುತ್ತಾರೆ.

ಇವರು ಬೆತ್ತಲೆಯಾಗಿಯೇ ಇರುತ್ತಾರೆ.[1] ಇದು ಸಾಲದು ಎಂಬಂತೆ, ಆನೆಗಳ ಕಾಲಿಗೆ ಹಾಕುವಂತಹ ಸರಪಣಿಗಳನ್ನು ಹಾಕಿಕೊಂಡಿರುತ್ತಾರೆ. ಕೆಲವರು ಏಳೆಂಟು ದಿನಗಳ ತನಕ ನಿಂತೇ ಇರುತ್ತಾರೆ. ಆಗ ಅವರ ಕಾಲುಗಳು ತೊಡೆಗಳಷ್ಟು ದಪ್ಪಕ್ಕೆ ಊದಿಕೊಳ್ಳುತ್ತವೆ. ಕೆಲವರು ಗಂಟೆಗಟ್ಟಲೆ ತಲೆಯಮೇಲೆ ನಿಂತುಕೊಂಡಿರುತ್ತಾರೆ. ಇಷ್ಟೇ ಅಲ್ಲದೆ, ಇವರು ಇನ್ನೂ ಅನೇಕ ರೀತಿಗಳಲ್ಲಿ ತಮ್ಮ ಶರೀರವನ್ನು ಬಗ್ಗಿಸುವುದು, ನುಲಿಯುವುದು ಮುಂತಾಗಿ ಮಾಡುತ್ತಾರೆ.[2] ಹೀಗೆ ನಮ್ಮ ದೇಶದ ಡೊಂಬರು ಸಹ ಮಾಡಲಾರರು. ಇವನ್ನೆಲ್ಲಾ ಬಹಳ ನೇಮ ನಿಯಮ ಹಾಗೂ ನಿಷ್ಠೆಗಳಿಂದ ನಡೆಸುತ್ತಾರೆಂಬುದನ್ನು ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಆದರೆ ಇವುಗಳ ನೆರಳನ್ನು ಕೂಡ ಇಂಡೀಸಿನಲ್ಲಿ (ಇಂಡೀಸಿನ ಬೇರೆ ಜನರಲ್ಲಿ) ಕಾಣುವಂತಿಲ್ಲ.

ನಾನು ಹಿಂದೂಸ್ಥಾನಕ್ಕೆ ಮೊಟ್ಟಮೊದಲು ಬಂದಾಗ ಈ ಮೂಢ ನಡೆನುಡಿಗಳನ್ನು ನೋಡಿ ದಿಗ್ಭ್ರಮೆಗೊಂಡೆ. ಇವುಗಳ ಅರ್ಥವೇನೆಂದು ನನಗೆ ಗೊತ್ತಾಗಲಿಲ್ಲ. ಫಕೀರರ ಬಗ್ಗೆ ಏನೇನೋ ಅಂದುಕೊಂಡಿದ್ದೆ. ಆಮೇಲೆ ನಿಧಾನವಾಗಿ ಗೊತ್ತಾಯಿತು ಇವರ ವಿಚಾರ. ಮುಂದಿನ ಜನ್ಮದಲ್ಲಿ ರಾಜಮಹಾರಾಜರುಗಳಾಗಿ ಹುಟ್ಟುವುದಕ್ಕಾಗಿ ಈ ರೀತಿ ಬಾಳುತ್ತಿರುವುದಾಗಿ ಕೆಲವರು ಹೇಳಿದರು. ಆದರೆ ಇದನ್ನು ಒಪ್ಪುವುದಕ್ಕಾಗುವುದಿಲ್ಲ. ಅವರ ರಾಜ ಮಹಾರಾಜರುಗಳಾದ ರಾಜ ಜಯಸಿಂಗನ ಮತ್ತು ರಾಜ ಜಸ್ವಂತ್ ಸಿಂಗ–ಇವರ ಸ್ಥಾನಮಾನಗಳನ್ನು ನೋಡಿದರೆ, ಅಂತಹ ಪುನರ್ಜನ್ಮಕ್ಕಾಗಿ ಇಷ್ಟೆಲ್ಲಾ ಕಷ್ಟಪಡುತ್ತಾರೆಂದು ಒಪ್ಪುವುದಕ್ಕಾಗುವುದಿಲ್ಲ. ಮಹಾಜ್ಞಾನಿಗಳಾದ ಕೆಲವಾರು ಜೋಗಿಗಳೂ ಇದ್ದಾರೆಂದು ಕೇಳಿದ್ದೇನೆ. ಅವರು ಸರ್ವಸಂಗವನ್ನು ತ್ಯಜಿಸಿ, ಯಾರಿಗೂ ಕಾಣದಂತೆ ಜಪತಪ ಧ್ಯಾನಗಳಲ್ಲಿ ಮಗ್ನರಾಗಿರುತ್ತಾರೆಂದು ತಿಳಿಯಿತು. ಬೇಕೆಂದಾಗ ಅವರು ಸಮಾಧಿ ಸ್ಥಿತಿಯನ್ನೂ ಪಡೆಯಬಲ್ಲರೆಂದು ಹೇಳಿದರು. ಸಮಾಧಿ ಸ್ಥಿತಿಯನ್ನು ಪಡೆಯುವುದು ಮತ್ತು ಆ ಸ್ಥಿತಿಯಲ್ಲಿ ಆನಂದಪರವಶರಾಗಿರುವುದು–ಇವೆಲ್ಲ ಜೋಗಿ ಮತ್ತು ಸೂಫಿ ಪಂಥಗಳ ಮಹಾ ಯೋಗರಹಸ್ಯಗಳೆಂದು ಕಾಣುತ್ತವೆ. 'ರಹಸ್ಯ' ಎಂದು ಏಕೆ ಹೇಳುತ್ತಿದ್ದೇನೆಂದರೆ, ಇವರು ಅವುಗಳನ್ನು ತಮ್ಮತಮ್ಮೊಳಗೆ ರಹಸ್ಯವಾಗಿ ಇಟ್ಟುಕೊಂಡಿರುವುದರಿಂದ. ದಿನೇಷ್ ಮಂಡ್‌ಖಾನನ ಬಳಿ ಇದ್ದ ಒಬ್ಬ 'ಪಂಡಿತ' (Pendet)ಇವನ್ನೆಲ್ಲಾ ನನಗೆ ಹೇಳಿದ. ಈ ಸ್ಥಿತಿಯನ್ನು ಪಡೆಯಲು ಸರ್ವತ್ಯಾಗ, ಉಪವಾಸ ಹಾಗೂ ಧ್ಯಾನ ಮುಂತಾದವು ಅವರಿಗೆ ಸಹಾಯಕವಾಗುತ್ತವೆ. ನಮ್ಮ ಕ್ರೈಸ್ತಭಿಕ್ಷುಗಳಾಗಲಿ ಅಥವಾ ಸಂನ್ಯಾಸಿಗಳಾಗಲಿ ಈ ಜೋಗಿಗಳನ್ನು ಹಾಗೂ ಏಷ್ಯಾದ ಇತರ ಧಾರ್ಮಿಕ ಪಂಥಗಳ ಜನರನ್ನು ಮೀರಿಸುವುದಕ್ಕಾಗುವುದಿಲ್ಲ. ಅರ್ಮೀನಿಯರು,

---

[1]ಬೆರ್‌ನ್ಯೇ ಇಲ್ಲಿ ಜೈನ ದಿಗಂಬರ ಸಂನ್ಯಾಸಿಗಳನ್ನು ಸೂಚಿಸುವಂತಿದೆ.

[2]ಇವು ವಿವಿಧ ಆಸನಗಳು ಎಂಬುದರಲ್ಲಿ ಸಂದೇಹವಿಲ್ಲ.

ಗ್ರೀಕರು, ನೆಸ್ಟೋರಿಯನರು, ಜಾಕೊಬಿಯನರು–ಇಂಥವರ ಉಪವಾಸ, ಧ್ಯಾನ ಮುಂತಾದವುಗಳು ಯಾವ ಲೆಕ್ಕಕ್ಕೂ ಬಾರದವು. ಈ ದೇಶದ ಸಾಧುಸಂತರಿಗೆ ಮತ್ತು ಸಂನ್ಯಾಸಿಗಳಿಗೆ ಹೋಲಿಸಿದರೆ ನಮ್ಮ ಯೂರೋಪಿಯನ್ ಸಂತರುಗಳು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾರೆಂದು ಹೇಳಬೇಕು.

ಮೇಲೆ ಹೇಳಿದ ಜೋಗಿಗಳಿಗೆ ಹೋಲಿಸಿದರೆ ಅವರಿಗಿಂತ ಭಿನ್ನರಾದ ಮತ್ತೊಂದು ವರ್ಗದ ಜೋಗಿಗಳಿದ್ದಾರೆ. ಇವರು ಸಹ ಮಹಾಪುರುಷರೆ. ಇವರು ನಿಂತ ಕಡೆ ನಿಲ್ಲದೆ ದೇಶದಲ್ಲೆಲ್ಲಾ ಅಲೆಯುತ್ತಿರುತ್ತಾರೆ ಎಲ್ಲವನ್ನೂ ತ್ಯಜಿಸಿದ ಪರಿವ್ರಾಜಕರಾಗಿರುತ್ತಾರೆ. ಇವರು ಚಿನ್ನವನ್ನೂ ಪಾದರಸದ ರಸೌಷಧವನ್ನೂ ತಯಾರಿಸಬಲ್ಲರೆಂದು ಜನ ಹೇಳುತ್ತಾರೆ. ಪಾದರಸದ ರಸೌಷಧವನ್ನೂ ದಿನಾ ಬೆಳಗ್ಗೆ ಒಂದೆರಡು ಗ್ರೈಯ್ನುಗಳಷ್ಟು ತೆಗೆದುಕೊಂಡರೆ ಶರೀರಕ್ಕೆ ಹೊಸ ಚೇತನ ಬರುವುದಂತೆ.

ಜೋಗಿಗಳ ವಿಚಾರ ಇಷ್ಟೇ ಅಲ್ಲ. ಇಬ್ಬರು ಜೋಗಿಗಳು ಪರಸ್ಪರ ಸಂಧಿಸಿದಾಗ ಅವರು ತಮ್ಮ ತಮ್ಮ ಶಕ್ತಿ ಯುಕ್ತಿಗಳನ್ನು ಪ್ರದರ್ಶನಮಾಡುತ್ತಾರೆ. ಮಾಯಾ ಮಂತ್ರ ತಂತ್ರಗಳಿಗೆ ಪ್ರಸಿದ್ಧನಾದ ಸೈಮನ್ ಮಾಗಸ್ (Simon Magus) ಇವರ ಮುಂದೆ ಯಾತಕ್ಕೂಬಾರನು. ಈ ಜೋಗಿಗಳು ಇತರರ ಮನಸ್ಸಿನಲ್ಲಿರುವುದನ್ನು ಹೇಳಬಲ್ಲರು. ಒಂದೇ ಒಂದು ಗಂಟೆಯಲ್ಲಿ ಮರದ ಕೊಂಬೆಯೊಂದು ಹೂಬಿಟ್ಟು ಕಾಯಾಗಿ ಹಣ್ಣಾಗುವಂತೆ ಮಾಡಬಲ್ಲರು. ಮೊಟ್ಟೆಯನ್ನು ತಮ್ಮ ಎದೆಯೊಳಗೆ ಇಟ್ಟುಕೊಂಡು ಹದಿನೈದು ನಿಮಿಷಗಳಲ್ಲಿ ಅದು ಮರಿಯಾಗುವಂತೆ ಮಾಡಬಲ್ಲರು. ಇನ್ನೂ ಅನೇಕ ಆಶ್ಚರ್ಯಕರವಾದ ಕೆಲಸಗಳನ್ನೂ ಮಾಡಬಲ್ಲರು.

ಇವನ್ನೆಲಾ ನಾನು ಕೇಳಿದ್ದೇನೆಯೇ ಹೊರತು ಕಣ್ಣಿಂದ ಕಾಣಲಿಲ್ಲ. ಒಮ್ಮೆ ಆಗಾ ಒಬ್ಬ ಮಂತ್ರವಾದಿಗೆ ಹೇಳಿಕಳುಹಿಸಿದ. ಆತ ಇತರರ ಮನಸ್ಸಿನಲ್ಲಿರುವುದನ್ನು ಹೇಳಬಲ್ಲನೆಂದು ಗೊತ್ತಾಯಿತು. ಆಗಾ ತನ್ನ ಮನಸ್ಸಿನಲ್ಲಿ ಏನು ಕುರಿತುಕೊಂಡಿದ್ದಾನೆಂಬುದನ್ನು ಮಾರನೆಯ ದಿನ ಬರೆದುಕೊಡುವುದಾಗಿಯೂ, ಅದನ್ನು ಓದಿಕೊಳ್ಳಬಹುದಾಗಿಯೂ ಆ ಮಂತ್ರವಾದಿ ಹೇಳಿದ. ಆಗಾ ಆತ ಹೇಳಿದ್ದು ನಿಜವಾದರೆ ಮುನ್ನೂರು ರೂಪಾಯಿ ಕೊಡುವುದಾಗಿ ವಾಗ್ದಾನಮಾಡಿದ. ನಾನೂ ಇಪ್ಪತ್ತೈದು ರೂಪಾಯಿ ಕೊಡುತ್ತೇನೆಂದು ಹೇಳಿದೆ, ನನ್ನ ಮನಸ್ಸಿನಲ್ಲಿರುವುದನ್ನು ಹೇಳುವುದಾದರೆ. ಆದರೆ ಆತ ಮಾರನೆಯ ದಿನ ಬರಲೇ ಇಲ್ಲ. ಮತ್ತೊಂದು ಸಂದರ್ಭದಲ್ಲಿ ಒಬ್ಬ ಮೊಟ್ಟೆ ಮರಿಮಾಡಿಸಿ ತೋರಿಸುತ್ತೇನೆಂದು ಹೇಳಿದ್ದ. ಅವನಿಗೆ ಇಪ್ಪತ್ತುರೂಪಾಯಿ ಕೊಡುವುದಾಗಿ ಹೇಳಿದ್ದೆ. ಆತನೂ ತಲೆತಪ್ಪಿಸಿಕೊಂಡ. ನಾನು ಈ ಮಂತ್ರತಂತ್ರಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂದು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತು. ಜನಗಳು ನಿಂತು ಈ ಮಂತ್ರತಂತ್ರಗಳನ್ನು ನೋಡಿ ಅಚ್ಚರಿಪಡುತ್ತಿದ್ದರೆ ನಾನು ಮಂತ್ರವಾದಿಗಳನ್ನು ಅದು ಇದು ಪ್ರಶ್ನೆ ಕೇಳುವುದರಲ್ಲಿ ನಿರತನಾಗಿರುತ್ತಿದ್ದೆ. ಕೂಲಂಕಶವಾಗಿ ಪರಿಶೀಲಿಸಿದಷ್ಟೂ

ಅವೆಲ್ಲಾ ಮೋಸ ಅಥವಾ ಕೈಚಳಕ ಎಂದು ಗೊತ್ತಾಗುತ್ತಿತ್ತು. ಒಮ್ಮೆ ನನ್ನ ಹಿತೈಷಿ ಆಗಾನ ಮನೆಯಲ್ಲಿ ಯಾರೊ ಒಬ್ಬ ದುಡ್ಡು ಕದ್ದುಬಿಟ್ಟ. ಒಂದು ಲೋಟ ಉರುಳು ಬಿಟ್ಟು ಅದನ್ನು ಪತ್ತೆಹಚ್ಚುವುದಾಗಿ ಒಬ್ಬ ಮಂತ್ರವಾದಿ ನಟಿಸಿದ. ಕೊನೆಗೆ ಅದು ಶುದ್ಧ ಡೋಂಗಿ ಎಂದು ಗೊತ್ತಾಯಿತು.

ಇನ್ನೊಂದು ತರಹ ಸಂನ್ಯಾಸಿಗಳು ಅಂದರೆ ಫಕೀರರಿದ್ದಾರೆ. ಇವರು ನಾನು ಈಗಾಗಲೇ ತಿಳಿಸಿರುವವರಿಗಿಂತ ಹೆಚ್ಚು ಜ್ಞಾನಿಗಳು ; ಅಲ್ಲದೆ ಆಡಂಬರವಿಲ್ಲದ ಜನ. ಬರಿಗಾಲಿನಲ್ಲಿ ಮತ್ತು ಬರಿದಲೆಯಲ್ಲಿ ಅಡ್ಡಾಡುತ್ತಾರೆ. ಸೊಂಟಕ್ಕೆ ದಟ್ಟಿ ಮತ್ತು ಮೈಗೆ ಅಡ್ಡಹೊದಿಕೆಗಳನ್ನು ಬಿಟ್ಟರೆ ಬೇರೆ ಉಡುಪಿಲ್ಲ. ಯಾವಾಗಲೂ ಶುಚಿಯಾಗಿರುತ್ತಾರೆ. ಸಾಮಾನ್ಯವಾಗಿ ಇವರು ಜೊತೆಜೊತೆಯಾಗಿ ತಿರುಗಾಡುತ್ತಾರೆ. ಮುಖದಲ್ಲಿ ಅವರ ಸೌಮ್ಯ ಪ್ರವೃತ್ತಿ ಹಾಗೂ ತಾಳ್ಮೆ ಎದ್ದುಕಾಣುತ್ತವೆ. ಕೈಯಲ್ಲಿ ಎರಡು ಹಿಡಿಗಳುಳ್ಳ ಮಣ್ಣಿನ ಪಾತ್ರೆ (ಕಮಂಡಲ) ಇರುತ್ತದೆ. ಇವರು ಬೇರೆ ಫಕೀರರುಗಳಂತೆ ಮನೆಮನೆಗೆ ಹೋಗಿ ಭಿಕ್ಷೆ ಬೇಡುವುದಿಲ್ಲ. ಆದರೆ ಜೆಂಟ್ಲೆಲರ ಮನೆಗಳಿಗೆ ಸಲೀಸಾಗಿ ಹೋಗುತ್ತಾರೆ. ಇವರು ತಮ್ಮ ಮನೆಗೆ ಬರುವುದೇ ಪುಣ್ಯವೆಂದು ಭಾವಿಸುವ ಜೆಂಟ್ಲೆಲರು ಇವರನ್ನು ಬಹಳ ಮರ್ಯಾದೆಯಿಂದ ಕಾಣುತ್ತಾರೆ. ಇವರು ಯಾವ ಪಾಪವನ್ನೂ ಮಾಡಲಾರರಂತೆ. ಇವರ ಮೇಲೆ ಯಾರೂ ಪಾಪದ ಆರೋಪಣೆ ಮಾಡುವಂತಿಲ್ಲ. ಈ ಮಹಾ ಪುರುಷರು ಮತ್ತು ಮನೆಯ ಹೆಂಗಸರು—ಇವರ ಮಧ್ಯೆ ಏನೆಲ್ಲ ನಡೆಯುತ್ತದೆ ಎಂಬುದು ಎಲ್ಲರಿಗೂ ಗೊತ್ತಿದ್ದರೂ, ಈ ಸಂನ್ಯಾಸಿಗಳ ಬಗ್ಗೆ ಸಂದೇಹಪಡುವುದಿಲ್ಲ. ಇವೆಲ್ಲ ಈ ದೇಶದ ಪದ್ಧತಿ ಎಂಬುದಾಗಿ ತಿಳಿದುಬರುತ್ತದೆ. ಇದರಿಂದ ಗೃಹಿಣಿಯರ ಪಾವಿತ್ರ್ಯವೇನೂ ಕಡಿಮೆಯಾಗುವುದಿಲ್ಲ. ಈ ಸಂನ್ಯಾಸಿಗಳು ಮನೆಯ ಸ್ತ್ರೀಯರ ಬಗ್ಗೆ ವರ್ತಿಸುವುದನ್ನು ಕುರಿತು ನಾನು ದೊಡ್ಡದುಮಾಡಲು ಇಚ್ಛಿಸುವುದಿಲ್ಲ. ಏಕೆಂದರೆ, ಇಂಥ ಪದ್ಧತಿಗಳು ಮಹಾ ಮೊಗಲನ ಚಕ್ರಾಧಿಪತ್ಯದಲ್ಲಿ ಅಷ್ಟೇ ಅಲ್ಲ ಬೇರೆ ಕಡೆಯೂ ಇವೆ. ಆದರೆ ಹಾಸ್ಯಾಸ್ಪದವಾದ ಸಂಗತಿಯೇನೆಂದರೆ, ಇವರು ತಮ್ಮನ್ನು ಇಂಡೀಸಿನಲ್ಲಿರುವ ನಮ್ಮ ಕ್ರೈಸ್ತ ಸಂನ್ಯಾಸಿಗಳಿಗೆ ಹೋಲಿಸಿಕೊಂಡು, ತಾವು ಮಹಾ ಸಂಪನ್ನರೆಂದು ಹೇಳಿಕೊಳ್ಳುವುದು. ಒಮ್ಮೊಮ್ಮೆ ನಾನು ಇವರನ್ನು ಬೇಕಾಗಿಯೇ ಹೊಗಳುತ್ತಿದ್ದೆ; ಬಹಳ ನಯವಿನಯ ಭಯಭಕ್ತಿಗಳಿಂದ ಕಾಣುತ್ತಿದ್ದೆ. ಆಗ ಇವರು ತಮ್ಮತಮ್ಮಲ್ಲೇ ಹೀಗೆ ಮಾತಾಡಿಕೊಳ್ಳುತ್ತಿದ್ದರು : "ಈ ಫರಂಗಿಗೆ ನಾವು ಎಂಥವರೆಂದು ಗೊತ್ತಾಗಿದೆ. ಈತ ಇಂಡೀಸಿನಲ್ಲಿ ಅನೇಕ ವರ್ಷಗಳ ಕಾಲ ಇದ್ದು, ನಾವು 'ಇಂದೂ'ಗಳ (Indous) ಪಾದ್ರಿ (Padry) ಗಳೆಂದು ತಿಳಿದುಕೊಂಡಿದ್ದಾನೆ."

ನಾನು ಈ ವಿಧರ್ಮಿ ತಿರುಕರ (heathen beggars) ಬಗ್ಗೆ ಹೇಳಿ ಕಾಲವನ್ನು ವ್ಯರ್ಥಮಾಡಿದೆನೆಂದು ಕಾಣುತ್ತದೆ. ಈಗ ಆ ವಿಷಯವನ್ನು ಬಿಟ್ಟು, ಇಲ್ಲಿಯ ಧಾರ್ಮಿಕ ಹಾಗೂ ವೈಜ್ಞಾನಿಕ ಗ್ರಂಥಗಳನ್ನು ಕುರಿತು ಹೇಳುತ್ತೇನೆ ಕೇಳಿ :

ಇಲ್ಲಿ ಸಂಸ್ಕೃತ್ (Sanscrit) ಎಂಬ ಭಾಷೆ ಪಂಡಿತರ ಭಾಷೆ.[1] ಇದು ಪುರಾತನ ಕಾಲದಲ್ಲಿ ಬ್ರಾಹ್ಮಣರ ಭಾಷೆಯೂ ಆಗಿದ್ದಿರಬಹುದು. ನನಗೆ ಈ ಭಾಷೆ ಗೊತ್ತಿಲ್ಲ ದಿದ್ದರೂ ಇದರಲ್ಲಿ ಬರೆದ ಗ್ರಂಥಗಳ ಬಗ್ಗೆ ನಾನೇನಾದರೂ ಹೇಳಿದರೆ ವಿಸ್ಮಿತರಾಗಬೇಡಿ. ನನ್ನ ಹಿತೈಷಿ ಆಗಾನ ಆಸಕ್ತಿಯಿಂದಾಗಿ ಮತ್ತು ನನ್ನ ಕೋರಿಕೆಯನ್ನು ಮನ್ನಿಸಲಿಕ್ಕಾಗಿ ಆತ ಇಡೀ ಇಂಡಿಯಾದಲ್ಲಿ ಬಹಳ ಹೆಸರು ಪಡೆದ ಪಂಡಿತನೊಬ್ಬನನ್ನು ತನ್ನ ಬಳಿ ಇಟ್ಟು ಕೊಂಡಿದ್ದ. ಈ ಪಂಡಿತ ಮೊದಲಿಗೆ ಷಾಜಹಾನನ ಹಿರಿಯ ಮಗ ದಾರಾನ ಬಳಿ ಇದ್ದ. ಮೂರು ವರ್ಷಗಳ ಕಾಲ ನನಗೂ ಪಂಡಿತನಿಗೂ ತುಂಬಾ ಸ್ನೇಹ ಬೆಳೆದಿತ್ತು. ಅಷ್ಟೇ ಅಲ್ಲದೆ, ಆತನ ಮನೆಗೆ ಬರುತ್ತಿದ್ದ ಬೇರೆ ಪಂಡಿತರ ಪರಿಚಯವೂ ನನಗೆ ಆಗಿತ್ತು. ನಾನು ಆಗಾನಿಗೆ ಹಾರ್ವ್ಯಸ್ (Harveus) ಮತ್ತು ಪೆಕೇ (Pecquet) ಇವರುಗಳು[2] ದೇಹ ರಚನಾಶಾಸ್ತ್ರದ (anatomy) ಬಗ್ಗೆ ಇತ್ತೀಚೆಗೆ ಮಾಡಿರುವ ಸಂಶೋಧನೆಗಳನ್ನು ವಿವರಿಸಿ ಹೇಳುತ್ತಿದ್ದೆ. ಗಸ್ಸೇಂಡಿ (Gassendi) ಮತ್ತು ಡೇಕಾರ್ಟೆ (Descartes)[3] ಎಂಬುವರ ತತ್ತ್ವಶಾಸ್ತ್ರವನ್ನು ಪರಿಚಯಮಾಡಿಕೊಡುತ್ತಿದ್ದೆ. ಇವನ್ನೆಲ್ಲಾ ಪಾರಸ್ಸಿ ಭಾಷೆಗೆ ಅನುವಾದಿಸಿ ಹೇಳುತ್ತಿದ್ದೆ. ಐದಾರು ವರ್ಷಗಳ ಕಾಲ ಇದೇ ನನ್ನ ಮುಖ್ಯ ಕೆಲಸವಾಗಿತ್ತು. ಈ ಕೆಲಸದಿಂದ ಬಿಡುವು ಸಿಕ್ಕಾಗ ನಾನು ಪಂಡಿತರೊಡನೆ ಚರ್ಚೆ ಯಲ್ಲಿ ತೊಡಗುತ್ತಿದ್ದೆ. ಅವರು ತಮ್ಮದೇ ಆದ ರೀತಿಯಲ್ಲಿ ಅವರ ಕಟ್ಟುಕಥೆಗಳನ್ನು ಹೇಳುತ್ತಿದ್ದರು. ಮುಖದ ಮೇಲೆ ನಗೆ ಎಂಬುದನ್ನೇ ಕಾಣಲು ಸಾಧ್ಯವಿಲ್ಲದಷ್ಟು ಗಂಭೀರವಾಗಿ ಅವರು ಈ ಕಟ್ಟುಕಥೆಗಳನ್ನು ಹೇಳುತ್ತಿದ್ದರು. ಕೊನೆಕೊನೆಗೆ ಅವರ ಕಥೆ ಗಳನ್ನೂ ಹಾಗೂ ಬಾಲಿಶ ವಾದಗಳನ್ನೂ ಕೇಳಿ ನನಗೆ ಬೇಸರವಾಯಿತು.

---

[1]ಸಂಸ್ಕೃತ್ : ಬೆರ್‌ನ್ಯೆನ ಪ್ರವಾಸ ಕಥನಗಳ ಆರಂಭದ ಮುದ್ರಣಗಳಲ್ಲಿ ಈ ಪದವನ್ನು 'ಹನ್‌ಸ್ಕ್ರಿಟ್' (Hanscrit) ಎಂದು ಮುದ್ರಿಸಲಾಗಿದೆ. ಈ ತಪ್ಪಿನ ಕಾರಣದಿಂದಾಗಿ ಈ ಭಾಷೆ ಯಾವುದೆಂಬುದನ್ನು ಬಹಳ ಕಾಲ ತಿಳಿಯಲಾಗಲಿಲ್ಲ. ಆಮೇಲೆ ಸುಮಾರು ಒಂದು ಶತಮಾನದ ಅನಂತರ, ಅಂದರೆ ೧೭೦೦ರಲ್ಲಿ, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಹೆಸರಾಂತ ಪೌರಸ್ತ್ಯ ಭಾಷಾ ಸಾಹಿತ್ಯಗಳ ಪಂಡಿತನಾದ ಹೈಡ್ (Hyde) ಎಂಬುವನು ಈ ತಪ್ಪನ್ನು ತಿಳಿಸಿ, 'Sanscreet' ಎಂಬ ಪದ ಉಪಯೋಗಿಸಿದ.

[2]ಹಾರ್ವ್ಯಸ್ (ವಿಲಿಯಂ ಹಾರ್ವೆ) : ೧೫೭೮–೧೬೫೭. ಈತನೇ ದೇಹದಲ್ಲಿ ರಕ್ತಚಲನೆ ಯನ್ನು ಕಂಡುಹಿಡಿದು ಹೆಸರುವಾಸಿಯಾದವನು.

ಪೆಕೇ (Jean Pecquet) ೧೬೨೨–೧೬೭೪. ಈತ ಅನ್ನಕ್ಷೀರ (chyle) ರಕ್ತವಾಗು ವುದೆಂದು ಕಂಡುಹಿಡಿದು ಪ್ರಸಿದ್ಧನಾದ.

[3]ಡೆಕಾರ್ಟೆ (Rene Descartes) ; ೧೫೯೬–೧೬೫೦. ಹೆಸರಾದ ತತ್ತ್ವಜ್ಞಾನಿ ಮತ್ತು ಗಣಿತಶಾಸ್ತ್ರಜ್ಞ.

'ಹಿಂದೂ'ಗಳು ತಮ್ಮ ದೇವರನ್ನು 'ಆಚಾರ್' (Achar) ಎಂದು ಕರೆಯುತ್ತಾರೆ. ಆ ದೇವರು ನಾಲ್ಕು 'ಬೇತ್' (Beth=ವೇದ) ಗಳನ್ನು ಕೊಟ್ಟನಂತೆ : 'ಅಥರ್ ಬೇದ್' (Ather bed=ಅಥರ್ವಣ ವೇದ), ಜಗರ್‌ಬೇದ್ (Zagerbed=ಯಜು ರ್ವೇದ), ರೆಕ್‌ಬೇದ್ (Rekbed=ಋಗ್ವೇದ) ಮತ್ತು ಸಾಮ್‌ಬೇದ್ (Sambed =ಸಾಮ ವೇದ) ಎಂದು. ಈ ಗ್ರಂಥಗಳ ಪ್ರಕಾರ ಜನರನ್ನು ನಾಲ್ಕು ಪಂಗಡಗಳಾಗಿ (tribes) ವಿಂಗಡಿಸಲಾಗಿದೆ. ಈ ನಾಲ್ಕು ಪಂಗಡಗಳು ಯಾವುವೆಂದರೆ, ಬ್ರಾಹ್ಮಣ, ಕ್ವೆತ್ತೆರಿ (Quettery=ಕ್ಷತ್ರಿಯ), ಬೆಸ್ಕ್ಯೂ (Besque=ವೈಶ್ಯ), ಮತ್ತು ಸೆಯ್ದ್ರಾ (Seydra=ಶೂದ್ರ). ಬೆಸ್ಕ್ಯೂ ಎಂಬುವರನ್ನು ಸಾಮಾನ್ಯವಾಗಿ 'ಬನೆಯ' ಎಂದು ಕರೆಯುತ್ತಾರೆ. ಈ ಪಂಗಡಗಳಲ್ಲಿ ಅಂತರ್ವಿವಾಹವಿಲ್ಲ.

ಜೆಂಟೈಲರು ಪುನರ್ಜನ್ಮದಲ್ಲಿ ನಂಬಿಕೆಯುಳ್ಳವರು. ಪ್ರಾಣಹತ್ಯ ಮಾಡುವುದು ಪಾಪ ಎಂದು ಭಾವಿಸುತ್ತಾರೆ. ಎರಡನೆ ಪಂಗಡದವರು, ಅಂದರೆ ಕ್ಷತ್ರಿಯರು, ಮಾತ್ರ ಹಸು ಮತ್ತು ನವಿಲು–ಇವೆರಡು ಪ್ರಾಣಿಗಳನ್ನು ಬಿಟ್ಟು ಬೇರೆ ಪ್ರಾಣಿಗಳನ್ನು ತಿನ್ನಬಹುದು. ಹಸುವಿನ ಬಗ್ಗೆ ಜೆಂಟೈಲರು ಬಹಳ ದಯಾದಾಕ್ಷಿಣ್ಯ ತೋರಿಸುತ್ತಾರೆ. ಗೋವಿನ ಬಾಲ ಹಿಡಿದುಕೊಂಡು ಈ ಸಂಸಾರಸಾಗರವನ್ನು ದಾಟಿ ಮುಕ್ತಿ ಪಡೆಯ ಬಹುದೆಂದು ನಂಬುತ್ತಾರೆ. ಈ ನಂಬಿಕೆಗೆ ಬಹುಶಃ ಅವರ ಹಿಂದಿನ ಧರ್ಮಶಾಸಕರು, ಕುರಿ ಕಾಯುವ ಕುರುಬರು ಒಂದು ಕೈಯಲ್ಲಿ ಎತ್ತಿನ ಅಥವಾ ಕೋಣನ ಬಾಲ ಹಿಡಿದು ಇನ್ನೊಂದು ಕೈಯಲ್ಲಿ ಕೋಲು ಹಿಡಿದು ಈಜಿಪ್ಟಿನ ನೈಲ್‌ನದಿಯನ್ನು ದಾಟುವುದನ್ನು ಕಂಡದ್ದು ಕಾರಣವಾಗಿರಬೇಕು ; ಅಥವಾ ಹಸುವು ಹಾಲು ಬೆಣ್ಣೆಗಳನ್ನು ಕೊಟ್ಟು ತಮ್ಮನ್ನು ಕಾಪಾಡುವ ಕಾರಣವು ಇರಬೇಕು. ಇಂಡಿಯಾದಲ್ಲಿ ಹುಲ್ಲುಗಾವಲಿನ ಅಭಾವ ಇರುವುದರಿಂದ ಹೆಚ್ಚು ದನಗಳನ್ನು ಸಾಕುವುದು ಕಷ್ಟ. ಫ್ರಾನ್ಸ್ ಮತ್ತು ಇಂಗ್ಲೆಂಡ್ ದೇಶಗಳಲ್ಲಿ ತಿಂದಂತೆ ಇಂಡೀಸಿನಲ್ಲಿ ಜನ ದನಗಳನ್ನು ತಿನ್ನುತ್ತಾಹೋದರೆ ಅವುಗಳ ವಂಶವೇ ನಿರ್ಮೂಲವಾಗಿ, ಉಳಲು ಎತ್ತುಗಳಿಲ್ಲದೆ ಭೂಮಿ ಪಾಳುಬೀಳ ಬಹುದು. ಇಲ್ಲಿಯ ಬಹಳ ಬಿಸಿಲಿನ ಕಾರಣ, ನೆಲ ಒಣಗಿ ವರ್ಷದ ಎಂಟು ತಿಂಗಳು ದನಕರುಗಳು ಹೊಟ್ಟೆಗಿಲ್ಲದೆ ಅಲೆಯುತ್ತ, ಹಂದಿಗಳಂತೆ ಸಿಕ್ಕಿದ ಹೊಲಸು ತಿಂದು ಕಾಲ ಹಾಕುತ್ತವೆ. ಹೀಗೆ ದನಗಳ ಅಭಾವದಿಂದ ಜಹಂಗೀರ್ ಚಕ್ರವರ್ತಿ ಬ್ರಾಹ್ಮಣರ ಕೋರಿಕೆಯನ್ನು ಮನ್ನಿಸಿ ಅವುಗಳನ್ನು ಒಂದು ಗೊತ್ತಾದ ವಯಸ್ಸಿನ ತನಕ ಕೊಲ್ಲ ಬಾರದೆಂದು ಶಾಸನ ಹೊರಡಿಸಿದ. ಬ್ರಾಹ್ಮಣರು ಔರಂಗಜೇಬನಿಗೂ ಅದೇ ರೀತಿಯ ಮನವಿಯನ್ನು ಸಲ್ಲಿಸಿದುದಲ್ಲದೆ, ಭಾರಿ ಹಣವನ್ನು ಕೊಟ್ಟು ತಮ್ಮ ಮನವಿಯನ್ನು ಮನ್ನಿಸಬೇಕೆಂದು ಕೇಳಿಕೊಂಡರು. ಕಳೆದ ಐವತ್ತು ಅರವತ್ತು ವರ್ಷಗಳಿಂದ ಬೇಸಾಯಕ್ಕೆ ಅನುಕೂಲವಾದ ಬಹಳಷ್ಟು ಭೂಮಿ ಬಂಜರುಬಿದ್ದಿರುವುದಕ್ಕೆ ಉಳುವ ಎತ್ತುಗಳ ಅಭಾವ ಹಾಗೂ ದುಬಾರಿ ಬೆಲೆ ಕಾರಣ ಎಂದು ತಮ್ಮ ಮನವಿಯಲ್ಲಿ ಹೇಳಿಕೊಂಡರು.

ಮಾಂಸಭಕ್ಷಣೆ ಮಾಡದಿದ್ದರೆ ಮನಸ್ಸಿನಮೇಲೆ ಒಳ್ಳೆಯ ಪರಿಣಾಮವಾಗುತ್ತದೆ ಎಂದು ಇಂಡೀಸಿನ ಪುರಾತನ ಧರ್ಮಶಾಸಕರು ಭಾವಿಸಿರಬೇಕು. ಪ್ರಾಣಿಹತ್ಯೆ ಮಾಡದ ಮನುಷ್ಯ ಇನ್ನೊಬ್ಬರ ಬಗ್ಗೆ ದಯಾದಾಕ್ಷಿಣ್ಯವುಳ್ಳವನಾಗಿರುತ್ತಾನೆ. ಪುನರ್ಜನ್ಮದಲ್ಲಿ ನಂಬಿಕೆಯುಳ್ಳವರು ಯಾವ ಪ್ರಾಣಿಯನ್ನು ಕೊಂದರೂ ತಮ್ಮ ಪೂರ್ವಜರಲ್ಲಿ ಯಾರನ್ನಾದರೂ ಕೊಂದಂತಾಗುವ ಸಂಭವವುಂಟು. ಅಲ್ಲದೆ, ಬ್ರಾಹ್ಮಣರು ಮತ್ತೊಂದು ಕಾರಣದಿಂದ ಹಸು ಅಥವಾ ಎತ್ತುಗಳ ಮಾಂಸಭಕ್ಷಣೆಯನ್ನು ನಿಷೇಧಿಸರಬೇಕು. ಈ ದೇಶದ ಹವೆ ಮಾಂಸಭಕ್ಷಣೆಗೆ ಅನುಕೂಲವಾಗಿಲ್ಲವೆಂದು ಅವರು ಅಭಿಪ್ರಾಯ ಪಟ್ಟಿರಬೇಕು.

ಬೇತ್‌ಗಳು ಬೋಧಿಸುವ ಪ್ರಕಾರ ಜೆಂಟೈಲರು ತ್ರಿಕಾಲ ದೇವರ ಧ್ಯಾನಮಾಡಬೇಕು. ತ್ರಿಕಾಲ ಸ್ನಾನ ಮಾಡಬೇಕು. ನಿಂತ ನೀರಿನಲ್ಲಿ ಸ್ನಾನಮಾಡುವುದಕ್ಕಿಂತ ಹರಿಯುವ ನೀರಿನಲ್ಲಿ ಸ್ನಾನಮಾಡುವುದು ಹೆಚ್ಚು ಶ್ರೇಷ್ಠ. ಹೀಗೆ ಹೇಳುವುದರಲ್ಲಿ ಅರ್ಥವುಂಟು. ಏಕೆಂದರೆ, ಹಿಂದೂಸ್ಥಾನದ ಹವೆಯಲ್ಲಿ ಎಷ್ಟು ಸಲ ಸ್ನಾನಮಾಡಿದರೆ ಅಷ್ಟೂ ಉತ್ತಮ. ಈ ನಿಯಮ ಚಳಿ ಪ್ರದೇಶದಲ್ಲಿರುವವರಿಗೆ ತುಂಬಾ ಕಷ್ಟ. ನಾನೇ ನನ್ನ ಪ್ರವಾಸಗಳ ಕಾಲದಲ್ಲಿ ಕೊರೆಯುವ ನೀರಿನಲ್ಲಿ ಸ್ನಾನಮಾಡಿ ತೊಂದರೆಗೆ ಈಡಾಗಿದ್ದೇನೆ. 'ಚಳಿದೇಶಕ್ಕೆ ಅನುಕೂಲವಲ್ಲದ ಧರ್ಮ ನಿಮ್ಮದು' ಎಂದು ನಾನು ಅವರೊಡನೆ ಚರ್ಚೆ ಮಾಡಿದ್ದೇನೆ. 'ಯಾವ ನಿಯಮವನ್ನು ಚಳಿಗಾಲದಲ್ಲಿ ಅನುಸರಿಸಲು ಸಾಧ್ಯವಿಲ್ಲವೋ ಅಂಥ ನಿಯಮ ದೇವರ ನಿಯಮವಲ್ಲ, ಮಾನವ ನಿಯಮ' ಎಂದು ನಾನು ಅವರಿಗೆ ಹೇಳುತ್ತಿದ್ದೆ. ಆದರೆ ಅವರು ಕೊಡುವ ಉತ್ತರ ಬಹಳ ತಮಾಷೆಯಾಗಿದೆ. ಅವರು ಹೇಳುತ್ತಾರೆ :

'ನಮ್ಮ ಧರ್ಮ ಸರ್ವದೇಶಗಳಿಗೂ ಅನ್ವಯವಾಗುವಂಥಾದ್ದೆಂದು ನಾವು ಹೇಳುವುದಿಲ್ಲ. ದೇವರು ಅದನ್ನು ನಮಗೆ ಮಾತ್ರ ಮಾಡಿದ್ದಾನೆ. ಈ ಕಾರಣವೇ ನಾವು ಪರಕೀಯರನ್ನು ನಮ್ಮ ಮತಕ್ಕೆ ಸೇರಿಸಿಕೊಳ್ಳುವುದಕ್ಕಾಗದೆ ಇರುವುದು. ನಿಮ್ಮ ಧರ್ಮ ಸುಳ್ಳೆಂದು ನಾವು ಹೇಳುವುದಿಲ್ಲ. ನಿಮ್ಮ ಅವಶ್ಯಕತೆ ಹಾಗೂ ಅನುಕೂಲಗಳಿಗೆ ತಕ್ಕಂತೆ ಅದನ್ನು ಅನುಸರಿಸಬಹುದು. ಸ್ವರ್ಗಕ್ಕೆ ಹೋಗಲು ದೇವರು ನಾನಾ ಮಾರ್ಗಗಳನ್ನು ಕಲ್ಪಿಸಿದ್ದಾನೆ.'

ಇದನ್ನು ಕೇಳಿ ನಾನು, 'ನಮ್ಮ ಕ್ರೈಸ್ತಧರ್ಮ ಕೇವಲ ನಮಗಷ್ಟೇ ಅಲ್ಲ, ಇಡೀ ಪ್ರಪಂಚಕ್ಕೆ ಅನ್ವಯಿಸುತ್ತದೆ. ನಿಮ್ಮದು ಬರೇ ಕಟ್ಟುಕಥೆ ಮತ್ತು ಪೊಳ್ಳು ಕಲ್ಪನೆ' ಎಂದು ವಾದಿಸಿದೆ. ಆದರೂ ಅದನ್ನು ಒಪ್ಪಿಕೊಳ್ಳದೇಹೋದರು.

ಬೇತ್‌ಗಳ ಪ್ರಕಾರ ಬ್ರಹ್ಮ (Brahma), ಬಿಷೆನ್ (Besehen = ವಿಷ್ಣು) ಮತ್ತು ಮಹದೇವ್ (Mahadev)—ಎಂಬ ತ್ರಿಮೂರ್ತಿಗಳು ಸೃಷ್ಟಿ ಸ್ಥಿತಿ ಲಯಗಳಿಗೆ

ಕಾರಣರು. ಪರಮಾತ್ಮನ ಅಪ್ಪಣೆಯಂತೆ ಬ್ರಹ್ಮನೇ ನಾಲ್ಕು ವೇದಗಳನ್ನು ಬೋಧಿಸಿದ್ದು. ಈ ಕಾರಣವೇ ಕೆಲವು ದೇವಸ್ಥಾನಗಳಲ್ಲಿ ಬ್ರಹ್ಮನ ವಿಗ್ರಹಕ್ಕೆ ನಾಲ್ಕು ತಲೆಗಳಿವೆ.

ನಾನು ಯುರೋಪಿಯನ್ ಮಿಷನರಿಗಳೊಡನೆ ಈ ತ್ರಿಮೂರ್ತಿತ್ವದ ಬಗ್ಗೆ ಚರ್ಚೆ ಮಾಡಿದ್ದೇನೆ. ಅವರು ಹೇಳುವಂತೆ ವೇದಗಳ ಪ್ರಕಾರ ತ್ರಿಮೂರ್ತಿಗಳು ಬೇರೆ ಬೇರೆ ಯಾದರೂ ಒಂದೇ ದೇವರ ರೂಪಗಳು. ಈ ತ್ರಿಮೂರ್ತಿತ್ವದ ಬಗ್ಗೆ ನಾನು ಪಂಡಿತರು ಗಳೊಡನೆ ಬಹಳ ಚರ್ಚೆ ಮಾಡಿದ್ದೇನೆ. ಆದರೆ ಅವರ ಉತ್ತರ ಅಸ್ಪಷ್ಟವಾಗಿದೆ. ಅವರ ಅಭಿಪ್ರಾಯ ಏನೆಂಬುದನ್ನು ತಿಳಿದುಕೊಳ್ಳುವುದೇ ಕಷ್ಟವಾಗಿದೆ.

ರೆವರೆಂಡ್ ಫಾದರ್ ರೋಆ (Reverend Father Roa) ಎಂಬ ಆಗ್ರಾದ ಮಿಷನರಿ ತಂಡದಲ್ಲಿರುವ ಜೆಸ್ಯೂಯಿಟ್ ಪಾದ್ರಿ[1] ಸಂಸ್ಕೃತವನ್ನು ಚೆನ್ನಾಗಿ ಓದಿಕೊಂಡಿ ದ್ದಾರೆ. ಅವರು ಹೇಳುವ ಪ್ರಕಾರ ಒಬ್ಬನೇ ದೇವರು ತ್ರಿಮೂರ್ತಿಗಳ ರೂಪದಲ್ಲಿ ಇದ್ದಾನೆಂಬುದಾಗಿ ಜೆಂಟೈಲರ ಧರ್ಮ ಗ್ರಂಥಗಳು ಹೇಳುತ್ತವೆಯಂತೆ. ಆದರೆ ವಿಷ್ಣು ಒಂಬತ್ತು ಸಲ ಅವತರಿಸಿದನು. ಹೀಗೆ ಅವತಾರಗಳನ್ನು ಎತ್ತಿ, ದುಷ್ಟರನ್ನು ಸಂಹರಿಸಿ ಶಿಷ್ಟರನ್ನು ಕಾಪಾಡಿದನಂತೆ. ಎಂಟನೇ ಅವತಾರ ಬಹಳ ಮುಖ್ಯವಾದ ಅವತಾರವಾಗಿ ತ್ತಂತೆ. ರಾಕ್ಷಸರ (giants) ಹಾವಳಿಯಿಂದ ಈ ಪ್ರಪಂಚಕ್ಕೆ ತುಂಬ ಕಷ್ಟ ಒದಗಿ ತ್ತೆಂದೂ, ಆಗ ವಿಷ್ಣುವು ನಡುರಾತ್ರಿಯಲ್ಲಿ ಪುಣ್ಯವತಿಯೊಬ್ಬಳ ಹೊಟ್ಟೆಯಲ್ಲಿ ಹುಟ್ಟಿ ಆ ಕಷ್ಟವನ್ನು ನಿವಾರಿಸಿದನೆಂದೂ, ಹಾಗೆ ಹುಟ್ಟಿದ ರಾತ್ರಿಯೆಲ್ಲಾ ದೇವತೆಗಳು ಆಕಾಶ ದಲ್ಲಿ ಹಾಡುತ್ತಾ ಹೂವಿನ ಮಳೆಗರೆಯುತ್ತಿದ್ದರೆಂದೂ ಹೇಳುತ್ತಾರೆ. ಇದು ಸ್ವಲ್ಪ ಮಟ್ಟಿಗೆ ನಮ್ಮ ಕ್ರೈಸ್ತಮತಧರ್ಮವನ್ನು ಹೋಲುತ್ತದೆ. ಆದರೆ ಇದು ಅಷ್ಟಕ್ಕೇ ನಿಲ್ಲದೆ ಮತ್ತೆ ಕಟ್ಟುಕಥೆ ಶುರುವಾಗಿಬಿಡುತ್ತದೆ. ವಿಷ್ಣುವಿನ ಅವತಾರವೆತ್ತಿದ ಆ ಮನುಷ್ಯ ಆಕಾಶದಲ್ಲಿ ಹಾರಾಡುತ್ತ, ಸೂರ್ಯನನ್ನೇ ಮರೆಮಾಡುವಷ್ಟು ಭಾರಿ ಗಾತ್ರದ ರಾಕ್ಷಸನನ್ನು ಕೊಂದುಹಾಕಿದನಂತೆ ; ಮತ್ತು ಆ ರಾಕ್ಷಸ ಬಿದ್ದ ರಭಸಕ್ಕೆ

---

[1]ಫಾದರ್ ರೋಆ : ಫಾದರ್ ಹೀನ್‌ರಿಚ್ ರೋಆ(Father Heinrich Roa) ಇವನು ಸುಮಾರು ೧೬೬೦ರಲ್ಲಿ ಗೋವಾದಿಂದ ಆಗ್ರಾಕ್ಕೆ ಪ್ರಯಾಣಮಾಡಿದನೆಂದು ತಿಳಿದುಬರು ತ್ತದೆ. ಆಗ್ರಾದಲ್ಲಿ ಈತ ಮತ್ತು ಬೆರ್ನ್ಯೇ ಭೇಟಿ ಆಗಿರಬೇಕು. ಫಾದರ್ ರೋಆ ಸಂಸ್ಕೃತ ವನ್ನೂ, ಹಿಂದೂ ಧಾರ್ಮಿಕ ತತ್ತ್ವಗಳನ್ನೂ ಅಭ್ಯಾಸಮಾಡಿದ್ದನು. ಆಗ್ಗೆ ಇವುಗಳ ಬಗ್ಗೆ ಈತ ನೊಬ್ಬನೇ ಅಧಿಕಾರವಾಣಿಯಿಂದ ಹೇಳಬಲ್ಲವನಾಗಿದ್ದನಂತೆ. ಇಲ್ಲಿಗೆ ಮೂನ್ನೂರು ವರ್ಷಗಳ ಹಿಂದೆ ಒಬ್ಬ ಜರ್ಮನಿಯವನು ಸಂಸ್ಕೃತ ಪಂಡಿತನಾಗಿದ್ದುದು ಆಶ್ಚರ್ಯವೇ ಸರಿ. ಇವನು ೧೬೬೦ರಲ್ಲಿ ಆಗ್ರಾಕ್ಕೆ ಹೋಗಿ ಅಲ್ಲಿ ೧೬೬೩ರವರೆಗೂ ಇದ್ದು ರೋಮ್ ನಗರಕ್ಕೆ ಹಿಂದಿರುಗಿದ. ಅಲ್ಲಿಗೆ ಹೋದಾಗ ಫಾದರ್ ಕಿರ್ಚರ್ (Kircher)ಎಂಬುವನಿಗೆ ಬೇಕಾದ ಚಿತ್ರಗಳನ್ನು ಬರೆದು ಕೊಟ್ಟನು.

ಭೂಮಿಯೇ ನಡುಗಿತಂತೆ ಎಂದು ಹೇಳುತ್ತಾರೆ. ಹತ್ತನೆಯ ಅವತಾರದಲ್ಲಿ ವಿಷ್ಣುವು ಈ ಮಾನವರನ್ನು ಮಹಮ್ಮದೀಯರ ಕ್ರೂರ ಮುಷ್ಟಿಯಿಂದ ಬಿಡುಗಡೆಮಾಡುತ್ತಾನೆಂದು ಜೆಂಟೈಲರು ಹೇಳುತ್ತಾರೆ. ಹೀಗೆ ನಡೆಯುವುದು ನಮ್ಮ ಲೆಕ್ಕಾಚಾರದ ಪ್ರಕಾರ ಕ್ರೈಸ್ತ ವಿರೋಧಿ ಕಾಣಿಸಿಕೊಂಡಾಗ. ಇದು ಸಾಮಾನ್ಯ ನಂಬಿಕೆಯೇ ಹೊರತು, ಜೆಂಟೈಲರ ಧರ್ಮಗ್ರಂಥಗಳಲ್ಲಿ ಹೇಳಿಲ್ಲ.

ತ್ರಿಮೂರ್ತಿಗಳಲ್ಲಿ ಎರಡನೆಯವನಾದ ಬಿಷೆನ್‌ನ (ವಿಷ್ಣುವಿನ) ಅವತಾರಗಳು ಯಾವುವು ಎಂದು ಕೇಳಿದಾಗ ಜೆಂಟೈಲರು ಹೀಗೆ ಹೇಳಿದರು : 'ಲೈಯೆನ್'(Lion: ಸಿಂಹ) 'ಹಾಗ್'(Hog : ವರಾಹ), 'ಟಾರ್ಟಾಯಿಸ್' (Tortaise : ಕೂರ್ಮ), 'ಸೆರ್ಪೆಂಟ್' (Serpent : ಸರ್ಪ), 'ಪಿಗ್ಮಿ ಬ್ರಾಹ್ಮಣ' (Pigmy Brahmen ವಾಮನ), ಮ್ಯಾನ್‌ಲಯನ್' (Man Lion : ನರಸಿಂಹ), 'ಡ್ರೆಗೋನ್'(Dargon : ಪೌರಾಣಿಕ ಸರ್ಪ), ಎಂಟನೆಯದು ಆಗಲೇ ಹೇಳಿದ್ದು (ಕೃಷ್ಣಾವತಾರ), ಒಂಬತ್ತನೆಯದು 'ಏಪ್' (Ape : ಕೋತಿ) ಮತ್ತು ಹತ್ತನೆಯದು ಮಹಾ ಅಶ್ವಾರೋಹಿ (Mighty-Cavalier : ಕಲ್ಕಿ)[1].

ಜೆಂಟೈಲರ ಸಿದ್ಧಾಂತಗಳನ್ನು ರಿವೆರೆಂಡ್ ಫಾದರ್ ರೋಅ ಅವರು ಪಡೆದದ್ದು ಬೇತ್‌ಗಳಿಂದ (ವೇದಗಳಿಂದ) ಎಂಬುದರಲ್ಲಿ ನನಗೆ ಅನುಮಾನವಿಲ್ಲ. ಅವರು ನನಗೆ ತಿಳಿಸಿದ ಸಂಗತಿಗಳು ಜೆಂಟೈಲರ ಪುರಾಣಕ್ಕೆ ಆಧಾರವಾಗಿವೆ. ಈ ವಿಷಯವನ್ನು ಕುರಿತು ನಾನು ಸಾಕಷ್ಟು ಬರೆದಿದ್ದೇನೆ. ದೇವಸ್ಥಾನಗಳಲ್ಲಿ ಇಟ್ಟಿರುವ ಅವರ ದೇವರುಗಳ ಅಥವಾ ವಿಗ್ರಹಗಳ ಚಿತ್ರಗಳನ್ನು ಚಿತ್ರಿಸಿದ್ದೇನೆ. ಅವರ ಭಾಷೆಯಾದ ಸಂಸ್ಕೃತದ ಅಕ್ಷರಗಳನ್ನು ಬರೆಸಿಕೊಂಡಿದ್ದೇನೆ. ಆದರೆ ನನ್ನ ಹಸ್ತಪ್ರತಿಯ ಮುಖ್ಯ ವಿಷಯಗಳು ಫಾದರ್ ಕಿರ್ಚರ್ (Father Kircher)ಅವರ 'ಚೈನಾ ಇಲ್ಲಸ್ಟ್ರಾ' (China Illustra) ಎಂಬ ಪುಸ್ತಕದಲ್ಲಿರುವುದರಿಂದ ಆ ಪುಸ್ತಕವನ್ನು ತಾವು ನೋಡಿದರೆ ಸಾಕೆಂದು ನನ್ನ ಅಭಿಪ್ರಾಯ.[2] ಫಾದರ್ ಕಿರ್ಚರ್ ಅವರು ತಮಗೆ ಬೇಕಾದ ವಿಷಯ

---

[1]ಬೆರ್‌ನ್ಯೆ ವಿಷ್ಣುವಿನ ದಶಾವತಾರಗಳ ಬಗ್ಗೆ ಸರಿಯಾದ ವಿವರಣೆ ನೀಡಿಲ್ಲ. ಬಹುಶಃ, 'ಜೆಂಟೈಲರು' (ಹಿಂದೂಗಳು) ತಿಳಿಸಿದ ವಿಷಯವನ್ನು ತನ್ನ ಭಾಷೆಯಲ್ಲಿ ಅಭಿವ್ಯಕ್ತಿಸಲು ಇರುವ ತೊಡಕು ಇದಕ್ಕೆ ಕಾರಣವಾಗಿರಬೇಕು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ—ಇವು ದಶಾವತಾರಗಳು.

[2]ಚೈನಾ ಇಲ್ಲಸ್ಟ್ರಾ : ಈ ಪುಸ್ತಕ ೧೬೬೭ರಲ್ಲಿ ಆಮ್‌ಸ್ಟರ್‌ಡಾಂನಲ್ಲಿ ಪ್ರಕಟವಾಯಿತು. ಮೊಟ್ಟಮೊದಲಿಗೆ ಯೂರೋಪಿನಲ್ಲಿ ಅಥವಾ ಬೇರೆ ಸ್ಥಳಗಳಲ್ಲಿ ಸಂಸ್ಕೃತ ಅಕ್ಷರಗಳನ್ನು ಮುದ್ರಿಸಿದ್ದನ್ನು ಅಥವಾ ಕೊರೆದದ್ದನ್ನು ಈ ಪುಸ್ತಕದಲ್ಲಿ ಕಾಣಬಹುದು. ಇದನ್ನು ಬರೆದ ಕಿರ್ಚರ್ ಎಂಬುವವನು ಸಾಹಿತ್ಯದಲ್ಲಿ ಅಪಾರ ಆಸಕ್ತಿಯನ್ನು ಪಡೆದವನಾಗಿದ್ದ. ಆತ ಜೆಸ್ಯೂಯಿಟರು ಮತ್ತು ಇತರ ರೋಮನ್ ಮಿಷನರಿಗಳು ಬರೆದು ಕಳುಹಿಸಿದ ವಾರ್ಷಿಕ ವರದಿಗಳನ್ನು ಸಂಪಾದಿಸುವ ಸಂಪಾದಕ–ಕಾರ್ಯದರ್ಶಿಯಾಗಿದ್ದ. ಈತ ಒಮ್ಮೆ ಪ್ರಾಚ್ಯ ಭಾಷೆಗಳ ಪ್ರೊಫೆಸರೂ ಆಗಿದ್ದ.

ಗಳನ್ನು ಫಾದರ್ ರೋಅ ಅವರು ರೋಮ್‌ನಗರದಲ್ಲಿದ್ದಾಗ ಪಡೆದರು. ನಾನು ಫಾದರ್ ಕಿರ್ಚರ್ ಅವರಿಗಷ್ಟೇ ಅಲ್ಲದೆ, 'ಹೆನ್ರಿ ಲಾರ್' (Henry Lor)[3] ಮತ್ತು ಏಬ್ರಾಹಂ ರೋಜರ್ (Abraham Roger),[4] ಅವರಿಗೂ ಕೃತಜ್ಞನಾಗಿದ್ದೇನೆ. ಜೆಂಟೈಲರನ್ನು ಕುರಿತು ಹೇರಳವಾದ ಸಂಗತಿಗಳನ್ನು ಸಂಗ್ರಹಿಸಿದ್ದೆವು. ನಾನು ತಿಳಿಸಿರುವ ಈ ಮಹನೀಯರು ಬರೆದ ಗ್ರಂಥಗಳಲ್ಲಿ ಕಂಡುಬರುವುದರಿಂದ ಮತ್ತು ನಾನು ಸಂಗ್ರಹಿಸಿದ ವಿಷಯಗಳನ್ನು ಅವರಂತೆ ಕ್ರಮವಾಗಿ ವಿಂಗಡಿಸಲು ತುಂಬಾ ಶ್ರಮ ಹಾಗೂ ಕಷ್ಟಗಳಿರುವ ಕಾರಣ ಆ ಕೆಲಸವನ್ನು ಕೈಬಿಟ್ಟೆ. ಈಗ ನಾನು ತಿಳಿದುಕೊಂಡ ಸಂಗತಿಗಳ ಸಾರಾಂಶವನ್ನಷ್ಟೇ ಇಲ್ಲಿ ಹೇಳಬಯಸುತ್ತೇನೆ.

ಗಂಗಾನದಿಯ ದಂಡೆಯಲ್ಲಿರುವ ಬನಾರಸ್ ಪಟ್ಟಣ ಜೆಂಟೈಲರ ಸಾರ್ವತ್ರಿಕ ಶಾಲೆ (General School) ಎನ್ನಬಹುದು. ಇದು ಇಂಡಿಯಾದ ಅಥೆನ್ಸ್. ಇಲ್ಲಿಗೆ ಬ್ರಾಹ್ಮಣರೂ ಮತ್ತಿತರ ಭಕ್ತರೂ ಬರುತ್ತಾರೆ. ಇವರೇ ವಿದ್ಯಾರ್ಜನೆ ಹಾಗೂ ವಿದ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳ ಜನ. ನಮ್ಮ ವಿಶ್ವವಿದ್ಯಾನಿಲಯಗಳಲ್ಲಿರುವಂತೆ ಬನಾರಸ್ ಪಟ್ಟಣದಲ್ಲಿ ಇರುವ ವ್ಯವಸ್ಥೆಯನ್ನು ನಮ್ಮ ಹಿಂದಿನ ಶಾಲೆಗಳಿಗೆ (ಗುರುಕುಲಗಳಿಗೆ) ಹೋಲಿಸಬಹುದು. ಪಾಠ ಹೇಳುವ ಗುರುಗಳು ಅವರವರ ಮನೆಗಳಲ್ಲಿ ಇರುತ್ತಾರೆ. ಹೆಚ್ಚಾಗಿ ಅವರು ಇರುವುದು ಶ್ರೀಮಂತರು ಒದಗಿಸಿಕೊಟ್ಟ ತೋಟದ ಮನೆಗಳಲ್ಲಿ. ಒಬ್ಬೊಬ್ಬ ಗುರುವಿನ ಬಳಿ ನಾಲ್ಕಾರು ಶಿಷ್ಯರಿರುತ್ತಾರೆ. ಬಹಳ ಹೆಸರಾದ ಗುರುವಿನ ಬಳಿ ಹನ್ನೆರಡು ಅಥವಾ ಹದಿನೈದು ಶಿಷ್ಯರುಗಳಿರಬಹುದು. ಇದಕ್ಕಿಂತ ಹೆಚ್ಚಿಗೆ ಶಿಷ್ಯರು ಯಾರ ಬಳಿಯೂ ಇರುವುದಿಲ್ಲ. ಶಿಷ್ಯರು ಹತ್ತು ಹನ್ನೆರಡು ವರ್ಷಗಳ ಕಾಲ ವಿದ್ಯಾಭ್ಯಾಸ ನಡೆಸುತ್ತಾರೆ. ಈ ವಿದ್ಯಾಭ್ಯಾಸ ನಿಧಾನವಾಗಿ ಸಾಗುತ್ತದೆ ಎಂದೇ ಹೇಳಬೇಕು. ಏಕೆಂದರೆ, ವಿದ್ಯಾರ್ಥಿಗಳಲ್ಲಿ ಬಹು ಮಂದಿ ನಿಧಾನಸ್ವಭಾವದವರು. ಇದಕ್ಕೆ ಕಾರಣ,

---

[3]ಹೆನ್ರಿಲಾರ್ : (Henry Lord) : ಸೂರತ್ತಿನಲ್ಲಿದ್ದ ಇಂಗ್ಲಿಷರ ಪುರೋಹಿತ. ಈತ ಹಿಂದೂಧರ್ಮ ಮತ್ತು ಪಾರ್ಸಿಧರ್ಮಗಳನ್ನು ಕುರಿತು A Display of Two Foreign Sects in India ಎಂಬ ಪುಸ್ತಕ ಬರೆದಿದ್ದಾನೆ.

[4]ಏಬ್ರಾಹಂ ರೋಜರ್ : ೧೬೩೧–೧೬೪೧ರ ಕಾಲದಲ್ಲಿ ಪುಲಿಕಾಟ್‌ನಲ್ಲಿದ್ದ ಡಚ್ಚರ ವಸಾಹತಿನ ಪುರೋಹಿತ. ಈತ ೧೬೪೯ರಲ್ಲಿ ಕಾಲವಾದ ಮೇಲೆ ಈತನ ಹೆಂಡತಿ ಗಂಡ ಬರೆದ '*Laporte ouverte pour pervenir a la connoissance du paganisme Coche*' ಎಂಬ ಪುಸ್ತಕ ಪ್ರಕಟಿಸಿದಳು. ಈ ಪುಸ್ತಕ ಹೆನ್ರಿ ಲಾರನ ಪುಸ್ತಕಕ್ಕಿಂತ ಹೆಚ್ಚು ಉಪಯುಕ್ತವಾಗಿದೆ ಯೆಂದು ಗೊತ್ತಾಗುತ್ತದೆ. ಈ ಪುಸ್ತಕದಲ್ಲಿ ಸಂಗ್ರಹಿಸಿರುವ ವಿಷಯಗಳನ್ನು ಏಬ್ರಹಾಂ ಡಚ್ ಭಾಷೆ ಬರುತ್ತಿದ್ದ ಪದ್ಮನಾಭ ಎಂಬ ಹೆಸರಿನ ಬ್ರಾಹ್ಮಣನಿಂದ ಪಡೆದನಂತೆ. ಈ ಪದ್ಮನಾಭನೇ ಭರ್ತೃಹರಿಯ ಶತಕಗಳನ್ನು ಡಚ್ ಭಾಷೆಗೆ ಅನುವಾದಮಾಡಿಕೊಟ್ಟವನು. ಈ ಶತಕಗಳು ಡಚ್ ಭಾಷೆಯಲ್ಲಿ ೧೬೭೦ರಲ್ಲಿ ಯೂರೋಪಿನಲ್ಲಿ ಪ್ರಕಟವಾದುವು.

ಇವರು ತಿನ್ನುವ ಆಹಾರ ಮತ್ತು ದೇಶದ ಹವೆ. ಅಲ್ಲದೆ, ಪರಸ್ಪರ ಹುರುಡು ಇಲ್ಲದ ಕಾರಣವಾಗಿಯೂ, ಮಹಾ ಪಂಡಿತನಾದರೆ ನಮ್ಮಲ್ಲಿರುವಂತೆ ಗೌರವವಾಗಲಿ ಸಂಭಾವನೆ ಯಾಗಲಿ ಸಿಗುವುದೆಂಬ ಆಸೆ ಇಲ್ಲದ ಕಾರಣವಾಗಿಯೂ ವಿದ್ಯಾಭ್ಯಾಸ ಬಹು ನಿಧಾನ ವಾಗಿ ಸಾಗುತ್ತದೆ. ಇವರ ಮನಸ್ಸನ್ನು ಪ್ರಚೋದನೆ ಮಾಡುವಂಥಾದ್ದು ಏನೂ ಇರುವುದಿಲ್ಲ. ಶ್ರೀಮಂತ ವರ್ತಕರು ಒದಗಿಸಿದ 'ಕಿಚರಿ' ತಿಂದುಕೊಂಡು ನಿಶ್ಚಿಂತೆಯಾಗಿ ತಮ್ಮ ಪಾಠಪ್ರವಚನಗಳನ್ನು ನಡೆಸಿಕೊಂಡುಹೋಗುತ್ತಾರೆ.

ಮೊದಲು ಪಾಠ ಆರಂಭವಾಗುವುದು ಸಂಸ್ಕೃತ ಭಾಷೆಯಲ್ಲಿ. ಈ ಭಾಷೆ ಪಂಡಿತರ ಭಾಷೆ. ಇದು ಹಿಂದೂಸ್ಥಾನದಲ್ಲಿ ಸಾಮಾನ್ಯವಾಗಿ ಉಪಯೋಗಿಸುವ ಭಾಷೆಗಿಂತ ತೀರಾ ಭಿನ್ನವಾದುದು ಸಂಸ್ಕೃತವೆಂದರೆ ಶುದ್ಧವಾದ ಭಾಷೆ ಎಂದರ್ಥ. ಇದು ಪವಿತ್ರವಾದ ಭಾಷೆ ಹಾಗೂ ದೇವಭಾಷೆ ಎಂದೂ ಹೇಳುತ್ತಾರೆ. ಈ ಭಾಷೆ ಬ್ರಹ್ಮನಷ್ಟೇ ಪುರಾತನವಾದು ದೆಂದು ಹೇಳುತ್ತಾರೆ. ಬ್ರಹ್ಮನ ಆಯುಸ್ಸನ್ನು ಲಕ್ಷಗಳಲ್ಲಿ ಹೇಳುತ್ತಾರೆ. ಸಂಸ್ಕೃತವು ಬಹಳ ಹಳೆಯ ಭಾಷೆಯೆಂಬುದನ್ನು ಅಲ್ಲಗಳೆಯುವಂತಿಲ್ಲ. ಏಕೆಂದರೆ, ಅವರ ಗ್ರಂಥ ಗಳೆಲ್ಲ ಪುರಾತನ ಕಾಲದವುಗಳು. ಅವುಗಳು ಸಂಸ್ಕೃತದಲ್ಲಿರುವುದರಿಂದ ಭಾಷೆಯೂ ಪುರಾತನವೆಂದು ಒಪ್ಪಿಕೊಳ್ಳಲೇಬೇಕು. ಸಂಸ್ಕೃದಲ್ಲಿ ಬರೆದ ತತ್ತ್ವಶಾಸ್ತ್ರ ಗ್ರಂಥಗಳಿವೆ. ಶ್ಲೋಕ ರೂಪದಲ್ಲಿ ಬರೆದ ವೈದ್ಯ ಗ್ರಂಥಗಳಿವೆ. ಇನ್ನೂ ಅನೇಕ ತರಹ ಗ್ರಂಥಗಳಿವೆ. ಬನಾರಸ್ ನಗರದಲ್ಲಿ ಇಡೀ ಒಂದು ದೊಡ್ಡ ಹಜಾರವೇ ಈ ಪುಸ್ತಕಗಳಿಂದ ತುಂಬಿದೆ.

ಸಂಸ್ಕೃತದ ಅಭ್ಯಾಸ ತುಂಬಾ ಕಷ್ಟ. ವೇದಗಳ ಸಾರಾಂಶ ಹಾಗೂ ಅವುಗಳ ಮೇಲಿನ ಟೀಕಾರೂಪದಂತಿರುವ 'ಪುರಾಣ'ಗಳನ್ನು ಓದುತ್ತಾರೆ. ಈ ಪುಸ್ತಕಗಳು ಸಿಕ್ಕು ವುದು ಬಹಳ ಕಷ್ಟ. ಆಗಾ ಎಷ್ಟೇ ಪ್ರಯತ್ನಪಟ್ಟರೂ ಒಂದು ಪ್ರತಿಯನ್ನು ಕೊಂಡು ಕೊಳ್ಳಲು ಆತನಿಗೆ ಸಾಧ್ಯವಾಗಲಿಲ್ಲ. ಜೆಂಟೈಲರು ಅವುಗಳನ್ನು ಬಹಳ ಜೋಪಾನವಾಗಿ ಇಡುತ್ತಾರೆ. ಮುಹಮ್ಮದೀಯರ ಕೈಗೆ ಸಿಕ್ಕಿದರೆ ಅವುಗಳನ್ನು ಎಲ್ಲಿ ಸುಟ್ಟುಹಾಕುವರೋ ಎಂಬ ಭೀತಿ ಅವರಿಗೆ. ವಾಸ್ತವವಾಗಿ ಮುಹಮ್ಮದೀಯರು ಹಾಗೆ ಮಾಡಿದ್ದುಂಟು.

ಪುರಾಣಗಳನ್ನು ಓದಿದ ಮೇಲೆ ತತ್ತ್ವಶಾಸ್ತ್ರದ ಅಭ್ಯಾಸದಲ್ಲಿ ತೊಡಗುತ್ತಾರೆ. ನಾನಾಗಲೇ ಹೇಳಿದಂತೆ ನಿಧಾನವಾಗಿ ತಮ್ಮ ವಿದ್ಯಾಭ್ಯಾಸ ಸಾಗಿಸುತ್ತಾರೆ. ಹಿಂದೂ ಸ್ಥಾನದಲ್ಲಿ ಹೆಸರಾದ ತತ್ತ್ವಶಾಸ್ತ್ರಜ್ಞರು ಆರು ಮಂದಿ. ಈ ಆರು ತತ್ತ್ವಶಾಸ್ತ್ರಜ್ಞರಿಂದ ಆರು ತಾತ್ತ್ವಿಕ ಪಂಥಗಳು ಹುಟ್ಟಿಕೊಂಡಿವೆ.[1] ಈ ಪಂಥಗಳಲ್ಲಿ ಹೆಸರಾದ ಪಂಡಿತರು ತಮ್ಮ ತಮ್ಮ ಪಂಥವೇ ದೊಡ್ಡದೆಂದು ಭಾರಿ ವಾದಗಳನ್ನು ನಡೆಸುತ್ತಾರೆ. ಏಳನೆಯ

---

[1] ತತ್ತ್ವಶಾಸ್ತ್ರಗಳ ಆರು ಪಂಥಗಳು ಯಾವುವೆಂದರೆ : ಗೌತಮನ ನ್ಯಾಯ, ಕನಾಡನ ವೈಶೇಷಿಕ, ಕಪಿಲನ ಸಾಂಖ್ಯ, ಪತಂಜಲಿಯ ಯೋಗ, ಜೈಮಿನಿಯ ಮೀಮಾಂಸ ಮತ್ತು ಬಾದರಾಯಣನ ವೇದಾಂತ,

ಪಂಥವೊಂದು ಈಗ ತಲೆಯೆತ್ತಿದೆ. ಇದಕ್ಕೆ 'ಬೌತೆ' (Bouthe=ಬೌದ್ಧ ?) ಎಂದು ಹೆಸರು. ಇದರಲ್ಲಿ ಹನ್ನೆರಡು ಒಳ ಪಂಥಗಳಿವೆ. ಆದರೆ ಈ ಪಂಥಗಳು ಅಷ್ಟು ಪ್ರಬಲ ವಾಗಿಲ್ಲ. ಈ ಪಂಥಕ್ಕೆ ಸೇರಿದವರನ್ನು ಜನ ತಿರಸ್ಕಾರದಿಂದಲೂ ದ್ವೇಷದಿಂದಲೂ ಕಾಣು ತ್ತಾರೆ; ಅಧರ್ಮಿಗಳೆಂದೂ ನಾಸ್ತಿಕರೆಂದೂ ಇವರನ್ನು ಹಿಯಾಳಿಸುತ್ತಾರೆ. ಇವರ ಜೀವನ ರೀತಿಯೇ ಒಂದು ತರಹ.

ಜೆಂಟೈಲರ ಪವಿತ್ರ ಗ್ರಂಥಗಳು ಹೇಳುವ ಮೂಲತತ್ತ್ವಗಳನ್ನು ಗ್ರಹಿಸುವುದು ತುಂಬಾ ಕಷ್ಟ. ಅವುಗಳನ್ನು ವಿವರಿಸುವ ಪಂಡಿತರು ಬಹಳ ಅಸ್ಪಷ್ಟವಾದ ಟೀಕೆಗಳನ್ನು ನೀಡುತ್ತಾರೆ. ಅವರು ಹೇಳುವುದು ಅರ್ಥವೇ ಆಗುವುದಿಲ್ಲ. ಈ ಅಸ್ಪಷ್ಟತೆಗೆ ಕಾರಣ ಪಂಡಿತರ ಅಜ್ಞಾನವಲ್ಲ; ಗ್ರಂಥಗಳ ಮೂಲಕರ್ತರೇ ಕಾರಣ.

ವೈದ್ಯಶಾಸ್ತ್ರದ ಮೇಲೆ ಅನೇಕ ಸಣ್ಣಪುಟ್ಟ ಗ್ರಂಥಗಳಿವೆ. ಅವು ಹೆಚ್ಚಾಗಿ ಔಷಧ ವಿಧಾನಗಳನ್ನು ಹೇಳಿವೆಯೆ ಹೊರತು, ನಿರ್ದಿಷ್ಟ ವಿಷಯವನ್ನು ಕುರಿತವುಗಳಾಗಿಲ್ಲ. ಬಹು ಪುರಾತನವೂ ಅತಿ ಮಹತ್ವದ್ದೂ ಆದದ್ದು ಶ್ಲೋಕರೂಪದಲ್ಲಿದೆ. ಇವರ ವೈದ್ಯ ವಿಧಾನಕ್ಕೂ ನಮ್ಮದಕ್ಕೂ ತುಂಬಾ ವ್ಯತ್ಯಾಸವಿದೆ. ಇವರು ತಮ್ಮ ಚಿಕಿತ್ಸಾವಿಧಾನದಲ್ಲಿ ಅನುಸರಿಸುವ ತತ್ತ್ವಗಳಾವುವೆಂದರೆ: ಜ್ವರಪೀಡಿತನಾದ ರೋಗಿಗೆ ಹೆಚ್ಚಿನ ಪುಷ್ಟಿಯ ಆಹಾರ ಬೇಕಾಗಿಲ್ಲ; ಕಾಯಿಲೆಗೆ ಅತ್ಯುತ್ತಮ ಚಿಕಿತ್ಸೆ ಉಪವಾಸ; ರೋಗಿಯ ಶರೀರಕ್ಕೆ ಮಾಂಸದ ಸಾರಿನಷ್ಟು ಕೆಟ್ಟದ್ದು ಯಾವುದೂ ಇಲ್ಲ; ಅತ್ಯಂತ ಆವಶ್ಯಕ ಸಂದರ್ಭಗಳಲ್ಲಿ ಮಾತ್ರ ರೋಗಿಯ ರಕ್ತ ತೆಗೆಯಬೇಕು.[1] ಉದಾಹರಣೆಗೆ, ಮೆದುಳಿನ ಊತ (brain fever) ಇದ್ದಾಗ ಮತ್ತು ಶ್ವಾಸಕೋಶ (chest), ಪಿತ್ತಜನಕಾಂಗ ಅಥವಾ ಮೂತ್ರ ಕೋಶಗಳ ಉರಿ ಇರುವಾಗ ರಕ್ತ ತೆಗೆಯಬಹುದು.

ಈ ಚಿಕಿತ್ಸಾವಿಧಾನಗಳು ಸರಿಯೆ ಅಲ್ಲವೆ ಎಂಬುದನ್ನು ಹೇಳಲು ತಿಳಿದಂಥ ಪಂಡಿತರಿಗೆ ಬಿಡುತ್ತೇನೆ. ನಾನು ಇಷ್ಟು ಹೇಳುತ್ತೇನೆ, ಹಿಂದೂಸ್ಥಾನದಲ್ಲಿ ಅವು ಫಲ ಪ್ರದವಾಗಿವೆ ಎಂಬುದಾಗಿ ಮೊಗಲರು ಮತ್ತು ಮಹಮ್ಮದೀಯರು ಸಹ ಜೆಂಟೈಲ ರಂತೆಯೇ ಈ ವಿಧಾನಗಳನ್ನು ಅನುಸರಿಸುತ್ತಾರೆ. ಆದರೆ ಮೊಗಲರು ಜೆಂಟೈಲರಿಗಿಂತ ಹೆಚ್ಚಾಗಿ ರಕ್ತಸ್ರಾವ ಮಾಡಿಸುತ್ತಾರೆ. ಒಮ್ಮೊಮ್ಮೆ ಹದಿನೆಂಟು ಇಪ್ಪತ್ತು ಔನ್ಸುಗಳಷ್ಟು ರಕ್ತ ತೆಗೆಸುತ್ತಾರೆ. ಕೆಲವು ವೇಳೆ ರೋಗಿ ಜ್ಞಾನತಪ್ಪುವವರೆಗೂ ತೆಗೆಸುತ್ತಾರೆ. ಹೀಗೆ ಮಾಡಿ, ರೋಗದ ಆರಂಭದಲ್ಲಿಯೇ ಅದನ್ನು ತೊಲಗಿಸುವ ಪ್ರಯತ್ನಮಾಡುತ್ತಾರೆ. ಮಾಂಸದ ಸಾರಿನ ಬಗ್ಗೆ ಇಬ್ಬರಲ್ಲಿಯೂ ಒಂದೇ ಕ್ರಮ ಇದೆ.

---

[1] **Blood-letting or Phlebotomy**: ಪ್ರಾಚೀನ ಚಿಕಿತ್ಸಾ ವಿಧಾನದಲ್ಲಿ ರೋಗಿಯ ರಕ್ತನಾಳದಿಂದ ನೆತ್ತರನ್ನು ಜಿಗಣೆಯ ಮೂಲಕ ಅಥವಾ ಸೂಚಿಯ ಮೂಲಕ ತೆಗೆಯುವ ಪದ್ಧತಿ ಇತ್ತು.

ಮನುಷ್ಯನ ದೇಹ ರಚನೆಯ ಬಗ್ಗೆ ಜೆಂಟೈಲರಿಗೆ ಏನೇನೂ ತಿಳಿಯದು ಎಂದರೆ ಅಚ್ಚರಿಪಡಬೇಕಾಗಿಲ್ಲ. ಇವರು ಮನುಷ್ಯನ ಶರೀರವನ್ನಾಗಲಿ ಅಥವಾ ಪ್ರಾಣಿಯ ಶರೀರವನ್ನಾಗಲಿ ಕೊಯ್ದು ನೋಡುವುದಿಲ್ಲ. ನನ್ನ ಹಿತೈಷಿ ಆಗಾನಿಗೆ ರಕ್ತ ಚಲನೆ ಹೇಗೆ ಆಗುತ್ತದೆ, ಅನ್ನ ಕ್ಷೀರವು (chyle)ಹೇಗೆ ನಾಳಗಳ ಮೂಲಕ ಹೃದಯದ ಬಲ ಹೃತ್ಕುಕ್ಷಿಗೆ ಹೋಗುತ್ತದೆ ಎಂಬುದನ್ನು ತೋರಿಸಲು ಜೀವಂತವಾದ ಆಡನ್ನೋ ಅಥವಾ ಕುರಿಯನ್ನೋ ಕೊಯ್ದಾಗ ಮನೆಯಲ್ಲಿದ್ದ ಜನರೆಲ್ಲ ಓಡಿಹೋಗಿಬಿಡುತ್ತಿದ್ದರು. ಈ ವಿಚಾರವಾಗಿ ಇವರ ಅಜ್ಞಾನ ಇಷ್ಟಿದ್ದರೂ ಮನುಷ್ಯನ ಶರೀರದಲ್ಲಿರುವ ರಕ್ತನಾಳಗಳ ಸಂಖ್ಯೆ ಐದು ಸಾವಿರ ಎಂದು ಕರಾರುವಾಕಾಗಿ ಎಣಿಸಿದವರಂತೆ ಹೇಳುತ್ತಾರೆ.

ಜ್ಯೋತಿಶ್ಶಾಸ್ತ್ರದ ಬಗ್ಗೆ ಹೇಳುವುದಾದರೆ, ಜೆಂಟೈಲರಲ್ಲಿ ಅವರದೆ ಆದ ಪಂಚಾಂಗ ಗಳು (tables) ಇವೆ. ಇವುಗಳನ್ನು ನೋಡಿ ಅವರು ಗ್ರಹಣಗಳು ಯಾವಾಗ ಆಗು ತ್ತವೆ ಎಂದು ಹೇಳಬಲ್ಲರು. ಯೂರೋಪಿಯನರಷ್ಟು ನಿಖರವಾಗಿ ಹೇಳದಿದ್ದರೂ, ಸಾಕಷ್ಟು ಕರಾರ್‌ವಾಕಾಗಿ ಹೇಳಬಲ್ಲರು. ಆದರೆ ಗ್ರಹಣಗಳಿಗೆ ನಾನು ಈ ಹಿಂದೆಯೇ ಹೇಳಿದ ಕಾರಣಗಳನ್ನು ಕೊಡುತ್ತಾರೆ. ಚಂದ್ರ ನಾನೂರು ಕೋಶಗಳಷ್ಟು (kos) ದೂರದಲ್ಲಿ, ಅಂದರೆ ಐವತ್ತು ಹರದಾರಿಗಳಷ್ಟು ದೂರದಲ್ಲಿ ಸೂರ್ಯನಿಗಿಂತ ಎತ್ತರದಲ್ಲಿ ಇದ್ದಾನೆಂದು ಹೇಳುತ್ತಾರೆ. ಚಂದ್ರ ಬೆಳಗುತ್ತಾನೆಂದೂ, ಅವನಿಂದ ಜೀವಶಕ್ತಿಯುಳ್ಳ ಒಂದು ರೀತಿಯ ದ್ರವ ಜಿನುಗುವುದೆಂದೂ, ಇದು ಮುಖ್ಯವಾಗಿ ಮೆದುಳಿನಲ್ಲಿ ಸೇರುವು ದೆಂದೂ, ಅಲ್ಲಿಂದ ಉಳಿದ ಅಂಗಗಳಿಗೆ ಇಳಿಯುವದೆಂದೂ, ಹೀಗಾಗಿ ದೇಹದ ಅಂಗಾಂಗ ಗಳು ಅವುಗಳ ಕೆಲಸಮಾಡಲು ಸಾಧ್ಯವಾಗುವುದೆಂದೂ ಹೇಳುತ್ತಾರೆ. ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು 'ದೇವತೆ' (Devatha) ಗಳೆಂದೂ ನಂಬುತ್ತಾರೆ ಸೂರ್ಯನು 'ಸೋಮೇರೆ' (Someire =ಸುಮೇರು) ಪರ್ವತದ ಹಿಂದೆ ಹೋಗುವುದರಿಂದ ಕತ್ತಲಾ ಗುವುದೆಂದು ಇವರ ನಂಬಿಕೆ. ಖಗೋಳಶಾಸ್ತ್ರದಲ್ಲಿ ಇವರ ತಿಳುವಳಿಕೆ ಕಮ್ಮಿ. ಈ ಭೂಮಿ ಚಪ್ಪಟೆಯಾಗಿ ತ್ರಿಕೋಣಾಕಾರವಾಗಿದೆಯೆಂದು ಇವರ ನಂಬಿಕೆ.

ಇಂಡಿಯಾದ ಹೆಸರಾದ ಪ್ರಾಚೀನ ಬ್ರಾಹ್ಮಣ ವಿಜ್ಞಾನಿಗಳು ನಾನು ಹೇಳಿದ ವಿಚಿತ್ರ ತಪ್ಪುನೆಪ್ಪುಗಳನ್ನು ಹೊಂದಿರುವುದು ನಿಜವಾದರೆ, ಮಾನವ ವರ್ಗಕ್ಕೆ ಬಹಳ ಮೋಸ ಆಗಿದೆಯೆಂದು ನಾನು ತಿಳಿಯುತ್ತೇನೆ. ಇವರು ತಿಳಿಸಿರುವುದು ವಾಸ್ತವವಾದ ವಿಷಯವೆಂದು ನಂಬಲು ನನಗೆ ಕಷ್ಟವಾಗಿದೆ. ಆದರೆ ಇಂಡಿಯನರ ಮತಧರ್ಮ ಅನಾದಿ ಕಾಲದಿಂದ ಬಂದದ್ದು ಎಂದು ತಿಳಿದಾಗ ಇದನ್ನು ನಂಬಬೇಕಾಗುತ್ತದೆ. ಅವರ ಮತ ಧರ್ಮ ಹಾಗೂ ಅವರ ವೈಜ್ಞಾನಿಕ ಗ್ರಂಥಗಳೆಲ್ಲಾ ಸಂಸ್ಕೃತದಲ್ಲಿ ಲಿಖಿತವಾಗಿವೆ. ಈಗ ಸಂಸ್ಕೃತ ಮೃತಭಾಷೆಯಾಗಿಬಿಟ್ಟಿದೆ. ಪಂಡಿತರಿಗೆ ಮಾತ್ರ ಅರ್ಥವಾಗಬಲ್ಲದು. ಅದರ ಮೂಲವು ಅನಾದಿಯಾದುದು. ಇವೆಲ್ಲ ಇಂಡಿಯನರ ಪ್ರಾಚೀನತೆಯನ್ನು ರುಜುವಾತು ಮಾಡಿಕೊಡುತ್ತವೆ.

ಈಗ ವಿಗ್ರಹಗಳನ್ನು ಪೂಜಿಸುವ ಬಗ್ಗೆ ಒಂದೆರಡು ಮಾತು ನಾನು ಗಂಗಾನದಿಯ ಮೇಲೆ ನೌಕಾಯಾನ ಮಾಡುತ್ತಿದ್ದಾಗ ಬನಾರಸ್ ಮೂಲಕ ಹೋಗಬೇಕಾಯಿತು. ಅಲ್ಲಿದ್ದ ಪ್ರಸಿದ್ಧ ಪಂಡಿತನನ್ನು ಕಂಡು ಮಾತಾಡಿದೆ. ಈತನಿಗೆ ಷಾಜಹಾನ್ ಚಕ್ರವರ್ತಿ ಎರಡು ಸಾವಿರ ರೂಪಾಯಿಗಳ ಕೊಡುಂಬಳಿ ಕೊಟ್ಟು ಗೌರವಿಸಿದ್ದಾನೆ.. ಈ ಪಂಡಿತ ದಷ್ಟ ಪುಷ್ಟವಾದ ಶರೀರವುಳ್ಳವನು. ಸೊಂಟಕ್ಕೆ ಬಿಳಿರೇಷ್ಮೆ ಬಟ್ಟೆ ಉಟ್ಟು ಮೈಮೇಲೆ ಕೆಂಪು ರೇಷ್ಮೆವಸ್ತ್ರ ಹೊದಿದ್ದ. ದೇಹವನ್ನು ಅರ್ಧ ಮುಚ್ಚಿದ ಈ ಉಡುಪಿನಲ್ಲಿ ನಾನು ಈತನನ್ನು ದಿಲ್ಲಿಯ ರಾಜನ ದರ್ಬಾರಿನಲ್ಲಿಯೂ, ಬೀದಿಗಳಲ್ಲಿ ಪಲ್ಲಕ್ಕಿಯಲ್ಲಿ ಸಂಚರಿಸು ವುದನ್ನೂ ನೋಡಿದ್ದೇನೆ. ಔರಂಗಜೇಬ ಪಟ್ಟಕ್ಕೆ ಬಂದ ಕೂಡಲೇ ಈತನ ಕೊಡುಂಬಳಿ ಯನ್ನು ತಪ್ಪಿಸಿದ. ಇದನ್ನು ಮತ್ತೆ ಪಡೆಯುವ ಉದ್ದೇಶದಿಂದ ಈ ಪಂಡಿತ ಒಂದು ವರ್ಷ ಕಾಲ ಆಗಾನ ಮನೆಗೆ ಬಂದು ಹೋಗುತ್ತಿದ್ದ. ಹೀಗಾಗಿ ಈತನ ಪರಿಚಯ ನನಗೆ ಚೆನ್ನಾಗಿ ಆಯಿತು.

ಬನಾರಸಿಗೆ ಹೋದಾಗ ಅಲ್ಲಿ ಈತನನ್ನು ಕಂಡೆ. ನನ್ನನ್ನು ಬಹಳ ಪ್ರೀತಿ-ವಿಶ್ವಾಸಗಳಿಂದ ಕಂಡು, ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರಕ್ಕೆ ನನ್ನನ್ನು ಆಹ್ವಾನಿಸಿದ. ಊರಿನ ಆರು ಜನ ಹೆಸರಾಂತ ಪಂಡಿತರನ್ನು ಕರೆಸಿದ. ಇಂಥ ಮಹಾಪಂಡಿತರುಗಳು ಸೇರಿದಾಗ ನಾನು ವಿಗ್ರಹಾರಾಧನೆ ಬಗ್ಗೆ ಅವರ ಅಭಿಪ್ರಾಯವನ್ನು ತಿಳಿಯಲು ಪ್ರಯತ್ನ ನಡೆಸಿದೆ. ವಿವೇಕವಿಲ್ಲದ ವಿಗ್ರಹಾರಾಧನೆಯನ್ನು ಕಂಡು ನನಗೆ ರೋಸಿ ಹೋಗಿದೆ ; ಇಂಥ ಈ ಅಸಹ್ಯ ಭಾವನೆಯಿಂದ ಕೂಡಿ ಇಂಡೀಸಿನಿಂದ ನನ್ನ ದೇಶಕ್ಕೆ ಹಿಂದಿರುಗುತ್ತಿದ್ದೇನೆ–ಹೀಗೆಂದು ನಾನು ಅವರಿಗೆ ಹೇಳಿದೆ.

ಇದಕ್ಕೆ ಉತ್ತರವಾಗಿ ಅವರು ಹೀಗೆ ಹೇಳಿದರು : ನಾವು ನಮ್ಮ ದೇವಸ್ಥಾನಗಳಲ್ಲಿ ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳ ವಿಗ್ರಹಗಳನ್ನು ಇಟ್ಟು ಪೂಜೆಮಾಡುತ್ತೇವೆ, ನಿಜ. ಆದರೆ ಆ ವಿಗ್ರಹಗಳೇ ಬ್ರಹ್ಮ, ವಿಷ್ಣು ಎಂದು ನಂಬುವುದಿಲ್ಲ. ಅವು ಕೇವಲ ಬ್ರಹ್ಮ, ವಿಷ್ಣು ಅವರ ರೂಪಗಳು ಮತ್ತು ಅವರನ್ನು ಪ್ರತಿನಿಧಿಸುವ ಸಂಕೇತಗಳು. ಅವು ಯಾರನ್ನು ಪ್ರತಿನಿಧಿಸುತ್ತವೆಯೋ ಅವರಿಗಾಗಿ ನಾವು ಪೂಜೆಸಲ್ಲಿಸುತ್ತೇವೆ. ನಾವು ಪೂಜಿಸುವುದು ಆ ಮೂರ್ತಿಗಳನ್ನಲ್ಲ. ಆ ಮೂರ್ತಿಗಳು ಯಾರವೋ ಅವರನ್ನು. ಧ್ಯಾನ ಮಾಡುವಾಗ ನಮ್ಮ ಕಣ್ಣು ಮುಂದೆ ಅವರ ವಿಗ್ರಹವಿದ್ದರೆ ನಮ್ಮ ಮನಸ್ಸು ಅವರ ಮೇಲೆ ಕೇಂದ್ರೀಕೃತವಾಗುವುದೆಂಬ ಭಾವನೆಯಿಂದ ನಮ್ಮ ದೇವಸ್ಥಾನಗಳಲ್ಲಿ ವಿಗ್ರಹ ಗಳನ್ನು ಇಟ್ಟಿದ್ದೇವೆ. ದೇವರೊಬ್ಬನೇ ಸರ್ವಶಕ್ತ ಮತ್ತು ಸರ್ವವ್ಯಾಪಿ ಎಂಬುದನ್ನು ನಾವು ಮರೆಯುವುದಿಲ್ಲ.

ಆ ಪಂಡಿತರು ಏನು ಹೇಳಿದರೊ ಮತ್ತು ಹೇಗೆ ಹೇಳಿದರೊ ಅದನ್ನು ಚಾಚೂತಪ್ಪದೆ ಹೇಳಿದ್ದೇನೆ. ಆದರೆ ಕ್ರೈಸ್ತ ಸಿದ್ಧಾಂತಗಳಿಗೆ ಹೋಲುವಂತೆ ಈ ರೀತಿ ಹೇಳಿದರೆಂದು

ನನಗೆ ಅನುಮಾನ. ಏಕೆಂದರೆ, ಬೇರೆ ಪಂಡಿತರುಗಳು ಹೇಳಿದ್ದು ಇದಕ್ಕೆ ತದ್ವಿರುದ್ಧ ವಾಗಿತ್ತು.

ನನ್ನ ಮಾತನ್ನು ಈ ಪ್ರಪಂಚದ ಕಾಲಮಾನದ ಕಡೆ ತಿರುಗಿಸಿದೆ. ಆ ಪಂಡಿತರು ನಾವು ಹೇಳುವ ಕಾಲಕ್ಕಿಂತ ಹಿಂದಿನ ಕಾಲದಿಂದ ಪ್ರಪಂಚ ಅಸ್ತಿತ್ವದಲ್ಲಿದೆ ಎಂದು ತಿಳಿಸಿದರು. ಈ ಪ್ರಪಂಚಕ್ಕೆ ಆದಿಯೇ ಇಲ್ಲವೆಂದು ಅವರು ಹೇಳಲಿಲ್ಲ. ಆದರೆ ಅದು ಎಷ್ಟು ದೀರ್ಘಕಾಲದಿಂದ ಇದೆಯೆಂಬುದನ್ನು ಹೇಳಿದಾಗ ಅದು ಅನಾದಿ ಎಂಬ ಅರ್ಥ ಕೊಡುವಂತಿತ್ತು. ಅದರ ಕಾಲವನ್ನು ನಾಲ್ಕು 'ಧ್ಯುಂಗೊ' (Dguge=ಯುಗ) ಗಳಲ್ಲಿ ಗೊತ್ತುಮಾಡಬೇಕಾಗುತ್ತದೆ ಎಂದರು. ಯುಗ ಎಂದರೆ ಶತಮಾನಗಳ ಲೆಕ್ಕದಲ್ಲಿ ಅಲ್ಲ, ಲಕ್ಷ ವರ್ಷಗಳ ಲೆಕ್ಕದಲ್ಲಿ ಎಂದರು. ಒಂದು ಯುಗಕ್ಕೆ ಎಷ್ಟು ವರ್ಷಗಳೆಂದು ಹೇಳಿದರೋ ಅದು ಮರೆತುಹೋಗಿದೆ. ಮೊದಲ ಯುಗ, ಅಂದರೆ 'ಸತೆ'ಯುಗ (Sate dgugue–ಕೃತಯುಗ) ಇಪ್ಪತ್ತೈದು ಲಕ್ಷ ವರ್ಷಗಳ ಕಾಲ ಇತ್ತೆಂದು ಹೇಳಿದ್ದು ನೆನಪಿದೆ. ಇನ್ನಿತರ ಯುಗಗಳು ಯಾವುವೆಂದರೆ : 'ತ್ರೀತ್' (Trita =ತ್ರೇತಾಯುಗ), 'ದ್ವಾಪೋರ್' (dnapor =ದ್ವಾಪರ ಯುಗ) ಮತ್ತು 'ಕಲೆ' ಯುಗ (Kale dguge). ಮೊದಲ ಮೂರು ಯುಗಗಳೂ ಮತ್ತು ಕಲಿ ಯುಗದಲ್ಲಿ ಬಹುಭಾಗವೂ ಆಗಲೇ ಮುಗಿದುಹೋಗಿವೆಯೆಂದು ಅವರು ಹೇಳಿದರು. ನಾಲ್ಕನೆ ಯುಗದ ಕೊನೆಯಲ್ಲಿ ಎಲ್ಲವೂ ನಾಶವಾಗುವುದೆಂದೂ, ಆಗ ಎಲ್ಲವೂ ತನ್ನ ಮೂಲಸ್ಥಿತಿಗೆ ಹಿಂದಿರುಗುವುವೆಂದೂ ತಿಳಿಸಿದರು. ಈ ಪ್ರಪಂಚದ ವಯಸ್ಸೆಷ್ಟು ಎಂದು ನಾನು ಕೇಳಿದಾಗ ಪಂಡಿತರು ಸರಿಯಾದ ವಯಸ್ಸು ಹೇಳಲು ತಲೆ ಕೆರೆದುಕೊಂಡು ಸಾಕಾಗಿ, ಕೊನೆಗೆ ಅದು ಬಹು ಪುರಾತನ ವಾದುದೆಂದು ಹೇಳಿಬಿಟ್ಟರು. ಇಂತಹ ಬ್ರಾಹ್ಮಣ ಪಂಡಿತರನ್ನು 'ನೀವು ಯಾವ ಆಧಾರದ ಮೇಲೆ ಹೀಗೆ ಹೇಳುತ್ತೀರಿ?' ಎಂದು ಕೇಳಿದರೆ, ಅವರು ಏನೇನೊ ಕಟ್ಟುಕಥೆ ಹೇಳಲು ಆರಂಭಿಸಿ, ಕೊನೆಗೆ ಬ್ರಹ್ಮನು ಬರೆದ ವೇದಗಳಲ್ಲಿಯೇ ಹೀಗೆ ಹೇಳಿದೆ ಎಂದು ತಿಳಿಸಿಬಿಡುತ್ತಾರೆ.

ಇದಾದ ಮೇಲೆ ನನ್ನ ಮಾತನ್ನು ಅವರ ದೇವತೆಗಳ ಬಗ್ಗೆ ತಿರುಗಿಸಿದೆ. ಅವರು ಆ ದೇವತೆಗಳ ಬಗ್ಗೆ ಹೇಳಿದ್ದೂ ಸಹ ಕಂಗೆಡಿಸುವಂತಿತ್ತು. ಈ ವಿಷಯವನ್ನು ಚರ್ಚೆ ಮಾಡಿದ ಮೇಲೆ ನಾನು ಅವರನ್ನು 'ಲಿಂಗು ಶರೀರ'ದ (Lengue–cherire–ಲಿಂಗ ಶರೀರ) ಬಗ್ಗೆ ಪ್ರಶ್ನೆ ಕೇಳಿದ್ದು ಜ್ಞಾಪಕ. ಈ ಬಗ್ಗೆ ನಾನು ನನ್ನ ಪಂಡಿತನಿಂದ ಏನು ತಿಳಿದುಕೊಂಡಿದ್ದೆನೊ ಅದಕ್ಕಿಂತ ಹೆಚ್ಚಾಗಿ ಇವರಿಂದ ತಿಳಿದುಕೊಳ್ಳಲಾಗಲಿಲ್ಲ. ಈ ಬಗ್ಗೆ ನನ್ನ ಪಂಡಿತ ಹೇಳಿದ್ದು ಏನೆಂದರೆ : ಮರಗಿಡ, ಮೃಗಪಕ್ಷಿ ಹಾಗೂ ಮಾನವಕುಲ–ಇವು ಹೊಸದಾಗಿ ಸೃಷ್ಟಿಯಾಗುವುದಿಲ್ಲ. ಅವುಗಳು ಆದಿಬೀಜಪ್ರಪಂಚದ ಸೃಷ್ಟಿಯ ಕಾಲದಿಂದ ಇದ್ದೇಇದ್ದು, ಅವಕ್ಕೆ ಯೋಗ್ಯವಾದ ಕ್ಷೇತ್ರದಲ್ಲಿ ಬಿತ್ತಲ್ಪಟ್ಟಾಗ ಬೆಳೆದು ವೃದ್ಧಿಯಾಗುತ್ತವೆ. ಉದಾಹರಣೆಗೆ, ಸೇಬಿನ ಬೀಜ ಲಿಂಗಶರೀರ. ಅದು ಮುಖ್ಯವಾದ ಅಂಗಗಳಲ್ಲಿ ಸಂಪೂರ್ಣ.

ಹಾಗೆಯೇ ಕುದುರೆ, ಆನೆ ಅಥವಾ ಮನುಷ್ಯನ ಪುರುಷಧಾತುಗಳು ಲಿಂಗುಶರೀರಗಳು. ಅವು ಸಂಕ್ಷಿಪ್ತ ಕುದುರೆ, ಆನೆ, ಅಥವಾ ಮನುಷ್ಯ. ಅವಕ್ಕೆ ಬೇಕಾಗಿರುವುದು ಯೋಗ್ಯ ವಾದ ಕ್ಷೇತ್ರ ಹಾಗೂ ಪೋಷಣೆ. ಆಗ ಅವು ತಮ್ಮ ಸರಿಯಾದ ಆಕಾರವನ್ನು ತಳೆಯುತ್ತವೆ.

ಕೊನೆಯಲ್ಲಿ ನಾನು ಒಂದು ಹೊಸ ಮಹಾಪಂಥದ ಬಗ್ಗೆ ಹೇಳಬಯಸುತ್ತೇನೆ. ಈ ಪಂಥ ಈಚೆಗೆ ಹಿಂದೂಸ್ಥಾನದಲ್ಲಿ ಬಹಳ ಗಡಿಬಿಡಿಯನ್ನುಂಟುಮಾಡಿದೆ. ಅದೇ 'ಸೂಫಿ' (Saufy) ಪಂಥ. ಷಾಜಹಾನನ ಮಕ್ಕಳಾದ ದಾರಾ ಮತ್ತು ಸುಲ್ತಾನ್ ಸೂಜ ಇವರ ತಲೆಗೇ ಸಂಚಕಾರ ತಂದ ಪಂಥ ಇದು. ಇಂಡೀಸಿನ ಜೆಂಟೈಲ್ ಪಂಡಿತರು, ಸೂಫಿ ಎಂಬ ಪಂಗಡದವರು ಮತ್ತು ಪರ್ಷಿಯಾದ ತಿಳಿದ ಜನಗಳು—ಇವರೆಲ್ಲರ ಮನಸ್ಸನ್ನು ಸೆಳೆದಿರುವ ಧಾರ್ಮಿಕ ಪಂಥ ಇದು. ಪರ್ಷಿಯಾದ ಕಾವ್ಯ ಪ್ರಪಂಚದಲ್ಲಿ 'ಗುಲ್ಶೆನ್ ರಾಜ್', (Goul-tchen raz: Garden of Mysteries) ಎಂದು ಹೆಸರಾಗಿ ರುವ ತತ್ತ್ವವೇ ಇದು. ದೇವರು ಅಥವಾ ಇಂದೂ ಪಂಡಿತರು ಹೇಳುವ 'ಅಚರ್' (Achar =ಅಚರ) ಎಂದು ಕರೆಯಲ್ಪಡುವ ಪರಮೇಶ್ವರನು ತನ್ನ ಸ್ವಂತದಿಂದಲೇ ಈ ಪ್ರಪಂಚವನ್ನು ಸೃಷ್ಟಿಮಾಡಿದ್ದಾನೆ. ಸೃಷ್ಟಿಯೆಂಬುದು ಜೇಡರ ಹುಳುವು ತನ್ನ ಹೊಟ್ಟೆಯ ತಂತುವಿನಿಂದ ಬಲೆಯನ್ನು ನೇಯ್ದು ಮತ್ತೆ ಅದನ್ನೇ ನುಂಗಿಕೊಳ್ಳುವಂತೆ. ಹೀಗಾಗಿ ಪ್ರಪಂಚದ ಅಂತ್ಯ ಮತ್ತು, ಯಾವುದನ್ನು ಇವರು 'ಮಾಪರ್ಲೆ' ಅಥವಾ 'ಪ್ರಳೀಯ' (maparle or pralea =ಮಹಾ ಪ್ರಳಯ ಅಥವಾ ಪ್ರಳಯ) ಎಂದು ಕರೆಯುತ್ತಾರೊ ಅದು ಪರಮಾತ್ಮ ತನ್ನ ಶರೀರದಿಂದಲೇ ಸೃಷ್ಟಿಸಿದ ತಂತುಗಳನ್ನು ಮತ್ತೆ ತನ್ನೊಳಕ್ಕೆ ಎಳೆದುಕೊಳ್ಳುವುದಷ್ಟೇ ಹೊರತು ಬೇರಲ್ಲ. ಇದಕ್ಕೆ ಕಾರಣ ಹೇಳಿ ಎಂದು ಕೇಳಿದರೆ ನೇರವಾದ ಉತ್ತರಕೊಡದೆ ಉಪಮಾನಗಳ, ಸೂಕ್ಷ್ಮ ಶಬ್ದಗಳ, ಅಥವಾ ಸೂಫಿಗಳನ್ನು ಕೇಳಿದರೆ ಅವರ ಗುಲ್ಶೆನ್ ರಾಜ್‌ದಲ್ಲಿರುವ ಮನೋಹರವಾದ ಕಾವ್ಯಗಳ ಸರಮಾಲೆಯನ್ನೇ ನೇಯ್ದು ಬಿಡುತ್ತಾರೆ.

ಮಿತ್ರರೇ, ಈಗ ನೀವೇನು ಹೇಳುತ್ತೀರಿ, ನಾನೀಗ ತಿಳಿಸಿರುವ ಈ ಜನರ ಆಳತಿ ಗೆಟ್ಟ ಅವಿವೇಕದ ಮಹಾಜಾಲದ ವಿಚಾರ ಕೇಳಿದ ಮೇಲೆ? ಈ ಜನ ಮಕ್ಕಳಂತೆ ನಂಬುವುದನ್ನು ಮತ್ತು ಹೆದರುವುದನ್ನು ತಿಳಿದಮೇಲೆ ; ಕ್ರೂರ ಹಾಗೂ ಕರಾಳ 'ದೇವತೆ' ಯೊಂದರ ಹಿಡಿತದಿಂದ ಸೂರ್ಯನನ್ನು ಬಿಡಿಸಲು ಅವರು ತೋರಿಸುವ ಅಂಧ ಶ್ರದ್ಧೆಯನ್ನು ಕೇಳಿದ ಮೇಲೆ ; ಪ್ರಾರ್ಥನೆಗಳ, ಸ್ನಾನ ಸಂಧ್ಯಾವಂದನೆಗಳ, ನದಿಗೊ ಅಥವಾ ಬ್ರಾಹ್ಮ ಣರ ಕೈಗೊ ನೀಡುವ ದಾನಧರ್ಮಗಳ ವಿಚಾರ ತಿಳಿದ ಮೇಲೆ ; ಸಾಮಾನ್ಯವಾಗಿ ಬದು ಕಿರುವಾಗ ಕಂಡರೆ ಆಗದಿದ್ದ ಗಂಡಂದಿರು ಸತ್ತಾಗ ಅವರ ಚಿತೆಯಲ್ಲಿ ಬಿದ್ದು ಸಾಯುವ ಆ ಮತಿಹೀನ ಹಾಗೂ ಪೈಶಾಚಿಕ ಮನಸ್ಸಿನ ಕೆಚ್ಚೆದೆಯ ಹೆಂಗಸರನ್ನು ನೋಡಿದ ಮೇಲೆ ; ಆ ಫಕೀರರ ಹುಚ್ಚುಚ್ಚಾದ ವರ್ತನೆಗಳನ್ನು ಕಂಡಮೇಲೆ ; ಕೊನೆಯಧಾಗಿ, ಅವರ ಬೇತ್‌ಗಳು ಮತ್ತು ಇತರ ಪುಸ್ತಕಗಳಲ್ಲಿ ಹೇಳುವ ಕಟ್ಟುಕತೆಗಳ ಮತ್ತು ಕೆಲಸಕ್ಕೆ

ಬಾರದ ವಿಷಯಗಳನ್ನೆಲ್ಲಾ ತಿಳಿದ ಮೇಲೆ ಏನು ಹೇಳುವಿರಿ ? 'ಮಾನವನ ಮನಸ್ಸಿನಲ್ಲಿ ಮನೆಮಾಡದ ವಿಪರೀತವೂ ಹಾಸ್ಯಾಸ್ಪದವೂ ಆದ ನಂಬಿಕೆಗಳು ಯಾವುವೂ ಇಲ್ಲ' ಎಂಬ ಸೂಕ್ತಿಯಿಂದ ಈ ಪತ್ರವನ್ನು ಆರಂಭಮಾಡಿದ್ದು ಸರಿ ಎಂದು ನನಗೆ ಅನ್ನಿಸುತ್ತದೆ.

ಈ ಪತ್ರವನ್ನು ಮುಕ್ತಾಯಮಾಡುವಾಗ ಒಂದು ಕೋರಿಕೆ. ಮೆಸ್ಯ ಷಪೇಲ್ಯೆ (Monsieur Chapelle) ಪತ್ರವನ್ನು ಅವರಿಗೇ ಕೊಡಬೇಕೆಂದು ಬೇಡುತ್ತೇನೆ. ಅವರೇ ನನಗೆ ನಿಮ್ಮ ಆತ್ಮೀಯ ಗೆಳೆಯರೂ ಹೆಸರಾಂತವರೂ ಆದ ಮಸ್ಯ ಗಸೇಂಡಿಯವರ ಪರಿಚಯಮಾಡಿಕೊಟ್ಟವರು. ಆ ಪರಿಚಯ ನನಗೆ ತುಂಬಾ ಉಪಕಾರವಾಯಿತು. ಈ ಪರಿಚಯಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ. ನಿಮಗೂ ನಾನು ಚಿರ ರುಣಿಯಾಗಿದ್ದೇನೆ. ನೀವು ನನಗೆ ತೋರಿಸಿದ ಪ್ರೀತಿವಿಶ್ವಾಸಗಳಿಗಷ್ಟೇ ಅಲ್ಲದೆ, ನೀವು ಆಗಾಗ್ಗೆ ಬರೆಯುತ್ತಿದ್ದ ಪತ್ರಗಳಲ್ಲಿ ನನಗೆ ನೀಡಿದ ಅಮೋಘ ಬುದ್ಧಿವಾದಗಳಿಗೂ ನಾನು ಉಪಕೃತನಾಗಿದ್ದೇನೆ. ನಿಮ್ಮ ಬುದ್ಧಿವಾದ ನನ್ನ ಪ್ರವಾಸಕ್ಕೆ ಬಹಳ ಸಹಾಯವಾಯಿತು. ಕುತೂಹಲಕ್ಕಾಗಿ ಪ್ರಪಂಚದ ಕೊನೆಯ ಈ ಭಾಗಕ್ಕೆ ಬಂದ ನನಗೆ ನೀವು ಮಮತೆಯಿಂದ ಕಳುಹಿಸಿಕೊಟ್ಟ ಪುಸ್ತಕಗಳಿಗಾಗಿಯೂ ನಾನು ಕೃತಜ್ಞ. ನೀವು ನನ್ನ ಬಗ್ಗೆ ಈ ರೀತಿಯ ಆಸ್ಥೆ ವಹಿಸಿದಿರಿ. "ದುಡ್ಡುಕೊಡುತ್ತೇನೆ, ಪುಸ್ತಕ ಕಳುಹಿಸಿಕೊಡಿ" ಎಂದು ನಾನು ಯಾರಿಗೆ ಹೇಳಿದ್ದೆನೋ ಅವರು ಸಭ್ಯತೆಗಾಗಿಯಾದರೂ ಪುಸ್ತಕಗಳನ್ನು ಕಳುಹಿಸಿಕೊಡಬೇಕಾಗಿತ್ತು. ಆದರೆ ಅವರು ನನ್ನನ್ನು ತೊರೆದು ನಾನು ಬರೆದ ಪತ್ರಗಳನ್ನು ನೋಡಿ ಅಪಹಾಸ್ಯಮಾಡಿದರು. ನನ್ನನ್ನು ಮತ್ತೆ ಕಾಣಲಾರೆವೆಂದುಕೊಂಡು ಮರತೇಬಿಟ್ಟರು.

ಮೆಸ್ಯ ಡ್ಯ ಮರ್ವೇಯಿಷ್ (Monsieur de Merveilles) ಅವರಿಗೆ ೧೬೬೪ರ ಡಿಸೆಂಬರ್ ೧೪ರಂದು ದಿಲ್ಲಿಯಿಂದ ಬರೆದ ಮೊದಲನೇ ಪತ್ರ :

ಮೆಸ್ಯ, ಔರಂಗಜೇಬನು ತನ್ನ ಕಾಯಿಲೆಯಿಂದ ಗುಣಮುಖನಾದ ಮೇಲೆ ಲಾಹೋರಿಗೂ ಕಾಶ್ಮೀರಕ್ಕೂ ಹೋಗುತ್ತಾನೆಂಬ ವದಂತಿ ಇತ್ತು. ಮುಂಬರಲಿರುವ ಬೇಸಗೆಯ ಬಿಲಿಸಿನಿಂದ ಪಾರಾಗಲು ಮತ್ತು ಹವಾ ಬದಲಾವಣೆ ಮಾಡಿ ಆರೋಗ್ಯವನ್ನು ಉತ್ತಮಪಡಿಸಿಕೊಳ್ಳಲು ಅಲ್ಲಿಗೆ ಹೋಗುತ್ತಾನೆಂದು ಹೇಳುತ್ತಿದ್ದರು. ತಂದೆ ಷಾಜಹಾನನು ಆಗ್ರಾ ಕೋಟೆಯಲ್ಲಿ ಬಂಧಿಯಾಗಿರುವಾಗ ಮಗನು ಅಷ್ಟು ದೂರದ ಪ್ರಯಾಣವನ್ನು ಕೈಗೊಳ್ಳಲಾರನೆಂದು ಕೆಲವು ತಿಳಿವಳಿಕಸ್ತರು ಅಭಿಪ್ರಾಯಪಟ್ಟರು. ಆದರೆ, ಅವನ ಆರೋಗ್ಯ ರಾಜನೀತಿಯನ್ನು ಬದಿಗೊತ್ತಿತು. ರೋಷನಾರ ಬೇಗಮಳಿಗೆ ಅಂತಃಪುರದ ಉಸಿರುಕಟ್ಟುವ ಹವೆ ಸಾಕಾಗಿತ್ತು. ಹೊಸಗಾಳಿಯನ್ನು ಮೂಸಿ ನೋಡಬೇಕೆಂದು ಆಕೆಯ ಮನಸ್ಸು ಕಾತರಿಸುತ್ತಿತ್ತು. ಜೊತೆಗೆ ಅಕ್ಕ ಬೇಗಂ ಸಾಹೇಬಳು,

ತಂದೆ ಷಾಜಹಾನ ಚಕ್ರವರ್ತಿಯಾಗಿದ್ದಾಗ ವೈಭವದ ಸೈನ್ಯದ ಮಧ್ಯೆ ಅಟ್ಟಹಾಸದಿಂದ ಮೆರೆದಂತೆ ತಾನೂ ಮೆರೆಯಬೇಕೆಂದು ಚಡಪಡಿಸುತ್ತಿದ್ದಳು.

ಈ ಎಲ್ಲಾ ಕಾರಣಗಳಿಂದ, ಔರಂಗಜೇಬ ಡಿಸೆಂಬರ್ ೨ನೇ ತಾರೀಕು ಮಧ್ಯಾಹ್ನ ೨ ಗಂಟೆಗೆ ನಗರದಿಂದ ಹೊರಟ. ಆ ದಿನ ಯಾವ ಹೊತ್ತಿಗೆ ಹೊರಟರೆ ಪ್ರಯಾಣ ಸುಗಮವಾಗಿ ಸಾಗುವುದೆಂದು ಜ್ಯೋತಿಷ್ಕರು ಲಗ್ನ ನಿಶ್ಚಯಮಾಡಿ ಹೇಳಿದ್ದರು. ದಿಹ್ಲಿಯಿಂದ ಹೊರಟ ರಾಜ ವಿಹಾರಮಂದಿರವಿದ್ದ ಷಾಲಿಮಾರ್ ಉದ್ಯಾನವನ್ನು ತಲುಪಿ, ಅಲ್ಲಿಆರು ದಿವಸಗಳ ಕಾಲ ತಂಗಿದನು. ಹದಿನೆಂಟು ತಿಂಗಳ ಯಾತ್ರೆಗೆ ಬೇಕಾದ ಸಿದ್ಧತೆ ಮಾಡಿಕೊಳ್ಳಲು ಈ ಆರು ದಿನಗಳ ಅವಕಾಶ ದೊರೆಯಿತು.

ರಾಜನ ಈ ಯಾತ್ರೆಯಲ್ಲಿ ಮೂವತ್ತೈದು ಸಾವಿರ ಅಶ್ವಪಡೆಯೂ ಹತ್ತು ಸಾವಿರ ಕಾಲ್ದಳವೂ ಇದ್ದುವಲ್ಲದೆ, ಜೊತೆಗೆ ಭಾರಿ ಫಿರಂಗಿಗಳ ಮತ್ತು ಹಗುರ ಫಿರಂಗಿಗಳ ಪಡೆಗಳೂ ಇದ್ದುವು. ಹಗುರ ಫಿರಂಗಿ ಪಡೆ ಎಡೆಬಿಡದೆ ರಾಜನ ಹಿಂದುಮುಂದೆ ಇರುತ್ತಿದ್ದರೆ, ಭಾರಿ ಫಿರಂಗಿಗಳ ಪಡೆ ದಾರಿಯನ್ನು ರಕ್ಷಿಸಿಕೊಂಡು ಮುಂಪಡೆಯಾಗಿ ಸಾಗುತ್ತದೆ. ಭಾರಿ ಫಿರಂಗಿಗಳು ಎಪ್ಪತ್ತೈದು ಇದ್ದುವು. ಅವನ್ನು ಬಹುಮಟ್ಟಿಗೆ ಹಿತ್ತಾಳೆಯಿಂದ ಮಾಡಲಾಗಿತ್ತು. ಈ ಫಿರಂಗಿಗಳಲ್ಲಿ ಅನೇಕವು ಎಷ್ಟು ಭಾರಿಯಾಗಿದ್ದುವೆಂದರೆ ಅವುಗಳನ್ನು ಎಳೆಯಲು ಇಪ್ಪತ್ತು ಜೊತೆ ಎತ್ತುಗಳು ಬೇಕಾಗುತ್ತಿತ್ತು. ಮಾರ್ಗವು ಮೇಡಾಗಿದ್ದರೆ ಅಥವಾ ಗುಂಡಿಗೊಟರುಗಳಿಂದ ಕೂಡಿದ್ದರೆ ಎತ್ತುಗಳ ಜೊತೆಗೆ ಆನೆಗಳನ್ನೂ ಉಪಯೋಗಿಸಬೇಕಾಗುತ್ತಿತ್ತು. ಆನೆಗಳು ತಲೆಗಳಿಂದ ಮತ್ತು ಸೊಂಡಿಲುಗಳಿಂದ ತಳ್ಳುವಲ್ಲಿ ಫಿರಂಗಿ ಗಾಡಿಗಳು ಚಲಿಸುತ್ತಿದ್ದುವು. ಹಗುರ ಫಿರಂಗಿಗಳು ಅಥವಾ ರಿಕಾಪು ಫಿರಂಗಿಗಳು ಐವತ್ತು ಅರವತ್ತು ಇದ್ದುವು. ಇವೆಲ್ಲವೂ ಹಿತ್ತಾಳೆಯಿಂದ ಮಾಡಿದವು. ಹಿಂದೆ ಹೇಳಿದಂತೆ ಪ್ರತಿ ಫಿರಂಗಿಯನ್ನು ಲಕ್ಷಣವಾಗಿ ಮಾಡಿ ಬಣ್ಣ ಹಚ್ಚಿ ಕೆಂಪು ಬಾವುಟಗಳಿಂದ ಅಲಂಕಾರಮಾಡಿದ ಗಾಡಿಗಳ ಮೇಲೆ ಹೇರಿದ್ದರು. ಒಂದೊಂದು ಗಾಡಿಗೆ ಎರಡೆರಡು ಕುದುರೆಗಳನ್ನು ಕಟ್ಟಿದ್ದರು. ಗಾಡಿಗಳನ್ನು ಗೋಲಂದಾಜದಾರರು ಹೊಡೆಯುತ್ತಿದ್ದರು. ಎರಡು ಕುದುರೆಗಳನ್ನು ಗಾಡಿಗೆ ಕಟ್ಟಿದ್ದರೆ ಒಂದು ಬದಲಿ ಕುದುರೆಯನ್ನು ಇನ್ನೊಬ್ಬ ಕೈಯಲ್ಲಿ ಹಿಡಿದುಕೊಂಡು ಹೋಗುತ್ತಾನೆ. ಈ ಫಿರಂಗಿಗಳು ಬಹಳ ತ್ವರಿತವಾಗಿ ಸಾಗುತ್ತವೆ. ಏಕೆಂದರೆ, ಇವು ರಾಜನು ಎಲ್ಲಿ ತಂಗುವನೋ ಆ ಸ್ಥಳವನ್ನು ಮುಂಚೆಯೇ ಮುಟ್ಟಿ, ರಾಜನ ಆಗಮನವನ್ನು ಸೂಚಿಸಲು ಫಿರಂಗಿ ಹಾರಿಸಬೇಕು.

ಇಷ್ಟೊಂದು ದೊಡ್ಡ ಪರಿವಾರ ಒಂದು ಸಂದೇಹಕ್ಕೆ ಎಡೆಗೊಟ್ಟಿತು. ಕಾಶ್ಮೀರಕ್ಕೆ ಹೋಗುವ ಬದಲು ಚಕ್ರವರ್ತಿ ಪರ್ಷಿಯಾ, ಹಿಂದೂಸ್ಥಾನ ಮತ್ತು ಉಸ್ಬೆಕ್ ದೇಶಗಳ ಗಡಿಗಳಲ್ಲಿದ್ದ ಕಾಂದಹಾರ್ ನಗರಕ್ಕೆ ಮುತ್ತಿಗೆ ಹಾಕಲು ಹೋಗುತ್ತಿರಬಹುದೇ ಎಂಬುದು ಆ ಸಂದೇಹ. ಕಾಂದಹಾರ್ ಬಹಳ ಸುಂದರವಾದ ಹಾಗೂ ಬಹು ಫಲವತ್ತಾದ

ನಗರ.[1] ಇದನ್ನು ಪಡೆಯಬೇಕೆಂದು ಪರ್ಷಿಯಾ ಮತ್ತು ಇಂಡಿಯಾ ಚಕ್ರವರ್ತಿಗಳು ಬಹಳ ಕಾಲದಿಂದ ಪ್ರಯತ್ನ ನಡೆಸುತ್ತಿದ್ದಾರೆ.

ಈ ಮಹಾಪಡೆಯ ಗುರಿ ಯಾವುದೇ ಇರಲಿ, ಅದಕ್ಕೆ ಸಂಬಂಧಿಸಿದವರೆಲ್ಲ ತಮಗೆ ಎಷ್ಟೇ ತುರ್ತು ಕೆಲಸವಿದ್ದರೂ ದಿಲ್ಲಿ ಬಿಟ್ಟು ಹೊರಡಲೇಬೇಕಾಯಿತು. ನಾನು ನಿಧಾನ ಮಾಡಿದ್ದರೆ ಮುಂದೆ ಮುಂದೆ ಸಾಗುತ್ತಿದ್ದ ಸೈನ್ಯವನ್ನು ಕೂಡಿಕೊಳ್ಳುವುದು ತುಂಬಾ ಕಷ್ಟವಾಗುತ್ತಿತ್ತು. ಅಲ್ಲದೆ, ನನ್ನ ನವಾಬ ಅಥವಾ ಆಗಾ ದಿನೇಷ್ ಮಂಡ್-ಖಾನ್, ನಾನೂ ಬರಬೇಕೆಂದು ಒತ್ತಾಯಪಡಿಸಿದ. ಆತ ಬೆಳಗಿನ ಹೊತ್ತು ವಿದೇಶಾಂಗ ಸಚಿವನಾಗಿಯೂ ಅಶ್ವಾಲಯದ ಭಕ್ಷಿಯಾಗಿಯೂ (Grand Master of the Horse) ಕಾರ್ಯ ನಿರ್ವಹಿಸಿ, ಮಧ್ಯಾಹ್ನ ತಪ್ಪದೆ ತತ್ತ್ವಜಿಜ್ಞಾಸೆಯಲ್ಲಿ ತೊಡಗುತ್ತಾನೆ. ಖಗೋಳ, ಭೂಗೋಳ, ಮತ್ತು ದೇಹಶಾಸ್ತ್ರ–ಇವು ಅವನಿಗೆ ತುಂಬಾ ಪ್ರಿಯವಾದ ವಿಷಯಗಳು. ಗಸ್ಸೇಂಡಿ ಮತ್ತು ಡೆಕಾರ್ಟ್ ಅವರು ಬರೆದ ಗ್ರಂಥಗಳನ್ನು ಬಹಳ ಆಸಕ್ತಿಯಿಂದ ಓದುತ್ತಾನೆ. ನಾನು ಈ ರಾತ್ರಿಯೇ ಹೊರಡುತ್ತೇನೆ. ನನ್ನ ಇಲ್ಲಿಯ ಕೆಲಸಕಾರ್ಯಗಳನ್ನೆಲ್ಲಾ ಮುಗಿಸಿಕೊಂಡಿದ್ದೇನೆ. ಅಲ್ಲದೆ ಮೇಲ್ತರಗತಿಯ ಅಶ್ವದಳದ ಅಧಿಕಾರಿ ಯಾವ ಯಾವ ಸಲಕರಣೆಗಳನ್ನು ಒದಗಿಸಿಕೊಳ್ಳಬೇಕೋ ಅವನ್ನೆಲ್ಲ ಒದಗಿಸಿಕೊಂಡಿದ್ದೇನೆ. ನನಗೆ ಸಂಬಳ ತಿಂಗಳಿಗೆ ೧೫೦ ಕ್ರೌನುಗಳು. ಅದಕ್ಕೆ ತಕ್ಕ ಹಾಗೆ ನಾನು ಎರಡು 'ತುರ್ಕೊಮನ್' ಕುದುರೆಗಳನ್ನು ಇಟ್ಟುಕೊಳ್ಳಬೇಕು. ಇವುಗಳ ಮಾಲೀಸುಮಾಡಲು ಒಬ್ಬ ಆಳು, ಅಡುಗೆಮಾಡಲು ಒಬ್ಬ ಅಡಿಗೆಯವ ಮತ್ತು ಈ ದೇಶದ ಪದ್ಧತಿಗನುಸಾರವಾಗಿ ಕುದುರೆಗಳ ಮುಂದೆ ನೀರಿನ ಪಾತ್ರೆ (flagon) ಹಿಡಿದುಕೊಂಡುಹೋಗುವ ಒಬ್ಬ ಸೇವಕ–ಇಷ್ಟು ಜನ ಸಿಬ್ಬಂದಿಯ ಜೊತೆಗೆ ಗಟ್ಟಿಮುಟ್ಟಾದ ಪರ್ಷಿಯಾದ ಒಂದು ಒಂಟೆಯನ್ನೂ ಅದಕ್ಕೊಬ್ಬ ಸವಾರನನ್ನೂ ಇಟ್ಟುಕೊಳ್ಳಬೇಕು. ಇಷ್ಟಲ್ಲದೆ, ಸುಮಾರಾದ ಒಂದು ಡೇರೆ, ಒಂದು ಜಮಖಾನ, ಬಹಳ ಗಟ್ಟಿಯಾದ ಆದರೆ ಹಗುರವಾದ ನಾಲ್ಕು ಬೆತ್ತಗಳಿಂದ ಮಾಡಿದ ಮಂಚ, ಒಂದು ತಲೆದಿಂಬು, ಒಂದೆರಡು ಹೊದಿಕೆಗಳು —ಇವುಗಳಲ್ಲಿ ಒಂದನ್ನು ಎರಡು ಜೋಡಿ ಮಡಿಸಿದರೆ ಹಾಸಿಗೆಯಾಗಿಯೂ ಉಪಯೋಗಿಸಬಹುದು–'ಸೂಫ್ರಾ', ಅಂದರೆ ಊಟಮಾಡುವಾಗ ಉಪಯೋಗಿಸುವ ಚರ್ಮದ ದುಂಡನೆ ಮೇಜುಬಟ್ಟೆ, ಬಣ್ಣದ ಹಲವು ಚೌಕಗಳು, ಅಡಿಗೆ ಪಾತ್ರೆಪರಟೆಗಳನ್ನು ಹಾಕಿದ ಮೂರು ಸಣ್ಣ ಚೀಲಗಳು, ಈ ಮೂರು ಸಣ್ಣ ಚೀಲಗಳನ್ನು ಹಾಕಿಕೊಳ್ಳುವ ಒಂದು ದೊಡ್ಡ ಚೀಲ, ಈ ದೊಡ್ಡವುಗಳನ್ನೆಲ್ಲ ಇಡಲು ಚರ್ಮದ ಬಾರಿನಿಂದ ಹೆಣೆದ ಬಹು ಗಟ್ಟಿಯಾದ ಎರಡುಮಡಿಕೆ ಚೀಲ–ಇಷ್ಟೆಲ್ಲ ಅತ್ಯಾವಶ್ಯಕವಾದ ಸಲಕರಣೆಗಳನ್ನು ಒದಗಿಸಿಕೊಳ್ಳಬೇಕು. ಈ ಎರಡುಮಡಿಕೆ ಚೀಲದಲ್ಲಿ ಪಾತ್ರೆಪರಟೆಗಳಲ್ಲದೆ ಭತ್ಯದ ಸಾಮಾನು

---

[1] ಅಫ್‌ಘಾನಿಸ್ಥಾನಕ್ಕೆ ಸೇರಿದ ನಗರ.

ಗಳನ್ನೂ ಯಜಮಾನನ ಮತ್ತು ಆಳುಕಾಳುಗಳ ಬಟ್ಟೆಬರೆಗಳನ್ನೂ ಹಾಕಿಕೊಳ್ಳಬೇಕು. ಇಷ್ಟಲ್ಲದೆ, ನಾನು ಐದಾರು ದಿನಗಳಿಗೆ ಸಾಕಾಗುವಷ್ಟು ಒಳ್ಳೆ ಅಕ್ಕಿ, ವಾಸನೆಗಾಗಿ ಸೋಂಪುಕಾಳು (anise) ಬೆರೆಸಿದ ಸಿಹಿ ಬಿಸ್ಕತ್ತು, ನಿಂಬೆಹಣ್ಣು ಮತ್ತು ಬೆಲ್ಲ–ಇವುಗಳ ದಾಸ್ತಾನು ಇಟ್ಟುಕೊಂಡೆ. 'ದಹಿ', ಅಂದರೆ ಮೊಸರನ್ನು, ತೂಗುಹಾಕಲು ಬೇಕಾದ ಬಟ್ಟೆಯ ಚೀಲವನ್ನು ಹಾಗೂ ಅದನ್ನು ತಗುಲಿಸಲು ಕಬ್ಬಿಣದ ಸಣ್ಣ ಕೊಕ್ಕೆಯನ್ನು ಮರೆಯದೆ ತೆಗೆದುಕೊಂಡೆ. ಈ ದೇಶದ ಹವೆಗೆ ನಿಂಬೆಹಣ್ಣಿನ ಶರಬತ್ತು ಮತ್ತು ಮೊಸರುಗಳಷ್ಟು ತಂಪಾದ ಪಾನೀಯ ಬೇರೊಂದಿಲ್ಲ. ಇವೆಲ್ಲವನ್ನೂ ನಾನಾಗಲೇ ಹೇಳಿದಂತೆ ಒಂದು ದೊಡ್ಡ ಚೀಲದಲ್ಲಿ ಕಟ್ಟಿಹಾಕಿದೆ. ಇಷ್ಟೆಲ್ಲ ಸಾಮಾನುಗಳು ಇರುವ ಚೀಲವನ್ನು ಒಬ್ಬಿಬ್ಬರು ಎತ್ತಲು ಆಗಲಿಲ್ಲ. ಮೂರು ನಾಲ್ಕು ಜನ ಸೇರಿ ಮಂಡಿ ಯೂರಿ ಕುಳಿತ ಒಂಟೆಯ ಬೆನ್ನಿನ ಮೇಲೆ ಎತ್ತಿ ಇಟ್ಟರು.

ಇಂಥ ಪ್ರವಾಸ ಕಾಲದಲ್ಲಿ ನಾನು ತಿಳಿಸಿರುವ ಸಾಮಾನುಗಳಲ್ಲಿ ಒಂದಿಲ್ಲದಿದ್ದರೂ ತೊಂದರೆ ಪಡಬೇಕಾಗುತ್ತದೆ. ನಮ್ಮ ದೇಶದಲ್ಲಿ ಸಿಗಬಹುದಾದ ವಸತಿ ಸೌಕರ್ಯ ಗಳನ್ನು ಇಲ್ಲಿ ನಿರೀಕ್ಷಿಸಬಾರದು. ಒಂದು ಡೇರೆಯೇ ನಮ್ಮ ಸತ್ರ. ಅರಬರು ಮತ್ತು ಟಾರ್ಟರಿ ಜನರಂತೆ ಅಲ್ಲಲ್ಲಿ ಬೀಡುಬಿಟ್ಟು ದಾರಿ ಸಾಗಿಸಬೇಕು. ಜನರನ್ನು ಕೊಳ್ಳೆ ಹೊಡೆದು ಅದರಿಂದ ಹೊಟ್ಟೆ ತುಂಬಿಸಿಕೊಳ್ಳುವಂತೆಯೂ ಇಲ್ಲ. ಹಿಂದೂಸ್ಥಾನದಲ್ಲಿ ಪ್ರತಿಯೊಂದು ಎಕರೆ ಭೂಮಿಯೂ ರಾಜನಿಗೆ ಸೇರಿದೆಯಾದ ಕಾರಣ, ಒಬ್ಬ ರೈತನನ್ನು ಕೊಳ್ಳೆಹೊಡೆದರೆ ರಾಜನ ಆಡಳಿತಕ್ಕೆ ಸೇರಿದ ಪ್ರದೇಶದಲ್ಲಿ ದರೋಡೆಮಾಡಿದಂತೆ ಪರಿಗಣಿ ಸಲ್ಪಡುವುದು. ಬಹು ದೀರ್ಘವಾದ ಈ ಪ್ರಯಾಣದಿಂದ ಒದಗುವ ಒಂದೇ ಒಂದು ಸಮಾ ಧಾನವೆಂದರೆ, ನಾವು ಉತ್ತರದಿಕ್ಕಿಗೆ ಹೋಗುತ್ತಿರುವುದು. ಚಳಿ ಆಗಲೇ ಆರಂಭವಾಗಿದೆ ; ಬೀಳಬೇಕಾದ ಮಳೆಗಳು ಆಗಲೇ ಬಿದ್ದಿವೆ. ಇಂಡೀಸಿನಲ್ಲಿ ಪ್ರಯಾಣಮಾಡಲು ಇದೇ ಸಕಾಲ. ಮಳೆಗಳು ನಿಂತಿವೆ ; ಬಿಸಿಲು ಮತ್ತು ಧೂಳು ಹೆಚ್ಚಾಗಿಲ್ಲ. ದಿಲ್ಲಿಯ 'ಬಜಾರು ರೊಟ್ಟಿ' (bazaar-ki-roti) ತಿನ್ನುವ ತಾಪತ್ರಯ ತಪ್ಪಿತಲ್ಲ ಎಂದು ನನಗೆ ಸಂತೋಷ. ಬಜಾರು ರೊಟ್ಟಿಯನ್ನು ಸರಿಯಾಗಿ ಸುಟ್ಟಿರುವುದಿಲ್ಲ. ಮಣ್ಣು ಧೂಳು ಬೇರೆ ಸೇರಿರುತ್ತವೆ. ನನ್ನ ಪ್ರಯಾಣ ಕಾಲದಲ್ಲಿ ದಿಲ್ಲಿಗಿಂತ ಉತ್ತಮವಾದ ನೀರು ಸಿಕ್ಕಬಹುದೆಂದು ನನ್ನ ಆಸೆ. ದಿಲ್ಲಿಯ ನೀರಿನಲ್ಲಿ ಸೇರಿರುವ ಕೊಳೆ ಕಸ ಕಡ್ಡಿಗಳು ಎಷ್ಟೆಂದು ನಾನು ವರ್ಣಿಸಲಾರೆ. ಆ ನೀರಿನ ಬಳಿಗೆ ಮನುಷ್ಯರು ಮತ್ತು ಪ್ರಾಣಿಗಳೆಲ್ಲ ಹೋಗಬಹುದು. ಹೀಗಾಗಿ ಅದರಲ್ಲಿ ಸೇರುವ ಮೈಲಿಗೆ ಹೇಳತೀರದು. ಈ ನೀರು ಕುಡಿದು ವಾಸಿಮಾಡಲಾರದಂಥ ಜ್ವರಗಳು ಬರುತ್ತವೆ. ಕಾಲಿನಲ್ಲಿ ಹುಳುಗಳು (ಗಿನೀ ಹುಳುಗಳು) ಸೇರಿಕೊಂಡು ಊದಿಕೊಳ್ಳುತ್ತವೆ. ಇದರಿಂದ ಬಹಳ ಅಪಾಯವುಂಟು. ಈ ಹುಳುವಿನಿಂದ ಪೀಡಿತರಾದ ಜನರು ದಿಲ್ಲಿ ಬಿಟ್ಟರೆ ಅವರ ಕಾಲಿನಿಂದ ಹುಳು ಬಿದ್ದು ಹೋಗುತ್ತದೆ. ಕೆಲವು ವೇಳೆ ಒಂದು ವರ್ಷದ ತನಕ ಅದು ದೇಹದಲ್ಲಿ ಇರುವುದುಂಟು.

ಪಿಟೀಲು ಹುರಿಯನ್ನು ಮುಪ್ಪುರಿಗೊಳಿಸಿದರೆ ಎಷ್ಟು ಗಾತ್ರವಾಗಿರುವುದೊ ಅಷ್ಟು ಗಾತ್ರಕ್ಕೆ ಇರುತ್ತದೆ ಈ ಹುಳು.; ಅದು ಶರೀರದ ನರವೊ ಎಂಬಂತೆ ಅಂಟಿಕೊಂಡಿರುತ್ತದೆ. ಈ ಹುಳುವನ್ನು ತೆಗೆದುಹಾಕುವಾಗ ಎಚ್ಚರಿಕೆ ವಹಿಸಿ ಅದನ್ನು ಪೂರ್ತಾ ಹೊರಗೆ ಎಳೆದು ಬಿಡಬೇಕು ; ತುಂಡಾಗದಂತೆ ನೋಡಿಕೊಳ್ಳಬೇಕು. ದಿನವೂ ಸ್ವಲ್ಪ ಸ್ವಲ ಎಳೆದು, ಒಂದು ಸೂಜಿಯ ಗಾತ್ರದ ಕಡ್ಡಿಗೆ ಅದನ್ನು ಸುತ್ತಿಕೊಳ್ಳುತ್ತಾಹೋಗುವುದು ಸರಿಯಾದ ವಿಧಾನ.

ನನಗೆ ಈ ತಾಪತ್ರಯಗಳಾವುವೂ ಇಲ್ಲವೆಂಬ ಸಮಾಧಾನ. ನನಗೆ ದಿನ ಬೆಳಗ್ಗೆ ಒಂದು ಹೊಸ ರೊಟ್ಟಿ ಮತ್ತು ಗಂಗಾನದಿಯ ಒಂದು 'ಸೌರಾಯಿ' (sourai) ನೀರನ್ನು ನವಾಬ ತನ್ನ ಗುಡಾರದಿಂದ ಕಳುಹಿಸಿಕೊಡುವ ವ್ಯವಸ್ಥೆ ಮಾಡಿದ್ದಾನೆ. ಈ ಪ್ರಯಾಣದಲ್ಲಿ ಉಪಯೋಗಿಸಲು ಗಂಗಾನದಿಯ ನೀರನ್ನು ಹಲವಾರು ಒಂಟೆಗಳ ಮೇಲೆ ನನ್ನ ನವಾಬ ಹೇರಿಸಿದ್ದಾನೆ. 'ಸೌರಾಯಿ' (sourai) ಎಂದರೆ ಸೇವಕನೊಬ್ಬ ತನ್ನ ಯಜಮಾನನ ಕುದುರೆಯ ಮುಂದೆ ಹಿಡಿದುಕೊಂಡುಹೋಗುವ ಕೆಂಪು ಬಟ್ಟೆ ಹೊದಿಕೆಯ ಮತ್ತು ತವರದಿಂದ ಮಾಡಿದ ಪಾತ್ರೆ (tin flagon). ಸಾಮಾನ್ಯವಾಗಿ ಈ ಪಾತ್ರೆ ಕಾಲು ಗ್ಯಾಲನ್ ನೀರು ಹಿಡಿಯುತ್ತದೆ. ಆದರೆ ನನ್ನ ಪಾತ್ರೆ ಅರ್ಧ ಗ್ಯಾಲನ್ ಹಿಡಿಯುತ್ತದೆ. ಈ ತಗಡಿನ ಪಾತ್ರೆಯ ಮೇಲಿನ ಬಟ್ಟೆ ತೇವವಾಗಿದ್ದರೆ ಒಳಗಿನ ನೀರು ತಣ್ಣಗಿರುತ್ತದೆ. ಈ ಪಾತ್ರೆಯನ್ನು ಹಿಡಿದು ಹೋಗುವ ಸೇವಕ ಅದನ್ನು ಗಾಳಿಗೆ ಸದಾ ಒಡ್ಡಬೇಕು. ಅದನ್ನು ನೆಲದ ಮೇಲೆ ಇಡದೆ, ಮೂರು ತಿಕಡಿ ಕಡ್ಡಿಗಳ ಪೀಠದ ಮೇಲೆ ಇಡಬೇಕು. ಹೊರಗೆ ಪ್ರಯಾಣ ಮಾಡುವಾಗ ಮಾತ್ರ ಈ ತವರದ ಪಾತ್ರೆಯನ್ನು ಉಪಯೋಗಿಸುತ್ತಾರೆ. ಮನೆಯಲ್ಲಿರುವಾಗ ನೀರನ್ನು ಒಂದು ತರಹ ಮಣ್ಣಿನಿಂದ ಮಾಡಿದ ಹೂಜಿಗಳಲ್ಲಿ ಹಾಕಿ, ಅದರ ಮೇಲೆ ಒದ್ದೆ ಬಟ್ಟೆ ಹೊದಿಸುತ್ತಾರೆ. ಗಾಳಿ ಆಡುತ್ತಿದ್ದರೆ ಹೂಜಿಗಳ ನೀರು ತವರದ ಪಾತ್ರೆಗಳಿಗಿಂತ ತಣ್ಣಗಿರುತ್ತದೆ. ತವರದ ಪಾತ್ರೆಯಲ್ಲಿ ಹಾಕುವ ನೀರಿಗೆ ಮೂರು ನಾಲ್ಕು ಹಿಡಿಯಷ್ಟು ಪೆಟ್ಲುಪ್ಪು ಹಾಕಿ ಚೆನ್ನಾಗಿ ಅಲ್ಲಾಡಿಸಬೇಕು. ಹೀಗೆ ಮಾಡಿದರೆ ನೀರು ತುಂಬಾ ತಣ್ಣಗಿರುತ್ತದೆ. ನೀರಿನ ರುಚಿಯೂ ಕೆಡುವುದಿಲ್ಲ. ಮೊದಲು ಮೊದಲು ಕೊಂಚ ಹೊಟ್ಟೆ ಕೆಟ್ಟರೂ ತರುವಾಯ ಸರಿಹೋಗುತ್ತದೆ.

ಬೇರೆ ನೂರೆಂಟು ವಿಷಯಗಳ ಬಗ್ಗೆ ನಾನು ಆಲೋಚನೆ ಮಾಡಬೇಕಾಗಿರುವಾಗ ನಾನೇಕೆ ಈ ಶಾಸ್ತ್ರೀಯ ವಿಷಯಗಳ ಬಗ್ಗೆ ಉಪನ್ಯಾಸ ಮಾಡಬೇಕು ? ದಿನವೂ ಉರಿಯುವ ಬಿಸಲಿನಲ್ಲಿ ಬೇಯುವುದು ; ದಿನವೂ ಸಾಮಾನುಗಳನ್ನು ಕಟ್ಟುವುದು ; ಹೇರುವುದು ; ಮತ್ತೆ ಬಿಚ್ಚುವುದು ; ಸೇವಕರಿಗೆ ಸದಾ ಅದೂ ಇದು ತಿಳುವಳಿಕೆ ಕೊಡುತ್ತಿರುವುದು ; ಡೇರೆ ಹಾಕುವುದು ಮತ್ತು ಗೂಟ ಹೊಡೆಯುವುದು ; ಹಗಲು ಪ್ರಯಾಣ ಮತ್ತು ರಾತ್ರಿ ಪ್ರಯಾಣ ಮಾಡುವುದು ; ಒಟ್ಟಿನಲ್ಲಿ ಇನ್ನು ಮುಂದಿನ ಹದಿನೆಂಟು

ತಿಂಗಳುಗಳ ಕಾಲ ಅತಂತ್ರದ ಹಾಗೂ ಅಲೆದಾಡುವ ಬಾಳು ಸಾಗಿಸುವುದು-ಇವನ್ನೆಲ್ಲಾ ನಾನು ತಲೆಗೆ ಹಚ್ಚಿಕೊಳ್ಳಬೇಕಾಗಿದೆ. ಹೋಗಿಬರುವೆ, ಗೆಳೆಯ. ಕೊಟ್ಟ ವಚನದಂತೆ ನಾನು ನಡೆಯದೆ ತಪ್ಪುವುದಿಲ್ಲ. ಆಗಾಗ್ಗೆ ನನ್ನ ಸಾಹಸಗಳನ್ನು ನಿನಗೆ ತಿಳಿಸುತ್ತಾ ಬರುತ್ತೇನೆ. ಇಂಥ ಸಂದರ್ಭಗಳಲ್ಲಿ ಸೈನ್ಯವು ಹಾಯಾಗಿ ದಾರಿ ಸಾಗಿಸುತ್ತದೆ. ಶತ್ರುವಿನ ಹೆದರಿಕೆ ಬೆದರಿಕೆಗಳಿಲ್ಲದೆ ಅದು ಹಿಂದೂಸ್ಥಾನದ ಚಕ್ರವರ್ತಿಗಳ ಸಕಲ ವೈಭವದಿಂದ ಕೂಡಿ ಮುನ್ನಡೆಯುತ್ತದೆ. ಆದ್ದರಿಂದ ದಾರಿಯಲ್ಲಿ ಕಾಣುವ ಕುತೂಹಲವನ್ನುಂಟು ಮಾಡುವ ವಿಷಯಗಳನ್ನು ಸಂಗ್ರಹಿಸಿ, ಲಾಹೋರು ತಲುಪಿದಾಗ ಬರೆದು ಕಳುಹಿಸುತ್ತೇನೆ.

೧೬೬೫ರ ಫೆಬ್ರುವರಿ ೨೫ರಂದು ಲಾಹೋರಿನಿಂದ ಬರೆದ ಎರಡನೇ ಪತ್ರ :

ಇದು ನಿಜವಾಗಿಯೂ ನಿಧಾನದ ಹಾಗೂ ಗಂಭೀರವಾದ ಪ್ರಯಾಣ. ಇದನ್ನು ಇಲ್ಲಿ ನಾವು "ಆ ಲ ಮೊಗೊಲೆ" (a la Mogole) ಎಂದು ಕರೆಯುತ್ತೇವೆ. ದಿಲ್ಲಿಯಿಂದ ಲಾಹೋರು ಪಟ್ಟಣ ನೂರೈವತ್ತು ಹರಿದಾರಿಗಳಷ್ಟು, ಅಥವಾ ಹದಿನೈದು ದಿನಗಳ ಪ್ರಯಾಣದಷ್ಟು, ದೂರದಲ್ಲಿದೆ. ಆದರೆ ನಾವು ಪಯಣ ಆರಂಭಿಸಿ ಸುಮಾರು ಎರಡು ತಿಂಗಳುಗಳಾಗುತ್ತ ಬಂದುವು. ರಾಜನು ಹೆದ್ದಾರಿಯಲ್ಲಿ ಕೊಂಚ ದೂರ ಸಾಗಿ ತನ್ನ ಬಹುತೇಕ ಸೇನೆಯೊಡನೆ ಬೇಟೆ ಹಾಗು ಜಮುನಾನದಿಯ ನೀರು ಎಲ್ಲಿ ಸುಲಭವಾಗಿ ದೊರೆಯುತ್ತವೆಯೋ ಆ ಮಾರ್ಗ ಹಿಡಿದಿದ್ದಾನೆ. ನಾವು ದಾರಿಯಲ್ಲಿ ಕುದುರೆ ಎತ್ತರ ಬೆಳೆದ ಹುಲ್ಲುಗಾವಲಿನಲ್ಲಿ ನಾನಾ ತರಹ ಬೇಟೆಗಳನ್ನಾಡುತ್ತಾ ದಾರಿ ಸಾಗಿಸಿ ಈಗ ಒಳ್ಳೆಯ ಪಟ್ಟಣವೊಂದರಲ್ಲಿ ವಿಶ್ರಾಂತಿ ಪಡೆಯುತ್ತಿದ್ದೇವೆ. ದಿಲ್ಲಿ ಬಿಟ್ಟಾಗಿನಿಂದ ನನ್ನ ಮನಸ್ಸಿನಲ್ಲಿ ಮೂಡಿಬಂದ ಹಲವಾರು ವಿಷಯಗಳನ್ನು ಕಾಗದದಲ್ಲಿ ಬರೆಯಲು ಈಗ ಅವಕಾಶ ಕೂಡಿಬಂದಿದೆ. ಸ್ವಲ್ಪ ಕಾಲದಲ್ಲಿಯೇ ನಾನು ನಿಮ್ಮನ್ನು ಪ್ರಪಂಚದಲ್ಲಿಯೇ ಬಹು ಸುಂದರವಾದ ಕಾಶ್ಮೀರಕ್ಕೆ ಕೊಂಡೊಯ್ಯಲಿದ್ದೇನೆ.

ರಾಜನು ಸೈನ್ಯದಾಡಂಬರದಲ್ಲಿ ಪ್ರಯಾಣಮಾಡುವಾಗಲೆಲ್ಲ ಅವನಿಗೆ ಎರಡು ಖಾಸಗಿ ಬಿಡಾರಗಳಿರುತ್ತವೆ, ಅಂದರೆ, ಎರಡು ಬೇರೆ ಬೇರೆ ಡೇರೆಗಳ ತಂಡಗಳಿರುತ್ತವೆ. ಇವುಗಳಲ್ಲಿ ಒಂದು ಡೇರೆ ತಂಡ ಯಾವಾಗಲೂ ಇನ್ನೊಂದಕ್ಕೆ ಮುಂಚೆಯೇ ಸಾಗುತ್ತಾ ಹೋಗುತ್ತದೆ. ಹೀಗಾಗಿ ರಾಜನು ದಿನದ ಪ್ರಯಾಣವನ್ನು ಮುಗಿಸಿ ಸಂಜೆ ಒಂದು ಕಡೆ ತಂಗಬೇಕಾದಾಗ ಅಲ್ಲಿ ಅವನ ಬಿಡಾರ ಸಿದ್ಧವಾಗಿರುತ್ತದೆ. ಈ ಕಾರಣವೇ ಈ ಬೇರೆ ಬೇರೆ ಡೇರಾ ತಂಡಗಳಿಗೆ 'ಪೈಷ್-ಕಾನೆ' (peiche-kane) ಅಥವಾ ಮುಂದಾಗಿ ಹೋಗುವ ಮನೆಗಳೆಂದು ಹೆಸರು. ಈ ಎರಡು ಪೈಷ್-ಕಾನೆಗಳು ಹೆಚ್ಚು ಕಡಿಮೆ ಒಂದೇ ಸಮನಾಗಿರುತ್ತವೆ. ಒಂದೊಂದನ್ನು ಸಾಗಿಸಲು ಅರುವತ್ತು ಆನೆಗಳೂ, ಇನ್ನೂರು ಒಂಟೆಗಳೂ, ಒಂದು ನೂರು ಹೇಸರಗತ್ತೆಗಳೂ ಮತ್ತು ಒಂದು ನೂರು ಹೊರೆಯಾಳು

ಗಳೂ ಬೇಕು. ಬಹಳ ಭಾರಿಯಾದ ಸಾಮಾನುಗಳನ್ನು ಆನೆಯ ಮೇಲೆ ಹೇರುತ್ತಾರೆ. ಉದಾಹರಣೆಗೆ, ದೊಡ್ಡ ದೊಡ್ಡ ಡೇರೆಗಳು, ಅವುಗಳನ್ನು ನಿಲ್ಲಿಸುವ ಭಾರವಾದ ಕಂಬ ಗಳು—ಇವನ್ನು ಆನೆಗಳು ಹೊರುತ್ತವೆ. ಕಂಬಗಳು ಬಹಳ ಭಾರವಾಗಿರುವ ಕಾರಣ ಅವು ಗಳನ್ನು ಸುಲಭವಾಗಿ ಎತ್ತಲು ಹಾಗೂ ಇಳಿಸಲು ಆಗುವುದಿಲ್ಲ. ಆದ್ದರಿಂದ ಅವುಗಳನ್ನು ಮೂರು ತುಂಡುಮಾಡಿರುತ್ತಾರೆ. ಸಣ್ಣಪುಟ್ಟ ಡೇರೆಗಳನ್ನು ಒಂಟೆಗಳ ಮೇಲೂ, ಗಂಟು-ಮೂಟೆಗಳು ಮತ್ತು ಅಡಿಗೆ ಮನೆಯ ಪಾತ್ರೆ–ಪರಟೆಗಳನ್ನು ಹೇಸರಗತ್ತೆಗಳ ಮೇಲೂ ಹೇರುತ್ತಾರೆ. ಹೊರೆಯಾಳುಗಳ ಮೇಲೆ ಹಗುರವಾದ ಮತ್ತು ಹೆಚ್ಚು ಬೆಲೆಬಾಳುವ ಸಾಮಾನುಗಳನ್ನು ಹೊರಿಸುತ್ತಾರೆ. ಇಂಥವು ಯಾವುವೆಂದರೆ, ರಾಜನ ಊಟಕ್ಕೆ ಉಪ ಯೋಗಿಸುವಪಿಂಗಾಣಿ ಸಾಮಾನುಗಳು, ಬಣ್ಣದ ಹಾಗೂ ಗಿಲೀಟಿನ ಮಂಚಗಳು, ಮತ್ತು 'ಕರ್ಗಾ' (kargah)ಗಳು. ಈ ಕರ್ಗಾಗಳ ವಿಚಾರ ಆಮೇಲೆ ಹೇಳುತ್ತೇನೆ.

ಪೈಷ್–ಕಾನೆಗಳಲ್ಲಿ ಒಂದು ಮುಂದಾಗಿ ಹೋಗಿ, ರಾಜನ ಬಿಡಾರದ ಸ್ಥಳವನ್ನು ಮುಟ್ಟಿದ ಕೂಡಲೆ ಬಿಡದಿಯ ಮಹಾಭಕ್ಷಿಯು (Grand Quarter Master), ಅಂದರೆ ಮೀರ್ ಮನ್ಜಿಲನು, ರಾಜನ ಡೇರೆಗಳನ್ನು ಹೊಡೆಯಲು ಯೋಗ್ಯವಾದ ಸ್ಥಳ ವನ್ನು ಆರಿಸುತ್ತಾನೆ. ಹೀಗೆ ಮಾಡುವಾಗ ಎಲ್ಲ ವಿಭಾಗಗಳನ್ನು ಪರಸ್ಪರ ಹೊಂದಿಸು ವುದಕ್ಕೆ ಸೂಕ್ತ ಗಮನಕೊಡುತ್ತಾನೆ. ಆಮೇಲೆ ಒಂದೊಂದು ಪಕ್ಕ ಮುನ್ನೂರು ದಾಪು ಗಳಿರುವ ಚಚ್ಚೌಕವಾದ ಜಾಗನನ್ನು ಗುರುತುಮಾಡುತ್ತಾನೆ. ನೂರು ಮುನ್ನಾಳುಗಳು ಕೂಡಲೇ ಗಿಡ ಗೆಂಟೆಗಳನ್ನೆಲ್ಲಾ ಕಿತ್ತು ಚಚ್ಚೌಕವಾದ ಜಗಲಿಗಳನ್ನು ಕಟ್ಟುತ್ತಾರೆ. ಈ ಜಗಲಿಗಳ ಮೇಲೆ ಡೇರೆಗಳನ್ನು ಹಾಕುತ್ತಾರೆ. ಈ ವಿಶಾಲವಾದ ಚೌಕದ ಸುತ್ತ ಕನಟೆ (kanate) ಅಂದರೆ ನೆರಿಕೆಗಳನ್ನು ನಿಲ್ಲಿಸುತ್ತಾರೆ. ಈ ನೆರಿಕೆಗಳು ಎಳು ಎಂಟು ಅಡಿ ಎತ್ತರ ಇರುತ್ತವೆ. ಪ್ರತಿ ಹತ್ತು ಹತ್ತು ದಾಪುಗಳಿಗೆ ಕನಟೆಯ ಆ ಕಡೆ ಒಂದು ಈ ಕಡೆ ಒಂದು ಹಾಗೆ ಎರಡು ಕೋಲುಗಳನ್ನುಒಂದಕ್ಕೊಂದು ಆಸರೆಯಾಗುವಂತೆ ನೆಲಕ್ಕೆ ಹೂಳಿ, ಅವುಗಳನ್ನು ನಿಲ್ಲಿಸುತ್ತಾರೆ. ಕನಟೆಗಳನ್ನು ಬಹಳ ಬಾಳಿಕೆಬರುವ ಬಟ್ಟೆಯಲ್ಲಿ ಮಾಡಿ, ಒಳಭಾಗಕ್ಕೆ ಮುದ್ರಿಸಿದ ಇಂಡಿಯನ್ ಕ್ಯಾಲಿಕೋ ಹೊಲೆದಿರುತ್ತಾರೆ. ಒಂದೊಂದೂ ದೊಡ್ಡ ಹೂಕುಂಡದಂತೆ ಕಾಣುತ್ತದೆ. ರಾಜನು ಪ್ರವೇಶಿಸಬೇಕಾದ ಬಾಗಿಲು ಈ ಚಚ್ಚೌಕದ ಒಂದು ಕಡೆ ಮಧ್ಯದಲ್ಲಿ ಇರುತ್ತದೆ. ಈ ಬಾಗಿಲಿನ ಅಕ್ಕಪಕ್ಕಗಳನ್ನು ನವುರಾದ ಬಟ್ಟೆಯಿಂದ ಅಲಂಕಾರಮಾಡಿರುತ್ತಾರೆ.

ಮೊಟ್ಟಮೊದಲಿನ ಮತ್ತು ಬಹಳ ದೊಡ್ಡದಾದ ಡೇರೆಯೇ ರಾಜನ ಖಾಸಾ ಬಿಡಾ ರಕ್ಕೆ ಸೇರಿದ್ದು. ಇದಕ್ಕೆ 'ಅಮ್–ಕಾಸ್' ಎಂದು ಹೆಸರು. ಇಲ್ಲಿಯೇ ರಾಜನೂ, ಹಿರಿಯರ ಆಸ್ಥಾನಿಕರೂ 'ಮೊಕಾಂ' (mokam) ಮಾಡುವುದು. ಇಲ್ಲಿಯೇ ಅವರು ಪ್ರತಿ ದಿನ ಬೆಳಗ್ಗೆ ಒಂಬತ್ತು ಗಂಟೆಗೆ ಸಭೆ ಸೇರಿ ರಾಜ್ಯದ ವಿಚಾರಗಳನ್ನು ಪರ್ಯಾ ಲೋಚಿಸಿ ನ್ಯಾಯ ತೀರ್ಮಾನಮಾಡುವುದು. ಹಿಂದೂಸ್ಥಾನದ ರಾಜರುಗಳು

ಅರಮನೆಯಲ್ಲಿರಲಿ ಅಥವಾ ಸೇನೆಯೊಡನೆ ಪಾಳೆಯದಲ್ಲಿರಲಿ, ಇಪ್ಪತ್ತು ನಾಲ್ಕು ಗಂಟೆಗಳೊಳಗೆ ಎರಡು ಸಲ ಈ ಸಭೆ ನಡೆಸುವುದನ್ನು ಬಿಡುವುದಿಲ್ಲ. ಇದು ಕಟ್ಟಲೆಯೂ ಹೌದು, ಕರ್ತವ್ಯವೂ ಹೌದು. ಈ ಪದ್ಧತಿಯನ್ನು ಮೀರಿ ನಡೆಯುವುದು ಅಪರೂಪ.

ಎರಡನೆ ಡೇರೆ ಸ್ವಲ್ಪ ಚಿಕ್ಕದು. ಇದನ್ನು ಚಚ್ಚೌಕವಾದ ಪ್ರದೇಶದಲ್ಲಿಯೇ ಒಂದು ಕಡೆ ಹಾಕುತ್ತಾರೆ. ಇದಕ್ಕೆ 'ಗೊಸ್ಲೆ–ಕಾನೇ' (Gosle-kane) ಅಥವಾ ಸ್ನಾನಮಾಡುವ ಜಾಗ ಎಂದು ಹೆಸರು. ಇಲ್ಲಿ ಹಿರಿಯ ಕಿರಿಯರೆಲ್ಲರೂ ಪ್ರತಿ ದಿನ ಸಂಜೆ ಸೇರಿ, ರಾಜನಿಗೆ ದಿಲ್ಲಿಯಲ್ಲಿರುವಾಗ ಯಾವ ಮರ್ಯಾದೆ ಸಲ್ಲಿಸುತ್ತಾರೊ ಅದೇ ರೀತಿಯ ಮರ್ಯಾದೆ ಸಲ್ಲಿಸುತ್ತಾರೆ. ಈ ಸಂಜೆಯ ಸಭೆ ಅಮೀರರುಗಳಿಗೆ ಬಹಳ ತಾಪತ್ರಯವನ್ನುಂಟುಮಾಡುತ್ತದೆ. ಆದರೆ ರಾತ್ರಿ ಹೊತ್ತು ಆ ದೃಶ್ಯ ನೋಡುವುದಕ್ಕೆ ಬಹು ಸೊಗಸಾಗಿ ಕಾಣುತ್ತದೆ. ಪ್ರತಿಯೊಬ್ಬ ಅಮೀರನ ಜೊತೆಯಲ್ಲಿ ಗೊಸ್ಲೆ ಕಾನೆಗೆ ಹೋಗುವಾಗ ಮತ್ತು ಅಲ್ಲಿಂದ ಬರುವಾಗ ಬೆಳಗುವ ಪಂಜಿನ ದೀವಟಿಕೆಗಳ ಮೆರವಣಿಗೆಯನ್ನು ನೋಡಲು ಬಲು ಚಂದ. ಈ ಪಂಜುಗಳನ್ನು ಅಥವಾ 'ಮಷಾಲು' ಗಳನ್ನು ಫ್ರಾನ್ಸಿನಲ್ಲಿ ಮಾಡುವಂತೆ ಮೇಣದಿಂದ ಮಾಡಿರುವುದಿಲ್ಲ. ಆದರೂ ಅವು ಬಹಳ ಹೊತ್ತು .ಉರಿಯುತ್ತವೆ. ಆ ಮಷಾಲುಗಳೆಂದರೆ ಕೋಲಿನ ತುದಿಗೆ ಹಿಡಿಯಿಂದ ಸಿಕ್ಕಿಸಿದ ಕಬ್ಬಿಣದ ತಟ್ಟೆ ಮತ್ತು ಅದರ ಮೇಲೆ ಎಣ್ಣೆಯಲ್ಲಿ ಅದ್ದಿದ ಹಳೆಯ ಬಟ್ಟೆಗಳ ಸಿಂಬಿಗಳಷ್ಟೆ. ಇವನ್ನು ಹಿಡಿದ 'ಮಷಾಲ್ಚಿ' (masalchi)ಗಳು ಆಗಾಗ್ಗೆ ಅವರು ಹಿಡಿದುಕೊಂಡಿರುವ ಉದ್ದವಾದ ಹಾಗೂ ಕಿರಿಯ ಕಂಠವುಳ್ಳ ಕಬ್ಬಿಣದ ಅಥವಾ ಹಿತ್ತಾಳೆಯ ಎಣ್ಣೆ ಪಾತ್ರೆಗಳಿಂದ ಎಣ್ಣೆ ಹೊಯ್ಯುತ್ತಾರೆ ; ಆಗಾಗ್ಗೆ ಎಣ್ಣೆ ಸಿಂಬಿಗಳನ್ನು ಬದಲಾಯಿಸುತ್ತಾ ಇರುತ್ತಾರೆ.

ಬಿಡಾರದ ಚೌಕದ ಒಳಭಾಗದಲ್ಲಿ ಮೂರನೆಯ ಡೇರೆ ಇರುತ್ತದೆ. ಇದು ನಾನು ಈಗಾಗಲೆ ತಿಳಿಸಿರುವ ಡೇರೆಗಳಿಗಿಂತ ಚಿಕ್ಕದು. ಇದಕ್ಕೆ 'ಕಲುಯೆತ್–ಕಾನೆ' (Kaluet-kane) ಅಂದರೆ ಆಪ್ತಾಲೋಚನಾ ಸ್ಥಳ ಎಂದು ಹೆಸರು. ಈ ಡೇರೆಯಲ್ಲಿ ಪ್ರಮುಖ ಸಚಿವರ ಹೊರತು ಇತರರಿಗೆ ಪ್ರವೇಶವಿಲ್ಲ. ರಾಜ್ಯಕ್ಕೆ ಸಂಬಂಧಿಸಿದ ವಿಷಯಗಳ ತೀರ್ಮಾನ ಆಗುವುದು ಇಲ್ಲಿಯೇ.

ಕಲುಯೆತ್–ಕಾನೆಯನ್ನು ದಾಟಿ ಹಿಂದೆ ಹೋದರೆ ರಾಜನ ಸ್ವಂತ ಬಿಡಾರದ ಡೇರೆಗಳು ಸಿಕ್ಕುತ್ತವೆ. ಈ ಡೇರೆಗಳ ಸುತ್ತಲೂ ಆಳುದ್ದದ ಕನಟೆಗಳ ನೆರಿಕೆಯನ್ನು ನಿಲ್ಲಿಸಿರುತ್ತಾರೆ. ಈ ಕನಟೆಗಳನ್ನು ಮಸುಲಿಪಟ್ಟದ ಚೀಟಿಬಟ್ಟೆಯಿಂದಲೂ ರೇಷ್ಮೆ ಬಟ್ಟೆಯಿಂದಲೂ ಅಲಂಕರಿಸಿರುತ್ತಾರೆ.

ರಾಜನ ಡೇರೆಗಳಿಗೆ ಹೊಂದಿಕೊಂಡಂತೆ ಬೇಗಮರುಗಳ (ರಾಣಿಯರ) ಡೇರೆಗಳಿರುತ್ತವೆ. ಅಲ್ಲದೆ, ರಾಜಕುಮಾರಿಯರ, ರಾಜ ಮನೆತನದ ಪ್ರಮುಖ ಸ್ತ್ರೀಯರ ಹಾಗೂ ಜನಾನಾದ ಮುಖ್ಯ ಅನ್ವೆಯರ ಡೇರೆಗಳಿರುವುದೂ ಇಲ್ಲಿಯೇ. ಈ ಡೇರೆಗಳ ಸುತ್ತಲೂ

ಬೆಲೆಬಾಳುವ ಬಟ್ಟೆಯಿಂದ ಮಾಡಿದ ಕನಟೆಗಳನ್ನು ಹಾಕಿರುತ್ತಾರೆ. ಅಲ್ಲಲ್ಲಿ ಸಣ್ಣ ಪುಟ್ಟ ಸೇವಕಿಯರ ಮತ್ತು ಜನಾನಾಕ್ಕೆ ಸೇರಿದ ಇತರ ಊಳಿಗದ ಸ್ತ್ರೀಯರ ಡೇರೆಗಳಿವೆ. ಈ ಡೇರೆಗಳನ್ನು ಅವರವರ ಅಂತಸ್ತಿಗೆ ತಕ್ಕಂತೆ ಹಾಕಿರುತ್ತಾರೆ.

'ಅಮ್-ಕಾಸ್' ಮತ್ತು ಐದಾರು ಮುಖ್ಯ ಡೇರೆಗಳನ್ನು ಉಳಿದ ಡೇರೆಗಳಿಗಿಂತ ಎತ್ತರವಾದ ಜಗಲಿಯ ಮೇಲೆ ಹಾಕಿರುತ್ತಾರೆ. ಹೀಗೆ ಎತ್ತರದಲ್ಲಿ ಡೇರೆ ಹಾಕುವ ಉದ್ದೇಶ ಗಾಳಿ ಚೆನ್ನಾಗಿ ಬರಲಿ ಎಂಬುದಾಗಿ ಮತ್ತು ಅದು ಎದ್ದು ಕಾಣುವುದಕ್ಕಾಗಿ. ಡೇರೆಗಳ ಹೊರಭಾಗಕ್ಕೆ ಬಹಳ ಬಾಳಿಕೆ ಬರುವಂತಹ ಒರಟಾದ ಕೆಂಪು ಬಟ್ಟೆಯನ್ನು ಹಾಕಿ, ಅಗಲಗಲವಾದ ವಿಧವಿಧ ವರ್ಣದ ಪಟ್ಟಿಗಳಿಂದ ಚಂದಗೊಳಿಸಿರುತ್ತಾರೆ. ಮೂರು ನಾಲ್ಕು ಅಂಗುಲ ಮಂದದ ಹತ್ತಿಯ ಚಾಪೆಗಳನ್ನು ನೆಲಕ್ಕೆಲ್ಲಾ ಹಾಸಿರುತ್ತಾರೆ. ಇವುಗಳ ಮೇಲೆ ಬಹು ಸೊಗಸಾದ ಜಮಖಾನವೊಂದನ್ನು ಹಾಕಿ, ಅದರ ಮೇಲೆ ಒರಗಿಕೊಳ್ಳಲು ಕಿಂಕಾಪು ಬಟ್ಟೆಯಿಂದ ಮಾಡಿದ ಚಚ್ಚೌಕವಾದ ದಿಂಬುಗಳನ್ನು ಜೋಡಿಸಿರುತ್ತಾರೆ.

ರಾಜನೂ ಅವನ ಆಸ್ಥಾನಿಕರೂ ಸೇರುವ ಮೇಲೆ ಹೇಳಿದ ಎರಡು ಡೇರೆಗಳಲ್ಲಿ ಒಂದು ಕಡೆ ಎತ್ತರಿಸಿದ ಜಾಗವಿರುತ್ತದೆ. ಇದನ್ನು ಬಹು ಸೊಗಸಾಗಿ ಅಲಂಕರಿಸಿ ಅದರ ಮೇಲೆ ಮಕಮಲ್ಲಿನ ಅಥವಾ ಹೂರೇಷ್ಮೆಯ ವಿತಾನವನ್ನು (canopy) ಕಿರುಕಂಬಗಳ ಸಹಾಯದಿಂದ ನೆಟ್ಟಿರುತ್ತಾರೆ. ಈ ವಿತಾನದ ಅಡಿಯಲ್ಲಿ ಕುಳಿತು ರಾಜ ತನ್ನ ದರ್ಬಾರು ನಡೆಸುತ್ತಾನೆ. ಬೇರೆ ಡೇರೆಗಳಲ್ಲಿಯೂ ಇದೇ ತರಹ ವಿತಾನಗಳಿರುತ್ತವೆ. ಅವುಗಳಲ್ಲಿಯೂ 'ಕರ್ಗಾ' (kargah) ಎಂದು ಕರೆಯಲ್ಪಡುವ ಒಳಕೋಣೆಗಳಿರುತ್ತವೆ. ಈ ಒಳ ಕೋಣೆಗೆ ಹೋಗಲು ಒಂದು ಕಿರುಬಾಗಿಲು ಇರುತ್ತದೆ. ಇದಕ್ಕೆ ಬೆಳ್ಳಿಯ ಚಿಲಕ ಹಾಕ ಲಾಗಿದೆ. ಈ ಕೋಣೆಗಳನ್ನು ಮಾಡಿರುವುದು ಬಣ್ಣ ಬಣ್ಣದ ಚಿತ್ತಾರಗಳುಳ್ಳ ಮರದ ಹಲಗೆಗಳಿಂದ. ಬೇಕೆಂದಾಗ ಅವುಗಳನ್ನು ಮಡಿಸಿ ಮತ್ತೆ ಜೋಡಿಸಬಹುದು.

ಆ ಭಾರಿ ಬಿಡಾರಸ್ಥಳದ ಚೌಕದೊಳಗೆ ಏನೇನು ಇದೆಯೊ ಅದನ್ನೆಲ್ಲಾ ಹೇಳಿದ್ದೇನೆ ಎಂದು ನನ್ನ ಭಾವನೆ. ಇನ್ನು ಅದರ ಹೊರಗಡೆ ಏನಿದೆ ಎಂದು ಹೇಳುತ್ತೇನೆ. ಮೊಟ್ಟ ಮೊದಲಿಗೆ ಹೊರಗಡೆ ನೀವು ಕಾಣುವುದು ರಾಜದ್ವಾರ ಮತ್ತು ಅಕ್ಕಪಕ್ಕ ಹಾಕಿರುವ ಎರಡು ಸುಂದರವಾದ ಡೇರೆಗಳು. ಇಲ್ಲಿ ಜೀನು ಬಿಗಿದು ಬಹು ಸೊಗಸಾಗಿ ಸಜ್ಜುಗೊಳಿ ಸಿದ ಒಳ್ಳೆಯ ಜಾತಿಯ ಹಲವು ಅಶ್ವಗಳನ್ನು ನೋಡಬಹುದು. ಇವು ಸದಾ ಸಿದ್ಧವಾಗಿ ನಿಂತಿರುತ್ತವೆ. ಈ ರೀತಿಯಲ್ಲಿ ಸಿದ್ಧಗೊಳಿಸಿದ್ದರೂ, ಅವುಗಳನ್ನು ಹಾಗೆ ಜೀನುಹಾಕಿ ಸೃಂಗರಿಸಿರುವುದು ಬಹುಮಟ್ಟಿಗೆ ಮರ್ಯಾದೆ ಹಾಗೂ ಪ್ರದರ್ಶನಕ್ಕೆ ಮಾತ್ರ.

ಇದೇ ರಾಜದ್ವಾರದ ಅಕ್ಕಪಕ್ಕದಲ್ಲಿ ಐವತ್ತು ಅರವತ್ತು ಕಿರು ಫಿರಂಗಿಗಳನ್ನು ಏರಿಸಿ ಇಡಲಾಗಿದೆ ರಾಜನು ಮಹಾದ್ವಾರವನ್ನು ಪ್ರವೇಶಿಸುವಾಗ ಈ ಫಿರಂಗಿಗಳನ್ನು ಹಾರಿಸು ತ್ತಾರೆ. ಆಗ ಅವನು ಬಂದದ್ದು ಎಲ್ಲರಿಗೂ ಗೊತ್ತಾಗುತ್ತದೆ. ರಾಜದ್ವಾರದ ಮುಂಭಾಗ ದಲ್ಲಿ ಆದಷ್ಟು ಜಾಗವನ್ನು ಬಯಲಾಗಿ ಇಟ್ಟಿರುತ್ತಾರೆ. ಬಯಲಿನ ಒಂದು ಕಡೆ ದೊಡ್ಡ

ಡೇರೆ ಹಾಕಿರುತ್ತಾರೆ. ಇದಕ್ಕೆ 'ನಗಾರ್ ಕಾನ್' (ನಗಾರಿ ಕಾನೆ) ಎಂದು ಹೆಸರು. ಏಕೆಂದರೆ, ಇಲ್ಲಿ ನಗಾರಿ ನೌಪತ್ತುಗಳನ್ನೂ ಕೊಂಬು ಕಹಳೆಗಳನ್ನೂ ತಾಳವಾದ್ಯಗಳನ್ನೂ ಇಟ್ಟಿರುತ್ತಾರೆ. ಈ ಡೇರೆಗೆ ಹೊಂದಿಕೊಂಡಂತೆ ಇನ್ನೊಂದು ದೊಡ್ಡ ಡೇರೆ ಇದೆ. ಇದಕ್ಕೆ 'ಚೌಕಿ-ಕಾನೆ' (chauky kane) ಎಂದು ಹೆಸರು. ಇಲ್ಲಿ ಅಮೀರರು ವಾರಕ್ಕೊಂದು ದಿನ ಸರದಿಯ ಮೇಲೆ ಕಾವಲು ಕಾಯಬೇಕು. ಬಹು ಮಂದಿ ಈ ಡೇರೆಯ ಪಕ್ಕದಲ್ಲಿ ತಮ್ಮದೇ ಒಂದು ಡೇರೆ ಹಾಕಿಕೊಳ್ಳುತ್ತಾರೆ. ಆ ಡೇರೆಯಲ್ಲಿ ತಮಗೆ ಬೇಕಾದ ಸೌಕರ್ಯಗಳನ್ನೆಲ್ಲಾ ಮಾಡಿಕೊಂಡಿರುತ್ತಾರೆ.

ಮಹಾ ಚೌಕದ ಉಳಿದ ಮೂರು ಕಡೆಗಳಿಗೆ ಅನತಿ ದೂರದಲ್ಲಿ ಅಧಿಕಾರಿಗಳ ಮತ್ತು ಇತರರ ಡೇರೆಗಳಿವೆ. ಅವುಗಳನ್ನು ಅವರವರ ಅಂತಸ್ತಿಗೆ ತಕ್ಕಂತೆ ಹಾಕಿರುತ್ತಾರೆ. ಪ್ರತಿಯೊಂದು ಡೇರೆಗೂ ಒಂದೊಂದು ಹೆಸರುಂಟು. ಆದರೆ ಆ ಹೆಸರುಗಳನ್ನು ಉಚ್ಚರಿಸುವುದು ತುಂಬಾ ಕಷ್ಟ. ಈ ದೇಶದ ಭಾಷೆಯನ್ನು ಬೋಧಿಸುವುದು ನನ್ನ ಉದ್ದೇಶವಲ್ಲವಾದ್ದರಿಂದ ಆ ಹೆಸರುಗಳನ್ನು ಹೇಳುವ ಗೋಜಿಗೆಹೋಗದೆ ಆ ಡೇರೆಗಳಲ್ಲಿ ಒಂದೊಂದು ತರಹ ಸಾಮಾನು ಸರಂಜಾಮುಗಳನ್ನು ಇಟ್ಟಿರುವರೆಂದು ಹೇಳಿದರೆ ಸಾಕು. ಒಂದರಲ್ಲಿ ರಾಜನ ಯುದ್ಧ ಶಸ್ತ್ರಗಳೂ, ಇನ್ನೊಂದರಲ್ಲಿ ಅಮೂಲ್ಯವಾದ ಕುದುರೆ ಜೀನು, ಕಡಿವಾಣ, ಲಗಾಮು ಮುಂತಾದುವುಗಳೂ, ಮತ್ತೊಂದರಲ್ಲಿ ರಾಜನು ಬಹುಮಾನವಾಗಿ ಕೊಡುವ ಕಿಂಕಾಪಿನ ಉಡುಪುಗಳೂ ಇವೆ. ಹಣ್ಣುಹಂಪಲ, ಸಿಹಿತಿಂಡಿತಿನಿಸುಗಳು, ಗಂಗಾಜಲ, ಅದನ್ನು ತಣ್ಣಗೆ ಮಾಡುವ ಸೆಟ್ಲುಪ್ಪು, ಮತ್ತು 'ಬೆಟ್ಲೀ' (bettle = ವೀಳಯದೆಲೆ) ಇವನ್ನು ನಾಲ್ಕು ಡೇರೆಗಳಲ್ಲಿ ಇಟ್ಟಿದ್ದಾರೆ. 'ಬೆಟ್ಲಿ' ಎಂದರೆ ಅದು ಇದು ವಸ್ತುಗಳನ್ನು ಹಾಕಿ ಸಿದ್ಧಮಾಡಿದ ಮೇಲೆ ತುರ್ಕಿಯಲ್ಲಿ ಕಾಫಿ ಕೊಟ್ಟಂತೆ ರಾಜಮರ್ಯಾದೆಯಾಗಿ ಕೊಡುವ ಒಂದು ತರಹ ಎಲೆ. ಇದನ್ನು ಅಗಿದಾಗ ಬಾಯಿ ಸುವಾಸನೆಯಾಗುತ್ತದೆ ಮತ್ತು ತುಟಿ ಕೆಂಪಾಗುತ್ತದೆ.[1] ಅಡುಗೆ ಪದಾರ್ಥಗಳನ್ನು ಮತ್ತು ಅಡುಗೆ ಸಾಮಾನು ಸರಂಜಾಮುಗಳನ್ನು ಇಟ್ಟ ಹದಿನೈದು ಹದಿನಾರು ಡೇರೆಗಳಿವೆ. ಇವೆಲ್ಲವುಗಳ ಮಧ್ಯೆ ಅಸಂಖ್ಯಾತ ಅಧಿಕಾರಿಗಳ ಹಾಗೂ ಖೋಜಾಗಳ ಡೇರೆಗಳಿವೆ. ಕೊನೆಯದಾಗಿ, ಕೈಯಲ್ಲಿ ಹಿಡಿದು ನಡೆಸಿಕೊಂಡುಹೋಗುವ ಹಿಡಿಕುದುರೆಗಳನ್ನು ಕಟ್ಟಲು ಆರೇಳು ಡೇರೆಗಳಿವೆ. ಉತ್ಕೃಷ್ಟವಾದ ಆನೆಗಳು, ಬೇಟೆಗಾಗಿ ಉಪಯೋಗಿಸುವ ಪ್ರಾಣಿಗಳು, ಬೇಟೆಯಾಡುವ ಪಕ್ಷಿಗಳು, ನಾಯಿಗಳು, ಚಿಗರಿಗಳನ್ನು ಹಿಡಿಯುವ ಚಿರತೆಗಳು, ನೀಲಗಾಯಿಗಳು, ಕೇವಲ ಪ್ರದರ್ಶನಕ್ಕಾಗಿ ತಂದ ಸಿಂಹಗಳು ಮತ್ತು ಘೇಂಡಾಮೃಗಗಳು, ಸಿಂಹದ ಮೇಲೆ

---

[1] ತಾಂಬೂಲ ಹಾಕುವ ಪದ್ಧತಿಯನ್ನು ಬೆರ್‌ನ್ಯೇ ಪ್ರವಾಸಿಗನಂತೆಯೇ ಭಾರತಕ್ಕೆ ಹಿಂದೆ ಬಂದ ಇತರ ಸಂಚಾರಿಗಳೂ ವರ್ಣಿಸಿದ್ದಾರೆ.

ಬೀಳುವ ಬಂಗಾಳ ಕೋಣಗಳು, ರಾಜನ ಮುಂದೆ ತಿವಿದಾಡುವ ಪಳಗಿಸಿದ ಜಿಂಕೆಗಳು- ಇವುಗಳಿಗೆಲ್ಲಾ ಹಲವಾರು ಡೇರೆಗಳಿವೆ.

ಸಾರ್ವಭೌಮನ ಬಿಡಾರವು ದೊಡ್ಡ ಚೌಕವನ್ನಷ್ಟೇ ಅಲ್ಲದೆ, ಚೌಕದ ಸುತ್ತ ಮುತ್ತ ಇರುವ ಮೇಲೆ ಹೇಳಿದ ಡೇರೆಗಳಿಗೂ ವಿಸ್ತರಿಸುತ್ತದೆ ಎಂದು ಹೇಳಬಹುದು. ಈ ಬಿಡಾರ ಯಾವಾಗಲೂ ಸೇನೆಯ ಮಧ್ಯದಲ್ಲಿ ಅಥವಾ ಭೂಮಿಯ ಸ್ಥಿತಿಗನುಸಾರ ವಾಗಿ ಹೆಚ್ಚು ಕಮ್ಮಿ ಮಧ್ಯದಲ್ಲಿರುತ್ತದೆ. ಹೀಗೆ ನಿರ್ಮಿಸಿದ ಇಡೀ ಪಾಳೆಯವನ್ನು ಎತ್ತರದ ಒಂದು ಸ್ಥಳದಲ್ಲಿ ನಿಂತು ನೋಡಿದಾಗ ಬಹು ಅಂದವಾಗಿ ಕಾಣುತ್ತದೆ.

ನಾನು ಈಗಾಗಲೆ ಹೇಳಿದಂತೆ ಮಿರ್ ಮನ್ಜಿಲನ (Grand Quarter Master) ಮೊದಲ ಕೆಲಸವೆಂದರೆ ರಾಜನ ಡೇರೆಗಳಿಗೆ ಸರಿಯಾದ ಜಾಗ ಹುಡುಕುವುದು, ಬೇರೆಲ್ಲ ಡೇರೆಗಳಿಗಿಂತ ಅಮ್‌ಕಾಸ್ ಡೇರೆ ಎತ್ತರವಾದ ಸ್ಥಳದಲ್ಲಿ ಇರಬೇಕು. ಏಕೆಂದರೆ. ಅದು ಇರುವ ಸ್ಥಳವನ್ನು ನೋಡಿಕೊಂಡೇ ಇಡೀ ಸೇನೆಯ ಬೀಡಿನ ರಚನಾಕ್ರಮವನ್ನು ನಿರ್ಧರಿಸುವುದು. ಇದಾದ ಮೇಲೆ ಆತ ಬಿಡಾರದ ಬೀದಿಗಳು ಎಲ್ಲೆಲ್ಲಿ ಇರಬೇಕೆಂದು ನಿಷ್ಕರ್ಷೆಮಾಡುತ್ತಾನೆ. ಈ ಬಜಾರುಗಳಿಂದಲೇ ಸೈನ್ಯದ ಸಿಬ್ಬಂದಿಗಳಿಗೆ ಆಹಾರ ಮತ್ತು ವಸ್ತುಗಳು ಸರಬರಾಜು ಆಗುವುದು. ಮುಖ್ಯ ಬಜಾರು ಅಗಲವಾದ ಬೀದಿಯಂತೆ ಇರುತ್ತದೆ. ಇದು ಇಡೀ ಸೇನಾಪಾಳೆಯದ ಉದ್ದಕ್ಕೂ, ಒಮ್ಮೆ ಅಮ್-ಕಾಸಿನ ಎಡಕ್ಕೂ ಇನ್ನೊಮ್ಮೆ ಬಲಕ್ಕೂ, ಸಾಮಾನ್ಯವಾಗಿ ಕೊನೆಯ ದಿನ ಯಾವ ದಿಕ್ಕಿಗೆ ಪ್ರಯಾಣ ಮಾಡಬೇಕೊ ಆ ದಿಕ್ಕಿನ ಕಡೆಗೂ ಇರುತ್ತದೆ. ಉಳಿದ ಬಜಾರುಗಳು ಇಷ್ಟು ಅಗಲವೂ ಇರುವುದಿಲ್ಲ, ಉದ್ದವೂ ಇರುವುದಿಲ್ಲ. ಅವು ಮುಖ್ಯ ಬಜಾರಿಗೆ ಅಲ್ಲಲ್ಲಿ ಅಡ್ಡಡ್ಡವಾಗಿ ಇರುತ್ತವೆ. ಈ ಎಲ್ಲ ಬೀದಿಗಳನ್ನು ಬಹು ಎತ್ತರವಾಗಿ ನೆಟ್ಟ ಗಳುಗಳಿಂದ ಗುರುತಿಸ ಬಹುದು. ಒಂದು ಗಳುವಿನಿಂದ ಇನ್ನೊಂದು ಗಳುವಿಗೆ ಅಂತರ ಮುನ್ನೂರು ದಾಪುಗಳು. ಇವುಗಳ ತುದಿಯಲ್ಲಿ ಕೆಂಪು ಬಾವುಟವೂ, ತುತ್ತತುದಿಯಲ್ಲಿ ಟಿಬೆಟಿನ ಚಮರಿ ಮೃಗದ ಚೌರಿಗಳೂ ಇರುತ್ತವೆ. ಇವು ಒಂದೊಂದೂ ಕೂದಲಿನ ಟೋಪಿಯಂತೆ ಕಾಣುತ್ತವೆ.

ಬಜಾರುಗಳನ್ನು ಹಾಕುವ ಸ್ಥಳಗಳನ್ನು ಗುರುತಿಸಿದ ಮೇಲೆ ಮಿರ್ ಮನ್ಜಿಲನು ಅಮೀರರುಗಳು ಇರಬೇಕಾದ ಸ್ಥಳವನ್ನು ಗೊತ್ತುಮಾಡುತ್ತಾನೆ. ಅಮೀರರುಗಳು ಮೊದಲೇ ನಿಷ್ಕರ್ಷೆಯಾದ ಕ್ರಮದಲ್ಲಿ ರಾಜನಿಗೆ ಎಷ್ಟು ದೂರದಲ್ಲಿ ಇರಬೇಕೊ ಅಷ್ಟು ದೂರದಲ್ಲಿ ಇರುತ್ತಾರೆ. ಯಾರೂ ಈ ಕ್ರಮವನ್ನು ಬದಲಾಯಿಸುವುದಿಲ್ಲ. ಮಹಾ ಚೌಕವನ್ನು ಕುರಿತು ಹೇಳಿದ ಮಾತು ಬಹುಮಟ್ಟಿಗೆ ಅಮೀರರು ಮತ್ತು ರಾಜರುಗಳ ಬಿಡಾರಗಳಿಗೂ ಅನ್ವಯಿಸುತ್ತದೆ. ಸಾಮಾನ್ಯವಾಗಿ ಇವರಿಗೂ ಎರಡು ಪೈಷ್- ಕಾನೆಗಳಿರುತ್ತವೆ ; ಇವರ ಮತ್ತು ಇವರ ಪತ್ನಿಯರ ಡೇರೆಗಳಿಗೂ ಚಚ್ಚೌಕದ ಕನಟ ಗಳಿರುತ್ತವೆ. ಈ ಚೌಕದ ಅಕ್ಕಪಕ್ಕದಲ್ಲಿ ಅವರವರ ಅಧಿಕಾರಿಗಳ ಮತ್ತು ಸೇನೆಯ ಡೇರೆಗಳಿರುತ್ತವೆ. ಬೀದಿಯೋಪಾದಿಯಲ್ಲಿರುವ ಒಂದು ಬಜಾರು ಇರುತ್ತದೆ. ಈ

ಬಜಾರಿನಲ್ಲಿ ಸೇನೆಯ ಹಿಂಬಾಲಕರು ಸಣ್ಣ ಸಣ್ಣ ಡೇರೆಗಳನ್ನು ಹಾಕಿಕೊಂಡು ಹುಲ್ಲು, ಮೇವು, ಅಕ್ಕಿ, ಬೆಣ್ಣೆ, ತುಪ್ಪ ಮುಂತಾದ ಆವಶ್ಯಕ ವಸ್ತುಗಳನ್ನು ಮಾರುತ್ತಾರೆ. ಈ ಕಾರಣ ಅಮೀರರು ಯಾವಾಗಲೂ ರಾಜಾಬಜಾರಿಗೆ ಹೋಗಬೇಕಾಗಿಲ್ಲ. ರಾಜಾ ಬಜಾರಿನಲ್ಲಿ ಹೆಚ್ಚು ಕಡಿಮೆ ದಿಹ್ಲಿಯಲ್ಲಿ ಸಿಕ್ಕುವುದೆಲ್ಲಾ ಸಿಕ್ಕುತ್ತವೆ. ಬಜಾರುಗಳ ಕೊನೆಯಲ್ಲಿ ಎತ್ತರದ ಗಳುಗಳನ್ನು ನೆಟ್ಟು, ವಿಶಿಷ್ಟವಾದ ಬಾವುಟಗಳನ್ನು ಹಾರಿಸಿರು ತ್ತಾರೆ. ಅದರಿಂದ ಒಂದು ಬಜಾರನ್ನು ಇನ್ನೊಂದರಿಂದ ಗುರುತು ಹಚ್ಚುವುದಕ್ಕೆ ಅನುಕೂಲ.

ಪ್ರಮುಖ ಅಮೀರರೂ ಹಿರಿಯ ರಾಜರೂ ತಮ್ಮ ತಮ್ಮ ಡೇರೆಗಳನ್ನು ಎತ್ತರವಾಗಿ ಕಾಣುವಂತೆ ಹಾಕಿಸುತ್ತಾರೆ. ಆದರೆ ಹಾಗೆ ಹಾಕಿಸಿದ ಡೇರೆಗಳು ರಾಜನ ಕಣ್ಣಿಗೆ ಬೀಳಬಾರದು. ಹಾಗೇನಾದರೂ ಬಿದ್ದರೆ ಅವುಗಳನ್ನು ನೆಲಸಮ ಮಾಡಬೇಕೆಂದು ರಾಜ ಆಜ್ಞೆ ಮಾಡಿಬಿಡುತ್ತಾನೆ. ಅಂತಹ ಒಂದು ಪ್ರಸಂಗ ನಮ್ಮ ಯಾತ್ರೆಯ ಕಾಲದಲ್ಲಿ ನಡೆಯಿತು. ಇದೇ ಕಾರಣಕ್ಕಾಗಿಯೇ ಡೇರೆಯ ಹೊರಭಾಗ ಸಂಪೂರ್ಣ ಕೆಂಪಗಿರ ಬಾರದು. ಏಕೆಂದರೆ, ರಾಜನ ಡೇರೆಯಲ್ಲದೆ ಬೇರೆಯವರ ಡೇರೆಗಳು ಕೆಂಪುಬಣ್ಣಕ್ಕೆ ಇರಕೂಡದು. ಅಲ್ಲದೆ, ರಾಜನಿಗೆ ಸೂಕ್ತ ಮರ್ಯಾದೆ ತೋರಿಸುವುದಕ್ಕಾಗಿ ಡೇರೆಗಳ ಮುಖವೂ ಆಮ್–ಕಾಸಿನ ಕಡೆಗೆ ಇರಬೇಕು.

ಚಕ್ರವರ್ತಿಯ ಬಿಡಾರಗಳಿಗೂ ಅಮೀರರು ಮತ್ತು ಬಜಾರುಗಳು ಇರುವ ಸ್ಥಳಕ್ಕೂ ಮಧ್ಯೆ ಇರುವ ಜಾಗದಲ್ಲಿ ಮನ್ಸಬ್‌ದಾರರುಗಳ, ವಿವಿಧ ವ್ಯಾಪಾರಿಗಳ, ಇತರ ಸೈನ್ಯೇತರ ಅಧಿಕಾರಿಗಳ ಮತ್ತು ಅನೇಕ ಕಾರಣಗಳಿಂದಾಗಿ ಸೈನ್ಯವನ್ನು ಹಿಂಬಾಲಿಸುವ ವರ ಡೇರೆಗಳು ಇರುತ್ತವೆ. ಕೊಟ್ಟಕೊನೆಗೆ ಭಾರಿ ಫಿರಂಗಿ ಮತ್ತು ಹಗುರ ಫಿರಂಗಿ ಸಿಬ್ಬಂದಿಯವರ ಡೇರೆಗಳಿರುತ್ತವೆ.

ಈ ರೀತಿ ಬಿಡಾರದಲ್ಲಿ ಹೊಡೆದ ಡೇರೆಗಳು ಅಸಂಖ್ಯಾತವಾಗಿರುತ್ತವೆ. ಇವೆಲ್ಲ ಬಹಳ ಹೆಚ್ಚಿನ ಜಾಗ ಆಕ್ರಮಿಸಿಕೊಂಡಿರುತ್ತವೆಯಾದರೂ, ಜನ ಉತ್ಪ್ರೇಕ್ಷಿಸಿ ಹೇಳು ವಷ್ಟು ದೊಡ್ಡವಾಗಿರುವುದಿಲ್ಲ. ಒಳ್ಳೆಯ ಮತ್ತು ಅನುಕೂಲವಾದ ಜಾಗದಲ್ಲಿ ಬೀಡು ಬಿಟ್ಟಾಗ, ಇಡೀ ಬೀಡು ಅಲ್ಲಲ್ಲಿ ಕಾಣುವ ಖಾಲಿ ಜಾಗಗಳನ್ನು ಲೆಕ್ಕಕ್ಕೆ ತೆಗೆದುಕೊಂಡರು ಸಹ, ಚಕ್ರವರ್ತಿಯ ಪಾಳೆಯವು ಎರಡೂವರೆ ಹರಿದಾರಿಗಳ ಸುತ್ತಳತೆಗಿಂತ ಹೆಚ್ಚಿರು ವುದಿಲ್ಲ. ಇಲ್ಲಿ ಒಂದು ಮಾತು ಹೇಳಬೇಕು. ಏನೆಂದರೆ, ಭಾರಿ ಫಿರಂಗಿಗಳ ಪಡೆಗೆ ಹೆಚ್ಚು ಜಾಗಬೇಕು. ಅದು ಸಾಮಾನ್ಯವಾಗಿ ಸೈನ್ಯಕ್ಕಿಂತ ಒಂದೆರಡು ದಿನಗಳ ಮುಂಚೆಯೇ ಹೊಸ ಬಿಡಾರದ ಜಾಗಕ್ಕೆ ಹೋಗಿರುತ್ತದೆ.

ಪಾಳೆಯದಲ್ಲಿ ಉಂಟಾಗುವ ವಿಚಿತ್ರ ಗಲಿಬಿಲಿ ಹಾಗೂ ಅದನ್ನು ಪ್ರವೇಶಿಸಿದರೆ ಆಗುವ ಭಯಭೀತಿಗಳನ್ನು ಉತ್ಪ್ರೇಕ್ಷೆಮಾಡಿ ಹೇಳುತ್ತಾರೆ. ಸೇನೆಗಳನ್ನು ಬೀಡುಬಿಡಿಸುವ ಕ್ರಮವನ್ನು ಸ್ವಲ್ಪ ತಿಳಿದುಕೊಂಡರೆ ಪಾಳೆಯದಲ್ಲಿ ಒಂದು ಕಡೆಯಿಂದ ಇನ್ನೊಂದು

ಕಡೆಗೆ ಸುಲಭವಾಗಿ ಹೋಗಬಹುದು. ರಾಜನ ಬಿಡಾರಗಳು, ಡೇರೆಗಳು, ಪ್ರತಿ ಅಮೀರನ ನಿರ್ದಿಷ್ಟ ಪತಾಕೆಗಳು, ಲಾಂಛನಗಳು ಹಾಗೂ ರಾಜಾಬಜಾರಿನ ಚೌರಿಗಳು– ಇವೆಲ್ಲಾ ದೂರದಿಂದಲೇ ಕಾಣಿಸುತ್ತವೆ. ಹೀಗಿರುವಾಗ ಅವುಗಳ ಗುರುತು ಇಟ್ಟುಕೊಂಡು ಅಡ್ಡಾಡಿದರೆ ಯಾವ ತೊಂದರೆಯೂ ಆಗುವುದಿಲ್ಲ.

ಇಷ್ಟೆಲ್ಲಾ ಎಚ್ಚರಿಕೆ ವಹಿಸಿದ ಮೇಲೂ ಕೆಲವು ಸಂದರ್ಭಗಳಲ್ಲಿ ಅವ್ಯವಸ್ಥೆ ಹಾಗೂ ಅನಿಶ್ಚಯ ಪರಿಸ್ಥಿತಿ ಉಂಟಾಗುತ್ತವೆ. ಅದರಲ್ಲಿಯೂ ಪಾಳೆಯ ಬಿಡುವ ಸ್ಥಳಕ್ಕೆ ಸೇನೆಯು ಬೆಳಗಿನಹೊತ್ತು ಬಂದಾಗ ಹೀಗೆ ಆಗುವುದುಂಟು. ಆಗ ಪ್ರತಿಯೊಬ್ಬರೂ ತಮ್ಮ ತಮ್ಮ ಜಾಗ ಹುಡುಕಿ ಬಿಡಾರಹೂಡಬೇಕೆಂಬ ಆತುರದಲ್ಲಿರುತ್ತಾರೆ. ಆ ಜನಜಂಗುಳಿಯಿಂದ ಏಳುವ ಧೂಳಿನಿಂದ ನಾನು ತಿಳಿಸಿರುವ ನಿಶಾನೆಗಳು ಕಾಣದಂತೆ ಆಗುತ್ತವೆ. ಇದರ ಜೊತೆಗೆ ಆಗ ತಾನೆ ಹಾಕುತ್ತಿರುವ ಡೇರೆಗಳು, ಚಿಕ್ಕಪುಟ್ಟ ಅಮೀರರುಗಳ ಡೇರೆಗಳಿಗೆ ಕಟ್ಟಿರುವ ಹಗ್ಗಗಳು, ಮತ್ತು ಮನ್ಸಬ್‌ದಾರರುಗಳು ತಮ್ಮ ತಮ್ಮ ಬಿಡಾರದ ಗಡಿಗಾಗಿ ಗೊತ್ತುಮಾಡಿರುವ ಗುರ್ತುಗಳು–ಇವುಗಳಿಂದ ಪಾಳೆಯದ ಬೀದಿಗಳಲ್ಲಿ ಓಡಾಡುವುದು ಕಷ್ಟವಾಗುತ್ತದೆ. ಅಲ್ಲದೆ, ಹೆಂಗಸರಿಗಾಗಿ ಹೊಡೆದ ಗುಡಾರಗಳ ಬಳಿ ಗುಡಾರಗಳನ್ನು ಹೊಡೆಯುವುದು ಅನೇಕ ವೇಳೆ ತಾಪತ್ರಯವನ್ನುಂಟುಮಾಡುತ್ತದೆ. ದಷ್ಟಪುಷ್ಟರಾದ ಆಳುಕಾಳುಗಳು ಕೈಯಲ್ಲಿ ಲಾಠಿ ಹಿಡಿದು ಡೇರೆಗಳಿಗೆ ಕಟ್ಟಿದ ಹಗ್ಗಗಳನ್ನು ತೆಗೆಯುವುದಕ್ಕಾಗಲಿ ಅಥವಾ ಇಳಿಸುವುದಕ್ಕಾಗಲಿ ಅವಕಾಶ ಕೊಡುವುದಿಲ್ಲ. ಹೀಗಾಗಿ ನೀವು ಮುಂದಕ್ಕೂ ಹೋಗುವಂತಿಲ್ಲ, ಹಿಂದಕ್ಕೂ ಬರುವಂತಿಲ್ಲ. ಹೇರು ಹೊತ್ತ ಒಂಟೆಯನ್ನು ಈ ಇಕ್ಕಟ್ಟಿನಿಂದ ಪಾರುಮಾಡುವುದು ನಿಮಗೆ ಬಹು ಕಷ್ಟವಾಗುತ್ತದೆ. ಹೆದರಿಸಿಯೋ ಇಲ್ಲ ದಮ್ಮಯ್ಯಗುಡ್ಡೆ ಹಾಕಿಯೋ ನಿಮ್ಮ ಕೆಲಸ ಆಗುವುದನ್ನು ನೋಡಿಕೊಳ್ಳಬೇಕು. ಎದ್ದರೆ ಆಳಲ್ಲ ಎನ್ನುವಂತೆ ಗದರಿಸಿ ಬೆದರಿಸಿ, ಅಥವಾ ನಿಮ್ಮ ಕಡೆಯ ಸೇವಕರು ಅವರೊಡನೆ ಜಗಳವಾಡುವಂತೆ ಮಾಡಿ, ಆಮೇಲೆ ಅವರಿಬ್ಬರನ್ನೂ ಸಮಾಧಾನಮಾಡಿ, ಸಮಯ ನೋಡಿಕೊಂಡು ನಿಮ್ಮ ಒಂಟೆಗಳನ್ನು ಮುಂದೆ ಸಾಗಿಸಿಕೊಂಡುಹೋಗಬೇಕು.

ಬಹಳ ತಾಪತ್ರಯವಾಗುವುದು ಯಾವಾಗ ಎಂದರೆ, ನಿಮಗೆ ಏನಾದರೂ ಕೆಲಸ ವಿದ್ದು, ದೂರ ಹೋಗಿ ಸಾಯಂಕಾಲ ಹಿಂದಿರುಗಿದಾಗ. ಸಾಮಾನ್ಯ ಜನರು ಹಸುವಿನ ಮತ್ತು ಒಂಟೆಯ ಸಗಣಿಯಿಂದ ಮಾಡಿದ ಬೆರಣಿಗಳನ್ನೋ, ಹಸಿ ಸೌದೆಯನ್ನೋ ಒಲೆಗೆ ಒಡ್ಡಿ ಅಡುಗೆ ಮಾಡುವ ಸಮಯ ಅದು. ಇಂಥ ಅಸಂಖ್ಯಾತ ಒಲೆಗಳಿಂದ ಹೊರಟ ಹೊಗೆ, ಗಾಳಿ ಇಲ್ಲದಿರುವಾಗ ಎಷ್ಟೊಂದು ತೊಂದರೆಗೀಡುಮಾಡುತ್ತದೆ ಎಂಬುದನ್ನು ಹೇಳಬೇಕಾಗಿಲ್ಲ. ಈ ಹೊಗೆ ಇಡಿ ಸೈನ್ಯಶಿಬಿರವನ್ನು ಕಗ್ಗತ್ತಲಾಗಿಮಾಡಿಬಿಡುತ್ತದೆ. ನಾನು ಮೂರು ನಾಲ್ಕು ಸಲ ಇಂತಹ ಹೊಗೆಗೆ ಸಿಕ್ಕಿ ಸಂಕಟಪಡಬೇಕಾಯಿತು. ದಾರಿ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಹೀಗಾಗಿ ದಿಕ್ಕೆಟ್ಟು ಅಲೆದಾಡಬೇಕಾಯಿತು. ಒಮ್ಮೆ ಹೊಗೆ

ಹೋಗುವವರೆಗೆ ನಿಂತ ಕಡೆಯೇ ನಿಂತುಬಿಟ್ಟೆ. ಇಷ್ಟರಲ್ಲಿ ಚಂದ್ರೋದಯವಾಯಿತು. ಮತ್ತೊಮ್ಮೆ ಕಷ್ಟಪಟ್ಟು 'ಆಗಾಶಿ ದೀ' (aguacy-die'=ಆಕಾಶದೀಪ) ಇರುವಲ್ಲಿಗೆ ಹೋದೆ. ಅದರ ಅಡಿಯಲ್ಲಿ ನನ್ನ ಕುದುರೆ ಮತ್ತು ಆಳು ಸಮೇತ ಇಡೀ ರಾತ್ರಿ ಕಳೆದೆ. 'ಆಗಾಶಿ ದೀ' ಎಂಬುದು ಹಡಗಿನ ಪಟಸ್ತಂಭದಂತೆ ಎತ್ತರವಾದ ಕಂಬ. ಆದರೆ ಇದು ಬಳಕುತ್ತದೆ. ಮೂರು ಗಳುಗಳನ್ನು ಜೋಡಿಸಿ ಎತ್ತರವಾಗಿ ಇದನ್ನು ನೆಡುತ್ತಾರೆ. ರಾಜನ ಬಿಡಾರದ ಕಡೆಗೆ, ಅಂದರೆ ನಗರ್-ಕಾನೆಗೆ ಹತ್ತಿರದಲ್ಲಿ, ಇದನ್ನು ನೆಟ್ಟು ಇದಕ್ಕೆ ರಾತ್ರಿ ಹೊತ್ತು ದೀಪವನ್ನು ತೂಗುಹಾಕಿರುತ್ತಾರೆ. ದಾರಿ ತಪ್ಪಿದವರು ಇಲ್ಲಿಗೆ ಬಂದು ರಾತ್ರಿ ಯಾವ ಕಳ್ಳಕಾಕರ ಭಯವೂ ಇಲ್ಲದೆ ಇರಬಹುದು ; ಅಥವಾ ಇಲ್ಲಿಂದ ತಮ್ಮ ಬಿಡಾರದ ಗುರುತು ಹಿಡಿದುಕೊಂಡುಹೋಗಬಹುದು. ಈ ಆಗಾಶಿ ದೀ ದೂರದಿಂದ ನಕ್ಷತ್ರದಂತೆ ಕಾಣುತ್ತದೆ.

ರಾತ್ರಿ ಹೊತ್ತು ಕಳ್ಳತನಗಳನ್ನು ತಡೆಯಲು ಪ್ರತಿಯೊಬ್ಬ ಅಮೀರನೂ ತನ್ನ ಬಿಡಾರವನ್ನು ಕಾಯಲು ಕಾವಲುಗಾರರನ್ನು ನೇಮಿಸುತ್ತಾನೆ. ಕಾವಲುಗಾರ 'ಕಬರ್ ದಾರ್' (kabar-dar) ಎಂದು ಕೂಗುತ್ತಾ ಕಾವಲು ಕಾಯುತ್ತಿರುತ್ತಾನೆ. ಇಡೀ ಸೈನ್ಯದ ಬೀಡಿನ ಸುತ್ತ ಐನೂರು ದಾಪುಗಳಿಗೆ ಒಬ್ಬನಂತೆ ಕಾವಲುಗಾರರು ಇರುತ್ತಾರೆ. ಇವರು ಬೆಂಕಿ ಹಚ್ಚಿಕೊಂಡು 'ಕಬರ್‌ದಾರ್' 'ಕಬರ್‌ದಾರ್' ಎಂದು ಕೂಗುತ್ತಿರುತ್ತಾರೆ. ಈ ಎಚ್ಚರಿಕೆ ವಹಿಸುವುದರ ಜೊತೆಗೆ 'ಕೊತ್ವಾಲ' (Cotvoal)ನು ಇಡೀ ಪಾಳೆಯದಲ್ಲಿ,ಅದರಲ್ಲಿಯೂ ಬಜಾರಿನಲ್ಲಿ, ತುತ್ತೂರಿ ಊದಿಕೊಂಡು ಗಸ್ತು ತಿರುಗಲು ಕಾವಲುಗಾರರನ್ನು ನೇಮಿಸುತ್ತಾನೆ. ಇಷ್ಟೆಲ್ಲ ಮುನ್ನೆಚ್ಚರಿಕೆ ವಹಿಸಿದರೂ ಕಳ್ಳತನಗಳು ಆಗಾಗ್ಗೆ ಆಗುತ್ತಿರುತ್ತವೆ. ಆದ್ದರಿಂದ ನಾವು ಸಹ ಎಚ್ಚರಿಕೆ ವಹಿಸುವುದೊಳ್ಳೆಯದು. ಆಳುಗಳು ಜಾಗರೂಕರಾಗಿದ್ದಾರೆಂದು ನಾವು ನಂಬಿ ಸುಮ್ಮನೆ ಇರಬಾರದು. ಹೊತ್ತಿನಂತೆ ಮಲಗಿ ರಾತ್ರಿ ಸರಿಹೊತ್ತಿನಲ್ಲಿ ಎದ್ದು ಕಳ್ಳಕಾಕರಿಗೆ ಕಾಯುವುದು ಸೂಕ್ತ.

ಈಗ ಇಂತಹ ಯಾತ್ರೆಗಳ ಸಂದರ್ಭದಲ್ಲಿ ಮೊಗಲ್ ಚಕ್ರವರ್ತಿ ಪ್ರಯಾಣ ಮಾಡುವ ಕ್ರಮವನ್ನು ಹೇಳಲಿಚ್ಛಿಸುತ್ತೇನೆ. ಸಾಮಾನ್ಯವಾಗಿ ಆತನನ್ನು 'ತಖ್ತ್-ಇ-ರವಾನ್' ಎಂಬ ಪೀಠದಲ್ಲಿ ಕುಳ್ಳಿರಿಸಿ ಜನರು ಹೆಗಲಮೇಲೆ ಹೊತ್ತುಕೊಂಡು ಹೋಗುತ್ತಾರೆ. ಗಿಲೀಟು ಹಾಕಿ ಅಲಂಕಾರ ಮಾಡಿದ ನಾಲ್ಕು ಹೊರುವ ಅಡ್ಡೆಗಳು ಮತ್ತು ಬೇಕೆಂದಾಗ ತೆರೆಯಬಹುದಾದ ಅಥವಾ ಮುಚ್ಚಬಹುದಾದ ಗಾಜಿನ ಕಿಟಕಿಗಳುಳ್ಳ ಬಹು ಅಂದವಾದ ಮಂಚದ ಮನೆಯೇ ಈ ತಖ್ತ್. ಪ್ರತಿ ಅಡ್ಡೆಯ ಎರಡು ತುದಿಗಳಲ್ಲಿ ಇಬ್ಬರು ಗಟ್ಟಿಮುಟ್ಟಾದ ಹಾಗೂ ಸೊಗಸಾಗಿ ಉಡುಪು ತೊಟ್ಟ ಬೋಯಿಗಳು ಇರುತ್ತಾರೆ. ಹೀಗೆ ಎಂಟು ಜನ ಬೋಯಿಗಳು ಈ ತಖ್ತನ್ನು ಹೊರುತ್ತಾರೆ. ಇನ್ನೆಂಟು ಜನ ಹೆಗಲು ಬದಲಾಯಿಸಲು ಸದಾ ಸಿದ್ಧರಾಗಿರುತ್ತಾರೆ. ಕೆಲವು ವೇಳೆ ರಾಜನು ಕುದುರೆ ಮೇಲೆ ಹೋಗುವುದುಂಟು. ಬೇಟೆಯಾಡಲು ಹವಾ ಅನುಕೂಲವಾಗಿರು

ವಾಗ ಹಾಗೆ ಮಾಡುತ್ತಾನೆ. ಬೇರೆ ವೇಳೆಗಳಲ್ಲಿ ಆನೆಯ ಮೇಲೆ 'ಮಿಕ್‌ದೆಂಬರ್‌ (mikdember)ನಲ್ಲಿಯೋ ಅಥವಾ 'ಹೂಸ್' (hauze = ಅಂಬಾರಿ)ನಲ್ಲಿಯೋ ಪ್ರಯಾಣಮಾಡುತ್ತಾನೆ. ಬಹು ಅಂದವಾದ ಸಬರ ಬಿಗಿದ ಆನೆಯ ಮೇಲಿನ ಎತ್ತರವಾದ ಅಂಬಾರಿಯಲ್ಲಿ ಕುಳಿತು ಅರಸನು ಮಾಡುವ ಪ್ರಯಾಣ ಬಹು ವೈಭವ ಯುತವಾಗಿರುತ್ತದೆ.

ಪ್ರತಿ ಯಾತ್ರೆಯ ವೇಳೆಯಲ್ಲಿ ಚಕ್ರವರ್ತಿಯನ್ನು ಅಮೀರರೂ 'ರಾಜರು'ಗಳೂ ಹಿಂಬಾಲಿಸುತ್ತಾರೆ. ಅವರು ಚಕ್ರವರ್ತಿಯ ಅಕ್ಕಪಕ್ಕದಲ್ಲಿ ಮತ್ತು ಹಿಂದೆ ಸ್ವಲ್ಪ ದೂರ ದೂರದಲ್ಲಿ ಗುಂಪಾಗಿ ಹೋಗುತ್ತಾರೆ. ಪ್ರಯಾಣಮಾಡುವ ದಿನ ಅವರು ಬೆಳಗ್ಗೆ ಅವನ್‌-ಕಾಸಿನಲ್ಲಿ ನೆರೆಯುತ್ತಾರೆ. ಈ ಪ್ರಯಾಣ ಅವರಿಗೆ ಸಾಕುಸಾಕಾಗಿ ಹೋಗು ತ್ತದೆ. ಆದರಲ್ಲಿಯೂ ಬೇಟೆಯ ದಿನಗಳಲ್ಲಂತೂ ಅವರು ಸಾಮಾನ್ಯ ಸೈನಿಕರಂತೆ ಬಿಸಿಲಿ ನಲ್ಲಿ ಒಣಗಿ ಧೂಳು ಕುಡಿದು ಮಧ್ಯಾಹ್ನ ಮೂರು ಗಂಟೆಯವರೆಗೆ ತೊಳಲಾಡಬೇಕಾ ಗುತ್ತದೆ.

ಚಕ್ರವರ್ತಿಯ ಜೊತೆ ಹೋಗದಿರುವಾಗ ಈ ಶ್ರೀಮಂತ ಸಿರದಾರರು ಪ್ರಯಾಣ ಮಾಡುವ ರೀತಿಯೇ ಬೇರೆ. ಆಗ ಅವರಿಗೆ ಬಿಸಿಲು ಧೂಳುಗಳ ತಾಪತ್ರಯವಿಲ್ಲ. 'ಪಾಲಕಿ' (palecky)ಯಲ್ಲಿ ಕುಳಿತು ಹಾಯಾಗಿ ಕಾಲುನೀಡಿಕೊಂಡು ಪ್ರಯಾಣ ಮಾಡುತ್ತಾರೆ. ಬೇಕೆಂದಾಗ ಅದರಲ್ಲಿಯೇ ಮಲಗಿ ನಿದ್ದೆಮಾಡುತ್ತಾರೆ. ತಮ್ಮ ಡೇರೆ ಯನ್ನು ಮುಟ್ಟಿದಾಗ ಚೊಕ್ಕ ಭೋಜನ ಕಾದಿರುತ್ತದೆ. ರಾತ್ರಿಯ ಊಟವಾದ ಕೂಡಲೇ ಯಾವ ಸಾಮಾನುಗಳು ಬೇಕೊ ಆ ಸಾಮಾನುಗಳನ್ನು ಮುಂದಿನ ಬಿಡಾರಕ್ಕೆ ಕಳುಹಿಸುತ್ತಾರೆ. ಅಮೀರರ ಸುತ್ತ ಯಾವಾಗಲೂ ಬೆಳ್ಳಿಯ ಗದೆ ಹಿಡಿದ 'ಗೌರ್ಜ್‌-ಬರ್ದಾರ್" ಅಂದರೆ ಗದಾಧಾರಿಗಳು ಇರುತ್ತಾರೆ. ಇದೇ ರೀತಿ ಚಕ್ರವರ್ತಿಯ ಸುತ್ತಮುತ್ತಲೂ ಇತರ ಪರಿವಾರದವರು ಇರುತ್ತಾರೆ.

ರಾಜರ ಸುತ್ತಮುತ್ತ 'ಕೌರ್' (cour)ಗಳು ಇರುತ್ತವೆ. ಇವುಗಳನ್ನು ಕೊಂಬು ಕಹಳೆ ತಾಳಮೇಳಗಳ ಸಮೇತ ಹೊತ್ತು ಅರಸರನ್ನು ಸುತ್ತುವರಿದುಕೊಂಡು ಸಾಗು ತ್ತಾರೆ. 'ಕೌರ್'ಗಳೆಂದರೆ ಬೆಳ್ಳಿಯ ವಿಗ್ರಹಗಳು. ಚಿತ್ರವಿಚಿತ್ರವಾದ ಪ್ರಾಣಿಗಳು, ಹಸ್ತಗಳು, ಮೀನು ಮುಂತಾದ ರಹಸ್ಯಾರ್ಥವುಳ್ಳ ವಸ್ತುಗಳು—ಇವುಗಳ ವಿಗ್ರಹ ಗಳನ್ನು ಮಾಡಿಕೊಂಡು, ಉದ್ದನೆಯ ಬೆಳ್ಳಿ ಕೋಲುಗಳ ತುದಿಗೆ ಸಿಕ್ಕಿಸಿಕೊಂಡು, ವಾದ್ಯ ಸಮೇತ ಹೋಗುತ್ತಾರೆ. 'ಕೌರ್' ಹೊತ್ತವರನ್ನು ಅನುಸರಿಸಿ ಅನೇಕ ಮನ್ಸಬ್‌ ದಾರರುಗಳು ಕುದುರೆಗಳ ಮೇಲೆ ಕತ್ತಿ ಗುರಾಣಿ ಮತ್ತು ಬಿಲ್ಲು ಬತ್ತಳಿಕೆಗಳ ಸಮೇತ ಬರುತ್ತಾರೆ. ಇವರ ಸಂಖ್ಯೆ ಅಮೀರರ ಸಂಖ್ಯೆಗಿಂತ ಬಹು ಹೆಚ್ಚು.

ಅಂತಃಪುರದ ರಾಜಕುಮಾರಿಯರೂ ಕುಲೀನ ಸ್ತ್ರೀಯರೂ ತಮ್ಮದೇ ಆದ ರೀತಿಗಳಲ್ಲಿ ಪ್ರಯಾಣಮಾಡುತ್ತಾರೆ. ಹೆಚ್ಚು ಕಡಿಮೆ ತಖ್ತ್‌-ರವಾನ್‌ಗಳಂತಿರುವ

'ಚೌಡೋಲು' (tchovdoule)ಗಳಲ್ಲಿ ಕುಳಿತು ಗಂಡಸರಿಂದ ಹೊರಿಸಿಕೊಂಡು ಹೋಗುತ್ತಾರೆ. ಈ ಚೌಡೋಲುಗಳನ್ನು ಸುಂದರವಾಗಿ ರೇಷ್ಮೆ ಬಟ್ಟೆ, ಹೂಗೊಂಡೆ ಗಳು ಹಾಗೂ ಕಸೂತಿಗಳಿಂದ ಅಲಂಕಾರ ಮಾಡಿರುತ್ತಾರೆಂದು ಹೇಳಬೇಕಾಗಿಲ್ಲ. ಉಳಿದ ಸ್ತ್ರೀಯರು ಮುಚ್ಚಿದ ಪಾಲಕಿಗಳಲ್ಲಿ ಹೋಗುತ್ತಾರೆ ; ಮತ್ತೆ ಕೆಲವರು ಎರಡು ಚಿಕ್ಕ ಆನೆಗಳ ಮಧ್ಯೆಯೋ ಅಥವಾ ಭಾರಿಯಾದ ಒಂಟೆಗಳ ಮಧ್ಯೆಯೋ ತೂಗುಹಾಕಿದ ಅಂದಣಗಳಲ್ಲಿ ಕೂತು ಸಾಗುತ್ತಾರೆ.

ಈ ರೀತಿ ರೋಷನಾರ ಬೇಗಮಳು ಪ್ರಯಾಣಮಾಡಿದ್ದನ್ನು ನೋಡಿದೆ. ಅವಳ ಮುಂದೆ ಒಳ್ಳೆಯ ಉಡುಪಿನಲ್ಲಿದ್ದ ಯುವತಿಯೊಬ್ಬಳು ನವಿಲುಗರಿಯ ದಂಡೆ ಹಿಡಿದು ಧೂಳು ಹೊಡೆಯುತ್ತಾ ನೊಣಗಳನ್ನು ಓಡಿಸುವ ಕೆಲಸದಲ್ಲಿ ತೊಡಗಿರುತ್ತಿದ್ದಳು. ಕೆಲವು ವೇಳೆ ಸ್ತ್ರೀಯರನ್ನು ಆನೆಯ ಮೇಲೆ ಸಾಗಿಸುವುದುಂಟು. ಅಂಥ ಆನೆಗಳಿಗೆ ಬೆಳ್ಳಿಯ ಗಂಟೆ ಸರ ಕಟ್ಟಿ, ವಿಶೇಷ ರೀತಿ ಅಲಂಕಾರಮಾಡಿರುತ್ತಾರೆ. ಹೀಗೆ ಚೆಲುವೆಯು ರಾದ ಹಾಗೂ ದೊಡ್ಡಸ್ತಿಕೆಯ ಸ್ತ್ರೀಯರನ್ನು ಭೂಮಿಯಿಂದ ಮೇಲಕ್ಕೆ ಎತ್ತರಿಸಿ ಮಿಕ್ ಡೆಂಬರ್‌ಗಳಲ್ಲಿ ಸಾಗಿಸುವಾಗ ಅವರು ಗಾಳಿಯಲ್ಲಿ ತೇಲಿಕೊಂಡುಹೋಗುವ ದೇವ ಲೋಕದ ನಿವಾಸಿಗಳಂತೆ ಕಾಣುತ್ತಾರೆ. ಪ್ರತಿ ಮಿಕ್‌ಡೆಂಬರಿನಲ್ಲಿ ಆ ಕಡೆ ನಾಲ್ಕು ಈ ಕಡೆ ನಾಲ್ಕರಂತೆ ಎಂಟು ಜನ ಕುಳಿತಿರುತ್ತಾರೆ. ಸುತ್ತಲೂ ಕಂಡಿಗಳುಳ್ಳ ತಡಿಕೆ ಇದ್ದು, ಅದಕ್ಕೆ ರೇಷ್ಮೆಯ ಬಲೆಯನ್ನು ಹೊದಿಸಿರುತ್ತಾರೆ. ಶ್ರೀಮಂತಿಕೆಯ ಷೋಕಿಯಲ್ಲಿ ಈ ಮಿಕ್‌ಡೆಂಬರುಗಳು ಚೌಡೋಲೆಗಳಿಗಾಗಲಿ ತಖ್ತ್-ರವಾನ್‌ಗಳಿಗಾಗಲಿ ಕಡಮೆ ಯೇನಲ್ಲ.

ಜನಾನಾ ಸ್ತ್ರೀಯರ ಈ ವೈಭವದ ಮೆರವಣಿಗೆಯನ್ನು ಮತ್ತೆ ಮತ್ತೆ ವರ್ಣಿಸದೆ ಇರಲಾರೆ. ಈಗ ತಾನೆ ಮುಗಿದ ಪ್ರಯಾಣದಲ್ಲಿ ಅದು ನನ್ನ ಮನಸ್ಸನ್ನು ತುಂಬ ಆಕರ್ಷಿಸಿತು. ಮತ್ತೆ ಮತ್ತೆ ಅದನ್ನು ನೆನೆಸಿಕೊಳ್ಳುತ್ತಿದ್ದೇನೆ. ನಿಮ್ಮ ಕಲ್ಪನೆಗೆ ಯಾವ ಮಿತಿಯೂ ಇಲ್ಲದಿರಲಿ. ರೋಷನಾರಾ ಬೇಗಮಳ ಆ ವೈಭವವನ್ನು ಮೀರಿ ಸುವ ಮತ್ತೊಂದು ನೋಟವನ್ನು ನಾನು ಊಹಿಸಲಾರೆ. ಪೆಗುವಿನ ಭಾರಿ ಆನೆಯೊಂದರ ಮೇಲೆ ಮೆಕ್‌ಡೆಂಬರಿನಲ್ಲಿ ಆಕೆ ಕುಳಿತಿದ್ದಾಳೆ. ಚಿನ್ನ ಹಾಗೂ ನೀಲಿಗಳ ಉಜ್ವಲ ಪ್ರಕಾಶವೋ ಪ್ರಕಾಶ. ಅವಳ ಆನೆಗಿಂತ ಅಲಂಕಾರದಲ್ಲಿ ಯಾವ ಕೊರತೆಯೂ ಇಲ್ಲದ ಐದಾರು ಆನೆಗಳ ಮೇಲೆ ಅವಳ ಸೇವಕಿಯರ ಹಿಂಡು. ರಾಜಕುಮಾರಿಗೆ ಸಮೀಪದಲ್ಲಿ ಮುಖ್ಯ ಖೋಜಾಗಳು. ಅವರು ಸಹ ಸೊಗಸಾಗಿ ಅಲಂಕೃತರಾಗಿರುವರು ; ಅಂತೆಯೇ ಅವರು ಏರಿರುವ ಕುದುರೆಗಳು. ಪ್ರತಿಯೊಬ್ಬರ ಕೈಯಲ್ಲಿಯೂ ಅವರವರ ಅಧಿಕಾರದ ದಂಡ. ಆಕೆಯ ಆನೆಯ ಸುತ್ತ ಮನಮೋಹಕವಾದ ಉಡುಪುಗಳನ್ನು ಧರಿಸಿ ಸುಂದರ ಕುದುರೆಗಳನ್ನೇರಿದ ಟಾರ್ಟರಿ ಮತ್ತು ಕಾಶ್ಮೀರಿ ಸೇವಕಿಯರ ಪಡೆ. ಈ ಪರಿವಾರವಲ್ಲದೆ ದಾರಿ ಬಿಡಿಸಿಕೊಂಡು ಮುಂದೆ ಮುಂದೆ ಸಾಗುವ ಹಲವಾರು ಖೋಜಾಗಳು. ಇವರಿಗೆ

ಸಹಾಯಕರಾಗಿ ದೊಡ್ಡ ದೊಡ್ಡ ಬೆತ್ತಗಳನ್ನು ಹಿಡಿದು ದಾರಿಗೆ ಅಡ್ಡ ಬಂದವರನ್ನು ಓಡಿಸುತ್ತಾ ದಾರಿ ಬಿಡಿಸುವ 'ಪಗ್ಯೆ' (pagy)ಗಳ ಅಂದರೆ ಆಳುಗಳ ತಂಡ.

ರೋಷನಾರಾ ಬೇಗಮಳ ಹಿಂದೆ ಅವಳಂತೆಯೇ ಅಲಂಕೃತಳಾದ ಆಸ್ಥಾನದ ಮುಖ್ಯ ಮಹಿಳೆ. ಅವಳ ಹಿಂದೆ ಮೂರನೆಯವಳು. ಈ ಮೂರನೆಯವಳ ಹಿಂದೆ ನಾಲ್ಕನೆಯವಳು. ಹೀಗೆ ಹಿರಿತನದ ಹದಿನೈದು ಹದಿನಾರು ಮಹಿಳೆಯರು ಅವರವರ ಅಂತಸ್ತಿಗೆ ತಕ್ಕಂತೆ ಅಲಂಕೃತರಾಗಿ ಅರವತ್ತು ಎಪ್ಪತ್ತು ಆನೆಗಳ ಮೇಲೆ ಮೆರವಣಿಗೆಯಲ್ಲಿ ಸಾಗುತ್ತಾರೆ. ನೋಡಲು ಎರಡು ಕಣ್ಣು ಸಾಲವು. ನಾನು ಈ ವೈಭವದ ಮೆರವಣಿಗೆಯನ್ನು ಏನೋ ಒಂದು ರೀತಿಯ ತಿರಸ್ಕಾರದಿಂದ ಭಾವಿಸದಿದ್ದರೆ, ಮುಂದಿಯ ನೋಟದಿಂದ ಮರೆಯಾದ ಹೆಂಗಸರನ್ನು ದೇವತಾ ಸ್ತ್ರೀಯರೆಂದೂ, ಅವರನ್ನು ಹೊತ್ತು ಸಾಗುವ ಆನೆಗಳನ್ನು ದೇವೇಂದ್ರನ ಐರಾವತಗಳೆಂದೂ ಇಂಡಿಯನ್ ಕವಿಗಳನೇಕರು ವರ್ಣಿಸಿದಂತೆ ನಾನೂ ಕಲ್ಪನೆಯ ಕಾವ್ಯವನ್ನೇ ಕಟ್ಟಬಿಡುತ್ತಿದ್ದೆ.

ಈ ಸ್ತ್ರೀಯರ ಬಳಿ ಸಾರುವುದು ನಿಜವಾಗಿಯೂ ಕಷ್ಟವೇ. ಅವರು ಯಾವ ಗಂಡಸಿನ ಕಣ್ಣಿಗೂ ಬೀಳುವುದಿಲ್ಲ. ಎಂಥ ಉನ್ನತ ಸ್ಥಾನಮಾನದ ಸಾಹಸಿಗನಾಗಲಿ ಅವನೇನಾದರೂ ಈ ಸ್ತ್ರೀಯರ ಸುತ್ತಮುತ್ತ ಎಲ್ಲಿಯಾದರೂ ಕಾಣಿಸಿಕೊಂಡನೆಂದರೆ ಅವನ ಗತಿ ಮುಗಿಯಿತು ! ಖೋಜಾಗಳೂ ಅವರನ್ನು ಅನುಸರಿಸುವ ಕಾಲಾಳುಗಳೂ ನಿಷ್ಕರುಣೆಯಿಂದ ಅವನನ್ನು ಹಿಡಿದು ಬಡಿದು ಬಾರಿಸಿಬಿಡುತ್ತಾರೆ. ಇಂಥ ಒಂದು ಇಕ್ಕಟ್ಟಿಗೆ ನಾನೂ ಒಮ್ಮೆ ಸಿಕ್ಕಿಬಿಟ್ಟಿದ್ದನ್ನು ಮರೆಯಲಾರೆ. ಆದರೆ ಅವರ ಏಟುಗಳ ಸವಿಯನ್ನು ಹೇಗೊ ತಪ್ಪಿಸಿಕೊಂಡೆ. ನಾನು ಕತ್ತಿ ಇರಿದು ಕುದುರೆಯನ್ನೇರಿ ದಾರಿಮಾಡಿಕೊಂಡು ವೇಗವಾಗಿ ಬಂದುಬಿಟ್ಟೆ. ಇಂಥ ಪರಿಸ್ಥಿತಿಗಳಲ್ಲಿ ಮೂರು ವಿಧಾನಗಳಿಂದ ತಪ್ಪಿಸಿಕೊಳ್ಳಬೇಕೆಂಬ ಗಾದೆಯೇ ಆಗಿಹೋಗಿದೆ. ಒಂದನೆಯದು, ಹೇಗೆಂದರೆ ಹಾಗೆ ಝಾಡಿಸಿ ಒದೆಯುವ ಹಿಡಿಗುದುರೆಗಳ ಮಧ್ಯೆ ಸೇರಿಕೊಳ್ಳುವುದು ; ಎರಡನೆಯದು, ಬೇಟೆಯ ಪ್ರದೇಶದಲ್ಲಿ ಕಾಲಿಡುವುದು ; ಮೂರನೆಯದು, ಅಂತಃಪುರದ ಸ್ತ್ರೀಯರ ಸಮೀಪ ಹೋಗುವುದು. ಪರ್ಷಿಯಾದಲ್ಲಿ ಇನ್ನೂ ತಾಪತ್ರಯ. ಅಲ್ಲಿ ಹೆಂಗಸರಿಂದ ಅರ್ಧ ಹರಿದಾರಿ ದೂರ ಇದ್ದರೂ ಕಾವಲು ಖೋಜಾನ ಕಣ್ಣಿಗೆ ಬಿದ್ದರೆ ಸಾಕು ಪ್ರಾಣಕ್ಕೆ ಸಂಚಕಾರ. ಅಂತಃಪುರದ ಸ್ತ್ರೀಯರು ಯಾವ ಬೀದಿಯಲ್ಲಿ ಹೋಗುವರೋ ಆ ಬೀದಿಯ ಜನ ಮನೆಮಠಗಳನ್ನು ಬಿಟ್ಟು ದೂರ ಓಡಿಹೋಗಬೇಕು.

ಈಗ ರಾಜನ ಬೇಟೆಯ ವಿಚಾರ ಹೇಳುತ್ತೇನೆ. ಒಂದು ಲಕ್ಷ ಸೈನ್ಯವನ್ನು ಕಟ್ಟಿಕೊಂಡು ಮೊಗಲ್ ಚಕ್ರವರ್ತಿ ಹೇಗೆ ಬೇಟೆಯಾಡಿಯಾನೆಂದು ನನಗೆ ಊಹಿಸುವುದಕ್ಕಾಗಿರಲಿಲ್ಲ. ಆದರೆ ಒಂದು ಲಕ್ಷವಲ್ಲ, ಎರಡು ಲಕ್ಷ ಸೈನಿಕರಿದ್ದರೂ ಆತ ಬೇಟೆಯಾಡಬಲ್ಲ ಎಂಬ ಮಾತಿನಲ್ಲಿ ಅರ್ಥವಿದೆ.

ಆಗ್ರಾ ಮತ್ತು ದಿಲ್ಲಿಗಳ ಸುತ್ತಮುತ್ತ ಹಾಗೂ ಜಮುನಾ ನದಿಯ ಆ ಕಡೆ ಈ

ಕಡೆ ದಡಗಳಲ್ಲಿ ಪರ್ವತಗಳವರೆಗೆ ಮತ್ತು ಲಾಹೋರಿಗೆ ಹೋಗುವ ಹೆದ್ದಾರಿಯ ಇಕ್ಕೆಲಗಳಲ್ಲಿ ಬಂಜರು ಭೂಮಿ ಇದೆ. ಅದರಲ್ಲಿ ಆರೇಳು ಅಡಿ ಎತ್ತರಕ್ಕೆ ಹುಲ್ಲೋ, ಕುರುಚಲು ಗಿಡಗಳೋ ಬೆಳೆದಿರುತ್ತವೆ. ಈ ಭೂಮಿಯನ್ನೆಲ್ಲಾ ಬಹಳ ಮುತುವರ್ಜಿ ವಹಿಸಿ ನೋಡಿಕೊಳ್ಳಲಾಗುತ್ತಿದೆ. ಸ್ಥಳದವರು ಬಲೆಯಿಂದ ಹಿಡಿಯಬಹುದಾದ ಗವುಜಗಹಕ್ಕಿ, ಪುರಲಿ ಹಕ್ಕಿ ಮತ್ತು ಮೊಲಗಳನ್ನು ಬಿಟ್ಟರೆ, ಉಳಿದ ಪಕ್ಷಿಮೃಗಗಳನ್ನು ಎಂಥ ದೊಡ್ಡ ಮನುಷ್ಯನೇ ಆಗಲಿ ಬೇಟೆಯಾಡಕೂಡದು. ಈ ಕಾರಣ ಬೇಟೆಯಾಡಬಹುದಾದ ಮೃಗಪಕ್ಷಿಗಳು ಈ ಪ್ರದೇಶದಲ್ಲಿ ತುಂಬಿವೆ.

ಚಕ್ರವರ್ತಿ ಹೊರಗೆ ಹೊರಡುತ್ತಾನೆಂದರೆ ಸೈನ್ಯವು ಹಾದುಹೋಗುವ ಜಿಲ್ಲೆಯಲ್ಲಿನ ಬೇಟೆ ಕಾವಲುಗಾರನು (game keeper) ಎಲ್ಲೆಲ್ಲಿ ಒಳ್ಳೆಯ ಬೇಟೆ ಇದೆ ಎಂದು ಬೇಟೆಯ ಮಹಾ ಭಕ್ಷಿಗೆ (Grand Master of the Hunt) ತಿಳಿಸಬೇಕು. ಆಗ ಆ ಪ್ರದೇಶವನ್ನು ಕಾಯಲು ಕಾವಲುಗಾರರನ್ನು ನೇಮಿಸಲಾಗುವುದು. ಸೈನ್ಯವು ಬೇಟೆ ಇರುವ ಪ್ರದೇಶವನ್ನು ಬಿಟ್ಟು ಬೇರೆ ದಾರಿಯಲ್ಲಿ ಮುನ್ನಡೆದರೆ, ಚಕ್ರವರ್ತಿ ತನಗೆ ಬೇಕಾದ ಅಮೀರರುಗಳೊಡಗೂಡಿ ಬೇಟೆಯ ಪ್ರದೇಶವನ್ನು ಪ್ರವೇಶಿಸಿ ಆರಾಮವಾಗಿ ಬೇಟೆಯಲ್ಲಿ ತೊಡಗುತ್ತಾನೆ.

ಮೊದಲಿಗೆ ಪಳಗಿದ ಚಿರತೆಗಳು ಚಿಗರಿಗಳನ್ನು ಬೇಟೆಯಾಡುವ ವಿಧಾನ ಹೇಳುತ್ತೇನೆ. ಚಿಗರಿಗಳು ಐದಾರು ಸಂಖ್ಯೆಯಲ್ಲಿ ಗುಂಪುಗುಂಪಾಗಿ ಅಲೆದಾಡುತ್ತಿರುತ್ತವೆ. ಈ ಗುಂಪನ್ನು ಒಂದು ಗಂಡು ಹಿಂಬಾಲಿಸುತ್ತಾ ಹೋಗುತ್ತದೆ. ಅದನ್ನು ಅದರ ಬಣ್ಣದಿಂದ ಗುರುತಿಸಬಹುದು. ಈ ತರಹದ ಗುಂಪೊಂದನ್ನು ಕಂಡಾಗ ಅದನ್ನು ಚಿರತೆ ಗಮನಿಸುವಂತೆ ಮಾಡುತ್ತಾರೆ. ಚಿರತೆಯನ್ನು ಒಂದು ಗಾಡಿಯ ಮೇಲೆ ಸರಪಣಿಯಲ್ಲಿ ಕಟ್ಟಿರುತ್ತಾರೆ. ಆ ಕುಯುಕ್ತಿಯ ಹಾಗೂ ಬುದ್ಧಿವಂತಿಕೆಯ ಚಿರತೆ ಚಿಗರಿಗಳನ್ನು ಕಂಡಕೂಡಲೇ ಓಡುವುದಿಲ್ಲ. ಅದು ಹಾಗೆ ಹೀಗೆ ಜುಗ್ಗಾಡಿಕೊಂಡು ಕಾಣದಂತೆ ಚಿಗರಿಗಳನ್ನು ಸಮೀಪಿಸುತ್ತದೆ. ಐದಾರು ನೆಗೆತಗಳಲ್ಲಿ ಚಿಗರಿಗಳ ಮೇಲೆ ಬೀಳುವಷ್ಟು ಹತ್ತಿರಕ್ಕೆ ಹೋಗಿ, ಚಾಕಚಕ್ಯತೆಯಿಂದ ನೆಗೆದು ಚಿಗರಿಗಳ ಹಿಂಡಿನ ಮೇಲೆ ಬೀಳುತ್ತದೆ. ಚಿಗರಿಯೊಂದು ಸಿಕ್ಕಿದರೆ ಅದನ್ನು ಕಚ್ಚಿ ರಕ್ತ ಕುಡಿದು, ಗುಂಡಿಗೆ ತಿಂದು, ಈಲಿ ನುಂಗಿ ಹಿಗ್ಗುತ್ತದೆ. ಸಿಕ್ಕಲಿಲ್ಲವೋ, ನಿಂತ ಕಡೆಯೇ ತೆಪ್ಪಗೆ ನಿಂತುಬಿಡುತ್ತದೆ. ಏಕೆಂದರೆ, ಚಿಗರಿಗಳ ಹಿಂದೆ ಓಡುವುದು ಚಿರತೆಗೆ ಸಾಧ್ಯವಿಲ್ಲ. ಅದನ್ನು ನೋಡಿಕೊಳ್ಳುವವ ಮತ್ತೆ ಅದನ್ನು ಗಾಡಿಯ ಮೇಲೆ ಬರುವಂತೆ ಮಾಡುವುದಕ್ಕೆ ಯಾವ ತೊಂದರೆ ತೆಗೆದುಕೊಳ್ಳಬೇಕಾಗಿಲ್ಲ. ಅದೇ ಅವನನ್ನು ಸಮೀಪಿಸಿ, ಮೈನೆಕ್ಕುತ್ತದೆ. ಆಗ ಅದಕ್ಕೆ ಮಾಂಸದ ಒಂದೆರಡು ತುಂಡುಗಳನ್ನೆಸೆದು, ಅದರ ಕಣ್ಣು ಮುಚ್ಚಿ ಸರಪಣಿಯಿಂದ ಕಟ್ಟಿಹಾಕುತ್ತಾನೆ. ನಮ್ಮ ಈ ಪ್ರಯಾಣದಲ್ಲಿ ಒಂದು ಚಿರತೆ ನಮಗೆಲ್ಲಾ ಬಹು ಆನಂದದ ಪ್ರಸಂಗವನ್ನು ಒದಗಿಸಿಕೊಟ್ಟಿತು. ಸೈನ್ಯದ ಮಧ್ಯೆ ಚಿಗರಿಗಳ ಗುಂಪೊಂದು ನೆಗೆದುಕೊಂಡು ಓಡಿಹೋಯಿತು.

ಇಂಥವು ದಿನಾ ನಡೆಯುತ್ತಲೇ ಇರುತ್ತವೆ. ಆದರೆ ಆ ದಿನ ಚಿಗರಿಗಳು ಗಾಡಿಯ ಮೇಲಿದ್ದ ಎರಡು ಚಿರತೆಗಳಿಗೆ ಸಮೀಪದಲ್ಲಿಯೇ ಓಡಿಹೋದುವು. ಎರಡು ಚಿರತೆಗಳಲ್ಲಿ ಒಂದು ತನ್ನನ್ನು ಕಟ್ಟಿದ ಸರಪಣಿಯನ್ನೇ ಕಿತ್ತುಕೊಂಡು ಚಿಗರಿಗಳ ಹಿಂದೆ ಓಡಿತು. ಆದರೆ ಒಂದು ಚಿಗರಿಯೂ ಸಿಕ್ಕಲಿಲ್ಲ. ಆಗ ಸುತ್ತಮುತ್ತ ಓಡಿಸುತ್ತಿದ್ದ ಜನರಿಗೆ ಹೆದರಿ ದಿಕ್ಕೆಟ್ಟ ಒಂದು ಚಿಗರಿ ಚಿರತೆಯ ಕಡೆಗೇ ನುಗ್ಗಿಬಿಟ್ಟಿತು. ಚಿರತೆ ಅದರ ಮೇಲೆ ಬಿದ್ದು ಆ ಬಡ ಪಾಯಿ ಚಿಗರಿಯನ್ನು ಹಿಡಿದುಕೊಂಡಿತು. ಸುತ್ತಮುತ್ತ ಒಂಟೆ ಕುದುರೆಗಳಿದ್ದರೂ ಲೆಕ್ಕಿಸದೆ ಅದು ಹಾಗೆ ಮಾಡಿತು. 'ಸಿಕ್ಕದೆ ತಪ್ಪಿಸಿಕೊಂಡ ಬೇಟೆಯನ್ನು ಮತ್ತೆ ಚಿರತೆ ಹಿಡಿಯುವುದಿಲ್ಲ' ಎಂಬ ಸಾಮಾನ್ಯ ಅಭಿಪ್ರಾಯವನ್ನು ಈ ಪ್ರಸಂಗ ಸುಳ್ಳುಮಾಡಿಬಿಟ್ಟಿತು.

ನೀಲ್ಗಾಯಿಗಳ ಬೇಟೆ ಅಂಥ ಆಸಕ್ತಿಯುಳ್ಳದ್ದೇನಲ್ಲ. ಅವುಗಳ ಸುತ್ತ ಭಾರಿ ಬಲೆಗಳನ್ನು ಬೀಸಿ ಹತ್ತಿರ ಹತ್ತಿರ ತರುತ್ತಾರೆ. ಜಾಗ ಕಿರಿದಾದಾಗ ಚಕ್ರವರ್ತಿ, ಅಮೀರರು ಮತ್ತು ಬೇಟೆಗಾರರು ಪ್ರವೇಶಿಸಿ ಬಾಣ ಈಟಿ ಕತ್ತಿ ಹಾಗೂ ಬಂದೂಕ ಗಳಿಂದ ಅವುಗಳನ್ನು ಕೊಲ್ಲುತ್ತಾರೆ. ಕೆಲವು ವೇಳೆ ಎಷ್ಟೊಂದು ಚಿಗರಿಗಳು ಸಿಕ್ಕಿಬಿಡುತ್ತ ವೆಂದರೆ ಚಕ್ರವರ್ತಿ ಅವುಗಳನ್ನು ಕೊಯ್ಯಿಸಿ ತೊಡೆ ಕಾಲುಗಳನ್ನು ಅಮೀರರುಗಳಿಗೆ ಮೆಹರ್ಬಾನಿಯಾಗಿ ಕಳುಹಿಸಿಕೊಡುತ್ತಾನೆ.

ಕೊಕ್ಕರೆಗಳ ಬೇಟೆಯ ವಿಧಾನ ಬಹಳ ಚೆಂದ ನೋಡಲಿಕ್ಕೆ. ಆ ಹಕ್ಕಿಗಳು ತಮ್ಮ ಮೇಲೆ ಎರಗಿದ ಗಿಡಗಗಳೊಡನೆ ಆಕಾಶದಲ್ಲಿ ಧೈರ್ಯದಿಂದ ಹೋರಾಡುವುದನ್ನು ನೋಡಿ ದಾಗ ರೋಮಾಂಚನವಾಗುತ್ತದೆ. ಕೆಲವು ವೇಳೆ ಗಿಡಗಗಳನ್ನೇ ಕೊಕ್ಕರೆಗಳು ಸಾಯಿಸಿ ದ್ದುಂಟು. ಆದರೆ ಅವು ತ್ವರಿತವಾಗಿ ಸುತ್ತುಹಾಕಲು ಸಾಧ್ಯವಾಗದ ಕಾರಣ ತಮ್ಮನ್ನು ಸುತ್ತುವರಿದ ಗಿಡಗಗಳಿಗೆ ಸಿಕ್ಕಿಬಿಡುತ್ತವೆ.

ಎಲ್ಲ ಬೇಟೆಗಳಿಗಿಂತ ಸಿಂಹದ ಬೇಟೆ ಅತ್ಯಂತ ಅಪಾಯಕಾರಿ ; ಅಷ್ಟೇ ಅಲ್ಲ, ರಾಜ ಯೋಗ್ಯವಾದುದೂ ಆಗಿದೆ. ವಿಶೇಷ ಅನುಮತಿಯಿಲ್ಲದೆ ರಾಜ ಮತ್ತು ರಾಜ ಕುಮಾರರನ್ನು ಬಿಟ್ಟರೆ ಬೇರೆಯವರು ಈ ಬೇಟೆ ಆಡುವಂತಿಲ್ಲ. ಬೇಟೆಗೆ ಪೂರ್ವಭಾವಿ ಯಾಗಿ ಸಿಂಹ ಎಲ್ಲಿದೆ ಎಂಬುದನ್ನು ಬೇಟೆ ಕಾಯುವವರು ಹೇಳಿದ ಜಾಗದಲ್ಲಿ ಒಂದು ಕತ್ತೆ ಯನ್ನು ಕಟ್ಟುತ್ತಾರೆ. ಸಿಂಹ ಕತ್ತೆಯನ್ನು ತಿಂದು ಹೊಟ್ಟೆ ತುಂಬಿಸಿಕೊಂಡನಂತರ ಮತ್ತೊಂದು ಪ್ರಾಣಿಗೆ ಆಸೆಪಡುವುದಿಲ್ಲ. ಅದು ದನ ಕುರಿಗಳ ತಂಟೆಗಾಗಲಿ ಕುರಿ ಕಾಯುವ ಕುರುಬರ ತಂಟೆಗಾಗಲಿ ಹೋಗದೆ ನೀರು ಕುಡಿಯಲು ಹೋಗುತ್ತದೆ. ನೀರು ಕುಡಿದು ಬಾಯಾರಿಸಿಕೊಂಡನಂತರ ತನ್ನ ಮೊದಲಿನ ಜಾಗಕ್ಕೆ ಬಂದು ಮಲಗಿಕೊಳ್ಳು ತ್ತದೆ. ಮಾರನೆಯ ದಿನ ಬೆಳಗಿನವರೆಗೆ ಮಲಗಿಕೊಂಡಿದ್ದು, ಮತ್ತೆ ಸಂಜೆ ಬಂದು ಅದೇ ಜಾಗದಲ್ಲಿ ಕಟ್ಟಿರುವ ಇನ್ನೊಂದು ಕತ್ತೆಯನ್ನು ತಿನ್ನುತ್ತದೆ. ಹೀಗೆ ಹಲವಾರು ದಿನಗಳು ಕತ್ತೆ ಕಟ್ಟಿ ಸಿಂಹ ಒಂದೇ ಜಾಗಕ್ಕೆ ಬರುವಂತೆ ಮಾಡುತ್ತಾರೆ. ರಾಜನು ಬರುತ್ತಿದ್ದಾನೆ ಎಂದು ಸುದ್ದಿ ತಿಳಿದ ಮೇಲೆ ಮತ್ತೊಂದು ಕತ್ತೆ ಕಟ್ಟುತ್ತಾರೆ. ಆದರೆ ಆ ಕತ್ತೆಗೆ

ಸಾಕಷ್ಟು ಅಫೀಮು ತಿನ್ನಿಸಿರುತ್ತಾರೆ. ಕತ್ತೆಯನ್ನು ತಿಂದ ಸಿಂಹಕ್ಕೆ ಮತ್ತುಬರುವಂತೆ ಮಾಡುವುದೇ ಇದರ ಉದ್ದೇಶ.

ಎರಡನೆಯ ಕೆಲಸವೆಂದರೆ, ಸುತ್ತುಮುತ್ತಲ ಹಳ್ಳಿಯ ಜನರನ್ನು ಹಿಡಿದು, ಅವರ ಸಹಾಯದಿಂದ ದೊಡ್ಡ ದೊಡ್ಡ ಬಲೆಗಳನ್ನು ಸಿಂಹ ಇರುವ ಪ್ರದೇಶದ ಸುತ್ತ ಬೀಸುವುದು—ನೀಲ್ಗಾಯಿ ಬೇಟೆಯಾಡುವಂತೆ. ಹೀಗೆ ಬೀಸಿದ ಬಲೆಗಳನ್ನು ನಿಧಾನವಾಗಿ ಹತ್ತಿರ ಹತ್ತಿರ ತರುತ್ತಾರೆ. ಈ ರೀತಿಯ ಸಿದ್ಧತೆಯಾದ ಮೇಲೆ ರಾಜನು ಆನೆಯ ಮೇಲೆ ಆಗಮಿಸುತ್ತಾನೆ. ಆನೆಯ ಮೈಯನ್ನು ಅಲ್ಲಲ್ಲಿ ಕಬ್ಬಿಣದ ತಗಡುಗಳಿಂದ ಮುಚ್ಚಿರುತ್ತಾರೆ. ರಾಜನು ತನ್ನ ಬೇಟೆಯ ಭಕ್ಷಿ ಮತ್ತು ಹಲವಾರು ಅಮೀರರುಗಳೊಡನೆ ಬರುತ್ತಾನೆ. ಎಲ್ಲರೂ ಆನೆಯ ಮೇಲೆ ಕುಳಿತಿರುತ್ತಾರೆ. ಇವರನ್ನು ಬಿಟ್ಟರೆ ಅನೇಕ ಜನ ಗೌರ್ಜ್ದಾರರುಗಳು ಕುದುರೆಗಳ ಮೇಲೂ ಬೇಟೆಗಾರರು ನಡೆದುಕೊಂಡೂ ಬರುತ್ತಾರೆ. ಬೇಟೆಗಾರರ ಕೈಯಲ್ಲಿ ತುಂಡು ಭಲ್ಲೆಗಳಿರುತ್ತವೆ. ಬಲೆಯ ಹೊರಭಾಗವನ್ನು ಸಮೀಪಿಸುತ್ತಲೇ ರಾಜ ಬಂದೂಕದಿಂದ ಸಿಂಹಕ್ಕೆ ಹೊಡೆಯುತ್ತಾನೆ. ಏಟು ತಿಂದ ಸಿಂಹ ಆನೆಯ ಕಡೆಗೆ ಹಾರುತ್ತದೆ. ಆದರೆ ಅದಕ್ಕೆ ಬಲೆ ಅಡ್ಡಬರುತ್ತದೆ. ರಾಜ ಬಂದೂಕ ಹಾರಿಸುತ್ತಲೇ ಇರುತ್ತಾನೆ. ಕೊನೆಗೆ ಸಿಂಹ ಸತ್ತುಬೀಳುತ್ತದೆ.

ಕಳೆದ ಬೇಟೆಯ ಕಾಲದಲ್ಲಿ ಸಿಟ್ಟಾದ ಸಿಂಹ ಬಲೆಯ ಮೇಲೆ ನೆಗೆದು, ಈಚೆಗೆ ಹಾರಿ ಬಂದು, ಸೈನಿಕನೊಬ್ಬನ ಮೇಲೆ ಬಿದ್ದು, ಅವನ ಕುದುರೆಯನ್ನು ಕೊಂದು ತಪ್ಪಿಸಿಕೊಂಡುಬಿಟ್ಟಿತು. ಅದು ಹೋದ ಜಾಗವನ್ನು ಮತ್ತೆ ಪತ್ತೆಹಚ್ಚಿ ಸುತ್ತಲೂ ಬಲೆ ಬೀಸಿದರು. ಆ ಸಂದರ್ಭದಲ್ಲಿ ಇಡೀ ಸೈನ್ಯವು ತುಂಬಾ ಅನಾನುಕೂಲಗಳಿಗೆ ಒಳಗಾಯಿತು ; ಸೈನ್ಯದಲ್ಲಿ ಭಾರಿ ಅಸ್ತವ್ಯಸ್ತ ಉಂಟಾಯಿತು. ಮೂರು ನಾಲ್ಕು ದಿನಗಳ ಕಾಲ ನಾವೆಲ್ಲ ಪರ್ವತದ ಕಡೆಯಿಂದ ಬರುತ್ತಿದ್ದ ಸುರಿಮಳೆ, ಬೆಳೆದ ಕುರುಚಲು ಗಿಡಗೆಂಟೆ, ನಮ್ಮ ಒಂಟೆಗಳನ್ನೇ ಮುಳುಗಿಸುವಷ್ಟು ಎತ್ತರವಾಗಿ ಬೆಳೆದ ಹುಲ್ಲು—ಇವುಗಳಲ್ಲಿ ಸಿಂಹಕ್ಕಾಗಿ ಹುಡುಕಬೇಕಾಯಿತು. ಬಜಾರುಗಳನ್ನು ಇಟ್ಟಿರಲಿಲ್ಲ. ಹತ್ತಿರ ಪಟ್ಟಣವಾಗಲಿ ಹಳ್ಳಿಯಾಗಲಿ ಇರಲಿಲ್ಲ. ಈ ಪರಿಸ್ಥಿತಿಯಲ್ಲಿ ಹಸಿವನ್ನು ನೀಗಿಕೊಂಡವರೇ ಪುಣ್ಯವಂತರೆಂದು ಹೇಳಬೇಕು ! ಈ ದುಃಸ್ಥಿತಿಗೆ ಸೈನ್ಯವನ್ನೆಲ್ಲಾ ಈಡುಮಾಡಿದ ದೊಡ್ಡ ಕಾರಣವೇನು ಎಂದು ಹೇಳಲೇನು ? ರಾಜನು ಸಿಂಹವನ್ನು ಕೊಲ್ಲುವುದು ಹೇಗೆ ಒಳ್ಳೆಯ ಶಕುನವೋ, ಏಟು ತಿಂದ ಸಿಂಹ ತಪ್ಪಿಸಿಕೊಳ್ಳುವುದು ಅಷ್ಟೇ ಅಪಶಕುನ. ಹೀಗಾಗಿ ಸಿಂಹದ ಬೇಟೆಯ ಮುಕ್ತಾಯವನ್ನು ಬಹಳ ಗಂಭೀರವಾದ ರೀತಿಯಲ್ಲಿ ಆಚರಿಸಲಾಗುವುದು. ರಾಜನು ಅಮೀರರುಗಳ ಸಭೆಯಲ್ಲಿ ಮಂಡಿಸಿರುವಾಗ ಕೊಂದ ಸಿಂಹವನ್ನು ಅವನ ಮುಂದೆ ತಂದಿಡುತ್ತಾರೆ. ಅದನ್ನು ಅಳೆದು ಮತ್ತು ಬೇರೆಲ್ಲ ಪರೀಕ್ಷೆಗಳನ್ನು ನಡೆಸಿದ ಮೇಲೆ ವಿವರಗಳನ್ನೆಲ್ಲಾ ರಾಜ್ಯದ ಪತ್ರಾಗಾರದಲ್ಲಿ (royal archives) ಬರೆದಿಡಲಾಗುವುದು. ಇಂಥ

ರಾಜ ಇಂಥ ದಿನ ಇಂತಿಂಥ ಬಣ್ಣದ, ಇಷ್ಟು ಉದ್ದದ ಹಲ್ಲಿನ, ಇಷ್ಟು ಉದ್ದದ ಉಗುರಿನ ಸಿಂಹವನ್ನು ಹೊಡೆದ ಎಂದು ಬರೆದಿಡುತ್ತಾರೆ.[1]

ಕತ್ತೆಗೆ ತಿನ್ನಿಸುವ ಅಫೀಮಿನ ಬಗ್ಗೆ ಒಂದು ಮಾತು. ಒಬ್ಬ ಮುಖ್ಯ ಬೇಟೆಗಾರ ಹೇಳಿದ, ಅದೆಲ್ಲ ಸುಳ್ಳು ಕತೆ ಎಂದು. ಹೊಟ್ಟೆ ತುಂಬ ತಿಂದಮೇಲೆ ಸಿಂಹ ಸಾಮಾನ್ಯ ವಾಗಿ ಮಲಗಿಯೇ ಮಲಗುತ್ತದೆ ಎಂಬುದು ಆತನ ಅಭಿಪ್ರಾಯ.

ಈ ಯಾತ್ರೆಯ ಕಾಲದಲ್ಲಿ ನಾವು ದಾಟಬೇಕಾಗಿ ಬಂದ ಭಾರಿ ಭಾರಿ ನದಿಗಳಿಗೆ ಸೇತುವೆಗಳೇ ಇರಲಿಲ್ಲ. ದೋಣಿಗಳನ್ನು ಇನ್ನೂರು ಮುನ್ನೂರು ದಾಪುಗಳ ಅಂತರದಲ್ಲಿ ಇಟ್ಟು ಅವುಗಳ ಮೇಲೆ ಬಹಳ ಕುಶಲತೆಯಿಂದ ಎರಡು ಸೇತುವೆಗಳನ್ನು ಕಟ್ಟಿ ಸೈನ್ಯವು ನದಿಯನ್ನು ದಾಟುತ್ತಿತ್ತು. ಜಾನುವಾರುಗಳು ಜಾರದಿರಲಿ ಎಂದು ದೋಣಿಗಳ ಮೇಲೆ ಹಲಗೆಗಳನ್ನು ಹಾಸಿ ಅವುಗಳ ಮೇಲೆ ಹುಲ್ಲು ಬೆರೆಸಿದ ಮಣ್ಣನ್ನು ಹಾಕುತ್ತಿದ್ದರು. ಬಹಳ ಅಪಾಯ ಇರುವುದು ಮತ್ತು ಅವ್ಯವಸ್ಥೆ ಆಗುವುದು ದಡಗಳ ಬಳಿ. ಅಲ್ಲಿ ನೂಕು ನುಗ್ಗಾಟ ಹೆಚ್ಚಿರುವುದಲ್ಲದೆ, ನದಿಯ ದಂಡೆಗಳ ಮಣ್ಣು ಮೆತ್ತಗಿರುವ ಕಾರಣ ಅದರಲ್ಲಿ ಗುಂಡಿಗೊಟರುಗಳಾಗಿ ಕುದುರೆಗಳೂ ಎತ್ತುಗಳೂ ಒಂದರ ಮೇಲೊಂದು ಮುಗ್ಗರಿಸಿ ಬಿಡುತ್ತವೆ. ಬಿದ್ದು ಒದ್ದಾಡುವ ಪ್ರಾಣಿಗಳ ಮೇಲೆಯೇ ಜನ ನಡೆದುಕೊಂಡು ನದಿ ದಾಟುತ್ತಾರೆ. ಒಂದೇ ದಿವಸದಲ್ಲಿ ನದಿ ದಾಟಬೇಕಾಗಿಬಂದರಂತೂ ಅವ್ಯವಸ್ಥೆ ಹೇಳ ತೀರದು. ಆದರೆ ಸಾಮಾನ್ಯವಾಗಿ ರಾಜನು ನದಿಯ ಈಚೆ ದಂಡೆಯಲ್ಲಿ ಅರ್ಧ ಹರಿದಾರಿ ದೂರದಲ್ಲಿ ತಂಗಿ ಸೇನೆಯು ದಾಟುವುದಕ್ಕೂ ತಾನು ದಾಟುವುದಕ್ಕೂ ಒಂದೆರಡು ದಿನ ಅಂತರ ಇರುವಂತೆ ನೋಡಿಕೊಳ್ಳುತ್ತಾನೆ. ಒಟ್ಟಿನಲ್ಲಿ, ಸೈನ್ಯವು ನದಿಯನ್ನು ದಾಟಲು ಮೂರು ದಿನಸಗಳ ಬಿಡುವು ಕೊಡುತ್ತಾನೆ.

ರಾಜನು ಒಂದು ಕಡೆ ಬೀಡುಬಿಟ್ಟಾಗ ಇಡೀ ಪಾಳೆಯದಲ್ಲಿರುವ ಸೈನಿಕರೂ

---

[1]ಅಕ್ಬರ್ ಚಕ್ರವರ್ತಿಗೆ ಬೇಟೆಯಲ್ಲಿ ತುಂಬಾ ಆಸಕ್ತಿ. ಆತ ತಾನು ಬೇಟೆಯಾಡಿದ ಪ್ರಾಣಿಗಳ ಲೆಕ್ಕವಷ್ಟೇ ಅಲ್ಲದೆ, ಯಾವ ಬಂದೂಕದಿಂದ ಯಾವ ಪ್ರಾಣಿಯನ್ನು ಕೊಲ್ಲಲಾಯಿತು ಎಂಬ ವಿವರಗಳನ್ನು ಬರೆಸುತ್ತಿದ್ದ. ಅವನ ಮಗ ಜಹಂಗೀರನಿಗೂ ಬೇಟೆಯ ಗೀಳು ತುಂಬಾ ಇತ್ತು. ಆದರೆ ಆತ ಆನೆ ಮತ್ತು ನೀರುಹಕ್ಕಿಗಳನ್ನು ಮಾತ್ರ ಬೇಟೆಯಾಡುತ್ತಿರಲಿಲ್ಲ. ಆತ ತನ್ನ ಜೀವನ ಚರಿತ್ರೆಯಲ್ಲಿ (memoirs) ತನ್ನ ಬೇಟೆಯ ಅನೇಕಾನೇಕ ಅನುಭವಗಳನ್ನು ಬರೆದಿಟ್ಟಿದ್ದಾನೆ. ಬೇಟೆಯ ಇಲಾಖೆಯ ಅಧಿಕಾರಿಗಳಿಗೆ ಹೇಳಿ 'ಬೇಟೆ ಪುಸ್ತಕ' ಎಂಬ ಪುಸ್ತಕ ಬರೆಸಿದ. ಅದರಲ್ಲಿ ತನ್ನ ಹನ್ನೆರಡನೇ ವಯಸ್ಸಿನಿಂದ ಐವತ್ತನೇ ವಯಸ್ಸಿನವರೆಗೆ ಮಾಡಿದ ಬೇಟೆಯ ವಿವರಗಳನ್ನು ಬರೆಸಿದ. ಈ ವಿವರಗಳ ಪ್ರಕಾರ ಆತ ೮೬ ಹುಲಿಗಳು, ೮೮ ಗುಬ್ಬಚ್ಚಿಗಳು, ೩,೨೭೬ ಕಾಗೆಗಳು ಮತ್ತು ೧೦ ಮೊಸಳೆಗಳು—ಇವೆಲ್ಲ ಸೇರಿ ಒಟ್ಟು ೧೭, ೧೬೭ ಮೃಗಪಕ್ಷಿಗಳ ಬೇಟೆಯಾಡಿದನೆಂದು ಹೇಳಲಾಗಿದೆ.

ಮತ್ತಿತರರೂ ಸೇರಿದರೆ ಆಗುವ ಒಟ್ಟು ಸಂಖ್ಯೆ ಎಷ್ಟು ಎಂದು ಹೇಳುವುದು ಸುಲಭವಲ್ಲ. ಒಬ್ಬೊಬ್ಬರು ಒಂದೊಂದು ಲೆಕ್ಕ ಹೇಳುತ್ತಾರೆ. ಈ ಯಾತ್ರೆಯಲ್ಲಿ ನನಗೆ ತಿಳಿದ ಮಟ್ಟಿಗೆ ಒಂದು ಲಕ್ಷ ಕುದುರೆ ಸವಾರರು, ಒಂದೂವರೆ ಲಕ್ಷಕ್ಕೂ ಹೆಚ್ಚಿನ ಕುದುರೆಗಳು, ಹೇಸರ ಕತ್ತೆಗಳು ಮತ್ತು ಆನೆಗಳು ಇದ್ದುವೆಂದು ನನ್ನ ಅಂದಾಜು. ಇವಲ್ಲದೆ, ಐವತ್ತು ಸಾವಿರಕ್ಕೆ ಕಡಿಮೆ ಇಲ್ಲದಷ್ಟು ಒಂಟೆಗಳೂ ಇದ್ದುವು. ಇಷ್ಟರ ಮೇಲೆ ಬಜಾರುಗಳಲ್ಲಿ ಕೆಲಸಮಾಡುವ ಜನರ ಇಡೀ ಸಂಸಾರವನ್ನು ಸಾಗಿಸುವುದಕ್ಕೆ ಬೇಕಾದ ಐವತ್ತು ಸಾವಿರಕ್ಕೂ ಹೆಚ್ಚು ಎತ್ತುಗಳು ಮತ್ತು ಕುದುರೆಗಳು. ಈ ಬಡ ಜನ ಪ್ರಯಾಣ ಮಾಡುವಾಗ ನಮ್ಮ ಜಿಪ್ಸಿ (Gipsy)ಗಳಂತೆ ತಮ್ಮ ದನಸ ಧಾನ್ಯ, ಹೆಂಡತಿ ಮಕ್ಕಳು, ಮಡಕೆಕುಡಿಕೆ, ಮತ್ತು ಎತ್ತುಕತ್ತೆಗಳ ಸಮೇತ ಹೊರಟುಬಿಡುತ್ತಾರೆ. ಸೈನ್ಯದಲ್ಲಿ ಸೇವಕ ವೃತ್ತಿಯಲ್ಲಿ ತೊಡಗಿರುವ ಆಳುಕಾಳುಗಳ ಸಂಖ್ಯೆಯೂ ಅಪಾರವಾಗಿರಬೇಕು. ಏಕೆಂದರೆ, ಅವರಿಲ್ಲದೆ ನಡೆಯುವುವೇ ಇಲ್ಲ. ನನ್ನ ಅಂತಸ್ತು ಎರಡು ಕುದುರೆಗಳ ಸರದಾರನದು. ಆದರೂ ಮೂರು ಜನ ಆಳುಗಳಿಲ್ಲದೆ ಆಗುತ್ತಿರಲೇ ಇಲ್ಲ. ಒಟ್ಟನಲ್ಲಿ, ಇಡೀ ಪಾಳೆಯದಲ್ಲಿ ನೂರು ನಾಲ್ಕು ಲಕ್ಷ ಜನರಿದ್ದಾರೆಂದು ಬಹು ಜನರ ಅಭಿಪ್ರಾಯ. ಆದರೆ ಕೆಲವರು ಇದು ಕಡಿಮೆ ಸಂಖ್ಯೆಯೆಂದೂ, ಮತ್ತೆ ಕೆಲವರು ಇದು ತುಂಬಾ ಹೆಚ್ಚಿನ ಸಂಖ್ಯೆಯೆಂದೂ ಹೇಳುತ್ತಾರೆ. ನಾನು ಇಷ್ಟು ಮಾತ್ರ ಧೈರ್ಯವಾಗಿ ಹೇಳಬಲ್ಲೆ : ಆ ಜನಸಂದಣಿ ಅಗಾಧವಾದದ್ದು ಹಾಗೂ ನಂಬಲಸಾಧ್ಯವಾದದ್ದು. ರಾಜಧಾನಿಯಾದ ದಿಲ್ಲಿಯ ಇಡೀ ಜನರೆಲ್ಲ ಈ ಪಾಳೆಯದಲ್ಲಿರುತ್ತಾರೆ. ಏಕೆಂದರೆ, ಅವರೆಲ್ಲರ ಜೀವನಕ್ಕೆ ಚಕ್ರವರ್ತಿಯ ಆಸ್ಥಾನ ಮತ್ತು ಸೈನ್ಯಗಳೇ ಆಧಾರ. ಹೀಗಾಗಿ ಅವರು ಇಂಥ ಯಾತ್ರೆಗಳಲ್ಲಿ ಭಾಗವಹಿಸಬೇಕೇ ಹೊರತು ಬೇರೆ ಮಾರ್ಗವಿಲ್ಲ. ಹೋಗದೇಹೋದರೆ ಹೊಟ್ಟೆಗಿಲ್ಲದೆ ಸಾಯಬೇಕಾಗುತ್ತದೆ.

ಇಷ್ಟೊಂದು ಅಪಾರ ಸಂಖ್ಯೆಯ ಜನ, ದನ, ಕುದುರೆ ಕತ್ತೆಗಳನ್ನು ಹೊರಗಡೆ ಹೇಗೆ ಸಾಕುತ್ತಾರಪ್ಪ ಎಂದು ನೀವು ಕೇಳಬಹುದು. ಇದಕ್ಕೆ ಉತ್ತರವಾಗಿ, ಇಂಡಿಯನರ ಮಿತಿಯಾದ ಆಚಾರ ಮತ್ತು ಸರಳವಾದ ಆಹಾರ ಎಂದು ಹೇಳಬೇಕು. ಐದಿಪ್ಪತ್ತರ ಸಹಸ್ರದಳಗಳಲ್ಲಿ (Five Score Thousand Troopers) ಹತ್ತರಲ್ಲಿ ಒಂದು ಭಾಗ, ಕೊನೆಗೆ ಇಪ್ಪತ್ತರಲ್ಲಿ ಒಂದು ಭಾಗವೂ ಕೂಡ ಮಾಂಸಾಹಾರ ಮಾಡುವುದಿಲ್ಲ. ಅನ್ನ ಮತ್ತು ತರಕಾರಿ ಸಾರಿನ 'ಕಿಚೆರಿ' ಮಾಡಿಕೊಂಡು, ಮೇಲೊಂದಿಷ್ಟು ತುಪ್ಪ ಹಾಕಿಕೊಂಡರೆ ಅವರ ಊಟ ಆಯಿತು. ಒಂಟೆಗಳ ವಿಚಾರ ಹೇಳಬೇಕೆಂದರೆ, ಅವು ಆಯಾಸ ಹಸಿವು ಮತ್ತು ಬಾಯಾರಿಕೆಗಳನ್ನು ತಡೆದುಕೊಳ್ಳುವುದಲ್ಲದೆ, ಏನು ಬೇಕಾದರೂ ತಿಂದು ಹೊಟ್ಟೆ ತುಂಬಿಸಿಕೊಂಡುಬಿಡುತ್ತವೆ. ಪ್ರತಿ ಪ್ರಯಾಣದ ನಂತರ ಅವುಗಳನ್ನು ಮೇಯಲು ಬಿಟ್ಟುಬಿಡುತ್ತಾರೆ. ತಿಂದದ್ದೆಲ್ಲಾ ಅವುಗಳ ಮೇವು. ಇನ್ನೊಂದು ಮುಖ್ಯವಾದ ವಿಷಯವನ್ನು ಗಮನಿಸಬೇಕು. ದಿಲ್ಲಿಯ ಬಜಾರುಗಳಿಗೆ ಸಾಮಾನುಸರಂಜಾಮುಗಳನ್ನು

ಒದಗಿಸುವ ಜನ ಈ ಠಾಣ್ಯಗಳಿಗೂ ಒದಗಿಸಲೇಬೇಕು. ಹೀಗಾಗಿ, ದಿಲ್ಲಿಯಲ್ಲಿರುವ ಅಂಗಡಿಗಳೂ ಬೀಡಿನಲ್ಲಿರುವ ಅಂಗಡಿಗಳೂ ಎಲ್ಲಾ ಒಂದೆ.

ಈ ಬಡ ಜನ ಕುದುರೆಗಳಿಗೂ ಎತ್ತು ಕತ್ತೆಗಳಿಗೂ ಬೇಕಾದ ಮೇವು ಸಂಗ್ರಹಿಸು ವುದಕ್ಕೆ ಪಡಬಾರದ ಕಷ್ಟ ಪಡುತ್ತಾರೆ. ಊರಿಂದ ಊರಿಗೆ ಅಲೆದು, ಹುಲ್ಲು ಸಂಗ್ರಹಿಸಿ ಸೈನ್ಯಕ್ಕೆ ಹೆಚ್ಚಿಗೆ ಬೆಲೆಗೆ ಮಾರುತ್ತಾರೆ. ಗರಿಕೆ ಹುಲ್ಲನ್ನು ಹೆರೆಗುದ್ದಲಿಗಳಿಂದ ಹೆರೆದು, ಅದನ್ನು ಚಚ್ಚಿ ತೊಳೆದು ಸಂದರ್ಭಕ್ಕೆ ತಕ್ಕ ಹಾಗೆ ಹೆಚ್ಚು ಅಥವಾ ಕಡಿಮೆ ಬೆಲೆಗೆ ಮಾರು ವುದು ಸಾಮಾನ್ಯ ಪದ್ಧತಿ.

ರಾಜನಿಗೆ ಸಂಬಂಧಪಟ್ಟ ಒಂದು ವಿಚಿತ್ರ ಸಂಗತಿಯನ್ನು ಹೇಳುವುದು ಮರೆತು ಹೋಗಿತ್ತು: ಆತ ತನ್ನ ಬಿಡಾರವನ್ನು ಬೇರೆ ಬೇರೆ ಕಡೆಗಳಿಂದ ಪ್ರವೇಶಿಸುತ್ತಾನೆ. ಒಂದು ದಿನ ಕೆಲವು ಅಮೀರರುಗಳ ಡೇರೆಯ ಕಡೆಯಿಂದ ಪ್ರವೇಶಿಸಿದರೆ, ಇನ್ನೊಂದು ದಿನ ಬೇರೆ ಅಮೀರರುಗಳ ಡೇರೆಯ ಕಡೆಯಿಂದ ಪ್ರವೇಶಿಸುತ್ತಾನೆ. ಈ ರೀತಿ ದಾರಿ ಬದ ಲಾಯಿಸುವುದು ಉದ್ದೇಶಪೂರ್ವಕವಾಗಿಯೇ. ಏಕೆಂದರೆ, ಅವನು ತನ್ನ ಬಿಡದಿಯ ಬಳಿ ಇರಲು ಅಮೀರರುಗಳಿಗೆ ಅವಕಾಶಕೊಟ್ಟಿರುವುದು ಒಂದು ರೀತಿಯ ಗೌರವ ತೋರಿಸಿ ದಂತೆಯೇ. ಈ ಕಾರಣ ರಾಜನು ಈ ಅಮೀರರ ಡೇರೆಗಳ ಮುಂದೆ ಹಾದುಹೋಗು ವಾಗ ಅವರು ಡೇರೆಗಳಿಂದ ಹೊರಬಂದು ತಮ್ಮ ಸಂಬಳ ಸಾರಿಗೆಗಳಿಗನುಸಾರವಾಗಿ ಇಪ್ಪತ್ತರಿಂದ ಐವತ್ತು ಚಿನ್ನದ ಮೊಹರುಗಳ ನಜರು ಒಪ್ಪಿಸುತ್ತಾರೆ.

ದಿಲ್ಲಿಗೂ ಲಾಹೋರಿಗೂ ಮಧ್ಯೆ ಇರುವ ನಗರಗಳು ಮತ್ತು ಪಟ್ಟಣಗಳ ಬಗೆ ನಾನೇನೂ ಹೇಳುವುದಿಲ್ಲ. ಅವುಗಳನ್ನು ನೋಡಿದ್ದರೆ ತಾನೆ ಹೇಳುವುದು! ನನ್ನ ಹಿತೈಷಿ ಆಗಾನ ಬಿಡಾರ ಸೈನ್ಯದ ಮಧ್ಯೆ ಇರದೆ ಬಲಭಾಗದ ಮಂಚೂಣಿಯಲ್ಲಿ ಇದ್ದ ಕಾರಣ ವಾಗಿಯೂ, ಸೈನ್ಯವು ಹೆಚ್ಚಾಗಿ ಹೆದ್ದಾರಿಯನ್ನೇ ಹಿಡಿದು ಸಾಗುತ್ತಿದ್ದುದರಿಂದಲೂ, ನಾವು ರಾತ್ರಿಯ ಹೊತ್ತು ನಕ್ಷತ್ರಗಳ ಗುರುತು ಹಿಡಿದು ಹೊಲಗದ್ದೆಗಳಲ್ಲಿಯೂ, ಕಾಲು ದಾರಿಗಳಲ್ಲಿಯೂ ದಾರಿ ಸಾಗಿಸುತ್ತಿದ್ದೆವು. ಒಮ್ಮೊಮ್ಮೆ ದಾರಿ ತಪ್ಪಿ ಮೂರು ನಾಲ್ಕು ಹರಿದಾರಿಗಳ ಬದಲು ಐದಾರು ಹರಿದಾರಿಗಳ ದೂರ ನಡೆದು ಹೋಗಿ ಬೆಳಕು ಹರಿದಾಗ ಮತ್ತೆ ಸರಿಯಾದ ದಾರಿ ಹಿಡಿಯುತ್ತಿದ್ದೆವು.

**ಲಾಹೋರಿನಿಂದ ಬರೆದ ಮೂರನೇ ಪತ್ರ :**

ಮಿತ್ರ, ಯಾವ ರಾಜ್ಯಕ್ಕೆ ಲಾಹೋರು ರಾಜಧಾನಿಯಾಗಿದೆಯೋ ಆ ರಾಜ್ಯಕ್ಕೆ 'ಪಂಜೆ–ಆಬ್'(penje-ab: ಪಾಂಚ್–ಆಬ್)ಎಂದು ಹೆಸರಿಟ್ಟಿರುವುದಕ್ಕೆ ಕಾರಣವಿಲ್ಲದೆ ಇಲ್ಲ. ಕಾಶ್ಮೀರವನ್ನು ಬಳಸಿಕೊಂಡಿರುವ ಪರ್ವತಗಳಿಂದ ಇಳಿದು ಬರುವ ಐದು ನದಿಗಳು ಈ ರಾಜ್ಯದಲ್ಲಿ ಹರಿದು, 'ಇಂಡಸ್' (Indus) ನದಿಯನ್ನು ಸೇರುತ್ತವೆ. ಈ ಇಂಡಸ್ ನದಿ ಪರ್ಷಿಯ ಖಾರಿಯ ಮುಖದಲ್ಲಿರುವ 'ಸಿಂದಿ' (Seyndi) ಎಂಬ ಸ್ಥಳದಲ್ಲಿ ಸಮುದ್ರ

ವನ್ನು ಸೇರುತ್ತದೆ. ಲಾಹೋರು ಹಿಂದಿನವರು ಹೇಳಿದ 'ಬುಸೆಫಲೋಸ್' (Bucefalos) ಆಗಿರಬಹುದೇ ಅಥವಾ ಇಲ್ಲವೇ ಎಂಬುದನ್ನು ಹೇಳಲು ನಾನು ಶಕ್ತನಲ್ಲ. ಇಲ್ಲಿ ಅಲೆಕ್ಸಾಂಡರನು ಸಿಕಂದರ್-ಫಿಲಿಪೋಸ್ ಅಥವಾ ಫಿಲಿಪನ ಮಗ ಅಲೆಕ್ಸಾಂಡರ್ ಎಂಬ ಹೆಸರಿನಲ್ಲಿ ಪ್ರಸಿದ್ಧನಾಗಿದ್ದಾನೆ. ಅವನ ಕುದುರೆಯ ವಿಚಾರ ಇಲ್ಲಿಯ ಜನರಿಗೆ ಗೊತ್ತೇ ಇಲ್ಲ.[1]

ಐದು ನದಿಗಳಲ್ಲಿ ಒಂದು ನದಿಯ ಬಳಿ ಲಾಹೋರ್ ಪಟ್ಟಣವನ್ನು ಕಟ್ಟಿದ್ದಾರೆ. ನದಿಯ ದಂಡೆಗಳನ್ನು ಕಲ್ಲು ಕಟ್ಟಡದಿಂದ ಭದ್ರಗೊಳಿಸಿಲ್ಲವಾದ ಕಾರಣ ಆಗಾಗ್ಗೆ ಪ್ರವಾಹ ಗಳಿಂದಾಗಿ ನದಿಯ ಪಾತ್ರ ಬದಲಾಯಿಸುತ್ತಾ ಹೋಗುತ್ತಿದೆ. ಕೆಲವೇ ವರ್ಷಗಳಲ್ಲಿ ನದಿ ಲಾಹೋರಿನಿಂದ ಕಾಲು ಹರಿದಾರಿ ದೂರ ಹಿಂದೆ ಸರಿದುಬಿಟ್ಟಿದೆ. ಇದರಿಂದ ಜನ ಗಳಿಗೆ ತುಂಬಾ ತಾಪತ್ರಯಗಳುಂಟಾಗುತ್ತವೆ. ದಿಹ್ಲಿ ಮತ್ತು ಆಗ್ರಾದ ಕಟ್ಟಡಗಳಂತೆ ಇಲ್ಲಿಯ ಕಟ್ಟಡಗಳಿಲ್ಲ. ಇಲ್ಲಿಯವು ಬಹಳ ಎತ್ತರವಾಗಿವೆ. ಆದರೆ ಮೊಗಲ್ ಚಕ್ರವರ್ತಿಯ ಆಸ್ಥಾನ ಕಳೆದ ಇಪ್ಪತ್ತು ವರ್ಷಗಳಿಗಿಂತಲೂ ಹೆಚ್ಚಿನ ಕಾಲದಿಂದ ದಿಹ್ಲಿ ಮತ್ತು ಆಗ್ರಾಗಳಲ್ಲಿ ಇದ್ದುಬಿಟ್ಟಿರುವ ಕಾರಣ, ಲಾಹೋರಿನ ಬಹುತೇಕ ಮನೆಗಳು ಪಾಳು ಬೀಳುತ್ತಿವೆ. ವಾಸ್ತವವಾಗಿ ಕಳೆದ ಹತ್ತಾರು ವರ್ಷಗಳಿಂದ ಬಿದ್ದ ಭಾರಿ ಮಳೆಯ ಕಾರಣವಾಗಿ ಎಷ್ಟೋ ಮನೆಗಳು ಇದ್ದಕ್ಕಿದ್ದಂತೆ ಕುಸಿದು ಮನೆಯಲ್ಲಿದ್ದ ಅನೇಕ ಜನರನ್ನು ಆಹುತಿ ತೆಗೆದುಕೊಂಡಿವೆ. ಈಗಲೂ ಗಮನಿಸಬೇಕಾದ ಐದಾರು ಬೀದಿ ಗಳಿವೆ. ಇವುಗಳಲ್ಲಿ ಎರಡು ಮೂರು ಒಂದೊಂದು ಹರಿದಾರಿಯಷ್ಟು ಉದ್ದವಾಗಿವೆ. ಆದರೆ ಆ ಬೀದಿಗಳಲ್ಲಿಯೂ ಬಿದ್ದುಹೋದ ಮನೆಗಳಿಗೆ ಲೆಕ್ಕವಿಲ್ಲ. ನದಿಯು ತನ್ನ ಪಾತ್ರ ಬದಲಿಸಿರುವ ಕಾರಣ ರಾಜನ ಅರಮನೆ ಈಗ ನದಿಯ ದಂಡೆಯಲ್ಲಿಲ್ಲ. ಈ ಅರಮನೆ ಎತ್ತರವಾಗಿದ್ದು ಭವ್ಯವಾಗಿ ಕಾಣುತ್ತದೆ. ಆದರೆ ಇದನ್ನು ದಿಹ್ಲಿ ಆಗ್ರಾಗಳಲ್ಲಿ ರುವ ಅರಮನೆಗಳಿಗೆ ಹೋಲಿಸುವುದಕ್ಕಾಗುವುದಿಲ್ಲ.

ನಾವು ಈ ನಗರಕ್ಕೆ ಬಂದು ಎರಡು ತಿಂಗಳಿಗೂ ಹೆಚ್ಚಾಯಿತು. ಕಾಶ್ಮೀರಕ್ಕೆ ಹೋಗಲು ಅಲ್ಲಿಯ ಪರ್ವತಗಳನ್ನು ಆವರಿಸಿರುವ ಹಿಮಗಡ್ಡೆ ಕರಗಲೆಂದು ಕಾಯು ತ್ತಿದ್ದೇವೆ. ಕೊನೆಗೆ ಹೊರಡುವ ದಿನ ಗೊತ್ತಾಗಿದೆ. ರಾಜ ಲಾಹೋರನ್ನು ಎರಡು ದಿನಗಳ ಮೊದಲೇ ಬಿಟ್ಟ. ನಾವು ನಾಳೆ ಹೊರಡಲಿದ್ದೇವೆ. ನಿನ್ನೆ ನಾನೊಂದು ಸುಂದರ

---

[1] ಅಲೆಕ್ಸಾಂಡರ್ (ಕ್ರಿ. ಪೂ. 356–323) ಮೆಸಿಡೋನಿಯಾ ದೇಶದ ದೊರೆ. ಗ್ರೀಸ್, ಪರ್ಷಿಯಾ ಮೊದಲಾದ ರಾಜ್ಯಗಳನ್ನು ಗೆದ್ದು ಸಿಂಧೂನದಿಯ ಪ್ರದೇಶದವರೆಗೂ ಬಂದು ಪುರೂರವನನ್ನು (Porur) ಸೋಲಿಸಿದ. ಬೆರ್ನ್ಯೇ ಊಹಿಸುವಂತೆ ಲಾಹೋರಿನ ಹೆಸರು ಹಿಂದೆ "ಬುಸೆಫಲೋಸ್" ಆಗಿರಲಿಲ್ಲ. ಅಲೆಕ್ಸಾಂಡರನು ತನ್ನ ದಂಡೆಯಾತ್ರೆಗಳಲ್ಲಿ ಉಪಯೋಗಿಸಿದ ಪ್ರಸಿದ್ಧ ಕುದುರೆಯ ಹೆಸರು ಬೂಸೆಫಾಲಸ್ (Buceph-a-lus).

ವಾದ ಕಾಶ್ಮೀರಿ ಡೇರೆ ಕೊಂಡುಕೊಂಡೆ. ಬೇರೆಯವರಂತೆ ನಾನೂ ಕೊಂಡು ಕೊಳ್ಳಬೇಕೆಂದು ಹೇಳಿದ್ದರಿಂದ ಹಾಗೆ ಮಾಡಿದ್ದೇನೆ. ದೊಡ್ಡದೂ ಬಹಳ ಭಾರವೂ ಆದ ನನ್ನ ಹಳೆಯ ಡೇರೆಯನ್ನು ತೆಗೆದುಕೊಂಡು ಹೋಗಬಾರದೆಂದು ನನಗೆ ಸಲಹೆ ಮಾಡಿದರು. ಕಾಶ್ಮೀರದ ಪರ್ವತ ಪ್ರದೇಶದಲ್ಲಿ ನಮ್ಮ ಡೇರೆಗಳಿಗೆಲ್ಲ ಜಾಗ ಸಿಕ್ಕುವುದು ಕಷ್ಟವೆಂದೂ, ಒಂಟೆಗಳನ್ನು ಅಲ್ಲಿಗೆ ಸಾಗಿಸಿಕೊಂಡು ಹೋಗುವುದು ಅಸಾಧ್ಯವೆಂದೂ, ಅಲ್ಲದೆ ನಮ್ಮ ಸಾಮಾನುಸರಂಜಾಮುಗಳನ್ನು ಸಾಗಿಸಲು ಆಳುಗಳ ಕೂಲಿನಾಲಿ ತುಂಬಾ ದುಬಾರಿ ಆಗುವುದೆಂದೂ ಹೇಳಿದರು. ಮಿತ್ರ, ಹೋಗಿಬರುವೆ.

ಲಾಹೋರಿನಿಂದ ಕಾಶ್ಮೀರಕ್ಕೆ ಹೋಗುವ ಮಾರ್ಗದಲ್ಲಿ ನಾಲ್ಕನೇ ದಿನ ಸೈನ್ಯವು ಬೀಡು ಬಿಟ್ಟ ಒಂದು ಸ್ಥಳದಿಂದ ಬರೆದ ನಾಲ್ಕನೇ ಪತ್ರ:

ಮೆಸ್ಯ, ಮೋಕಾ (Moka) ದ ಬಿಸಿಲನ್ನು ತಾಳಿಕೊಂಡು ಬದುಕಿಬಂದ ಮೇಲೆ ಈ ಭೂಮಿಯ ಮೇಲೆಲ್ಲಿಯೂ ಮತ್ತೆ ಆ ತೊಂದರೆ ಒದಗಲಾರದೆಂದು ಆಶಿಸಿದ್ದೆ. ಆದರೆ ಲಾಹೋರು ಬಿಟ್ಟ ನಾಲ್ಕು ದಿನಗಳ ಮೇಲೆ ಆ ಆಶೆ ಹೋಗಿಬಿಟ್ಟದೆ. ಲಾಹೋರಿನಿಂದ ಭಿಂಭಾರ್ (Bhimbar) ವರೆಗೆ ಹನ್ನೊಂದು ಹನ್ನೆರಡು ದಿನಗಳ ಕಾಲ ಸೈನ್ಯ ದಾರಿ ಸಾಗಿಸಿದಾಗ ಇಂಡಿಯನರು ಸಹ ಆ ಬಿಸಿಲಿನ ಬಗ್ಗೆ ತುಂಬಾ ಗೊಣಗಾಡಿದರು. ನಾನಂತೂ ಆ ಬಿಸಿಲಿನ ತಾಪದಿಂದ ಕಂಗಾಲಾಗಿಬಿಟ್ಟದ್ದೇನೆ. ಬೆಳಗ್ಗೆ ಎದ್ದರೆ ಸಂಜೆಯ ವರೆಗೆ ಬದುಕುವೆನೆ ಎಂಬ ಸಂದೇಹ ಬರುತ್ತದೆ. ಕಾಶ್ಮೀರದ ಎತ್ತರದ ಪರ್ವತಗಳೇ ಈ ವಿಪರೀತ ಬಿಸಲಿಗೆ ಕಾರಣ. ನಾವು ಹೋಗುತ್ತಿರುವ ದಾರಿಯ ಉತ್ತರಕ್ಕಿರುವ ಈ ಪರ್ವತಗಳು ಆ ಕಡೆಯಿಂದ ಬರುವ ತಂಗಾಳಿಯನ್ನು ತಡೆದುಬಿಡುವುದಲ್ಲದೆ, ಅವು ಸುಡುವ ಸೂರ್ಯನ ಕಿರಣಗಳನ್ನು ಪ್ರತಿಬಿಂಬಿಸುತ್ತವೆ. ಹೀಗಾಗಿ ಬಿಸಿಲಿನ ತಾಪದಿಂದ ಉಸಿರುಕಟ್ಟಿದಂತಾಗುತ್ತದೆ. ನಾಳೆ ನಾನು ಸತ್ತರೂ ಸಾಯಬಹುದು ! ಹೀಗಿರುವಾಗ ಅದರ ಬಗ್ಗೆ ನಾನೇಕೆ ದೂರು ಹೇಳಲಿ.

ಐದನೇ ದಿನ ಬರೆದ ಪತ್ರ:

ಮೆಸ್ಯ, ನಾನು ನೆನ್ನೆಯ ದಿನ ಇಂಡಿಯಾದ ದೊಡ್ಡ ನದಿಗಳಲ್ಲಿ ಒಂದಾದ ಚೀನಾಬ್ ನದಿಯನ್ನು ದಾಟಿದೆ. ಗಂಗಾನದಿಯ ನೀರು ತೀರಿಹೋಗಿರುವುದರಿಂದ ಅಮೀರರು ಈ ನದಿಯ ಸೊಗಸಾದ ನೀರನ್ನು ತುಂಬಿಕೊಂಡರು. ಈ ನದಿಯನ್ನು ದಾಟಿದರೆ ಕಾಶ್ಮೀರ ಸಿಕ್ಕುತ್ತೆ ಎಂದು ಹೇಳುತ್ತಾರೆ. ಅಲ್ಲಿಗೆ ಹೋಗಿ ಆ ಮಂಜುಗಡ್ಡೆ ನೋಡಿದರೆ ನಮ್ಮ ಶ್ರಮವೆಲ್ಲ ಸಾರ್ಥಕವಾಗುವುದಂತೆ. ದಿನೇ ದಿನೇ ಬಿಸಿಲಿನ ಧಗೆ ಹೆಚ್ಚುತ್ತಿದೆ. ದೋಣಿಗಳ ಸೇತುವೆಯನ್ನು ನಾನು ಮಟಮಟ ಮಧ್ಯಾಹ್ನ ದಾಟಿದೆ, ನಿಜ. ಆದರೆ ಹಾಗೆ ಮಾಡುವ ಬದಲು ನಾನು ನನ್ನ ಡೇರೆಯಲ್ಲಿಯೇ ಇದ್ದರೆ ಆ ಸೆಕೆಯಲ್ಲಿ ಒದ್ದಾಡಬೇಕಾಗುತ್ತಿತ್ತು. ತಾಪತ್ರಯವಿಲ್ಲದೆ ನದಿ ದಾಟಬೇಕೆಂಬ ನನ್ನ ಆಸೆ ಸದ್ಯ ನೆರವೇರಿತು,

ನದಿಯನ್ನು ತೊಂದರೆಯಿಲ್ಲದೆ ದಾಟಿದೆ. ಮಧ್ಯಾಹ್ನ ನದಿ ದಾಟದೆ ಎಲ್ಲರಂತೆ ಸಂಜೆ ತಂಪುಹೊತ್ತಿನಲ್ಲಿ ದಾಟಬೇಕೆಂದು ನಿರ್ಧರಿಸಿದ್ದರೆ ಅನಾಹುತಕ್ಕೆ ಒಳಗಾಗಿಬಿಡುತ್ತಿದ್ದೆ. ದಿಲ್ಲಿಯಿಂದ ಸೈನ್ಯವು ಹೊರಟಮೇಲೆ ನಾವು ಎಲ್ಲೆಲ್ಲಿ ನದಿ ದಾಟಿದೆವೊ ಅಲ್ಲೆಲ್ಲ ಇರುತ್ತಿದ್ದ ಅವ್ಯವಸ್ಥೆ ಹೇಳತೀರದು. ಈ ದಡದಿಂದ ದೋಣಿಯವರೆಗೆ ಹೋಗುವುದು, ಆ ಕಡೆ ದೋಣಿ ಇಳಿದು ದಡ ಸೇರುವುದು—ಇದು ಒಂದು ದೊಡ್ಡ ಸಾಹಸವೇ ಸರಿ. ನದಿಯ ಪಾತ್ರದ ಮರಳಿನಲ್ಲಿ ಕಾಲಿಟ್ಟಾಗ ಕಾಲು ನೀರಿನಲ್ಲಿ ಕೊರೆದುಹೋಗಿ ಗುಂಡಿಗೊಟರು ಗಳುಂಟಾಗುತ್ತವೆ. ಆ ಗುಂಡಿಗೊಟರುಗಳಲ್ಲಿ ಒಂಟೆ, ಎತ್ತು, ಕುದುರೆ ಮುಗ್ಗರಿಸಿ ಬೀಳುವುವು. ಹಿಂದಿನಿಂದ ಒಂದೇ ಸಮನೆ ಕೋಲಿನಿಂದ ಬಾರಿಸಿಕೊಳ್ಳುವ ಒಂಟೆ, ಎತ್ತು, ಕತ್ತೆ, ಕುದುರೆಗಳು ಅವುಗಳಲ್ಲಿ ಬೀಳುವುವು. ಅಮೀರರ ಕಡೆಯ ಅಧಿಕಾರಿಗಳು ಮತ್ತು ಸಿಪಾಯಿಗಳು ತಮ್ಮ ಧಣಿಗಳಿಗೂ, ಅವರ ಸಾಮಾನುಗಳಿಗೂ ದಾರಿಮಾಡಿಕೊಡಲು ಇಂಥ ಸಂದರ್ಭಗಳಲ್ಲಿ ತಮ್ಮ ಬೆತ್ತವನ್ನು ಇಷ್ಟ ಬಂದಂತೆ ಉಪಯೋಗಿಸುತ್ತಾರೆ. ನನ್ನ ನವಾಬ್ ಆಗಾನ ಒಂದು ಒಂಟೆಯೂ, ಅದರ ಮೇಲೆ ಹೇರಿದ್ದ ಕಬ್ಬಿಣದ ಒಲೆಯೂ (oven='ತಂದೂರ್' ಎಂಬ ಒಲೆ) ಕಳೆದುಹೋದುವು. ಈಗ ನನಗೆ ಮತ್ತೆ 'ಬಜಾರು ರೊಟ್ಟಿ'ಯೇ ಗತಿಯೆಂದು ಕಾಣುತ್ತದೆ.

ಆರನೆಯ ಪತ್ರ—ಎಂಟನೇ ದಿನ ಬರೆದುದು:

ಮೆಸ್ಯ, ಈ ಬಿಸಿಲ ಬೇಗೆ ಮತ್ತು ಸಾಕುಬೇಕಾಗಿರುವ ಹಾಗೂ ಅಪಾಯಕರ ವಾಗಿರುವ ನಿತ್ಯಯಾತ್ರೆ ಯಾರಿಗೆಬೇಕು ? ಏತಕ್ಕಾಗಿ ಒಬ್ಬ ಯೂರೋಪಿನ ಮನುಷ್ಯ ಇದನ್ನೆಲ್ಲಾ ಅನುಭವಿಸಬೇಕು? ಇದರಿಂದ ಯಾವ ಪುರುಷಾರ್ಥ ? ಅತಿ ಕುತೂಹಲವೊ, ಇಲ್ಲ ಹಿಂದುಮುಂದು ನೋಡದೆ ಮಾಡಿದ ತಪ್ಪೋ ಕಾರಣವೆ ಇದಕ್ಕೆ? ನಾನು ಏನೆಂದು ಹೇಳಲಿ ? ಕಷ್ಟದ ತರುವಾಯ ಸುಖ ಬರಬಹುದು. ದಿಲ್ಲಿಯಲ್ಲಿ ಮನೆಯ ಬಿಸಿಲು ಮಾಳಿಗೆಯ ಮೇಲೆ ಮಲಗಿದಂತೆ ಲಾಹೋರಿನಲ್ಲಿಯೂ ಮಲಗಿದೆ. ಆದರೆ ಅದರಿಂದಾಗಿ ಕೈಕಾಲು ಹಿಡಿದುಕೊಂಡುಬಿಟ್ಟವೆ ; ಒಂದು ತರಹ ಜ್ವರ. ಈ ಕಾರಣ ನನ್ನ ಆರೋಗ್ಯ ಕೆಟ್ಟಿದೆ. ಆದರೆ ಒಂದೇ ಸಮನೆ ಮಾಡಿದ ಎಂಟೊಂಬತ್ತು ದಿನಗಳ ಪ್ರಯಾಣದಿಂದಾಗಿ ವ್ಯಾಧಿಯೆಲ್ಲಾ ಬೆವತೂ ಬೆವತೂ ನನ್ನ ಕಾಯಿಲೆಗೆ ಅವಕಾಶವಿಲ್ಲದಂತಾಗಿದೆ. ನನ್ನ ಶರೀರ ಒಂದರಿಯಂತಾಗಿಬಿಟ್ಟಿದೆ. ನಾನು ಒಂದು ಸಲಕ್ಕೆ ಗಟಗಟ ಕುಡಿಯುವ ಅರ್ಧ ಪೈಂಟ್ ನೀರು ಅದೇ ಗಳಿಗೆಯಲ್ಲಿ ನನ್ನ ಚರ್ಮದ ರಂಧ್ರಗಳಲ್ಲಿ ಸೋರಿಹೋಗುತ್ತಿದೆ. ನನ್ನ ಕೈತುದಿಗಳು ಸಹ ತೂತುಬಿದ್ದಂತೆ ಬೆವರುತ್ತಿವೆ. ಈ ಹೊತ್ತು ನಾನು ಎರಡು ಪೈಂಟ್‌ಗಳಷ್ಟು ನೀರು ಕುಡಿದಿರಬೇಕು. ಈ ಸಂಕಟದ ಪ್ರಯಾಣದಲ್ಲಿ ಒಂದೇ ಒಂದು ಸಮಾಧಾನಕರವಾದ ವಿಷಯವೆಂದರೆ, ನಮಗೆ ಮನಸ್ಸು ಬಂದಷ್ಟು ನೀರು ಕುಡಿಯ ಬಹುದು—ಒಳ್ಳೆಯ ನೀರು ಸಿಕ್ಕಿದರೆ.

ಏಳನೇ ಪತ್ರ—ಹತ್ತನೇ ದಿನ ಬರೆದುದು:

ಮಿತ್ರ, ಸೂರ್ಯ ಈಗ ತಾನೆ ಮೂಡಿ ಮೇಲೇಳುತ್ತಿದ್ದರೂ ಧಗೆ ತಡೆಯಲು ಅಸಾಧ್ಯವಾಗಿದೆ. ಎಲ್ಲಿಯೂ ಮೋಡದ ತುಣುಕಿಲ್ಲ ; ಎತ್ತಲೂ ಗಾಳಿಯು ರವೆಯಿಲ್ಲ. ನನ್ನ ಕುದುರೆಗಳು ಸೋತು ಸುಸ್ತಾಗಿವೆ. ಲಾಹೋರ್ ನಗರವನ್ನು ಬಿಟ್ಟಾಗಿನಿಂದ ಒಂದು ಹಸಿರು ಹುಲ್ಲಿನ ಗರಿ ಕಂಡಿಲ್ಲ. ನನ್ನ ಇಂಡಿಯನ್ ಸೇವಕರಿಗೆ ಕಪ್ಪಾದ ಒಣಗಿದ ಹಾಗೂ ಒರಟಾದ ಚರ್ಮವಿದ್ದರೂ ಅವರು ಮತ್ತಷ್ಟು ಶ್ರಮಪಡಲು ಶಕ್ತರಾಗಿಲ್ಲ. ನನ್ನ ಮುಖ ಹಾಗೂ ಕೈಕಾಲುಗಳೆಲ್ಲ ಸುಲಿದುಹೋಗಿವೆ. ಇಡೀ ಶರೀರದ ತುಂಬ ಬೆವರು ಸಾಲೆಯ ಕೆಂಪು ಗುಳ್ಳೆಗಳು. ಅವು ಸೂಜಿ ಚುಚ್ಚಿದಂತೆ ಚುಚ್ಚುತ್ತವೆ. ನೆನ್ನೆಯ ದಿನ ನಮ್ಮ ಒಬ್ಬ ಬಡಪಾಯಿ ಸೈನಿಕ ಡೇರೆಯಿಲ್ಲದ ಕಾರಣ ಒಂದು ಮರದ ಬುಡವನ್ನು ಆಶ್ರಯಿಸಿದ. ಆದರೆ, ಪಾಪ, ಬೆಳಗ್ಗೆ ಸತ್ತುಹೋಗಿದ್ದ. ನಾನು ಈ ರಾತ್ರಿಯೊಳಗೆ ಸತ್ತರೆ ಒಳ್ಳೆಯದೆನಿಸುತ್ತಿದೆ. ಆದರೆ ನನ್ನ ಬಳಿ ಇನ್ನೂ ಇರುವ ನಾಲ್ಕೈದು ನಿಂಬೆಹಣ್ಣು ಗಳಿಂದ ಬದುಕುವೆನೆಂಬ ಆಸೆ ನನ್ನಲ್ಲಿ ಉಳಿದಿದೆ. ಅವುಗಳಿಂದ ಶರಬತ್ತು ಮಾಡಿ ಕುಡಿಯುತ್ತಿದ್ದೇನೆ. ನನಗೆ ಜೀವನಾಧಾರವಾದುದು ಇನ್ನೊಂದು ಯಾವುದೆಂದರೆ, ಒಂದಿಷ್ಟು ಒಣಗಿದ ಮೊಸರು (dry curd). ಇದಕ್ಕೆ ನೀರು ಸೇರಿಸಿ ಮಜ್ಜಿಗೆ ಮಾಡಿ ಸಕ್ಕರೆ ಹಾಕಿಕೊಂಡು ಕುಡಿಯುವುದರಲ್ಲಿದ್ದೇನೆ. ದೇವರು ನಿಮಗೆ ಒಳ್ಳೆಯದು ಮಾಡಲಿ. ನನ್ನ ಲೇಖನಿ ತುದಿಯ ಶಾಯಿ ಒಣಗುತ್ತಿದೆ ; ಲೇಖನಿಯೇ ನನ್ನ ಕೈಯಿಂದ ಬೀಳುತ್ತಿದೆ.

ಕಾಶ್ಮೀರವನ್ನು ಪ್ರವೇಶಮಾಡುವಾಗ ಮೊದಲು ಸಿಕ್ಕುವ ಭಿಂಭಾರ್ ಎಂಬ ಸ್ಥಳ ವನ್ನು ಮುಟ್ಟಿ ಅಲ್ಲಿ ಎರಡು ದಿನಗಳು ತಂಗಿದ ಮೇಲೆ ಬರೆದ ಎಂಟನೇ ಪತ್ರ :

ಗೆಳೆಯ, ಕೊನೆಗೆ ನಾವು ಭಿಂಭಾರ್ ಎಂಬ ಊರನ್ನು ಮುಟ್ಟಿದೆವು. ಇದು ಕಡಿದಾದ ಮತ್ತು ಬಿಸಿಲಿನಲ್ಲಿ ಸುಟ್ಟು ಕರುಕಲಾದ ಪರ್ವತವೊಂದರ ಬುಡದಲ್ಲಿದೆ. ನಾವು ಸಾಕಷ್ಟು ದೊಡ್ಡದಾದ ಮತ್ತು ಬತ್ತಿಹೋಗಿದ್ದ ನದಿಯ ಪಾತ್ರದಲ್ಲಿ ಸಣ್ಣ ಕಲ್ಲುಗಳ ಮೇಲೆ, ಸುಡುವ ಮರಳಿನಲ್ಲಿ ಬಿಡಾರ ಮಾಡಿದ್ದೇನೆ. ನಮ್ಮ ಪರಿಸ್ಥಿತಿ ಈಗ ಅವಿಗೆಯ ಮೇಲೆ ಇದ್ದಂತೆ ! ಈ ದಿನ ಬೆಳಗ್ಗೆ ಭಾರಿ ಮಳೆಯಾಗದಿದ್ದರೆ ಮತ್ತು ಬೆಟ್ಟ ಗಳ ಕಡೆಯಿಂದ ಈ ಕಾಲದಲ್ಲಿ ಬರುವ ಮೊಸರು, ನಿಂಬೆಹಣ್ಣು ಮತ್ತು ಕೋಳಿ ಸಿಕ್ಕ ದಿದ್ದರೆ ನಿಮಗೆ ಈ ಪತ್ರ ಬರೆಯುತ್ತಿರುವವನ ಗತಿಯೇನಾಗುತ್ತಿತ್ತೋ ಹೇಳಲಾರೆ ! ಆದರೆ ದೇವರು ದೊಡ್ಡವನು ! ಹವೆ ನಿಜವಾಗಿಯೂ ತಂಪಾಗುತ್ತಿದೆ. ನನಗೆ ಎಂದಿನಂತೆ ಹಸಿವಾಗುತ್ತಿದೆ. ನನ್ನ ಶಕ್ತಿ ಮತ್ತೆ ಬರುತ್ತಿದೆ ಮತ್ತೆ ಒದಗಿಬಂದ ಆರೋಗ್ಯವನ್ನು ಮೊಟ್ಟಮೊದಲು ನನ್ನ ಬರವಣಿಗೆಗೆ ಉಪಯೋಗಿಸುತ್ತಿದ್ದೇನೆ. ಈಗ ನಿಮಗೆ ನಮ್ಮ ಹೊಸ ಯಾತ್ರೆ ಹಾಗೂ ಹೊಸ ಕಷ್ಟನಷ್ಟಗಳ ಪರಿಚಯಮಾಡಿಕೊಡಬೇಕು.

ರಾಜನು ನಿನ್ನೆ ರಾತ್ರಿ ಈ ಉಸಿರುಕಟ್ಟುವ ಸ್ಥಳ ಬಿಟ್ಟ. ಆತನ ಜೊತೆ ರೋಷನಾರ ಬೇಗವುಳೂ, ಇತರ ಅಂತಃಪುರದ ಸ್ತ್ರೀಯರೂ, ಹಂಗಾಮಿ ವಜೀರನಾದ ರಾಜ ರಘುನಾಥನೂ,ಮನೆವಾರ್ತೆಯ ಮಹಾಭಕ್ಷಿ[1] ಫಜಲ್ ಖಾನನೂ ಹೊರಟರು. ಶಿಕಾರಿಯ ಮಹಾ ಭಕ್ಷಿಯೂ ಬೀಡಿನಿಂದ ಹೊರಟ. ಅವನ ಜೊತೆ ಅರಮನೆಯ ಕೆಲವು ಮುಖ್ಯ ಮೊಖ್ತೇಸರುಗಳೂ, ಹಲವಾರು ಗಣ್ಯ ಮಹಿಳೆಯರೂ ಹೊರಟರು. ಈ ರಾತ್ರಿ ನಮ್ಮ ಸರದಿ. ನಮ್ಮೊಡನೆ ದಿನೇಷ್-ಮಂಡ್-ಖಾನನ ಮನೆಯವರು, ಮಿರ್ ಜುಮ್ಲಾನ ಮಗ ಮಹಮ್ಮದ್ ಅಮೀರಖಾನ, ನನ್ನ ಅಚ್ಚು ಮೆಚ್ಚಿನ ಗೆಳೆಯ ದಿನಾಯತ್ ಖಾನ ಮತ್ತು ಅವನ ಇಬ್ಬರ ಮಕ್ಕಳು, ಮತ್ತು ಇನ್ನೂ ಹಲವಾರು ಅಮೀರರು, ರಾಜರು ಮತ್ತು ಮನ್ಸಬ್‌ದಾರರುಗಳು ಇವರೆಲ್ಲಾ ಹೊರಡುತ್ತಾರೆ. ಕಾಶ್ಮೀರಕ್ಕೆ ಹೋಗುವ ಇನ್ನಿತರ ಸರದಾರರು ಅವರವರ ಸರದಿಗೆ ಅನುಸಾರವಾಗಿ ಹೊರಡುತ್ತಾರೆ. ಇಲ್ಲಿಂದ ಕಾಶ್ಮೀರಕ್ಕೆ ಹೋಗುವಾಗ ಸಿಕ್ಕುವ ಕಣಿವೆ ಕಂದರಗಳಿಂದ ಕೂಡಿದ ಕಡುಕಷ್ಟದ ಐದು ದಿನಗಳ ದಾರಿಯಲ್ಲಿ ಅನಾನುಕೂಲ ಹಾಗೂ ಅವ್ಯವಸ್ಥೆಗಳಾಗುವುದನ್ನು ತಪ್ಪಿಸಲು ಈ ಏರ್ಪಾಡು ಮಾಡಲಾಗಿದೆ. ಇನ್ನುಳಿದ ಶ್ರೀಮಂತ ಸರದಾರರು ಅಂದರೆ ಗೋಲಂದಾಜ ಪಡೆಯ ಮಹಾಭಕ್ಷಿ[2], ಮೂರು ನಾಲ್ಕು ಮುಖ್ಯ ರಾಜರುಗಳು, ಅನೇಕ ಅಮೀರರುಗಳು ಇಲ್ಲಿಯೇ ಉಳಿದು ರಾಜನು ಮೂರು ನಾಲ್ಕು ತಿಂಗಳುಗಳ ತರುವಾಯ ಹಿಂದಿರುಗುವ ವರೆಗೆ ಕಾವಲು ಕಾಯುವ ಕೆಲಸ ನಿರ್ವಹಿಸುವರು. ಕೆಲವರು ಚೀನಾಬ್ ನದಿಯ ದಂಡೆಯ ಮೇಲೆ ಡೇರೆಹಾಕಿದರೆ, ಮತ್ತೆ ಕೆಲವರು ಅಕ್ಕ ಪಕ್ಕದ ಪಟ್ಟಣಗಳಿಗೂ ಹಳ್ಳಿಗಳಿಗೂ ಹೋಗುವರು. ಉಳಿದವರು ಈ ಬೆಂಕಿಯಂತೆ ಸುಡುವ ಭಿಂಭಾರ್‌ನಲ್ಲಿ ಬಿಡಾರ ಮಾಡುವರು.

ಸಣ್ಣ ದೇಶವಾದ ಕಾಶ್ಮೀರದಲ್ಲಿ ಊಟೋಪಚಾರಗಳಿಗೆ ತೊಂದರೆಯಾದೀತೆಂಬ ಕಾರಣದಿಂದ ರಾಜ ಸಣ್ಣ ಪರಿವಾರದೊಡನೆ ಹೋಗುತ್ತಿದ್ದಾನೆ. ಹೆಂಗಸರಲ್ಲಿ ಮೊದಲನೆ ದರ್ಜೆಯವರನ್ನು, ಅಂದರೆ ರೋಷನಾರ ಬೇಗಮಳ ಸಖಿಯರು, ಮತ್ತು ಕೆಲಸಕ್ಕೆ ಬೇಕಾದ ಅವ್ವೆಯರು ಇವರನ್ನು ಮಾತ್ರ ಕರೆದುಕೊಂಡಿದ್ದಾನೆ. ಅಮೀರರು ಮತ್ತು ಸೈನಿಕರ ಸಂಖ್ಯೆಯನ್ನು ಮಿತಿಗೊಳಿಸಿದ್ದಾನೆ. ರಾಜನೊಡನೆ ಹೋಗಲು ಅನುಮತಿ ಪಡೆದಿರುವ ನವಾಬರುಗಳು ಅವರ ನೂರು ಜನ ಸೈನಿಕರಲ್ಲಿ ಇಪ್ಪತ್ತೈದು ಜನರನ್ನು ಮಾತ್ರ ಕರೆದುಕೊಂಡು ಹೋಗಬಹುದು. ಈ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಹಾಗೆ ಮಾಡುವಂತೆ ನೋಡಿಕೊಳ್ಳಲು ಪರ್ವತಗಳ ಕಣಿವೆ ದಾರಿಯಲ್ಲಿ ಅಮೀರನೊಬ್ಬನು ಕುಳಿತು ಪ್ರತಿಯೊಬ್ಬರನ್ನೂ ಎಣಿಸುತ್ತಾನೆ. ಕಾಶ್ಮೀರದ ತಂಪಾದ

---

[1]High Steward.

[2]Grand Master of the Artillery.

ಹಾಗೂ ಸ್ವಚ್ಛವಾದ ಗಾಳಿಯನ್ನು ಮೂಸಲು ನಾನು ತಾನು ಎಂದು ಮುನ್ನುಗ್ಗುವ ಮನ್ಸಬ್‌ದಾರರುಗಳನ್ನೂ, ಇಂಥ ಸಂದರ್ಭದಲ್ಲಿ ವ್ಯಾಪಾರ–ಸಾಪಾರ ಮಾಡಿ ಒಂದಿಷ್ಟು ಗಿಟ್ಟಿಸಿಕೊಂಡು ಹೊಟ್ಟೆ ತುಂಬಿಕೊಳ್ಳಲು ಚಡಪಡಿಸುವ ಸಣ್ಣಪುಟ್ಟ ವರ್ತಕರನ್ನೂ, ಅಂಗಡಿಮುಂಗಟ್ಟುಗಳಲ್ಲಿ ಕೆಲಸಮಾಡುವ ಹಮಾಲಿ ಮುಂತಾದವರನ್ನೂ, ಮತ್ತಿತರ ಅಶ್ವಾರೋಹಿಗಳನ್ನೂ ಆತ ತಡೆದುಬಿಡುತ್ತಾನೆ.

ರಾಜನ ಮತ್ತು ಅಂತಃಪುರದ ಸಾಮಾನುಸರಂಜಾಮುಗಳನ್ನು ಹೊರಲು ಕೆಲವು ಆರಿಸಿದ ಆನೆಗಳನ್ನು ಗೊತ್ತುಮಾಡಲಾಗಿದೆ. ಭಾರಿ ಪ್ರಾಣಿಗಳಾದರೂ ಆನೆಗಳು ಹೆಜ್ಜೆ ಹಾಕುವುದರಲ್ಲಿ ಬಹಳ ಹುಷಾರು. ದಾರಿ ಅಟಕಾವಾಗಿದ್ದರೆ ನಿಧಾನವಾಗಿ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟುಕೊಂಡು, ಹೆಜ್ಜೆಯನ್ನು ಭದ್ರವಾಗಿ ಊರಿಕೊಂಡು, ಮತ್ತೊಂದು ಹೆಜ್ಜೆ ಹಾಕುವಾಗ ಮುಂದೇನಿದೆ ಎಂದು ನೋಡಿಕೊಂಡು ಹೋಗುತ್ತವೆ. ಆನೆಗಳ ಜೊತೆಗೆ ಹೇಸರಗತ್ತೆಗಳೂ ಇರುತ್ತವೆ. ಹೆಚ್ಚು ಉಪಯೋಗವಾಗುವಂತಹ ಒಂಟೆಗಳು ಕಾರವಾನಿನ ಹಿಂದೆ ಇರುತ್ತವೆ. ಏಕೆಂದರೆ, ಉದ್ದವಾದ ಹಾಗೂ ಕಡ್ಡಿಯಂತಹ ಕಾಲುಳ್ಳ ಆ ಪ್ರಾಣಿಗಳಿಗೆ ಕೊರಕಲು ಹಾಗೂ ಇಳಿಜಾರಿನ ದಾರಿ ಕಷ್ಟ. ಒಂಟೆಗಳು ಹೊರುವುದನ್ನು ತಲೆಹೊರೆಯ ಜನ ಹೊರುತ್ತಾರೆ. ರಾಜನ ಸಮಾನು–ಸರಂಜಾಮುಗಳನ್ನು ಹೊರುವುದಕ್ಕೇ ಆರು ಸಾವಿರ ಆಳುಗಳಿದ್ದಾರೆಂದು ಹೇಳುತ್ತಾರೆ. ಹೀಗಿರುವಾಗ ಎಲ್ಲರ ಸಾಮಾನುಗಳನ್ನು ಹೊರುವುದಕ್ಕೆ ಎಷ್ಟೊಂದು ಜನ ಬೇಕೆಂದು ನೀವೇ ಊಹಿಸಿ. ನನ್ನ ದೊಡ್ಡ ಡೇರ ಹಾಗು ಸಾಕಷ್ಟು ಸಾಮಾನುಗಳನ್ನು ಲಾಹೋರಿನಲ್ಲಿಯೇ ಬಿಟ್ಟುಬಿಟ್ಟೆ. ಆದರೂ ನನಗೊಬ್ಬನಿಗೇ ಮೂವರು ಆಳುಗಳು ಬೇಕಾಯಿತು. ಹೆಚ್ಚಿಗೆ ಸಾಮಾನುಗಳನ್ನು ಲಾಹೋರಿನಲ್ಲಿ ಬಿಟ್ಟವನು ನಾನೊಬ್ಬನೇ ಅಲ್ಲ. ರಾಜನಿಂದ ಹಿಡಿದು ಎಲ್ಲ ಅಮೀರರೂ ಹಾಗೆ ಮಾಡಿದರು. ಇಷ್ಟಾದರೂ, ಉಳಿದ ಸಾಮಾನುಗಳನ್ನು ಹೊರಲು ಹದಿನೈದು ಸಾವಿರ ಆಳುಗಳು ಭಿಂಭಾರಿನಲ್ಲಿ ಆಗಲೇ ಸೇರಿದ್ದಾರೆಂದು ಕೇಳಿದೆ. ಈ ಆಳುಗಳಲ್ಲಿ ಕೆಲವರನ್ನು ಕಾಶ್ಮೀರದ ಸುಬೇದಾರನೂ ನೆರೆಹೊರೆ ರಾಜರುಗಳೂ ಕಳುಹಿಸಿದ್ದಾರೆ. ಇನ್ನುಳಿದವರು ಇದೇ ಅವಕಾಶವನ್ನು ಉಪಯೋಗಿಸಿಕೊಂಡು ಒಂದಿಷ್ಟು ಕೂಲಿನಾಲಿ ಸಿಕ್ಕೀತೆಂಬ ಆಸೆಯಿಂದ ಬಂದು ಸೇರಿದ್ದಾರೆ. ರಾಜನು ಮಾಡಿರುವ ಶಾಸನದಂತೆ, ಇವರ ಕೂಲಿ, ನೂರು ಪೌಂಡು ತೂಕದ ತಲೆಹೊರೆಗೆ ಹತ್ತು ಕ್ರೌನುಗಳು. ಒಟ್ಟು ಮೂವತ್ತು ಸಾವಿರ ಕೂಲಿಗಳು ಬೇಕಾಗುತ್ತಾರೆಂದು ಲೆಕ್ಕಹಾಕಲಾಗಿದೆ. ಇದು ಭಾರಿ ಸಂಖ್ಯೆಯೇ ಸರಿ. ಏಕೆಂದರೆ, ಈಗ್ಗೆ ಒಂದು ತಿಂಗಳಿಂದಲೇ ರಾಜನು ಮತ್ತು ಅಮೀರರು ಮುಂಚೆಯೇ ತಮ್ಮ ಸಾಮಾನುಗಳನ್ನೂ, ವರ್ತಕರು ದವಸ ಧಾನ್ಯ ಹಾಗೂ ವ್ಯಾಪಾರದ ಪ್ರತಿಯೊಂದು ಸರಕನ್ನೂ ಕಳುಹಿಸುತ್ತಿದ್ದಾರೆ.

**ಕಾಶ್ಮೀರ ತಲುಪಿ, ಅಲ್ಲಿ ಮೂರು ತಿಂಗಳು ಇದ್ದನಂತರ ಅಲ್ಲಿಂದಲೇ ಬರೆದ ಪತ್ರ:**

ಮೆಸ್ಯ, ಕಾಶ್ಮೀರದ ಪುರಾತನ ರಾಜರ ಇತಿಹಾಸದ ಪ್ರಕಾರ ಈ ಇಡೀ ದೇಶ

ಒಂದಾನೊಂದು ಕಾಲದಲ್ಲಿ ದೊಡ್ಡ ಸರೋವರವಾಗಿತ್ತಂತೆ. ಈ ಸರೋವರದ ನೀರು ಹೊರಗೆ ಹೋಗುವಂತೆ ದಾರಿಮಾಡಿದವನು ಕಶೆಬ್ (Kacheb=Kasyap : ಕಶ್ಯಪ) ಋಷಿ. ಈ ಋಷಿಯು ಬಾರಮೂಲ (Baramula) ಪರ್ವತವನ್ನು ಕಡಿದು ನೀರಿಗೆ ದಾರಿ ಮಾಡಿಕೊಟ್ಟನು. ಈ ವಿಚಾರವನ್ನು ಜಹಂಗೀರನ ಅಪ್ಪಣೆಯಂತೆ ತಯಾರಿಸಲ್ಪಟ್ಟ ಮೇಲೆ ಹೇಳಿದ ಇತಿಹಾಸದಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ.[1] ನಾನು ಈ ಚರಿತ್ರೆಯನ್ನು ಈಗ ಪರ್ಷಿಯನ್ ಭಾಷೆಗೆ ಅನುವಾದಿಸುತ್ತಿದ್ದೇನೆ.

ಒಮ್ಮೆ ಈ ಪ್ರದೇಶ ನೀರಿನಿಂದ ಆವರಿಸಲ್ಪಟ್ಟಿತ್ತೆಂದು ಹೇಳದಿರಲು ಸಾಧ್ಯವಿಲ್ಲ. ಇದೇ ಮಾತನ್ನು ಥೆಸಾಲಿ[2] ಮತ್ತು ಇತರ ದೇಶಗಳ ಸಂಬಂಧದಲ್ಲೂ ಹೇಳುತ್ತಾರೆ. ಆದರೆ ನೀರು ಹರಿದುಹೋಗುವಂತೆ ದಾರಿ ಮಾಡಿದವನು ಮನುಷ್ಯ ಎಂದು ನಂಬಲಾರೆ. ಏಕೆಂದರೆ, ಪರ್ವತವು ವಿಶಾಲವಾಗಿಯೂ ಎತ್ತರವಾಗಿಯೂ ಇದೆ. ಈ ದೇಶದಲ್ಲಿ ಸಾಮಾನ್ಯವಾಗಿ ಆಗುವ ಭೂಕಂಪನದಿಂದ ಪರ್ವತವೇ ಕುಸಿಯಿತೆಂದು ನನ್ನ ಊಹೆ.[3]

ಈಗ ಕಾಶ್ಮೀರ ಸರೋವರವಾಗಿ ಉಳಿದಿಲ್ಲ. ಅದು ಈಗ ಅನೇಕ ಬೆಟ್ಟಗಳಿಂದ ಸುತ್ತುವರಿಯಲ್ಪಟ್ಟ ಸುಂದರವಾದ ಕಣಿವೆ. ಹಿಂದೂಸ್ಥಾನದ ಕೊನೆಯಲ್ಲಿ, ಲಾಹೋರಿನಿಂದ ಉತ್ತರಕ್ಕೆ, ಇರುವ ಈ ನಾಡು ಕಾಕಸಸ್ ಪರ್ವತ ಮತ್ತು ಮಹಾ ತಿಬೆಟ್ ಮತ್ತು ಚಿಕ್ಕ ತಿಬೆಟ್ ಮತ್ತು ರಾಜಾ ಜಮೋನ್ (Raja Gamon=ರಾಜ ಜಮ್ಮೂ)–ಈ ನೆರೆಹೊರೆ ರಾಜರ ದೇಶಗಳ ಬೆಟ್ಟಗಳಿಂದ ಸುತ್ತುವರಿಯಲ್ಪಟ್ಟಿದೆ.

ಬಯಲು ಸೀಮೆಗೆ ಹತ್ತಿರವಾದ ಬೆಟ್ಟಗಳು ಅಷ್ಟೇನು ಎತ್ತರವಾಗಿಲ್ಲ. ಅವುಗಳ ಮೇಲೆ ಹಸುರು ಮರಗಿಡಗಳೂ ಹುಲ್ಲುಗಾವಲುಗಳೂ ಇದ್ದು, ನೋಡಲು ಅಂದವಾಗಿ

---

[1]ಇಲ್ಲಿ ಹೇಳುವ ಇತಿಹಾಸ ಗ್ರಂಥ 'ರಾಜ ತರಂಗಿಣಿ'. ಇದನ್ನು ಬರೆದವನು ಕಲ್ಹಣ. ಈ ರಾಜತರಂಗಿಣಿಯನ್ನು ಸಂಗ್ರಹಿಸಿ, ಅಕ್ಬರನು ಕಾಶ್ಮೀರವನ್ನು ಗೆದ್ದುಕೊಳ್ಳುವವರೆಗೆ ಅದರ ಇತಿಹಾಸವನ್ನು ಮುಂದುವರಿಸಿದವನು ಹೈದರ್ ಮಲ್ಲಿಕ್ ಎಂಬುವನು. ಈತ ಶ್ರೀನಗರದ ಬಳಿ ಇರುವ ಛದ್ವಾರ (Chadvarah) ಎಂಬ ಊರಿನ ಪ್ರಸಿದ್ಧ ಕಾಶ್ಮೀರಿ ಮನೆತನಕ್ಕೆ ಸೇರಿದವನು.

[2]ಥೆಸಾಲಿ : ಗ್ರೀಸ್ ದೇಶದ ಒಂದು ಪ್ರಾಂತ : ಏಜಿಯನ್ ಸಮುದ್ರದ ಅಂಚಿನಲ್ಲಿದೆ.

[3]ಬೆರ್ನ್ಯೇ ಹೇಳುವುದಕ್ಕೆ ಆಧಾರಗಳುಂಟು. ಹಾಲಿ ಇರುವ ದಾಖಲೆಗಳ ಪ್ರಕಾರ ಕಾಶ್ಮೀರದಲ್ಲಿ ಭೂಕಂಪನಗಳಾದದ್ದು ೧೫೫೨, ೧೬೮೦,೧೮೨೮ ಮತ್ತು ೧೮೮೫ರಲ್ಲಿ. ಇವುಗಳಲ್ಲಿ ಬಹಳ ನಷ್ಟವನ್ನುಂಟುಮಾಡಿದ ಭೂಕಂಪನವೆಂದರೆ ೧೮೮೫ ರದ್ದು. ಆಗ ೨೦,೦೦೦ ಮನೆಗಳು ಬಿದ್ದುಹೋದವು, ೩೦,೦೦೦ ದನಗಳು ಸತ್ತುಹೋದುವು, ೩೦೦೦ ಜನಗಳು ಪ್ರಾಣ ಕಳೆದುಕೊಂಡರು. ಈ ನಷ್ಟ ಹೆಚ್ಚಾಗಿ ಆದದ್ದು ಬಾರಮೂಲ ಬಳಿ. ಅಲ್ಲಿದ್ದ ಕೋಟೆ, ಪ್ರವಾಸಿ ಮಂದಿರ ಮತ್ತು ಊರಿನ ಮುಕ್ಕಾಲು ಸಂಖ್ಯೆಯಷ್ಟು ಮನೆಗಳು ಬಿದ್ದುಹೋದುವು,

ಕಾಣುತ್ತವೆ. ದನ, ಕುರಿ, ಆಡು, ಕುದುರೆ ಮತ್ತು ಇತರ ಪ್ರಾಣಿಗಳು ಮೇಯುತ್ತಿರುವುದನ್ನು ನೋಡಬಹುದು. ಗವುಜಗಹಕ್ಕಿ, ಮೊಲ, ಚಿಗರಿ ಮತ್ತು ಕಸ್ತೂರಿ ಮೃಗಗಳು ಹೇರಳವಾಗಿವೆ. ಜೇನುಗೂಡುಗಳೂ ಅಸಂಖ್ಯಾತವಾಗಿವೆ. ಆದರೆ ಇಂಡೀಸಿನಲ್ಲಿ ವಿಚಿತ್ರವೆಂದು ಹೇಳಬಹುದಾದ ಹಾವು, ಹುಲಿ, ಕರಡಿ ಮತ್ತು ಸಿಂಹಗಳು ಈ ಪ್ರದೇಶದಲ್ಲಿ ಇಲ್ಲ. ಈ ಪರ್ವತಗಳನ್ನು ನಾವು 'ಅನಪಾಯಕಾರಿ' ಎಂದಷ್ಟೇ ಅಲ್ಲದೆ, ಹಾಲ್ಜೇನು ಹರಿಸುವ ಪರ್ವತ ಶ್ರೇಣಿಗಳೆಂದೂ ಕರೆಯಬಹುದು.

ಈಗ ತಾನೆ ಹೇಳಿದ ಪರ್ವತಗಳಿಂದಾಚೆ ಬಹು ಎತ್ತರದ ಪರ್ವತಗಳು ಇವೆ. ಇವು ಮುಗಿಲನ್ನು ಮುಟ್ಟನಿಂತು ಸದಾ ಹಿಮದಿಂದ ಆವರಿಸಲ್ಪಟ್ಟು, ಸತತವಾದ ಪ್ರಕಾಶ ಹಾಗೂ ಗಾಂಭೀರ್ಯದಿಂದ ಮೆರೆಯುತ್ತವೆ.

ಈ ಎಲ್ಲಾ ಪರ್ವತಗಳ ಕಡೆಯಿಂದಲೂ ಅಸಂಖ್ಯಾತ ಹೊಳೆ ಹಾಗೂ ಝರಿಗಳು ಮೊರೆಯುತ್ತಾ ಹರಿದುಬರುತ್ತವೆ. ಇವಕ್ಕೆ ಅಲ್ಲಲ್ಲಿ, ಗುಡ್ಡಗಳ ತುದಿಯಲ್ಲಿಯು ಸಹ, ಮಣ್ಣಿನ ಅಡ್ಡಗಟ್ಟೆಗಳನ್ನು ಹಾಕಿ ಕಾಲುವೆಗಳಿಗೆ ನೀರು ತಿರುಗಿಸಿಕೊಂಡು ಭತ್ತ ಬೆಳೆಯುತ್ತಾರೆ. ಬೆಟ್ಟಗುಡ್ಡಗಳಿಂದ ಸಾವಿರಾರು ಝರಿಗಳು ಹರಿದು, ಅಲ್ಲಲ್ಲಿ ಧುಮುಕಿ ಮೊರೆದು ಮೆರೆದು, ಕೊನೆಗೆ ಸಂಗಮವಾಗಿ ಸುಂದರವಾದ ನದಿಯಾಗಿ ಮಾರ್ಪಡುತ್ತವೆ. ಈ ನದಿಯ ಮೇಲೆ ದೋಣಿಗಳು ಓಡಾಡಬಹುದು. ಇದು ಕಾಶ್ಮೀರ ಪ್ರದೇಶದಲ್ಲಿ ನಿಧಾನವಾಗಿ ಹರಿದು, ರಾಜಧಾನಿಯ (ಶ್ರೀನಗರದ) ಬಳಿ ಹಾದು, ಬಾರಮೂಲ ಕಡೆಗೆ ತಿರುಗಿ, ಅಲ್ಲಿ ಎರಡು ಕಡಿದಾದ ಬಂಡೆಗಳ ಮಧ್ಯೆ ಹೊರಬಂದು, ಇನ್ನಿತರ ಸಣ್ಣಪುಟ್ಟ ನದಿಗಳನ್ನು ಕೂಡಿಕೊಂಡು, ಜಲಪಾತವಾಗಿ ಭೋರ್ಗರೆದು ಬಿದ್ದು ಇಂಡಸ್ ನದಿಯನ್ನು ಸೇರುತ್ತದೆ.[1]

ಪರ್ವತಗಳಿಂದ ಅಸಂಖ್ಯಾತ ಝರಿಗಳು ಹರಿದು ಬರುತ್ತವೆ. ಕಣಿವೆಗಳನ್ನೂ, ಗುಡ್ಡಗಳನ್ನೂ ಬಹು ಮನೋಹರವಾದ ಹಚ್ಚಹಸಿರು ಆಚ್ಛಾದಿಸಿದೆ. ಇಡೀ ನಾಡೆಲ್ಲಾ ಫಲವತ್ತಾದ ಹಾಗೂ ಕೃಷಿ ಮಾಡಿದ ತೋಟದಂತೆ ಕಾಣುತ್ತಿದೆ. ಸೊಂಪಾಗಿ ಬೆಳೆದ ಮರಗಿಡಗಳ ಮಧ್ಯೆ ಅಲ್ಲಲ್ಲಿ ಹಳ್ಳಿಗಳನ್ನು ನೋಡಬಹುದು. ಹುಲ್ಲುಗಾವಲುಗಳು, ದ್ರಾಕ್ಷಿ ತೋಟಗಳು, ಭತ್ತ, ಗೋಧಿ, ಸೆಣಬು, ಕೇಸರಿ ಮತ್ತು ಅನೇಕ ತರಹ ತರಕಾರಿಗಳು —ಇವುಗಳನ್ನು ಬೆಳೆಯುವ ಹೊಲ ಗದ್ದೆಗಳು, ಇವುಗಳ ಮಧ್ಯೆ ಅಲ್ಲಲ್ಲಿ ನೀರು ತುಂಬಿದ ಹಳ್ಳ ಕೊಳ್ಳಗಳು, ಕಾಲುವೆಗಳು, ಕೆರೆಕುಂಟೆಗಳು—ಇವೆಲ್ಲಾ ಆ ಮನೋಹರ ದೃಶ್ಯಕ್ಕೆ ಮೆರಗು ಕೊಡುತ್ತವೆ. ಇಡೀ ಭೂಮಿಯೆಲ್ಲಾ ನಮ್ಮ ಯೂರೋಪಿನ ಹೂವು ಗಿಡಗಳ ಗಾರೆಗಚ್ಚು (enamelled) ಹಾಕಿದಂತಿದೆ. ನಮ್ಮ ಸೇಬು, ಪೇರು, ಪ್ಲಂ, ಆಫ್ರಿಕಾಟ್ ಮತ್ತು ವಾಲ್ನಟ್ ಹಣ್ಣುಗಳ ತೋಟತುಡಿಕೆಗಳಿಂದ ತುಂಬಿದೆ. ಈ ಮರಗಿಡಗಳು

---

[1] ಇದೇ ಜೀಲಂ ನದಿ.

ಹಣ್ಣು ಬಿಟ್ಟು ಜಗಿಯುತ್ತಿವೆ. ಮನೆಗಳಿಗೆ ಸೇರಿದ ಕೈತೋಟಗಳಲ್ಲಿ ಕಲ್ಲಂಗಡಿ, ಕರಬೂಜ, ಮೂಲಂಗಿ, ಕೆಂಪುಮೂಲಂಗಿ ಮುಂತಾದ ನಮ್ಮಲ್ಲಿ ಕಾಣಲಾರದ ತರಕಾರಿ ಬೆಳೆಗಳು ತುಂಬಿವೆ.

ಇಲ್ಲಿಯ ಹಣ್ಣುಗಳು ನಮ್ಮ ಹಣ್ಣುಗಳಷ್ಟು ರುಚಿಯಾಗಿಲ್ಲ. ಆದರೆ ಇದಕ್ಕೆ ಕಾರಣ ಇಲ್ಲಿಯ ; ನೆಲವಲ್ಲ ಫ್ರಾನ್ಸ್‌ನಲ್ಲಿ ಕಸಿಮಾಡಿದಂತೆ ಇಲ್ಲಿಯ ಜನರಿಗೆ ಕಸಿಮಾಡಲು ಬರದಿರುವುದೇ ಕಾರಣ. ಆದರೂ ಕಾಶ್ಮೀರಕ್ಕೆ ಬಂದಾಗಿನಿಂದ ಉತ್ಕೃಷ್ಟವಾದ ಹಣ್ಣುಗಳನ್ನು ತಿಂದು ತೇಗಿದ್ದೇನೆ. ಇಲ್ಲಿಯವರು ನಮ್ಮವರಂತೆ ಮಣ್ಣು, ತಳಿ ಹಾಗೂ ಕಸಿಮಾಡುವುದು ಇವುಗಳಿಗೆ ಗಮನಕೊಟ್ಟರೆ ನಮ್ಮ ಹಣ್ಣುಗಳಷ್ಟೇ ರುಚಿಯಾದ ಹಣ್ಣುಗಳನ್ನು ಬೆಳೆಯುವುದರಲ್ಲಿ ಸಂದೇಹವಿಲ್ಲ.

ಕಾಶ್ಮೀರದ ರಾಜಧಾನಿಗೆ 'ಕಾಶ್ಮೀರ' ಎಂದೇ ಹೆಸರು.[1] ರಾಜಧಾನಿಯ ಸುತ್ತ ಕೋಟೆಯಿಲ್ಲ. ಅರ್ಧಚಂದ್ರಾಕೃತಿಯಲ್ಲಿರುವಂತೆ ಕಾಣುವ ಪರ್ವತಗಳಿಂದ ಎರಡು ಹರಿದಾರಿ ದೂರದಲ್ಲಿ ಒಂದು ಸರೋವರದ (ದಲ್ ಸರೋವರ) ಬಳಿ ಈ ಊರು ನಿರ್ಮಿತವಾಗಿದೆ. ಈ ಸರೋವರಕ್ಕೆ ಹೊಸ ನೀರು ಸದಾ ಪರ್ವತಗಳ ಝರಿಗಳಿಂದ ಹರಿದು ಬಂದು, ನದಿಗೂ ಈ ಸರೋವರಕ್ಕೂ ಸಂಪರ್ಕವನ್ನು ಕಲ್ಪಿಸಿದೆ. ನದಿಯ ಮೇಲೆ ಎರಡು ಮರದ ಸೇತುವೆಗಳನ್ನು ನಿರ್ಮಿಸಿದ್ದಾರೆ. ಮನೆಗಳನ್ನು ಹೆಚ್ಚಾಗಿ ಮರದಿಂದಲೇ ಕಟ್ಟಿದ್ದರೂ ಅವು ಎರಡು ಮೂರು ಅಂತಸ್ತುಗಳುಳ್ಳ ಮಹಡಿ ಮನೆಗಳು. ಇಲ್ಲಿ ಕಲ್ಲು ಇಲ್ಲವೆಂತಲ್ಲ ; ಇದೆ. ಈ ಕಲ್ಲಿನಿಂದ ಕಟ್ಟಿದ ಹಳೆಯ ಮನೆಗಳನ್ನೂ ಅನೇಕ ಗುಡಿಗೋಪುರಗಳನ್ನೂ ನೋಡಬಹುದು. ಈ ದೇವಸ್ಥಾನಗಳು ಹಾಳುಬಿದ್ದಿವೆ. ಜನರು ಮರವನ್ನೇ ಏಕೆ ಹೆಚ್ಚಾಗಿ ಉಪಯೋಗಿಸುತ್ತಾರೆಂದರೆ, ಅದು ಅಗ್ಗ. ಅಲ್ಲದೆ, ಪರ್ವತಗಳಿಂದ ಹರಿದು ಬರುವ ಹೊಳೆಗಳ ಮೇಲೆ ಅದನ್ನು ಸುಲಭವಾಗಿ ಸಾಗಿಸಿ ತರಬಹುದು. ನದಿಯ ಇಕ್ಕೆಲದಲ್ಲಿರುವ ಅನೇಕ ಮನೆಗಳ ಹಿಂದೆ ಮುಂದೆ ತೋಟಗಳಿವೆ. ವಸಂತ ಕಾಲದಲ್ಲಿ ನೀರಿನ ಮೇಲೆ ದೋಣಿಗಳಲ್ಲಿ ನಡೆಯುವ ವಿಹಾರ ಕೂಟಗಳಲ್ಲಿ ಕುಳಿತು ನೋಡಿದರೆ ಅವುಗಳ ದೃಶ್ಯ ಮನೋಹರವಾಗಿರುತ್ತದೆ. ಪಟ್ಟಣದೊಳಗಿರುವ ಮನೆಗಳ ಮುಂದೂ ತೋಟಗಳಿವೆ. ಅನೇಕ ಮನೆಗಳ ಮುಂದೆ ಕಾಲುವೆಗಳೂ ಆ ಕಾಲುವೆಗಳಲ್ಲಿ ಮನೆಯವರ ವಿಹಾರ ದೋಣಿಗಳೂ ಇದ್ದು, ಮನೆಗಳಿಂದ ಸರೋವರಕ್ಕೆ ಸಲೀಸಾಗಿ ಹೋಗಲು ಅನುಕೂಲವಿದೆ.

---

[1] ಮೊದಲಿನಿಂದಲೂ ಕಾಶ್ಮೀರದ ರಾಜಧಾನಿಯ ಹೆಸರು ಶ್ರೀನಗರ ಎಂದು. ಆದರೆ ಮಹಮ್ಮದೀಯರು ತಮ್ಮ ಆಡಳಿತದ ಕಾಲದಲ್ಲಿ ಈ ಹೆಸರನ್ನು ಬಿಟ್ಟು ಕಾಶ್ಮೀರ ಎಂತಲೇ ಕರೆಯುತ್ತಿದ್ದರು. ಈ ಕಾರಣವೇ ಬೆರ್ನ್ಯೇ ಹೀಗೆ ಹೇಳಿರುವುದು. ಈಗಲೂ ಮಹಮ್ಮದೀಯರು ಕಾಶ್ಮೀರಿ ಭಾಷೆಯಲ್ಲಿ ಅದರ ರಾಜಧಾನಿ 'ಕಾಶ್ಮೀರ' ಅಥವಾ 'ಕಶೋರ್' ಎಂತಲೇ ಕರೆಯುತ್ತಾರೆ.

ಪಟ್ಟಣದ ಒಂದು ಕಡೆ ಒಂದು ಒಂಟಿ ಗುಡ್ಡವಿದೆ. ಅದರ ಇಳಿಜಾರಿನಲ್ಲಿ ಸುಂದರವಾದ ಮನೆಗಳೂ, ಅವುಗಳಿಗೆ ತಾಗಿದಂತೆ ತೋಟಗಳೂ ಇವೆ. ಗುಡ್ಡದ ತುದಿಯಲ್ಲಿ ಒಂದು ಮಸೀದಿಯೂ, ಒಂದು ಆಶ್ರಮವೂ ಇವೆ. ಇವೆರಡೂ ಒಳ್ಳೆಯ ಕಟ್ಟಡಗಳು. ಗುಡ್ಡದ ತುಂಬ ಮರಗಿಡಗಳು ಬೆಳೆದು ಓಲಾಡುತ್ತಿವೆ. ಒಟ್ಟಿನಲ್ಲಿ ಪಟ್ಟಣವು ನೋಡಲು ಚಂದವಾಗಿದೆ. ಈ ನಾಡಿನ ಭಾಷೆಯಲ್ಲಿ ಇದನ್ನು 'ಹರಿಪರ್ಬತ್' ಎಂದು ಕರೆಯುತ್ತಾರೆ[1]

ಈ ಗುಡ್ಡದ ಎದುರಿಗೆ ಇನ್ನೊಂದು ಗುಡ್ಡವಿದೆ. ಆ ಗುಡ್ಡದಮೇಲೆ ಸಣ್ಣ ಮಸೀದಿಯೊಂದನ್ನು ಕಟ್ಟಿದ್ದಾರೆ. ಇದರ ಸುತ್ತ ತೋಟವೂ ಬಹು ಪುರಾತನವಾದ ಒಂದು ಕಟ್ಟಡವೂ ಇವೆ. ಪುರಾತನ ಕಟ್ಟಡ ಒಮ್ಮೆ ದೇವಸ್ಥಾನವಾಗಿರಬೇಕು. ಇದನ್ನು ಮುಹಮ್ಮದೀಯರು ಸಾಲೋಮನ್ ಸಿಂಹಾಸನ (Throne of Solomon)[2] ಎಂದು ಕರೆಯುತ್ತಾರೆ ಮತ್ತು ಆ ಹೆಸರಿನ ರಾಜ ಕಾಶ್ಮೀರಕ್ಕೆ ಬಂದಾಗ ಇದನ್ನು ಕಟ್ಟಿಸಿದ ಎಂದು ಹೇಳಿಕೊಳ್ಳುತ್ತಾರೆ. ಆದರೆ ಆತ ಈ ದೇಶಕ್ಕೆ ಬಂದಿದ್ದನೆಂಬುದನ್ನು ರುಜುವಾತುಮಾಡಲು ಅವರಲ್ಲಿ ಯಾವ ದಾಖಲೆಗಳೂ ಇಲ್ಲ.

ಸರೋವರ (ದಲ್ ಸರೋವರ)ದ ತುಂಬಾ ಅಲ್ಲಲ್ಲಿ ದ್ವೀಪಗಳಿವೆ. ಇವು ವಿಹಾರದ ತಾಣಗಳು. ನೀರಿನ ಮಧ್ಯೆ ಸುಂದರವಾಗಿಯೂ ಹಸುರಾಗಿಯೂ ಕಂಗೊಳಿಸುತ್ತವೆ. ದ್ವೀಪಗಳಲ್ಲಿ ಹಣ್ಣಿನ ಗಿಡಗಳನ್ನು ಬೆಳೆಸಿ, ನಡೆದಾಡಲು ದಾರಿಗಳನ್ನು ಮಾಡಿದ್ದಾರೆ. ಸಾಮಾನ್ಯವಾಗಿ ದ್ವೀಪದ ಸುತ್ತ ಎರಡೆರಡು ಅಡಿಗಳಿಗೊಂದರಂತೆ ನೆಟ್ಟ ದೊಡ್ಡ ಎಲೆಯ ಆಸ್ಪೆನ್ (aspen) ಮರಗಳಿವೆ. ಇವು ಬಹು ದೊಡ್ಡ ಜಾತಿಯ ಮರಗಳು. ಒಬ್ಬ ಮನುಷ್ಯ ತಬ್ಬಿಕೊಳ್ಳುವಷ್ಟು ದಪ್ಪವಾಗಿವೆ. ಹಡಗಿನ ಕೂವೆ ಮರದಷ್ಟು ಎತ್ತರ. ತಾಳವೃಕ್ಷಗಳಂತೆ (palm trees) ಮರದ ತುದಿಯಲ್ಲಿ ಮಾತ್ರ ಕೊಂಬೆಗಳು ಗುದುರಾಗಿ ಬೆಳೆದಿವೆ. ಪರ್ವತಗಳ ಇಳಿಜಾರಿನಲ್ಲಿ ಮನೆಗಳೂ ತೋಟತುಡಿಕೆಗಳೂ ತುಂಬಿವೆ. ಹವ ಬಹು ಆಹ್ಲಾದಕರವಾಗಿದೆ. ಪರಿಸರ ಬಹು ಆಪ್ಯಾಯಮಾನವಾಗಿದೆ. ಎಲ್ಲೆಲ್ಲೂ ನೀರಿನ ತಾಣಗಳು, ಹರಿಯುವ ಝರಿಗಳು, ಸುಂದರ ಸರೋವರಗಳು, ದ್ವೀಪಗಳು ಹಾಗೂ ನಗರದ ಆಪ್ಯಾಯಮಾನವಾದ ದೃಶ್ಯಗಳು.

---

[1]ಹರಿ ಪರ್ಬತ್ (ಹರಿಯ ಪರ್ವತ) : ಇದು ಹಿಂದೂಗಳಿಗೆ ಪವಿತ್ರ ಯಾತ್ರಾಸ್ಥಳವಾದ ಶರಿಕಾ ಪರ್ವತ.

[2]ಸಾಲೋಮನ್ ಡೇವಿಡ್ಡನ ಮಗ. ಈತ ಕ್ರಿ. ಪೂ. 10 ನೇ ಶತಮಾನದಲ್ಲಿ ಇಸ್ರೇಲ್ ರಾಜ್ಯದ ಅರಸನಾಗಿದ್ದ. ಒಳ್ಳೆಯ ಜ್ಞಾನಿ.

ಉದ್ಯಾನಗಳಲ್ಲಿ ಬಹು ಸುಂದರವಾದುದೆಂದರೆ,ರಾಜನಿಗೆ ಸೇರಿದ 'ಷಾಲಿಮಾರ್'.[1] ಈ ಉದ್ಯಾನಕ್ಕೆ ಸರೋವರದ ಕಡೆಯಿಂದ ಅಗಲವಾದ ಕಾಲುವೆಯ ಮೇಲೆ ಹೋಗ ಬೇಕು. ಈ ಕಾಲುವೆಯ ಇಕ್ಕೆಲಗಳಲ್ಲಿ ಎರಡು ಸಾಲಿನ ಪೋಪ್ಲರ್ (poplar) ಮರ ಗಳ ಮಧ್ಯೆ ಹುಲ್ಲುಹಸಲೆ ಇದೆ. ಐದಾರು ದಾಪು ದೂರ ಈ ಕಾಲುವೆಯ ಮೇಲೆ ಹೋದರೆ ಉದ್ಯಾನದ ಮಧ್ಯದಲ್ಲಿರುವ ಬೇಸಗೆ ನಿವಾಸವನ್ನು ಪ್ರವೇಶಿಸುತ್ತೇವೆ. ಇದ ಕ್ಕಿಂತಲೂ ಸುಂದರವಾದ ಇನ್ನೊಂದು ಕಾಲುವೆ ಉದ್ಯಾನದ ತುದಿಯಲ್ಲಿರುವ ಮತ್ತೊಂದು ಬೇಸಗೆ ಮನೆಗೆ ಅಂದರೆ ವಸಂತ ಮಹಲಿಗೆ ಕೊಂಡೊಯ್ಯುತ್ತದೆ. ಈ ಕಾಲುವೆಗೆ ದೊಡ್ಡ ದೊಡ್ಡ ಕೆಂಪುಕಲ್ಲಿನ ಗೆಯ್ದ ಚಪ್ಪಡಿಗಳನ್ನು ಹಾಸಿದ್ದಾರೆ; ಹಾಗೆಯೇ ದಡಗಳಿಗೂ ಜೋಡಿಸಿದ್ದಾರೆ. ಮಧ್ಯೆ ಹದಿನೈದು ದಾಪುಗಳಿಗೊಂದರಂತೆ ಉದ್ದಕ್ಕೂ ಚಿಲುಮೆಗಳೂ, ಅಲ್ಲಲ್ಲಿ ದೊಡ್ಡ ದೊಡ್ಡ ಕಾರಂಜಿಗಳೂ ಇವೆ. ಕಾರಂಜಿಗಳ ಗುಂಡುತೊಟ್ಟಿಗಳ ಸುತ್ತ ಇರುವ ಚಿಲುಮೆಗಳಿಂದ ನೀರು ವಿಧವಿಧವಾದ ವಿನ್ಯಾಸಗಳಲ್ಲಿ ಚಿಮ್ಮುತ್ತದೆ.

ಬೇಸಗೆ ನಿವಾಸಗಳು ಕಾಲುವೆ ಮಧ್ಯೆ ಇರುವ ಕಾರಣ ಅವು ನೀರಿನಿಂದ ಆವರಿಸ ಲ್ಪಟ್ಟಿವೆ ; ಮತ್ತು ಪೋಪ್ಲಾರ್ (poplar) ಮರಗಳಿಂದ ಸುತ್ತುವರಿಯಲ್ಪಟ್ಟಿವೆ. ಈ ಮನೆಗಳನ್ನು ಗೋಳಗುಮ್ಮಟದ ಆಕಾರದಲ್ಲಿ ಕಟ್ಟಿದ್ದಾರೆ. ಮಧ್ಯೆ ದೊಡ್ಡ ಕೋಣೆಯೂ, ನಾಲ್ಕು ಮೂಲೆಗಳಲ್ಲಿ ನಾಲ್ಕು ಸಣ್ಣ ಕೋಣೆಗಳೂ ಇವೆ. ಒಳಭಾಗವನ್ನೆಲ್ಲಾ ಬಣ್ಣ ಗಳಿಂದಲೂ, ಗಿಲೀಟಿನಿಂದಲೂ ಅಲಂಕಾರ ಮಾಡಿದ್ದಾರೆ. ಕೋಣೆಗಳ ಗೋಡೆಯ ಮೇಲೆಲ್ಲಾ ದೊಡ್ಡದಾಗಿಯೂ ಸುಂದರವಾಗಿಯೂ ಪಾರಸಿ ಲಿಪಿಯಲ್ಲಿ ಏನೇನೋ ಉಕ್ತಿ ಗಳನ್ನು ಕೆತ್ತಿದ್ದಾರೆ. ಈ ಮಂದಿರಗಳ ನಾಲ್ಕು ಕಡೆಗಿರುವ ನಾಲ್ಕು ಬಾಗಿಲುಗಳು ಬಹಳ ಬೆಲೆಯಾದವು. ಅವುಗಳನ್ನು ಎರಡೆರಡು ಅಂದವಾದ ಕಂಬಗಳಿಂದಲೂ ದೊಡ್ಡ ದೊಡ್ಡ ಶಿಲೆಗಳಿಂದಲೂ ನಿರ್ಮಿಸಿದ್ದಾರೆ. ಅವುಗಳನ್ನು ಷಾಜಹಾನ ಯಾವುದೋ ದೇವ ಸ್ಥಾನಗಳನ್ನು ಕೆಡವಿ ಇಲ್ಲಿಗೆ ತಂದನು. ಅವುಗಳ ಬೆಲೆ ಎಷ್ಟು ಎಂದು ಹೇಳುವುದು ಕಷ್ಟ. ಶಿಲೆ ಯಾವುದು ಎಂದು ನಾನು ಹೇಳಲಾರೆ. ಆದರೆ ಅದು ಅಂದವಾದ ಅಗ್ನಿಶಿಲೆಯನ್ನೂ (porphyry) ಮತ್ತು ಉತ್ತಮವಾದ ಅಮೃತಶಿಲೆಯನ್ನೂ ಮೀರಿಸುವುದಾಗಿದೆ.

ನಾನು ಕಾಶ್ಮೀರಕ್ಕೆ ಮಾರುಹೋಗಿದ್ದೇನೆಂದು ನಿಮಗೆ ಅನ್ನಿಸಿರಬಹುದು. ನಿಜ

---

[1] ಷಾಲಿಮಾರ್ ಅಥವಾ ಷಾಲಮಾರ್ ಎಂದರೆ ಪ್ರೇಮದ ಹಜಾರ (The Hall of Love) ಎಂದರ್ಥ. ಶ್ರೀನಗರವನ್ನು ಸ್ಥಾಪಿಸಿದ ಎರಡನೇ ಪ್ರವರಸೇನನು ಈ ಉದ್ಯಾನವನ್ನು ನಿರ್ಮಿಸಿದನೆಂದು ಗೊತ್ತಾಗುತ್ತದೆ. ಕಾಲ ಕಳೆದಂತೆ ಇದು ನಿರ್ನಾಮವಾಗಿ ಆ ಹೆಸರಿನ ಹಳ್ಳಿಯೊಂದು ಮಾತ್ರ ಉಳಿಯಿತು. ೧೬೧೯ರಲ್ಲಿ ಜಹಂಗೀರನು ಹಳ್ಳಿಯಿದ್ದ ಸ್ಥಳದಲ್ಲಿ ಉದ್ಯಾನ ವೊಂದನ್ನು ನಿರ್ಮಿಸಿದನು. ಈ ಉದ್ಯಾನಕ್ಕೆ ಅವನು ಇಟ್ಟ ಹೆಸರು ಫರಾಭಕ್ಷ್ (Parah Bhaksh : ಆಹ್ಲಾದಕರ) ಎಂದು.

ವಾಗಿಯೂ ಇದು ನಾನು ಊಹಿಸಿದ್ದಕ್ಕಿಂತಲೂ ಸುಂದರವಾಗಿದೆ. ಇಷ್ಟು ಸಣ್ಣ ವಿಸ್ತೀರ್ಣದ ಯಾವ ದೇಶದಲ್ಲಿಯೂ ಕಾಣಲಾರದಂತಹ ಸುಂದರ ದೃಶ್ಯಗಳನ್ನು ಇಲ್ಲಿ ಕಾಣಬಹುದು. ಇದು ಹಿಂದಿನ ಕಾಲದಲ್ಲಿದ್ದಂತೆ, ಈಗಲೂ ಸುತ್ತಮುತ್ತಲ ಪರ್ವತಗಳಿಂದ ಕೂಡಿ ಹಿಂದೂಸ್ಥಾನ ಮತ್ತು ಸಿಲೋನ್‌ಗಳನ್ನೊಳಗೊಂಡ ಚಕ್ರಾಧಿಪತ್ಯದ ಸಾರ್ವಭೌಮನ ರಾಜಧಾನಿಯಾಗಲು ಅರ್ಹವಾಗಿದೆ. ಇಷ್ಟಲ್ಲದೆ ಇದನ್ನು ಇಂಡೀಸಿನ ಭೂಸ್ವರ್ಗ ಕಾಶ್ಮೀರ ಎಂದು ಕರೆದರೆ, ಮೊಗಲರು ! ಇಷ್ಟಲ್ಲದೆ ಇಲ್ಲಿಯ ಅರಸರ ರಾಜದಂಡವನ್ನು ಕಸಿದುಕೊಳ್ಳಲು ಪ್ರಯತ್ನಿಸಿದನೆ, ಅಕ್ಬರ ![1] ಅವನ ಮಗ ಜಹಂಗೀರ ಈ ಪುಟ್ಟರಾಜ್ಯವನ್ನು ಕಂಡು ಎಷ್ಟು ನಿಟ್ಟುಸಿರು ಬಿಟ್ಟನೆಂದರೆ, ಆತ ಅದನ್ನು ತನ್ನ ನೆಚ್ಚಿನ ನೆಲೆಯಾಗಿಯೇ ಮಾಡಿಕೊಂಡುಬಿಟ್ಟ. ತನ್ನ ಮಹಾ ಚಕ್ರಾಧಿಪತ್ಯವೇ ಕಳೆದುಹೋದರೂ ಚಿಂತೆಯಿಲ್ಲ, ಕಾಶ್ಮೀರವನ್ನು ಮಾತ್ರ ಕಳೆದುಕೊಳ್ಳಲಾರೆ ಎಂದು ಆತ ಆಗಾಗ್ಗೆ ಹೇಳುತ್ತಿದ್ದ.

ಕಾಶ್ಮೀರ ಹಾಗೂ ಮೊಗಲ್ ಕವಿಗಳ ಮಧ್ಯೆ ನಡೆಯಬಹುದಾದ ಈರ್ಷ್ಯೆಯ ಸ್ಪರ್ಧೆಗೆ ನಾನು ಸಿದ್ಧನಾಗಿ ಬಂದಿದ್ದೆ. ನಾವು ಕಾಶ್ಮೀರವನ್ನು ತಲುಪಿದ ಕೂಡಲೆ ಔರಂಗಜೇಬನ ಮುಂದೆ ತಮ್ಮ ನೆಚ್ಚಿನ ನಾಡನ್ನು ಕುರಿತ ಕವನಗಳನ್ನು ಹಾಡಿ ಎರಡೂ ದೇಶದ ಕವಿಗಳು ಬಹುಮಾನಗಳನ್ನು ಪಡೆದರು. ಆ ಕವನಗಳು ಎಲ್ಲೆ ಮೀರಿದ ಅತಿಶಯೋಕ್ತಿಯಿಂದ ಕೂಡಿದ್ದವು. ಅವುಗಳಲ್ಲಿ ಒಂದು ಕವನ ಸುತ್ತಮುತ್ತಲ ಎತ್ತರದ ಪರ್ವತಗಳನ್ನು ಕುರಿತದ್ದು. ಅದರ ಒಂದು ವರ್ಣನೆಯಲ್ಲಿ ಪರ್ವತಗಳ ಎತ್ತರಕ್ಕಿಂತಲೂ ಮೇಲೆ ಸರಿದ ಮುಗಿಲು, ಮೊಗಚಿದ ಬಾಂಡಲೆಯಂತಿತ್ತು ಎಂದು ವರ್ಣಿಸಲಾಗಿದ್ದಿತು. ಈ ನಾಡಿನ ಸೃಷ್ಟಿಯಲ್ಲಿ ಪ್ರಕೃತಿ ತನ್ನೆಲ್ಲಾ ಚಾತುರ್ಯವನ್ನು ತೋರಿ ಮೆರೆದಿದ್ದಾಳೆ ಎನ್ನಬಹುದು. ಯಾವ ಶತ್ರುವೂ ಇಲ್ಲಿಗೆ ಬರಲು ತತ್ತರಿಸಿಬೇಕು. ಏಕೆಂದರೆ, ಭೂಮಂಡಲಕ್ಕೆಲ್ಲಾ ಒಡೆಯಳಾದ ಆಕೆ ಯಾವಾಗ್ಯೂ ಯಾರ ಹಂಗೂ ಇಲ್ಲದೆ ಸಂಪೂರ್ಣ ಶಾಂತಿ

[1] ಐತಿಹಾಸಿಕ ಆಧಾರಗಳ ಪ್ರಕಾರ ದುರ್ಲಭವರ್ಧನ (ಕ್ರಿ.ಶ. ೬೨೭–೪೯) ಎಂಬುವನಿಂದ ಕಾರ್ಕೋಟ ವಂಶದ ಅರಸರ ಆಡಳಿತ ಆರಂಭವಾಯಿತು. ಈ ವಂಶದಲ್ಲಿ ಲಲಿತಾದಿತ್ಯ (೬೪೯–೩೩೬) ಹೆಸರಾಂತ ಶೂರ. ಈತನ ಕಾಲದಲ್ಲಿ ಕಾಶ್ಮೀರದ ಗಡಿ ವಿಸ್ತರಿಸಲ್ಪಟ್ಟಿತು. ಈಗಲೂ ಶ್ರೀನಗರದ ಸಮೀಪದಲ್ಲಿ ಶಿಥಿಲಾವಸ್ಥೆಯಲ್ಲಿರುವ ಮಾರ್ತಾಂಡ ದೇವಸ್ಥಾನವನ್ನು ನಿರ್ಮಿಸಿದವನು ಈತನೇ. ಕ್ರಿ.ಶ. ೧೩೩೯ರ ವರೆಗೆ ಮುಂದುವರಿದ ಹಿಂದೂ ರಾಜ್ಯಭಾರವು ಷಾಮೀರ್ ಎಂಬ ಮುಸ್ಲಿಮನ ಕೈಸೇರಿತು. ಹೀಗೆ ಮುಸ್ಲಿಂ ಆಡಳಿತ ಮುಂದುವರಿದು ಅಕ್ಬರನ ಕಾಲದಲ್ಲಿ ಕಾಶ್ಮೀರ ಮೊಗಲರ ವಶವಾಯಿತು. ಮೊಗಲ್ ಸಾಮ್ರಾಜ್ಯ ಕ್ಷೀಣವಾದ ನಂತರ ಕಾಶ್ಮೀರ ಆಫ್ಘನರ ಆಡಳಿತಕ್ಕೆ ಒಳಪಟ್ಟು ೧೮೧೯ರಲ್ಲಿ ಸಿಖ್ಖರ ವಶವಾಯಿತು. ಆಮೇಲೆ ಅದು ಡೋಗ್ರಾ ಆಡಳಿತಕ್ಕೆ ಒಳಪಟ್ಟಿತು. ೧೯೪೭ರಲ್ಲಿ ಕಾಶ್ಮೀರ ಭಾರತ ಗಣರಾಜ್ಯಕ್ಕೆ ಸೇರಿತು. ಬೇಸಗೆಯಲ್ಲಿ ಅದರ ರಾಜಧಾನಿ ಶ್ರೀನಗರ, ಚಳಿಗಾಲದಲ್ಲಿ ಜಮ್ಮು. ಅದನ್ನು ಈಗ "ಜಮ್ಮು ಮತ್ತು ಕಾಶ್ಮೀರ್" ರಾಜ್ಯ ಎಂದು ಕರೆಯಲಾಗಿದೆ.

ಯಿಂದ ಹಾಗೂ ಬೆಡಗಿನಿಂದ ಸರ್ವ ಸ್ವತಂತ್ರಳಾಗಿ ಬಾಳಬೇಕೆಂದು ಈ ತಾಣವನ್ನು ತನ್ನದಾಗಿ ಮಾಡಿಕೊಂಡಿದ್ದಾಳೆ ಕವಿ ಮತ್ತೂ ಹೇಳಿದ್ದಾನೆ, ಎತ್ತರವಾದ ಹಾಗೂ ವ್ಯಾಪಕವಾದ ಪರ್ವತಗಳು ಬಿಳಿಹತ್ತಿಯಂತಿರುವ ಹಿಮರಾಶಿಯನ್ನು ಹೊದೆದು, ಹತ್ತಿರದ ಬೆಟ್ಟಗಳಿಂದಲೂ ಮತ್ತು ಸುಂದರವಾದ ಹಸುರು ಗಿಡಗಳಿಂದಲೂ -ಸುತ್ತುವರಿದು, ಭೂವನಿತೆಗೆ ಪಚ್ಚೆಗಳ ಮೇಲೆ ಹಚ್ಚಿದ ವಜ್ರದ ಹೊಳಪಿನ ಕೀರಟವನ್ನು ಇಟ್ಟಂತೆ ಇದ್ದವು ಎಂದು.

ನನ್ನೀ ಆಸಕ್ತಿಯನ್ನು ಕಂಡು ಭೇಷ್ ಎನ್ನುತ್ತಿದ್ದ ನನ್ನ ನವಾಬ ದಿನೇಷ್ ಮಂಡ್ ಖಾನನಿಗೆ ನಾನು ಹೇಳಿದೆ, "ಕವಿ, ತನ್ನ ಕಲ್ಪನೆಯನ್ನು ಕಾಶ್ಮೀರದ ಸುತ್ತ ಮುತ್ತಣ ಪರ್ವತಗಳಿಗೂ ವ್ಯಾಪಿಸಿದ್ದರೆ ತಪ್ಪೇನಾಗುತ್ತಿರಲಿಲ್ಲ" ಎಂದು. ಏಕೆಂದರೆ, ಆ ಪರ್ವತ ಪ್ರದೇಶಗಳೆಲ್ಲಾ ಒಂದಾನೊಂದು ಕಾಲದಲ್ಲಿ ಕಾಶ್ಮೀರದ ಅಧೀನ ರಾಜ್ಯಗಳಾಗಿದ್ದವು. ಅವು ಯಾವುವೆಂದರೆ : ಕಿರಿಯ ತಿಬೆಟ್, ಜಮ್ಮುರಾಜನ ನಾಡು, ಕಾಷ್ಘರ್ ಮತ್ತು ಸಿರಿನಗರ್[1]. ಇವನ್ನು ಕಾಶ್ಮೀರವು ಒಳಪಡಿಸಿಕೊಂಡಿರುವುದರಿಂದ "ಅಂದ ಚೆಂದದ ಇಂಡೂ, ಚೀನಾಬ್, ಗಂಗಾ ಮತ್ತು ಜಮುನಾ ನದಿಗಳು ಇಲ್ಲಿ ಜನ್ಮ ತಾಳಿವೆ. ಈಡನಿನ ಆಡುಂಬೊಲ ಇರುವುದು ಆರ್ಮೀನಿಯದಲ್ಲಿ[2] ಅಲ್ಲ, ಇಲ್ಲಿ ಈ ಕಾಶ್ಮೀರದಲ್ಲಿ" ಎಂದು ಹಾಡಬಹುದಿತ್ತು.

ಕಾಶ್ಮೀರಿಗಳು ಚಮತ್ಕಾರಕ್ಕೆ ಹೆಸರಾದ ಜನ. ಅಲ್ಲದೆ ಇಂಡಿಯನರಿಗಿಂತ ಹೆಚ್ಚು ಬುದ್ಧಿವಂತರು ಹಾಗೂ ಚತುರರು ಎಂದು ಹೇಳುತ್ತಾರೆ. ಕಾವ್ಯ ಹಾಗೂ ವಿಜ್ಞಾನಗಳಲ್ಲಿ ಪರ್ಷಿಯನರಿಗಿಂತ ಕೀಳಲ್ಲ. ಬಹು ಚಟುವಟಿಕೆಯಿಂದ ಕೂಡಿದ ಹಾಗೂ ಚುರುಕಾದ ಈ ಜನ ತಯಾರಿಸುವ ಪಾಲಕಿಗಳು, ಮಂಚಗಳು, ಸಂದೂಕಗಳು (trunks), ದೌತಿಕುಡಿಕೆ ಪೀಠಗಳು, ಪೆಟ್ಟಿಗೆಗಳು, ಚಮಚಗಳು, ಮತ್ತಿತರೆ ಸಾಮಾನುಗಳು—ಇವುಗಳ ಕುಶಲ ಕೆಲಸ ಹಾಗೂ ಅಂದ ಚೆಂದ ಬಹು ಮೆಚ್ಚತಕ್ಕವುಗಳು. ಇವರು ತಯಾರಿಸುವ ಸಾಮಾನುಗಳನ್ನು ಇಂಡೀಸಿನ ಪ್ರತಿಯೊಂದು ಭಾಗದಲ್ಲಿಯೂ ಉಪಯೋಗಿಸುತ್ತಾರೆ. ಮೆರುಗು ಹಾಕುವ ಕೆಲಸ ಇವರಿಗೆ ತುಂಬ ಚೆನ್ನಾಗಿ ಗೊತ್ತು. ಒಂದು ತರಹ ಮರದ ಎಳೆಗಳನ್ನು ತೆಗೆದು ಅವುಗಳ ಜಾಗದಲ್ಲಿ ಚಿನ್ನದ ಸರಿಗೆಯನ್ನು ಸೇರಿಸಿ ಮಾಡುವ ಅತಿಸೂಕ್ಷ್ಮವಾದ ಮರಗೆಲಸವನ್ನು ನಾನೆಲ್ಲಿಯೂ ನೋಡಿಲ್ಲ.

---

[1]ಸಿರಿನಗರ್ : ಇದು ಬಹುಶಃ ಹಿಂದೆ ಉತ್ತರಪ್ರದೇಶದ ಘರ್ವಾಲ್ ಜಿಲ್ಲೆಗೆ ಸೇರಿದ ಒಂದು ನಗರವಾಗಿರಬೇಕು.

[2]ಆರ್ಮೀನಿಯ : ಕ್ರೈಸ್ತರ ಐತಿಹ್ಯದಲ್ಲಿ ಈಡನ್ ತೋಟವಿದ್ದ ಪ್ರದೇಶ. ಬೈಬಲ್ ಪವಿತ್ರಗ್ರಂಥದ ಪ್ರಕಾರ ಮೊದಲು ಸೃಷ್ಟಿಯಾದ ಆದಾಮ್ (ಪುರುಷ) ಮತ್ತು ಈವ್ (ಸ್ತ್ರೀ) ಈ ತೋಟದಲ್ಲಿದ್ದರು. ಈಗ ಆರ್ಮೀನಿಯ ಸೋವಿಯಾತ್ ರಷ್ಯಾಕ್ಕೆ ಸೇರಿದೆ,

ಕಾಶ್ಮೀರದ ಪ್ರಸಿದ್ಧವಾದ ಹಾಗೂ ಜನರ ಜೀವನಾಧಾರವಾದ ಉದ್ಯಮವೆಂದರೆ ಶಾಲುಗಳ ತಯಾರಿಕೆ. ಶಾಲುಗಳನ್ನು ಹೇರಳವಾಗಿ ತಯಾರಿಸುತ್ತಾರೆ. ಕಾಶ್ಮೀರದ ಹೆಚ್ಚು ವ್ಯಾಪಾರ ನಡೆಯುವುದು ಶಾಲುಗಳಲ್ಲಿ. ಅದರ ಶ್ರೀಮಂತಿಕೆ ಶಾಲುಗಳಲ್ಲಿ. ಮಕ್ಕಳಿಗೆ ಕೆಲಸ ಸಿಗುವುದು ಶಾಲುಗಳಿಂದಲೇ. ಒಂದಡಿ ಅಗಲದ ಮಗ್ಗಗಳಲ್ಲಿ ಒಂದೂವರೆ ಎಲ್ (ell=ಇಂಗ್ಲಿಷ್ ಎಲ್‌ನ ಉದ್ದ ೪೫ ಅಂಗುಲ) ಉದ್ದ, ಒಂದು ಎಲ್ ಅಗಲವುಳ್ಳ ಈ ಶಾಲುಗಳನ್ನು ನೇಯ್ದು ಎರಡೂ ಕಡೆಯೂ ಒಂದು ತರಹ ಕಸೂತಿ ಕೆಲಸ ಮಾಡುತ್ತಾರೆ. ಇಂಡಿಯನ್ ಮತ್ತು ಮೊಗಲ್ ಹೆಂಗಸರು ಗಂಡಸರೆಲ್ಲ ಈ ಶಾಲುಗಳನ್ನು ಚಳಿಗಾಲದಲ್ಲಿ ತಲೆಗೆ ಕಟ್ಟಿಕೊಳ್ಳುತ್ತಾರೆ ; ಎಡ ಭುಜದ ಮೇಲೆ ಎಸೆದುಕೊಳ್ಳುತ್ತಾರೆ. ಈ ಶಾಲುಗಳಲ್ಲಿ ಎರಡು ವಿಧ. ಒಂದನೆಯದು, ಇಲ್ಲಿಯೇ ದೊರೆಯುವ ಉಣ್ಣೆಯಿಂದ ತಯಾರಾದದ್ದು. ಈ ಉಣ್ಣೆ ಸ್ಪೈಯಿನ್ ದೇಶದ ಉಣ್ಣೆಗಿಂತ ಸೂಕ್ಷ್ಮವೂ ಮೃದುವೂ ಆದುದು. ಇನ್ನೊಂದು, ಮಹಾ ತಿಬೆಟನಲ್ಲಿ ಇರುವ ಒಂದು ತರಹ ಆಡುಗಳ ಕೂದಲು. ಈ ಕೂದಲನ್ನು 'ತೂಸ್' (Tauz = tus) ಎಂದು ಕರೆಯುತ್ತಾರೆ. ಎರಡನೆಯ ತರದ ಉಣ್ಣೆಯಿಂದ ಮಾಡಿದ ಶಾಲುಗಳಿಗೆ ಸ್ಥಳದ ಉಣ್ಣೆಯಿಂದ ಮಾಡಿದ ಶಾಲುಗಳಿಗಿಂತ ಹೆಚ್ಚು ಗಿರಾಕಿ. ಅಮೀರರುಗಳಿಗೆಂದು ಮಾಡಿದ ಕೆಲವು ಶಾಲುಗಳನ್ನು ನೋಡಿದ್ದೇನೆ. ಅವುಗಳ ಬೆಲೆ ಒಂದೊಂದಕ್ಕೆ ನೂರೈವತ್ತು ರೂಪಾಯಿಗಳು. ಬೇರೆ ತುಪ್ಪಟದಿಂದ ಮಾಡಿದ ಶಾಲುಗಳ ಬೆಲೆ ಯಾವಾಗಲೂ ಐವತ್ತು ರೂಪಾಯಿಗಳಿಗಿಂತ ಹೆಚ್ಚಿಲ್ಲ ಎಂದು ಕೇಳಿದ್ದೇನೆ. ಈ ಶಾಲುಗಳಿಗೆ ನುಸಿಹೊಡೆಯುವುದು ಹೆಚ್ಚು. ಆದ್ದರಿಂದ ಇವನ್ನು ಆಗಾಗ್ಗೆ ಹೊರತೆಗೆದು, ಗಾಳಿ ಆಡಿಸಬೇಕು. ಆಡುಗಳ ಈ ಕೂದಲಿದೆಯಲ್ಲ ಅದು ನಮ್ಮ ದೇಶದ ಬೀವರ್ ಪ್ರಾಣಿಯ ಮೃದುಕೂದಲಿಗಿಂತ ಮೃದು.

ಇದೇ ತರಹ ಶಾಲುಗಳನ್ನು ತಯಾರಿಸಬೇಕೆಂದು ಆಗ್ರಾ, ಪಟ್ನಾ ಮತ್ತು ಲಾಹೋರುಗಳಲ್ಲಿ ಬಹಳ ಪ್ರಯತ್ನ ನಡೆಸಲಾಗಿದೆ. ಆದರೆ ಅವು ಎಂದೂ ಕಾಶ್ಮೀರದ ಶಾಲುಗಳಷ್ಟು ಮೃದುವಾಗಿಯೂ ಸೂಕ್ಷ್ಮವಾಗಿಯೂ ಆಗುವುದಿಲ್ಲ. ಕಾಶ್ಮೀರದ ಶಾಲುಗಳ ಈ ಗುಣಗಳಿಗೆ ಬಹುಶಃ ಇಲ್ಲಿಯ ನೀರಿನ ವಿಶಿಷ್ಟತೆಯೇ ಕಾರಣ ಇರಬಹುದು. ಇದೇ ಕಾರಣವನ್ನು ಮುಸುಲಿಪಟ್ಟಣದ ಚೀಟಿ ಬಟ್ಟೆಗಳ ಬಣ್ಣಕ್ಕೂ ಹೇಳಬಹುದು.

ಕಾಶ್ಮೀರಿ ಜನಗಳು ತಮ್ಮ ನಿರ್ಮಲ ಬಣ್ಣಕ್ಕೂ ಸುಂದರ ರೂಪಿಗೂ ಹೆಸರುವಾಸಿಯಾಗಿದ್ದಾರೆ. ಇವರು ಯೂರೋಪಿಯನರಷ್ಟೇ ಚಂದವಾದ ಮೈಕಟ್ಟುಳ್ಳ ಜನ. ಇವರ ಮುಖಗಳು ಟಾರ್ಟರರ ಮುಖಗಳಂತೆ ಚಪ್ಪಟೆಯಾಗಿಯೂ ಇಲ್ಲ, ಕಣ್ಣುಗಳು ಕಾಷ್‌ಘರ್ ಮತ್ತು ಮಹಾ ತಿಬೆಟಿನ ಜನರ ಹಂದಿ ಕಣ್ಣುಗಳಂತೆಯೂ ಇಲ್ಲ. ಸ್ತ್ರೀಯರಂತೂ ಬಹು ಚೆಲುವೆಯರು. ಮೊಗಲ್ ಆಸ್ಥಾನಕ್ಕೆ ಮೊಟ್ಟಮೊದಲು ಪ್ರವೇಶ ಪಡೆದ ಪ್ರತಿಯೊಬ್ಬನೂ ಇಲ್ಲಿಂದಲೇ ತಾನು ಮದುವೆಯಾಗಬೇಕಾಗಿರುವ ಅಥವಾ ಇಟ್ಟುಕೊಳ್ಳಬೇಕಾದ ಹೆಣ್ಣನ್ನು ಆರಿಸುವುದು. ಹುಟ್ಟುವ ಮಕ್ಕಳು ಇಂಡಿಯನರಿಗಿಂತ ಬೆಳ್ಳಗೆ ಹುಟ್ಟಿ, ಅವು

ಮುಂದೆ ಸಾಚಾ ಮೊಗಲರಂತೆ ಕಾಣಲಿ ಎಂಬುದೇ ಇದರ ಉದ್ದೇಶ. ಹಾದಿಬೀದಿಗಳಲ್ಲಿ ಮತ್ತು ಅಂಗಡಿ ಮುಂಗಟ್ಟುಗಳಲ್ಲಿ ಕಾಣುವ ಹೆಂಗಸರನ್ನು ನೋಡಿದರೆ ಶ್ರೀಮಂತ ವರ್ಗದ ಹೆಂಗಸರು ಇನ್ನೂ ಸುಂದರವಾಗಿರಬಹುದೆಂಬುದರಲ್ಲಿ ಸಂದೇಹವಿಲ್ಲ.

ನಾನು ಈ ಹೆಂಗಸರ ಮುಖ ನೋಡಲು ಮೊಗಲರು ಅನುಸರಿಸುವ ಉಪಾಯವನು ಲಾಹೋರಿನಲ್ಲಿದ್ದಾಗ ನಾನೂ ಅನುಸರಿಸಿದೆ. ಲಾಹೋರಿನ ಕಂದುಕೂದಲಿನ ಸುಂದರಿಯರು ಅವರ ಸುಂದರ ಮೈಕಟ್ಟಿಗೆ ಇಡೀ ಇಂಡೀಸಿನಲ್ಲೇ ಹೆಸರಾಗಿದ್ದಾರೆ. ನಾನು ಒಮ್ಮೆ, ಬಹಳ ಸೊಗಸಾಗಿ ಅಲಂಕರಿಸಲ್ಪಟ್ಟ ಆನೆಗಳನ್ನು ಹಿಂಬಾಲಿಸಿದೆ. ಆನೆಗಳು ಮುಂದಕ್ಕೆ ಹೆಜ್ಜೆ ಇಟ್ಟು ಅವುಗಳ ಕೊರಳಿಗೆ ಹಾಕಿದ್ದ ಬೆಳ್ಳಿಯ ಸರಗಂಟೆಗಳನ್ನು ಝಣಝಣ ಎನ್ನಿಸಿದ ಕೂಡಲೇ ಮೇಲೆ ಕುಳಿತ ಸ್ತ್ರೀಯರು ಹೊರಕ್ಕೆ ತಲೆಹಾಕುತ್ತಾರೆಂದು ನನಗೆ ಗೊತ್ತು. ಆಗ ಅವರನ್ನು ನೋಡಿ ತೃಪ್ತಿಪಟ್ಟುಕೊಳ್ಳುತ್ತಿದ್ದೆ. ಇದೇ ಉಪಾಯವನ್ನು ಮೊದಲು ಕಾಶ್ಮೀರದಲ್ಲಿಯೂ ಮಾಡಿದೆ. ಆಮೇಲೆ ಒಬ್ಬ ಹೆಸರಾದ ಕಾಶ್ಮೀರಿ ಪಂಡಿತನ ಪರಿಚಯವಾಯಿತು. ಆತನೊಡನೆ ನಾನು ಪರ್ಶಿಯನ್ ಕವಿತೆಗಳನ್ನು ಓದುತ್ತಿದ್ದೆ. ಆತನು ಸಲೀಸಾಗಿ ಹೋಗಬಹುದಾದ ಮನೆಗಳಿಗೆ ನಾನೂ ಅವನ ಜೊತೆ ಹೋದೆ. ಹೋಗುವಾಗ ಕೈತುಂಬ ಸಿಹಿತಿಂಡಿಗಳನ್ನು ತೆಗೆದುಕೊಂಡು ಹೋಗುತ್ತಿದ್ದೆ. ಸುಮಾರು ಹದಿನೈದು ಮನೆಗಳಿಗೆ ಆತ ನನ್ನನ್ನು ಕರೆದುಕೊಂಡು ಹೋದ. ಆತ ಆ ಮನೆಗಳಿಗೆ ಹೋದಾಗ ನಾನು ಆಗತಾನೆ ಪರ್ಶಿಯಾದಿಂದ ಬಂದ ಸಂಬಂಧಿ ಎಂದು ಅವರಿಗೆ ನನ್ನ ಪರಿಚಯ ಮಾಡಿಕೊಡುತ್ತಿದ್ದ. ಮನೆಯನ್ನು ಪ್ರವೇಶಿಸಿದ ಕೂಡಲೇ ಆತ ನಾನು ತೆಗೆದುಕೊಂಡು ಹೋದ ಸಿಹಿತಿಂಡಿಗಳನ್ನು ಮಕ್ಕಳಿಗೆ ಹಂಚುತ್ತಿದ್ದ. ಆಗ ಮನೆಯಲ್ಲಿನ ಮದುವೆಯಾದ ಮತ್ತು ಮದುವೆಯಾಗದ ಜನರೆಲ್ಲರೂ ಹೊರಗೆ ಬರುತ್ತಿದ್ದರು. ನನ್ನೀ ಆಸಕ್ತಿ ಸಿಹಿತಿಂಡಿಗಳಿಗೆ ಆಗುತ್ತಿದ್ದ ವೆಚ್ಚದಿಂದ ಅನೇಕ ರೂಪಾಯಿಗಳು ನನ್ನ ಕೈಬಿಡು ವಂತೆ ಮಾಡುತ್ತಿತ್ತು. ಯೂರೋಪಿನಲ್ಲಿರುವಷ್ಟೇ ರೂಪವತಿಯರು ಕಾಶ್ಮೀರದಲ್ಲಿಯೂ ಇದ್ದಾರೆಂಬುದು ಸಿದ್ಧವಾಯಿತು.

ಈಗ ನಾನು ಭಿಂಭಾರಿನಿಂದ ಇಲ್ಲಿಗೆ ಮಾಡಿದ ಪ್ರಯಾಣದ ವಿಚಾರ, ಇಲ್ಲಿಗೆ ಬಂದ ಮೇಲೆ ಅಲ್ಲಿಲ್ಲಿ ಅಡ್ಡಾಡಿದ್ದು, ಮತ್ತು ಈ ರಾಜ್ಯವನ್ನು ಬಳಸಿರುವ ಪರ್ವತಗಳಲ್ಲಿರುವ ಬೇರೆ ಮಾರ್ಗಗಳು—ಇಷ್ಟನ್ನು ಹೇಳಬೇಕಾಗಿದೆ. ಈ ಪತ್ರವನ್ನು ಭಿಂಭಾರಿನಿಂದ ಇಲ್ಲಿಗೆ ಮಾಡಿದ ಪ್ರಯಾಣದ ವಿಷಯದಿಂದಲೇ ಆರಂಭಿಸಬೇಕಾಗಿತ್ತು. ಭಿಂಭಾರನ್ನು ಬಿಟ್ಟ ಮೊದಲ ರಾತ್ರಿಯೇ ನಾನು ಸುಡುಬಿಸಿಲಿನ ಪ್ರದೇಶದಿಂದ ಹಿತಹವೆಯ ಪ್ರದೇಶಕ್ಕೆ ಇದ್ದಕ್ಕಿದ್ದಂತೆ ಹೋದಂತೆ ಆಯಿತು. ಏಕೆಂದರೆ ಆ ಎತ್ತರದ, ಕಡಿದಾದ, ಕಪ್ಪನೆಯ ಹಾಗೂ ಮರಗಿಡಗಳಿಲ್ಲದ ಭೀತಿಪಡಿಸುವ ಆ ಪರ್ವತವನ್ನು ಹತ್ತಿ ಈ ಕಡೆಗೆ ಇಳಿಯುವುದಕ್ಕೆ ಆರಂಭಿಸಿದ ಕೂಡಲೇ ತಿಳಿಯಾದ ಹಾಗೂ ತಂಪಾದ ಹೂಗಾಳಿ ಬೀಸಲಾರಂಭಿಸಿತು. ನನಗಾದ ಇನ್ನೊಂದು ಆಶ್ಚರ್ಯವೆಂದರೆ, ನಾನು ಇಂಡೀಸಿನಿಂದ ಯೂರೋಪಿಗೆ ಹಠಾತ್ತನೆ

ಹೋದಂತಾದುದು. ನಾವು ಹಾಯುತ್ತಿದ್ದ ಬೆಟ್ಟಗಳು ನಮ್ಮ ಯೂರೋಪಿನಲ್ಲಿರುವ ಹೆಚ್ಚು ಕಮ್ಮಿ ಎಲ್ಲ ತರಹ ಮರಗಳಿಂದ ತುಂಬಿದ್ದುವು. ಈ ಮನೋಹರವಾದ ದೃಶ್ಯವೆಲ್ಲಿ, ಈಗ ತಾನೆ ಬಿಟ್ಟುಬಂದ ಆ ಸುಡುನೆಲದ ಪಿಡುಗೆಲ್ಲಿ !

ಒಂದೆರಡು ದಿನಗಳ ದಾರಿ ನಡೆದ ಮೇಲೆ ಒಂದು ಪರ್ವತ ನನ್ನ ಮನಸ್ಸನ್ನು ಆಕರ್ಷಿಸಿತು.[1] ಅದರ ಇಬ್ಬದಿಯಲ್ಲೂ ದಟ್ಟವಾದ ಮರಗಿಡಗಳಿದ್ದವು. ದಕ್ಷಿಣಕ್ಕೆ, ಅಂದರೆ ಹಿಂದೂಸ್ಥಾನದ ಕಡೆಗೆ, ಇರುವ ಭಾಗ ಇಂಡಿಯನ್ ಮತ್ತು ಯೂರೋಪಿಯನ್ ಮರಗಳಿಂದ ತುಂಬಿತ್ತು. ಆದರೆ ಉತ್ತರದ ಕಡೆಗಿದ್ದ ಭಾಗ ಬರೀ ಯೂರೋಪಿಯನ್ ಮರಗಳಿಂದ ಕೂಡಿತ್ತು. ಇದರಿಂದ ಒಂದು ಭಾಗಕ್ಕೆ ಇಂಡಿಯಾ ಮತ್ತು ಯೂರೋಪ್–ಈ ಎರಡು ದೇಶಗಳಂಥ ಹವೆ ಹಾಗೂ ಉಷ್ಣ ತಟ್ಟುತ್ತದೆ ; ಇನ್ನೊಂದು ಭಾಗಕ್ಕೆ ಯೂರೋಪಿನಂಥ ಸೌಮ್ಯವಾದ ಹವೆ ತಟ್ಟುತ್ತದೆ ಎಂಬ ವಿಷಯ ಸ್ಪಷ್ಟವಾಗುವುದು.

ನಮ್ಮ ಪ್ರಯಾಣದ ಕಾಲದಲ್ಲಿ ನಾನು ಹಲವಾರು ಆಯುಮಾನದ ಹೊಸ ಬಗೆಯ ಮತ್ತು ಹಳೆಯ ಬಗೆಯ ಮರಗಳನ್ನು ನೋಡಿ ಆನಂದಪಡದೆ ಇರಲಿಲ್ಲ. ಮನುಷ್ಯನು ಎಂದೂ ಕಾಲಿಡದ ಪ್ರಪಾತಗಳಿಗೆ ನೂರಾರು ಮರಗಳು ಮಗುಚಿಕೊಂಡಿದ್ದುವು ; ಇನ್ನೂ ಮಗುಚಿಕೊಳ್ಳುತ್ತಿದ್ದುವು. ಸತ್ತ ಮರಗಳು ಒಂದರ ಮೇಲೊಂದು ಮಗುಚಿಕೊಂಡು ಕಾಲದಲ್ಲಿ ಲೀನವಾಗಲು ಕಾಯುತ್ತಿದ್ದುವು. ಅತ್ತ ಸತ್ತ ಮರಗಳ ಜಾಗದಲ್ಲಿ ಹೊಸ ತರುಗಳು ಹುಟ್ಟುತ್ತಿದ್ದುವು. ಬೆಂಕಿಗೆ ಬೆಂದುಹೋದ ಮರಗಳನ್ನೂ ಕಂಡೆ. ಈ ಬೆಂಕಿ ಸಿಡಿಲಿನಿಂದ ಉಂಟಾಯಿತೋ, ಭೋರೆಂದು ಬೀಸುವ ಬಿರುಗಾಳಿಗೆ ಮರಮರಗಳು ತಿಕ್ಕಿ ಉಂಟಾದ ಕಿಡಿಗಳಿಂದ ಆಯಿತೋ, ಅಥವಾ ಸ್ಥಳದ ಜನರು ಹೇಳುವಂತೆ, ಮುದಿಯಾಗಿ ಒಣಗಿ ಹೋದ ಮರಗಳು ಅವಕ್ಕೆ ಅವೇ ಹತ್ತಿಕೊಂಡು ಉರಿದುವೋ ಹೇಳಲಾರೆ.

ಬಂಡೆಗಳ ಮಧ್ಯೆ ಅಲ್ಲಲ್ಲಿ ಬೀಳುವ ಜಲಪಾತಗಳು ಈ ಪ್ರದೇಶದ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸುತ್ತವೆ. ನಾನು ಕಂಡ ಒಂದನ್ನು ಸರಿಗಟ್ಟುವ ಮತ್ತೊಂದು ಜಲಪಾತವನ್ನು ಇಲ್ಲಿಯವರೆಗೆ ನಾನು ನೋಡಿಲ್ಲ. ಅದು ನನಗೆ ಕಂಡದ್ದು ಎತ್ತರವಾದ ಒಂದು ಪರ್ವತದ ಪಕ್ಕಕ್ಕೆ ಸ್ವಲ್ಪ ದೂರದಲ್ಲಿ. ಮರಗಿಡಗಳಿಂದ ಮುಚ್ಚಲ್ಪಟ್ಟ ಮತ್ತು ಮಬ್ಬು ಮುಸುಕಿದ ನೀಳವಾದ ನದಿಯು ರಭಸದಲ್ಲಿ ಹರಿದು ಇದ್ದಕ್ಕಿದ್ದಂತೆ ಅಗಾಧ ಎತ್ತರದ ಬಂಡೆಯ ಮೇಲಿಂದ ನೆಟ್ಟನೆ ಪ್ರಪಾತಕ್ಕೆ ಧುಮುಕಿ, ಕಿವಿ ಕಿವುಡಾಗುವಷ್ಟು ಭೋರ್ಗರೆಯುವ ಆ ದೃಶ್ಯವನ್ನು ಮರೆಯುವುದೆಂತು ! ಈ ಪ್ರಕೃತಿಯ ವೈಭವವನ್ನು ಅರಮನೆಯವರು ಆರಾಮವಾಗಿ ನೋಡಲೆಂದು ಜಹಂಗೀರ ಪಕ್ಕದ ಬಂಡೆಯ ಮೇಲೆ ಒಂದು ದೊಡ್ಡ ವಿಶ್ರಾಂತಿ ಗೃಹವನ್ನು ಕಟ್ಟಿಸಿದ್ದಾನೆ. ಅಲ್ಲಿ ಕುಳಿತು ನೋಡಿದರೆ ಆ ಭವ್ಯ ಜಲಪಾತ

---

[1] ಸಮುದ್ರಮಟ್ಟಕ್ಕೆ ೧೧,೪೦೦ ಅಡಿ ಎತ್ತರವಿರುವ ರತನ್ ಪರ್ವತ.

ವನ್ನಷ್ಟೇ ಅಲ್ಲ, ಪ್ರಪಂಚದ ಆದಿಯಷ್ಟೇ ಹಳೆಯದಾದ ವೃಕ್ಷರಾಜಿಯನ್ನು ವೀಕ್ಷಿಸ ಬಹುದು.[1]

ಈ ಸುಂದರ ದೃಶ್ಯಗಳನ್ನು ನೋಡುತ್ತಾ ಆನಂದದಲ್ಲಿ ತಲ್ಲೀನರಾಗಿರುವಾಗ ಒಂದು ವಿಚಿತ್ರ ಘಟನೆ ನಮ್ಮ ಉತ್ಸಾಹಕ್ಕೆ ಭಂಗ ತಂದಿತು. ಚಕ್ರವರ್ತಿಯು ಪೀರ್‌ಪಿಂಜಾಲ್ (ಪೀರ್ ಪಂತಸಾಲ್) ಪರ್ವತವನ್ನೇರುತ್ತಿದ್ದ. ಇದು 'ಇಲ್ಲಿಯ ಅತ್ಯಂತ ಎತ್ತರವಾದ ಪರ್ವತ. ಈ ಎತ್ತರದ ಪರ್ವತವನ್ನೇರಿದರೆ ಇಡೀ ಕಾಶ್ಮೀರ ದೇಶದ ಮೊದಲ ದೃಶ್ಯವನ್ನು ನೋಡಬಹುದಾಗಿತ್ತು. ಈ ಉದ್ದೇಶದಿಂದ ಔರಂಗಜೇಬ ಬೆಟ್ಟವನ್ನು ಏರುತ್ತಿದ್ದ. ಅವನನ್ನು ಹಿಂಬಾಲಿಸಿ ಅಂತಃಪುರದ ಸ್ತ್ರೀಯರು ಆನೆಗಳ ಮೇಲೆ ಅಂಬಾರಿಗಳಲ್ಲಿ ಕುಳಿತು ಹೋಗುತ್ತಿದ್ದರು. ಆನೆಗಳು ಸಾಲಾಗಿ ಹೋಗುತ್ತಿದ್ದುವು. ಎಲ್ಲಕ್ಕಿಂತ ಮುಂದಿದ್ದ ಆನೆ ಮುಂದಿನ ಆ ಎತ್ತರದ ನಿಡುದಾರಿಯನ್ನು ಕಂಡೋ ಏನೋ, ಹಿನ್ನೆಜ್ಜೆ ಇಟ್ಟು ಹಿಂದೆ ಬರುತ್ತಿದ್ದ ಆನೆಗೆ ಹೊಡೆದುಕೊಂಡಿತು. ಆ ಎರಡನೇ ಆನೆ ಮೂರನೇ ಆನೆಗೆ ಹೊಡೆದುಕೊಂಡಿತು. ಹೀಗೆ ಒಂದಾನೆ ಇನ್ನೊಂದಾನೆಯನ್ನು ಹೊಡೆದುಕೊಳ್ಳುತ್ತಾ ಹೋದ ಕಾರಣ, ಆ ಕಡಿದಾದ ಹಾದಿಯಲ್ಲಿ ಎತ್ತಲೂ ತಿರುಗಲಾರದೆ ಹದಿನಾರು ಆನೆ ಗಳೂ ಒಂದರ ಮೇಲೊಂದು ಎತ್ತರದಿಂದ ಬಿದ್ದುಬಿಟ್ಟವು. ಹೆಂಗಸರ ಅದೃಷ್ಟವೋ ಏನೋ, ಅವರು ಬಹಳ ಎತ್ತರದಿಂದ ಬೀಳಲಿಲ್ಲ. ಈ ಕಾರಣ ಮೂವರು ನಾಲ್ವರು ಹೆಂಗಸರು ಮಾತ್ರ ಸತ್ತರು. ಆದರೆ ಆನೆಗಳಲ್ಲಿ ಒಂದನ್ನೂ ಉಳಿಸಲು ಸಾಧ್ಯವಾಗಲಿಲ್ಲ. ಭಾರಿ ಹೊರೆ ಹೊತ್ತ ಆನೆಗಳು ಒಮ್ಮೆ ಕೆಳಗೆ ಬಿದ್ದರೆ ಪುಟ್ಟಸವಾದ ಹಾದಿಯಲ್ಲೂ ಸಹ ಮತ್ತೆ ಏಳಲಾರವು. ಎರಡು ದಿನಗಳ ತರುವಾಯ ನಾವು ಈ ಹಾದಿಯಲ್ಲಿ ಹೋಗುತ್ತಿ ರುವಾಗ ಪಾಪ ಕೆಲವು ಆನೆಗಳು ಇನ್ನೂ ಸೊಂಡಿಲುಗಳನ್ನು ಅಲ್ಲಾಡಿಸುತ್ತಾ ಸಾವನ್ನು ಎದುರುನೋಡುತ್ತಿದ್ದುವು.

ಪರ್ವತಗಳಲ್ಲಿ ಒಬ್ಬರ ಹಿಂದೊಬ್ಬರಂತೆ ನಾಲ್ಕು ದಿವಸಗಳ ಕಾಲ ದಾರಿ ನಡೆಯು ತ್ತಿದ್ದ ಸೈನ್ಯ ಈ ದುರಂತದಿಂದ ತುಂಬಾ ತೊಂದರೆಗೀಡಾಯಿತು. ದುರಂತ ನಡೆದ ದಿನದ ಉಳಿದ ಹೊತ್ತು ಮತ್ತು ಇಡೀ ರಾತ್ರಿಯೆಲ್ಲಾ ಕೆಳಗೆ ಬಿದ್ದ ಹೆಂಗಸರನ್ನು ಮೇಲೆತ್ತುವ

---

[1] 'ನೂರ್-ಇ-ಚಷ್ಮ' ಅಥವಾ 'ಕಣ್ಣಿನ ಬೆಳಕು' ಎಂದು ಪ್ರಸಿದ್ಧವಾದ ಜಲಪಾತ. ಇದನ್ನು ಬಾರಾಮೂಲದಿಂದ ಹೋಗಿ ನೋಡಿಕೊಂಡು ಬರಬಹುದು. ಈಚಿನ ಒಂದು ವರ್ಣನ ಬೆರ್ನ್ಯೇ ಮಾಡಿದ ವರ್ಣನೆಯನ್ನು ಸಮರ್ಥಿಸುತ್ತದೆ : "ಈ ಜಲಪಾತಕ್ಕೆ ಬರುವ ಕೊರೆಯುವ ನೀರಿನ ಪ್ರವಾಹ ಬಹು ಸುಂದರವಾದ ತರುಲತೆಗುಲ್ಮಗಳಿಂದ ಕೂಡಿದ ಹಳ್ಳದಲ್ಲಿ ಬಂಡೆಯಿಂದ ಬಂಡೆಗೆ ನೆಗೆದು, ಮುಂದೆ ತಾನು ಕೈಗೊಳ್ಳಲಿರುವ ಲಂಘನಕ್ಕೆ ಸಂತಸ ದಿಂದ ಕುಣಿದು ಕುಪ್ಪಳಿಸಿ, ಅಪ್ಪಳಿಸಿ, ಆರ್ಭಟಿಸುತ್ತಾ ಎಪ್ಪತ್ತು ಅಡಿ ಎತ್ತರದಿಂದ ಧುಮುಕು ತ್ತದೆ."

ಮತ್ತು ಸಾಮಾನುಗಳನ್ನು ಸಾಗಿಸುವ ಕೆಲಸ ನಡೆಯಿತು. ಇಷ್ಟು ಕಾಲವೂ ಸೈನ್ಯ ನಿಂತ ಕಡೆಯೇ ನಿಲ್ಲಬೇಕಾಯಿತು. ಅನೇಕ ಕಡೆಗಳಲ್ಲಿ ಹಿಂದಕ್ಕಾಗಲಿ ಮುಂದಕ್ಕಾಗಲಿ ಹೋಗಲು ಸಾಧ್ಯವಿರಲಿಲ್ಲ. ಆ ಹಲ್ಕ ಜನ, ಅಂದರೆ ಸಾಮಾನು ಹೊರುವ ಮಂದಿ, ಡೇರೆ ಮತ್ತು ಭತ್ಯದ ಸಾಮಾನುಗಳನ್ನು ಹೊತ್ತುಕೊಂಡು ಎಲ್ಲೋ ಇದ್ದರು. ಸಧ್ಯ ನನ್ನ ಅದೃಷ್ಟ ನನ್ನನ್ನು ಹಿಂಬಾಲಿಸಿತ್ತು. ಸೈನ್ಯದ ನಡಿಗೆಯ ಸಾಲನ್ನು ಬಿಟ್ಟು ನಾನು ಪೇಗೋ ಪಕ್ಕಕ್ಕೆ ಹೊರಳಿ, ಅಲ್ಲೊಂದು ಅನುಕೂಲವಾದ ಸ್ಥಳ ಹುಡುಕಿದೆ. ಅಲ್ಲಿ ನಾನೂ ನನ್ನ ಕುದುರೆಯೂ ಆರಾಮವಾಗಿ ನಿದ್ದೆಮಾಡಿದೆವು. ನನ್ನೊಡನೆ ಇದ್ದ ಆಳಿನ ಬಳಿ ಒಂದಿಷ್ಟು ರೊಟ್ಟಿ ಇತ್ತು. ಅದನ್ನೇ ನಾವಿಬ್ಬರೂ ಹಂಚಿಕೊಂಡು ತಿಂದೆವು. ಇಲ್ಲಿ ತಂಗಿದ್ದಾಗಲೇ ಎಂದು ಕಾಣುತ್ತೆ, ನಾನು ಅಲ್ಲಿ ಬಿದ್ದಿದ್ದ ಕಲ್ಲನ್ನು ಎತ್ತಿದಾಗ ಅದರ ಕೆಳಗಡೆ ದೊಡ್ಡದಾದ ಕಪ್ಪುಬಣ್ಣದ ಚೇಳನ್ನು ಕಂಡದ್ದು. ಒಬ್ಬ ಮೊಗಲ ಯುವಕ ಅದನ್ನು ಹಿಸುಕಿದರೂ ಅದು ಕಚ್ಚಲಿಲ್ಲ. ನಾನು ಮತ್ತು ನನ್ನ ಸೇವಕ ಹಿಸುಕಿದಾಗಲೂ ಅದು ಏನೂ ಮಾಡಲಿಲ್ಲ. 'ಕೊರಾನಿನಿಂದ ಏನೋ ಮಂತ್ರ ಹೇಳಿ ಆ ಚೇಳನ್ನು ಮರಳುಮಾಡಿಬಿಟ್ಟೆ' ಎಂದು ಆ ಮೊಗಲ್ ಯುವಕ ಜಂಭಕೊಚ್ಚಿಕೊಂಡ. 'ಆ ಮಂತ್ರವನ್ನು ನಿನಗೆ ಹೇಳಿ ಕೊಡುವುದಿಲ್ಲ. ಹಾಗೆ ಹೇಳಿಬಿಟ್ಟರೆ ಅದರ ಶಕ್ತಿ ನನ್ನಿಂದ ನಿನಗೆ ಹೋಗಿಬಿಡುತ್ತದೆ' ಎಂದು ಹೇಳಿದ.

ಇದೇ ಪೀರ್ ಪಂಜಾಲ್ ಪರ್ವತವನ್ನು ಆನೆಗಳು ಮುಗ್ಗರಿಸಿ ಬಿದ್ದ ಕಡೆ ಹಾಯು ತ್ತಿರುವಾಗ ನಡೆದ ಮೂರು ಪ್ರಸಂಗಗಳನ್ನು ಹೇಳಬಯಸುತ್ತೇನೆ. ಒಂದನೆಯದು, ಒಂದೇ ಗಂಟೆಯಲ್ಲಿ ಬೇಸಗೆ ಮತ್ತು ಚಳಿಗಾಲ ಎರಡನ್ನೂ ಅನುಭವಿಸಿದ್ದು. ಹತ್ತುವಾಗ ಸೂರ್ಯನ ತಾಪಕ್ಕೆ ಸಿಕ್ಕಿ ಬೆವೆತು ನೀರಾಗಿದ್ದೆವು; ಆದರೆ ತುದಿಯನ್ನು ಮುಟ್ಟಿದಾಗ ಹೆಪ್ಪುಗಟ್ಟಿದ ಹಿಮಗೆಡ್ಡೆಯ ಮಧ್ಯೆ ಇದ್ದೆವು. ಹಿಮಗೆಡ್ಡೆಯನ್ನು ಕಡಿದು ಅದರ ಮೂಲಕ ಸೈನ್ಯಕ್ಕೆ ದಾರಿ ಮಾಡಿದ್ದರು. ಗಡ್ಡೆ ಕಟ್ಟುವ ಮಳೆ ಕೊಂಚ ಕೊಂಚವಾಗಿ ಬೀಳುತ್ತಿತ್ತು. ನೆತ್ತರನ್ನು ಹೆಪ್ಪುಗಟ್ಟಿಸುವ ಕುಳಿರ್ಗಾಳಿ ಬೀಸುತ್ತಿತ್ತು. ಚಳಿಗಾಲದ ಕಷ್ಟವನ್ನೇ ಅರಿಯದ ಆ ಬಡಪಾಯಿ ಇಂಡಿಯನರು ಮೊಟ್ಟಮೊದಲಿಗೆ ಆ ಚಳಿ ಹಾಗೂ ಹಿಮಗಡ್ಡೆಗೆ ಸಿಕ್ಕಿ ಒದ್ದಾಡಿದರು; ಏಳುವುದು ಬೀಳುವುದನ್ನು ಕಾಣದೆ ಓಡಿದರು.

ಇನ್ನೊಂದು ವಿಷಯವೇನೆಂದರೆ, ಇನ್ನೂರು ದಾಪುಗಳಷ್ಟು ಅಂತರದಲ್ಲಿ ಗಾಳಿ ಎದುರು ಬದುರಾಗಿ ಬೀಸುತ್ತಿದ್ದುದು. ಪರ್ವತದ ತುದಿಗೆ ಹತ್ತುವಾಗ ಗಾಳಿ ನನ್ನ ಮುಖಕ್ಕೆ ಬೀಸುತ್ತಿತ್ತು; ಅಂದರೆ ಉತ್ತರದ ಕಡೆಯಿಂದ ಬೀಸುತ್ತಿತ್ತು. ಪರ್ವತವನ್ನು ಹತ್ತಿ ಆ ಕಡೆ ಇಳಿಯಲಾರಂಭಿಸಿದಾಗ, ಅದು ನನ್ನ ಬೆನ್ನಿಗೆ ಬೀಸುತಿತ್ತು; ಅಂದರೆ, ದಕ್ಷಿಣದ ಕಡೆಯಿಂದ ಬೀಸುತ್ತಿತ್ತು. ಎಲ್ಲ ಕಡೆಗಳಿಂದ ತಪ್ಪಿಸಿಕೊಂಡು ಬಂದ ಹಬೆಗಳು (vapours) ಬೆಟ್ಟದ ತುದಿಗೇರಿ ಅಲ್ಲಿ ದಟ್ಟವಾದ ಗಾಳಿಯಾಗಿ ಪರಿವರ್ತನೆಗೊಂಡುವೋ ಎಂಬಂತೆ ಇತ್ತು. ಅದೇ ಗಾಳಿಯು ಕೆಳಗಿನ ವಿರಳವಾದ ಬಿಸಿ ವಾಯುವಿನಿಂದ ಆಕರ್ಷಿಸಲ್ಪಟ್ಟು ಎದುರು

ಬದುರಾದ ಎರಡು ಕಣಿವೆಗಳಿಗೆ ಇಳಿಯುತ್ತಿದ್ದಿತೆಂದೂ ಹೇಳಬಹುದು.

ಮೂರನೆಯದಾದ ಬಹಳ ಮಹತ್ವದ ಸಂಗತಿಯೆಂದರೆ, ಒಬ್ಬ ವೃದ್ಧ ಸಂನ್ಯಾಸಿ ಜಹಂಗೀರನ ಕಾಲದಿಂದಲೂ ಈ ಪರ್ವತದ ತುದಿಯಲ್ಲಿ ವಾಸವಾಗಿದ್ದುದು. ಅವನು ಯಾವ ಧರ್ಮಕ್ಕೆ (Religion) ಸೇರಿದವನೆಂದು ಯಾರಿಗೂ ಗೊತ್ತಿರಲಿಲ್ಲ. ಆದರೆ ಆತ ಪವಾಡಗಳನ್ನು ಮಾಡುತ್ತಾನೆಂದು ಹೇಳುತ್ತಿದ್ದರು. ಆರ್ಭಟಿಸುವ ಗುಡುಗು ಸಿಡಿಲನ್ನು, ಭೋರೆಂದು ಬೀಸುವ ಬಿರುಗಾಳಿಯನ್ನು, ದಪ್ಪ ದಪ್ಪ ಆಲಿಕಲ್ಲುಗಳ ಮಳೆಯನ್ನು ಹಾಗೂ ಹಿಮವನ್ನು ಅವನು ಸೃಷ್ಟಿಸುತ್ತಿದ್ದನಂತೆ. ಇಳಿಯುಬಿಟ್ಟ ಬಿಳಿಯ ಗಡ್ಡದ ಹಾಗೂ ನೋಡಲು ಒಂದು ತರಹ ಗಡಸಿನ ಆ ಸಂನ್ಯಾಸಿ ಬಿಂಕದಿಂದ ಭಿಕ್ಷೆ ಕೇಳುತ್ತಿದ್ದ. ದೊಡ್ಡ ಕಲ್ಲೊಂದರ ಮೇಲೆ ಸಾಲಾಗಿ ಇಟ್ಟ ಮಣ್ಣಿನ ಬಟ್ಟಲುಗಳಲ್ಲಿ ನೀರು ಕುಡಿಯಲು ಅನುಮತಿಯನ್ನು ನೀಡಿ, ನೀರನ್ನು ಕುಡಿದವರು ನಿಲ್ಲದೆ ಆದಷ್ಟು ಜಾಗ್ರತೆ ಪರ್ವತದ ತುದಿಗೆ ಹತ್ತಿ ಕೆಳಗಿಳಿದು ಹೋಗಬೇಕೆಂದು ಕೈಸನ್ನೆಮಾಡಿ ಹೇಳುತ್ತಿದ್ದ. ಗದ್ದಲಮಾಡಿದವರ ಮೇಲೆ ರೇಗಿಬಿಡುತ್ತಿದ್ದ. ನಾನು ಆತನು ಇದ್ದ ಗುಹೆಯನ್ನು ಹೊಕ್ಕು, ಅರ್ಧ ರೂಪಾಯನ್ನು ಮರ್ಯಾದೆಯಿಂದ ಅವನ ಕೈಲಿಟ್ಟ ಮೇಲೆ ಆತ ಸಮಾಧಾನದಿಂದ ಹೇಳಿದ, ಗದ್ದಲಮಾಡಿದರೆ ಊಹಿಸಲಸಾಧ್ಯವಾದ ಪ್ರಚಂಡ ಬಿರುಗಾಳಿ ಎದ್ದುಬಿಡುವುದು ಎಂದು. ಔರಂಗಜೇಬ ಆತನು ಹೇಳಿದಂತೆ ತನ್ನ ಸೈನ್ಯವನ್ನು ಸದ್ದುಗದ್ದಲವಿಲ್ಲದೆ ಆತುರಾತುರವಾಗಿ ಸಾಗಿಸುವಂತೆ ಆಜ್ಞೆ ಮಾಡಿದ್ದು ಒಳ್ಳೆಯದಾಯಿತು ಎಂದ. ಔರಂಗಜೇಬನ ತಂದೆ ಷಾಜಹಾನನೂ ಇದೇ ರೀತಿ ಆ ಸಂನ್ಯಾಸಿ ಹೇಳಿದಂತೆ ವಿವೇಕದಿಂದ ನಡೆದುಕೊಳುತ್ತಿದ್ದನಂತೆ. ಆದರೆ ಜಹಂಗೀರ ಒಮ್ಮೆ ಆತನ ಬುದ್ಧಿವಾದವನ್ನು ಕಡೆಗಣಿಸಿ ಕೊಂಬು ಕಹಳೆ ಊದಿಸಿ ನಗಾರಿಗಳನ್ನು ಬಾರಿಸಿದ ಕಾರಣ ಅವನು ಬದುಕಿ ಉಳಿಯುವುದೇ ಕಷ್ಟವಾಯಿತಂತೆ.

ಇನ್ನು ಕಾಶ್ಮೀರ ರಾಜ್ಯದ ಹಲವಾರು ಕಡೆಗಳಲ್ಲಿ ನನಗುಂಟಾದ ಕೆಲವು ಅನುಭವಗಳನ್ನು ಹೇಳಲಿಚ್ಛಿಸುತ್ತೇನೆ. ಕಾಶ್ಮೀರ ನಗರವನ್ನು ಮುಟ್ಟಿದ ಕೂಡಲೇ ನನ್ನ ನವಾಬ ಮೂರು ದಿನಗಳ ಪ್ರಯಾಣದ ದೂರದಲ್ಲಿರುವ ಒಂದು ಸ್ಥಳಕ್ಕೆ ಹೋಗಿ ಅಲ್ಲಿಯ ಭವ್ಯವಾದ ಬುಗ್ಗೆಗಳನ್ನು ನೋಡಿಕೊಂಡು ಬಾ ಎಂದು ಹೇಳಿದ. ಸ್ಥಳದವನೊಬ್ಬ ನನ್ನು ಕರೆದುಕೊಂಡು ನವಾಬನ ಸಿಪಾಯಿಯೊಬ್ಬನ ಸಮೇತ ಅಲ್ಲಿಗೆ ಹೊರಟೆ. ಆ ಬುಗ್ಗೆಯ ವೈಶಿಷ್ಟ್ಯಗಳು ಯಾವುವೆಂದರೆ : ಮೇ ತಿಂಗಳಿನಲ್ಲಿ ಹಿಮ ಕರಗುವುದು ನಿಂತ ಮೇಲೆ ಈ ಬುಗ್ಗೆಯಲ್ಲಿ ಹದಿನೈದು ದಿವಸಗಳ ಕಾಲ ದಿನಕ್ಕೆ ಮೂರು ಹೊತ್ತು—ಬೆಳಗ್ಗೆ, ಮಧ್ಯಾಹ್ನ ಮತ್ತು ರಾತ್ರಿ—ನೀರು ಹರಿಯುವುದು. ಸುಮಾರು ಮುಕ್ಕಾಲು ಗಂಟೆ ಹೊತ್ತು ನೀರು ಹರಿಯುತ್ತದೆ. ಒಂದು ಸಲಕ್ಕೆ ಹತ್ತು ಹನ್ನೆರಡು ಅಡಿ ಆಳ ಮತ್ತು ಅಷ್ಟೇ ಅಗಲ ಹಾಗೂ ಉದ್ದ ಇರುವ ಒಂದು ತೊಟ್ಟಿ ತುಂಬುವಷ್ಟು ನೀರು ಬರುತ್ತದೆ. ಹದಿನೈದು ದಿನಗಳ ತರುವಾಯ ನೀರು ಕಡಿಮೆಯಾಗುತ್ತಾ ಹೋಗುತ್ತದೆ.

ಒಂದು ತಿಂಗಳಾದ ಮೇಲೆ ಅದು ನಿಂತೇಹೋಗುತ್ತದೆ. ನೀರಿನ ತೊಟ್ಟಿ ಇರುವ ಕಡೆ ಜೆಂಟೈಲರ ದೇವರುಗಳಲ್ಲಿ ಒಂದಾದ 'ಬ್ರಾರಿ' (Brare) ಎಂಬ ದೇವರ ಹೆಸರಿನಲ್ಲಿ ಕಟ್ಟಿದ ಸಣ್ಣ ಗುಡಿ ಇದೆ. ಈ ಕಾರಣ ಈ ಬುಗ್ಗೆಗೆ 'ಸೆಂದ್-ಬ್ರಾರಿ' ಅಥವಾ ಬ್ರಾರಿಯ ನೀರು ಎಂದು ಕರೆಯುತ್ತಾರೆ ನಾನಾ ಕಡೆಗಳಿಂದ ಭಕ್ತರು ಬಂದು ಈ ಪವಿತ್ರವಾದ ಹಾಗೂ ಅಪೂರ್ವವಾದ ತೀರ್ಥದಲ್ಲಿ ಸ್ನಾನಮಾಡಿ ಹೋಗುತ್ತಾರೆ.[1]

ಈ ಬುಗ್ಗೆಯ ಬಗ್ಗೆ ನಾನಾ ಕಟ್ಟುಕಥೆಗಳನ್ನು ಹೇಳುತ್ತಾರೆ. ಆದರೆ ಅವು ನಂಬಲು ಅನರ್ಹವಾದವುಗಳಾದ್ದರಿಂದ ಅದನ್ನು ಹೇಳಲು ನಾನು ಇಚ್ಛಿಸಡುವುದಿಲ್ಲ. ಸೆಂದ್-ಬ್ರಾರಿಯ ಹತ್ತಿರ ಐದಾರು ದಿನಗಳ ಕಾಲ ಇದ್ದು ಈ ಅದ್ಭುತಕ್ಕೆ ಕಾರಣವೇನೆಂದು ಹುಡುಕಿದೆ. ಯಾವ ಪರ್ವತದ ಬುಡದಲ್ಲಿ ಈ ಬುಗ್ಗೆ ಇದೆಯೋ ಆ ಪರ್ವತದ ಸುತ್ತು ಮುತ್ತಿನ ಪ್ರಾಕೃತಿಕ ಸ್ಥಿತಿಯನ್ನು ಪರೀಕ್ಷಿಸಿದೆ ಬಹಳ ಕಷ್ಟಪಟ್ಟು ಅದರ ತುದಿಯನ್ನು ಮುಟ್ಟಿದೆ. ಪ್ರತಿಯೊಂದು ಹೆಜ್ಜೆಗೂ ಏನೇನು ಇರಬಹುದೆಂದು ಹುಡುಕಿದೆ. ಈ ಪರ್ವತ ಬೇರೆ ಪರ್ವತಗಳಿಗೆ ಅತಿ ಸಮೀಪದಲ್ಲಿದ್ದರೂ, ಅವುಗಳಿಗೂ ಇದಕ್ಕೂ ಏನೇನು ಸಂಬಂಧವಿಲ್ಲ. ಉತ್ತರದಿಂದ ದಕ್ಷಿಣಕ್ಕೆ ಹಬ್ಬಿರುವ ಈ ಪರ್ವತ ಆಕಾರದಲ್ಲಿ ಕತ್ತಿಯ ಬೆನ್ನಿನಂತೆ ಕಾಣುತ್ತದೆ. ಬಹು ನಿಡಿದಾಗಿ ಹಬ್ಬಿರುವ ಈ ಪರ್ವತದ ಅಗಲ ಬಹಳ ಕಿರಿದು; ನೂರು ದಾಪಿಗಿಂತ ಹೆಚ್ಚಿಲ್ಲ. ಪರ್ವತದ ಪೂರ್ವಭಾಗದಲ್ಲಿ ಹಸುರು ಹುಲ್ಲು ಬೆಳೆದಿದೆ. ಆದರೆ ಎದುರುಗಡೆಯ ಪರ್ವತಗಳು ಅಡ್ಡಬರುವ ಕಾರಣ ಸೂರ್ಯನ ಪ್ರಕಾಶ ಬೆಳಗಿನ ಎಂಟು ಗಂಟೆಗೆ ಮುಂಚೆ ಅದರ ಮೇಲೆ ಬೀಳುವುದಿಲ್ಲ. ಪಶ್ಚಿಮ ಪಾರ್ಶ್ವದಲ್ಲಿ ಮರ ಗಿಡಗಳು ಬೆಳೆದುಕೊಂಡಿವೆ. ಇಷ್ಟನ್ನು ನೋಡಿದ ನನಗೆ ಅನ್ನಿಸಿತು, ಈ ಅದ್ಭುತಕ್ಕೆ ಕಾರಣ ಪರ್ವತದ ಮೇಲೆ ಬೀಳುವ ಸೂರ್ಯನ ಶಾಖ ಮತ್ತು ಪರ್ವತದ ವಿಶಿಷ್ಟ ಒಳ ರಚನೆ ಇರಬೇಕು ಎಂದು.

ಸೆಂದ್-ಬ್ರಾರಿಯಿಂದ ಹಿಂದಿರುಗುವಾಗ ರಾಜಮಾರ್ಗದಿಂದ ಕೊಂಚ ಪಕ್ಕಕ್ಕೆ ತಿರುಗಿ "ಅಕ್ಷಿಬಲ್"[2] ಎಂಬುದನ್ನು ನೋಡಿಕೊಂಡು ಬಂದೆ. ಇದು ಹಿಂದೆ ಕಾಶ್ಮೀರದ ದೊರೆ

---

[1]ಬೆರ್‌ನ್ಸೇ ವರ್ಣಿಸಿರುವ ಬುಗ್ಗೆ ಶ್ರೀನಗರದಿಂದ ಆಗ್ನೇಯ ದಿಕ್ಕಿಗೆ ೪೦ ಮೈಲಿ ದೂರದಲ್ಲಿರುವ ಬವನ್ (Bawan) ಅಥವಾ 'ಮತ್ತಾನ್' (Mattan)ಬುಗ್ಗೆ. ಇಲ್ಲಿರುವ ಗುಡಿ ಸೂರ್ಯದೇವನ (ಮಾರ್ತಾಂಡನ) ಹೆಸರಿನಲ್ಲಿ ಸ್ಥಾಪಿಸಲ್ಪಟ್ಟಿದೆ. ಇಲ್ಲಿಗೆ ಈಗಲೂ ಹಿಂದೂಗಳು ಅಪಾರ ಸಂಖ್ಯೆಯಲ್ಲಿ ಹೋಗುತ್ತಾರೆ. ಈ ಕುಂಡದಿಂದ ಹೊರಟ ನೀರು ಸಾಂದ್ರನ್ ನದಿಯಾಗಿ ಹರಿದು ಇಸ್ಲಾಮಾಬಾದಿಗೆ ಸಮೀಪದಲ್ಲಿ ಜೇಲಂ ನದಿಯನ್ನು ಸೇರುತ್ತದೆ.

[2]ಅಕ್ಷಬಲ್ : ಅಕ್ಷ ಎಂಬ ರಾಜನಿಂದಾಗಿ ಈ ಹೆಸರು ಬಂದಿದೆ. ಶ್ರೀನಗರದಿಂದ ಸುಮಾರು ೪೦ ಮೈಲಿ ದೂರದಲ್ಲಿರುವ ಈ ತೋಟವನ್ನು ಮಾಡಿಸಿದವಳು ಷಾಜಹಾನನ ಮಗಳು ಜೆಹನಾರಳು. ಆಗ್ಗೆ ಇದಕ್ಕೆ ಬೇಗಮಾಬಾದ್ ಎಂಬ ಹೆಸರಿತ್ತು.

ಗಳ ಹಳ್ಳಿಮನೆಯಾಗಿತ್ತು; ಈಗ ಮಹಾ ಮೊಗಲನ ಹಳ್ಳಿಯಮನೆ. ಈ ಸ್ಥಳದ ಸೌಂದರ್ಯಕ್ಕೆ ಮುಖ್ಯ ಕಾರಣ ಇಲ್ಲಿರುವ ಒಂದು ಬುಗ್ಗೆ. ಬುಗ್ಗೆಯ ನೀರು ನೂರಾರು ಕಾಲುವೆಗಳಲ್ಲಿ ಮನೆಯ ಸುತ್ತಲೂ ಹಾಗೂ ತೋಟದಲ್ಲೂ ಹರಿದಾಡುತ್ತದೆ. ನೀರು ನೆಲ ದಿಂದ ಬಹಳ ಬಿರುಸಿನಿಂದ ಹೊರಬರುತ್ತದೆ. ಅದನ್ನು ಬುಗ್ಗೆಯೆಂದು ಕರೆಯುವ ಬದಲು ನದಿ ಎಂದು ಕರೆಯುವಷ್ಟು ಪ್ರಮಾಣದ ನೀರು ಉಕ್ಕಿಬರುತ್ತದೆ. ಬಹು ರುಚಿಯಾಗಿರುವ ಈ ನೀರು ಹಿಮಗಡ್ಡೆಯಂತೆ ಕೊರೆಯುತ್ತಿರುತ್ತದೆ. ಈ ಸುಂದರ ಉದ್ಯಾನದಲ್ಲೆಲ್ಲಾ ಅಲೆದಾಡಲು ದಾರಿಗಳನ್ನು ಮಾಡಿದ್ದಾರೆ. ಹಣ್ಣಿನ ಗಿಡಗಳು ತುಂಬಿವೆ. ಅಂತೆಯೇ ಮೀನಿನ ಕೊಳಗಳೂ ಇವೆ. ಸನಿಹದಲ್ಲಿಯೇ ಜಲಪಾತವೊಂದಿದೆ. ಇದರ ನೀರು ಬೀಳುವಾಗ ಮೂವತ್ತು ನಲವತ್ತು ಅಡಿ ಅಗಲದ ಬಿಳಿ ಹಚ್ಚಡದಂತೆ ಬಲು ಸೊಗಸಾಗಿ ಕಾಣುತ್ತದೆ. ರಾತ್ರಿ ಹೊತ್ತಂತೂ ನೀರಿನ ಹಚ್ಚಡದ ಕೆಳಗಡೆಯ ವಿಶಾಲ ಸರೋವರದ ಅನೇಕ ದ್ವೀಪಗಳು ಮತ್ತೂ ಸುಂದರವಾಗಿ ಕಾಣುತ್ತವೆ.

ಅಕ್ಷಿಬಲ್‌ನಿಂದ ಇನ್ನೊಂದು ರಾಜೋದ್ಯಾನಕ್ಕೆ ಹೋದೆ. ಅದೂ ಇದೇ ರೀತಿ ಯಲ್ಲಿ ಚಂದಮಾಡಲ್ಪಟ್ಟಿದೆ. ಇಲ್ಲಿರುವ ಒಂದು ಕೊಳದಲ್ಲಿರುವ ಮೀನುಗಳು ಕರೆದರೆ ಕೊಳದ ಅಂಚಿಗೆ ಬರುವಷ್ಟು ಪಳಗಿಹೋಗಿವೆ. ಒಂದು ಚೂರು ರೊಟ್ಟಿ ಎಸೆದರೆ ಸಾಕು ಮುತ್ತಿಕೊಳ್ಳುತ್ತವೆ. ದೊಡ್ಡ ದೊಡ್ಡ ಮೀನುಗಳ ಗಿರಲುಗಳಿಗೆ ಜಹಂಗೀರನ ಹೆಂಡತಿ ನೂರ್‌ಮಹಲಳು ಚಿನ್ನದ ಮುರಾವುಗಳನ್ನು ಮಾಡಿಸಿಹಾಕಿಸಿದ್ದಾಳೆ. ಆ ಮುರಾವುಗಳ ಮೇಲೆ ಏನನ್ನೋ ಬರೆಸಲಾಗಿದೆ.

ನಾನು ಹಿಂದಿರುಗಿದ ಮೇಲೆ ನನ್ನ ನವಾಬ ದಿನೇಷ್ ಮಂಡ್ ಬಾನನಿಗೆ ಸೆಂದ್ ಬ್ರಾರಿಯಲ್ಲಿ ಕಂಡುದನ್ನೆಲ್ಲಾ ವರ್ಣಿಸಿ ಹೇಳಿದೆ. ಅದನ್ನು ಕೇಳಿ ಸಂತೋಷಪಟ್ಟು ಆತ ನಿಜವಾದ ಪವಾಡ ಜರುಗುವಂತಹ ಇನ್ನೊಂದು ಸ್ಥಳಕ್ಕೆ ಹೋಗಿಬರುವಂತೆ ಹೇಳಿದ. ಅಲ್ಲಿಗೆ ಹೋಗಿಬಂದ ಮೇಲೆ 'ನೀನು ನಿನ್ನ ಮತವನ್ನೇ ತೊರೆದು ಮುಸಲ್ಮಾನನಾಗಿ ಬಿಡುವೆ' ಎಂದು ತಿಳಿಸಿದ. ಬಾರಮೂಲದಲ್ಲಿರುವ ಒಬ್ಬ ಪೀರನ (ಸಂತ ಅಥವಾ ಫಕೀ ರನ) ಸಮಾಧಿಯೇ ಆ ಸ್ಥಳ. ಪೀರ ಸತ್ತುಹೋಗಿದ್ದರೂ ಕಾಯಿಲೆ ಕಸಾಲೆಗಳನ್ನು ಗುಣಪಡಿಸುತ್ತಾನೆಂದು ನನ್ನ ನವಾಬ ತಿಳಿಸಿದ. ಒಂದು ಪಕ್ಷ ನಾನು ನಂಬಲಾಗದಿ ದ್ದರೂ, ಬಹಳ ಶಕ್ತಿವಂತನಾದ ಮನುಷ್ಯನೊಬ್ಬ ಎತ್ತಲಾರದ ಒಂದು ಕಲ್ಲನ್ನು ದೇವ ರನ್ನು ಧ್ಯಾನಿಸಿ ಹನ್ನೊಂದು ಜನರು ತಮ್ಮ ಹನ್ನೊಂದು ಬೆರಳುಗಳ ತುದಿಯಿಂದ ಮುಟ್ಟಿದರೆ ಸಾಕು ಆ ಕಲ್ಲು ಮೇಲೇಳುತ್ತದೆ ಎಂದು ತಿಳಿಸಿ ಅದರ ಮಹಿಮೆಯನ್ನು ಹೊಗಳಿದ. ಇರಲಿ, ಇದೊಂದು ಸ್ಥಳ ನೋಡಿಕೊಂಡು ಬರೋಣವೆಂದು ನಾನು ನನ್ನೊ ಡನೆ ಹಿಂದೆ ಬಂದವರನ್ನೇ ಕರೆದುಕೊಂಡು ಹೊರಟೆ.

ಬಾರಮುಲ್ಲ (ವರಾಹಮೂಲಾ) ಸೊಗಸಾದ ಸ್ಥಳ. ಇಲ್ಲಿರುವ ಮಸೀದಿ

ಸಾಕಷ್ಟು ದೊಡ್ಡ ಕಟ್ಟಡ[1] ಪೀರನ ಸಮಾಧಿಯನ್ನು ಚೆನ್ನಾಗಿ ಅಲಂಕಾರಮಾಡಿದ್ದಾರೆ. ಕಾಯಿಲೆ ಕಸಾಲೆಯ ಅನೇಕ ಜನ ಅಲ್ಲಿ ನೆರೆದಿದ್ದರು. ಮಸೀದಿಗೆ ಹತ್ತಿರದ ಅಡುಗೆ ಮನೆಯಲ್ಲಿ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಅನ್ನ ಮತ್ತು ಮಾಂಸವನ್ನು (ಪೊಲಾವ್) ಬೇಯಿಸುತ್ತಿದ್ದರು. ಆ ಕೂಡಲೇ ನನಗೆ ಅರ್ಥವಾಯಿತು, ಈ ಪುಷ್ಟಿಕರವಾದ ಆಹಾರವೇ ಕಾಯಿಲೆಯವರನ್ನು ಇಲ್ಲಿಗೆ ಕರೆತರುವುದು ಮತ್ತು ಅವರನ್ನು ಗುಣಪಡಿಸು ವುದು ಎಂದು. ಮಸೀದಿಯ ಇನ್ನೊಂದು ಕಡೆ ಮುಲ್ಲಾಗಳ ವಾಸಗೃಹಗಳೂ, ಅವುಗಳ ಸುತ್ತ ತೋಟಗಳೂ ಇದ್ದುವು. ಪೀರನ ಮಹಾಶಕ್ತಿಯ ಆಶ್ರಯದಲ್ಲಿ ಈ ಮುಲ್ಲಾ ಗಳು ತಮ್ಮ ನೇಮನಿಷ್ಠೆಗಳನ್ನು ನಡೆಸಿಕೊಂಡು ಹೋಗುತ್ತಿದ್ದರು. ಇವರು ತಮ್ಮ ಮಹಾ ಪೀರನ ಗುಣಗಾನ ಮಾಡಿದ್ದೂ ಮಾಡಿದ್ದೆ. ಆದರೆ ಇಂಥ ಸಂದರ್ಭಗಳಲ್ಲಿ ನಾನು ನನ್ನ ಅಸಂತೃಪ್ತಿಯನ್ನು ತೋರಿಸುತ್ತಿದ್ದೇನಾದ ಕಾರಣ, ಅವರು ನಾನಿರುವವರೆಗೆ ಯಾವ ರೋಗಿಯ ಕಾಯಿಲೆಯನ್ನೂ ಗುಣಪಡಿಸುವ ಗೋಜಿಗೆ ಹೋಗಲಿಲ್ಲ.

ಇನ್ನು ಆ ಭಾರವಾದ ಗುಂಡುಕಲ್ಲು, ಯಾವ ಕಲ್ಲಿನಿಂದಾಗಿ ನಾನು ನನ್ನ ಮತ ಧರ್ಮವನ್ನೇ ಬದಲಾಯಿಸಿಕೊಂಡು ಬಿಡುವೆನೆಂದು ನನ್ನ ಹಿತೈಷಿ ಹೇಳಿದನೋ ಆ ಕಲ್ಲಿನ ವಿಚಾರ. ಹನ್ನೊಂದು ಮಂದಿ ಮುಲ್ಲಾಗಳು ಅದರ ಸುತ್ತ ನಿಂತುಕೊಂಡರು. ಅವರ ಇಳಿಯಬಿದ್ದ 'ಕಬಾ' ಅಂಗಿಗಳ ಕಾರಣವಾಗಿ ಅವರು ಯಾವ ರೀತಿ ಕಲ್ಲನ್ನು ಹಿಡಿದುಕೊಂಡಿದ್ದರೆಂದು ಹೇಳುವುದು ಕಷ್ಟವಾಗಿತ್ತು. ಆದರೂ ಈ ಮೋಸದ ಕೆಲಸ ವನ್ನು ನಾನು ಬಹಳ ಸೂಕ್ಷ್ಮವಾಗಿ ನೋಡುತ್ತಾ ಇದ್ದೆ. ಮುಲ್ಲಾಗಳು ಕಲ್ಲನ್ನು ಕೇವಲ ತುದಿಬೆರಳಿನಿಂದ ಮುಟ್ಟಿದ್ದೆವೆಂದೂ, ಕಲ್ಲು ಗರಿಯಷ್ಟು ಹಗುರವಾಗಿತ್ತೆಂದೂ ಹೇಳಿಕೊಂಡರು. ಆದರೆ ಅವರು ಹೆಬ್ಬೆರಳನ್ನೂ ತೋರುಬೆರಳನ್ನೂ ಉಪಯೋಗಿ ಸಿದರೆಂದೂ ನನ್ನ ಭಾವನೆ. ಇರಲಿ ಎಂದು ನಾನು ಆ ಮೋಸಗಾರರ ಮತ್ತು ಸುತ್ತ ಮುತ್ತ ನಿಂತವರ 'ಕರಾಮತ್' 'ಕರಾಮತ್' ಎಂಬ ಪ್ರಶಂಸೆಯ ಕೂಗಿಗೆ ದನಿಗೊಟ್ಟೆ. ಮುಲ್ಲಾಗಳಿಗೆ ಒಂದು ರೂಪಾಯಿ ಕೊಟ್ಟು, ಮಹಾಭಕ್ತನಂತೆ ನಟಿಸಿ, ಕಲ್ಲನ್ನು ಎತ್ತುವ ಹನ್ನೊಂದು ಜನರಲ್ಲಿ ನನ್ನನ್ನು ಒಬ್ಬನನ್ನಾಗಿ ನಿಲ್ಲಿಸಿ ಕಲ್ಲೆತ್ತುವ ಅವಕಾಶಮಾಡಿಕೊಡ ಬೇಕೆಂದು ಕೇಳಿಕೊಂಡೆ. ಅವರು ಸ್ವಲ್ಪ ಹಿಂದುಮುಂದು ನೋಡಿದರು. ಆಗ ನಾನು ಇನ್ನೊಂದು ರೂಪಾಯಿ ಕೊಟ್ಟು, ಆ ಪವಾಡದಲ್ಲಿ ನನಗೆ ತುಂಬಾ ನಂಬಿಕೆ ಇದೆ ಎಂಬಂತೆ ನಟಿಸಿದೆ. ಆಗ ಹನ್ನೊಂದು ಜನರಲ್ಲಿ ಒಬ್ಬ ನನಗೆ ಜಾಗ ಮಾಡಿಕೊಟ್ಟ. ಅವರು ಭಾವಿಸಿದ್ದರು, ಹತ್ತು ಜನ ಸಾಕು ಕಲ್ಲೆತ್ತಲು ಎಂದು. ನಾನು ತುದಿ ಬೆರಳನ್ನು ಮಾತ್ರ ಕಲ್ಲಿಗೆ ಮುಟ್ಟಿಸಿದ್ದೆ. ಅವರು ಹೆಬ್ಬೆಟ್ಟು ಮತ್ತು ತೋರುಬೆರಳುಗಳನ್ನು ಉಪಯೋಗಿಸಿ ಕಲ್ಲನ್ನು ಎತ್ತಿದರು. ಆದರೂ ಅದನ್ನು ನಾನು ಅರಿತುಕೊಳ್ಳಲಿಲ್ಲವೆಂದು ಅವರು ಅಂದು

---

[1] ಜನಾಬ್ ಸಾಹೇಬ್ ಎಂಬ ಮುಸಲ್ಮಾನ ಸಂತನ ಜಿಯರತ್.

ಕೊಂಡರು. ಕಲ್ಲು ನನ್ನ ಕಡೆಗೆ ವಾಲಿತು. ಆಗ ನಾನು ಸುಮ್ಮನಿರುವುದು ಯೋಗ್ಯವಲ್ಲ ಎಂದು ಅವರಂತೆಯೇ ಹೆಬ್ಬೆರಳು ಮತ್ತು ತೋರುಬೆರಳನ್ನು ಉಪಯೋಗಿಸಿದೆ. ಕಲ್ಲು ಮೇಲಕ್ಕೆ ಎದ್ದಿತು. ಎಲ್ಲರ ವಕ್ರದೃಷ್ಟಿ ನನ್ನ ಮೇಲೆ ಇದ್ದಂತೆ ಕಂಡಿತು. ನನ್ನ ಬೂಟಾಟಿಕೆ ಅವರಿಗೆ ಅರ್ಥವಾಯಿತೆಂದು ಕಾಣುತ್ತದೆ. ಅವರಂತೆ ನಾನೂ 'ಕರಾಮತ್' ಎಂದು ಕೂಗದಿದ್ದರೆ ನನಗೆ ಕಲ್ಲು ಹೊಡೆಯುತ್ತಿದ್ದರು. ಹಾಗೆ ಕೂಗಿ, ಇನ್ನೊಂದು ರೂಪಾಯಿ ಎಸೆದು, ಆ ಗುಂಪಿನಿಂದ ಹೊರಬಿದ್ದೆ. ನಾನು ಇಲ್ಲಿಗೆ ಬಂದನಂತರ ಹೊಟ್ಟೆಗೆ ಏನೂ ತೆಗೆದುಕೊಂಡಿರಲಿಲ್ಲ. ಆದರೂ ಕುದುರೆಯನ್ನೇರಿ ಆ ದರ್ವೇಶಿ ಹಾಗೂ ಅವನ ಪವಾಡ ಗಳಿಗೆ ಬೆನ್ನು ತಿರುಗಿಸಿದೆ.

ಹೆದ್ದಾರಿಯಲ್ಲಿ ಬರುವಾಗ ಕೊಂಚ ದೂರದಲ್ಲಿ ಒಂದು ಸರೋವರ ಕಾಣಿಸಿತು. ಅದನ್ನು ನೋಡಲು ಹೋದೆ. ಅದರ ತುಂಬ ಎಂತೆಂಥವೊ ಮೀನುಗಳೂ ಬಾತು ಮುಂತಾದ ನೀರುಹಕ್ಕಿಗಳೂ ಇದ್ದುವು. ಇವುಗಳ ಬೇಟೆಗೆ ಚಳಿಗಾಲದಲ್ಲಿ ಕಾಶ್ಮೀರದ ನವಾಬ ಬರುತ್ತಾನಂತೆ. ಸರೋವರದ ಮಧ್ಯದಲ್ಲಿ ಒಂದು ಗುಡಿಸಲು, ಸುತ್ತ ತೋಟ ಮತ್ತು ಅದರೊಳಗೊಬ್ಬ ಸಂನ್ಯಾಸಿ. ಆ ಗುಡಿಸಲು, ತೋಟ–ಇವೆಲ್ಲಾ ಪವಾಡದಿಂದ ತೇಲುತ್ತವೆ ಎಂದು ಜನರ ನಂಬಿಕೆ. ಸಂನ್ಯಾಸಿ ತನ್ನ ಜೀವಮಾನವನ್ನೆಲ್ಲಾ ಇಲ್ಲೇ ಕಳೆಯುತ್ತಾನಂತೆ ; ಇಲ್ಲಿಂದ ಕದಲುವುದೇ ಇಲ್ಲವಂತೆ. ಇಂಥ ಅಂತೆಕಂತೆಗಳ ಕಟ್ಟು ಕಥೆಗಳನ್ನು ಹೇಳಿ ಈ ಪತ್ರವನ್ನು ತುಂಬಿಸಲು ಇಷ್ಟ ಪಡುವುದಿಲ್ಲ. ಇಷ್ಟು ಮಾತ್ರ ನಿಜ : ಹಿಂದಿನ ಕಾಶ್ಮೀರದ ರಾಜರುಗಳಲ್ಲಿ ಒಬ್ಬ ತೆಪ್ಪ ಕಟ್ಟಿ ಅದರ ಮೇಲೆ ಈ ಪರ್ಣ ಕುಟಿಯನ್ನು ನಿರ್ಮಿಸಿದ ; ಬಾರಮೂಲ ಕಡೆಗೆ ಹೋಗುವ ನದಿ ಈ ಸರೋವರದ ಮೂಲಕ ಹೋಗುತ್ತದೆ.

ನಾನು ಈ ಸರೋವರದಿಂದ ಹೊರಟು ಅದ್ಭುತವಾದುದೆಂದು ಹೇಳಲಾದ ಊಟೆ ಯೊಂದನ್ನು ನೋಡಲು ಹೋದೆ. ನೀರು ನಿಧಾನವಾಗಿ ಬುಗಬುಗನೆ ಬರುತ್ತಿತ್ತು. ಜೊತೆಗೆ ಸಣ್ಣ ಮರಳೂ ಬರುತ್ತಿತ್ತು. ಆ ಮರಳು ಬಂದ ಹಾಗೆಯೇ ಮತ್ತೆ ಹಿಂದಿರು ಗುತ್ತಿತ್ತು. ಆಗ ಸ್ವಲ್ಪ ಹೊತ್ತು ನೀರು ಬರುತ್ತಿರಲಿಲ್ಲ. ಮತ್ತೆ ನೀರು ಬರಲು ಆರಂಭ ವಾಗುತ್ತಿತ್ತು. ಜೊತೆಗೆ ಮರಳೂ ಬರುತ್ತಿತ್ತು. ಹೀಗೆ ಬಿಟ್ಟುಬಿಟ್ಟು ನೀರು ಮತ್ತು ಸಣ್ಣ ಮರಳು ಬರುತ್ತವೆ. ಆಶ್ಚರ್ಯಕರವಾದ ಸಂಗತಿಯೆಂದರೆ, ಯಾರೇ ಆಗಲಿ ಸ್ವಲ್ಪ ಸದ್ದು ಮಾಡಿದರೆ, ಕೊನೆಗೆ ನೆಲವನ್ನು ಕಾಲಿನಿಂದ ಬಡಿದರೂ ಸಹ, ನೀರು ಮೇಲೆ ಹೇಳಿದ ರೀತಿಯಲ್ಲಿ ಉಕ್ಕುತ್ತದೆ ಎಂಬುದು. ಆದರೆ ಸದ್ದುಗಿದ್ದುಗಳಿಗೆ ನೀರು ಉಕ್ಕುವುದೆಲ್ಲಾ ಸುಳ್ಳು ಎಂದು ನಾನು ಕಂಡುಹಿಡಿದೆ. ಈ ರೀತಿ ನನ್ನ ಅಭಿಪ್ರಾಯವಿದ್ದರೂ ಊಟೆಯ ನೀರು ಏಕೆ ಹಾಗೆ ಬಿಟ್ಟುಬಿಟ್ಟು ಉಕ್ಕುತ್ತದೆ ಎಂದು ಹೇಳಲಾರೆ. ಬಹುಶಃ ವಾಪಸು ಹೋದ ಮರಳು ನೀರನ್ನು ತಡೆಹಿಡಿಯುತ್ತದೆ ಎಂದು ಕಾಣುತ್ತದೆ ; ಆಮೇಲೆ ಕೊಂಚ ಹೊತ್ತಿನಲ್ಲಿ ನೀರಿನ ಒತ್ತಡ ಹೆಚ್ಚಾಗಿ ಮರಳನ್ನು ನೂಕಿಕೊಂಡು ಹೊರಬರುತ್ತದೆ ಎಂದು

ಹೇಳಬಹುದು. ಇಲ್ಲವೆ, ಕೃತಕವಾದ ಚಿಲುಮೆಗಳಲ್ಲಿ ಆಗುವಂತೆ ಊಟೆಗಳಲ್ಲಿ ಸಹ ಅದುವಿಟ್ಟ ಗಾಳಿಯು ಬಿಟ್ಟು ಬಿಟ್ಟು ಹೊರಕ್ಕೆ ನುಗ್ಗಿ ನೀರು ಮರಳನ್ನು ಹೊರಗೆ ಹಾಕುತ್ತಿರಬಹುದು.

ನಾನು ಹೀಗೆ ಹಲವಾರು ದಿವಸಗಳ ಕಾಲ ನೋಡಬೇಕಾದ ಬೆಟ್ಟಗುಡ್ಡಗಳನ್ನು ಹಾಗೂ ಮಂಜುಗಟ್ಟಿದ ಸರೋವರಗಳನ್ನು ನೋಡುತ್ತಾ ಕಾಲ ಕಳೆಯುತ್ತಿರುವಾಗ ನವಾಬ ದಿನೇಷ್ ಮಂಡ್-ಖಾನ್ ನನ್ನ ಗತಿಯೇನಾಯಿತೋ ಎಂದು ಚಡಪಡಿಸು ತ್ತಿದ್ದಾನೆಂಬ ಸುದ್ದಿ ಬಂದಿತು. ಈ ಕಾರಣ ನಾನು ನಿಧಾನಮಾಡದೆ ಹಿಂದಿರುಗಿದೆ.

ಈಗ ಕಾಶ್ಮೀರ ದೇಶದ ಸುತ್ತಮುತ್ತಲಿನ ಪರ್ವತ ಪ್ರದೇಶಗಳ ವಿಚಾರ ನಾನು ತಿಳಿದುಕೊಂಡಷ್ಟು ಮಟ್ಟಿಗೆ ಹೇಳಬಯಸುತ್ತೇನೆ. ನಾನು ಇಲ್ಲಿಗೆ ಬಂದಾಗಿನಿಂದ ಈ ಬಗ್ಗೆ ತುಂಬಾ ಆಸಕ್ತಿವಹಿಸುತ್ತಿದ್ದೇನೆ. ಆದರೆ ವಿಚಾರಗಳನ್ನು ಸರಿಯಾಗಿ ತಿಳಿದು ಕೊಂಡವರು ಯಾರೂ ಸಿಕ್ಕಲಿಲ್ಲ. ಹಾಗಿದ್ದರೂ ನನಗೆಷ್ಟು ತಿಳಿದು ಬಂದಿತೊ ಅಷ್ಟನ್ನು ಹೇಳುತ್ತೇನೆ, ಕೇಳಿ :

[ಬರ್ನ್ಯೇ ಅವರಿವರಿಂದ ತಿಳಿದುಕೊಂಡ ಕಿರಿಯ ಟಿಬೆಟ್, ಹಿರಿಯ ಟಿಬೆಟ್, ಕಾಷ್ಗರ್, ಕಾಥೇ—ಈ ದೇಶಗಳ ಬಗ್ಗೆ ಇಲ್ಲಿ ಹೇಳುತ್ತಾನೆ. ಅವನೇ ಹೋಗಿ ನೋಡಿ ಹೇಳಿದ ವಿಷಯ ಗಳಲ್ಲವಾದ್ದರಿಂದ ಅವುಗಳನ್ನು ಇಲ್ಲಿ ಕೈ ಬಿಡಲಾಗಿದೆ]

* * * *

ಇಷ್ಟು ಹೇಳಿ ಈ ಪತ್ರವನ್ನು ಅಥವಾ ಪುಸ್ತಕವನ್ನು ಮುಗಿಸಿ, ಮತ್ತೆ ದಿಲ್ಲಿಗೆ ಹಿಂದಿರುಗುವವರೆಗೂ ನಿಮ್ಮಿಂದ ಬೀಳ್ಕೊಳ್ಳಬೇಕೆಂದು ಮನಸ್ಸುಮಾಡಿದ್ದೆ. ಆದರೆ ಬರೆಯಬೇಕೆಂಬ ಮನಸ್ಸು ಇನ್ನೂ ಇದೆ ; ಅಲ್ಲದೆ, ನನಗೆ ಬಿಡುವೂ ಇದೆ. ಈ ಕಾರಣ ನೀವು ನಿಮ್ಮ ಕೊನೆಯ ಕಾಗದದಲ್ಲಿ ಮೆಸ್ಯ ತೇವೆನೋ (Monsieur Thevenot) ಅವರ ಪರವಾಗಿ ಕೇಳಿದ ಐದು ಪ್ರಶ್ನೆಗಳಿಗೆ ಉತ್ತರ ಹೇಳಬಯಸುತ್ತೇನೆ.

ತೇವೆನೋ ಒಳ್ಳೆ ಉದ್ಯೋಗಶೀಲರಾದವರು ಹಾಗೂ ಆಸಕ್ತಿಯುಳ್ಳವರು. ಭೂಮಂಡಲವನ್ನು ಸುತ್ತಿ ಬರುವವರು ಹೇಳುವ ವಿಷಯಗಳಿಗಿಂತ ಹೆಚ್ಚು ವಿಷಯ ಗಳನ್ನು ಅಭ್ಯಾಸದಿಂದಲೇ ಕಂಡುಹಿಡಿಯಬಲ್ಲವರು. ಅವರ ಐದು ಪ್ರಶ್ನೆಗಳಿಗೆ ನನ್ನ ಉತ್ತರ ಬರೆಯುತ್ತಿದ್ದೇನೆ.

ಮೊದಲ ಪ್ರಶ್ನೆ : ಯಹೂದಿಯರು ಬಹಳ ಕಾಲದಿಂದ ಕಾಶ್ಮೀರದಲ್ಲಿ ನೆಲೆಸಿದ್ದರೆ ? ಅವರ ಬಳಿ ಪವಿತ್ರ ಗ್ರಂಥ (ಬೈಬಲು) ಇತ್ತೆ ? ಇದ್ದರೆ, ಅವರ ಹಳೆಯ ಒಡಂಬಡಿಕೆಗೂ ನಮ್ಮ ಹೊಸ ಒಡಂಬಡಿಕೆಗೂ ಏನಾದರೂ ವ್ಯತ್ಯಾಸವುಂಟೆ ?

ಉತ್ತರ : ಈ ಪರ್ವತಪ್ರದೇಶಗಳಲ್ಲಿ ಯೆಹೂದಿಗಳನ್ನು ಕಂಡಿದ್ದರೆ ನನಗೆ ತೇವೆನೋ ಅವರಿಗೆ ಆದಷ್ಟೇ ಸಂತೋಷವಾಗುತ್ತಿತ್ತು. ಆದರೆ ಅವರು ಯಾರೂ ಇಲ್ಲಿ ಇಲ್ಲ. ಹಿಂದೆ ಯಾವಾಗಲೋ ಕೆಲವರು ಇಲ್ಲಿ ನೆಲೆಸಿದ್ದರೆಂದು ಹೇಳಬಹುದಾದರೂ,

ಈಗ ಅವರ ಸುಳಿವೇ ಇಲ್ಲಿಲ್ಲ. ಇಲ್ಲಿಯ ಎಲ್ಲ ನಿವಾಸಿಗಳು ಜೆಂಟೈಲರು ಇಲ್ಲವೇ ಮುಹ ಮ್ಮದೀಯರು. ಬಹುಶಃ ಚೀನಾದಲ್ಲಿ ಯಹೂದಿಯರಿರಬಹುದು. ಏಕೆಂದರೆ, ದಿಲ್ಲಿ ಜೆಸ್ಯೂಯಿಟ್ ಫಾದರ್ (ಪಾದ್ರಿ) ಅವರಿಗೆ ಪೀಕಿನ್ನಿನ (Pekin=ಪೀಕಿಂಗ್) ಜರ್ಮನ್ ಜೆಸ್ಯೂಯಿಟ್‌ನೊಬ್ಬ ಬರೆದ ಪತ್ರ ನೋಡಿದೆ. ಅದರಲ್ಲಿ ಆತ ಬರೆದಿದ್ದಾನೆ, ತಾನು ಆ ನಗರದಲ್ಲಿರುವ ಯಹೂದಿಯರೊಡನೆ ಮಾತಾಡಿದೆ, ಅವರು 'ಜೂಡೆಯಿಸಮ್' (ಯಹೂದಿ ಮತವನ್ನು) ಆಚರಿಸುತ್ತಾರೆ, ಮತ್ತು ಹಳೆ ಒಡಂಬಡಿಕೆ ಗ್ರಂಥಗಳನ್ನು ಇಟ್ಟುಕೊಂಡಿದ್ದಾರೆ ಎಂದು. ಜೀಸಸ್ ಕ್ರೈಸ್ತ ಕಾಲವಾದ ವಿಚಾರ ಅವರಿಗೆ ಗೊತ್ತೇ ಇಲ್ಲವಂತೆ. ಆ ಜೆಸ್ಯೂಯಿಟನು ಹಂದಿಮಾಂಸ ತಿನ್ನುವುದು ಬಿಟ್ಟರೆ ಆತನನ್ನು ತಮ್ಮ ಖಾನ (ದೊರೆ)ನನ್ನಾಗಿ ಮಾಡಿಕೊಳ್ಳುತ್ತಿದ್ದುದಾಗಿ ತಿಳಿಸಿದರಂತೆ.

ಹೀಗಿದ್ದರೂ ಈ ದೇಶದಲ್ಲಿ ಜೂಡೆಯಿಸಮ್‌ನ[1] ಗುರುತುಗಳು ಕಂಡುಬರುತ್ತವೆ. ಪೀರ್ ಪಂಜಾಲ್ ಪರ್ವತಗಳನ್ನು ದಾಟಿ ಕಾಶ್ಮೀರ ರಾಜ್ಯವನ್ನು ಪ್ರವೇಶಿಸುವಾಗ ಗಡಿ ಪ್ರದೇಶದ ಹಳ್ಳಿಗಳಲ್ಲಿ ಯಹೂದಿಯರನ್ನು ಹೋಲುತ್ತಿದ್ದಂತಹ ಜನರನ್ನು ಕಂಡೆ. ಅವರ ಮುಖಲಕ್ಷಣ ಹಾಗೂ ನಡತೆಗಳನ್ನು, ವಿವಿಧ ರಾಷ್ಟ್ರಗಳ ಜನಗಳನ್ನು ಪತ್ತೆಹಚ್ಚುವ ಪ್ರವಾಸಿಯ ವಿವರಿಸಲಾಗದಂತಹ ಗ್ರಹಣಶಕ್ತಿಯಿಂದ ತಿಳಿದುಕೊಂಡು, ಅವರು ಆ ಪುರಾತನ ಜನಾಂಗಕ್ಕೆ ಸೇರಿದವರೆಂದು ಹೇಳಬಲ್ಲೆ. ಇದನ್ನು ಕೇವಲ ಊಹಾಪೋಹ ವೆಂದು ಭಾವಿಸಬಾರದು. ನನ್ನ ಅಭಿಪ್ರಾಯವನ್ನೇ ನಮ್ಮ ಜೆಸ್ಯೂಯಿಟ್ ಫಾದರ್ ಮತ್ತು ಹಲವಾರು ಯೂರೋಪಿಯನರು ಸಹ ನಾನು ಕಾಶ್ಮೀರಕ್ಕೆ ಬರುವುದಕ್ಕೆ ಮುಂಚೆಯೇ ಹೇಳಿದ್ದಾರೆ. ಎರಡನೇ ಗುರುತು ಎಂದರೆ, ಈ ನಗರದ ನಿವಾಸಿಗಳು ಮುಹಮ್ಮದೀಯರಾದರೂ ತಮ್ಮ ಹೆಸರನ್ನು 'ಮೌಸಾ' (Mousa), ಅಂದರೆ ಮೋಸೆಸ್ ಎಂಬುದಾಗಿ ಇಟ್ಟುಕೊಳ್ಳುವುದು. ಮೂರನೆಯದು ಯಾವುದೆಂದರೆ, ಸಾಲೊಮನ್ ಈ ದೇಶಕ್ಕೆ ಬಂದಿದ್ದನೆಂಬ ಮತ್ತು ಬಾರಾಮೂಲ ಬಳಿಯ ಪರ್ವತಗಳನ್ನು ಕಡಿದು ನೀರಿಗೆ ದಾರಿಮಾಡಿಕೊಟ್ಟನೆಂಬ ಜನಸಾಮಾನ್ಯರಲ್ಲಿ ಪ್ರಚಲಿತವಾಗಿರುವ ಪುರಾಣ ಕಥೆ. ನಾಲ್ಕನೆಯ ಗುರುತು ಎಂದರೆ, ಮೋಸೆಸ್ ಕಾಶ್ಮೀರ ನಗರದಲ್ಲಿ ಕಾಲವಾದ ನೆಂದೂ ಆತನ ಸಮಾಧಿ ಒಂದು ಹರಿದಾರಿ ದೂರದಲ್ಲಿದೆ ಎಂದೂ ಜನರು ನಂಬಿರು ವುದು. ಐದನೆಯದು ಯಾವುದೆಂದರೆ, ಇಲ್ಲಿಯ ಎತ್ತರದ ಬೆಟ್ಟವೊಂದರ ಮೇಲೆ ಇರುವ ಬಹು ಪುರಾತನವಾದ ಚಿಕ್ಕ ಕಟ್ಟಡವೊಂದನ್ನು ಸಾಲೋಮನ್ ಕಟ್ಟಿಸಿದನೆಂಬ

---

[1]ಜೂಡೆಯಿಸಮ್ : ಬೈಬಲಿನ ಹಳೆಯ ಒಡಂಬಡಿಕೆಯ ಮೇಲೆ ಆಧಾರಿತವಾದ ಯಹೂದಿಯರ ಏಕದೇವತಾ ವಾದದಿಂದ ಕೂಡಿದ ಮತ. ಇತ್ತೀಚೆಗೆ ಕಾಶ್ಮೀರಕ್ಕೆ ಭೇಟಿಯಿತ್ತ ವರು ರಹೀಂಜು, ಉಸ್ಜು, ಜುಲ್ಜು, ಇತ್ಯಾದಿ ಹೆಸರುಗಳನ್ನು ಹೊಂದಿರುವ ವ್ಯಾಪಾರ ಸಾಪಾರ ಮಾಡಿಕೊಂಡಿರುವ ಜನರ ಹೆಸರುಗಳನ್ನು ರಹೀಂಜ್ಯೂ, ಉಸ್‌ಜ್ಯೂ, ಜುಲ್ ಜ್ಯೂ (Jew) ಎಂದು ಬರೆಯುವುದನ್ನು ಕಂಡು, ಅವರು ಜ್ಯೂ ಜನಾಂಗಕ್ಕೆ ಸೇರಿದವರೆಂದು ಊಹೆ ಮಾಡಿದ್ದಾರೆ.

ಸಾರ್ವತ್ರಿಕ ಅಭಿಪ್ರಾಯ. ಈ ಕಾರಣದಿಂದಲೇ ಆ ಬೆಟ್ಟವನ್ನು ಈಗಲೂ 'ಸಾಲೋಮನ್ ಸಿಂಹಾಸನ'[1] ಎಂದು ಕರೆಯುತ್ತಾರೆ.

ಹೀಗಿರುವಾಗ ಒಮ್ಮೆ ಯಹೂದಿಯರು ಕಾಶ್ಮೀರದಲ್ಲಿ ನೆಲೆಸಿದ್ದರೆಂಬ ವಿಚಾರವನ್ನು ನಾನು ಅಲ್ಲಗಳೆಯಲಾರೆ. ಕಾಲ ಕಳೆದಂತೆ ಅವರ ಧರ್ಮದ ಕಟ್ಟುಪಾಡುಗಳು ಸಡಿಲವಾಗಿರಬೇಕು. ಸಡಿಲವಾಗುತ್ತಾ ಆಗುತ್ತಾ ಅವರು ವಿಗ್ರಹಾರಾಧಕರಾಗಿ, ಕೊನೆಗೆ ಅನೇಕ ವಿಗ್ರಹಾರಾಧಕರಂತೆ ಮಹಮ್ಮದೀಯರೂ ಆಗಿರಬೇಕು.

ಪರ್ಷಿಯಾದಲ್ಲಿ ಅನೇಕ ಯಹೂದಿಯರು ನೆಲೆಸಿರುವುದು ನಿಜ. ಹಾಗೆಯೇ ಹಿಂದೂಸ್ಥಾನ, ಗೋವಾ ಮತ್ತು ಕೊಚಿನ್ ಕಡೆಗಳಲ್ಲಿಯೂ ನೆಲೆಸಿದ್ದಾರೆ.[2] ಇಥಿಯೋಪಿಯಾದಲ್ಲಿ ಬಹಳ ಜನ ಯೆಹೂದಿಯರು ಇರುವುದನ್ನು ಕಂಡಿದ್ದೇನೆ; ಅವರು ತಮ್ಮ ಧೈರ್ಯ ಸ್ಥೈರ್ಯಗಳಿಗೂ ಹೆಸರಾಗಿದ್ದರೆಂದು ಕೇಳಿದ್ದೇನೆ.

**ಎರಡನೆಯ ಪ್ರಶ್ನೆ :** ಇಂಡೀಸಿನ ಮಳೆಗಳ ವಿಚಾರವೇನು ?

**ಉತ್ತರ :** ಇಡೀ ವರ್ಷ, ಅದರಲ್ಲಿಯೂ ಏಳೆಂಟು ತಿಂಗಳುಗಳ ಕಾಲ, ಇಂಡೀಸಿನಲ್ಲಿ ಸೂರ್ಯನ ಶಾಖವನ್ನು ತಡೆಯುವುದಕ್ಕಾಗುವುದಿಲ್ಲ. ಆಗ ನೆಲ ಉರಿದು, ಹುಲ್ಲುಗರಿಯೂ ಒಣಗಿಹೋಗುತ್ತದೆ. ದೇವರು ಆ ಸಮಯದಲ್ಲಿ ಮಳೆ ಕರುಣಿಸದಿದ್ದರೆ ಬಹಳ ಕಷ್ಟ. ಜುಲೈ ತಿಂಗಳಿನಲ್ಲಿ, ಬಟ್ಟಬೇಸಗೆಯಲ್ಲಿ, ಮಳೆ ಆರಂಭವಾಗುತ್ತದೆ. ಮೂರು ತಿಂಗಳುಗಳ ಕಾಲ ಈ ಮಳೆ ಬೀಳುತ್ತದೆ. ಆಗ ಹವೆ ಹಿತವಾಗುತ್ತದೆ. ಭೂಮಿ ಬೆಳೆಗಳನ್ನು ಕೊಡುತ್ತದೆ. ಆದರೆ ಈ ಮಳೆಗಳು ಪ್ರತಿ ವರ್ಷ ಒಂದೇ ಸಮನಾಗಿ ಬರುತ್ತವೆ ಎಂದು ಹೇಳುವಂತಿಲ್ಲ. ನಾನು ದಿಲ್ಲಿಯಲ್ಲಿ ಬಹಳ ಕಾಲದಿಂದ ಇದ್ದೇನಷ್ಟೆ. ಯಾವ ಎರಡು ವರ್ಷಗಳೂ ಮಳೆ ಒಂದೇ ರೀತಿಯಲ್ಲಿ ಬಂದದ್ದಿಲ್ಲ. ಕೆಲವು ಹದಿನೈದು ಇಪ್ಪತ್ತು ದಿನಗಳು ಹಿಂದೊ ಮುಂದೊ ಆರಂಭವಾಗಿ ಅಷ್ಟು ದಿವಸಗಳ ಹಿಂಚೆ ಮುಂಚೆ ನಿಂತುಬಿಡುತ್ತವೆ. ಒಂದೊಂದು ವರ್ಷ ವಿಪರೀತ ಮಳೆ ಬೀಳುವುದುಂಟು. ಹಾಗೆಯೇ ಮಳೆ ಬರದೇ ಇರುವುದೂ ಉಂಟು. ನಾನೇ ನೋಡಿದ್ದೇನೆ, ಎರಡು ವರ್ಷಗಳ ಕಾಲ

---

[1] ಇದೇ ತಖ್ತ್–ಇ–ಸುಲೇಮಾನ್ ಎಂಬ ಬೆಟ್ಟ. ಈ ಬೆಟ್ಟದ ಮೇಲೆ ಅಶೋಕನ ಮಗನು ಕಟ್ಟಿಸಿದ ಬೌದ್ಧದೇವಸ್ಥಾನವಿದೆ. ಮಹಮ್ಮದೀಯರು ೧೦೧೫ರಲ್ಲಿ ಮೊಟ್ಟಮೊದಲು ಕಾಶ್ಮೀರದ ಮೇಲೆ ಧಾಳಿಮಾಡಿದಾಗ ಈ ದೇವಸ್ಥಾನವನ್ನು ಮಸೀದಿಯಾಗಿ ಮಾಡಿಕೊಂಡರೆಂದು ಗೊತ್ತಾಗುತ್ತದೆ.

[2] ಕೊಚಿನ್‌ನಲ್ಲಿ ಮೊಟ್ಟಮೊದಲು ಯಹೂದಿಯರು ಕ್ರಿಸ್ತಶಕದ ಆರಂಭದಲ್ಲಿಯೇ ನೆಲೆಸಿದರೆಂದು ಗೊತ್ತಾಗುತ್ತದೆ. ಎಂಟನೇ ಶತಮಾನದಲ್ಲಿ ಒಂದು ಇಗರ್ಜಿಯನ್ನೂ ಅವರು ಕಟ್ಟಿಕೊಂಡರು.

ಒಂದು ಹನಿಯೂ ಮಳೆ ಬೀಳದಿದ್ದುದನ್ನು. ಇದರ ಪರಿಣಾಮವಾಗಿ ಎಷ್ಟೊಂದು ಆಹಾಕಾರ, ಕಾಯಿಲೆ ಕಸಾಲೆ ಮತ್ತು ಕ್ಷಾಮಡಾಮರಗಳು !

ಇನ್ನೊಂದು ವಿಚಾರ ಹೇಳುವುದನ್ನು ಮರೆತಿದ್ದೆ. ಮಳೆಯ ಮೋಡಗಳು ಹಲ ವಾರು ದಿವಸಗಳ ಕಾಲ ಪಶ್ಚಿಮದ ಕಡೆಗೆ ಹರಿದುಹೋದನಂತರವೇ ಭಾರಿ ಮಳೆ ಬರುವು ದನ್ನು ದಿಲ್ಲಿಯಲ್ಲಿರುವಾಗ ನಾನು ಕಂಡಿದ್ದೇನೆ. ಇದನ್ನು ನೋಡಿದಾಗ ನನಗನ್ನಿಸುತ್ತದೆ, ದಿಲ್ಲಿಯ ಪಶ್ಚಿಮಕ್ಕಿರುವ ಆಕಾಶ ಮೊದಲು ಮೋಡಗಳಿಂದ ತುಂಬಬೇಕು, ಆ ಮೋಡ ಗಳಿಗೆ ಏನೋ ಅಡ್ಡಿ ಬಂದು ಅಥವಾ ಬೇರೆ ಮೋಡಗಳನ್ನು ಮತ್ತು ಗಾಳಿಯನ್ನು ಸಂಧಿಸಿ ಒತ್ತೊತ್ತಾಗಬೇಕು, ಆಗ ಅವು ಭಾರದಿಂದ ಮಳೆ ಸುರಿಸಬೇಕು ಎಂದು.

ಮೂರನೆಯ ಪ್ರಶ್ನೆ : ಇಂಡೀಸಿನ ಸಮುದ್ರದ ಮೇಲಿಂದ ಬೀಸುವ ಗಾಳಿಗಳು ಮತ್ತು ಪ್ರವಾಹಗಳು ಒಂದೇ ಸಮನೆ ಬೀಸಲು ಮತ್ತು ಹರಿಯಲು ಕಾರಣಗಳೇನು ?

ಉತ್ತರ : ಮಳೆಗಳು ನಿಂತಮೇಲೆ—ಅಂದರೆ ಸಾಮಾನ್ಯವಾಗಿ ಅಕ್ಟೋಬರ್ ತಿಂಗಳ ಆರಂಭದಲ್ಲಿ — ಸಮುದ್ರವು ದಕ್ಷಿಣಕ್ಕೆ ಹರಿಯುತ್ತದೆ. ಆಗ ಉತ್ತರದ ಚಳಿಗಾಳಿ ಆರಂಭವಾಗುತ್ತದೆ. ಈ ಗಾಳಿ ನಾಲ್ಕೈದು ತಿಂಗಳು ಒಂದೇ ಸಮನೆ ಬೀಸು ತ್ತದೆ. ಆದರೆ ಆಗ ಬಿರುಗಾಳಿಗಳು ಏಳುವುದಿಲ್ಲ. ಎಲ್ಲೊ ಒಂದೊಂದು ದಿವಸ ಅದು ದಿಕ್ಕು ಬದಲಾಯಿಸಬಹುದು ಅಥವಾ ಬೀಸದೆ ಇರಬಹುದು. ಈ ನಾಲ್ಕೈದು ತಿಂಗಳುಗಳ ಕಾಲ ಗಾಳಿ ಬೀಸಿದನಂತರ ಎರಡು ತಿಂಗಳುಗಳ ಕಾಲ ಗಾಳಿ ಹೇಗೆಂದರೆ ಹಾಗೆ ಬೀಸುತ್ತದೆ. ಇದನ್ನು 'ಮಧ್ಯವರ್ತಿ ಗಾಳಿ' ಎಂದು ಕರೆಯುತ್ತಾರೆ. ಇದನ್ನು ಡಚ್ಚರು 'ಅಡ್ಡಾದಿಡ್ಡಿಯ ಗಾಳಿ' ಎಂದು ಸರಿಯಾಗಿ ಕರೆಯುತ್ತಾರೆ. ಆ ಎರಡು ತಿಂಗಳು ಕಳೆದ ಮೇಲೆ ಸಮುದ್ರವು ದಕ್ಷಿಣದಿಂದ ಉತ್ತರಕ್ಕೆ ಮತ್ತೆ ಹರಿಯಲಾರಂಭಿಸು ತ್ತದೆ. ಆಗ ದಕ್ಷಿಣದ ಗಾಳಿ (South Winds, South West Winds=ನೈರುತ್ಯ ಮಾರುತಗಳು) ಬೀಸಲಾರಂಭಿಸಿ, ನಾಲ್ಕೈದು ತಿಂಗಳು ಹಾಗೆಯೇ ಬೀಸುತ್ತವೆ. ಈ ನಾಲ್ಕೈದು ತಿಂಗಳುಗಳು ಕಳೆದ ಮೇಲೆ ಇನ್ನೊಂದು ಅಡ್ಡಾದಿಡ್ಡಿಯ ಎರಡು ತಿಂಗಳು ಬರುತ್ತವೆ. ಇವುಗಳ ನಡುವಣ ಕಾಲದಲ್ಲಿ ಸಮುದ್ರಸಂಚಾರ ತುಂಬ ಕಷ್ಟ ಹಾಗೂ ಅಪಾಯಕಾರಿ. ಆದರೆ ಮೇಲೆ ಹೇಳಿದ ಎರಡು ಬೇರೆ ಬೇರೆ ಕಾಲಗಳಲ್ಲಿ ಸಮುದ್ರಯಾನ ಬಹಳ ಸುಲಭ ; ಯಾವ ತೊಂದರೆಯೂ ಇಲ್ಲದ್ದು. ಅಂಥ ವೇಳೆ ಗಳಲ್ಲಿಯೇ ಅಂಜುಬುರುಕರೂ ಸಮುದ್ರಯಾನದ ಕಲೆಯನ್ನು ತಿಳಿಯದವರೂ ಆದ ಇಂಡಿಯನರು ದೂರದ ಹಾಗೂ ಮುಖ್ಯವಾದ ಸಮುದ್ರಯಾನಗಳನ್ನು ಕೈಗೊಳ್ಳುವುದು. ಉದಾಹರಣೆಗೆ, ಬಂಗಾಳದಿಂದ ತನಸ್ಸೆರಿ, ಆಚೆಂ, ಮಲೆಕ್ಕಾ, ಸಯಾಂ ಮತ್ತು ಮಕಸ್ಸಾರ್‌ಗಳಿಗೆ ಅಥವಾ ಮಸುಲಿಪಟ್ಟ, ಸಿಲೋನ್, ಮಾಲ್ದೀವ್ ದ್ವೀಪಗಳು, ಮೋಕಾ ಮುಂತಾದ ಸ್ಥಳಗಳಿಗೆ. ಈ ವೇಳೆಗಳಲ್ಲಿ ಸಮುದ್ರಯಾನಮಾಡುವುದಕ್ಕೂ ಹೋಗುವುದಕ್ಕೂ ಬರುವುದಕ್ಕೂ ಒಳ್ಳೆಯ ಕಾಲ ನೋಡುತ್ತಾರೆ. ಅನೇಕ ವೇಳೆ

ಅವರು ಸಕಾಲದಲ್ಲಿ ಹೊರಡುವುದು ಸಾಧ್ಯವಾಗದೆ, ಕೆಟ್ಟ ಹವೆಗೆ ಸಿಕ್ಕಿದ, ಅವರ ಹಡಗು ಗಳು ಸಮುದ್ರದಲ್ಲಿ ನಾಶವಾಗುತ್ತವೆ. ಹೆಚ್ಚು ಧೈರ್ಯಶಾಲಿಗಳೂ ಬುದ್ಧಿವಂತರೂ ಆದ ಯೂರೋಪಿಯನ್ ನಾವಿಕರಿಗೂ ಒಮ್ಮೊಮ್ಮೆ ಇದೇ ಗತಿ ಸಂಭವಿಸುವುದುಂಟು. ನಾನು ಹೇಳಿದ ಎರಡು ಮಧ್ಯವರ್ತಿ ಕಾಲಗಳಲ್ಲಿ. ದಕ್ಷಿಣದ ಗಾಳಿ (ನೈರುತ್ಯ ಮಾರುತ) ಮುಗಿದ ಮೇಲೆ, ಸಮುದ್ರಯಾನ ಮಾಡುವುದು ಹೆಚ್ಚು ಅಪಾಯಕರ.

ನಾಲ್ಕನೇ ಪ್ರಶ್ನೆ : ಬಂಗಾಳ ರಾಜ್ಯವು ಜನ ಹೇಳುವಷ್ಟು ಸಮೃದ್ಧವೆ, ಶ್ರೀಮಂತವೇ ಮತ್ತು ಸುಂದರವೆ ?

ಉತ್ತರ : ಬಹಳ ಕಾಲದಿಂದ ಈಜಿಪ್ಟ್ ಪ್ರಪಂಚದಲ್ಲಿಯೇ ಬಹು ಸುಂದರ ವಾದ ಹಾಗೂ ಸಮೃದ್ಧಿಯಾದ ದೇಶ ಎಂದು ಪ್ರಖ್ಯಾತವಾಗಿದೆ. ಈಗಿನ ಬರಹಗಾರರೂ ಅದನ್ನೇ ಹೇಳುತ್ತಾರೆ. ಪ್ರಕೃತಿದೇವಿ ಆ ದೇಶಕ್ಕೆ ತೋರಿಸಿದ ವಿಶಿಷ್ಟ ಕೃಪೆ ಬೇರೆ ಯಾವ ದೇಶಕ್ಕೂ ತೋರಿಸಿಲ್ಲ ಎನ್ನುತ್ತಾರೆ. ಆದರೆ ನಾನು ಎರಡು ಸಲ ಬಂಗಾಳ ರಾಜ್ಯಕ್ಕೆ ಭೇಟಿ ಕೊಟ್ಟು ಅಲ್ಲಿಯ ವಿಚಾರಗಳನ್ನು ತಿಳಿದುಕೊಂಡ ಮೇಲೆ ಅನಿಸುತ್ತದೆ, ಈಜಿಪ್ಟಿಗೆ ಕೊಟ್ಟಿರುವ ಸ್ಥಾನವನ್ನು ಬಂಗಾಳಕ್ಕೆ ಕೊಡಬೇಕಾಗಿತ್ತು ಎಂದು. ಬಂಗಾಳದಲ್ಲಿ ಹೇರಳ ವಾಗಿ ಅಕ್ಕಿ ಬೆಳೆಯುತ್ತಾರೆ. ಈ ಅಕ್ಕಿ ಅಕ್ಕಪಕ್ಕದ ರಾಜ್ಯಗಳಿಗಷ್ಟೇ ಅಲ್ಲದೆ, ದೂರದ ಪ್ರದೇಶಗಳಿಗೂ ರವಾನೆಯಾಗುತ್ತದೆ. ಹೀಗೆ ರಫ್ತಾಗುವ ಅಕ್ಕಿ ಗಂಗಾ ನದಿಯ ಮೇಲೆ ಪಟ್ಣಾದವರೆಗೆ ಹೋಗುತ್ತದೆ. ಸಮುದ್ರದ ಮೇಲೆ ಮಸುಲಿಪಟ್ಟ ಮುಂತಾದ ಕೋರ ಮಂಡಲ ತೀರದ[1] ಊರುಗಳಿಗೆ ರವಾನೆಯಾಗುತ್ತದೆ. ಬಂಗಾಳದಲ್ಲಿ ಸಕ್ಕರೆಬೆಲ್ಲಗಳು ಹೇರಳವಾಗಿ ತಯಾರಾಗುತ್ತವೆ. ಇವುಗಳನ್ನು ಗೋಲ್ಕೊಂಡ ಮತ್ತು 'ಕರ್ನಾಟಿಕ್' ರಾಜ್ಯಗಳಿಗೆ ರವಾನಿಸುತ್ತಾರೆ. ಆ ರಾಜ್ಯಗಳಲ್ಲಿ ಇವುಗಳ ಉತ್ಪತ್ತಿ ಬಹಳ ಕಡಿಮೆ. ಅಲ್ಲದೆ ಅರೇಬಿಯ, ಮೆಸಪೊಟೋಮಿಯಾ ಮತ್ತು ಪರ್ಷಿಯ ದೇಶಗಳಿಗೂ ಕಳುಹಿಸು ತ್ತಾರೆ. ಸಿಹಿತಿಂಡಿಗಳಿಗೆ ಬಂಗಾಳ ಹೆಸರುವಾಸಿಯಾಗಿದೆ. ಅದರಲ್ಲಿಯೂ ಸಿಹಿತಿಂಡಿಗಳನ್ನು ಮಾಡುವುದರಲ್ಲಿ ಹೆಸರಾದ ಪೋರ್ಚುಗೀಸರು ನೆಲೆಸಿರುವಕಡೆಗಳಲ್ಲಂತೂ ಸಿಹಿತಿಂಡಿಗಳ ತಯಾರಿಕೆ ಹೆಚ್ಚು. ಅಲ್ಲದೆ ಅವರೂ ಸಿಹಿತಿಂಡಿಗಳ ವ್ಯಾಪಾರದಲ್ಲಿ ತೊಡಗಿದ್ದಾರೆ. ಹಣ್ಣುಗಳಲ್ಲಿ ಹುಳಿ ಹಣ್ಣುಗಳು, 'ಸರ್ಸಪರಿಲ್ಲಾ' (sarsaparilla)ದಷ್ಟು ಉದ್ದವಾದ ಒಂದು ತರಹ ಬೇರು(?), ಇಂಡಿಯಾದಲ್ಲೆಲ್ಲಾ ಬೆಳೆಯುವ 'ಅಂಬಾ' ಎಂಬ (ಮಾವಿನ) ಹಣ್ಣು, 'ಅನಾನಸ್', ಸಣ್ಣ ಅಳಲೆಕಾಯಿ (myrobalan), ನಿಂಬೆಹಣ್ಣು ಮತ್ತು ಶುಂಠಿ—ಇವುಗಳನ್ನು ಬೆಳೆಯುತ್ತಾರೆ.

ಬಂಗಾಳದಲ್ಲಿ ಈಜಿಪ್ಟಿನಷ್ಟು ಗೋಧಿ ಬೆಳೆಯುವುದಿಲ್ಲ, ನಿಜ. ಇದನ್ನು ಕೊರತೆ

---

[1] ಕೋರಮಂಡಲ ತೀರ (Coromandel coast) : ಕೃಷ್ಣಾನದಿಯ ದಕ್ಷಿಣಕ್ಕೆ, ಭಾರತದ ಆಗ್ನೇಯ ಭಾಗದ ಕಡಲ ತೀರ.

ಎಂದು ಭಾವಿಸುವುದಾದರೆ ಇದಕ್ಕೆ ಕಾರಣ ಜನಗಳ ಆಹಾರ ಪದ್ಧತಿ. ಬಂಗಾಳದ ಬಹುತೇಕ ಜನ ಅಕ್ಕಿಯನ್ನೇ ತಿನ್ನುವುದು ; ರೊಟ್ಟಿ ತಿನ್ನುವುದು ಅಪರೂಪ. ಆದರೂ ಗೋಧಿ ಬೇಸಾಯ ಇದೆ. ಬೆಳೆದ ಗೋಧಿಯನ್ನು ತಮ್ಮ ಅಲ್ಪಸ್ವಲ್ಪ ಉಪಯೋಗಕ್ಕೂ ಇಂಗ್ಲಿಷ್, ಡಚ್ ಮತ್ತು ಪೋರ್ಚುಗೀಸ್ ಹಡಗುಗಳ ಸಿಬ್ಬಂದಿಯವರಿಗೆ ಬೇಕಾದ ಸಮುದ್ರ ಬಿಸ್ಕತ್ತುಗಳ (Sea-bisquits) ತಯಾರಿಕೆಗೂ ಉಪಯೋಗಿಸುತ್ತಾರೆ. ಅನ್ನ ಊಟಮಾಡಲು ಬೇಕಾದ ಸಾರು ಮತ್ತು ಹುಳಿ ಮಾಡಲು ಮೂರುನಾಲ್ಕು ತರಹ ತರಕಾರಿಗಳನ್ನು ಬೆಳೆಯುತ್ತಾರೆ. ಇವು ಬಹಳ ಅಗ್ಗ. ಜನರು ಸಾಮಾನ್ಯವಾಗಿ ಅನ್ನಕ್ಕೆ ಹುಳಿ ಮತ್ತು ತುಪ್ಪ ಹಾಕಿಕೊಂಡು ಊಟಮಾಡುತ್ತಾರೆ. ಇದೇ ಅವರ ದಿನ ನಿತ್ಯದ ಆಹಾರ. ಎಲ್ಲವೂ ಇಲ್ಲಿ ಅಗ್ಗ. ಒಂದು ರೂಪಾಯಿಗೆ ಇಪ್ಪತ್ತು ಅಥವಾ ಅದಕ್ಕಿಂತ ಹೆಚ್ಚು ಕೋಳಿಗಳು ಸಿಕ್ಕುತ್ತವೆ. ನೀರುಕೋಳಿಗಳೂ ಬಾತುಗಳೂ ಅಷ್ಟೇ ಅಗ್ಗ. ಆಡು ಕುರಿಗಳು ಸಮೃದ್ಧಿಯಾಗಿವೆ. ಹಂದಿಗಳಂತೂ ತೀರಾ ಅಗ್ಗ. ಈ ಕಾರಣ ಇಲ್ಲಿ ನೆಲೆಸಿರುವ ಪೋರ್ಚುಗೀಸರು ಹೆಚ್ಚಾಗಿ ಹಂದಿಮಾಂಸ ತಿಂದೇ ಜೀವಿಸುತ್ತಿರುವುದು. ಡಚ್ಚರೂ ಇಂಗ್ಲಿಷರೂ ಹಂದಿಮಾಂಸಕ್ಕೆ ಉಪ್ಪು ಹಾಕಿ ಹಡಗಿನ ಪ್ರಯಾಣದಲ್ಲಿ ಉಪಯೋಗಿಸುತ್ತಾರೆ. ಆಗ ತಾನೆ ಹಿಡಿದ ಮೀನು ಮತ್ತು ಉಪ್ಪು ಹಾಕಿದ ಮೀನು ಅಷ್ಟೇ ಸಮೃದ್ಧಿಯಾಗಿ ದೊರೆಯುತ್ತವೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಬಂಗಾಳ ಎಲ್ಲ ವಸ್ತುಗಳಲ್ಲಿಯೂ ಸಮೃದ್ಧಿಯಾಗಿದೆ. ಈ ಕಾರಣವೆ ಪೋರ್ಚುಗೀಸರು, ಬೆರಕೆ ಜಾತಿಯವರಾದ (half-castes) ಮೆಸ್ತಿಸೆ (Mestice)ಗಳು ಮತ್ತು ಇತರ ಕ್ರೈಸ್ತರುಗಳು ಬೇರೆ ಬೇರೆ ಕಡೆಗಳಿಂದ ಡಚ್ಚರಿಂದ ಓಡಿಸಲ್ಪಟ್ಟು ಇಲ್ಲಿಗೆ ಬಂದು ಈ ಫಲವತ್ತಾದ ರಾಜ್ಯದಲ್ಲಿ ನೆಲೆಸಿದ್ದಾರೆ. ಇಲ್ಲಿರುವ ಜೆಸ್ಯೂಯಿಟ್ ಮತ್ತು ಅಗಸ್ಟೈನ್ ಧರ್ಮಪಂಥದ ಪಾದ್ರಿಗಳು ಹೇಳಿದರು, ಒಗೂಲಿ (Oguli = ಹೂಗ್ಲಿ) ಒಂದರಲ್ಲೇ ಎಂಟೊಂಬತ್ತು ಸಾವಿರ ಕ್ರೈಸ್ತರಿದ್ದಾರೆ ಎಂದು. ಬಂಗಾಳದ ಇತರ ಕಡೆಗಳಲ್ಲಿ ಇಪ್ಪತ್ತೈದು ಸಾವಿರಕ್ಕಿಂತಲೂ ಹೆಚ್ಚು ಜನ ಇದ್ದಾರಂತೆ. ಪಾದ್ರಿಗಳು ತಮ್ಮ ಮತವನ್ನು ಯಾವ ಅಡ್ಡಿ ಆತಂಕಗಳಿಲ್ಲದೆ ಪ್ರಚಾರಮಾಡಬಹುದು. ದೊಡ್ಡ ದೊಡ್ಡ ಇಗರ್ಜಿಗಳೂ (ಚರ್ಚುಗಳು) ಬಂಗಾಳದಲ್ಲಿವೆ. ನಾಡಿನ ಸಮೃದ್ಧಿ, ಸ್ಥಳೀಯ ಹೆಂಗಸರ ಅಂದ ಚೆಂದ ಹಾಗೂ ಅವರ ಸ್ನೇಹ ಸ್ವಭಾವ–ಇವುಗಳು ಪೋರ್ಚುಗಿಸ್, ಇಂಗ್ಲಿಷ್ ಹಾಗೂ ಡಚ್ಚರಲ್ಲಿ ಒಂದು ಗಾದೆಗೇ ಎಡೆಮಾಡಿಕೊಟ್ಟಿವೆ : "ಬಂಗಾಳಕ್ಕೆ ಹೋಗಲು ನೂರು ಬಾಗಿಲುಗಳಿದ್ದರೆ, ಬರಲು ಒಂದೂ ಇಲ್ಲ" ಎಂದು.

ವಿದೇಶಿ ವರ್ತಕರನ್ನು ಆಕರ್ಷಿಸುವ ಬೆಲೆಯಾದ ಸರಕುಗಳು ಯಾವುವೆಂದರೆ : ನಾನು ಈಗಾಗಲೇ ಹೇಳಿದ ಬೆಲ್ಲ ಸಕ್ಕರೆಯ ಜೊತೆಗೆ ಹತ್ತಿ ಮತ್ತು ರೇಷ್ಮೆ. ಈ ಎರಡು ಸರಕುಗಳಲ್ಲಿ ಹಿಂದೂಸ್ಥಾನಕ್ಕೆ ಅಷ್ಟೇ ಅಲ್ಲ, ಯೂರೋಪು ಸೇರಿದಂತೆ ಉಳಿದೆಲ್ಲ ದೇಶಗಳಿಗೂ ಬಂಗಾಳವೇ ಉಗ್ರಾಣ ಎನ್ನಬಹುದು. ಇಲ್ಲಿ ತಯಾರಾಗುವ ಬಗೆಬಗೆಯ,

ತೆಳುವಾದ ಮತ್ತು ಒರಟಾದ, ಬಿಳಿದಾದ ಹಾಗೂ ಬಣ್ಣದ ಹತ್ತಿ ಬಟ್ಟೆಗಳನ್ನು ಹಾಲೈಂಡರೊಬ್ಬರೇ (ಡಚ್ಚರು) ಹೇರಳವಾಗಿ ಜಪಾನು ಮತ್ತು ಯೂರೋಪ್‌ಗಳಿಗೆ ರವಾನಿಸುವುದನ್ನು ಕಂಡು ನಾನು ಅನೇಕ ವೇಳೆ ಬಾಯಿಮೇಲೆ ಬೆರಳಿಟ್ಟುಕೊಂಡಿದ್ದೇನೆ. ಇಂಗ್ಲಿಷರು, ಪೋರ್ಚುಗೀಸರು ಮತ್ತು ಸ್ಥಳದ ವರ್ತಕರು ಹತ್ತಿ ಬಟ್ಟೆಗಳಲ್ಲಿ ಸಾಕಷ್ಟು ವ್ಯಾಪಾರ ಮಾಡುತ್ತಾರೆ. ಇದೇ ಮಾತನ್ನು ರೇಷ್ಮೆ ಮತ್ತು ರೇಷ್ಮೆ ಬಟ್ಟೆಗಳ ವಿಷಯದಲ್ಲೂ ಹೇಳಬಹುದು. ಮೊಗಲ್ ಸಾಮ್ರಾಜ್ಯದ ಲಾಹೋರ್ ಮತ್ತು ಕಾಬೂಲ್ ವರೆಗೆ ಮತ್ತು ಹತ್ತಿ ಬಟ್ಟೆ ತರಿಸಿಕೊಳ್ಳುವ ದೇಶಗಳಿಗೆ ಇಲ್ಲಿಂದ ಪ್ರತಿ ವರ್ಷ ರವಾನೆಯಾಗುವ ಮೊತ್ತವೆಷ್ಟೆಂಬುದನ್ನು ಲೆಕ್ಕಹಾಕಲು ಸಾಧ್ಯವಿಲ್ಲ. ಎಲ್ಲ ರೇಷ್ಮೆಗಳೂ ಪರ್ಷಿಯಾ, ಸಿರಿಯ, ಸೈಯದ್ ಮತ್ತು ಬೈರೂತ್‌ಗಳ ರೇಷ್ಮೆಯಷ್ಟು ನವುರಾಗಿಲ್ಲ. ಆದರೂ ದಾಮಾಷಾ ಬೆಲೆ ಬಹಳ ಕಡಿಮೆ. ಡಚ್ಚರು ಕಾಸಿಂ ಬಜಾರ್‌ನಲ್ಲಿರುವ ತಮ್ಮ ರೇಷ್ಮೆ ಕಾರ್ಖಾನೆಗಳಲ್ಲಿ (Factories) ಏಳುನೂರು ಎಂಟುನೂರು ಜನರನ್ನು ನೇಮಿಸಿಕೊಂಡಿದ್ದಾರೆ. ಹಾಗೆಯೇ ಇಂಗ್ಲಿಷರೂ ಬೇರೆ ವರ್ತಕರೂ ತಮ್ಮ ತಮ್ಮ ಕಾರ್ಖಾನೆಗಳಲ್ಲಿ ನೇಮಿಸಿಕೊಂಡಿದ್ದಾರೆ.

ಪೆಟ್ಲುಪ್ಪಿಗೂ (saltpetre) ಬಂಗಾಳ ಮುಖ್ಯ ಮಾರುಕಟ್ಟೆ. ಇದು ಪಟ್ನದಿಂದ ಹೇರಳವಾಗಿ ಬರುತ್ತದೆ. ಗಂಗಾ ನದಿಯ ಮೇಲೆ ಸಾಗಿಸಿದ ಈ ಪೆಟ್ಲುಪ್ಪನ್ನು ಡಚ್ಚರು ಮತ್ತು ಇಂಗ್ಲಿಷರು ದೊಡ್ಡ ದೊಡ್ಡ ಹಡಗುಗಳಲ್ಲಿ ತುಂಬಿ ಇಂಡೀಸಿಗೂ ಯುರೋಪಿಗೂ ರವಾನಿಸುತ್ತಾರೆ.

ಕೊನೆಯದಾಗಿ, ಈ ಫಲವತ್ತಾದ ರಾಜ್ಯದಿಂದಲೇ ಅತ್ಯುತ್ತಮವಾದ ಅರಗು, ಅಫೀಮು, ಮೇಣ, ಬಾಲಮೆಣಸು ಹಾಗೂ ಇತರ ಸಂಬಾರವಸ್ತುಗಳು ಮತ್ತು ತುಪ್ಪ (butter)—ಇವು ದೊರೆಯುವುದು. ನಿಮಗೆ ಅನ್ನಿಸಬಹುದು, ತುಪ್ಪ ಯಾವ ಮಹಾ ಸರಕು ಎಂದು. ಇದು ಹೇರಳವಾಗಿದೆ-ದೊಡ್ಡ ದೊಡ್ಡ ಪಾತ್ರೆಗಳಲ್ಲಿ ತುಂಬಿ ರಫ್ತು ಮಾಡುವುದು ಕಷ್ಟ. ಆದರೂ ಇದನ್ನು ಸಮುದ್ರದ ಮೇಲೆ ಅನೇಕ ದೇಶಗಳಿಗೆ ರವಾನಿಸುತ್ತಾರೆ.[1]

ಇದ್ದದ್ದನ್ನು ಇದ್ದ ಹಾಗೆ ಹೇಳಬೇಕಷ್ಟೆ. ಬಂಗಾಳದ ಹವ, ಅದರಲ್ಲಿಯೂ ಸಮುದ್ರ ತೀರದ ಹವ, ಅಷ್ಟು ಹಿತಕರವಾಗಿಲ್ಲ. ಮೊದಲು ಬಂಗಾಳದಲ್ಲಿ ನೆಲಸಿದ ಡಚ್ಚರು ಮತ್ತು ಇಂಗ್ಲಿಷರಲ್ಲಿ ಬಹಳ ಜನ ಸತ್ತುಹೋದರು. ಇಂಗ್ಲೆಂಡಿಗೂ ಹಾಲೆಂಡಿಗೂ ನಡೆಯುತ್ತಿದ್ದ ಯುದ್ಧದ ಕಾರಣ ಬಲಸೋರ್ (Balasor=ಒರಿಸ್ಸಾದಲ್ಲಿರುವ ಬಂದರು) ಎಂಬ ಬಂದರಿನಲ್ಲಿ ಇಂಗ್ಲೀಷರಿಗೆ ಸೇರಿದ ಹಡಗೊಂದು ಹನ್ನೆರಡು ತಿಂಗಳುಗಳ

---

[1]ಹಿಂದೆ ತುಪ್ಪವನ್ನು 'ಕುಪ್ಪ' (Kuppa=ಕುಪ್ಪಿ ?) ಎಂಬ ಚರ್ಮದ ಚೀಲಗಳಲ್ಲಿ ತುಂಬಿ ಕಳುಹಿಸುತ್ತಿದ್ದರಂತೆ.

ವರೆಗೆ ಅಲ್ಲಿಯೇ ನಿಲ್ಲಬೇಕಾಗಿ ಬಂದುದ್ದನ್ನು ನಾನು ಕಂಡೆ. ಆ ಹನ್ನೆರಡು ತಿಂಗಳುಗಳು ಕಳೆದು ಮತ್ತೆ ಹಡಗು ಹೊರಡಬೇಕಾದಾಗ ಹಡಗು ನಡೆಸಲು ಸಾಕಷ್ಟು ಸಿಬ್ಬಂದಿಯೇ ಇರಲಿಲ್ಲ. ಏಕೆಂದರೆ, ನಾವಿಕರಲ್ಲಿ ಬಹು ಮಂದಿ ಸತ್ತುಹೋಗಿದ್ದರು. ಈಗ ಇಂಗ್ಲಿಷರೂ ಡಚ್ಚರೂ ತಮ್ಮ ಆರೋಗ್ಯದ ಬಗ್ಗೆ ಹೆಚ್ಚು ಎಚ್ಚರಿಕೆ ವಹಿಸುತ್ತಿರುವ ಕಾರಣ ಸಾವು ನೋವುಗಳ ಸಂಖ್ಯೆ ಕಡಿಮೆಯಾಗಿದೆ. ಹಡಗಿನ ಯಜಮಾನರುಗಳೂ ಸಿಬ್ಬಂದಿಯವರೂ ಮಿತಿಮೀರಿ 'ಪಂಚ್' (Punch= ಶರಾಬು) ಕುಡಿಯದಂತೆ ನಿಷೇಧಿಸಿದ್ದಾರೆ. ಅಲ್ಲದೆ, ಇಂಡಿಯಾದ ಹೆಂಗಸರ ಬಳಿಗೆ ಅಥವಾ 'ಅರ್ರ್ಯಾಕ್' (ಶರಾಬು) ಮತ್ತು ತೊಬಾಕೊ (tobocco= ತಂಬಾಕು) ಮಾರುವವರ ಹತ್ತಿರ ಹೋಗಲು ಹೆಚ್ಚಾಗಿ ಅವಕಾಶಕೊಡು ವುದಿಲ್ಲ. ಗುಡ್-ವಿನ್-ದೆ-ಗ್ರೇವ್ ಅಥವಾ ಕನರಿ ದ್ವೀಪದ (Good Vin de Grave or Canary) ಮತ್ತು ಷಿರಾಜ್ (Chiras) ಪ್ರಾಂತದವೈನುಗಳನ್ನು (ದ್ರಾಕ್ಷಿಯ ಮದ್ಯವನ್ನು) ಮಿತವಾಗಿ ತೆಗೆದುಕೊಂಡರೆ ಅವು ಕೆಟ್ಟ ಹವೆಯ ದುಷ್ಪರಿ ಣಾಮಗಳ ನಿವಾರಣೆಗೆ ಸಿದ್ಧೌಷದಗಳು. ಆದ್ದರಿಂದ, ಯಾರು ಎಚ್ಚರಿಕೆಯಿಂದ ಬಾಳು ವರೋ ಅವರು ಕಾಯಿಲೆ ಬೀಳಬೇಕಾಗಿಯೂ ಇಲ್ಲ ; ಬೇರೆ ದೇಶಗಳಿಗಿಂತ ಹೆಚ್ಚಾಗಿ ಬಂಗಾಳದಲ್ಲಿ ಸಾಯಬೇಕಾಗಿಯೂ ಇಲ್ಲ. 'ಬೋಲೆ-ಪೋಜೆ' (boule pouge) ಎಂಬುದು ಶರಾಬಿನಿಂದ ತಯಾರಾದ ಮದ್ಯ. ಬೆಲ್ಲದ ಕಾಕಂಬಿಗೆ ನಿಂಬೆಹಣ್ಣಿನ ರಸ, ನೀರು ಮತ್ತು ಜಾಕಾಯಿ ಸೇರಿಸಿ ಭಟ್ಟಿ ಇಳಿಸಿ ಇದನ್ನು ತಯಾರಿಸುತ್ತಾರೆ. ಇದು ಬಹು ರುಚಿ. ಆದರೆ ಆರೋಗ್ಯಕ್ಕೆ ಬಹಳ ಅಪಾಯಕಾರಿ.

ಬಂಗಾಳದ ಸೊಗಸನ್ನು ವರ್ಣಿಸುವಾಗ ಅಲ್ಲಿರುವ ಅಸಂಖ್ಯಾತ ಕಾಲುವೆಗಳ ವಿಚಾರ ಹೇಳಲೇಬೇಕು. ಗಂಗಾ ನದಿಯ ಇಕ್ಕೆಲಗಳಲ್ಲಿ ರಾಜಮಹಲಿನಿಂದ ಸಮುದ್ರದ ವರೆಗೆ ಇರುವ ನೂರು ಹರಿದಾರಿಗಳಷ್ಟು ಉದ್ದದ ನಾಡಿನಲ್ಲಿ ಅಸಂಖ್ಯಾತ ಕಾಲುವೆಗಳಿವೆ. ನಾಲ್ಕು ತಿಂಗಳ ಮಳೆಗಾಲದಲ್ಲಿ ಗಂಗಾ ನದಿ ಉಕ್ಕಿ ಹರಿಯುತ್ತದೆ. ಆ ನೀರನ್ನು ಕಾಲುವೆ ಗಳ ಮೂಲಕ ತಿರುಗಿಸಿಕೊಳ್ಳುತ್ತಾರೆ. ಈ ಕಾಲುವೆಗಳನ್ನು ಒಂದಾನೊಂದು ಕಾಲದಲ್ಲಿ ಬಹಳ ಶ್ರಮವಹಿಸಿ ತೋಡಿದ್ದಾರೆ. ಗಂಗಾ ನದಿಯಿಂದ ಶಾಖೋಪಶಾಖೆಗಳಾಗಿ ಈ ಕಾಲುವೆಗಳನ್ನು ತೋಡಿ, ನೀರಾವರಿ ಬೇಸಾಯಕ್ಕೂ ದೋಣಿಗಳ ಓಡಾಟಕ್ಕೂ ಅನುಕೂಲಮಾಡಿಕೊಂಡಿದ್ದಾರೆ. ಗಂಗಾ ನದಿಯಂತೆ ಇಂಡಸ್ ನದಿಯೂ ಮಳೆಗಾಲದಲ್ಲಿ ಉಕ್ಕಿ ಹರಿಯುತ್ತದೆ. ಆದರೆ ಇಂಡಸ್ ನದಿಯ ಕ್ಷೇತ್ರದಲ್ಲಿ ಕೆಲವು ವರ್ಷಗಳು ಮಳೆಯೇ ಬೀಳುವುದಿಲ್ಲ. ಆಗ ಅವರು 'ಕಾಲಿ' (kaḷi= ಕಾಲುವೆ)ಗಳನ್ನು ತೋಡಿ ನೀರು ಹಾಯಿಸಿಕೊಳ್ಳುತ್ತಾರೆ. ಅಲ್ಲದೆ ಗಂಗಾ ನೀರು ಪ್ರಪಂಚದ ಯಾವ ನೀರಿಗೂ ಮಿಗಿಲೆಂಬ ಕಾರಣದಿಂದ ಕುಡಿಯುವ ನೀರಿಗಾಗಿಯೂ ಈ ಕಾಲುವೆಗಳನ್ನು ತೆಗೆದಿದ್ದಾರೆ.

ಈ ಕಾಲುವೆಗಳ ಇಕ್ಕೆಲಗಳಲ್ಲಿ ಉದ್ದಕ್ಕೂ ಊರು ಕೇರಿಗಳಿವೆ. ಇವುಗಳಲ್ಲಿ ಜೆಂಟೈಲರು ತುಂಬ ಜನ ವಾಸಮಾಡುತ್ತಾರೆ. ಎಲ್ಲೆಲ್ಲೂ ಭತ್ತ, ಕಬ್ಬು, ಕಾಳು

ಕಡ್ಡಿಗಳು, ನಾಲ್ಕೈದು ತರಹ ತರಕಾರಿಗಳು, ಸಾಸುವೆ, ಎಳ್ಳು, ಎರಡು ಮೂರು ಅಡಿ ಎತ್ತರದ ಸಣ್ಣ ಹಿಪ್ಪುನೇರಳೆ ಗಿಡಗಳು—ಇವುಗಳ ಹೊಲಗದ್ದೆಗಳು ಕಂಗೊಳಿಸುತ್ತವೆ. ಆದರೆ ಬಂಗಾಳದ ಬಹು ರಮ್ಯವಾದ ಹಾಗೂ ಸುಂದರವಾದ ವಿಶಿಷ್ಟ ನೋಟವೆಂದರೆ ಗಂಗಾ ನದಿಯ ವಿಶಾಲವಾದ ಪಾತ್ರದಲ್ಲಿ ಅಲ್ಲಲ್ಲಿ ಇರುವ ಅಸಂಖ್ಯಾತ ದ್ವೀಪಗಳು. ಕೆಲವು ಕಡೆಗಳಲ್ಲಿ ಗಂಗಾ ನದಿ ಹರಡಿ ಹರಿಯುತ್ತದೆ. ಅಂಥ ಕಡೆಗಳಲ್ಲಿ ನದಿಯ ಅಗಲ ಏಳೆಂಟು ದಿನಗಳ ಪ್ರಯಾಣದಷ್ಟು ಇರುತ್ತದೆ. ದ್ವೀಪಗಳ ವಿಸ್ತೀರ್ಣ ಹೆಚ್ಚು ಕಡಿಮೆ ಇರುತ್ತದೆ. ಆದರೆ ಎಲ್ಲವೂ ಫಲವತ್ತಾಗಿವೆ. ಮರಗಿಡಗಳೂ ಹಣ್ಣು ಹಂಪಲು ಗಿಡಗಳೂ ಸಮೃದ್ಧಿಯಾಗಿವೆ. ಸಾವಿರಾರು ಕಾಲುವೆಗಳು ದೃಷ್ಟಿ ಹೋಗುವವರೆವಿಗೆ ಎರಡು ಕಡೆಯೂ ಸಾಲು ಮರಗಳುಳ್ಳ ಹಾದಿಗಳಂತೆ ಕಾಣುತ್ತವೆ. ಸಮುದ್ರಕ್ಕೆ ಬಹು ಸಮೀಪವಾದ ಹಲವಾರು ದ್ವೀಪಗಳನ್ನು ಈಗ ಬಿಟ್ಟುಬಿಟ್ಟಿದ್ದಾರೆ.[1] ನಾನು ಮತ್ತೊಂದು ಕಡೆ ತಿಳಿಸಿರುವ ಅರಕಾನಿನ ಫರಂಗೀ ಕಡಲುಗಳ್ಳರ ಹಾವಳಿಯೇ ಇದಕ್ಕೆ ಕಾರಣ. ಈಗ ಅವು ಪಾಳು ಬಿದ್ದ ಭೂಮಿಗಳು ; ಮನುಷ್ಯರ ಸುಳಿವಿಲ್ಲ ಅಲ್ಲಿ ಈಗ ಚಿಗರೆ, ಹಂದಿ, ಕಾಡುಕೋಳಿ, ಹುಲಿ ಮುಂತಾದ ಪ್ರಾಣಿಗಳು ತುಂಬಿವೆ. ಹುಲಿಗಳು ಒಂದು ದ್ವೀಪದಿಂದ ಇನ್ನೊಂದು ದ್ವೀಪಕ್ಕೆ ಈಜಿಕೊಂಡು ಹೋಗಬಲ್ಲವು. ಈ ಹುಲಿಗಳು ಜನಗಳು ಅಡ್ಡಾಡುವ ಸಣ್ಣ ಹುಟ್ಟುದೋಣಿಗಳಿಗೆ ಹಾರಿ, ರಾತ್ರಿ ಹೊತ್ತು ಅವುಗಳಲ್ಲಿ ಮಲಗಿರುವ ಜನರನ್ನು ಹಿಡಿದುಕೊಂಡುಹೋಗುವ ಸಂಭವವುಂಟು. ಇಲ್ಲಿಯ ಜನ ಹೇಳುವಂತೆ ಹುಲಿಗಳು ಬಡಕಲು ಮನುಷ್ಯರನ್ನು ಹಿಡಿಯದೆ ದಷ್ಟಪುಷ್ಟರಾದವರನ್ನೇ ಹಿಡಿಯುತ್ತವೆ.

ನಾನೊಮ್ಮೆ ಈ ದ್ವೀಪಗಳ ಹಾಗೂ ಕಾಲುವೆಗಳ ಮೂಲಕ ಪಿಪ್ಲಿಯಿಂದ ಒಗೂಲಿಗೆ (ಹೂಗ್ಲಿಗೆ) ಮಾಡಿದ ಒಂಬತ್ತು ದಿವಸಗಳ ಪ್ರಯಾಣವನ್ನು ಮರೆಯಲಾರೆ. ಒಂದು ದಿನವೂ ಏನಾದರೊಂದು ಆಶ್ಚರ್ಯವೋ ಇಲ್ಲ ಸಾಹಸವೋ ನಡೆಯದೆ ಇರುತ್ತಿರಲಿಲ್ಲ. ಪಿಪ್ಲಿ ನದಿಯ ಮೇಲೆ (ಪಿಪ್ಲಿ ಎಂಬ ಬಂದರು ಇದ್ದ ಸುವರ್ಣರೇಖಾ ನದಿ) ನನ್ನ 'ಸ್ಕೆಲ್ಲೋಪ್' (Scallop) ಎಂದು ಕರೆಯಲ್ಪಡುವ ಏಳು ಹುಟ್ಟಿನ ದೋಣಿಯಲ್ಲಿ ಸಂಚರಿಸಿ ಸಮುದ್ರವನ್ನು ಮುಟ್ಟಿ, ಅದರ ಮೇಲೆ ಮೂರು ನಾಲ್ಕು ಹರಿದಾರಿಗಳ ದೂರ ಸಾಗಿದೆವು. ಸಮುದ್ರದ ತುಂಬ ಮೀನು ತುಂಬಿದ್ದುದನ್ನು ಕಂಡೆವು. ಬಹುಶಃ ಆ ಮೀನುಗಳು ದೊಡ್ಡ ದೊಡ್ಡ ಪುರಿಯಾಲಿ ಮೀನು (ಕಾರ್ಪ್ ಮೀನು) ಗಳಿರಬೇಕು. ಆ ಮೀನುಗಳನ್ನು ಅಸಂಖ್ಯಾತ ಹಂದಿಮೀನುಗಳು (dolphins) ಅಟ್ಟಾಡುತ್ತಿದ್ದುದನ್ನು ಕಂಡೆವು. ಆ ಕಡೆಗೆ ದೋಣಿ ನಡೆಸಿಕೊಂಡು ಹೋಗಿ ನೋಡಿದಾಗ ಅನೇಕ ಮೀನುಗಳು ಸತ್ತಂತೆ ಒಂದು ಪಕ್ಕೆ ಮೇಲಕ್ಕೆ ಮಾಡಿಕೊಂಡು ತೇಲಾಡುತ್ತಿದ್ದುವು. ಕೆಲವು ನಿಧಾನವಾಗಿ ಸಾಗುತ್ತಿದ್ದುವು–ಉಳಿದವು ಏನೋ ಮಂತ್ರಮುಗ್ಧವಾದಂತೆ ತೆಪ್ಪಗೆ

---

[1] ಇವೇ 'ಸುಂದರ ಬನ' (Sunderban) ದ್ವೀಪಗಳು.

ಇದ್ದುವು. ನಾವು ನಮ್ಮ ಕೈಯಿಂದ ಇಪ್ಪತ್ತನಾಲ್ಕು ಮೀನುಗಳನ್ನು ಹಿಡಿದು ಕೊಂಡೆವು. ಇವನ್ನು ಪರೀಕ್ಷಿಸಿದಾಗ ಪ್ರತಿಯೊಂದು ಮೀನಿನ ಬಾಯಿಂದ ಚೀಲ ಹೊರ ಬಂದಿರುವುದು ಕಾಣಿಸಿತು. ಗಾಳಿ ತುಂಬಿದ್ದ ಆ ಚೀಲದ ತುದಿ ಕೆಂಪಾಗಿತ್ತು. ಈ ಗಾಳಿ ತುಂಬಿದ ಚೀಲದ ಕಾರಣವೇ ಮೀನುಗಳು ಮುಳುಗದೆ ಇದ್ದುದ್ದಕ್ಕೆ ಕಾರಣ ಎಂದು ನನಗನ್ನಿಸಿತು. ಆದರೆ ಆ ಚೀಲ ಏಕೆ ಕಾಣಿಸಿಕೊಂಡಿತು ಎಂದು ಗೊತ್ತಾಗಲಿಲ್ಲ. ಬಹುಶಃ ಹಂದಿಮೀನುಗಳು ಅಟ್ಟಿಸಿಕೊಂಡು ಬಂದ ಕಾರಣ ಮೀನುಗಳು ಓಡಾಡಿ ಸುಸ್ತಾಗಿ ಹೊಟ್ಟೆಯೊಳಗಿನ ಚೀಲ ಹೊರಬಂದಿರಬೇಕು.

ಮಾರನೆಯ ದಿನ ಮಧ್ಯಾಹ್ನ ನಾವು ದ್ವೀಪಗಳನ್ನು ಸಮೀಪಿಸಿದೆವು. ಹುಲಿಗಳ ಕಾಟ ಇಲ್ಲದಂತೆ ಕಂಡ ಒಂದು ಸ್ಥಳದಲ್ಲಿ ಇಳಿದು ಬೆಂಕಿಹಚ್ಚಿದೆವು. ಕೋಳಿ ಕುಯ್ದು ಮತ್ತು ಮೀನು ಉಜ್ಜಿ ಒಳ್ಳೆಯ ಅಡುಗೆಮಾಡಿದರು. ಮೀನು ಬಹು ರುಚಿಯಾಗಿತ್ತು. ಊಟವಾದ ಮೇಲೆ ಮತ್ತೆ ದೋಣಿಯಲ್ಲಿ ಕುಳಿತು ಸಂಜೆಯಾಗುವವರೆಗೆ ದೋಣಿ ನಡೆಸಿ ದೆವು. ಕತ್ತಲಾದ ಮೇಲೆ ಕಾಲುವೆಗಳಲ್ಲಿ ದಾರಿತಪ್ಪುವ ಸಂಭವವಿತ್ತು. ಈ ಕಾರಣ ಕತ್ತಲಾಗುವ ಮುನ್ನವೇ ನದಿಯಿಂದ ಪಕ್ಕಕ್ಕೆ ಹೋಗಿ ಒಂದು ಖಾರಿಯಲ್ಲಿ ರಾತ್ರಿ ಯನ್ನು ಕಳೆದೆವು. ನಮ್ಮ ದೋಣಿಯನ್ನು ಮರದ ದಪ್ಪ ಕೊಂಬೆಯೊಂದಕ್ಕೆ ಕಟ್ಟಿದೆವು. ಅದು ತೀರದಿಂದ ಸಾಕಷ್ಟು ದೂರದಲ್ಲಿತ್ತು. ಕಾವಲು ಕಾಯುತ್ತಿರುವಾಗ ನಾನು ದಿಲ್ಲಿಯಲ್ಲಿ ಎರಡು ಸಲ ಕಂಡಂತಹ ಒಂದು ದೃಶ್ಯವನ್ನು ನೋಡಿದೆ. ಆ ದೃಶ್ಯವೇ ಚಂದ್ರನ ಕಾಮನಬಿಲ್ಲು. ಮಲಗಿದದರನ್ನೆಲ್ಲಾ ಎಬ್ಬಿಸಿ ಅವರಿಗೂ ತೋರಿಸಿದೆ. ಇಬ್ಬರು ಪೋರ್ಚುಗೀಸ್ ಅಂಬಿಗರಂತೂ ಬಹಳ ಆಶ್ಚರ್ಯಪಟ್ಟರು. ಈ ಪೋರ್ಚುಗೀಸರನ್ನು ಒಬ್ಬ ಸ್ನೇಹಿತನ ಕೋರಿಕೆಯ ಮೇಲೆ ನನ್ನ ದೋಣಿಯಲ್ಲಿ ಕರೆದುಕೊಂಡುಬಂದಿದ್ದೆ. ತಾವು ಇಂಥ ಕಾಮನಬಿಲ್ಲನ್ನು ನೋಡಿಯೂ ಇಲ್ಲ, ಅದರ ಬಗ್ಗೆ ಕೇಳಿಯೂ ಇಲ್ಲ ಎಂದರು, ಅವರು.

ಮೂರನೆಯ ದಿನ ಕಾಲುವೆಗಳ ಮೇಲೆ ಹೋಗುವಾಗ ನಮ್ಮ ದೋಣಿ ದಾರಿ ತಪ್ಪಿತು. ದ್ವೀಪಗಳಲ್ಲಿ ಹಲವಾರು ಪೋರ್ಚುಗೀಸರು ಉಪ್ಪುಮಾಡುವ ಕೆಲಸದಲ್ಲಿ ತೊಡಗಿದ್ದರು. ಅವರನ್ನು ಕೇಳಿ ಮತ್ತೆ ಸರಿಯಾದ ದಾರಿಯಲ್ಲಿ ಹೊರಟೆವು. ಈ ರಾತ್ರಿ ನಮ್ಮೊಡನಿದ್ದ ಪೋರ್ಚುಗೀಸರು ಆಕಾಶದ ಕಡೆಗೇ ನೋಡುತ್ತಿದ್ದು, ಹಿಂದಿನ ರಾತ್ರಿ ನಾನು ಕಂಡಂಥ ಕಾಮನಬಿಲ್ಲೊಂದನ್ನು ಕಂಡು ಮಲಗಿದ್ದ ನನ್ನನ್ನು ಎಬ್ಬಿಸಿದರು. ಚಂದ್ರನ ಸುತ್ತ ಕಟ್ಟುವ ಗುಡಿಯನ್ನು (halo) ಕಾಮನಬಿಲ್ಲೆಂದು (iris) ತಪ್ಪು ಹೇಳುತ್ತಿದ್ದೇನೆಂದು ಭಾವಿಸಬೇಡಿ. ಚಂದ್ರನ ಸುತ್ತ ಗುಡಿಕಟ್ಟುವುದನ್ನು (ಬಣ್ಣದ ವರ್ತುಲ ಕಾಣಿಸಿಕೊಳ್ಳುವುದನ್ನು) ನಾನು ಮಳೆಗಾಲದ ವೇಳೆ ದಿಲ್ಲಿಯಲ್ಲಿ ನೋಡಿದ್ದೇನೆ. ಚಂದ್ರನು ಕ್ಷಿತಿಜದಿಂದ ಬಹಳ ಎತ್ತರದಲ್ಲಿರುವಾಗ ಅದಕ್ಕೆ ಗುಡಿಕಟ್ಟುತ್ತದೆ. ಒಮ್ಮೊಮ್ಮೆ ಎರಡು ಗುಡಿಗಳು ಕಟ್ಟುವುದೂ ಉಂಟು. ಆದರೆ ನಾನು ಹೇಳುವ

ಕಾಮಬಿಲ್ಲು ಚಂದ್ರನ ಸುತ್ತ ಕಟ್ಟುವ ಗುಡಿಯಲ್ಲ. ನಾನು ಹೇಳುತ್ತಿರುವುದು ಚಂದ್ರನಿಗೆ ಎದುರು ದಿಕ್ಕಿನಲ್ಲಿ ಸೂರ್ಯನ ಕಾಮನಬಿಲ್ಲಿನಂತೆ ಇದ್ದ ಕಾಮನಬಿಲ್ಲು. ನಾನು ನೋಡಿದ ರಾತ್ರಿ ಕಾಮನಬಿಲ್ಲು ಚಂದ್ರ ಪಶ್ಚಿಮದಲ್ಲಿರುವಾಗ ಕಂಡದ್ದು. ಅಲ್ಲದೆ, ಚಂದ್ರ ಪೂರ್ತಿ ಗುಂಡಾಗಿ ಇರುವಾಗ. ಆಗಲೆ ತಾನೆ ಕಾಮನಬಿಲ್ಲಿನ ರಚನೆಗೆ ಬೇಕಾದ ಸಾಕಷ್ಟು ಚಂದ್ರನ ಕಿರಣಗಳು ಬೀಳುವುದು. ಮತ್ತೇನೆಂದರೆ, ನಾವು ನೋಡಿದ ಕಾಮನ ಬಿಲ್ಲು ಗುಡಿಯಷ್ಟು ಬೆಳ್ಳಗಿರಲಿಲ್ಲ. ಅದರ ಬದಲು ಹಲವಾರು ಬಣ್ಣಗಳು ಸ್ಪಷ್ಟವಾಗಿ ಕಾಣುತ್ತಿದ್ದುವು. ಅರಿಸ್ಟಾಟಲ್ ಹೇಳಿದ್ದಾನೆ, ತನ್ನ ಕಾಲಕ್ಕೆ ಹಿಂದೆ ಯಾರೂ ಚಂದ್ರನ ಕಾಮನಬಿಲ್ಲುಗಳನ್ನು ನೋಡಿರಲಿಲ್ಲ ಎಂದು. ಈ ಕಾರಣ, ನಾನು ನಮ್ಮ ಪೂರ್ವಿಕರಿಗಿಂತ ಹೆಚ್ಚು ಸಂತೋಷಪಡಬೇಕಾಗಿದೆಯಲ್ಲವೆ !

ನಾಲ್ಕನೆಯ ದಿನ ನಾವು ಒಂದು ಸುರಕ್ಷಿತವಾದ ಸ್ಥಳದಲ್ಲಿ ತಂಗಿದ್ದೆವು. ಅಲ್ಲಿ ನಾವು ಒಂದು ಅಸಾಧಾರಣ ರಾತ್ರಿಯನ್ನು ಕಳೆದೆವು. ಗಾಳಿಯ ರವೆಯೇ ಇರಲಿಲ್ಲ. ಉಸಿರಾಡುವುದೂ ತುಂಬ ಕಷ್ಟವಾಗಿತ್ತು. ನಮ್ಮ ಸುತ್ತಮುತ್ತ ಇದ್ದ ಪೊದೆಗಳ ತುಂಬ ಹೊನ್ನೆಹುಳುಗಳು ! ಪೊದೆಗಳೆಲ್ಲಾ ಹೊತ್ತಿಕೊಂಡಂತೆ ಕಾಣುತ್ತಿದ್ದುವು. ಇಷ್ಟೆ ಅಲ್ಲ, ಕೊಳ್ಳಿಯಂತಹ ಬೆಂಕಿಗಳು ಪ್ರತಿ ನಿಮಿಷ ಕಾಣಿಸಿಕೊಳ್ಳುತ್ತಿದ್ದುವು. ಅವು ದೆವ್ವಗಳೆಂದು, (ಕೊಳ್ಳಿದೆವ್ವಗಳೆಂದು) ನಮ್ಮ ನಾವಿಕರು ಹೆದರಿಬಿಟ್ಟರು. ಈ ಬೆಂಕಿಗಳಲ್ಲಿ ಎರಡು ಬಹಳ ವಿಶಿಷ್ಟವಾಗಿದ್ದುವು. ಒಂದು ಬೆಂಕಿಯು ಚೆಂಡಿನಂತೆ ಕಾಣಿಸಿಕೊಂಡು ಸಾಕಷ್ಟು ಹೊತ್ತು ಇತ್ತು. ಇನ್ನೊಂದು ಸಣ್ಣ ಮರಕ್ಕೆ ಬೆಂಕಿ ಹೊತ್ತಿಕೊಂಡರೆ ಹೇಗೆ ಕಾಣುವುದೋ ಹಾಗೆ ಕಾಣಿಸಿಕೊಂಡು, ಸುಮಾರು ಕಾಲು ಗಂಟೆಯ ಕಾಲ ಇತ್ತು.

ಐದನೆಯ ರಾತ್ರಿ ನಾವು ಬಹಳ ಅಪಾಯಕ್ಕೆ ಈಡಾದೆವು. ಇದ್ದಕ್ಕಿದ್ದಂತೆ ಬಿರುಗಾಳಿ ಎದ್ದಿತು. ಮರಗಳ ಅಡಿಯಲ್ಲಿ ಸುರಕ್ಷಿತವಾಗಿ ಇರುವೆವೆಂದು ತಿಳಿದಿದ್ದೆವು. ಆದರೆ ಆ ಬಿರುಗಾಳಿಗೆ ನಾವು ಕಟ್ಟಿದ್ದ ದೋಣಿಯ ಹಗ್ಗ ಕಿತ್ತುಹೋಯಿತು. ನಮ್ಮ ದೋಣಿ ಗಾಳಿಯಲ್ಲಿ ಕೊಚ್ಚಿಕೊಂಡು ಹೋಗಿ, ನಾವೆಲ್ಲ ನೀರಿನ ಪಾಲಾಗುವ ಸಂಭವ ಒದಗಿತು. ಆಗ ನಾನೂ ಇಬ್ಬರು ಪೋರ್ಚುಗೀಸರೂ ಸೇರಿ ದೋಣಿಯಲ್ಲಿ ನಿಂತು ಮರದ ಕೊಂಬೆಗಳನ್ನು ಭದ್ರವಾಗಿ ಹಿಡಿದುಕೊಂಡೆವು. ಬಿರುಗಾಳಿ ಬೀಸಿದ ಎರಡು ಗಂಟೆಗಳ ಕಾಲವೂ ನಾವು ಹಡಗಿನಲ್ಲಿ ನಿಂತೆವು. ನಮ್ಮ ಇಂಡಿಯನ್ ಅಂಬಿಗರಂತೂ ಹೆದರಿ ಕಂಗಾಲಾಗಿ ನಮಗೆ ಏನೂ ಸಹಾಯಮಾಡದೆ ಇದ್ದುಬಿಟ್ಟರು. ಮರದ ರೆಂಬೆಗಳನ್ನು ತಬ್ಬಿಕೊಂಡು ಪ್ರಾಣಕ್ಕಾಗಿ ಹೋರಾಡುತ್ತಿದ್ದ ನಮ್ಮ ಸ್ಥಿತಿ ತೀರಾ ಚಿಂತಾಜನಕವಾಗಿತ್ತು. ಮಳೆ ಭೋರೆಂದು ಸುರಿಯುತ್ತಿತ್ತು. ಬಾನಿಗಳಲ್ಲಿ ದೋಣಿಗೆ ನೀರು ತುಂಬಿದಂತೆ ಮಳೆ ಸುರಿಯುತ್ತಿತ್ತು. ಸಿಡಿಲು ಮಿಂಚುಗಳಂತೂ ನಮ್ಮ ತಲೆಗೆ ಬಡಿದುವೋ ಎಂಬಂತೆ ಆರ್ಭಟಿಸುತ್ತಿದ್ದುವು ; ಆ ಕರಾಳ ರಾತ್ರಿಯಲ್ಲಿ ನಾವು ಬದುಕಬಲ್ಲೆವೆ ಎಂಬ ಸಂದೇಹದಲ್ಲಿ ತೊಳಲಾಡಿದೆವು.

ಇನ್ನುಳಿದ ದಿನಗಳ ಪ್ರಯಾಣ ಬಹು ಆನಂದದಾಯಕವಾಗಿತ್ತು. ಒಂಬತ್ತನೆಯ ದಿನ ಒಗೂಲಿ ಮುಟ್ಟಿದೆವು. ಈ ಒಂಬತ್ತು ದಿನಗಳು ಎಂಥ ಸುಂದರ ನಾಡನ್ನು ಕಂಡುವು ಈ ಕಣ್ಣುಗಳು! ಆದರೆ ನನ್ನ ಪಿಠಾರಿ ಮತ್ತು ಬಟ್ಟೆಬರೆಗಳೆಲ್ಲಾ ಒದ್ದೆಯಾಗಿದ್ದುವು; ಹಡಗಿನಲ್ಲಿದ್ದ ಕೋಳಿ ಕೊಕ್ಕರೆಗಳು ಸತ್ತುಹೋಗಿದ್ದುವು; ಮೀನು ಕೆಟ್ಟುಹೋಗಿದ್ದುವು; ನನ್ನ ಬಿಸ್ಕತ್ತುಗಳು ಮಳೆಯಲ್ಲಿ ನೆನೆದು ನೀರಾಗಿದ್ದುವು.

ಐದನೆಯ ಪ್ರಶ್ನೆ: ನೈಲ್ ನದಿಯ ಏರಿಕೆಗೆ ಕೊಡುವ ಕಾರಣಗಳ ಬಗ್ಗೆ ಹಳೆಯ ವಾದವಿವಾದಗಳನ್ನು ಕುರಿತು ನಿಮ್ಮ ಖಚಿತ ತೀರ್ಮಾನವೇನು?

ಮೆಸ್ಯ ತೇವೆನೋ ಅವರು ನಾನು ಕೆಂಪುಸಮುದ್ರ, ಸೂಯೆಜ್, ತೋರ್ (Tor), ಮೌಂಟ್ ಸಿನಾಯ್, ಜಿಡ್ಡಾ, ಕಮರಾನೆ ದ್ವೀಪ, ಲೊಹೀಯಾ (Loheia) —ಈ ಕಡೆಗಳಲ್ಲಿ ಮಾಡಿದ ಪ್ರವಾಸಗಳನ್ನು ಕುರಿತೂ, ಇಥಿಯೋಪಿಯ ರಾಜ್ಯದ ಬಗ್ಗೆ ನಾನು ಮೋಕಾದಲ್ಲಿ ಸಂಗ್ರಹಿಸಿದ ವಿಷಯಗಳ ಬಗ್ಗೆಯೂ, ಅಲ್ಲಿಗೆ ಹೋಗುವ ಸರಿಯಾದ ಮಾರ್ಗ ಯಾವುದು ಎಂಬ ವಿಷಯವಾಗಿಯೂ ತಿಳಿಯುವ ಅಪೇಕ್ಷೆ ಹೊಂದಿದ್ದಾರೆಂದು ನೀವು ಹೇಳಿದ್ದೀರಿ. ನನ್ನ ಲೇಖನಗಳನ್ನು (papers) ಸರಿಯಾಗಿ ಜೋಡಿಸಿಟ್ಟುಕೊಳ್ಳುವುದು ಸಾಧ್ಯವಾದಾಗ ಈ ಅಪೇಕ್ಷೆಯನ್ನು ಈಡೇರಿಸಲು ಪ್ರಯತ್ನಪಡುತ್ತೇನೆ. ಅದಕ್ಕೆ ಭಗವಂತನ ಆಶೀರ್ವಾದ ಇರಲಿ.

[ಈ ಪ್ರಶ್ನೆಗೆ ಬೆರ್ನ್ಯೇ ಕೊಡುವ ಉತ್ತರ ನಮಗೆ ಸಂಬಂಧಪಡದ ಕಾರಣ ಅದನ್ನು ಬಿಟ್ಟಿದೆ]



# ಬಪ್ತೀಸ್ಟ್ ಟಾವೆರ್ನ್ಯೇ

## (ಪರಿಚಯ)

ಷ್ಟಾ ಬಪ್ತೀಸ್ಟ್ ಟಾವೆರ್ನ್ಯೇ (Jean Baptiste Tavernier) ೧೭ನೆಯ ಶತಮಾನದ ಖ್ಯಾತಿವೆತ್ತ ಪ್ರವಾಸಿಗರಲ್ಲಿ ಒಬ್ಬ. ಇತಿಹಾಸದಲ್ಲಿಯೂ ವಜ್ರ ವೈಡೂರ್ಯಗಳ ಪ್ರಸ್ತಾಪಮಾಡುವಾಗಲೂ ಇವನ ಹೆಸರು ಹೆಚ್ಚಾಗಿ ಉಲ್ಲೇಖಿಸಲ್ಪಡು ತ್ತದೆ. ಟಾವೆರ್ನ್ಯೇನ ತಂದೆಯ ಹೆಸರು ಗೇಬ್ರಿಯಲ್. ಪ್ರಾಟೆಸ್ಟೆಂಟ್ ಕ್ರೈಸ್ತರಿಗೆ ಆಗು ತ್ತಿದ್ದ ಮತೀಯ ಕಿರುಕುಳವನ್ನು ತಪ್ಪಿಸಿಕೊಳ್ಳಲು ಗ್ರೇಬಿಯಲ್ ತನ್ನ ಇಬ್ಬರು ಸಹೋ ದರರೊಡನೆ ಕ್ರಿ. ಶ. ೧೫೭೫ರಲ್ಲಿ ಬೆಲ್ಜಿಯಂ ದೇಶದ ಆಂಟ್‌ವರ್ಪ್ ನಗರದಿಂದ ಫ್ರಾನ್ಸ್ ದೇಶದ ಪ್ಯಾರಿಸ್ಸಿಗೆ ಓಡಿಹೋದನು. ಆತ ಅಲ್ಲಿ ಸುಸಾನ್ ಟೊನ್ನೆಲಿಯ (Suzanne Tonnelier) ಎಂಬಾಕೆಯನ್ನು ಮದುವೆಯಾದ. ಆ ದಂಪತಿಗಳಿಗೆ ಹುಟ್ಟಿದ ಮೂರು ಜನ ಗಂಡುಮಕ್ಕಳಲ್ಲಿ ಟಾವೆರ್ನ್ಯೇ ನಡುಕಲವನು. ಹುಟ್ಟಿದ್ದು ೧೬೦೫ರಲ್ಲಿ. ತಂದೆ ಗ್ರೇಬ್ರಿಯಲ್ ಭೂಗೋಳಶಾಸ್ತ್ರದಲ್ಲಿ ಆಸಕ್ತಿ ಹೊಂದಿದ್ದುದರ ಜೊತೆಗೆ ಹೆಚ್ಚಾಗಿ ಸಂಚಾರ ಮಾಡುತ್ತಿದ್ದ ವ್ಯಾಪಾರಿಯೂ ಆಗಿದ್ದನು. ತಿಳಿದಂತಹ ಜನರು ಆತನೊಡನೆ ನಡೆಸು ತ್ತಿದ್ದ ಚರ್ಚೆಗಳನ್ನು ಕೇಳಿಯೂ ಮತ್ತು ಭೂಗೋಳಶಾಸ್ತ್ರದಲ್ಲಿದ್ದ ಆಸಕ್ತಿಯಿಂದಲೂ ಮಗನಾದ ಟಾವೆರ್ನ್ಯೇಗೆ ದೇಶ ವಿದೇಶಗಳನ್ನು ನೋಡುವ ಕುತೂಹಲ ಉಂಟಾಯಿತು. ಈ ಕುತೂಹಲದಿಂದಾಗಿ ಆತನು ತನ್ನ ೧೫ ಮತ್ತು ೨೨ ನೆಯ ವಯಸ್ಸಿನ ನಡುವಣ ಕಾಲದಲ್ಲಿ ಫ್ರಾನ್ಸ್, ಇಂಗ್ಲೆಡ್, ಹಾಲೆಂಡ್, ಜರ್ಮನಿ, ಸ್ವಿಟ್ಜರ್‌ಲೆಂಡ್, ಪೋಲೆಂಡ್, ಹಂಗೇರಿ ಮತ್ತು ಇಟಲಿ—ಈ ದೇಶಗಳ ಬಹು ಭಾಗಗಳನ್ನು ಸುತ್ತಿಬಂದನು. ಈ ಪ್ರವಾಸದ ವೇಳೆಯಲ್ಲಿ ಟಾವೆರ್ನ್ಯೇ ಎಷ್ಟು ಆವಶ್ಯಕವೋ ಅಷ್ಟರಮಟ್ಟಿಗೆ ಯೂರೋಪಿನ ಭಾಷೆಗಳನ್ನು ಕಲಿತುಕೊಳ್ಳಲು ಪ್ರಯತ್ನಮಾಡಿದನು.

ಇಷ್ಟರಿಂದಲೆ ಅವನಿಗೆ ತೃಪ್ತಿಯಾಗಲಿಲ್ಲ. ತನ್ನ ಅಲೆದಾಡುವ ಚಟವನ್ನು ತೀರಿಸಿ ಕೊಳುವುದಕ್ಕಾಗಿಯೂ ವ್ಯಾಪಾರಿಯಾಗಿ ಹಣ ಸಂಪಾದಿಸುವುದಕ್ಕಾಗಿಯೂ ಆತ ಪೂರ್ವ ದೇಶಗಳಾದ ತುರ್ಕಿ, ಪರ್ಷಿಯಾ, ಇಂಡಿಯಾ ಮುಂತಾದ ದೇಶಗಳಿಗೆ ಒಂದಲ್ಲ, ಆರು ಸಲ ಬಂದುಹೋದನು. ಆತ ಮುಖ್ಯವಾಗಿ ವಜ್ರವ್ಯಾಪಾರಿ. ವಜ್ರಗಳ ವ್ಯಾಪಾರ ದಲ್ಲಿ ತೊಡಗಿದ ಆತ ವಜ್ರಗಳನ್ನು ತೆಗೆಯುವ ಗಣಿಗಳಿಗೂ ಹೋಗಿ, ಅವುಗಳನ್ನು

ನೋಡಿಕೊಂಡು ಬಂದ. ಇಂಡಿಯಾ ದೇಶದ ವಜ್ರದ ಗಣಿಗಳನ್ನು ನೋಡಿ ಬಂದವರಲ್ಲಿ ತಾನೇ ಮೊದಲನೆಯವನೆಂದು ಆತ ಹೇಳಿಕೊಳ್ಳುತ್ತಾನೆ[1].

ಟಾವೆರ್‌ನ್ಯೇ ಏಷ್ಯಾದಲ್ಲಿ ಮಾಡಿದ ಆರು ಪ್ರವಾಸಗಳಲ್ಲಿ, ಮೊದಲ ಪ್ರವಾಸವನ್ನು ಕೈಕೊಂಡದ್ದು ೧೬೩೧ರಲ್ಲಿ. ಆ ವರ್ಷ ಆತ ಪರ್ಷಿಯಾಕ್ಕೆ ಬಂದು ಇಂಡಿಯಾಕ್ಕೆ ಬರದೆ ೧೬೩೩ರಲ್ಲಿ ತನ್ನ ಸ್ವದೇಶಕ್ಕೆ ಹಿಂದಿರುಗಿದನು. ಆ ಮೇಲೆ ಐದು ವರ್ಷಗಳ ಕಾಲ ಆತ ಏನು ಮಾಡುತ್ತಿದ್ದನೆಂಬ ಬಗ್ಗೆ ಮಾಹಿತಿಗಳು ದೊರೆತಿಲ್ಲ ಅಂತೂ ೧೬೩೮ರಲ್ಲಿ ಆತನ ಎರಡನೇ ಪ್ರವಾಸ ಆರಂಭವಾಯಿತು. ವರ್ತಕನಿಗೆ ತಕ್ಕ ಸಿದ್ಧತೆಗಳನ್ನು ಮಾಡಿಕೊಂಡು ಒಬ್ಬ ಕಲಾವಿದ, ಒಬ್ಬ ವೈದ್ಯ ಮತ್ತು ತನ್ನ ಒಬ್ಬ ಸಹೋದರ—ಇಷ್ಟು ಜನರೊಡನೆ ಪರ್ಷಿಯಾಕ್ಕೆ ಪ್ರಯಾಣ ಹೊರಟು, ಅಲ್ಲಿಂದ ೧೬೪೧ರಲ್ಲಿ ಮೊಟ್ಟಮೊದಲು ಇಂಡಿಯಾಕ್ಕೆ ಬಂದ, ಸೂರತ್, ಅಹಮದಾಬಾದ್, ಗೋವಾ, ಆಗ್ರಾ, ಗೋಲ್ಕೊಂಡ, ಡಾಕ್ಕಾ ಮುಂತಾದ ಸ್ಥಳಗಳನ್ನು ನೋಡಿಕೊಂಡು, ಕೊನೆಗೆ ಆಗ್ರಾದಲ್ಲಿ ರಾಜ್ಯಭಾರ ಮಾಡುತ್ತಿದ್ದ ಮೊಗಲ್ ಚಕ್ರವರ್ತಿ ಷಾಜಹಾನನ್ನು ಕಂಡು ಸ್ವದೇಶಕ್ಕೆ ಹಿಂದಿರುಗಿದನು.

ಈತನು ತನ್ನ ಮೂರನೆಯ ಪ್ರವಾಸವನ್ನು ೧೬೪೩ರಲ್ಲಿ ಕೈಕೊಂಡನು. ಆಗ ಸೂರತ್, ದೌಲತಾಬಾದ್, ಗೋಲ್ಕೊಂಡ, ರಾವುಲ್ಕೊಂಡ (ಈಗಿನ ರಾಮುಲಕೊಂಡ), ಗೋವಾ—ಈ ಸ್ಥಳಗಳನ್ನು ಸಂದರ್ಶಿಸಿ, ಮತ್ತೆ ಸೂರತ್ತಿಗೆ ಹಿಂದಿರುಗಿ, ಅಲ್ಲಿಂದ ಮತ್ತೆ ಗೋವಾಕ್ಕೆ ಹೊರಟು ಅಲ್ಲಿ ಹಡಗು ಹತ್ತಿ ಸಿಲೋನ್, ಸುಮಾತ್ರಾ, ಬಟಾವಿಯಾ[2] ದೇಶಗಳಿಗೆ ಸಮುದ್ರಯಾನಮಾಡಿ, ಅಲ್ಲೆಲ್ಲಾ ಸುತ್ತಾಡಿ ಪ್ಯಾರಿಸ್ ನಗರಕ್ಕೆ ಹಿಂದಿರುಗಿದನು. ಈ ಪ್ರವಾಸದಲ್ಲಿ ತಂದ ವಜ್ರ ವೈಡೂರ್ಯಗಳನ್ನು ಎರಡು ವರ್ಷಗಳ ಕಾಲ ಯುರೋಪಿನಲ್ಲಿ ಮಾರಾಟಮಾಡಿದ. ಅನಂತರ ಡಚ್ ಈಸ್ಟ್ ಇಂಡಿಯಾ ಕಂಪನಿಯಿಂದ ತನಗೆ ಬರಬೇಕಾದ ಬಾಕಿ ಸಾಕಿಗಳನ್ನು ವಸೂಲುಮಾಡಿಕೊಳ್ಳಲು ೧೬೫೧ ರಲ್ಲಿ ಇಂಡಿಯಾಕ್ಕೆ ಪ್ರವಾಸ ಬಂದ. ಇದು ಆತನ ನಾಲ್ಕನೆಯ ಪ್ರವಾಸ. ಮಸುಲಿಪಟ್ಟಣಕ್ಕೆ ಹಡಗಿನಲ್ಲಿ ಬಂದು ಅಲ್ಲಿಂದ ಗಂಡೀಕೋಟೆ ಮತ್ತು ಗೊಲ್ಕೊಂಡ ಮಾರ್ಗವಾಗಿ ಸೂರತ್ತಿಗೆ ಹೋದ.

---

[1]ಟಾವೆರ್‌ನ್ಯೇ ಹೀಗೆ ಹೇಳಿಕೊಂಡಿದ್ದರೂ, ಆತನಿಗಿಂತ ಮೊದಲು, ೧೫೭೦ಕ್ಕೆ ಮುಂಚೆ, ಸೀಜರ್ ಫ್ರೆಡರಿಕನೂ, ೧೬೨೨ಕ್ಕೆ ಮುಂಚೆ ವಿಲಿಯಂ ಮೆಥೋಲ್ಡನೂ ಮತ್ತಿತರರೂ ಈ ಗಣಿಗಳನ್ನು ನೋಡಿದ್ದರೆಂಬುದನ್ನು ಇಲ್ಲಿ ತಿಳಿಯಬೇಕು.

[2]ಬಟಾವಿಯಾ : ಈಗಿನ ಇಂಡೋನೇಷಿಯಾ ಗಣರಾಜ್ಯದ ರಾಜಧಾನಿ ಜಕರ್ತಾ ಪಟ್ಟಣಕ್ಕೆ ಇದ್ದ ಹಳೆಯ ಹೆಸರು. ಜಕರ್ತಾ ಜಾವಾದ್ವೀಪದ ವಾಯುವ್ಯ ತೀರದ ಪಟ್ಟಣ.

ಆಗ ಷೈಸ್ತಾಖಾನ್ ಗುಜರಾತಿನ ಸುಬೇದಾರನಾಗಿದ್ದ. ತನ್ನಲ್ಲಿದ್ದ ರತ್ನಗಳನ್ನು ಟಾವೆರ್‌ನ್ಯೇ ಆತನಿಗೆ ಮಾರಿ ಮತ್ತೊಮ್ಮೆ ಗೋಲ್ಕೊಂಡಾಕ್ಕೆ ಬಂದು ಅಲ್ಲಿ ಬಹುಶಃ ಇನ್ನಷ್ಟು ರತ್ನಗಳನ್ನು ಕೊಂಡುಕೊಂಡು, ೧೬೫೫ರಲ್ಲಿ ಪ್ಯಾರಿಸ್ಸಿಗೆ ಹಿಂದಿರುಗಿದನು.

೧೬೫೭ರಲ್ಲಿ ಟಾವೆರ್‌ನ್ಯೇ ಐದನೆ ಪ್ರವಾಸ ಕೈಗೊಂಡ. ಆತ ಮೊದಲು ಇಸ್ಪಹಾನ್[1] ತಲಪಿದನು. ಆಗ ಮೊಗಲ್ ಸಿಂಹಾಸನಕ್ಕೆ ತಂದೆ ಮಕ್ಕಳಲ್ಲಿಯೂ ಅಣ್ಣತಮ್ಮಂದಿರಲ್ಲಿಯೂ ಖೂನಿ ಪಿತೂರಿಗಳು ನಡೆಯುತ್ತಿದ್ದುವು. ಔರಂಗಜೇಬ ತನ್ನ ತಂದೆ ಷಾಜಹಾನನಿಂದ ಸಿಂಹಾಸನವನ್ನು ಕಸಿದುಕೊಳ್ಳುವ ಸನ್ನಾಹದಲ್ಲಿ ತೊಡಗಿದ್ದ. ಈ ಕಾರಣ ದೇಶದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ ಒದಗಿತ್ತು. ಅದು ತಹಬಂದಿಗೆ ಬರುವವರೆಗೆ ಟಾವೆರ್‌ನ್ಯೇ ಸ್ವಲ್ಪಕಾಲ ಇಸ್ಪಹಾನಿನಲ್ಲಿಯೇ ಇದ್ದು, ಅನಂತರ ಸೂರತ್ತಿಗೆ ಬಂದ. ಸೂರತ್ತಿನಿಂದ ಸೊಲ್ಲಾಪುರಕ್ಕೆ ಆಗಮಿಸಿದ. ಆಗ ಆ ಊರಿಗೆ ಷೈಸ್ತಾಖಾನ ಮುತ್ತಿಗೆ ಹಾಕಿದ್ದ. ಅವನನ್ನು ಟಾವೆರ್‌ನ್ಯೇ ಕಂಡು, ತಾನು ಯೂರೋಪಿನಿಂದ ತಂದಿದ್ದ ಸುಂದರವೂ ಅಪೂರ್ವವೂ ಆದ ವಸ್ತುಗಳನ್ನು ಮಾರಿ, ಹಣಮಾಡಿಕೊಂಡು, ೧೬೬೨ರಲ್ಲಿ ಪ್ಯಾರಿಸ್ಸಿಗೆ ಹಿಂದಿರುಗಿದನು.

ಆಗ ಟಾವೆರ್‌ನ್ಯೇನ ವಯಸ್ಸು ಐವತ್ತೈದು. ಚಿಕ್ಕ ವಯಸ್ಸಿನಲ್ಲಿಯೇ ಯೂರೋಪಿನಲ್ಲಿ ಪ್ರವಾಸಮಾಡಿದ್ದನ್ನು ಲೆಕ್ಕಹಾಕಿದರೆ ಆತನು ಆರು ಸಲ ದೇಶವಿದೇಶಗಳಲ್ಲಿ ಸುತ್ತಾಡಿದಂತಾಯಿತು. ಪ್ರವಾಸದ ಕಷ್ಟಸುಖಗಳ ಜೊತೆಗೆ ಬೇಕಾದಷ್ಟು ಐಶ್ವರ್ಯವನ್ನೂ ಸಂಪಾದಿಸಿದ್ದ. ಈಗ ಗೃಹಸ್ಥನಾಗಿ ಸುಖವಾಗಿ ಕಾಲಕಳೆಯಬೇಕೆಂಬ ಆಸೆಯಾಯಿತು. ಆತನಿಗಿನ್ನೂ ಮದುವೆಯಾಗಿರಲಿಲ್ಲ. ಈಗ ಮದುವೆಯ ಆಲೋಚನೆ ಬಂದು, ಒಬ್ಬ ರತ್ನಪಡಿ ವ್ಯಾಪಾರಿಯ ಮಗಳು ಮೇಡಿಲೀನ್ ಗುಯ್ಸೀ (Medeline Goisse) ಎಂಬುವಳನ್ನು ಮದುವೆಯಾದ. ಆದರೆ ಆತನಿಗೆ ಹೆಂಡತಿಗಿಂತ ಪ್ರವಾಸವೇ ಹೆಚ್ಚು ಹಿಡಿಸಿದಂತೆ ಕಾಣುತ್ತದೆ. ಒಂದು ಕಡೆ ನಿಲ್ಲುವ ಸ್ವಭಾವದವನಲ್ಲ ಆತ. ಈ ಕಾರಣ ಆತ ಪೂರ್ವದೇಶಗಳಲ್ಲಿ ತನಗೆ ಬರಬೇಕಾದ ಬಾಕಿ ವಸೂಲಿಮಾಡಿಕೊಂಡು ಬರಲು ಹೊರಟ. ಹೀಗೆ ಆರಂಭವಾಯಿತು ಅವನ ಆರನೆಯ ಪ್ರವಾಸ ! ಬರಿಗೈಯಲ್ಲಿ ಹೋಗುವ ಬದಲು ವಜ್ರ ವೈಡೂರ್ಯಗಳನ್ನೂ ಆಭರಣಗಳನ್ನೂ ತೆಗೆದುಕೊಂಡ. ಇವೆಲ್ಲವುಗಳ ಬೆಲೆ೪೦,೦೦೦ ಪೌಂಡುಗಳಷ್ಟು ಆಗುತ್ತಿತ್ತು. ಮದುವೆಯಾದ ಕೇವಲ ಒಂದು ವರ್ಷದಲ್ಲಿಯೇ, ಅಂದರೆ ೧೬೬೩ರಲ್ಲಿ, ಆತ ತನ್ನ ಆರನೆಯ ಪ್ರವಾಸ ಆರಂಭಿಸಿದ. ತನ್ನೊಡನೆ ಚಿಕ್ಕ ವಯಸ್ಸಿನ ಒಬ್ಬ ಸೋದರಳಿಯನನ್ನೂ, ಬೇರೆ ಬೇರೆ ವೃತ್ತಿಯ ಮೂವರು ಸೇವಕರನ್ನೂ, ಒಬ್ಬ ವೈದ್ಯನನ್ನೂ ಕರೆದುಕೊಂಡ. ಪ್ರವಾಸದ ದಾರಿಯಲ್ಲಿ ಪರ್ಷಿಯಾದ ದೊರೆ

---

[1]ಇಸ್ಪಹಾನ್ : ಇರಾನಿನ ಒಂದು ನಗರ. 16 ನೇ ಶತಮಾನದಿಂದ 18ನೇ ಶತಮಾನದವರೆಗೆ ಪರ್ಷಿಯಾದ ರಾಜಧಾನಿ.(ಈಗ ಪರ್ಷಿಯಾವನ್ನು ಇರಾನ್ ರಾಜ್ಯವೆಂದು ಕರೆಯಲಾಗುತ್ತಿದೆ)

ಎರಡನೇ ಷಾ ಅಬ್ಬಾಸನಿಗೆ ಬಹು ಬೆಲೆಬಾಳುವ ಆಭರಣಗಳನ್ನು ಮಾರಿ, ಅವನಿಂದ ಸೂಕ್ತ ಸಂಭಾವನೆ ಪಡೆದು, ೧೬೬೫ರ ಮೇ ತಿಂಗಳಿನಲ್ಲಿ ಸೂರತ್ತಿಗೆ ಬಂದ. ಸೂರತ್ತಿನ ಸುಬೇದಾರ (ಗೌರ್‍ನರ್) ಈತನು ತಂದ ಆಭರಣಗಳನ್ನು ಮೊದಲು ಔರಂಗಜೇಬನು ನೋಡಲು ಇಚ್ಛಿಸುತ್ತಾನೆಂದು ತಿಳಿಸಿದ. ಔರಂಗಜೇಬ ಆಗ ಜಹಾನಾಬಾದಿನಲ್ಲಿದ್ದ. ಟಾವೆರ್‌ನ್ಯೇ ಅಲ್ಲಿಗೆ ಹೊರಟ. ಬುರ್ಹಾನ್‌ಪುರ, ಸಿರೋಂಜ್, ಗ್ವಾಲಿಯರ್ ಮತ್ತು ಆಗ್ರಾಗಳ ಮಾರ್ಗವಾಗಿ ಅಲ್ಲಿಗೆ ಹೋದ. ಅಲ್ಲಿ ಮೊಗಲ್ ಚಕ್ರವರ್ತಿಗೆ ತನ್ನ ಮುತ್ತು ರತ್ನಗಳನ್ನೂ ಆಭರಣಗಳನ್ನೂ ಮಾರಿ, ಎರಡು ತಿಂಗಳ ಕಾಲ ತಂಗಿ, ವರ್ಷಕ್ಕೊಂದು ಸಲ ನಡೆಯುವ 'ನವರೋಜ್' ಹಬ್ಬವನ್ನು ನೋಡಿಕೊಂಡು, ಚಕ್ರವರ್ತಿಯ ಬಳಿ ಇದ್ದ ಅಮೂಲ್ಯವಾದ ಕೊಹಿನೂರ್ ವಜ್ರವನ್ನು ಕಣ್ಣಾರೆ ಕಂಡು, ಬಂಗಾಳಕ್ಕೆ ಹೊರಟ. ಅಲ್ಲಿದ್ದ ಷೈಸ್ತಾಖಾನನಿಗೂ ಕೆಲವು ಆಭರಣಗಳನ್ನು ಮಾರಿ, ಆಗ್ರಾಕ್ಕೆ ಹಿಂದಿರುಗಿ ಬಂದು, ಅಲ್ಲಿಂದ ಸೂರತ್ತಿಗೆ ಹೋದನು. ೧೬೬೮ರ ಆರಂಭದಲ್ಲಿ ಸೂರತ್ತಿನಿಂದ ಹೊರಟು, ಮಾರನೆಯ ವರ್ಷ ಪ್ಯಾರಿಸ್ಸಿಗೆ ಹಿಂದಿರುಗಿದನು.

ತನ್ನ ವ್ಯಾಪಾರಸಾಪಾರ, ದುಡ್ಡು ದುಗ್ಗಾಣಿ ಲಾಭ ನಷ್ಟಗಳ ಬಗ್ಗೆ ಸುದೀರ್ಘವಾಗಿ ಹೇಳಿಕೊಳ್ಳುವ ಟಾವೆರ್‌ನ್ಯೇ ತನ್ನ ವೈಯುಕ್ತಿಕ ವಿಚಾರವಾಗಿ ಏನನ್ನೂ ಹೇಳುವುದಿಲ್ಲ. ತನಗೆ ಮಕ್ಕಳಾದುವೇ ಇಲ್ಲವೇ, ಕೈಹಿಡಿದ ಹೆಂಡತಿಯ ಗತಿಯೇನಾಯಿತು– ಇವನ್ನೆಲ್ಲ ಹೇಳಿಕೊಳ್ಳುವುದೇ ಇಲ್ಲ. ಬಹುಶಃ, ಇವು ಅವನಿಗೆ ಅಷ್ಟು ಮುಖ್ಯವಾಗಿ ಕಂಡಿರಲಾರವು. ಹೀಗಾಗಿ ಅವನು ಪ್ರವಾಸವನ್ನು ನಿಲ್ಲಿಸಿಬಿಟ್ಟಮೇಲೆ ಅವನ ವಿಚಾರವಾಗಿ ಹೆಚ್ಚಿಗೆ ಯಾವ ಮಾಹಿತಿಗಳೂ ಅವನ ಬರಹದಿಂದ ತಿಳಿಯುವುದೇ ಇಲ್ಲ. ಹಲವಾರು ಮೂಲಗಳಿಂದ ನಾವು ಅವನ ಕೊನೆಯ ದಿನಗಳನ್ನು ತಿಳಿದುಕೊಳ್ಳಬೇಕಾಗಿದೆ. ಅವನ ಅಂತ್ಯ ಕಾಲದ ಹದಿನಾರು ವರ್ಷಗಳ ಜೀವನದ ಚರಿತ್ರೆ ಹೀಗಿದೆ :

ಆರೇಳು ಪ್ರವಾಸಗಳನ್ನು ಮುಗಿಸಿ ಪ್ಯಾರಿಸ್ಸಿಗೆ ಹಿಂದಿರುಗಿದ ಟಾವೆರ್‌ನ್ಯೇ ಫ್ರಾನ್ಸ್‌ರಾಜನ ಅಪೇಕ್ಷೆಯಂತೆ ಆತನನ್ನು ನೋಡಲು ಹೋದ. ರಾಜನನ್ನು ಸುಮ್ಮನೆ ನೋಡದೆ ತಾನು ಇಂಡಿಯಾದಿಂದ ತೆಗೆದುಕೊಂಡುಹೋಗಿದ್ದ ಅಪಾರ ಮುತ್ತು ರತ್ನಗಳನ್ನು ದೊರೆಯ ತಲೆಗೆ ಕಟ್ಟಿ, ಅವಕ್ಕೆ ಸೂಕ್ತ ಬೆಲೆಯನ್ನು ಪಡೆದ. ಅಲ್ಲದೆ, ದೊರೆಯಿಂದ ಪ್ರಶಸ್ತಿ ಪತ್ರವನ್ನೂ ದೊಡ್ಡ ಬಿರುದನ್ನೂ ಹೊಂದಿದನು. ರಾಜಮನ್ನಣೆಯನ್ನು ಪಡೆದದ್ದೇ ತಡ, ಟಾವೆರ್‌ನ್ಯೇ ಪ್ರವಾಸಿಗನನ್ನು ಎಲ್ಲರೂ ಕೊಂಡಾಡಿದ್ದೇ ಕೊಂಡಾಡಿದ್ದು.

ಇಷ್ಟೆಲ್ಲ ಹಣ ಕೀರ್ತಿ ಮುಂತಾದುವುಗಳನ್ನು ಸಂಪಾದಿಸಿದ ಆತ ೧೬೭೦ರಲ್ಲಿ ಜಿನೀವಾದ ಬಳಿ ಆಬೋಗ್ನೆ ಎಂಬ ಜಹಗೀರಿಯನ್ನು ಕೊಂಡು, ಅಲ್ಲಿ ಆರಾಮವಾಗಿ ಕುಳಿತು ಪ್ರವಾಸಕಥನವನ್ನು ಬರೆಯಲಾರಂಭಿಸಿದ. ಆತನ ಬಳಿ ಅವನು ಪ್ರವಾಸ ಕಾಲದಲ್ಲಿ ಆಗಾಗ್ಗೆ ಬರೆದುಕೊಂಡ ಹೇರಳವಾದ ಟಿಪ್ಪಣಿಗಳಿದ್ದಿರಬೇಕು. ಆ ಟಿಪ್ಪಣಿಗಳ

ಆಧಾರದ ಮೇಲೆ ಅವನು "ಆರು ಪ್ರವಾಸಯಾತ್ರೆಗಳು" ಎಂಬ ಬೃಹತ್ ಗ್ರಂಥವನ್ನು ಬರೆದು ಪ್ರಕಟಿಸಿದ. ಅದನ್ನು ಓದಿ ಹೊರಗಿನ ಪ್ರಪಂಚವನ್ನೇ ಅರಿಯದ ಆಗಿನ ಜನರಲ್ಲಿ ಕುತೂಹಲ ಕೆರಳಿತು. ಹೆಚ್ಚು ಹೆಚ್ಚು ಜನ ಅವನ ಪ್ರವಾಸಕಥನವನ್ನು ಓದಲಾರಂಭಿಸಿದರು. ಈ ಕಾರಣವಾಗಿ ಆತನ ಗ್ರಂಥ ಹಲವಾರು ಸಲ ಅಚ್ಚಾಗಬೇಕಾಯಿತು. ಹಲವರು ಹೊಗಳಿದರು ; ಮತ್ತೆ ಕೆಲವರು ಇವನ ಸಮಕಾಲೀನ ಪ್ರವಾಸಿಗಳಾದ ತೇವೆನೋ (Thevenot), ಬೆರ್ನ್ಯೇ (Bernier), ಷಾರ್‌ಡ್ಞಾ (Chardin)—ಈ ವಿದ್ಯಾವಂತ ಪ್ರವಾಸಿಗರ ಗ್ರಂಥಗಳೊಡನೆ ಅಷ್ಟೇನೂ ವಿದ್ಯಾವಂತನಲ್ಲದ ಇವನ ಗ್ರಂಥವನ್ನು ಹೋಲಿಸಿ, ಇವನನ್ನು ಅಪಹಾಸ್ಯ ಮಾಡಲು ಪ್ರಯತ್ನಪಟ್ಟರು. ಟಾವೆರ್‌ನ್ಯೇ ತಾನು ಸ್ವತಃ ಕಂಡದ್ದನ್ನು ಮಾತ್ರ ತನ್ನದೇ ಆದ ಸರಳ ಭಾಷೆಯಲ್ಲಿ ಹೇಳಿದ. ಪ್ರಸಿದ್ಧ ತತ್ತ್ವಜ್ಞಾನಿ ವೋಲ್ತೈರ್[1] ಎಂಬಾತನು ಟಾವೆರ್‌ನ್ಯೇನ ಗ್ರಂಥದ ಬಗ್ಗೆ ತುಚ್ಛವಾಗಿ ಬರೆದ. ಆದರೂ ಜನರು, ಟಾವೆರ್‌ನ್ಯೇನ ಪ್ರವಾಸಗಳ ಬಗ್ಗೆ ತಾಳಿದ್ದ ಒಲವನ್ನು ಬದಲಿಸಲು ಸಾಧ್ಯವಾಗಲಿಲ್ಲ. ಯಾರು ಏನೇ ಹೇಳಿದರೂ, ಟಾವೆರ್‌ನ್ಯೇ ಮಾತ್ರ ತನ್ನ ತಲೆ ಕೆಡಿಸಿಕೊಳ್ಳದೆ ಎಲ್ಲರ ಬಗ್ಗೆಯೂ ಗೌರವವಾಗಿಯೇ ವರ್ತಿಸಿದನೆಂದು ಗೊತ್ತಾಗುತ್ತದೆ.

ವ್ಯಾಪಾರಿ ಯಾವಾಗಲೂ ವ್ಯಾಪಾರಿಯೇ. ಅವನಿಗೆ ಸುಮ್ಮನೆ ಕುಳಿತಿರಲು ಆಗುವುದಿಲ್ಲ. ಪುಸ್ತಕ ಬರೆದು ಪ್ರಕಟಿಸಿಕೊಂಡು ಸುಮ್ಮನಿರುವ ಬದಲು ಟಾವೆರ್‌ನ್ಯೇ ಮತ್ತೆ ತನ್ನ ವ್ಯಾಪಾರವನ್ನು ಆರಂಭಿಸಿದನೆಂದು ಕಂಡುಬರುತ್ತದೆ. ಆತ ೧೬೭೪ರಿಂದ ೧೬೮೮ರವರೆಗೆ ವ್ಯಾಪಾರದಲ್ಲಿ ನಿರತನಾಗಿದ್ದನು. ಪ್ಯಾರಿಸ್ಸಿನಿಂದ ಬರ್ಲಿನ್ ನಗರಕ್ಕೆ ಹೋದ. ಅದರ ಉದ್ದೇಶವೇನೆಂದರೆ, ಫ್ರೆಡರಿಕ್ ವಿಲಿಯಂ[2] ಎಂಬ ಅರಸನನ್ನು ಕಂಡು, ಪೂರ್ವದೇಶಗಳಲ್ಲಿ ವಸಾಹತುಗಳನ್ನೂ ವ್ಯಾಪಾರೋದ್ಯಮಗಳನ್ನೂ ಸ್ಥಾಪಿಸುವ ಬಗ್ಗೆ ಅವನಿಗೆ ಸಲಹೆಗಳನ್ನು ನೀಡುವುದೇ ಆಗಿತ್ತು. ಫ್ರೆಡರಿಕ್ ವಿಲಿಯಂ ತನ್ನ ಪ್ರತಿನಿಧಿಯಾಗಿ ಟಾವೆರ್‌ನ್ಯೇನನ್ನು ಇಂಡಿಯಾದೇಶಕ್ಕೆ ಕಳುಹಿಸಬೇಕೆಂಬುದಾಗಿ ಮನಸ್ಸುಮಾಡಿದ್ದನಂತೆ. ಆದರೆ ಯಾವ ಕಾರಣವೊ ಏನೊ ಅವನ ಇಚ್ಛೆ ನೆರವೇರಲಿಲ್ಲ. ಟಾವೆರ್‌ನ್ಯೇ ವಿಫಲನಾಗಿ ಪ್ಯಾರಿಸ್ಸಿಗೆ ಹಿಂದಿರುಗಿದನು.

ಯಾರಿಗಾದರೂ ಸಾಕೆನಿಸುವ ನಿತ್ಯಪ್ರವಾಸ ಟಾವೆರ್‌ನ್ಯೇಗೆ ಸಾಕುಸಾಕೆನಿಸಲಿಲ್ಲ. ವ್ಯಾಪಾರಿಯ ಹುಮ್ಮಸ್ಸು ಅವನನ್ನು 'ಊರು ಬಿಡು' ಎಂದು ಪ್ರಚೋದಿಸುತ್ತಿತ್ತು.

---

[1] ವೋಲ್ತೇರ್ (Voltaire) : ಫ್ರಾನ್ಸ್‌ವಾಸ್ ಮ್ಯಾರಿ ಎರೋಟ್ (Francois Marie Aroueted) ಎಂಬ ಫ್ರೆಂಚ್ ದಾರ್ಶನಿಕನ ಕಾವ್ಯನಾಮ. ಈತನ ಕಾಲ 1694–1778. ಈತ ಚರಿತ್ರಕಾರ, ನಾಟಕಕಾರ ಹಾಗೂ ಪ್ರಬಂಧಕಾರನಾಗಿದ್ದ.

[2] ಫ್ರೆಡರಿಕ್ ವಿಲಿಯಂ (1620–1698) : ಪ್ರಷ್ಯಾ ದೇಶದ ದೊರೆ.



ಟಾವರ್ನ್ಯೇ—ಪರ್ಷಿಯಾ ಚಕ್ರವರ್ತಿ ಕೊಟ್ಟ ಉಡುಪಿನಲ್ಲಿ

ಅವನಿಗೀಗ ವಯಸ್ಸು ೮೦ ! ಆದರೇನು, ಆ ಮನುಷ್ಯನ ಉತ್ಸಾಹ ಕಡಿಮೆಯಾಗಿರಲಿಲ್ಲ. ಮತ್ತೆ ಹೊರಟ. ಇದಕ್ಕೆ ಮುಂಚೆ ಆತ ತನ್ನ ಸೋದರಳಿಯ ಪಿಯರ್ ಟಾವೆರ್‌ನ್ಯೇ ಎಂಬುವನೊಡನೆ ೨,೨೨,೦೦೦ ಫ್ರಾಂಕ್ ಬೆಲೆಯ ಸರಕುಗಳನ್ನು ಹಡಗೊಂದರಲ್ಲಿ ಇಂಡಿಯಾಕ್ಕೆ ಕಳುಹಿಸಿದ್ದನು. ಆದರೆ ಆ ಸೋದರಳಿಯ ಪರ್ಷಿಯಾಕ್ಕೆ ಹೋದವನು ಅಲ್ಲಿಯೇ ನಿಂತುಬಿಟ್ಟ. ಸರಕುಗಳಿಂದ ಬಂದ ಲಾಭವನ್ನೆಲ್ಲ ಆತನೇ ಇಟ್ಟುಕೊಂಡು, ಮಾವ ಟಾವೆರ್‌ನ್ಯೇಗೆ ನಾಮಹಚ್ಚಿದ. ಆದರೆ ಲಾಭನಷ್ಟೇ ಅಲ್ಲ, ನಷ್ಟವೂ ವರ್ತಕ ನನ್ನು ಹೊಸ ಉದ್ಯಮಕ್ಕೆ ಉತ್ತೇಜಿಸುತ್ತದೆ. ಈ ಪ್ರಚೋದನೆಯಿಂದ ಟಾವೆರ್‌ನ್ಯೇ ೧೬೮೭ರಲ್ಲಿ ಪೂರ್ವದೇಶಗಳಿಗೆ ತನ್ನ ಏಳನೆಯ ಪ್ರವಾಸವನ್ನು ಕೈಕೊಂಡನೆಂದು ಹೇಳು ತ್ತಾರೆ. ಆದರೆ ಸ್ವಿಟ್ಜರ್‌ಲೆಂಡಿಗೆ ಹೋದವನು ಆ ತರುವಾಯ ಮುಂದೆಲ್ಲಿ ಹೋದ ಎಂದು ಗೊತ್ತಾಗುವುದಿಲ್ಲ. ೧೬೮೭-೮೮ರಲ್ಲಿ ಕೋಪನ್‌ಹೆಗನ್‌ನಲ್ಲಿದ್ದನೆಂದು ಗೊತ್ತಾ ಗುತ್ತದೆ. ಎರಡು ದಶಕಗಳ ತರುವಾಯ ರಷ್ಯಾದ ಎಂ. ಟಿ. ಟೋಕ್‌ಮಕೋಫ್ (M. T. Tokmakof)ಎಂಬುವನು ಮಾಸ್ಕೋ ಬಳಿ ಒಂದು ಹಳೆಯ ಪ್ರಾಟೆಸ್ಟೆಂಟ್ ಸ್ಮಶಾನದಲ್ಲಿ ಅಡ್ಡಾಡುತ್ತಿದ್ದಾಗ ಅಲ್ಲಿ ತಾನು ಟಾವೆರ್‌ನ್ಯೇನ ಸಮಾಧಿಯನ್ನು ಕಂಡೆನೆಂತಲೂ, ಸಮಾಧಿಯ ಸ್ಮಾರಕಶಿಲೆಯ ಮೇಲೆ ಟಾವೆರ್‌ನ್ಯೇನ ಹೆಸರು ಮತ್ತು ಅರ್ಧ ಅಳಿಸಿದ "೧೬...." ಎಂಬ ಇಸವಿಯೂ ಇರುವುದನ್ನು ನೋಡಿದೆನೆಂತಲೂ ೧೮೮೫ ರಲ್ಲಿ *La Bibliographic* ಎಂಬ ಮಾಸಪತ್ರಿಕೆಯಲ್ಲಿ ತಿಳಿಸಿದ್ದಾನಂತೆ. ಕ್ರಿ. ಶ. ೧೬೮೯ರ ಆರಂಭದಲ್ಲಿ ಟಾವೆರ್‌ನ್ಯೇ ಸ್ವೀಡನ್ ರಾಜನಿಂದ ಅನುಮತಿಪಡೆದು ರಷ್ಯಾಕ್ಕೆ ಹೋಗಿದ್ದನೆಂದು ಅದೇ ಟೋಕ್‌ಮಕೋಫ್ ಹೇಳುತ್ತಾನೆ. ಒಟ್ಟಿನಲ್ಲಿ, ಪ್ಯಾರಿಸ್ಸಿನ ನಾಗರಿಕ ಟಾವೆರ್‌ನ್ಯೇ ಸುಮಾರು ೯೦ ವರ್ಷಗಳು ಬಾಳಿ ಬದುಕಿ, ಹತ್ತಾರು ದೇಶ ಗಳನ್ನು ಸುತ್ತಿ, ಕೊನೆಗೆ ರಷ್ಯಾದಲ್ಲಿ ಮಣ್ಣಾಗಿಬಿಟ್ಟನೆಂಬುದು ಸಹಜ. ನಿಜವಾಗಿಯೂ ಆತ ಅಲೆಮಾರಿಗಳ ಅರಸು (Prince of Ramblers).

ಟಾವೆರ್‌ನ್ಯೇ ತಾನು ಬರೆದ ಪ್ರವಾಸ ಕಥನವನ್ನು ಫ್ರಾನ್ಸ್ ದೊರೆಗೆ ಅರ್ಪಿಸು ತ್ತಾನೆ. ಅದರಲ್ಲಿ ಆತ ಹೀಗೆ ಹೇಳುತ್ತಾನೆ :

"ಮಹಾಸ್ವಾಮಿಯವರ ಪ್ರಪಂಚಮಾನ್ಯವಾದ ಹೆಸರಿನ ಬಲದಿಂದ ನಾನು ಭೂಮಿಯ ಮೇಲೆ ಅರವತ್ತು ಸಾವಿರ ಹರಿದಾರಿ (Leauge =ಹರಿದಾರಿ ಸುಮಾರು ಮೂರು ಮೈಲಿ) ಗಳಿಗಿಂತಲೂ ಹೆಚ್ಚು ದೂರ ಯಾವ ತೊಂದರೆ ಅಪಾಯಗಳೂ ಇಲ್ಲದೇ ಪ್ರವಾಸಮಾಡಿದೆ. ಆರು ಸಲ ತುರ್ಕಿ, ಪರ್ಷಿಯಾ ಮತ್ತು ಇಂಡಿಯಾದ ಬಹು ಭಾಗ ಗಳಿಗೆ ಹೋಗಿಬಂದಿದ್ದೇನೆ. ವಜ್ರದ ಗಣಿಗಳನ್ನು ನೋಡಿ ಬಂದವರಲ್ಲಿ ನಾನು ಮೊದಲಿ ಗನು. ನೋಡಿದ್ದಷ್ಟೇ ಅಲ್ಲ, ಬಹು ಬೆಲೆಯಾದ ವಜ್ರಗಳನ್ನು ತಂದು ತಮ್ಮ ಸಿಂಹಾ ಸನಕ್ಕೆ ಅರ್ಪಿಸಿದ್ದೇನೆ. ಆದರೆ ಆ ವಜ್ರಗಳಿಗಿಂತಲೂ ಹೆಚ್ಚು ಬೆಲೆಯಾದದ್ದು ನಾನು

ಕಂಡ ದೇಶಗಳ ಜನರ ನಡೆನುಡಿಗಳನ್ನು ಕುರಿತು ಬರೆದಿರುವ ಈ ಪ್ರವಾಸಕಥನ. ಇದನ್ನು ಓದಿ ಮಹಾಸ್ವಾಮಿಯವರು ಆನಂದಿಸಬೇಕು.

"ನನ್ನೀ ಕಥನದಲ್ಲಿ ಭಾಷೆಯ ನಯನೀತಿಗಳಿಲ್ಲ. ಆದರೂ ಹೇಳಿರುವಂತಹ ವೈಚಿತ್ರ್ಯಪೂರ್ಣವೂ ಪ್ರಾಮುಖ್ಯವೂ ಆದ ಸಂಗತಿಗಳು ಮತ್ತು ಎಲ್ಲಕ್ಕೂ ಮಿಗಿಲಾಗಿ ನನ್ನ ಕಥನದ ವಾಸ್ತವಿಕತೆ ಹಾಗೂ ಪ್ರಾಮಾಣಿಕತನ ಈ ಪ್ರವಾಸ ಗ್ರಂಥವನ್ನು ಓದಲು ಅರ್ಹವಾಗುವಂತೆ ಮಾಡುವುದರಲ್ಲಿ ಸಂದೇಹವಿಲ್ಲ. ಅದು ಗಣ್ಯರಿಂದ ಗೌರವಿಸಲ್ಪಡಲು ಸಹ ಅರ್ಹವಾಗಿದೆಯೆಂದು ನನ್ನ ಭಾವನೆ."

ಟಾವೆರ್‌ನ್ಯೇ ಫ್ರೆಂಚ್ ಭಾಷೆಯಲ್ಲಿ ತನ್ನ ಪ್ರವಾಸಗಳನ್ನು ಬರೆದ ಮೇಲೆ ಅದು ಮೊಟ್ಟಮೊದಲಿಗೆ ಇಂಗ್ಲಿಷ್ ಭಾಷೆಗೆ ಅನುವಾದವಾದದ್ದು ೧೬೭೭ರಲ್ಲಿ. ಈ ಅನುವಾದ ಜಾನ್ ಫಿಲಿಪ್ಸ್ ಎಂಬುವರಿಂದ ಆಯಿತು. ಆದರೆ ಅದು ಹಲವಾರು ಕಾರಣಗಳಿಂದ ಅಪೂರ್ಣವೂ ಅಸಮರ್ಪಕವೂ ಆಗಿತ್ತು. ಸರಿಯಾದ ಭಾಷಾಂತರದ ಆವಶ್ಯಕತೆಯನ್ನು ಮನಗಂಡು, ಆ ಕೆಲಸವನ್ನು ನಿರ್ವಹಿಸಿದವರು ವಿ. ಬಾಲ್ (V. Ball) ಎಂಬುವರು. ಅವರು ಡಬ್ಲಿನ್ ವಿಜ್ಞಾನ ಹಾಗೂ ಕಲಾ ವಸ್ತುಸಂಗ್ರಹಾಲಯದಲ್ಲಿ ಡೈರೆಕ್ಟರಾಗಿದ್ದುದಲ್ಲದೆ, ಇಂಡಿಯಾ ದೇಶದಲ್ಲಿ ಖನಿಜಗಳಿಗೆ ಸಂಬಂಧಪಟ್ಟಂತೆ ಒಂದು ಅವಲೋಕನ ನಡೆಸುವುದಕ್ಕಾಗಿ ವಿಸ್ತಾರವಾದ ಪ್ರವಾಸ ಕೈಗೊಂಡಿದ್ದರು. ಆ ಪ್ರವಾಸದ ವೇಳೆಯಲ್ಲಿ ಅವರಿಗೆ ಟಾವೆರ್‌ನ್ಯೇ ಹೇಳಿದ ಗಣಿಗಳನ್ನು ಸ್ವತಃ ನೋಡುವ ಅವಕಾಶ ಒದಗಿತು. ಅಲ್ಲದೆ, ಇನ್ನೂ ಎಷ್ಟೋ ವಿಚಾರಗಳನ್ನು ತಿಳಿದುಕೊಳ್ಳುವ ಸಂದರ್ಭಗಳು ಒದಗಿದುವು. ಕರ್ನಲ್ ಯೂಲ್ ಅವರು (Col. Yule)[1] ಮಾಡಿದ ಸಲಹೆಯಂತೆ ಟಾವೆರ್‌ನ್ಯೇನ ಪ್ರವಾಸಕಥನವನ್ನು—ಇಂಡಿಯಾಕ್ಕೆ ಸಂಬಂಧಿಸಿದುದನ್ನು—ಇಂಗ್ಲಿಷಿಗೆ ಅನುವಾದ ಮಾಡುವ ಕೆಲಸವನ್ನು ಅವರು ೧೮೮೬ರಲ್ಲಿ ಆರಂಭಿಸಿ, ೧೮೮೯ರಲ್ಲಿ ಮುಗಿಸಿದರು.

ಟಾವೆರ್‌ನ್ಯೇ ತನ್ನ ಗ್ರಂಥಕ್ಕೆ ಮುನ್ನುಡಿಯೋ ಎಂಬಂತೆ ತನ್ನ ಏಷ್ಯಾ ಪ್ರವಾಸಕ್ಕೆ ಮುಂಚೆ ಯುರೋಪಿನಲ್ಲಿ ಮಾಡಿದ ಪ್ರವಾಸದ ಸೂಕ್ಷ್ಮ ಪರಿಚಯ ಮಾಡಿಕೊಡುತ್ತಾನೆ. ಆ ಸಂದರ್ಭದಲ್ಲಿ ತನ್ನ ಪ್ರವಾಸಗಳನ್ನು ಕುರಿತು ನಾಲ್ಕು ಮಾತು ಹೇಳುತ್ತಾನೆ. ಅವು ಈ ರೀತಿ ಇವೆ:

"ಜ್ಞಾನಾರ್ಜನೆಯ ಸಂಬಂಧದಲ್ಲಿ ಮೊಟ್ಟ ಮೊದಲ ವಿದ್ಯಾಭ್ಯಾಸವು ಪುನರ್ಜನ್ಮಕ್ಕೆ ಸಮವೆಂದು ಭಾವಿಸುವುದಾದರೆ ಪ್ರವಾಸದ ಆಸೆಗಾಗಿಯೆ ನಾನು ಹುಟ್ಟಿದೆ ಎಂದು ಹೇಳಲಿಚ್ಛಿಸುತ್ತೇನೆ. ನಾನು ಇನ್ನೊಂದು ಪ್ರವಾಸವನ್ನು ಗಮನದಲ್ಲಿಟ್ಟು

---

[1] ಕರ್ನಲ್ ಯೂಲ್ (Col Yule): ಈತ ಮಾರ್ಕೊ ಪೋಲೊ ಹೋದ ಸ್ಥಳಗಳನ್ನೆಲ್ಲಾ ಭೇಟಿಮಾಡಿ, ಮಾರ್ಕೊ ಪೋಲನ ಪ್ರವಾಸಗ್ರಂಥಕ್ಕೆ ವಿಸ್ತಾರವಾದ ಟೀಕೆ ಬರೆದಿದ್ದಾನೆ.

ಕೊಂಡು, ಪರ್ಷಿಯಾ[1] ದೇಶವನ್ನು ನೋಡಬೇಕೆಂಬ ಉದ್ದೇಶವಿದ್ದ, ಅಲ್ಲಿಗೆ ಹೋಗುವ ಕಾರವಾನಿಗಾಗಿ ಕಾಯುತ್ತಾ, ಕಾನ್‌ಸ್ಟಾಂಟಿನೋಪಲ್[2]ಪಟ್ಟಣದಲ್ಲಿ ಹನ್ನೊಂದು ತಿಂಗಳು ನಿಂತೆ. ಇಷ್ಟು ಕಾಲ ಕಾದಮೇಲೆ ಸಕಲ ರೀತಿಯಲ್ಲೂ ಸಜ್ಜಾದ ಭಾರಿ ಕಾರವಾನೊಂದು ಇಸ್ಫಹಾನಿಗೆ ಹೊರಟಿತು. ಅದನ್ನು ಸೇರಿಕೊಂಡು ನಾನು ನನ್ನ ಪ್ರಥಮ ಏಷ್ಯಾ ಪ್ರವಾಸವನ್ನು ಆರಂಭಿಸಿದೆ. ಅನಂತರ ಮತ್ತೆ ಐದು ಪ್ರವಾಸಗಳನ್ನು ಕೈಗೊಂಡೆ. ಕೊನೆಯ ಮೂರು ಪ್ರವಾಸಗಳಲ್ಲಿ ಗಂಗಾ ನದಿ ಮತ್ತು ಜಾವಾ ದ್ವೀಪಗಳ ಆಚೆಗೂ ಹೋಗಿಬಂದೆ.

"ನಲವತ್ತು ವರ್ಷಗಳ ಈ ದೀರ್ಘ ಪ್ರವಾಸದಲ್ಲಿ ಭೂಮಿಯ ಮೇಲೆ ೬೦,೦೦೦ ಕ್ಕೂ ಹೆಚ್ಚು ಹರಿದಾರಿಗಳಷ್ಟು ದೂರ ತಿರುಗಾಡಿದ್ದೇನೆ. ಒಂದೇ ಒಂದು ಸಲ ಮಾತ್ರ ನಾನು ಸಮುದ್ರಮಾರ್ಗವಾಗಿ ಯೂರೋಪಿಗೆ ಹಿಂದಿರುಗಿದ್ದೆ. ಹೀಗೆ ನಾನು ಆರಾಮ ವಾಗಿ ಕೈಕೊಂಡ ಆರು ಪ್ರವಾಸಗಳಲ್ಲಿ ಇಡೀ ತುರ್ಕಿ, ಸಮಸ್ತ ಪರ್ಷಿಯಾ ಹಾಗೂ ಇಂಡಿಯಾ, ಅದರಲ್ಲೂ ಇಂಡಿಯಾದ ಹೆಸರಾಂತ ವಜ್ರದಗಣಿಗಳು—ಇವುಗಳನ್ನೆಲ್ಲಾ ನೋಡಿದ್ದೇನೆ."

ಟಾವೆರ್‌ನ್ಯೇ ನಿಜಕ್ಕೂ ಪ್ರಾರಂಭಿಕ ಸಾಹಸಿ ಪ್ರವಾಸಿಗರಲ್ಲಿ ಒಬ್ಬ. ಅವನ ಪ್ರವಾಸಕಥನ ದೇಶಾಟನೆಮಾಡಿದ ಇತರ ಪ್ರವಾಸಿಗರ ಕಥೆಗಳಂತೆಯೇ ಸ್ವಾರಸ್ಯವಾಗಿದ್ದು ಸಮಕಾಲೀನ ವಿಷಯಗಳಿಗೆ ಆಧಾರಪ್ರಾಯವಾಗಿದೆ.

[1]ಪರ್ಷಿಯಾ : ಈಗಿನ ಇರಾನ್ ರಾಜ್ಯ.

[2]ಕಾನ್‌ಸ್ಟಾಂಟಿನೋಪಲ್ : ಈಗಿನ ಇಸ್ತಾನ್‌ಬುಲ್ ಪಟ್ಟಣದ ಹಳೆಯ ಹೆಸರು. ಬೈಜಾಂಟೈನ್ ಸಾಮ್ರಾಜ್ಯದ (ಕ್ರಿ.ಶ. 476–1453) ರಾಜಧಾನಿಯಾಗಿತ್ತು.

# ಬಪ್ತೀಸ್ಟ್ ಟಾವೆರ್ನ್ಯೇ

ಮಾನ್ಯರೆ,

ನಾನು ನನ್ನ ಪರ್ಷಿಯಾ ಪ್ರವಾಸದಲ್ಲಿ ಅನುಸರಿಸಿದ ಕ್ರಮವನ್ನೇ ಈ ಇಂಡಿಯಾ ಪ್ರವಾಸದಲ್ಲಿಯೂ ಅನುಸರಿಸುತ್ತೇನೆ. ಮೊಟ್ಟಮೊದಲು ನಾನು ಇಸ್ಫಹಾನಿನಿಂದ ದಿಲ್ಲಿಗೂ, ಮೊಗಲ್ ಚಕ್ರವರ್ತಿ ಈಗ ನೆಲೆಸಿರುವ ಜಹಾನಾಬಾದಿಗೂ ಹೋಗುವ ಮಾರ್ಗಗಳ ಪರಿಚಯಮಾಡಿಕೊಡಲು ಅಪೇಕ್ಷಿಸುತ್ತೇನೆ.

ಪರ್ಷಿಯಾದಿಂದ ಇಂಡಿಯಾಕ್ಕೆ ಹೆಚ್ಚು ಮಾರ್ಗಗಳಿಲ್ಲ. ಈ ಎರಡು ದೇಶಗಳಿಗೂ ಮಧ್ಯೆ ವಿಸ್ತಾರವಾದ ಮರುಭೂಮಿಗಳಿವೆ. ಈ ಮರುಭೂಮಿಗಳಲ್ಲಿ ನೀರು ಇಲ್ಲವೇ ಇಲ್ಲ. ಈ ಕಾರಣ, ಇಸ್ಫಹಾನಿನಿಂದ ಎರಡು ಮಾರ್ಗಗಳನ್ನು ಆರಿಸಿಕೊಳ್ಳಬೇಕು. ಒಂದು, ಸಮುದ್ರ ಹಾಗೂ ಭೂಮಾರ್ಗಗಳನ್ನು ಮಾತ್ರ ಒಳಗೊಂಡದ್ದು. ಈ ಮಾರ್ಗದಲ್ಲಿ ಹೋಗಲು ಹೋರ್ಮ್ಸ್ (ಓರ್ಮ್ಸ್)[1] ರೇವಿನಲ್ಲಿ ಹಡಗು ಹತ್ತಬೇಕು. ಮತ್ತೊಂದು, ಪೂರ್ತಿ ಭೂಮಾರ್ಗ–ಕಂದಹಾರ್ (Kandahar) ಮೂಲಕ ಹೋಗಬೇಕಾದದ್ದು.

ಇಂಡಿಯಾ ಸಮುದ್ರಗಳ (Indian Seas : ಅರಬ್ಬಿ ಸಮುದ್ರ) ಮೇಲೆ ಎಲ್ಲಾ ಕಾಲಗಳಲ್ಲಿಯೂ ಹೋಗುವಂತಿಲ್ಲ. ನವೆಂಬರಿನಿಂದ ಮಾರ್ಚಿ ತಿಂಗಳವರೆಗೆ ಮಾತ್ರ ಹೋರ್ಮ್ಸಿನಿಂದ ಸೂರತ್ತಿಗೂ, ಸೂರತ್ತಿನಿಂದ ಹೋರ್ಮ್ಸಿಗೂ ಹೋಗಿ ಬರಬಹುದು. ಈ ಕಾಲದ ಮೊದಲ ನಾಲ್ಕು ತಿಂಗಳು ಈಶಾನ್ಯದ ಗಾಳಿ ಬೀಸುವುದರಿಂದ ಆಗ ಸೂರತ್ತಿನಿಂದ ಹೋರ್ಮ್ಸಿಗೆ ೧೫—೨೦ ದಿನಗಳಲ್ಲಿ ಹೋಗಬಹುದು. ಅಷ್ಟೇ ಕಾಲದಲ್ಲಿ ಹೋರ್ಮ್ಸಿನಿಂದ ಸೂರತ್ತಿಗೆ ಹೋಗಬೇಕೆಂದರೆ ಮಾರ್ಚಿ ತಿಂಗಳಿನಲ್ಲಿ ಅಥವಾ ಏಪ್ರಿಲ್ ತಿಂಗಳ ಪ್ರಾರಂಭದಲ್ಲಿ ಹೊರಡಬೇಕು. ಏಕೆಂದರೆ, ಆಗ ಗಾಳಿಯು ಒಂದೇ ಸಮನೆ ಪಶ್ಚಿಮದಿಂದ ಬೀಸುತ್ತಿರುತ್ತದೆ.

ಹೋರ್ಮ್ಸಿನಿಂದ ಹೊರಡುವ ಹಡಗುಗಳು ಅರೇಬಿಯಾದೇಶದ ಸಮುದ್ರತೀರದಲ್ಲಿರುವ ಮಸ್ಕತ್ ಎಂಬ ಸ್ಥಳದ ದಿಕ್ಕುಹಿಡಿದೇ ಹೋಗಬೇಕು. ಹಾಗೆಯೇ ಸೂರತ್ತಿ

[1]ಹೋರ್ಮ್ಸ್ : (Ormuz/Hormuz) ಪರ್ಷಿಯಾ ಖಾರಿಯಲ್ಲಿನ ಜೆರುನ್ ದ್ವೀಪದ ಉತ್ತರ ತೀರಭಾಗದ ರೇವು ಪಟ್ಟಣ. ಪೋರ್ಚುಗೀಸರು ಈ ಪಟ್ಟಣವನ್ನು ೧೫೦೭ರಲ್ಲಿ ವಶಪಡಿಸಿಕೊಂಡರು. ಬ್ರಿಟಿಷ್‌ರು ೧೬೨೨ರಲ್ಲಿ ಅದಕ್ಕೆ ಮುತ್ತಿಗೆ ಹಾಕಿದರು. ಆ ತರುವಾಯ ಅದು ತನ್ನ ಹಿಂದಿನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಹಿಂದೆ ಯೂರೋಪ್ ಮತ್ತು ದೂರ ಪ್ರಾಚ್ಯ (Far-East) ದೇಶಗಳ ನಡುವಣ ವ್ಯಾಪಾರಕ್ಕೆ ಈ ರೇವು ಕೇಂದ್ರವಾಗಿತ್ತು.

ನಿಂದ ಹೊರಟ ಹಡಗುಗಳೂ ಮಾಡಬೇಕು. ಆದರೆ ಹೋಗುವಾಗಲೂ, ಬರುವಾಗಲೂ ಮಸ್ಕತ್‌ಗೆ ಹೋಗಬೇಕಾಗಿಲ್ಲ. ಏಕೆಂದರೆ, ಅಲ್ಲಿಗೆ ಹೋದರೆ ಪೋರ್ಚುಗಲರಿಂದ ಆ ಊರನ್ನು ಕಸಿದುಕೊಂಡಿರುವ ಅರೇಬಿಯಾ ರಾಜ ಹಡಗಿನಲ್ಲಿರುವ ಸರಕುಗಳ ಮೇಲೆ ಸುಂಕ–ಸಾರಿಗೆಗಳನ್ನು ವಸೂಲುಮಾಡಿಕೊಳ್ಳುತ್ತಾನೆ.

ಪೂರ್ವ ಪ್ರಪಂಚದ ದೇಶಗಳಲ್ಲೆಲ್ಲಾ ಮಸ್ಕತ್, ಹೋರ್ಮಸ್ ಮತ್ತು ಬಸ್ಸೋರ (ಬಸ್ರಾ)—ಈ ಮೂರು ಸ್ಥಳಗಳಲ್ಲಿ ಬಿಸಿಲಿನ ಬೇಗೆಯನ್ನು ತಡೆಯುವುದಕ್ಕಾಗುವುದಿಲ್ಲ.

ಹಿಂದೆ ಇಂಗ್ಲಿಷರು ಮತ್ತು ಡಚ್ಚರು ಮಾತ್ರ ಈ ಸಮುದ್ರದ ಮೇಲಿನ (ಇಂಡಿಯಾ ಸಮುದ್ರ) ವ್ಯಾಪಾರದ ಏಕಸ್ವಾಮ್ಯವನ್ನು ಪಡೆದಿದ್ದರು. ಆದರೆ ಕಳೆದ ಕೆಲವು ವರ್ಷಗಳಿಂದ ಆರ್ಮೀನಿಯನರು, ಇಂಡಿಯಾ ದೇಶದ ಮುಸಲ್ಮಾನರು ಮತ್ತು ಬನಿಯರು ಸಹ ಹಡಗುಗಳನ್ನು ಹೊಂದಿದ್ದಾರೆ. ಆದರೆ ಇವರ ಹಡಗುಗಳು ಫರಂಗಿಯವರ ಹಡಗುಗಳಷ್ಟು ಕ್ಷೇಮಕರವಾಗಿಲ್ಲ. ಏಕೆಂದರೆ, ಇಂಡಿಯಾ ದೇಶದವರಿಗೆ ಸಮುದ್ರಯಾನದ ಅನುಭವವಿಲ್ಲ; ಅಲ್ಲದೆ, ಅವರು ಅಂಥ ನುರಿತ ನಾವಿಕರೂ ಅಲ್ಲ.[1]

ಮೊಗಲ್ ಸಾಮ್ರಾಜ್ಯಕ್ಕೆಲ್ಲಾ ಇರುವುದು ಸೂರತ್ ಒಂದೇ ಒಂದು ಬಂದರು. ಅಲ್ಲಿಗೆ ಹೋಗಬೇಕಾದರೆ ಮೊದಲು ದಿಯು (ಸಂಸ್ಕೃತ : ದ್ವೀಪ) ಮತ್ತು ಸೆಂಟ್ ಜಿಯಾನ್‌ಗಳ ದಿಕ್ಕಿಗೆ ಹೋಗಿ, ಸುವಾಲಿಯಲ್ಲಿ ಲಂಗರುಹಾಕಬೇಕು. ಹಡಗುಗಳು ನೇರವಾಗಿ ಸೂರತ್ತಿಗೆ ಹೋಗಿ ಅಲ್ಲಿ ಲಂಗರು ಹಾಕುವಂತಿಲ್ಲ. ಸುವಾಲಿಯಲ್ಲಿ ಲಂಗರು ಹಾಕಿ, ಅಲ್ಲಿ ಹಡಗಿನಿಂದ ಸಾಮಾನುಗಳನ್ನು ಇಳಿಸಿ, ಗಾಡಿಗಳ ಮೇಲೂ ದೋಣಿಗಳ ಮೇಲೂ ಸೂರತ್ತಿಗೆ ಸಾಗಿಸಬೇಕು

ಸೂರತ್ ಸುಮಾರಾದ ನಗರ. ಇಲ್ಲಿರುವ ಕೋಟೆ ಹೇಳಿಕೊಳ್ಳುವಂಥಾದ್ದಲ್ಲ. ಈ ಕೋಟೆ ಸಮುದ್ರದ ಮೇಲೆ ಬಂದಾಗಲೂ, ಭೂಮಿಯ ಮೇಲೆ ಬಂದಾಗಲೂ ದೂರದಿಂದಲೇ ಕಾಣಿಸುತ್ತದೆ. ಕೋಟೆಯ ನಾಲ್ಕು ಮೂಲೆಗಳೂ ರಕ್ಷಣೆಗೆ ಯೋಗ್ಯವಾದ ದುರ್ಗ ಭಾಗಗಳಿಂದ ಕೂಡಿದೆ. ಕೋಟೆಯ ಗೋಡೆಯನ್ನು ಮಟ್ಟವಾಗಿ ಕಟ್ಟಿಲ್ಲ. ಈ ಕಾರಣ ತುಪಾಕಿಗಳನ್ನು ಮರದ ಸಾರುವೆಗಳ ಮೇಲೆ ಏರಿಸಿದ್ದಾರೆ. ಸೂರತ್ತಿನ ಕೋಟೆಯ ಕೊತ್ವಾಲನಿಗೆ ಪೇಟೆಯ ಮೇಲೆ ಯಾವ ಅಧಿಕಾರವೂ ಇಲ್ಲ. ಅವನಿಗೆ ಪಟ್ಟಣದ ಕಾವಲುದಂಡಿನ ಮೇಲಷ್ಟೇ ಅಧಿಕಾರ. ಪೇಟೆಗೆ ಬೇರೆ ಕೊತ್ವಾಲ ಇದ್ದಾನೆ.

---

[1]ಇದು ತಪ್ಪು ಹೇಳಿಕೆ. ಅರಬ್ಬರು ಸಮುದ್ರ ವ್ಯಾಪಾರದಲ್ಲಿ ತೊಡಗುವುದಕ್ಕೆ ಬಹಳ ಹಿಂದೆಯೇ ಇಂಡಿಯಾ ದೇಶದವರು, ಅದರಲ್ಲಿಯೂ ದಕ್ಷಿಣ ಇಂಡಿಯಾದವರು, ಸಮುದ್ರಯಾನದಲ್ಲಿ ಎತ್ತಿದ ಕೈ ಆಗಿದ್ದರೆಂದು ಪ್ರವಾಸಿಗಳ ಹೇಳಿಕೆಗಳಿಂದಲೂ ಜಾವಾ, ಸುಮಾತ್ರ ಮುಂತಾದ ಕಡೆಗಳಲ್ಲಿ ಕಂಡುಬಂದಿರುವ ಪ್ರಾಚೀನ ಭಾರತೀಯರ ಸಂಸ್ಕೃತಿಯನ್ನು ಬೀರುವ ದೇವಾಲಯಗಳು ಹಾಗೂ ಶಿಲ್ಪಗಳಿಂದಲೂ ತಿಳಿದುಬರುತ್ತದೆ.

ಅವನು ಮೊಗಲ್ ಚಕ್ರವರ್ತಿಗೆ ಸಲ್ಲಬೇಕಾದ ಸುಂಕ–ಸಾರಿಗೆಗಳನ್ನು ವಸೂಲು ಮಾಡುತ್ತಾನೆ.

ಸೂರತ್ ನಗರದ ಗೋಡೆಯನ್ನು ಮಣ್ಣಿನಿಂದ ಕಟ್ಟಿದ್ದಾರೆ. ಆದರೆ ಖಾಸಗಿ ಜನರ ಮನೆಗಳ ಗೋಡೆಯನ್ನು ಬಿದಿರಿನ ತಟ್ಟೆಯಿಂದ ಕಟ್ಟಿ, ಮನೆಯ ಒಳಭಾಗ ಕಾಣ ಬಾರದೆಂದು ತಟ್ಟೆಯ ಮೇಲೆ ಸಗಣಿಯನ್ನು ಬಳಿದಿದ್ದಾರೆ. ಇಡೀ ಸೂರತ್ತಿನಲ್ಲಿ ಚೆನ್ನಾಗಿರುವ ಮನೆಗಳೆಂದರೆ ಒಂಬತ್ತು ಹತ್ತು, ಅಷ್ಟೆ. ಇವುಗಳಲ್ಲಿ ಷಾಬಂದರ್‌ನಿಗೆ, ಅಂದರೆ ವರ್ತಕರ ಮುಖ್ಯಸ್ಥನಿಗೆ ಸೇರಿದ ಎರಡು ಮೂರು ಮನೆಗಳೂ ಇವೆ. ಇಂಗ್ಲಿಷರ ಮತ್ತು ಡಚ್ಚರ ಮನೆಗಳು ಸಾಧಾರಣ. ಅವು ಬಾಡಿಗೆ ಮನೆಗಳು ; ಸ್ವಂತ ಮನೆಗಳಲ್ಲ. ಈ ಬಾಡಿಗೆ ಮನೆಗಳನ್ನು ಆಗಾಗ ಕಂಪೆನಿ ಖರ್ಚಿನಲ್ಲಿ ದುರಸ್ತುಮಾಡಿಸಿಕೊಳ್ಳಬೇಕು. ಫರಂಗೀಯವರು ಸ್ವಂತ ಮನೆಗಳನ್ನು ಕಟ್ಟುವುದಕ್ಕೆ ಚಕ್ರವರ್ತಿ ಅನುಮತಿಕೊಡುವುದಿಲ್ಲ. ಕೊಟ್ಟರೆ, ಆ ಮನೆಗಳೆಲ್ಲ ಎಲ್ಲಿ ಕೋಟೆಗಳಾಗಿಬಿಡುತ್ತವೋ ಎಂದು ಚಕ್ರವರ್ತಿಯ ಭಯ. ಇಲ್ಲಿ ಕಾಪುಚಿನ್ ಫಾದರುಗಳು (ಪಾದ್ರಿಗಳು) ಯುರೋಪಿನ ಮಾದರಿಯ ಒಂದು ದೊಡ್ಡ ಮನೆ ಕಟ್ಟಿಸಿದ್ದಾರೆ. ಇದರೊಳಗೆ ಒಂದು ಇಗರ್ಜಿಯೂ ಉಂಟು. ಈ ಇಗರ್ಜಿಯನ್ನು (ಚರ್ಚ್) ಕಟ್ಟುವುದಕ್ಕೆ ನಾನು ಬಹಳ ಹಣ ಸಹಾಯಮಾಡಿದ್ದೇನೆ.

ದೀರ್ಘ ಪ್ರವಾಸಕಥನದಲ್ಲಿ ಪುನರುಕ್ತಿ ಅನಿವಾರ್ಯ. ಅದನ್ನು ತಪ್ಪಿಸುವ ಉದ್ದೇಶದಿಂದ ನಾನು ಮೊಟ್ಟಮೊದಲು ಇಂಡಿಯಾದ ಸುಂಕಸಾರಿಗೆ, ಹಣ, ಅಳತೆ, ತೂಕ ಇವುಗಳ ಪರಿಚಯಮಾಡಿಕೊಡುತ್ತೇನೆ. ವ್ಯಾಪಾರದ ಸರಕುಗಳನ್ನು ಸೂರತ್ತಿನಲ್ಲಿ ಇಳಿಸಿದ ಮೇಲೆ, ಅವನ್ನು ಕೋಟೆಗೆ ತಾಗಿದಂತಿರುವ ಸುಂಕದಕಟ್ಟೆಗೆ ಸಾಗಿಸಬೇಕು. ಅಲ್ಲಿರುವ ಸುಂಕದಕಟ್ಟೆ ಅಧಿಕಾರಿಗಳು ಬಹಳ ಕಟ್ಟುನಿಟ್ಟಾದವರು ; ಜನರನ್ನು ಬಹಳ ಜಾಗರೂಕತೆಯಿಂದ ಶೋಧಿಸುತ್ತಾರೆ. ಖಾಸಗಿ ಜನರು ತಮ್ಮ ಸರಕುಗಳ ಮೇಲೆ ಶೇಕಡ ೪ ರಿಂದ ೮ ರಷ್ಟು ಸುಂಕ ಕೊಡುತ್ತಾರೆ. ಆದರೆ ಇಂಗ್ಲಿಷ್ ಮತ್ತು ಡಚ್ ಕಂಪೆನಿಯವರು ಕಡಿಮೆ ಕೊಡುತ್ತಾರೆ. ಹೀಗೆ ಕಡಿಮೆ ಕೊಟ್ಟರೂ ಅವರು ರಾಜನ ಆಸ್ಥಾನಕ್ಕೆ ಹೋಗಿಬರುವ ಮತ್ತು ಅಲ್ಲಿ ಅವರಿವರಿಗೆ ಕೊಡಬೇಕಾದ ನಜರುಮುಜರುಗಳ ಖರ್ಚನ್ನು ಗಮನಿಸಿದರೆ ಅವರ ಸರಕುಗಳ ಬೆಲೆ ಖಾಸಗಿ ಜನರ ಸರಕುಗಳ ಬೆಲೆಯಷ್ಟೇ ಆಗುತ್ತದೆ.

ಸೂರತ್ತಿಗೆ ತೆಗೆದುಕೊಂಡು ಹೋದ ಚಿನ್ನ ಹಾಗೂ ಬೆಳ್ಳಿಯ ಮೇಲೆ ಸುಂಕ ಕೊಡಬೇಕು. ಸುಂಕ ಕೊಟ್ಟು ಲೆಕ್ಕ ತೀರಿಸಿದ ಮೇಲೆ ಟಂಕಸಾಲೆಯ ದರೋಗನು ಬಂದು ಅವುಗಳನ್ನು ತೆಗೆದುಕೊಂಡುಹೋಗಿ, ಈ ದೇಶದ ನಾಣ್ಯಕ್ಕೆ ಪರಿವರ್ತಿಸಿ, ನಾವು ಕೊಟ್ಟ ಚಿನ್ನ–ಬೆಳ್ಳಿಯ ಪ್ರಮಾಣಕ್ಕೆ ನಿಗದಿಯಾದಷ್ಟು ನಾಣ್ಯಗಳನ್ನು ಕೊಡುತ್ತಾನೆ ಅವನು ಇಷ್ಟು ದಿವಸಗಳೊಳಗೆ ನಾಣ್ಯಗಳನ್ನು ಪಟ್ಟಿಸಿಕೊಡುತ್ತೇನೆಂದು ಹೇಳುತ್ತಾನೆ. ಅಷ್ಟರೊಳಗೆ ಕೊಡದೆಹೋದರೆ ಹೆಚ್ಚಾದ ದಿನಗಳಿಗೆ ಬಡ್ಡಿ ಕೊಡುತ್ತಾನೆ.

ನಾಣ್ಯ ಹಾಗೂ ಹಣಕಾಸಿನ ವಿಚಾರದಲ್ಲಿ ಇಂಡಿಯನರು ಬಹಳ ಯುಕ್ತಿವಂತರು. ಕಾಸಿಗೆ ಕಾಸು ಲೆಕ್ಕಹಾಕುತ್ತಾರೆ. ನಾಣ್ಯಗಳು ಮೂರು ನಾಲ್ಕು ವರ್ಷ ಚಲಾವಣೆಯಲ್ಲಿದ್ದರೆ ಅದರ ತೂಕ ಶೇಕಡ ಅರ್ಧದಷ್ಟಾದರೂ ಕಡಿಮೆಯಾಗುತ್ತದೆಯಷ್ಟೆ. ಆದರೆ ಅವುಗಳನ್ನು ಮತ್ತೆ ವಾಪಸ್ಸು ಪಡೆಯುವಾಗ ಮೊದಲ ದರದಲ್ಲೇ ತೆಗೆದುಕೊಳ್ಳುತ್ತಾರೆ. ಏಕೆಂದು ಕೇಳಿದರೆ, 'ಒಂದು ಕೈಯಿಂದ ಇನ್ನೊಂದು ಕೈಗೆ ಹೋಗುವಾಗ ಸವೆಯುವುದು ಅನಿವಾರ್ಯ, ಮಾಡುವುದೇನು ?'—ಎಂದು ಹೇಳಿಬಿಡುತ್ತಾರೆ.

ಚಿನ್ನವನ್ನು ತಂದ ವರ್ತಕರು ಅದನ್ನು ಗುಟ್ಟಾಗಿ ಬಚ್ಚಿಟ್ಟುಕೊಂಡು ಸುಂಕದ ಅಧಿಕಾರಿಗಳ ಕಣ್ಣಿಗೆ ಮಣ್ಣೆರಚುತ್ತಾರೆ. ಯೂರೋಪಿನಲ್ಲಿರುವಂತೆ ಇಲ್ಲಿ ಚಿನ್ನದ ಚೋರರಿಗೆ ಕಠಿಣ ಶಿಕ್ಷೆ ಇಲ್ಲದಿರುವುದರಿಂದ ಹೆಚ್ಚು ಮೋಸ ನಡೆಯುತ್ತದೆ. ಹಾಗೆ ಮೋಸಮಾಡಿದರೂ ಒಂದೆಕ್ಕೆರಡು ದಂಡ ತೆತ್ತರೆ ಸಾಕು ಮೋಸದಿಂದ ತಪ್ಪಿಸಿಕೊಳ್ಳಬಹುದು.

ಇಂಗ್ಲಿಷ್ ದಳವಾಯಿಗಳನ್ನು (Captains) ಶೋಧಿಸಕೂಡದೆಂದು ರಾಜನ ಆಜ್ಞೆ ಇದೆ. ಹೀಗಿದ್ದರೂ ಒಬ್ಬ ದಳವಾಯಿ ಈ ಆಜ್ಞೆಯ ಮರೆಯಲ್ಲಿ ಇಂಡಸ್ ನದಿ ದಡದಲ್ಲಿರುವ ತಟ್ಟಾ ಎಂಬ ಸ್ಥಳದಲ್ಲಿ ಕಳ್ಳತನದಿಂದ ಚಿನ್ನ ಸಾಗಿಸುತ್ತಿದ್ದ. ಸುಂಕದವರಿಗೆ ಅನುಮಾನ ಬಂದು ಒಂದು ದಿನ ಅವನನ್ನು ಶೋಧಿಸಿಯೇಬಿಟ್ಟರು. ಚಿನ್ನ ಸಿಕ್ಕಿತು. ಇದಕ್ಕೆ ಮುಂಚೆ ಅವನು ತನ್ನ ಹಡಗಿನಿಂದ ಊರಿನೊಳಕ್ಕೆ ಹೋಗಿಬರುವ ನೆಪದಲ್ಲಿ ಸ್ವಲ್ಪ ಚಿನ್ನ ಸಾಗಿಸಿದ್ದ. ಚಿನ್ನದ ಮೇಲೆ ಕೊಡಬೇಕಾಗಿದ್ದ ಸುಂಕವನ್ನು ವಸೂಲುಮಾಡಿಕೊಂಡು ಆ ದಳವಾಯಿಯನ್ನು ಬಿಟ್ಟುಬಿಟ್ಟರು. ಆದರೆ ಈ ಶೋಧನೆಯಿಂದ ಆ ಇಂಗ್ಲಿಷಿನವ ರೇಗಿಹೋದ. ತಕ್ಕದ್ದು ಮಾಡುವೆನೆಂದು ಹಠ ತೊಟ್ಟು, ಒಂದು ಕೆಲಸ ಮಾಡಿದ. ಅದೇನೆಂದರೆ, ಹಾಲು ಕುಡಿಸುತ್ತಿದ್ದ ಒಂದು ಮರಿ ಹಂದಿಯನ್ನು ಅವನು ಕೊಯ್ಯಿಸಿದ. ಅದನ್ನು ಬೇಯಿಸಿ, ತೇಲುತ್ತಿದ್ದ ಅದರ ಕೊಬ್ಬು ಸಮೇತ ಒಂದು ಪಿಂಗಾಣಿ ತಟ್ಟೆಯಲ್ಲಿಟ್ಟು, ಅದರ ಮೇಲೆ ಬಟ್ಟೆ ಮುಚ್ಚಿಸಿ, ಸೇವಕನೊಬ್ಬನ ಕೈಯಲ್ಲಿ ತೆಗೆಸಿಕೊಂಡು ಊರಿನೊಳಕ್ಕೆ ಹೊರಟ. ಸುಂಕದಕಟ್ಟೆಯ ಮುಂದೆ ಪಟ್ಟಣದ ಕೊತ್ವಾಲ, ಷಾಬಂದರ್ ಮತ್ತು ಟಂಕಸಾಲೆಯ ದರೋಗ—ಇವರೆಲ್ಲಾ ದಿವಾನಿನಲ್ಲಿ (Divan)ಕುಳಿತ್ತಿದ್ದರು. ಏನನ್ನೊ ಮುಚ್ಚಿಕೊಂಡುಹೋಗುತ್ತಿರುವ ಆ ಫರಂಗೀ ದಳವಾಯಿಯನ್ನು ತಡೆಯದಿದ್ದರೆ ಆಗುತ್ತದೆಯೆ ! ತಡೆದರು. ಆದರೆ ತಟ್ಟೆಯನ್ನು ಹಿಡಿದ ಸೇವಕ ಮುಂದೆ ಮುಂದೆ ಹೋಗುತ್ತಲೇ ಇದ್ದ. ಅದನ್ನು ಸುಂಕದ ಮನೆಗೆ ತೆಗೆದುಕೊಂಡುಹೋಗಿ ಶೋಧನೆ ಮಾಡಿಸಬೇಕೆಂದು ಅಪ್ಪಣೆ ಆಯಿತು. ಸೇವಕನು ತೆಗೆದುಕೊಂಡುಹೋಗುತ್ತಿರುವುದಕ್ಕೆ ಸುಂಕ ಕೊಡಬೇಕಾಗಿಲ್ಲವೆಂದು ಆ ಇಂಗ್ಲಿಷ್ ದಳವಾಯಿ ಪ್ರತಿಭಟಿಸಿದ. ಹಾಗೆ ಪ್ರತಿಭಟಿಸಿದಷ್ಟೂ ಇನ್ನೂ ಸುಳ್ಳು ಹೇಳುತ್ತಿದ್ದಾನೆಂದು ಇವರು ಭಾವಿಸಿದರು. ಬಹಳ ಹೊತ್ತು ಕಟಪಟಿಮಾಡಿದ ಮೇಲೆ ಆ ಇಂಗ್ಲಿಷಿನವ ತಾನೇ ಆ ತಟ್ಟೆಯನ್ನು

ತೆಗೆದುಕೊಂಡು ಸುಂಕದ ಮನೆಗೆ ಹೊರಟ. ತಮ್ಮ ಆಜ್ಞೆಯಂತೆ ನಡೆಯದೆ ಹೋದ ಆ ಫರಂಗಿಯವನ ಮೇಲೆ ಸಿಟ್ಟಾದ ಅಧಿಕಾರಿಗಳು ರೇಗಿ ಅತನನ್ನು ತಡೆದರು. ಆಗ ಅತ ತಟ್ಟೆಯಲ್ಲಿದ್ದ ಹಂದಿ ಮಾಂಸವನ್ನು ಕೊಬ್ಬು ಸಮೇತ ಅವರ ಮುಂದೆ ಬಿಸಾಡಿದನು. ಅಧಿಕಾರಿಗಳ ಬಟ್ಟೆಬರೆಗಳಿಗೆಲ್ಲಾ ಕೊಬ್ಬು ಹಾರಿದುದಲ್ಲದೆ, ಆ ಸ್ಥಳವೆಲ್ಲಾ ಹೊಲಸಾಯಿತು. ಮಹಮ್ಮದೀಯರಿಗೆ ಹಂದಿ ಎಂದರೆ ಅಸಹ್ಯ. ಅವರ ಪ್ರಕಾರ ಹಂದಿ ಮುಟ್ಟಿದ ಸ್ಥಳವೆಲ್ಲಾ ಅಪವಿತ್ರ. ಈ ಕಾರಣ ಅವರು ತಮ್ಮ ಬಟ್ಟೆಬರೆಗಳನ್ನು ಬದಲಾಯಿಸಿಕೊಂಡರು, ದಿವಾನಿನಲ್ಲಿದ್ದ ಜಮಖಾನಗಳನ್ನೆಲ್ಲಾ ತೆಗೆದುಹಾಕಿದರು ಮತ್ತು ಆ ಸ್ಥಳದಲ್ಲಿದ್ದ ಚಪ್ಪರ ಮುಂತಾದುವನ್ನು ಹೊಸದಾಗಿ ಕಟ್ಟಿಸಿದರು. ಆದರೂ ಆ ಇಂಗ್ಲಿಷಿನವನಿಗೆ ಅವರೇನೂ ಮಾಡಲಾಗಲಿಲ್ಲ. ಅಷ್ಟೊಂದು ಲಾಭ ಕೊಡುತ್ತಿರುವ ಕಂಪೆನಿಯ ನೌಕರನನ್ನು ಅವರು ಮೇಲೆ ಹಾಕಿಕೊಳ್ಳುವಂತಿರಲಿಲ್ಲ.

ಮೊಗಲ್ ಚಕ್ರವರ್ತಿಯ ಚಕ್ರಾಧಿಪತ್ಯದಲ್ಲೆಲ್ಲಾ ಚಿನ್ನ ಮತ್ತು ಬೆಳ್ಳಿಯನ್ನು 'ತೊಲ' ಎಂಬ ತೂಕದಲ್ಲಿ ತೂಗುತ್ತಾರೆ. ಈ ತೊಲ ನಮ್ಮ ೯ ಡೆನಿಯರ್ ೮ ಗ್ರೇಯ್ನ್‌ಗಳಿಗೆ ಸಮ. ಹೆಚ್ಚು ತೂಕದ ಚಿನ್ನ ಬೆಳ್ಳಿಯನ್ನು ಹಿತ್ತಾಳೆಯ ತೂಕದ ಬಟ್ಟುಗಳಿಂದ ತೂಗುತ್ತಾರೆ. ಇವುಗಳಿಂದ ೧೦೦ ತೊಲದವರೆಗೆ ತೂಗುತ್ತಾರೆ. ಇದಕ್ಕಿಂತ ಹೆಚ್ಚು ತೂಕದ ಬಟ್ಟುಗಳು ಇಲ್ಲಿ ಇಲ್ಲ. ನಾಣ್ಯವಾಗಿ ಪರಿವರ್ತಿಸದ ಚಿನ್ನ ಅಥವಾ ಬೆಳ್ಳಿಯನ್ನು ಒರೆ ಹಚ್ಚಿ ನೋಡಿ ಹರಾಜು ಕೂಗುತ್ತಾರೆ. ಆಗ ಅದನ್ನು ಕೊಳ್ಳಲು ವ್ಯಾಪಾರಿಗಳು ಪರಸ್ಪರ ಸ್ಪರ್ಧಿಸುತ್ತಾರೆ.

ಕೆಲವು ವರ್ತಕರ ಬಳಿ ನಲವತ್ತು ಐವತ್ತು ಸಾವಿರ ಡಕೆಟ್‌ಗಳಷ್ಟು[1] ಚಿನ್ನದ ನಾಣ್ಯಗಳಿರುವುದರಿಂದ ನೂರು ಡಕೆಟುಗಳನ್ನು ತೂಗುವ ಬಟ್ಟುಗಳನ್ನು ಉಪಯೋಗಿಸಿ ಆ ನಾಣ್ಯಗಳನ್ನು ಸರಿಯಾಗಿ ತೂಕಹಾಕುತ್ತಾರೆ. ಈ ಬಟ್ಟುಗಳ ಮೇಲೂ ರಾಜನ ಮುದ್ರೆ ಇರುತ್ತದೆ. ತೂಕಮಾಡುವುದಕ್ಕೆ ಮುಂಚೆ ನಾಣ್ಯಗಳನ್ನೆಲ್ಲಾ ಉರಿಯುವ ಇದ್ದಲಿನ ಕುಲುಮೆಯಲ್ಲಿ ಹಾಕಿ, ಗಣ ಗಣ ಕಾಯಿಸಿ, ನೀರಿನಲ್ಲಿ ಅದ್ದಿ ಆರಿಸುತ್ತಾರೆ. ಒಳ್ಳೆಯ ಚಿನ್ನವೊ ಅಲ್ಲವೊ ಎಂಬುದನ್ನು ಕಂಡುಹಿಡಿಯಲು ಈ ಪರೀಕ್ಷೆ ಮಾಡುತ್ತಾರೆ. ಹೆಚ್ಚು ತೂಗಲೆಂದು ಕೆಲವರು ಮೇಣವನ್ನೊ ಅರಗನ್ನೊ ಮೆತ್ತಿ ಮೋಸಮಾಡುತ್ತಾರೆ. ಅಂಥ ಮೋಸವೆಲ್ಲಾ ಈ ಪರೀಕ್ಷೆಯಲ್ಲಿ ಗೊತ್ತಾಗಿಬಿಡುತ್ತದೆ. ಕೆಲವು ನಾಣ್ಯಗಳನ್ನು ಎಷ್ಟು ಚೆನ್ನಾಗಿ ಬೆಸೆದಿರುತ್ತಾರೆಂದರೆ, ಅವುಗಳನ್ನು ಬೆಂಕಿಯಲ್ಲಿ ಹಾಕಿದರೂ ಮೋಸ ಗೊತ್ತಾಗುವುದಿಲ್ಲ. ಅಂಥ ನಾಣ್ಯಗಳನ್ನು ಸರಾಫರು ಮುರಿದುನೋಡುತ್ತಾರೆ. ಮುರಿದಾಗ

---

[1]ಡಕೆಟ್ (ducat) : ಹಿಂದೆ ಯೂರೋಪಿನಲ್ಲಿ ಹಾಗೂ ಮೊಟ್ಟಮೊದಲು ೧೨೮೪ರಲ್ಲಿ ವೆನ್ನಿಸ್ ನಗರದಲ್ಲಿ ಚಲಾವಣೆಗೆ ಬಂದ ಚಿನ್ನದ ನಾಣ್ಯ.

ನಾಣ್ಯ ಸರಿಯಾದುದೇ ಅಲ್ಲವೇ ಎಂಬುದು ಗೊತ್ತಾಗಿಬಿಡುತ್ತದೆ. ಖೋಟಾ ನಾಣ್ಯಗಳನ್ನು ಕತ್ತರಿಸಿಹಾಕುತ್ತಾರೆ.

ಚಿನ್ನದಿಂದ ಮಾಡಿದ ನಾಣ್ಯಗಳನ್ನು ಚಿನ್ನದ ನಾಣ್ಯಗಳೆಂದು (ಮೊಹರ್ ಹನ್=ಮೊಹರು ,ಹಣ) ಎಂದು ಕರೆಯುತ್ತಾರೆ. ಚಿನ್ನದ ಡಕೆಟ್ ನಾಣ್ಯಗಳನ್ನು ಸಾಮಾನ್ಯವಾಗಿ ಕರಗಿಸುವುದಿಲ್ಲ. ಅವುಗಳನ್ನು ಟಾರ್ಟರಿ, ಭೂತಾನ್, ಅಸ್ಸಾಂ ಮುಂತಾದ ದೂರ ದೇಶದ ವರ್ತಕರುಗಳಿಗೆ ಮಾಡುತ್ತಾರೆ. ಆ ದೇಶಗಳ ಹೆಂಗಸರು ಈ ಡಕೆಟ್ಟುಗಳನ್ನು ಹಾಗೆಯೇ ಆಭರಣವಾಗಿ ಉಪಯೋಗಿಸುತ್ತಾರೆ.

ಚಿನ್ನದ ನಾಣ್ಯಗಳು ವರ್ತಕರಲ್ಲಿ ಚಲಾವಣೆಯಲ್ಲಿಲ್ಲ. ಒಂದೊಂದು ಚಿನ್ನದ ನಾಣ್ಯದ ಬೆಲೆ ೧೪ ಬೆಳ್ಳಿ ರೂಪಾಯಿಗಳಾದರೂ, ಅವುಗಳನ್ನು ಹೆಚ್ಚಾಗಿ ಕಾಣುವುದು ಶ್ರೀಮಂತಸರದಾರರ ಮನೆಗಳಲ್ಲಿ ಮಾತ್ರ. ಈ ನಾಣ್ಯಗಳನ್ನು ಚಕ್ರವರ್ತಿಗೂ, ಮತ್ತಿತರ ಶ್ರೀಮಂತ ಸರದಾರರಿಗೂ ನಜರು ಒಪ್ಪಿಸುವುದಕ್ಕೆ (ನಜ್ರಾನಕ್ಕಾಗಿ) ಉಪಯೋಗಿಸಿಕೊಳ್ಳುತ್ತಾರೆ. ಚಿನ್ನದ ನಾಣ್ಯಗಳ ಚಲಾವಣೆಗೆ ಅವಕಾಶ ಬಹಳ ಕಡಿಮೆ. ಅವುಗಳನ್ನು ರಾಜನಿಗೆ ಕಾಣದಂತೆ ಹೆಂಡತಿ ಮಕ್ಕಳಿಗೆ ಒಡವೆ ಮಾಡಿಸಿಕೊಡಬಹುದು. ಯಾವುದಾದರೂ ಸರಕನ್ನು ಇಷ್ಟು ಚಿನ್ನದ ನಾಣ್ಯಗಳಿಗೆ ಎಂದು ಮಾರಿದರೂ ಹಣ ಕೊಡುವುದು ರೂಪಾಯಿ ಲೆಕ್ಕದಲ್ಲಿ. ಉದಾಹರಣೆಗೆ, ನಾನು ಷೈಸ್ತಾಖಾನನಿಗೆ ೯೬,೦೦೦ ರೂಪಾಯಿ ಬೆಲೆ ಬಾಳುವ ಸರಕುಗಳನ್ನು ಮಾರಿದೆ. ಆ ಬೆಲೆಯನ್ನು ಚಿನ್ನದ ನಾಣ್ಯದಲ್ಲಿ ಕೊಡಬೇಕೆ ಅಥವಾ ಬೆಳ್ಳಿಯ ನಾಣ್ಯದಲ್ಲಿ ಕೊಡಬೇಕೆ ಎಂದು ಆತ ಕೇಳಿದ. ಯಾವ ನಾಣ್ಯದಲ್ಲಾದರೂ ಕೊಡಬಹುದು ಎಂದು ನಾನು ಹೇಳಿದಾಗ ಅವನು ಒಂದು ಚಿನ್ನದ ನಾಣ್ಯಕ್ಕೆ ೧೪ ೧/೨ ರೂಪಾಯಿಗಳೆಂದು ಲೆಕ್ಕಹಾಕಿ, ಅದರಂತೆ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಹೋಗು ಎಂದ. ನಾನು ಡಚ್ ಷರಾಫನೊಬ್ಬನ ಒಳಗೆ ಹೋಗಿ ಆತನು ಒಂದು ಚಿನ್ನದ ನಾಣ್ಯಕ್ಕೆ ೧೪ ೧/೨ ರೂಪಾಯಿಗಳನ್ನು ಕೊಡುತ್ತಾನೆಯೆ ಎಂದು ಕೇಳಿದೆ. ಅವನು ೧೪ ರೂಪಾಯಿಗಳಿಗಿಂತ ಹೆಚ್ಚು ಕೊಡಲು ಒಪ್ಪಲಿಲ್ಲ. ಈ ವಿಚಾರವನ್ನು ಷೈಸ್ತಾಖಾನನಿಗೆ ಹೇಳಿದಾಗ ಅವನು ಸಿಟ್ಟಿಗೆದ್ದು ಆ ಡಚ್ ಷರಾಫನನ್ನು ಎಕ್ಕಡದಲ್ಲಿ ಹೊಡೆಯುತ್ತೇನೆಂದು ರೇಗಾಡಿದ. ಇಂಡಿಯಾದಲ್ಲಿ ಕೋಲುಗೀಲುಗಳಿಂದ ಹೊಡೆಯುತ್ತೇವೆಂದು ಹೇಳುವುದಿಲ್ಲ. 'ಎಕ್ಕಡದಲ್ಲಿ ಹೊಡೆಯುತ್ತೇನೆ !' ಎಂದೇ ಹೇಳುವುದು.

ಹೀಗೆ ಷೈಸ್ತಾಖಾನ ರೇಗಾಡಿ ಮಾತು ನಿಲ್ಲಿಸಿದ ಮೇಲೆ, ಮತ್ತೆ ನಗುತ್ತಾ "ನನಗೆ ಬೇಕಾದ ಮುತ್ತನ್ನು ತಂದಿರುವೆಯಾ ?" ಎಂದು ವಿಚಾರಿಸಿದ. ನಾನು ಅದನ್ನು ಒಳಕಿಸೆಯಿಂದ ಹೊರದೆಗೆದು ಅವನ ಕೈಗೆ ಕೊಟ್ಟೆ. ಆ ಮುತ್ತು ಬಹಳ ಪ್ರಕಾಶಮಾನವಾಗಿತ್ತು. ಅದರ ಆಕಾರ ಅಷ್ಟು ಚೆನ್ನಾಗಿರಲಿಲ್ಲವಾಗಿ ಅದನ್ನು ಕೊಳ್ಳಲು ಹಿಂದೆ ಅವನು ನಿರಾಕರಿಸಿದ್ದನು. ಷೈಸ್ತಾಖಾನ ಅದರ ಬೆಲೆಯೇನೆಂದು ಕೇಳಲು ನಾನು ೭,೦೦೦ ರೂಪಾಯಿಗಳೆಂದು ಹೇಳಿದೆ. ಅವನು ಮುತ್ತಿಗೆ ೫,೦೦೦ ಕೊಡುವೆನೆಂದು ಹೇಳಿ,

ಅಷ್ಟು ಕೊಟ್ಟರೆ ಮುತ್ತಿನ ಬೆಲೆಯನ್ನಷ್ಟೇ ಅಲ್ಲದೆ, ನನಗೆ ಕೊಟ್ಟ ೯೬,೦೦೦ ರೂಪಾಯಿಗಳನ್ನು ಚಿನ್ನದ ನಾಣ್ಯಗಳಿಗೆ ವಿನಿಮಯಮಾಡಿಕೊಂಡಾಗ ಒಂದು ಚಿನ್ನದ ನಾಣ್ಯಕ್ಕೆ ಅರ್ಧರೂಪಾಯಿನಂತೆ ಕಳೆದುಕೊಳ್ಳುವ ಹಣವನ್ನೂ ಕೊಡಿಸಿಕೊಟ್ಟಂತಾಗುವುದೆಂದು ಹೇಳಿದ. ಅದರ ಜೊತೆಗೆ ಒಂದು 'ಖಿಲತ್' ಮತ್ತು ಒಂದು ಕುದುರೆಯನ್ನು ಕೊಡುವುದಾಗಿ ತಿಳಿಸಿದ. ನಾನು ತಲೆಬಾಗಿ ನಮಸ್ಕಾರಮಾಡಿ ಗೌರವವನ್ನು ಸೂಚಿಸಿ, ನನ್ನ ದೂರದ ಪ್ರಯಾಣಕ್ಕೆ ಅನುಕೂಲವಾಗುವಂತಹ ಒಳ್ಳೆ ಪ್ರಾಯದ ಕುದುರೆ ಕೊಡಬೇಕೆಂದು ಕೇಳಿಕೊಂಡೆ.

ಮಾರನೆಯ ದಿನ ನಾನಿದ್ದ ಕಡೆಗೆ ಒಂದು ನೀಳುಡುಪು (robe), ಹೊದಿಕೆ, ಎರಡು ನಡುಕಟ್ಟುಗಳು ಮತ್ತು ಒಂದು ರುಮಾಲು—ಇಷ್ಟನ್ನೂ ಕಳುಹಿಸಿದ. ಇವಿಷ್ಟು ಒಬ್ಬ ಶ್ರೀಮಂತ ತನಗೆ ಬೇಕಾದವರಿಗೆ ಮಾಡಬಹುದಾದ ಮರ್ಯಾದೆಯ ಸಂಪೂರ್ಣ ಉಡುವು. ನೀಳುಡುಪು ಮತ್ತು ಹೊದಿಕೆಗಳನ್ನು ಚಿನ್ನದ ಜರತಾರಿಯಿಂದ ಮಾಡಿದ್ದರು. ಎರಡು ನಡುಕಟ್ಟುಗಳಿಗೆ ಚಿನ್ನ ಮತ್ತು ಬೆಳ್ಳಿಯ ಸರಿಗೆ ಹಾಕಲಾಗಿತ್ತು. ರುಮಾಲು ಹತ್ತಿಯದು ; ಆದರೆ ಚಿನ್ನದ ಜರತಾರಿ ಅಂಚು ಇತ್ತು. ನಾನು ಕೋರಿದಂತೆ ಕುದುರೆಯನ್ನು ಕಳುಹಿಸಿದ್ದ. ಅದಕ್ಕೆ ಜೀನು ಹಾಕಿರಲಿಲ್ಲ. ಅದರ ಬದಲು ಹಸುರು ಮಕಮಲ್ಲಿನ ಬಟ್ಟೆ ಹೊದಿಸಿದ್ದರು. ಲಗಾಮು ಬಹಳ ತಂಡಾಗಿತ್ತು. ಅದಕ್ಕೆ ಕೆಲವು ಕಡೆ ಬೆಳ್ಳಿಯ ನಾಣ್ಯಗಳನ್ನು ತಗಲಿಸಿದ್ದರು. ಈ ಕುದುರೆಯನ್ನು ಇದಕ್ಕೆ ಮುಂಚೆ ಯಾರೂ ಹತ್ತಿರಲಿಲ್ಲವೆಂದು ಕಾಣುತ್ತದೆ. ಏಕೆಂದರೆ, ಒಬ್ಬ ಯುವಕ ಅದರ ಮೇಲೆ ಹತ್ತಿದನೋ ಇಲ್ಲವೋ ಅದು ಕುಣಿದು ಕುಪ್ಪಳಿಸಿ ಕುಳಿತವನನ್ನು ಒಂದು ಹುಲ್ಲು ಗುಡಸಲಿನ ಮೇಲೆ ಎಸೆದುಬಿಟ್ಟಿತು. ಈ ಕುದುರೆ ನನಗೆ ತಕ್ಕುದಲ್ಲವೆಂದು ಭಾವಿಸಿದ ನಾನು ಅದನ್ನು ಹಿಂದಿರುಗಿಸಿದೆ. ಷೈಸ್ತಾಖಾನನಿಗೆ ಬೇಕಾದಂತಹ ಅಪೂರ್ವ ವಸ್ತುಗಳನ್ನು ತರಲು ನನ್ನ ದೇಶಕ್ಕೆ ಹಿಂದಿರುಗುವುದಕ್ಕೆ ಮನಸಿಲ್ಲವೆಂದು ನಾನು ಹೇಳಲು, ಆತ ಹುಸಿನಕ್ಕು ಆತನ ತಂದೆ ಸವಾರಿಮಾಡುತ್ತಿದ್ದ ಕುದುರೆಯನ್ನು ತರಿಸಿದನು. ಅದು ದೊಡ್ಡ ಪಾರಸಿ ಕುದುರೆ. ಚಿಕ್ಕ ವಯಸ್ಸಿನಲ್ಲಿ ಅದರ ಬೆಲೆ ೫,೦೦೦ 'ಏಕು' (ecu) ಗಳು[1]. ಈಗ ಕುದುರೆಯ ವಯಸ್ಸು ೨೧ ವರ್ಷಗಳಿಗೂ ಮೀರಿತ್ತು ; ತೀರ ಮುದಿಯು.

ಜೀನುಹಾಕಿ ಹಿಡಿದುತಂದ ಆ ಕುದುರೆಯನ್ನು ತನ್ನ ಮುಂದೆಯೇ ಹತ್ತುವಂತೆ ಷೈಸ್ತಾಖಾನ ಹೇಳಿದ. ನಾನು ಹತ್ತಿ ಸವಾರಿಮಾಡಿದೆ. ಅದರ ನಡಿಗೆ ಎಲ್ಲ ಕುದುರೆಗಳ ನಡಿಗೆಯಂತಿತ್ತು. ನಾನು ಖಾನನಿಗೆ ನಮಸ್ಕಾರ ಹೇಳಿ ಅವನಿಂದ ಬೀಳ್ಕೊಂಡೆ.

ಮಾರನೆಯ ದಿನ ನಾನು ಹೊರಡುವುದಕ್ಕೆ ಮುಂಚೆ ಖಾನ ಒಂದು ಬಟ್ಟೆ

---

[1] ಆಗಿನ ಲೆಕ್ಕದಂತೆ ಒಂದು ಏಕು ನಾಣ್ಯಕ್ಕೆ ೪ ಷಿ. ೬ ಪೆನ್ನಿ. ಅಂದರೆ ೫,೦೦೦ ಏಕುಗಳಿಗೆ ೧,೧೨೫ ಪೌಂಡುಗಳಾಯಿತು.

ಸೇಬುಹಣ್ಣು ಕಳಿಸಿದ. ಷಾಜಹಾನ ಪೈಸ್ತಾಖಾನನಿಗೆ ಕಳುಹಿಸಿದ ಆರು ಬುಟ್ಟಿಗಳಲ್ಲಿ ಇದೊಂದು. ಈ ಸೇಬು ಹಣ್ಣುಗಳನ್ನು ಕಾಶ್ಮೀರ ರಾಜ್ಯದಿಂದ ತರಿಸಲಾಗಿತ್ತು. ಈ ಸೇಬುಹಣ್ಣುಗಳ ಜೊತೆಗೆ ಒಂದು ಪರ್ಷಿಯಯನ್ ಕಲ್ಲಂಗಡಿ ಹಣ್ಣನ್ನೂ ಕಳುಹಿಸಿದ್ದ. ಹಣ್ಣುಗಳ ಬೆಲೆ ಒಟ್ಟು 'ನೂರು ರೂಪಾಯಿಗಳಾಗಬಹುದು. ಇವುಗಳನ್ನು ಡಚ್ ಕಮ್ಯಾಂಡರನ ಹೆಂಡತಿಗೆ ಕೊಟ್ಟೆ. ಕುದುರೆಯನ್ನು ಗೋಲ್ಕೊಂಡಾಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಅದನ್ನು ೫೦೦ ರೂಪಾಯಿಗಳಿಗೆ ಮಾರಿಬಿಟ್ಟೆ. ಮುದಿ ಕುದುರೆಯಾದರೂ ಸವಾರಿಗೆ ಯೋಗ್ಯವಾದುದರಿಂದ ಅಷ್ಟು ಬೆಲೆಗೆ ಅದು ಮಾರಾಟವಾಯಿತು.

ಈಗ ಬೆಳ್ಳಿಯ ನಾಣ್ಯಗಳ ವಿಚಾರ : ಈ ನಾಣ್ಯಗಳಲ್ಲಿ ಎರಡು ತರಹ. ಒಂದು ಸ್ಥಳದ ನಾಣ್ಯ ; ಇನ್ನೊಂದು ಪರದೇಶದ ನಾಣ್ಯ. ಪರದೇಶದ ನಾಣ್ಯಗಳನ್ನೆಲ್ಲಾ ಪರ್ಷಿಯಾ ಮೂಲಕವೇ ಬಹಳ ಗುಟ್ಟಾಗಿ ಕದ್ದು ತರಬೇಕು. ಹಾಗೇನಾದರೂ ಬಹಿರಂಗ ವಾಗಿ ತರಬೇಕಾದರೆ ಅವುಗಳನ್ನು ಕರಗಿಸಿ ಪರ್ಷಿಯಾದ 'ಅಬಾಸಿಸ್' ನಾಣ್ಯಗಳನ್ನಾಗಿ ಮಾಡಿಕೊಂಡು ಇಂಡಿಯಾಕ್ಕೆ ತಂದು ಮತ್ತೆ ಇಲ್ಲಿ ಕರಗಿಸಿ ಬೆಳ್ಳಿ ರೂಪಾಯಿ ಮಾಡಿಸಿ ಕೊಳ್ಳಬೇಕು. ಇದರಿಂದ ವರ್ತಕನಿಗೆ ಶೇಕಡ ೧೦ ೧/೨ ಲುಕ್ಸಾನು.

ಸ್ಥಳದ ಬೆಳ್ಳಿ ನಾಣ್ಯಗಳು ಯಾವುವೆಂದರೆ: ರೂಪಾಯಿ, ಅರ್ಧ ರೂಪಾಯಿ ಕಾಲು ರೂಪಾಯಿ, ಎಂಟನೇ ಒಂದು (೧/೮) ರೂಪಾಯಿ ಮತ್ತು ಹದಿನಾರನೇ ಒಂದು೧/೧೬ ರೂಪಾಯಿ. "ಮಹ್ಮೂದಿ" (ಮಹಮುದಿ) ಎಂಬ ಬೆಳ್ಳಿ ನಾಣ್ಯವೂ ಉಂಟು. ಆದರೆ ಇದು ಸೂರತ್ ಮತ್ತು ಗುಜರಾಜ್ ರಾಜ್ಯಗಳಲ್ಲಿ ಮಾತ್ರ ಚಲಾವಣೆಯಲ್ಲಿದೆ.

ಇಂಡಿಯಾದ ಚಿಕ್ಕ ನಾಣ್ಯ ತಾಮ್ರದ್ದು. ಇದನ್ನು 'ಪೈಸಾ' ಎಂದು ಕರೆಯುತ್ತಾರೆ. ಅರ್ಧ ಪೈಸಾ, ಎರಡು ಪೈಸಾ ಮತ್ತು ನಾಲ್ಕು ಪೈಸಾ ನಾಣ್ಯಗಳೂ ಉಂಟು. ನೀವು ಯಾವ ಪ್ರಾಂತದಲ್ಲಿ ಇರುವಿರೋ ಆ ಪ್ರಾಂತದಲ್ಲಿ ಒಂದು ರೂಪಾಯಿಗೆ ಇಷ್ಟು ಪೈಸಾ ಗಳೆಂದು ಲೆಕ್ಕಚಾರಮಾಡಿ ಕೊಡುತ್ತಾರೆ. ಅಂದರೆ, ಪ್ರತಿಯೊಂದು ಪ್ರಾಂತದಲ್ಲಿಯೂ ಒಂದು ರೂಪಾಯಿಗೆ ಸಿಗುವ ಪೈಸಾಗಳ ಬಗ್ಗೆ ವ್ಯತ್ಯಾಸವಿದೆ. ನನ್ನ ಕಳೆದ ಪ್ರವಾಸದಲ್ಲಿ ಸೂರತ್ತಿನಲ್ಲಿ ಒಂದು ರೂಪಾಯಿಗೆ ೪೯ ಪೈಸಾಗಳಿತ್ತು. ಆಗ್ರಾದಲ್ಲಿ ಮತ್ತು ಜಹಾನಾ ಬಾದಿನಲ್ಲಿ ಅದೇ ರೂಪಾಯಿಗೆ ೫೫ ಅಥವಾ ೫೬ ಪೈಸಾಗಳು. ಕಾರಣವೇನೆಂದರೆ, ನೀವು ತಾಮ್ರದ ಗಣಿಗಳಿರುವ ಸ್ಥಳಕ್ಕೆ ಹತ್ತಿರ ಹತ್ತಿರ ಹೋದಂತೆ ಒಂದು ರೂಪಾಯಿಗೆ ಹೆಚ್ಚು ಪೈಸಾಗಳು ದೊರೆಯುತ್ತವೆ. ಆದರೆ 'ಮಹ್ಮೂದಿ' ನಾಣ್ಯಕ್ಕೆ ಮಾತ್ರ ಯಾವಾ ಗಲೂ ೨೦ ಪೈಸಾಗಳು.

ಈ ನಾಣ್ಯಗಳಲ್ಲದೆ ಮೊಗಲ್ ರಾಜ್ಯದಲ್ಲಿ ಇನ್ನೆರಡು ತರಹ ನಾಣ್ಯಗಳು ಚಲಾವಣೆಯಲ್ಲಿವೆ. ಅವು ಯಾವುವೆಂದರೆ, "ಕಹಿ–ಬದಾಮ್" ಮತ್ತು ಕವಡೆಗಳು. ಕಹಿ–ಬದಾಮ್‌ಗಳನ್ನು ಪರ್ಷಿಯಾದಿಂದ ತರಿಸಿಕೊಳ್ಳುತ್ತಾರೆ. ಇವುಗಳನ್ನು ಸಣ್ಣಪುಟ್ಟ ಚಿಲ್ಲರೆಗಳಿಗೆ ಗುಜರಾತಿನಲ್ಲಿ ಉಪಯೋಗಿಸುತ್ತಾರೆ. ಈ ಬದಾಮ್ ಬಹಳ ಕಹಿ. ಆದರೆ

ಇವನ್ನು ಮಕ್ಕಳೆಲ್ಲಿ ತಿಂದುಬಿಡುತ್ತವೋ ಎಂಬ ಹೆದರಿಕೆ ಇಲ್ಲ. ಇವುಗಳನ್ನು ಒಂದು ಪೈಸಾಕ್ಕೆ ೫೫ರಿಂದ ೪೦ರವರೆಗೆ ಕೊಡುತ್ತಾರೆ. ಕವಡೆಗಳನ್ನು ಸಣ್ಣ ನಾಣ್ಯಗಳಂತೆ ಉಪಯೋಗಿಸುತ್ತಾರೆ. ಈ ಕವಡೆಗಳು ಮಾಲ್ಡೀವ್ ದ್ವೀಪಗಳಲ್ಲಿ ಸಿಕ್ಕುತ್ತವೆ. ಈ ಕವಡೆಗಳನ್ನು ಮಾಲ್ಡೀವ್ ದ್ವೀಪದ ರಾಜನು ಮೊಗಲ್ ಸಾಮ್ರಾಜ್ಯ, ಬಿಜಾಪುರ ಮತ್ತು ಗೋಲ್ಕೊಂಡ ರಾಜ್ಯಗಳು ಮತ್ತು ಅಮೇರಿಕ ದ್ವೀಪಗಳು—ಇವುಗಳಿಗೆ ಮಾರಿ ಬಹಳ ಹಣ ಸಂಪಾದಿಸುತ್ತಾನೆ. ದ್ವೀಪಕ್ಕೆ ಸಮೀಪದಲ್ಲಿ ಒಂದು ಪೈಸಾಕ್ಕೆ ೮೦ ಕವಡೆಗಳು ಸಿಕ್ಕಿದರೆ, ದೂರ ಹೋದಂತೆ ಬೆಲೆ ಹೆಚ್ಚಾಗುತ್ತದೆ. ಉದಾಹರಣೆಗೆ, ಆಗ್ರಾದಲ್ಲಿ ಒಂದು ಪೈಸಾಕ್ಕೆ ೫೦ ಅಥವಾ ೫೫ ಕವಡೆಗಳು, ಅಷ್ಟೆ.

ಇಂಡಿಯನರು ಲೆಕ್ಕಮಾಡುವ ರೀತಿ ಹೀಗಿದೆ : ೧, ೦೦,೦೦೦ ರೂಪಾಯಿಗಳನ್ನು ಒಂದು 'ಲೆಕೆ' (Lekke=Lakh: ಲಕ್ಷ) ಎಂದೂ; ೧,೦೦,೦೦೦ ಲೆಕ್ಕೆಗಳನ್ನು ಒಂದು 'ಕ್ರೋರ್' (Kraur=Crore : ಕೋಟಿ) ಎಂದೂ ; ೧೦೦,೦೦೦, ಕ್ರೋರ್‌ಗಳನ್ನು ಒಂದು 'ಪದನ್' (Padan) ಎಂದೂ ಕರೆಯುತ್ತಾರೆ. ೧೦೦,೦೦೦ ಪದನ್‌ಗಳಿಗೆ ಏನೆಂದು ಹೇಳುತ್ತಾರೆಂಬುದು ಗೊತ್ತಿಲ್ಲ.

ಇಂಡಿಯಾದ ಯಾವುದಾದರೂ ಒಂದು ಊರಿನಲ್ಲಿ ಒಬ್ಬ 'ಷ್ರಾಫ್'(Shroff)ಇಲ್ಲ ಎಂದರೆ ಆ ಊರು ಬಹಳ ಸಣ್ಣ ಊರೆಂದೇ ತಿಳಿಯಬೇಕು. ಈ ಷ್ರಾಪ್‌ನ ಕೆಲಸವೆಂದರೆ ಹಣವನ್ನು ಕಳುಹಿಸುವುದು ಮತ್ತು ವಿನಿಮಯ ಪತ್ರಗಳನ್ನು (ಹುಂಡಿಗಳನ್ನು) ಕೊಡುವುದು[1]. ಷ್ರಾಪರಿಗೂ ಪ್ರಾಂತದ ಸುಬೇದಾರರುಗಳಿಗೂ ಒಳಗೊಳಗೆ ಏನೋ ಒಂದು ಒಪ್ಪಂದವಾಗಿರುತ್ತದೆ. ಇವರು ಮನಸ್ಸುಬಂದಂತೆ ರೂಪಾಯಿಯ ಬೆಲೆ ಹೆಚ್ಚಿಸುತ್ತಾರೆ ಅಥವಾ ಇಳಿಸುತ್ತಾರೆ. ಯೂರೋಪಿನಲ್ಲಿ ಯಹೂದಿಗಳು (Jews) ಷ್ರಾಫ್ ಕೆಲಸದಲ್ಲಿ ಪ್ರಸಿದ್ಧರಾಗಿದ್ದಾರೆ. ಆದರೆ ಅವರು ಇಲ್ಲಿಗೆ ಬಂದರೆ ಇಲ್ಲಿಯ ಷ್ರಾಫರ ಮುಂದೆ ಕಲಿಯುವ ಹುಡುಗರು—ಅಷ್ಟೆ.

ನೀವು ಇಲ್ಲಿ ಏನನ್ನಾದರೂ ಮಾರಿದರೆ ಅದರ ಬೆಲೆಯನ್ನು 'ಷಾಜಹಾನಿ' ರೂಪಾಯಿನಲ್ಲಿ ಕೊಡಿ ಎಂದು ಕೇಳಬೇಕು. ಹಾಗೆ ಕೇಳದಿದ್ದರೆ ಹದಿನೈದು ಇಪ್ಪತ್ತು ವರ್ಷಗಳ ಹಿಂದೆ ಟಂಕಿಸಿದ ರೂಪಾಯಿಗಳನ್ನು ಕೊಡುತ್ತಾರೆ. ಈ ರೂಪಾಯಿಗಳಿಂದ ಶೇಕಡ ೪ರಷ್ಟು ಲುಕ್ಸಾನು.

ಬೆಳ್ಳಿಯ ಖೋಟಾ ನಾಣ್ಯಗಳು ಬಹಳ ಅಪರೂಪ. ವರ್ತಕನು ಕೊಟ್ಟ ಹಣದ ಚೀಲದಲ್ಲಿ ಆಕಸ್ಮಾತ್ ಒಂದು ಖೋಟಾ ನಾಣ್ಯವಿದ್ದರೆ ಅದೂ ಇದೂ ಸುಳ್ಳು ಹೇಳು

---

[1]ಆಧುನಿಕ ಬ್ಯಾಂಕ್ ಪದ್ಧತಿಗೆ ಮುಂಚೆ, ೧೯ನೇ ಶತಮಾನದ ಕೊನೆಯವರೆಗೂ ಭಾರತದಲ್ಲಿ ಹುಂಡಿ ಪದ್ಧತಿಯನ್ನು ವ್ಯಾಪಾರಿಗಳು ತಮ್ಮ ವ್ಯವಹಾರಗಳಲ್ಲಿ ಅನುಸರಿಸುತ್ತಿದ್ದರು. ಹುಂಡಿಯನ್ನು ಈಗಿನ ಬ್ಯಾಂಕ್ 'ಡ್ರಾಫ್ಟ್'ಗೆ ಹೋಲಿಸಬಹುದು

ವುದಕ್ಕಿಂತ ಅದನ್ನು ಕತ್ತರಿಸಿಹಾಕುವುದೇ ಒಳ್ಳೆಯದು. ಖೋಟಾ ನಾಣ್ಯ ಮಾಡಿದವನು ಸಿಕ್ಕಿಬಿದ್ದರೆ ಅವನ ಬೆರಳನ್ನೇ ಕತ್ತರಿಸಿಹಾಕಬೇಕೆಂದು ರಾಜಾಜ್ಞೆ ಇದೆ. ಸರ್ಕಾರದ ಖಜಾನೆಯಿಂದ ಹೋಗುವ ಬೆಳ್ಳಿಯಲ್ಲಿ ಖೋಟಾ ಎಂಬುದು ಇಲ್ಲವೇ ಇಲ್ಲ. ಏಕೆಂದರೆ, ಖಜಾನೆಗೆ ತೆಗದುಕೊಳ್ಳುವಾಗ ಚೆನ್ನಾಗಿ ಪರೀಕ್ಷೆಮಾಡಿ ತೆಗೆದುಕೊಳ್ಳುತ್ತಾರೆ. ಚಿನ್ನದ ನಾಣ್ಯಗಳಿಗೆ ಅಗ್ನಿ ಪರೀಕ್ಷೆ ಮಾಡಿದಂತೆ ಬೆಳ್ಳಿಯ ನಾಣ್ಯಗಳಿಗೂ ಮಾಡುತ್ತಾರೆ. ಖಜಾನೆಯೊಳಕ್ಕೆ ಹೋಗುವ ಪ್ರತಿಯೊಂದು ರೂಪಾಯಿಯನ್ನೂ ಒಂದು ತರಹ ಚುಚ್ಚುವ ಸಾಧನದಿಂದ ಚುಚ್ಚುತ್ತಾರೆ. ಅದು ನಾಣ್ಯವನ್ನು ತೂತು ಮಾಡದೆ ಸ್ವಲ್ಪ ಕಚ್ಚುಮಾಡುತ್ತದೆ. ಕೆಲವು ರೂಪಾಯಿಗಳಿಗೆ ಇಂಥ ಎಳೆಂಟು ಕಚ್ಚುಗಳಿರುವುದುಂಟು. ಅಂದರೆ, ಆ ರೂಪಾಯಿಗಳು ಎಳೆಂಟು ಸಲ ಖಜಾನೆಗೆ ಹೋಗಿ ಬಂದಿವೆ ಎಂದು ಅರ್ಥ. ರೂಪಾಯಿಗಳನ್ನು ಖಜಾನೆಯಲ್ಲಿ ಸಾವಿರ ಸಾವಿರ ಹಿಡಿಯುವ ಚೀಲಗಳಲ್ಲಿ ತುಂಬಿ ಆ ಚೀಲಗಳಿಗೆ ಮುಖ್ಯ ಖಜಾಂಚಿಯ ಮುದ್ರೆ ಹಾಕಿ ಪೇರಿಸಿರುತ್ತಾರೆ. ಅದರ ಮೇಲೆ ಯಾವ ವರ್ಷ ಆ ರೂಪಾಯಿಗಳನ್ನು ಟಂಕಿಸಲಾಯಿತು ಎಂಬುದನ್ನು ನಮೂದಿಸಿರುತ್ತಾರೆ.

ನನ್ನ ಐದನೇ ಪ್ರವಾಸದ ಕಾಲದಲ್ಲಿ ನಾನು ಷೈಸ್ತಾಖಾನನ ಬಳಿಗೆ ಹೋದೆ. ನಾನು ತಂದ ಸಾಮಾನುಗಳನ್ನು ಮೊದಲು ಅವನಿಗೆ ತೋರಿಸುತ್ತೇನೆಂಬ ವಾನ ಮಾಡಿದ್ದೆ. ಸೂರತ್ತಿನಲ್ಲಿ ಬಂದಿಳಿದ ಕೂಡಲೇ ನಾನು ಬಂದಿರುವ ಸಂಗತಿಯನ್ನು ಅವನಿಗೆ ತಿಳಿಸಿದೆ. ಅವನು ಆಗ ದಖನ್ನಿನ ಚೌಪಾರ್ಟ್ (Choupart : ಬಹುಶಃ ಸೊಲ್ಲಾಪುರ) ದಲ್ಲಿ ಇದ್ದ. ಅಲ್ಲಿಗೆ ಬರಬೇಕೆಂದು ನನಗೆ ಅಪ್ಪಣೆಯಾಯಿತು. ಆತ ಆ ನಗರಕ್ಕೆ ಮುತ್ತಿಗೆ ಹಾಕಿದ್ದ. ಸ್ವಲ್ಪ ಕಾಲದಲ್ಲಿ ನಾನು ಆ ಊರನ್ನು ಮುಟ್ಟಿ ಹೆಚ್ಚು ಕಟಪಟಿಯಿಲ್ಲದೆ ತಂದಿದ್ದ ಸರಕುಗಳನ್ನು ಅವನಿಗೆ ಮಾರಿದೆ. ನನಗೆ ಕೊಡಬೇಕಾದ ಹಣಕ್ಕೂ ಸೈನ್ಯದ ಖರ್ಚಿಗೆ ಬೇಕಾದ ಹಣಕ್ಕೂ ತಾನು ಪ್ರತಿ ದಿನ ಸೂರತ್ತಿನ ಹಾದಿ ಕಾಯುತ್ತಿರುವುದಾಗಿ ಆತ ನನಗೆ ತಿಳಿಸಿದ. ಹತ್ತು ಹನ್ನೆರಡು ದಿನಗಳು ಕಾದರೂ ದುಡ್ಡು ಕೊಡಲಿಲ್ಲ. ದಿನಾ ನನಗೂ ನನ್ನ ಆಳು ಕಾಳು ಮತ್ತು ದನಕರುಗಳಿಗೂ ಸಾಕಷ್ಟು ಅನ್ನ-ಆಹಾರಗಳನ್ನು ಒದಗಿಸುತ್ತಿದ್ದನು. ಪ್ರತಿ ದಿನವೂ ನನ್ನನ್ನು ತನ್ನ ಮನೆಗೆ ಭೋಜನಕ್ಕೆ ಕರೆಯುತ್ತಿದ್ದನು. ಒಂದು ದಿನ ನಾನು ಹಣ ಕೊಡದಿದ್ದರೆ ಹೊರಟುಹೋಗುತ್ತೇನೆ ಎಂದಾಗ, ತನ್ನ ಖಜಾಂಚಿಗೆ ಹೇಳಿ ಔರಂಗಬಾದಿನ ಮೇಲೆ ಹುಂಡಿ ಪತ್ರವನ್ನು (ಹಣ ವಿನಿಮಯ ಪತ್ರವನ್ನು) ಕೊಡಿಸಿದ. ಇದರಿಂದ ನನಗೆ ಸಮಾಧಾನವಾಯಿತು. ಏಕೆಂದರೆ, ಗೋಲ್ಕೊಂಡಕ್ಕೆ ಹೋಗಬೇಕಾದರೆ ಆ ಊರ ಮೇಲೆಯೇ ಹೋಗಬೇಕಾಗಿತ್ತು. ದುಡ್ಡು ಹೊತ್ತುಕೊಂಡುಹೋಗುವುದು ತಪ್ಪಿತು, ಸಧ್ಯ. ಖಾನನಿಂದ ಬೀಳ್ಕೊಳ್ಳುವಾಗ ಆತ ಹೇಳಿದ, ನಾನು ಮತ್ತೊಮ್ಮೆ ಇಂಡಿಯಾಕ್ಕೆ ಬಂದರೆ ತಪ್ಪದೆ ತನ್ನನ್ನು ಕಾಣಬೇಕೆಂದು. ಆದರಂತೆ ನಾನು ನನ್ನ ಆರನೆಯ ಪ್ರವಾಸದಲ್ಲಿಯೂ ಆತನನ್ನು ಕಾಣದೆ ಬಿಡಲಿಲ್ಲ. ನಾನು

ಹೋದಾಗ ಆತ ಬಂಗಾಳದಲ್ಲಿದ್ದ. ನಾನು ಸೂರತ್ತಿನಿಂದ ಅಲ್ಲಿಗೆ ಹೋಗಿ ಪರ್ಷಿಯಾದ ರಾಜನಿಗೂ ಮೊಗಲ್ ಚಕ್ರವರ್ತಿಗೂ ಮಾತಲಾಗದೆ ಉಳಿದಿದ್ದ ಸಾಮಾನುಗಳನ್ನು ಅವನಿಗೆ ಮಾರಿದೆ.

ಔರಂಗಾಬಾದಿಗೆ ಹೋದಾಗ ಅಲ್ಲಿಯ ಷ್ರಾಫ್ ಹಳೆಯ ರೂಪಾಯಿಗಳ ಚೀಲ ಗಳನ್ನು ಕೊಟ್ಟು, ಶೇಕಡ ೨ರಷ್ಟು ಹಣವನ್ನು ಗಿಟ್ಟಿಸಿಕೊಳ್ಳಬೇಕೆಂದು ಮಾಡಿದ್ದ. ನಾನು ತಕರಾರು ಮಾಡಿದೆ. ಷೈಸ್ತಾಖಾನನಿಗೆ ದೂರುಹೇಳಲು ಒಬ್ಬ ಆಳನ್ನು ಕಳುಹಿಸಿದೆ. ಆದರೆ ಹೋದವನು ಬರಲಿಲ್ಲ. ನಾನೇ ಹೋಗುತ್ತೇನೆಂದು ಹೆದರಿಸಿದೆ. ಆಗ ಷ್ರಾಫ್ (ದ್ರವ್ಯವ್ಯವಹಾರಿ) ದಾರಿಗೆ ಬಂದ. ವಟ್ಟದಲ್ಲಿ, ಅಂದರೆ ತಾನು ಮುರಿದುಕೊಳ್ಳಬೇಕಾದ ದಳ್ಳಾಳಿ ಹಣದಲ್ಲಿ, ಶೇಕಡ ೧ರಷ್ಟು ಬಿಟ್ಟುಕೊಡಲು ಒಪ್ಪಿದ. ಈ ಸಂದರ್ಭದಲ್ಲಿ ನಾನು ಈ ಷ್ರಾಫರು ಹಾಗೂ ಇಡೀ ಇಂಡಿಯನರು ಎಷ್ಟು ಬುದ್ಧಿವಂತರೆಂಬುದನ್ನು ಹೇಳದೆ ಇರಲಾರೆ. ಚಿನ್ನವನ್ನು ಒರೆಗಲ್ಲಿನ ಮೇಲೆ ತಿಕ್ಕುವರಷ್ಟೆ. ಅದಕ್ಕೆ ಅಂಟಿಕೊಂಡಿರುವ ಚಿನ್ನ ನಮಗೆ ಲೆಕ್ಕವೇ ಇಲ್ಲ. ಆದರೆ ಷ್ರಾಫರು ಮೇಣದ ಉಂಡೆಯನ್ನು ಒರೆಗಲ್ಲಿನ ಮೇಲೆ ಆಡಿಸಿ, ಹಲವಾರು ವರ್ಷಗಳ ತರುವಾಯ ಅದರಲ್ಲಿ ಅಂಟಿಕೊಂಡ ಚಿನ್ನವನ್ನು ಪಡೆದು ಕೊಳ್ಳುತ್ತಾರೆ.

ಮೊಗಲ್ ಚಕ್ರಾಧಿಪತ್ಯದಲ್ಲಿ ಮತ್ತು ಗೋಲ್ಕೊಂಡ ಮತ್ತು ಬಿಜಾಪುರ ರಾಜ್ಯ ಗಳ ಕೆಲವು ಭಾಗಗಳಲ್ಲಿ ಉತ್ಪನ್ನವಾದ ವಸ್ತುಗಳನ್ನು ಸೂರತ್ತಿನ ಮೂಲಕ ಸಮುದ್ರದ ಮೇಲೆ ಏಷ್ಯಾ ಮತ್ತು ಯೂರೋಪುಗಳಿಗೆ ಕಳುಹಿಸುತ್ತಾರೆ. ಈ ವಸ್ತುಗಳನ್ನು ಕೊಳ್ಳಲು ಲಾಹೋರ್, ಆಗ್ರಾ, ಅಹಮದಾಬಾದ್, ಸೆರೋಂಜ್, ಬ್ರಹ್ಮಪುರ, ಡಾಕ್ಕಾ, ಪಟ್ನ, ಬನಾರಸ್, ಗೋಲ್ಕೊಂಡ, ದಖನ್, ಬಿಜಾಪುರ ಮತ್ತು ದೌಲತಾಬಾದ್‌ಗಳಿಗೆ ಹೋಗುವ ವರ್ತಕರು ಸೂರತ್ತಿನಿಂದ ಬೆಳ್ಳಿಯ ನಾಣ್ಯಗಳನ್ನು ತೆಗೆದುಕೊಂಡು ಹೋಗ ಬೇಕು. ಹಣ ಸಾಲದೆ ಬಂದರೆ ಸೂರತ್ತಿನಲ್ಲಿ ಕೊಡುತ್ತೇನೆಂದು ಹೇಳಿ ದುಬಾರಿ ಖರ್ಚಿ ನಲ್ಲಿ ಹುಂಡಿ ಪತ್ರವನ್ನು (ವಿನಿಮಯ ಪತ್ರವನ್ನು) ಪಡೆಯಬೇಕು. ಈ ವಿನಿಮಯ ದರ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುತ್ತದೆ. ದೌಲತಾಬಾದಿನಲ್ಲಿ ಶೇಕಡ ೧ ರಿಂದ ೧ ೧/೨ ಇದ್ದರೆ, ಲಾಹೋರಿನಲ್ಲಿ ಶೇಕಡ ೬ ೧/೪ ಇರುತ್ತದೆ.

ಕೆಲವು ವರ್ಷಗಳು ಈ ವಿನಿಮಯ ದರ ಶೇಕಡ ಒಂದೆರಡರಷ್ಟು ಹೆಚ್ಚಾಗುವು ದುಂಟು. ಕೆಲವು ರಾಜರುಗಳು ಅಥವಾ ಸಣ್ಣಪುಟ್ಟ ಪಾಳೆಯಗಾರರು ವ್ಯಾಪಾರದ ಸರಕುಗಳು ತಮ್ಮ ಗಡಿಯಲ್ಲಿ ಸಾಗುವಾಗ ಅವುಗಳ ಮೇಲೆ ಸುಂಕ ಕೊಡಬೇಕೆಂದು ಕೇಳುವುದು ಈ ಹೆಚ್ಚಿಗೆಗೆ ಕಾರಣ. ಆಗ್ರಾ ಮತ್ತು ಅಹಮದಾಬಾದ್ ಮಧ್ಯೆ ಇರುವ ಎರಡು ರಾಜರುಗಳ ಹೆಸರು ಹೇಳಬೇಕು. ಒಬ್ಬ ಅಂತಿವರದ (ಬಹುಶಃ ದಾಂತಿವಾಡದ) ರಾಜ; ಇನ್ನೊಬ್ಬ ಬೆರ್ನವಿನ (ಬಹುಶಃ ಉಂಗಾವ್) ರಾಜ.

ಹಡಗನ್ನು ಏರಲು ಸೂರತ್ತಿಗೆ ಬಂದರೆ ಅಲ್ಲಿಯೂ ಹೇರಳವಾದ ಹಣವನ್ನು

ನೋಡಬಹುದು. ಏಕೆಂದರೆ, ಇಂಡಿಯಾದ ಶ್ರೀಮಂತ ಸರದಾರರ ಮುಖ್ಯ ವ್ಯಾಪಾರ ವೆಂದರೆ ಹಣದ ವ್ಯಾಪಾರ. ಇವರು ತಮ್ಮ ಹಣವನ್ನು ಹಡಗಿನಲ್ಲಿ ಹೋರ್ಮುಸ್, ಬಸ್ಸೊರ, ಮೋಖಾ, ಬಂಟಾಂ, ಅಚನ್ ಮತ್ತು ಫಿಲಿಪೈನ್‌ಗಳಿಗೆ ಕಳುಹಿಸಿ, ಅಲ್ಲಿ ಅದನ್ನು ವಿನಿಮಯಮಾಡಿ ಲಾಭ ಸಂಪಾದಿಸುತ್ತಾರೆ. ಮೋಖಾ ಮತ್ತು ಬಸ್ಸೋರಾ ಗಳಲ್ಲಿ ಶೇಕಡ ೨೨ ರಿಂದ ೨೪ರ ದರದಲ್ಲಿ ಮತ್ತು ಹೋರ್ಮುಸ್ ರೇವುಪಟ್ಟಣದಲ್ಲಿ ಶೇಕಡ ೧೬ ರಿಂದ ೨೦ರ ದರದಲ್ಲಿ ವಿನಿಮಯ ನಡೆಯುತ್ತದೆ. ಆದರೆ ಬಿರುಗಾಳಿಯಿಂದಾಗಲಿ ಅಥವಾ ಮಲಬಾರ್ ಕಡಲುಗಳ್ಳರಿಂದಾಗಲಿ ಹಣ ಕಳೆದುಹೋದರೆ ಸಾಲಕೊಟ್ಟವರಿಗೆ ಲುಕ್ಸಾನು.

ಆಗ್ರಾಕ್ಕೆ ಹೊರಡುವುದಕ್ಕೆ ಮುಂಚೆ ಇಂಡಿಯಾದಲ್ಲಿ ಪ್ರಯಾಣಮಾಡಲು ಇರುವ ವಾಹನ ಸೌಕರ್ಯಗಳ ಬಗ್ಗೆ ಹೇಳುವುದು ಸೂಕ್ತವಾಗಿದೆ. ಫ್ರಾನ್ಸ್ ಅಥವಾ ಇಟಲಿ ದೇಶದಲ್ಲಿರುವ ವಾಹನ ಸೌಕರ್ಯ ಇಂಡಿಯಾದ ವಾಹನ ಸೌಕರ್ಯಕ್ಕಿಂತ ಹೆಚ್ಚು ಎಂದು ನಾನು ಹೇಳಲಾರೆ. ಪರ್ಷಿಯಾದಲ್ಲಿ ಪ್ರಯಾಣಮಾಡಬೇಕಾದರೆ ಕಾರವಾನ್ ಪದ್ಧತಿ ಇದೆ; ಕತ್ತೆ ಒಂಟೆ ಕುದುರೆಗಳ ಉಪಯೋಗವಿದೆ. ಇಂಡಿಯಾ ದಲ್ಲಿ ಇವು ಬೇಕಾಗಿಲ್ಲ. ಇಲ್ಲೆಲ್ಲಾ ಎತ್ತು ಅಥವಾ ಎತ್ತಿನ ಗಾಡಿಗಳ ಮೇಲೆಯೇ ಪ್ರಯಾಣ. ಏಕೆಂದರೆ ನೆಲ ಸಾಕಷ್ಟು ಮಟ್ಟಸವಾಗಿದೆ. ಪರ್ಷಿಯಾದಿಂದ ಇಲ್ಲಿಗೆ ಕುದುರೆಗಳನ್ನು ತರುವುದು ಕೇವಲ ತೋರಿಕೆಗಷ್ಟೇ ಹೊರತು ಸವಾರಿಗಲ್ಲ. ಪಾರಸಿ ಕುದುರೆಯನ್ನು ಗೌರವಕ್ಕಾಗಿ ಹಿಡಿಗುದುರೆಯಾಗಿ ಉಪಯೋಗಿಸುವುದಕ್ಕೋ ಅಥವಾ ಯಾವನಾದರೂ ಒಬ್ಬ ಶ್ರೀಮಂತನಿಗೆ ಮಾರುವುದಕ್ಕೋ ತರಬೇಕು.

ಒಂದೊಂದು ಎತ್ತಿನ ಮೇಲೆ ೩೦೦ರಿಂದ ೩೫೦ ಲೀವ್ರ್‌ಗಳಷ್ಟು[1] ತೂಕದ ಹೇರನ್ನು ಹೇರುತ್ತಾರೆ. ೧೦,೦೦೦ದಿಂದ ೨೦,೦೦೦ ಹೇರೆತ್ತುಗಳ ತಂಡವು ಅಕ್ಕಿ, ದವಸಧಾನ್ಯ, ಉಪ್ಪು—ಇವುಗಳನ್ನು ಹೇರಿಕೊಂಡು ಒಟ್ಟಿಗೆ ಹೋಗುವುದು ಅದ್ಭುತವಾಗಿ ಕಾಣುತ್ತದೆ. ಒಂಟೆಗಳನ್ನು ಸಹ ಇಂಥ ತಂಡಗಳಿಗೆ (ಕಾರ್‌ವಾನ್‌ಗಳಿಗೆ) ಉಪಯೋಗಿಸು ತ್ತಾರೆ. ಆದರೆ ಇದು ಬಹಳ ಅಪರೂಪ. ಅವುಗಳನ್ನು ಸಾಮಾನ್ಯವಾಗಿ ಶ್ರೀಮಂತರ ಮನೆಯ ಸಾಮಾನು ಸರಂಜಾಮುಗಳನ್ನು ಸಾಗಿಸುವುದಕ್ಕೆ ಉಪಯೋಗಿಸುತ್ತಾರೆ. ಸರಕುಗಳನ್ನು ಅತಿ ಜಾಗ್ರತೆಯಾಗಿ ಸೂರತ್ ಬಂದರಿಗೆ ಮುಟ್ಟಿಸಬೇಕಾದಾಗ ಎತ್ತಿನ ಗಾಡಿಗಳ ಬದಲು ಹೇರೆತ್ತುಗಳನ್ನು ಉಪಯೋಗಿಸುತ್ತಾರೆ. ಮೊಗಲ್ ಸಾಮ್ರಾಜ್ಯ ದಲ್ಲಿರುವ ಭೂಮಿಯೆಲ್ಲಾ ಸಾಗುವಳಿಯಲ್ಲಿರುವುದರಿಂದ ಭೂಮಿಯ ಸುತ್ತ ಕಂದಕ ಗಳನ್ನು ತೆಗೆದಿರುತ್ತಾರೆ. ಅಲ್ಲದೆ, ಪ್ರತಿಯೊಂದು ಕಡೆಯೂ ಕೆರೆಕುಂಟೆಗಳಿರುತ್ತವೆ.

---

[1]ಲೀವ್ರ್: ಒಂದು ಲೀವ್ರ್ ಎಂದರೆ ೧೬ ಔನ್ಸ್‌ಗಳು. ೬೯ ಲೀವ್ರ್‌ಗಳಿಗೆ ಒಂದು ಮಣ.

ಇವೆಲ್ಲ ಕಾರಣಗಳಿಂದ, ಪ್ರಯಾಣಮಾಡುವಾಗ ತುಂಬಾ ತೊಂದರೆಯಾಗುತ್ತದೆ. ಗಾಡಿಗಳ ತಂಡವೇನಾದರು ನಮ್ಮ ದಾರಿಗೆ ಎದುರು ಬಂದರೆ, ನಮಗೆ ಮುಂದೆ ಹೋಗಲು ದಾರಿ ಸಿಗಬೇಕಾದರೆ ಎರಡು ಮೂರು ದಿನಗಳ ಕಾಲ ಕಾಯಬೇಕು.

ಹೇರೆತ್ತುಗಳನ್ನು ಹೊಡೆಯುವವರು ಆ ಕೆಲಸ ಬಿಟ್ಟರೆ ತಮ್ಮ ಇಡೀ ಜೀವಮಾನದಲ್ಲಿ ಬೇರೊಂದು ಕೆಲಸವನ್ನು ಮಾಡುವುದಿಲ್ಲ. ಇವರಿಗೆ ಮನೆಮಠ ಎಂಬುದಿಲ್ಲ. ಒಂದು ಕಡೆ ನಿಲ್ಲದೆ ಹೆಂಡತಿ ಮಕ್ಕಳ ಸಮೇತ ಊರಿಂದೂರಿಗೆ ಹೋಗುತ್ತಾ ಇರುತ್ತಾರೆ. ಇವರಲ್ಲಿ ಕೆಲವರ ಬಳಿ ನೂರಾರು ಎತ್ತುಗಳಿರುತ್ತವೆ. ಇವರಿಗೆ ಒಬ್ಬ ಯಜಮಾನ ಇರುತ್ತಾನೆ. ಇವನು ರಾಜನೋಪಾದಿಯಲ್ಲಿ ಅವರ ಮೇಲೆ ಉಸ್ತುವಾರಿ ನೋಡಿಕೊಳ್ಳುತ್ತಾನೆ. ಈತ ಕುತ್ತಿಗೆಗೆ ಮುತ್ತಿನ ಸರ ಹಾಕಿಕೊಂಡು ರಾಜನಂತೆಯೇ ಕಾಣುತ್ತಾನೆ. ದವಸ ಧಾನ್ಯವನ್ನು ಹೇರಿಕೊಂಡು ಬಂದ ತಂಡಕ್ಕೆ ಎದುರಾಗಿ ಅಕ್ಕಿಯನ್ನು ಹೇರಿಕೊಂಡು ಇನ್ನೊಂದು ತಂಡ ಬಂದರೆ, ಅವೆರಡು ತಂಡಗಳ ನಡುವೆ ಭಾರಿ ಹೋರಾಟವೇ ನಡೆದು ರಕ್ತಪಾತವಾಗುವುದೂ ಉಂಟು[1].

ಇಂಡಿಯಾದಲ್ಲಿ ಈ ವಿಧದ ಸಾಗಾಣಿಕೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ವಿಗ್ರಹಾರಾಧಕರಲ್ಲಿರುವ 'ಮನ್ನಾರಿ' (Manari)ಗಳೆಂಬ ನಾಲ್ಕು ಬಗೆಯ ಬಣಗಳ ವಿಚಾರ ತಿಳಿದುಕೊಳ್ಳಬೇಕು. ಈ ಜನರು ನಾನು ಹೇಳಿದಂತೆ ಗುಡಾರಗಳಲ್ಲಿದ್ದುಕೊಂಡು, ಒಂದು ನಾಡಿನಿಂದ ಇನ್ನೊಂದು ನಾಡಿಗೆ ಆಹಾರ ವಸ್ತುಗಳನ್ನು ಸಾಗಿಸುವುದಲ್ಲದೆ ಬೇರೊಂದು ವೃತ್ತಿ ಮಾಡುವುದಿಲ್ಲ. ಒಂದು ಬಣದವರು ದವಸ ಧಾನ್ಯಗಳನ್ನೂ, ಇನ್ನೊಂದು ಬಣದವರು ಅಕ್ಕಿಯನ್ನೂ, ಮತ್ತೊಂದು ಬಣದವರು ಬೇಳೆಯನ್ನೂ, ಮಗದೊಂದು ಬಣದವರು ಉಪ್ಪನ್ನೂ ಸಾಗಿಸುತ್ತಾರೆ. ಈ ಬಣಗಳನ್ನು ಅವುಗಳ ಪುರೋಹಿತರ ಹಣೆಯ ಮೇಲಿನ ಲಾಂಛನದಿಂದ ಗುರುತಿಸಬಹುದು. ಮೊದಲನೇ ಬಣದ ಪುರೋಹಿತ ಹಣೆಗೆ ಕೆಂಪು ಗಂಧ ಹಚ್ಚಿ, ಅದನ್ನೇ ಮೂಗಿನವರೆಗೂ ಬಳಿದುಕೊಂಡು, ಅದಕ್ಕೆ ಒಂಬತ್ತೋ ಹನ್ನೆರಡೋ ಕಾಳುಗಳನ್ನು ಅಂಟಿಸಿಕೊಳ್ಳುತ್ತಾನೆ. ಎರಡನೆಯ ಬಣದ ಪುರೋಹಿತ ಹಳದಿಯ ಗಂಧದ ತಿಲಕ ಇಟ್ಟುಕೊಂಡು, ಅದಕ್ಕೆ ಅಕ್ಕಿಕಾಳನ್ನು ಅಂಟಿಸಿಕೊಳ್ಳುತ್ತಾನೆ. ಮೂರನೆಯ ಬಣದ ಪುರೋಹಿತ ಬೂದುಬಣ್ಣದ ಗಂಧವನ್ನು ಹಣೆಗೆ ಲೇಪಿಸಿಕೊಂಡು ಸಾವೆ ಅಥವಾ ರಾಗಿಯ ಜಾತಿಯ ಕಾಳನ್ನು ಅಂಟಿಸಿಕೊಂಡಿರುತ್ತಾನೆ; ಭುಜಗಳಿಗೂ ಗಂಧ ಹಚ್ಚಿಕೊಂಡಿರುತ್ತಾನೆ. ಆದರೆ ಭುಜಕ್ಕೆ ಕಾಳನ್ನು

---

[1]ಎತ್ತಿನ ಗಾಡಿಗಳ ಮೇಲೆ ಅಥವಾ ಹೇರೆತ್ತುಗಳ ಮೇಲೆ ದವಸದಾನ್ಯಗಳನ್ನೂ, ಮತ್ತಿತರ ಸರಕುಗಳನ್ನೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸುತ್ತಿದ್ದವರು ಸಾಮಾನ್ಯವಾಗಿ ಬಣಜಾರರು. ರೈಲು ಬಂದಮೇಲೆ ಈ ತರಹ ಸಾಗಾಣಿಕೆ ಕಡಿಮೆಯಾಗುತ್ತಾ ಬಂದು, ಈಗಂತೂ ನಿಂತೇಹೋಗಿದೆ ಎಂದು ಹೇಳಬಹುದು.



ತಾಜ್‌ಮಹಲ್



ಕೊಹಿನೂರು ವಜ್ರ–ಕತ್ತರಿಸುವುದಕ್ಕೆ ಮುಂಚೆ ಮತ್ತು ಆಮೇಲೆ



ಮೊರಾದ್ ಭಕ್ಷ್



ಸುಲ್ತಾನ್ ಶೂಜಾ—ಅಂತಃಪುರದಲ್ಲಿ

ಅಂಟಿಸಿಕೊಂಡಿರುವುದಿಲ್ಲ. ನಾಲ್ಕನೇ ಬಣದವರ ಪುರೋಹಿತ ಒಂದು ಸಣ್ಣ ಚೀಲದಲ್ಲಿ ಉಪ್ಪಿನ ಉಂಡೆಯೊಂದನ್ನು ಹಾಕಿ, ಅದನ್ನು ಕೊರಳಿನಲ್ಲಿ ನೇತುಹಾಕಿಕೊಂಡಿರುತ್ತಾನೆ. ಈ ಉಪ್ಪಿನ ಉಂಡೆಯು ಚೀಲದ ತೂಕ ೮-೧೦ ಲೀವ್ರ್‌ಗಳಷ್ಟು ಇರುತ್ತದೆ. ತೂಕ ಹೆಚ್ಚು ಇದ್ದಷ್ಟೂ ಅವರ ಮರ್ಯಾದೆ ಹೆಚ್ಚು. ಇವರು ಪ್ರತಿ ದಿನ ಬೆಳಗ್ಗೆ ಪ್ರಾರ್ಥನೆಮಾಡುವಾಗ ಹೊಟ್ಟೆಯನ್ನು ಬಡಿದುಕೊಳ್ಳುತ್ತಾರೆ. ಈ ಬಣಗಳವರೆಲ್ಲರು ಸಾಮಾನ್ಯವಾಗಿ ಅವರ ಪುರೋಹಿತನು ಏನೋ ಬರೆದಿರುವ ತಾಯಿತಿಯ ಬೆಳ್ಳಿಯ ಕರಡಿಗೆ ಪೋಣಿಸಿದ ದಾರವನ್ನು ಹೆಗಲಿಗೆ ಅಡ್ಡಡ್ಡವಾಗಿ ಹಾಕಿಕೊಂಡಿರುತ್ತಾರೆ. ಈ ಕರಡಿಗೆಯನ್ನು ಅವರ ಎತ್ತುಗಳಿಗೂ ತೊಡಿಸಿರುತ್ತಾರೆ. ಇವರಿಗೆ ಹುಟ್ಟಿದ ಕರುಗಳ ಮೇಲೆ ತಮ್ಮ ಮಕ್ಕಳ ಮೇಲಿನಷ್ಟೇ ಮಮತೆ. ಮಕ್ಕಳಿಲ್ಲದಿದ್ದರಂತೂ ಆ ಎಳೆಗರುಗಳ ಮೇಲೆ ಅವರಿಗೆ ಇನ್ನೂ ಹೆಚ್ಚು ಮಮತೆ.

ಇವರ ಹೆಂಗಸರು ಸೊಂಟದಿಂದ ಕೆಳಕ್ಕೆ ಬೆಳ್ಳಗಿರುವ ಇಲ್ಲವೆ ಬಣ್ಣ ಹಾಕಿದ ಸಾಮಾನ್ಯ ಬಟ್ಟೆಯನ್ನು ಸುತ್ತಿಕೊಳ್ಳುತ್ತಾರೆ. ಸೊಂಟದಿಂದ ಮೇಲಿನ ಭಾಗವನ್ನು ಬಗೆಬಗೆಯ ಹೂಗಳಂತೆ ಹಚ್ಚೆ ಹೊಯ್ಯಿಸಿ ಅಲಂಕಾರಮಾಡಿಕೊಂಡಿರುತ್ತಾರೆ. ಹೀಗೆ ಹೂವಿನ ಹಚ್ಚೆ ಹೊಯ್ಯಿಸಿ ಅದಕ್ಕೆ ಯಾವುದೋ ಬೇರಿನ ರಸದಿಂದ ವಿಧವಿಧವಾದ ಬಣ್ಣ ಹಾಕುತ್ತಾರೆ. ಆಗ ಅವರ ಚರ್ಮವು ಹೂವನ್ನು ನೇಯ್ದ ಬಟ್ಟೆಯಂತೆ ಕಾಣುತ್ತದೆ.[1]

ಬೆಳಗ್ಗೆ ಹೇರೆತ್ತುಗಳ ಮೇಲೆ ಗಂಡಸರು ಸರಕುಗಳನ್ನು ಹೇರುತ್ತಿದ್ದರೆ, ಹೆಂಗಸರು ಗುಡಾರಗಳನ್ನು ಮಡಿಸಿ ಅವುಗಳನ್ನು ಬಸ್ತುಕಟ್ಟುವ ಕೆಲಸದಲ್ಲಿ ತೊಡಗಿರುತ್ತಾರೆ. ಆಯಾ ತಂಡವನ್ನು ಅನುಸರಿಸುವ ಪುರೋಹಿತ ಬಿಡಾರ ಹಾಕಿದ್ದ ಮೈದಾನದಲ್ಲಿ ಸ್ವಚ್ಛವಾದ ಒಂದು ಕಡೆ ಆರೇಳು ಅಡಿ ಎತ್ತರದ ಗಳುವಿಗೆ ಸುತ್ತಿಕೊಂಡಿರುವ ಸರ್ಪದ ಮಾದರಿಯ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡುತ್ತಾನೆ. ತಂಡದವರೆಲ್ಲಾ ಒಬ್ಬೊಬ್ಬರಾಗಿ ಆ ವಿಗ್ರಹಕ್ಕೆ ನಮಸ್ಕಾರಮಾಡುತ್ತಾರೆ. ಹೆಣ್ಣುಮಕ್ಕಳು ಅದನ್ನು ಮೂರು ಸಲ ಪ್ರದಕ್ಷಿಣೆ ಮಾಡುತ್ತಾರೆ. ಹೀಗೆ ಮಾಡಿದ ತರುವಾಯ ಪುರೋಹಿತನು ಆ ಸರ್ಪವಿಗ್ರಹವನ್ನು ಬಹಳ ಎಚ್ಚರಿಕೆಯಿಂದ ತೆಗೆದುಕೊಂಡು ಅದಕ್ಕಾಗಿ ಮೀಸಲಾದ ಎತ್ತಿನ ಮೇಲೆ ಇಡುತ್ತಾನೆ.

ಗಾಡಿಗಳ ತಂಡದಲ್ಲಿ ಸಾಮಾನ್ಯವಾಗಿ ೨೦೦ ಕ್ಕಿಂತ ಹೆಚ್ಚು ಗಾಡಿಗಳಿರುವುದಿಲ್ಲ. ಒಂದೊಂದು ಗಾಡಿಯನ್ನು ಹತ್ತು ಹನ್ನೆರಡು ಎತ್ತುಗಳು ಎಳೆಯುತ್ತವೆ. ಒಂದೊಂದು ಗಾಡಿಯನ್ನು ನೋಡಿಕೊಳ್ಳಲು ನಾಲ್ಕು ಮಂದಿ ಆಳುಗಳಿರುತ್ತಾರೆ. ಮಾಲಿನ ಮಾಲೀಕ ಈ

---

[1] ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿ ಇಡೀ ಏಷ್ಯಾದಲ್ಲಿದ್ದಿತು. ಆ ಬಗ್ಗೆ ಹಾಗೂ ಹಲ್ಲನ್ನು ಸೌಂದರ್ಯಕ್ಕಾಗಿ ಕಪ್ಪುಮಾಡಿಕೊಳ್ಳುವ ಪದ್ಧತಿಯ ಬಗ್ಗೆ ಮಾರ್ಕೊ ಪೋಲೊ ಮೊದಲಾದ ಪ್ರಾರಂಭಿಕ ಪ್ರವಾಸಿಗರು ತಿಳಿಸಿದ್ದಾರೆ.

ಆಳುಗಳ ಖರ್ಚುವೆಚ್ಚವನ್ನು ವಹಿಸಿಕೊಳ್ಳುತ್ತಾನೆ. ಈ ನಾಲ್ಕು ಆಳುಗಳಲ್ಲಿ ಇಬ್ಬಿಬ್ಬರು ಗಾಡಿಯ ಆ ಕಡೆ ಈ ಕಡೆ ಇದ್ದುಕೊಂಡು, ಗಾಡಿಗೆ ಬಿಗಿದ ಎರಡು ಜೊತೆ ಹಗ್ಗಗಳ ತುದಿಗಳನ್ನು ಹಿಡಿದುಕೊಂಡು, ಗಾಡಿಯು ಮಗುಚಿಕೊಳ್ಳದಂತೆ ನೋಡಿಕೊಳ್ಳುತ್ತಾರೆ.

ಆಗ್ರಾ ಮತ್ತು ಮೊಗಲ್ ಚಕ್ರಾಧಿಪತ್ಯದ ಇತರ ಕಡೆಗಳಿಂದ ಸೂರತ್ತಿಗೆ ಬಂದ ಗಾಡಿಗಳು ಹಿಂದಿರುಗುವಾಗ ಆಗ್ರಾ ಮತ್ತು ಜಹಾನಾಬಾದ್‌ಗಳಿಗೆ ಸುಣ್ಣವನ್ನು ಹೇರಿಕೊಂಡು ಹೋಗುತ್ತವೆ. ಈ ಸುಣ್ಣ ಬ್ರೋಚ್‌ನಿಂದ ಸೂರತ್ತಿಗೆ ಬರುತ್ತದೆ. ಉಪಯೋಗಿಸಿದ ಕೂಡಲೇ ಈ ಸುಣ್ಣ ಅಮೃತಶಿಲೆಯಷ್ಟು ಗಟ್ಟಿಯಾಗಿಬಿಡುತ್ತದೆ. ಈ ಸುಣ್ಣದಿಂದ ಚಕ್ರವರ್ತಿಗೆ ಬಹಳ ಲಾಭವಿದೆ.

ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಲು ಇಂಡಿಯಾದಲ್ಲಿ ಎತ್ತುಗಳನ್ನು ಉಪಯೋಗಿಸಬೇಕು. ಆದರೆ ಇಂತಹ ಎತ್ತುಗಳ ಕೋಡುಗಳು ಒಂದು ಅಡಿಗಿಂತ ಹೆಚ್ಚು ಉದ್ದವಾಗಿರಬಾರದು. ಉದ್ದವಾದ ಕೋಗಳಿದ್ದರೆ, ಎತ್ತು ನೊಣ ಓಡಿಸಲು ಆ ಕಡೆ ಈ ಕಡೆ ತಲೆ ಅಲ್ಲಾಡಿಸಿದಾಗ ಅವು ನಮ್ಮ ಹೊಟ್ಟೆ ತಿವಿಯಬಹುದು. ಎತ್ತಿಗೆ ಮೂಗ್ಗುದಾರ ಹಾಕಿರುತ್ತಾರೆ. ಮಟ್ಟಸವಾದ ಭೂಮಿ ಇರುವ ಕಡೆ ಎತ್ತಿಗೆ ಲಾಳ ಕಟ್ಟಿಸಿರುವುದಿಲ್ಲ. ಕಲ್ಲುಗಿಲ್ಲು ಇರುವ ಪ್ರದೇಶಗಳಲ್ಲಿ ಎತ್ತಿಗೆ ಲಾಳ ಕಟ್ಟಿಸಿರುತ್ತಾರೆ.

ಸವಾರಿಗೆಂದೇ ಮಾಡಿದ ಇಬ್ಬರು ಕುಳಿತುಕೊಳ್ಳಬಹುದಾದ ಮತ್ತು ಹಗುರವಾದ ಗಾಡಿಗಳಿರುತ್ತವೆ. ಆದರೆ ಇವುಗಳಲ್ಲಿ ಸಾಮಾನು ಸರಂಜಾಮುಗಳನ್ನು ಹಾಕಿಕೊಂಡರೆ ಒಬ್ಬನು ಮಾತ್ರ ಕುಳಿತುಕೊಳ್ಳಲು ಸಾಧ್ಯ. ಸಾಮಾನುಗಳನ್ನು ಇಡಲು ಗಾಡಿಗಳ ಕೆಳಗೂ ಜಾಗ ಮಾಡಿರುತ್ತಾರೆ. ಈ ಗಾಡಿಗೆ ಒಂದು ಜೊತೆ ಎತ್ತು ಕಟ್ಟುತ್ತಾರೆ. ನಾನು ನಮ್ಮ ಯೂರೋಪಿಯನ್ ಮಾದರಿಯಲ್ಲಿ ಒಂದು ಗಾಡಿ ಮಾಡಿಸಿ, ಅದಕ್ಕೆ ೬೦೦ ರೂಪಾಯಿ ಕೊಟ್ಟು ಒಂದು ಜೊತೆ ಎತ್ತುಗಳನ್ನು ಕೊಂಡುಕೊಂಡೆ. 'ಒಂದು ಜೊತೆ ಎತ್ತಿಗೆ ಇಷ್ಟು ಬೆಲೆಯೆ?" ಎಂದು ನೀವು ಆಶ್ಚರ್ಯಪಡಬೇಡಿ. ಇಂಡಿಯಾದ ಎತ್ತುಗಳು ಬಹಳ ಗಟ್ಟಿಮುಟ್ಟಾದುವು. ಕುಲುಕೋಟದಲ್ಲಿ ಕೆಲವು ಎತ್ತುಗಳು ದಿನಕ್ಕೆ ೧೨ರಿಂದ ೧೫ ಹರಿದಾರಿಗಳಷ್ಟು ದೂರದಂತೆ ೬೦ ದಿನಗಳು ಒಂದೇ ಸಮನೆ ಹೋಗಬಲ್ಲವು. ಅರ್ಧದಾರಿ ಸಾಗಿದ ತರುವಾಯ ಎತ್ತುಗಳಿಗೆ ಬೆಣ್ಣೆ ಮತ್ತು ಬೆಲ್ಲದಲ್ಲಿ ಮಿದಿದ ಗೋಧಿಹಿಟ್ಟಿನ ಎರಡು ಮೂರು ಉಂಡೆಗಳನ್ನು ತಿನ್ನಿಸುತ್ತಾರೆ. ಸಂಜೆ ಅರ್ಧಗಂಟೆಯ ಹೊತ್ತು ನೆನೆಹಾಕಿದ ಕಡಲೆಕಾಳು ಒಡಕಲನ್ನು ತಿನ್ನಿಸುತ್ತಾರೆ. ಗಾಡಿಯ ಬಾಡಿಗೆ ದಿನಕ್ಕೆ ಒಂದು ರೂಪಾಯಿ. ಸೂರತ್ತಿನಿಂದ ಆಗ್ರಾಕ್ಕೆ ೩೫–೪೦ ದಿನಗಳ ಪ್ರಯಾಣ. ಇಡೀ ಪ್ರಯಾಣಕ್ಕೆ ೪೦ ರಿಂದ ೪೫ ರೂಪಾಯಿ ಬಾಡಿಗೆ ಆಗುತ್ತದೆ. ಸೂರತ್ತಿನಿಂದ ಗೋಲ್ಕೊಂಡವೂ ಅಷ್ಟೇ ದೂರ ; ಮತ್ತು ಅಷ್ಟೇ ಬಾಡಿಗೆ.

ನಿರಾಯಾಸವಾಗಿ ಪ್ರಯಾಣಮಾಡಬೇಕೆನ್ನುವವರು ಪಲ್ಲಂಕೀನ್ (ಪಲ್ಲಕ್ಕಿ)ನಲ್ಲಿ ಹೋಗುತ್ತಾರೆ. ಇದನ್ನು ಹೆಚ್ಚು ಹೆಚ್ಚೆಂದರೆ ಹಿಂದೆ ಮೂವರು, ಮುಂದೆ ಮೂವರು

ಹೊರುತ್ತಾರೆ. ಹುಟ್ಟಿದಾಗಿನಿಂದಲೂ ಪಲ್ಲಕ್ಕಿ ಹೊತ್ತು ಹೊತ್ತು ಪಾಟಾಗಿರುವ ಕಾರಣ ಇವರು ಪ್ಯಾರಿಸ್‌ನಲ್ಲಿ ನಮ್ಮ 'ಚೇರ್‌ಮನ್'[1] ಪ್ರಯಾಣಮಾಡುವುದಕ್ಕಿಂತ ಹೆಚ್ಚು ವೇಗದಲ್ಲಿ ಹೋಗುತ್ತಾರೆ. ವಾತುರದಲ್ಲಿ ಹೋಗಬೇಕೆಂದರೆ ೧೨ ಜನರನ್ನು ನೇಮಿಸಿಕೊಳ್ಳಬೇಕು. ಇವರು ದಿನಕ್ಕೆ ೧೩ ಅಥವಾ ೧೪ ಹರಿದಾರಿಗಳ ದೂರ ಪ್ರಯಾಣಮಾಡಬಲ್ಲರು. ಆಗಾಗ್ಗೆ ಈ ಜನ ಹೆಗಲು ಬದಲಾಯಿಸಿಕೊಳ್ಳುತ್ತಾರೆ. ಎಲ್ಲಾ ಸೇರಿ ಒಬ್ಬನಿಗೆ ತಿಂಗಳಿಗೆ ನಾಲ್ಕು ರೂಪಾಯಿ ಕೂಲಿ, ಅಷ್ಟೆ. ಬಹಳ ದೂರ ಪ್ರಯಾಣ ಮಾಡಬೇಕಾದರೆ, ಅಂದರೆ ೬೦ ದಿನಗಳಿಗಿಂತ ಹೆಚ್ಚು ಕಾಲ ಸಂಚರಿಸುವಾಗ ದಿನಕ್ಕೆ ಐದು ರೂಪಾಯಿ ಕೊಡಬೇಕಾಗುತ್ತದೆ.

ಇಂಡಿಯಾದಲ್ಲಿ ಗಾಡಿಯ ಮೇಲಾಗಲಿ ಪಲ್ಲಕ್ಕಿಯ ಮೇಲಾಗಲಿ ದೊಡ್ಡ ಮನುಷ್ಯನಂತೆ ಪ್ರಯಾಣಮಾಡಬೇಕಾದರೆ ೨೦–೩೦ ಸಶಸ್ತ್ರ ಸಿಪಾಯಿಗಳನ್ನು ಕರೆದುಕೊಳ್ಳುವುದು ಒಳ್ಳೆಯದು. ಇವರಿಗೂ ಗಾಡಿಯವರಿಗೆ ಕೊಟ್ಟಷ್ಟೆ ಕೂಲಿ. ಇವರಲ್ಲಿ ಕೆಲವರು ಬಿಲ್ಲುಬಾಣಗಳಿಂದಲೂ ಮತ್ತೆ ಕೆಲವರು ಬಂದೂಕುಗಳಿಂದಲೂ ಸಜ್ಜಿತರಾಗಿರುತ್ತಾರೆ.

ಇನ್ನೂ ಹೆಚ್ಚಿನ ಮರ್ಯಾದೆ ಬೇಕೆಂದರೆ ಒಂದು ಬಾವುಟವನ್ನು ಹಿಡಿಸಿಕೊಂಡು ಹೋಗಬೇಕು. ಕಂಪೆನಿಯ ಇಂಗ್ಲಿಷರೂ ಡಚ್ಚರೂ ಹೀಗೆ ಮಾಡುತ್ತಾರೆ. ಯಾವ ಊರಿನಲ್ಲಿ ಈ ಶಸಸ್ತ್ರ ಜೆಂಗಾವಲಿಗರನ್ನು ನೇಮಿಸಿಕೊಳ್ಳಲಾಗುವುದೋ ಆ ಊರಿನ ಪಟೇಲ ಇವರ ನಂಬಿಕೆಯ ಬಗ್ಗೆ ಜವಾಬ್ದಾರಿ ವಹಿಸುತ್ತಾನೆ. ಇವರು ಪಟೇಲರಿಗೆ ತಲಾ ಒಂಡೊಂದು ರೂಪಾಯಿ ಕೊಡುತ್ತಾರೆ.

ದೊಡ್ಡ ಊರುಗಳಲ್ಲಿ ಸಾಮಾನ್ಯವಾಗಿ ಒಬ್ಬ ಮಹಮ್ಮದೀಯ ಕೊತ್ವಾಲ ಇರುತ್ತಾನೆ. ಅಲ್ಲಿ ನಿಮಗೆ ಕುರಿ, ಕೋಳಿ ಮತ್ತು ಪಾರಿವಾಳಗಳು ಬೆಲೆಗೆ ಸಿಕ್ಕುತ್ತವೆ. ಬನಿಯರು[2] ಇರುವ ಕಡೆ ಹಿಟ್ಟು, ಅಕ್ಕಿ, ತರಕಾರಿ ಮತ್ತು ಹಾಲು ಮಾತ್ರ ಸಿಕ್ಕುತ್ತವೆ.

ಇಂಡಿಯಾದ ಬಿಸಿಲಿನ ಬೇಗೆಯ ಕಾರಣ ಜನರು ಸಾಮಾನ್ಯವಾಗಿ ರಾತ್ರಿ ಹೊತ್ತು ಪ್ರಯಾಣಮಾಡಿ, ಹಗಲಿನ ವೇಳೆ ವಿಶ್ರಾಂತಿ ಪಡೆಯುತ್ತಾರೆ. ರಾತ್ರಿ ಹೊತ್ತು ಹೆಬ್ಬಾಗಿಲುಗಳನ್ನು ಹಾಕುವ ಪದ್ಧತಿ ಇರುವಂತಹ ನಗರಗಳನ್ನು ಸೂರ್ಯಾಸ್ತಮಕ್ಕೆ ಮುಂಚೆಯೇ ಬಿಡಬೇಕು. ಅಂಥ ನಗರಗಳಿಂದ ರಾತ್ರಿ ಹೊತ್ತು ಹೊರಗೆ ಹೋಗಲು

---

[1] ಚೇರ್‌ಮನ್ (Chairman) : ಅಡ್ಡೆಗಳ ಮೇಲೆ ಜೋಡಿಸಿದ ಕುರ್ಚಿಯ ಮೇಲೆ ಕುಳಿತು ಸಂಚಾರಮಾಡುವ ಪದ್ಧತಿ ಎಲಿಜಬತ್ ರಾಣಿಯ ಕಾಲದಿಂದ (೧೬ನೇ ಶತಮಾನದಲ್ಲಿ) ೧೭ನೇ ಶತಮಾನದವರೆಗೆ ಯೂರೋಪಿನಲ್ಲಿ ಇದ್ದಿತು. ಈ ವಾಹನವನ್ನು ಹೊರುವವರನ್ನು 'ಚೇರ್‌ಮನ್' ಅಥವಾ ಕುರ್ಚಿವಾಹನವನ್ನು ಹೊರುವವರು ಎಂದು ಇಲ್ಲಿ ಟಾವೆರ್‌ನ್ಯೇ ಸೂಚಿಸಿರಬಹುದು.

[2] ಬನಿಯ : ಬಣಜಿಗ, ವ್ಯಾಪಾರಿ.

ಯಾರನ್ನೂ ಬಿಡುವುದಿಲ್ಲ. ಏಕೆಂದರೆ, ಆ ನಗರದ ಕೊತ್ವಾಲ ಕಳ್ಳತನ ಮುಂತಾದುವುಗಳಿಗೆ ಜವಾಬ್ದಾರ. ನಾನು ಅಂಥ ಊರುಗಳಿಂದ ಸಂಜೆಗೆ ಮುಂಚೆಯೇ ಹೊರಟು, ಊರ ಹೊರಗೆ ಮರದ ಕೆಳಗೆ ತಂಗುತ್ತಿದ್ದೆ.

ಇಂಡಿಯಾದಲ್ಲಿ ದೂರವನ್ನು 'ಗೋಸ್' (gos=ಗೋವುದ) ಮತ್ತು ಕೋಸ್ (coss=ಕ್ರೋಶ)ಗಳಿಂದ ಅಳೆಯುತ್ತಾರೆ. ಒಂದು ಗೋಸ್ ನಮ್ಮ ನಾಲ್ಕು ಹರಿದಾರಿಗಳಿಗೆ (league) ಸಮ. ಕೋಸ್ ಒಂದು ಹರಿದಾರಿಗೆ ಸಮ.

ಈಗ ಸೂರತ್ತನ್ನು ಬಿಟ್ಟು ಆಗ್ರಾಕ್ಕೂ ಜಹಾನಾಬಾದಿಗೂ ಹೊರಟಾಗ ದಾರಿಯಲ್ಲಿ ಕಂಡ ವಿಷಯಗಳನ್ನು ತಿಳಿಸುತ್ತೇನೆ:

ಸೂರತ್ತಿನಿಂದ ಆಗ್ರಾಕ್ಕೆ ಎರಡು ದಾರಿಗಳಿವೆ. ಒಂದು ಬುರ್ಹಾನ್‌ಪುರ ಮತ್ತು ಸಿರೋಂಜ್ ಮೂಲಕ ಹೋಗುವ ದಾರಿ. ಇನ್ನೊಂದು, ಅಹಮದಾಬಾದ್ ಮೂಲಕ ಹೋಗುವ ದಾರಿ. ಈಗ ಮೊದಲನೇ ಮಾರ್ಗದ ವಿಚಾರ ಕೇಳಿ. ಸೂರತ್ತಿನಿಂದ ಹೊರಟರೆ ಬಾರ್ದೋಲಿ ಮುಖಾಂತರ ಕೆರ್ಕೊಯ ಎಂಬ ಊರಿಗೆ ಹೋಗುತ್ತೇವೆ. ಇಲ್ಲಿ ಷಾಜಹಾನನ ಮಗಳಾದ ಬೇಗಂ ಸಾಹೇಬಳು ಕಟ್ಟಿಸಿದ ವಿಶಾಲವಾದ ಕಾರವಾನ್ ಸರಾಯ್ ಇದೆ. ಇಲ್ಲಿಂದ ಮುಂದೆ ಸಿಕ್ಕುವುದು ನವಪುರ. ಇದೊಂದು ದೊಡ್ಡ ಹಳ್ಳಿ. ಹಳ್ಳಿಯು ತುಂಬ ಮಗ್ಗದವರಿದ್ದಾರೆ. ಆದರೆ ಅಕ್ಕಿಯ ವ್ಯಾಪಾರವೇ ಈ ಊರಿನ ದೊಡ್ಡ ವ್ಯಾಪಾರ. ಇಲ್ಲಿ ಬೆಳೆಯುವ ಅಕ್ಕಿ ಒಳ್ಳೆಯ ಸುವಾಸನೆಯುಳ್ಳದ್ದು. ಅಲ್ಲದೆ ಮಂಜುಗಡ್ಡೆಯಷ್ಟು ಬೆಳ್ಳಗಿರುತ್ತದೆ. ಬೇಯಿಸಿದಾಗ ಕಸ್ತೂರಿಯ ಪರಿಮಳ ಹೊರಡುತ್ತದೆ. ಇಂಡಿಯಾದ ಶ್ರೀಮಂತರು ಈ ಅಕ್ಕಿಯಲ್ಲದೆ ಬೇರೆ ಅಕ್ಕಿಯನ್ನು ತಿನ್ನುವುದಿಲ್ಲ. ಪರ್ಷಿಯಾದ ಯಾರಾದರೂ ಒಬ್ಬರಿಗೆ ಬಹುಮಾನ ಕೊಡಬೇಕೆಂದಿದ್ದರೆ, ಈ ಅಕ್ಕಿಯ ಒಂದು ಚೀಲ ತೆಗೆದುಕೊಂಡುಹೋಗುವುದು ಒಳ್ಳೆಯದು. ಈ ಅಕ್ಕಿ ಇಷ್ಟೊಂದು ಚೆನ್ನಾಗಿರಲು ಇಲ್ಲಿ ಹರಿಯುವ ತಪತಿ ನದಿಯ ನೀರೇ ಕಾರಣ.

ಮುಂದೆ ಹೋದರೆ ಸಿಕ್ಕುವುದು ಬುರ್ಹಾನ್‌ಪುರ. ಇಲ್ಲಿಯೇ ಈ ಪ್ರಾಂತದ ಸುಬೇದಾರ ಇರುವುದು. ಈ ಪ್ರಾಂತದ ಸುಬೇದಾರಿಕೆ ಹುದ್ದೆ ಬಹಳ ಮುಖ್ಯವಾದ್ದರಿಂದ ಅದು ಯಾವಾಗಲೂ ಮೊಗಲ್ ಚಕ್ರವರ್ತಿಯ ಮಕ್ಕಳಲ್ಲಿ ಒಬ್ಬನಿಗೆ ದೊರೆಯುತ್ತದೆ. ಈಗ ಚಕ್ರವರ್ತಿಯಾಗಿರುವ ಔರಂಗಜೇಬನು ಹಿಂದೆ ಬಹಳ ಕಾಲ ಇಲ್ಲಿಯ ಸುಬೇದಾರನಾಗಿದ್ದ. ಬುರ್ಹಾನ್‌ಪುರ ಮತ್ತು ಅದರ ಸುತ್ತಮುತ್ತಿನ ಊರುಗಳಲ್ಲಿ ಬಹಳ ತೆಳುವಾದ ಮಸ್ಲಿನ್ ಬಟ್ಟೆ ತಯಾರಾಗುತ್ತದೆ. ಇದನ್ನು ಪರ್ಷಿಯಾ, ತುರ್ಕಿ, ಮಾಸ್ಕೊವಿ, ಪೋಲೆಂಡ್, ಅರೇಬಿಯಾ, ಗ್ರ್ಯಾಂಡ್ ಕೈರೊ ಮತ್ತು ಇತರ ಸ್ಥಳಗಳಿಗೆ ರವಾನಿಸುತ್ತಾರೆ. ಕೆಲವು ತರಹ ಮಸ್ಲಿನ್ ಬಟ್ಟೆಗಳಿಗೆ ವಿಧ ವಿಧ ಬಣ್ಣ ಕಟ್ಟುತ್ತಾರೆ; ಹೂಗಳ ಅಲಂಕಾರ ಮಾಡುತ್ತಾರೆ. ಈ ತರದ ಬಟ್ಟೆಗಳನ್ನು ಹೆಂಗಸರು ಮುಖದ ಮುಸುಕುಗಳಿಗೂ, ತಲೆಗೆ ಕಟ್ಟುವ ವಸ್ತ್ರಗಳಿಗೂ ಉಪಯೋಗಿಸುತ್ತಾರೆ. ಹಾಸಿಗೆಯ ಮೇಲೆ ಹಾಸುವುದಕ್ಕೂ,

ಕರವಸ್ತ್ರಗಳಿಗೂ ಉಪಯೋಗಿಸುವುದುಂಟು. ಈ ಕರವಸ್ತ್ರಗಳು ನಶ್ಯ ಹಾಕುವ ನಮ್ಮ ಯೂರೋಪಿಯನರು ಉಪಯೋಗಿಸುವ ಕರವಸ್ತ್ರಗಳಂತೆ ಇರುತ್ತವೆ. ಕೆಲವು ಮಸ್ಲಿನ್ ಬಟ್ಟೆಗಳ ಅಂಚಿಗೆ ಒಂದೆರಡು ಎಳೆ ಜರಿ ಹಾಕಿರುತ್ತಾರೆ. ಮತ್ತೆ ಕೆಲವು ಬಟ್ಟೆಗಳ ಆ ಕಡೆ ಈ ಕಡೆ ತುದಿಗಳಲ್ಲಿ ಒಂದು ಅಂಗುಲದಿಂದ ಹತ್ತು ಹದಿನೈದು ಅಂಗುಲ ಅಗಲದಷ್ಟು ಜರತಾರಿ ನೆಯ್ದಿರುತ್ತಾರೆ. ಈ ಜರತಾರಿ ವಸ್ತ್ರಗಳಿಗೆ ಪೋಲೆಂಡ್‌ನಲ್ಲಿ ಒಳ್ಳೆ ಗಿರಾಕಿ. ಆದರೆ ಹಡಗಿನಲ್ಲಿ ಕಳುಹಿಸುವಾಗ ಸಮುದ್ರದ ಹವೆಯಿಂದ ಜರತಾರಿ ಕಪ್ಪಾಗದಂತೆ ಸರಿಯಾಗಿ ಕಟ್ಟಿ ಕಳುಹಿಸಬೇಕು. ಇಲ್ಲದಿದ್ದರೆ ವ್ಯಾಪಾರಿಗೆ ತುಂಬಾ ನಷ್ಟವಾಗುತ್ತದೆ. ಈ ತರಹ ವಸ್ತ್ರಗಳಲ್ಲಿ ಕೆಲವನ್ನು ಅರ್ಧ ಹತ್ತಿ ಇನ್ನರ್ಧ ಜರತಾರಿ ಹಾಕಿ ನೇಯ್ದಿರುತ್ತಾರೆ. ಇವನ್ನು 'ಒರ್ನಿ' (orni) ಎಂದು ಕರೆಯುತ್ತಾರೆ. ಈ ಒರ್ನಿ ವಸ್ತ್ರದ ಬೆಲೆ ೧೦೦ ರಿಂದ ೧೫೦ ರೂಪಾಯಿಗಳಷ್ಟಾಗುತ್ತದೆ. ಬಹಳ ಕಡಿಮೆ ಬೆಲೆ ಎಂದರೆ ಹತ್ತು ಹನ್ನೆರಡು ರೂಪಾಯಿಗಳು.

ಸೂರತ್ತಿನಿಂದ ಬುರ್ಹಾನ್‌ಪುರದವರೆಗೆ ೧೩೨ ಕೋಶಗಳು. ಇಂಡಿಯಾದ ಕೋಶಗಳಲ್ಲಿ ಈ ನಾಡಿನ ಕೋಶದ ದೂರ ಅತ್ಯಂತ ಸಣ್ಣ ಪ್ರಮಾಣದ್ದು. ಎತ್ತಿನ ಗಾಡಿ ಒಂದು ಗಂಟೆಯೊಳಗೆ ಎಷ್ಟು ದೂರ ಹೋಗಬಹುದೋ ಅಷ್ಟು ದೂರ ಇಲ್ಲಿಯ ಒಂದು ಕೋಶ.

ನಾನು ೧೬೪೧ರಲ್ಲಿ ಆಗ್ರಾದಿಂದ ಸೂರತ್ತಿಗೆ ಹಿಂದಿರುಗುವಾಗ ಬುರ್ಹಾನ್‌ಪುರದಲ್ಲಿ ಒಂದು ವಿಚಿತ್ರ ಪ್ರಸಂಗ ನಡೆಯಿತು. ಇಲ್ಲಿ ಚಕ್ರವರ್ತಿಯ ಹತ್ತಿರದ ಸಂಬಂಧಿಯೊಬ್ಬ ಸುಬೇದಾರನಾಗಿದ್ದ. ಆತನ ಬಳಿ ಒಬ್ಬ ಹುಡುಗ ಕೆಲಸಕ್ಕೆ ಇದ್ದ. ಈ ಹುಡುಗನ ಅಣ್ಣನೊಬ್ಬ ದರ್ವೇಶಿ.[1] ಈ ದರ್ವೇಶಿಯನ್ನು ಕಂಡರೆ ಊರಿನವರಿಗೆಲ್ಲ ತುಂಬಾ ಗೌರವ. ಸುಬೇದಾರ ಆ ಹುಡುಗನ ಮೇಲೆ ಅತ್ಯಾಚಾರ ನಡೆಸಲು ಹೋದಾಗ, ಆತ ಸುಬೇದಾರನನ್ನು ತಿವಿದು ಸಾಯಿಸಿಬಿಟ್ಟ. ಹಾಗೆ ಮಾಡಿದ ಆ ಹುಡುಗ ಹೊರಗೆ ಬಂದು ದರ್ವೇಶಿಗಳಿಗೂ ಫಕೀರರುಗಳಿಗೂ ಸುದ್ದಿ ತಿಳಿಸಿ, ಅವರ ಮೂಲಕ ಊರಿನ ಜನವೆಲ್ಲಾ ದಂಗೆ ಏಳುವಂತೆ ಮಾಡಿಬಿಟ್ಟ. ದಂಗೆಯೆದ್ದ ಜನ ಸುಬೇದಾರನ ಅರಮನೆಗೆ ನುಗ್ಗಲು ಹೋದರು. ಆಗ ಊರಿನ ದರೋಗನೂ ಕೆಲವು ಮುಖಂಡರೂ ಸೇರಿ 'ಆದದ್ದು ಆಗಿ ಹೋಯಿತು, ಸುಬೇದಾರ ರಾಜನ ಸಂಬಂಧಿಯಾದ್ದರಿಂದ ಒಂದಿಷ್ಟು ದಯದಾಕ್ಷಿಣ್ಯ ತೋರಿಸಬೇಕು' ಎಂದು ಕೇಳಿಕೊಂಡರು. ಅದೇ ರಾತ್ರಿ ಸುಬೇದಾರನ ಶವವನ್ನೂ ಅವನ ಅಂತಃಪುರದ ಜನರನ್ನೂ ಆಗ್ರಾಕ್ಕೆ ಕಳುಹಿಸಿಕೊಡಲಾಯಿತು. ಆಗ ಷಾಜಹಾನ್ ಆಳುತ್ತಿದ್ದ. ಸುಬೇದಾರನು ಸತ್ತ ಸುದ್ದಿ ಅವನಿಗೆ ಯಾವ ವ್ಯಸನವನ್ನೂ ಉಂಟು ಮಾಡಲಿಲ್ಲ. ಏಕೆಂದರೆ, ಅವನ ರಾಜ್ಯದಲ್ಲಿ ಯಾರು ಸತ್ತರೂ ಅವರ ಆಸ್ತಿ ಪಾಸ್ತಿ

---

[1] ದರ್ವೇಶಿ : (Dervish : Muslim ascetic) ಮುಸಲ್ಮಾನ ಯೋಗಿ.

ಯೆಲ್ಲಾ ಚಕ್ರವರ್ತಿಯ ಪಾಲು. ಸುಬೇದಾರನನ್ನು ಕೊಂದ ಆ ಹುಡುಗನಿಗೆ ಬಂಗಾಳದಲ್ಲಿ ಒಂದು ಸಣ್ಣ ಹುದ್ದೆ ಸಿಕ್ಕಿತು.

ಮುಂದೆ ಸಿಕ್ಕುವ ದೊಡ್ಡ ಊರೆಂದರೆ ಸಿರೋಂಜ್. ಇಲ್ಲಿಯ ನಿವಾಸಿಗಳಲ್ಲಿ ಬನಿಯರೇ ಹೆಚ್ಚು. ಇಲ್ಲಿ 'ಚಿಟ್' (chit : ಚೀಟಿ) ಎಂಬ ಬಣ್ಣದ ಕ್ಯಾಲಿಕೊ ಬಟ್ಟೆಗಳನ್ನು ತಯಾರಿಸುತ್ತಾರೆ. ಅಲ್ಲದೆ, ಬಹು ತೆಳುವಾದ ಮಸ್ಲಿನ್ ಬಟ್ಟೆಯನ್ನೂ ತಯಾರಿಸುತ್ತಾರೆ. ಈ ಬಟ್ಟೆ ಉಟ್ಟುಕೊಂಡರೆ ಮೈಯೆಲ್ಲಾ ಕಾಣಿಸುತ್ತದೆ. ಇದನ್ನು ರಫ್ತುಮಾಡಲು ವ್ಯಾಪಾರಸ್ಥರಿಗೆ ಅವಕಾಶಕೊಡುವುದಿಲ್ಲ. ತಯಾರಾದ ಬಟ್ಟೆಯೆಲ್ಲಾ ಮೊಗಲ್ ಚಕ್ರವರ್ತಿಯ ಅಂತಃಪುರದವರಿಗೆ ಮೀಸಲು. ಈ ಬಟ್ಟೆಗಳನ್ನು ತೊಟ್ಟ ಸ್ತ್ರೀಯರನ್ನು ಕುಣಿಸಿ ನಲಿಸಿ ರಾಜನೂ ಶ್ರೀಮಂತ ಸರದಾರರೂ ಖುಷಿಪಡುತ್ತಾರೆ.

ಸಿರೋಂಜ್ ಮತ್ತು ಆಗ್ರಾಗಳ ಮಧ್ಯೆ ಇರುವ ಭೂಮಿ ಉದ್ದಕ್ಕೂ ಒಂದೇ ತರಹ ಇದೆ. ಊರುಗಳು ಹತ್ತಿರ ಹತ್ತಿರ ಇರುವುದರಿಂದ ಪ್ರಯಾಣ ಸುಖಕರವಾಗಿರುತ್ತದೆ. ಸಿರೋಂಜ್‌ನಿಂದ ಆರು ಕೋಶ ದೂರದಲ್ಲಿ ಮೊಗಲ್ ಸರಾಯ್ ಸಿಕ್ಕುತ್ತದೆ. ಇಲ್ಲಿಂದ ಮುಂದೆ ಹೋದರೆ ಸಿಕ್ಕುವುದು ಕಾಲಾಬಾಘ. ಇಲ್ಲಿ ಮೊದಲಿಗೆ ಒಬ್ಬ ದೊಡ್ಡ ರಾಜ ಇದ್ದ. ಈ ಊರಿನ ಬಳಿ ಕಾರವಾನ್‌ಗಳು ಸಾಗಿದಾಗ ಇಲ್ಲಿಯ ರಾಜ ವರ್ತಕರನ್ನು ಕೊಳ್ಳೆಹೊಡೆದು ಅವರಿಂದ ದುಬಾರಿ ಸುಂಕ ವಸೂಲುಮಾಡುತ್ತಿದ್ದ. ಆದರೆ ಔರಂಗಜೇಬ ಪಟ್ಟಕ್ಕೆ ಬಂದಮೇಲೆ ಇವನ ತಲೆ ಕಡಿಸಿಹಾಕಿದನು. ಅಲ್ಲದೆ ಅವನ ಪ್ರಜೆಗಳ ತಲೆಗಳನ್ನು ಕಡಿಸಿ ಶಿರಸ್ತಂಭಗಳಿಗೆ ಕಟ್ಟಿಸಿದನು. ನನ್ನ ಕೊನೆ ಪ್ರವಾಸದ ವೇಳೆ, ಅಂದರೆ ೧೬೬೫ರಲ್ಲಿ ನಾನು ಕಾಲಾಬಾಘ್ ಬಳಿ ಹೋಗುತ್ತಿದ್ದಾಗ ಶಿರಸ್ತಂಭಗಳಿಗೆ ಏರಿಸಿದ್ದ ಹಸಿಯ ತಲೆಗಳ ದುರ್ವಾಸನೆ ಇನ್ನೂ ಮೂಗಿಗೆ ಹೊಡೆಯುತ್ತಿತ್ತು.

ಅನಂತರ ಸಿಕ್ಕುವುದು ಕೊಲಾರಸ್ ಎಂಬ ಊರು. ರಾಜಾ ಶಿವಾಜಿಯ ಮೇಲೆ ಯುದ್ಧಮಾಡಲು ಔರಂಗಜೇಬ ಕಳುಹಿಸಿದ್ದ ಒಂದು ಫಿರಂಗಿ ದಳ ಈ ಊರಿನ ಬಳಿ ಹೋಗುತ್ತಿದ್ದುದನ್ನು ಕಂಡೆ. ಎಂಟು ಫಿರಂಗಿಗಳಿದ್ದುವು. ಕೆಲವು ಫಿರಂಗಿಗಳು ೩೬ ತೂಕ ಮತ್ತು ಕೆಲವು ೪೮ ತೂಕ ಭಾರವಾದ ಗುಂಡುಗಳನ್ನು ಹಾರಿಸಬಲ್ಲವುಗಳಾಗಿದ್ದುವು. ಪ್ರತಿಯೊಂದು ಫಿರಂಗಿಯನ್ನು ೨೪ ಜೊತೆ ಎತ್ತುಗಳು ಎಳೆಯುತ್ತಿದ್ದವು. ದೊಡ್ಡ ಆನೆಯೊಂದು ಈ ದಳದ ಹಿಂದೆ ಹೋಗುತ್ತಿತ್ತು. ಹಳ್ಳಕೊಳಗಳಲ್ಲಿ ಎತ್ತುಗಳು ಎಳೆಯಲು ಸಾಧ್ಯವಾಗದಿದ್ದಾಗ ಫಿರಂಗಿಯನ್ನು ಆನೆಯಿಂದ ನೂಕಿಸುತ್ತಿದ್ದರು. ಈ ಫಿರಂಗಿಗಳನ್ನು ಸಾಗಿಸಿಕೊಂಡು ಹೋಗುತ್ತಿದ್ದ ೨,೦೦೦ ಸಿಪಾಯಿಗಳೆಲ್ಲಾ ಮಹಮ್ಮದೀಯರು. ಕೇವಲ ಕೆಲವರು ಮಾತ್ರ, ಅಂದರೆ ಫ್ರೆಂಚರು, ಇಂಗ್ಲಿಷರು ಮತ್ತು ಡಚ್ಚರು ಈ ಫಿರಂಗಿಗಳ ಮುಖ್ಯ ಗೋಲಂದಾಜರಾಗಿದ್ದರು.

ಈ ಗೋಲಂದಾಜ ಪಡೆ ಹೋಗುತ್ತಿದ್ದ ಹೆದ್ದಾರಿಯ ಉದ್ದಕ್ಕೂ ಅಲ್ಲಲ್ಲಿ ದೊಡ್ಡ ದೊಡ್ಡ ಮಾವಿನ ಮರಗಳಿದ್ದುವು. ಈ ಮಾವಿನ ಮರಗಳನ್ನು 'ಮೆಂಗೂ' (Mengue)

ಎಂದು ಕರೆಯುತ್ತಾರೆ. ಗೋಲಂದಾಜ ಪಡೆಯ ಆನೆ ದಾರಿಯಲ್ಲಿ ಹೋಗುತ್ತಾ ಮಾವಿನ ಮರಗಳ ಬಳಿ ಇದ್ದ ಗುಡಿಗಳಿಗೆ ಸೊಂಡಲು ಹಾಕಿ ಅಲ್ಲಿದ್ದ ವಿಗ್ರಹಗಳನ್ನು ಕಿತ್ತೆಸೆದು ಪುಡಿ ಪುಡಿ ಮಾಡುತ್ತಾ ಹೋಗುತ್ತಿತ್ತು. ಮಾವುತ ಆನೆಗೆ ಸನ್ನೆ ಮಾಡಿ ಹಾಗೆ ಮಾಡಿಸುತ್ತಿದ್ದನೆಂದು ಕೆಲವರು ಭಾವಿಸಿದರು. ಅದೇನೇ ಆಗಲಿ, ಸ್ಥಳದ ಬನಿಯರು ಮಾತ್ರ ಬಹಳ ಭೀತಿಪಟ್ಟು ಇದೊಂದು ಅಪಶಕುನವೆಂದುಕೊಂಡರು. ಅವರು ಆ ಮಹಮ್ಮದೀಯರಿಗೆ ಹೆದರಿ ತುಟಿಪಿಟ್ಟೆನ್ನಲಿಲ್ಲ.

ಮುಂದೆ ಮುಂದೆ ಪ್ರಯಾಣಮಾಡಿದರೆ ನರವಾರ್ ಮತ್ತು ಗ್ವಾಲಿಯರ್ ಸಿಕ್ಕುತ್ತವೆ. ಗ್ವಾಲಿಯರ್ ದೊಡ್ಡ ಪಟ್ಟಣ ಇಲ್ಲಿರುವ ಕೋಟೆಯನ್ನು ರಾಜರುಗಳನ್ನೂ ಶ್ರೀಮಂತ ಸರದಾರರನ್ನೂ ಬಂಧನದಲ್ಲಿಡುವುದಕ್ಕೆ ಉಪಯೋಗಿಸುತ್ತಿದ್ದಾರೆ. ಮೋಸ ದಿಂದ ಸಿಂಹಾಸನವನ್ನೇರಿದ ಷಾಜಹಾನ ತನಗೆ ಆಗದವರನ್ನೆಲ್ಲಾ ಇಲ್ಲಿ ಕೂಡಿ ಹಾಕಿದ್ದ. ಅವನ ಮಗ ಔರಂಗಜೇಬ[1] ತನಗಾಗದವರನ್ನು ಸುಮ್ಮನೆ ಕೂಡಿಹಾಕುವ ಬದಲು ಎಂಟು ಹತ್ತು ದಿನಗಳಲ್ಲಿ ವಿಷ ಕೊಟ್ಟು ಅವರನ್ನು ಸಾಯಿಸುತ್ತಿದ್ದಾನೆ.

ಮುಂದೆ ಸಿಕ್ಕುವ ಊರುಗಳನ್ನು ಹಾದು ಹೋದಮೇಲೆ ಸಿಕ್ಕುವುದು ಆಗ್ರಾ ಪಟ್ಟಣ. ಸೂರತ್ತಿನಿಂದ ಆಗ್ರಾಕ್ಕೆ ೩೩೫ ಕೋಶಗಳು.

ಈಗ ಎರಡನೆಯ ಮಾರ್ಗದ ಬಗ್ಗೆ, ಅಂದರೆ ಸೂರತ್ತಿನಿಂದ ಅಹಮದಾಬಾದ್ ಮೂಲಕ ಆಗ್ರಾಕ್ಕೆ ಹೋಗುವ ದಾರಿಯ ವಿಚಾರ ಹೇಳುತ್ತೇನೆ :

ಸೂರತ್ತಿನಿಂದ ಬ್ರೋಚ್‌ವರೆಗೆ ಉದ್ದಕ್ಕೂ ದವಸ ಧಾನ್ಯ ಭತ್ತ ಕಬ್ಬು ಮುಂತಾದ ಬೆಳೆಗಳೇ ಕಾಣುತ್ತವೆ. ಬ್ರೋಚ್ ದೊಡ್ಡ ಪಟ್ಟಣ. ಇಲ್ಲಿ ಹರಿಯುವ ನದಿಯ(ನರ್ಮದಾ) ನೀರಿನಲ್ಲಿ ಚೆಲುವೆಮಾಡಲು ಮೊಗಲ್ ರಾಜ್ಯದ ಎಲ್ಲಾ ಕಡೆಗಳಿಂದ ಕ್ಯಾಲಿಕೊ ಬಟ್ಟೆ ಗಳನ್ನು ತರುತ್ತಾರೆ. ಇಲ್ಲಿ 'ಬಫ್ತಾಸ್' ಎಂಬ ಕ್ಯಾಲಿಕೊ ಬಟ್ಟೆಯನ್ನು ನೇಯುತ್ತಾರೆ. ಬಟ್ಟೆಯನ್ನು ಒತ್ತಾಗಿಯೂ ಬಹು ಅಂದವಾಗಿಯೂ ನೇಯ್ದಿರುತ್ತಾರೆ. ಈ ಬಟ್ಟೆಗಳ ಬೆಲೆ ನಾಲ್ಕರಿಂದ ನಾನೂರು ರೂಪಾಯಿಗಳವರೆಗೆ ಇರುತ್ತದೆ. ಇಲ್ಲಿ ಇಂಗ್ಲಿಷರ ಒಳ್ಳೆಯ ಮನೆ ಇದೆ. ನಾನೊಮ್ಮೆ ಆಗ್ರಾದಿಂದ ಸೂರತ್ತಿಗೆ ಇಂಗ್ಲಿಷ್ ಪ್ರೆಸಿಡೆಂಟನ ಜೊತೆ ಬರು ವಾಗ ಇಲ್ಲಿ ತಂಗಿದ್ದೆ. ಆಗ ಕೆಲವು ಡೊಂಬರು ತಮ್ಮ ಚಮತ್ಕಾರದ ಆಟಪಾಟಗಳನ್ನೂ ಯಕ್ಷಿಣಿ ವಿದ್ಯೆಯನ್ನೂ ತೋರಿಸಿದರು. ಬೆಂಕಿಯಲ್ಲಿ ಕಬ್ಬಿಣದ ಸರಪಣಿಯನ್ನು ಗಣಗಣ ಕಾಯಿಸಿ ಮೈಗೆ ಸುತ್ತಿಕೊಂಡರು. ಆಗ ಏನೋ ನೋವಾದಂತೆ ನಟಿಸಿದರು. ವಾಸ್ತವವಾಗಿ ಏನೂ ಆಗಿರಲಿಲ್ಲ. ಇನ್ನೊಂದು ಯಕ್ಷಿಣಿಯೆಂದರೆ, ಯಕ್ಷಿಣಿಯವ ಒಂದು ಸಣ್ಣ ಕೋಲನ್ನು ನೆಲಕ್ಕೆ ನೆಟ್ಟು ಅಲ್ಲಿ ನಿಂತಿದ್ದವರಲ್ಲಿ ಒಬ್ಬನನ್ನು ಉದ್ದೇಶಿಸಿ ಅವನಿಗೆ

---

[1] ಔರಂಗಜೇಬ : ಈತ ಹಿಂದೂಸ್ಥಾನದ ಚಕ್ರವರ್ತಿಯಾಗಿದ್ದ ಕಾಲ ; ೧೬೫೮–೧೭೦೭

ಯಾವ ಹಣ್ಣು ಬೇಕು ಎಂದು ಕೇಳಿದ. ಆತ ತನಗೆ ಮಾವಿನಹಣ್ಣು ಬೇಕೆಂದ. ಆಗ ಯಕ್ಷಿಣಿಯವ ಮೈತುಂಬ ಬಟ್ಟೆ ಹೊದ್ದುಕೊಂಡು ಐದಾರು ಸಲ ನೆಲದವರೆಗೆ ಬಗ್ಗಿದ. ನಾನು ಅವನು ಮಾಡುವ ಯಕ್ಷಿಣಿಯನ್ನು ನೋಡಬೇಕೆಂದು ಮನೆಯ ಮೇಲೆ ಹತ್ತಿ ಅಲ್ಲಿಂದ ನೋಡುತ್ತಾ ನಿಂತೆ. ಆತ ಮಾಡುತ್ತಿದ್ದುದು ಬಟ್ಟೆಯ ಮೇಲಿದ್ದ ತೂತಿನಿಂದ ಕಾಣುತ್ತಿತ್ತು. ಆತ ಚಾಕುವಿನಿಂದ ತನ್ನ ಕಂಕುಳನ್ನು ಕೊಯ್ದು ಬಂದ ರಕ್ತವನ್ನು ನೆಲದಲ್ಲಿ ನೆಟ್ಟ ಕೋಲಿಗೆ ಸವರಿದ. ಅವನು ಪ್ರತಿ ಸಲ ಬಗ್ಗಿ ಎದ್ದಂತೆ ಆ ಕೋಲು ಎತ್ತರವಾಗುತ್ತ ಬಂದಿತು. ಮೂರನೆಯ ಸಲ ಬಗ್ಗಿ ಎದ್ದಾಗ ಅದರಲ್ಲಿ ಕೊಂಬೆಗಳೂ ಚಿಗುರುಗಳೂ ಕಾಣಿಸಿಕೊಂಡುವು. ನಾಲ್ಕನೆಯ ಸಲ ಎಲೆಗಳೂ ಐದನೆ ಸಲ ಹೂವುಗಳೂ ಕಾಣಿಸಿಕೊಂಡುವು. ಮಾವಿನ ಗಿಡ ಅರ್ಧ ಗಂಟೆಯಲ್ಲಿ ನಾಲ್ಕೈದು ಅಡಿ ಎತ್ತರ ಬೆಳೆಯಿತು. ಪ್ರೆಸಿಡೆಂಟನು ಆ ಯಕ್ಷಿಣಿಯವರಿಗೆ ಒಂದಷ್ಟು ದುಡ್ಡು ಕೊಟ್ಟು ಮೆಹರ್ಬಾನಿ ಮಾಡಿದ. ಈ ಪ್ರೋತ್ಸಾಹದಿಂದ ಅವರು ಖುಷಿಯಾಗಿಬಿಟ್ಟರು. ಈ ಯಕ್ಷಿಣಿ ಜನ ಹೆಂಡತಿ ಮಕ್ಕಳ ಸಮೇತ ಊರಿಂದೂರಿಗೆ ಅಲೆಯುತ್ತಿರುತ್ತಾರೆ.

ಬ್ರೋಚ್‌ನಿಂದ ಕ್ಯಾಂಬೆ ನಗರಕ್ಕೆ ಹೋಗಬೇಕು. ಕ್ಯಾಂಬೆ ದೊಡ್ಡ ರೇವುಪಟ್ಟಣ. ಯೂರೋಪಿಗೆ ಬರುವ ಸುಂದರವಾದ 'ಆಗೇಟ್' ಎಂಬ ಪ್ರಶಸ್ತಶಿಲೆಯಲ್ಲಿ ಕೊರೆದ ಬಟ್ಟಲು, ಚಾಕು, ಹಿಡಿ, ಮಣಿ ಮುಂತಾದ ಸಾಮಾನುಗಳು ತಯಾರಾಗುವುದು ಇಲ್ಲಿಯೇ. ಇಲ್ಲಿ ನೀಲಿ (indigo) ಗಿಡಗಳನ್ನೂ ಬೆಳೆಸುತ್ತಾರೆ. ಪೋರ್ಚುಗೀಸರ ಅದ್ಧೂರಿಯ ಕಾಲದಲ್ಲಿ ಈ ಊರು ನೀಲಿಗೆ ಹೆಸರಾಗಿತ್ತು. ಆ ಕಾಲದಲ್ಲಿ ಅವರು ಕಟ್ಟಿದ ಭವ್ಯ ಭವನಗಳನ್ನು ಸಮುದ್ರ ತೀರದಲ್ಲಿ ಈಗಲೂ ನೋಡಬಹುದು. ಆದರೆ ಆ ಮನೆಗಳು ದಿನೇ ದಿನೇ ಪಾಳುಬೀಳುತ್ತಿವೆ. ಪೋರ್ಚುಗೀಸರು ಆಗ್ಗೆ ಕ್ಯಾಂಬೆಯಲ್ಲಿ ಕಟ್ಟುನಿಟ್ಟಾದ ಶಿಸ್ತನ್ನು ಪಾಲಿಸುತ್ತಿದ್ದರು. ಸೂರ್ಯ ಮುಳುಗಿದ ಎರಡು ಗಂಟೆಯೊಳಗಾಗಿ ಅವರು ಊರಿನ ಎರಡು ಹೆಬ್ಬಾಗಿಲುಗಳನ್ನು ಮುಚ್ಚಿ, ಒಬ್ಬರೂ ಬೀದಿಗಳಲ್ಲಿ ಅಡ್ಡಾಡದಂತೆ ಮಾಡುತ್ತಿದ್ದರು. ಈಗಲೂ ಆ ಶಿಸ್ತು ಸ್ವಲ್ಪಮಟ್ಟಿಗೆ ನಡೆದುಕೊಂಡು ಬರುತ್ತಿದೆ. ಸಮುದ್ರ ದಿನೇ ದಿನೇ ಹಿಂದಕ್ಕೆ ಸರಿಯುತ್ತಿರುವುದರಿಂದ ಹಡಗುಗಳು ಇಲ್ಲಿಗೆ ಬರಲು ಸಾಧ್ಯವಾಗುತ್ತಿಲ್ಲ. ಈ ಕಾರಣ ಕ್ಯಾಂಬೆಯಲ್ಲಿ ವ್ಯಾಪಾರ ಇಳಿಮುಖವಾಗಿದೆ.

ಬ್ರೋಚ್, ಕ್ಯಾಂಬೆ ಮತ್ತು ಬರೋಡಾ ಪ್ರದೇಶಗಳಲ್ಲಿ ನವಿಲುಗಳನ್ನು ಹೇರಳವಾಗಿ ನೋಡಬಹುದು. ಅವು ಹಗಲು ಹೊತ್ತು ಹಿಂಡುಹಿಂಡಾಗಿ ಹೊಲಗಳಲ್ಲಿ ಅಡ್ಡಾಡುತ್ತವೆ. ರಾತ್ರಿ ಹೊತ್ತು ಮರಗಳ ಮೇಲೆ ಕುಳಿತುಕೊಳ್ಳುತ್ತವೆ. ಹಗಲು ಹೊತ್ತು ಅವುಗಳನ್ನು ಹಿಡಿಯುವುದು ಬಹಳ ಕಷ್ಟ. ಹಿಡಿಯಲು ಹೋದರೆ ಅವು ಓಡಿ ಕಾಡು ಸೇರುತ್ತವೆ. ರಾತ್ರಿಯ ಹೊತ್ತೇ ಅವುಗಳನ್ನು ಹಿಡಿಯಬೇಕು. ಹಿಡಿಯುವುದು ಹೇಗೆಂದರೆ, ಒಂದು ತರಹ ಪಟ (banner) ಹಿಡಿದುಕೊಂಡು ಅವುಗಳು ಕುಳಿತ ಮರವನ್ನು ಸಮೀಪಿಸುತ್ತಾರೆ. ಆ ಪಟದ ಎರಡು ಕಡೆ ಜೀವಂತ ನವಿಲಿನಷ್ಟು ದೊಡ್ಡದಾದ ನವಿಲುಗಳ

ಚಿತ್ರಗಳನ್ನು ಬರೆದಿರುತ್ತಾರೆ. ಮತ್ತು, ಆ ಪಟದ ಎರಡು ಕಡೆಗಳಲ್ಲಿ ಎರಡು ಮೇಣದ ಬತ್ತಿಗಳನ್ನು ಹಚ್ಚಿರುತ್ತಾರೆ.[1] ಬೆಳಕನ್ನು ಕಂಡ ನವಿಲುಗಳು ಕತ್ತನ್ನು ಮುಂದಕ್ಕೆ ಚಾಚುತ್ತವೆ. ಆಗ ಪಟಕ್ಕೆ ಸಿಕ್ಕಿಸಿರುವ ಕುಣಿಕೆಯೊಳಗೆ ನವಿಲಿನ ತಲೆ ಸಿಕ್ಕಿಕೊಳ್ಳು ತ್ತದೆ.

ರಾಜರುಗಳು ಇರುವ ದೇಶದಲ್ಲಿ ನವಿಲನ್ನು ಹಿಡಿದುಕೊಳ್ಳಬಹುದೇ ಹೊರತು ಅವುಗಳನ್ನು ಕೊಲ್ಲಬಾರದು. ನವಿಲು ಅಷ್ಟೇ ಅಲ್ಲ, ಯಾವ ಪ್ರಾಣಿಯನ್ನೂ ಕೊಲ್ಲ ಬಾರದು. ಒಬ್ಬ ಪರ್ಷಿಯಾದ ಶ್ರೀಮಂತ ವರ್ತಕ ದಾಂತ ರಾಜನ ನಾಡಿನಲ್ಲಿ ಪ್ರಯಾಣ ಮಾಡುವಾಗ ತನ್ನ ಬಂದೂಕಿನಿಂದ ಒಂದು ನವಿಲನ್ನು ಕೊಂದುಬಿಟ್ಟ. ಬನಿಯರೆಲ್ಲಾ ಸಿಟ್ಟಿಗೆದ್ದು ಅವನ ೩೦,೦೦೦ ರೂಪಾಯಿ ಬೆಲೆಬಾಳುವ ಸಾಮಾನು ಸರಂಜಾಮುಗಳ ನ್ನೆಲ್ಲಾ ಕಸಿದುಕೊಂಡುದಲ್ಲದೆ, ಅವನನ್ನು ಒಂದು ಮರಕ್ಕೆ ಕಟ್ಟಿ ಮೂರು ದಿನಗಳ ಕಾಲ ಛಡೀ ಏಟು ಕೊಟ್ಟರು. ಆ ಹಿಂಸೆಯನ್ನು ತಡೆಯಲಾರದೆ ಆ ವರ್ತಕ ಸತ್ತೇಹೋದ.

ಕ್ಯಾಂಬೆಯಿಂದ ಮುಂದೆ ಹೋದರೆ ಒಂದು ದೇವಸ್ಥಾನ ಸಿಕ್ಕುತ್ತದೆ. ಈ ದೇವ ಸ್ಥಾನಕ್ಕೆ ಇಂಡಿಯಾದ ಅನೇಕ ವೇಶ್ಯೆಯರು ಬಂದು ಪೂಜೆಸಲ್ಲಿಸುತ್ತಾರೆ. ಈ ವೇಶ್ಯೆ ಯರು ಹಣ ಸಂಪಾದಿಸಿ ಮುದುಕಿಯರಾದ ಮೇಲೆ, ತಾವು ಚಿಕ್ಕಂದಿನಿಂದ ಸಾಕಿಕೊಂಡಿ ರುವ ಹತ್ತು ಹನ್ನೆರಡು ವರ್ಷದ ಹೆಣ್ಣುಮಕ್ಕಳನ್ನು ಕರೆದುಕೊಂಡು ಬಂದು ಈ ದೇವ ಸ್ಥಾನಕ್ಕೆ ಬಸವಿ ಬಿಡುತ್ತಾರೆ.[2]

ಮುಂದೆ ಮುಂದೆ ಹೋದರೆ ಅಹಮದಾಬಾದ್ ಸಿಕ್ಕುತ್ತದೆ. ಇಂಡಿಯಾದಲ್ಲಿ ಅತ್ಯಂತ ದೊಡ್ಡದಾದ ಪಟ್ಟಣಗಳಲ್ಲಿ ಇದೊಂದು. ಇಲ್ಲಿ ರೇಷ್ಮೆ, ಚಿನ್ನ, ಬೆಳ್ಳಿ, ಸರಿಗೆಯ ಪರದೆ ಮುಂತಾದುವುಗಳ ಭಾರೀ ವ್ಯಾಪಾರ ನಡೆಯುತ್ತದೆ. ಇಲ್ಲಿದ್ದ ಒಂದು ದೇವಸ್ಥಾನ ವನ್ನು ಮುಹಮ್ಮದೀಯರು ತಮ್ಮ ವಶಮಾಡಿಕೊಂಡು ಅದನ್ನು ಮಸೀದಿಯನ್ನಾಗಿ ಪರಿವರ್ತಿಸಿದ್ದಾರೆ. ಈ ನಗರದಲ್ಲಿ ಹಿಂದೆ ಆಳಿದ ರಾಜರುಗಳ ಅನೇಕ ಸಮಾಧಿಗಳನ್ನು ನೋಡಬಹುದು. ಇವುಗಳನ್ನು ಅಮೃತಶಿಲೆಯಿಂದ ನಿರ್ಮಿಸಿದ್ದಾರೆ. ಇಲ್ಲಿ ಹರಿಯುವ ನದಿಯನ್ನು (ಸಬರಮತಿ) ದಾಟಬೇಕಾದರೆ ಬಹಳ ಪ್ರಯಾಸ. ದಾಟಲು ಎರಡು ಮೂರು

---

[1] ಕೋಳಿ ಮುಂತಾದ ನವಿಲು ಜಾತಿಗೆ ಸೇರಿದ ಪ್ರಾಣಿಗಳಿಗೆ ರಾತ್ರಿ ಹೊತ್ತು ಕಣ್ಣು ಕಾಣಿ ಸುವುದಿಲ್ಲವೆಂದು ಕಾಣುತ್ತದೆ. ಈ ಕಾರಣ ಅವು ಕತ್ತನ್ನು ಮುಂದಕ್ಕೆ ಚಾಚಿ ಚಾಚಿ ಎಚ್ಚರದಿಂದ ನಡೆಯುತ್ತವೆ. ಈ ಕಾರಣವೇ ಹಳ್ಳಿಗಳಲ್ಲಿ 'ಕತ್ತಲೇಲಿ ಕೋಳಿ ಕತ್ತಾಕಿತು' ಎಂಬ ನಾಣ್ಣುಡಿಯೇ ಇದೆ.

[2] ಬಸವಿ ಬಿಡುವುದು : ದೇವರ ಸುಖಭೋಗಕ್ಕೆ ಕನ್ಯೆಯರನ್ನು ದೇವಸ್ಥಾನಗಳಿಗೆ ಒಪ್ಪಿಸುವ ಪದ್ಧತಿ. ಈ ಪದ್ಧತಿ ಹಿಂದೆ ಕರ್ಣಾಟಕ ರಾಜ್ಯದ ಊರುಗಳಲ್ಲೂ ಇತ್ತು. ಇಂತಹ ಕನ್ಯೆಯರನ್ನು 'ಊರ ಬಸವಿ'ಯರು ಎಂದು ಕರೆಯುತ್ತಿದ್ದರು.

ದೋಣಿಗಳೇನೊ ಇವೆ. ಆದರೆ ಇವುಗಳನ್ನು ಪ್ರವಾಹ ಕಡಿಮೆಯಾದಾಗ ಮಾತ್ರ ಉಪಯೋಗಿಸಲು ಸಾಧ್ಯ. ಆದರೆ ರೈತರು ದೋಣಿಗೀಣಿಗಳಿಗೆ ಕಾಯದೆ, ಆಡಿನ ಚರ್ಮ ದಿಂದ ಮಾಡಿದ ಚೀಲಗಳನ್ನು ಊದಿ ಗಾಳಿ ತುಂಬಿ ಹೊಟ್ಟೆಗೆ ಕಟ್ಟಿಕೊಂಡು ಈಜಿ ದಡ ಸೇರುತ್ತಾರೆ. ಗಂಡಸರೂ ಅಷ್ಟೆ, ಹೆಂಗಸರೂ ಅಷ್ಟೆ–ಇದೇ ಕ್ರಮವನ್ನು ಅನುಸರಿಸು ತ್ತಾರೆ. ಮಕ್ಕಳು ಮರಿಗಳನ್ನು ದಾಟಿಸಬೇಕಾದಾಗ ಒಂದು ತರಹ ದುಂಡಾದ ಮಡಕೆ ಗಳನ್ನು ಉಪಯೋಗಿಸುತ್ತಾರೆ. ಈ ಮಡಕೆಯಲ್ಲಿ ಮಗುವನ್ನು ಇಟ್ಟು ಅದನ್ನು ಮುಂದೆ ನೂಕಿಕೊಂಡು ಈಜುತ್ತಾರೆ.

ನಾನು ೧೬೪೫ರಲ್ಲಿ ಅಹಮದಾಬಾದಿನಲ್ಲಿದ್ದಾಗ ನಡೆದ ಒಂದು ಪ್ರಸಂಗವನು ಹೇಳದೇಹೋದರೆ ಸರಿಕಾಣುವುದಿಲ್ಲ. ಒಬ್ಬ ರೈತನೂ ಅವನ ಹೆಂಡತಿಯೂ ಮಗು ವನ್ನು ಒಂದು ಮಡಕೆಯಲ್ಲಿಟ್ಟುಕೊಂಡು ನದಿಯನ್ನು ದಾಟುತ್ತಿದ್ದರು. ಮಡಕೆಯ ಬಾಯಿಯ ಮೇಲೆ ಮಗುವಿನ ತಲೆ ಮಾತ್ರ ಕಾಣಿಸುತ್ತಿತ್ತು. ನದಿಯ ಮಧ್ಯೆ ಒಂದು ಕಡೆ ಮರಳು ದಿಣ್ಣೆ ಇತ್ತು. ಅಲ್ಲಿ ಒಂದಷ್ಟು ಹೊತ್ತು ಸುಧಾರಿಸಿಕೊಳ್ಳೋಣವೆಂದು ಅವರು ಮಗುವಿದ್ದ ಮಡಕೆಯನ್ನು ಮರಳು ದಿಣ್ಣೆಯ ಕಡೆಗೆ ನೂಕಿದರು. ಅಲ್ಲಿ ಬಿದ್ದಿದ್ದ ಮರವೊಂದರ ಮೇಲಿದ್ದ ಹಾವು ಮಡಕೆಯೊಳಕ್ಕೆ ಹೋಯಿತು. ಹೆದರಿಬಿಟ್ಟ ತಂದೆ ತಾಯಿಗಳು ಏನು ಮಾಡಲೂ ತೋಚದೆ ಮಡಕೆಯನ್ನು ಹಾಗೆಯೇ ತೇಲಲು ಬಿಟ್ಟು ಬಿಟ್ಟರು. ಈ ನದಿಯ ಬಳಿ ಬನಿಯ ಗಂಡ ಹೆಂಡರಿಬ್ಬರು ತಮ್ಮ ಮಗುವಿನೊಡನೆ ಸ್ನಾನ ಮಾಡುತ್ತಿದ್ದರು. ಮಡಕೆಯಲ್ಲಿ ತೇಲಿಬರುತ್ತಿದ್ದ ಮಗುವನ್ನು ಕಂಡು, ಬನಿಯನು ನೀರಿ ನಲ್ಲಿ ಈಜಿ ಆ ಮಡಕೆಯನ್ನು ದಡಕ್ಕೆ ನೂಕಿದ. ದಡದಲ್ಲಿದ್ದ ಹೆಂಡತಿ ಮಡಕೆಯೊಳಗಿದ್ದ ಮಗುವನ್ನು ಎತ್ತಿಕೊಂಡಳು. ಮಡಕೆಯಲ್ಲಿದ್ದ ಮಗುವನ್ನು ಕಚ್ಚದೆ ಇದ್ದ ಹಾವು ಮಡಕೆಯಿಂದ ಹೊರಬಂದು, ದಡದಲ್ಲಿದ್ದ ಮಗುವನ್ನು ಕಚ್ಚಿಬಿಟ್ಟಿತು. ಮಗು ಕೂಡಲೇ ಸತ್ತುಹೋಯಿತು. "ಇದೆಲ್ಲಾ ದೇವರ ಮಾಯೆ" ಎಂದುಕೊಂಡು ಆ ಬನಿಯ ದಂಪತಿ ಗಳು ಸತ್ತ ತಮ್ಮ ಮಗುವಿಗಾಗಿ ದುಃಖಪಡಲಿಲ್ಲ. ಇಷ್ಟರಲ್ಲಿ ಆ ರೈತ ದಂಪತಿಗಳು ಬಂದು ತಮ್ಮ ಮಗುವನ್ನು ಕೇಳಿದರು. ತಮ್ಮ ಒಂದು ಮಗುವಿನ ಬದಲು ದೇವರು ಇನ್ನೊಂದು ಮಗುವನ್ನು ತಮಗೆ ಕೊಟ್ಟಿದ್ದಾನೆಂದು ಅವರು ತಕರಾರು ಹೂಡಿದರು. ದೊರೆಯ ತನಕ ದೂರು ಹೋಯಿತು. ದೊರೆ ಆ ಮಗು ಹೆತ್ತ ತಂದೆತಾಯಿಗಳದೆಂದು ತೀರ್ಮಾ ನಿಸಿದ.

ಇದೇ ವೇಳೆ ಅಹಮದಾಬಾದಿನಲ್ಲಿ ಮಕ್ಕಳಿಲ್ಲದ ಒಬ್ಬ ಶ್ರೀಮಂತ ಬನಿಯನ ಹೆಂಡತಿ ಮನೆಯ ಪರಿಚಾರಕನ ಸಲಹೆಯಂತೆ ಮೂರು ನಾಲ್ಕು ಮೀನುಗಳನ್ನು ನುಂಗಿ ಗರ್ಭಿಣಿಯಾದ ಪ್ರಸಂಗವೊಂದು ನಡೆಯಿತು. ಆಕೆ ಹಡೆಯುವುದಕ್ಕಿಂತ ಮುಂಚೆಯೇ ಬನಿಯ ಸತ್ತುಹೋದ. ಆ ತರುವಾಯ ಆಕೆ ಹಡೆದಳು. ಆ ಬನಿಯನ ಆಸ್ತಿ ಯಾರಿಗೆ

ಸೇರಬೇಕೆಂಬ ಬಗ್ಗೆ ತಕರಾರು ಹುಟ್ಟಿ, ಕೊನೆಗೆ ಆತನ ಹೆಂಡತಿಗೂ ಆಕೆಯ ಮಗುವಿಗೂ ಸೇರಬೇಕೆಂದು ತೀರ್ಮಾನವಾಯಿತು.

ಇನ್ನೊಂದು ಪ್ರಸಂಗ ಅಹಮದಾಬಾದಿನಲ್ಲಿ ನಡೆಯಿತು. ನಾನು ದಿಲ್ಲಿಯಿಂದ ಅಲ್ಲಿಗೆ ಹೋದ ಒಂದು ಸಂದರ್ಭದಲ್ಲಿ ಅದು ನಡೆಯಿತು. ಷೈಸ್ತಾಖಾನನು ಅಹಮದಾಬಾದಿನ ಸುಬೇದಾರ್ ಹುದ್ದೆಯಲ್ಲಿ ಮೂರು ವರ್ಷಗಳಿದ್ದ ವೇಳೆಯಲ್ಲಿ ತಾನು ಸುಳ್ಳು ಹೇಳದ ಒಬ್ಬ ವೃದ್ಧನನ್ನು ಆ ನಗರದಲ್ಲಿ ಕಂಡಿರುವುದಾಗಿ ಷಾಜಹಾನನಿಗೆ ತಿಳಿಸಿದ. ಅವನನ್ನು ಆಗ್ರಾಕ್ಕೆ ಕರೆತರಬೇಕೆಂದು ಷಾಜಹಾನನ ಅಪ್ಪಣೆಯಾಯಿತು. ಒಳ್ಳೆ ತಾಪತ್ರಯಕ್ಕೆ ಬಂದಿತಲ್ಲ ಎಂದುಕೊಂಡು ಆ ಮುದುಕ ಇಪ್ಪತ್ತೈದು ಮುವತ್ತು ದಿನಗಳ ದಾರಿ ಸಾಗಿಸಿ ದಿಲ್ಲಿಗೆ ಹೋದ. ಹೋದವನು ರಾಜನನ್ನು ಕಂಡು ಆತನಿಗೆ ೪೦,೦೦೦ ರೂಪಾಯಿ ಬೆಲೆ ಬಾಳುವ ಚಿನ್ನದ ಪೆಟ್ಟಿಗೆಯ ನಜರ್ ಅರ್ಪಿಸಿದನು. ಈ ಪೆಟ್ಟಿಗೆ ಎಲೆ ಅಡಕೆಯನ್ನು ಇಡಲು ಬರುತ್ತಿತ್ತು. ವಜ್ರ ವೈಢೂರ್ಯಗಳಲ್ಲಿ ಮಾಡಿದ್ದ ಆ ಪೆಟ್ಟಿಗೆಯನ್ನು ಕಂಡು ರಾಜ "ನಿನ್ನ ಹೆಸರೇನು" ಎಂದು ವೃದ್ಧನನ್ನು ಕೇಳಿದ. ಆತ "ಖಾವಿಂದ್, 'ಸುಳ್ಳುಹೇಳದವ' ಎಂಬುದು ನನ್ನ ಹೆಸರು" ಎಂದ. ರಾಜ "ನಿನ್ನ ತಂದೆಯ ಹೆಸರೇನು" ಎಂದು ಕೇಳಿದ. ಆತ "ಸ್ವಾಮಿ, ಗೊತ್ತಿಲ್ಲ" ಎಂದ. ಈ ಉತ್ತರದಿಂದ ತೃಪ್ತನಾದ ರಾಜ ಆತನಿಗೆ ಒಂದು ಆನೆಯನ್ನೂ ದಾರಿಯ ಖರ್ಚಿಗೆ ೧೦,೦೦೦ ರೂಪಾಯಿಗಳನ್ನೂ ಕೊಡಿಸಿದ. ಆನೆಯ ಮರ್ಯಾದೆ ಬಹು ದೊಡ್ಡ ಮರ್ಯಾದೆ.

ಬನಿಯರಿಗೆ (ಬಣಜಿಗರಿಗೆ) ಕೋತಿ, ದನಕರು, ಎತ್ತು ಮುಂತಾದ ಪ್ರಾಣಿಗಳ ಮೇಲೆ ತುಂಬಾ ಕನಿಕರ. ಈ ಪ್ರಾಣಿಗಳಿಗೆಂದೇ ಅಹಮದಾಬಾದಿನಲ್ಲಿ ಎರಡು ಮೂರು ಸಂರಕ್ಷಣಾಲಯಗಳಿವೆ.

ಅಹಮದಾಬಾದಿನಲ್ಲಿದ್ದ ಡಚ್ ಕಚೇರಿಗೆ ಡೆನ್‌ಮಾರ್ಕ್ ದೇಶದಿಂದ ಒಬ್ಬ ಡಚ್ ಯುವಕ ಬಂದ. ಅಲ್ಲಿದ್ದ ಮರದ ಮೇಲೆ ಒಂದು ಕೋತಿ ಕುಳಿತಿತ್ತು. ಅದನ್ನು ಒಂದೇ ಏಟಿಗೆ ಹೊಡೆದು ಸಾಯಿಸುವೆನೆಂದು ಆತ ಜೂಜುಕಟ್ಟಿದ. ಬಂದೂಕಿನಿಂದ ಗುರಿಯಿಟ್ಟು ಹೊಡೆದ. ಕೋತಿ ಏಟು ತಗಲಿ ನೆಲಕ್ಕೆ ದೊಪ್ಪೆಂದು ಬಿತ್ತು. ಇದನ್ನು ಕಂಡ ಕೂಡಲೆ ಡಚ್ ಕಂಪೆನಿಯ ಬನಿಯ ನೌಕರರೆಲ್ಲಾ ಕೂಗಿ ರಂಪಮಾಡಿ, ತಮ್ಮ ಕೆಲಸಕ್ಕೆ ರಾಜೀನಾಮೆಕೊಡುತ್ತೇವೆಂದು ಗಲಾಟೆಮಾಡಿದರು. ಬಹಳ ಪ್ರಯಾಸದಿಂದ ಅವರನ್ನು ಸಮಾಧಾನಮಾಡಲಾಯಿತು.

ಅಹಮದಾಬಾದಿನಿಂದ ಮುಂದೆ ಸಾಗಿದರೆ ಸಿಕ್ಕುವುದು ಸಿಧ್‌ಪುರ. 'ಚೀಟಿ'(chit) ಎಂದು ಹೇಳುವ ಬಣ್ಣದ ಬಟ್ಟೆಗಳ ವ್ಯಾಪಾರದಿಂದ ಈ ಊರಿಗೆ ಈ ಹೆಸರು ಬಂದಿದೆ. ನಾವು ಇಲ್ಲಿಗೆ ಬಂದಾಗ ಊರ ಹೊರಗೆ ಎರಡು ಮರಗಳ ಕೆಳಗೆ ಬಿಡಾರಮಾಡಿದ್ದೆವು. ಆಗ ನಾಲ್ಕೈದು ಸಿಂಹಗಳನ್ನು ಕಂಡೆವು. ಅವುಗಳನ್ನು ಪಳಗಿಸಲು ಐದಾರು ತಿಂಗಳು

ಹಿಡಿಯಿತು ಎಂದು ಅವುಗಳ ಮಾಲೀಕ ಹೇಳಿದ. ನಾನು ನನ್ನ ಗಾಡಿಯಲ್ಲಿ ಕುಳಿತು ಕೊಂಡೇ ಆ ಪಳಗಿದ ಸಿಂಹಗಳನ್ನು ನೋಡಿದೆ.

ಮಾರನೆಯ ದಿನ ಇನ್ನೊಂದು ಅನುಭವವಾಯಿತು. ಮಹಮ್ಮದಿಯ ಫಕೀರರನ್ನು 'ದರ್ವೇಶಿ'ಗಳೆಂದು ಕರೆಯುತ್ತಾರಷ್ಟೆ. ಇವರು ಎಷ್ಟು ಜನರಿದ್ದಾರೆಂದು ಲೆಕ್ಕಹಾಕಿದೆ. ಐವತ್ತೇಳು ದರ್ವೇಶಿಗಳಿದ್ದರು. ಇವರಲ್ಲಿ ಐದು ಮಂದಿ ಮುಖ್ಯ ದರ್ವೇಶಿಗಳಿದ್ದರು. ಈ ಮುಖ್ಯ ದರ್ವೇಶಿಗಳು ಕಿತ್ತಳೆ ಬಣ್ಣದ ಲಂಗೋಟಿ ಕಟ್ಟಿಕೊಂಡು ಬೆನ್ನು ಮೇಲೆ ಹುಲಿಯ ಚರ್ಮವನ್ನು ಹೊದ್ದುಕೊಂಡು ಅದನ್ನು ಕುತ್ತಿಗೆಗೆ ಕಟ್ಟಿಕೊಡಿದ್ದರು. ಉಳಿದ ದರ್ವೇಶಿಗಳಿಗೆ ಲಂಗೋಟಿಯಷ್ಟೇ ಇದ್ದದ್ದು. ಈ ದರ್ವೇಶಿಗಳು ತಮ್ಮ ಬೆಳೆದ ತಲೆಗೂದಲನ್ನು ರುಮಾಲಿನೋಪಾದಿಯಲ್ಲಿ ಸುತ್ತಿಕೊಂಡಿದ್ದರು. ಬಿಲ್ಲು ಬಾಣಗಳಿಂದಲೂ ಬಂದೂಕುಗಳಿಂದಲೂ ಸಜ್ಜಿತರಾಗಿದ್ದರು. ಇವರ ಮುಂದೆ ಚಿನ್ನ ಬೆಳ್ಳಿಯ ಜೀನು, ಲಗಾಮು, ರಿಕಾಪುಗಳನ್ನು ಹಾಕಿ ಕೈಯಿಂದ ಹಿಡಿದುಕೊಂಡಿದ್ದ ಎಂಟು ಕುದುರೆಗಳಿದ್ದುವು. ನಾನು ತಂಗಿದ್ದ ಕಡೆಗೆ ಬಂದ ಈ ದರ್ವೇಶಿಗಳು, ತಮ್ಮ ಬಿಡಾರಕ್ಕೆ ಆ ಜಾಗ ಚೆನ್ನಾಗಿರುವುದರಿಂದ ಅದನ್ನು ಬಿಟ್ಟುಕೊಡಬೇಕೆಂದು ಕೇಳಿಕೊಂಡರು. ನಾನು ಬಿಟ್ಟುಕೊಟ್ಟೆ. ಕೂಡಲೇ ಅವರು ನೆಲವನ್ನು ಮಟ್ಟಮಾಡಿ ನೀರು ಚಿಮುಕಿಸಿ ಅಲ್ಲಿ ಬೀಡುಬಿಟ್ಟರು. ಆಗ ಚಳಿಗಾಲವಾದ್ದರಿಂದ ಅವರು ಎರಡು ಕಡೆ ಬೆಂಕಿ ಹಾಕಿ ಕಾಯಿಸಿ ಕೊಳ್ಳಲಾರಂಭಿಸಿದರು. ಅವರ ಊಟ ಆದಮೇಲೆ ಊರಿನ ಕೊತ್ವಾಲ[1] ಬಂದು ಮುಖ್ಯ ದರ್ವೇಶಿಗಳಿಗೆ ತನ್ನ ಸಲಾಮು (ಮರ್ಯಾದೆ) ಸಲ್ಲಿಸಿ, ಅವರು ಅಲ್ಲಿರುವವರೆಗೆ ಅಕ್ಕಿ ಮುಂತಾದ ಭೋಜನ ಸಾಮಗ್ರಿಗಳನ್ನು ಕಳುಹಿಸುವುದಾಗಿ ಹೇಳಿಹೋದ. ಯಾವುದಾದರೂ ಊರನ್ನು ಮುಟ್ಟಿದಾಗ ಈ ದರ್ವೇಶಿಗಳ ಮುಖಂಡ ಒಬ್ಬಿಬ್ಬರನ್ನು ಭಿಕ್ಷೆ ಬೇಡಿ ತರಲು ಊರಿನೊಳಕ್ಕೆ ಕಳುಹಿಸುತ್ತಾನೆ. ಭಿಕ್ಷೆಯಲ್ಲಿ ಏನು ಸಿಕ್ಕಿದರೂ ಅದನ್ನು ಎಲ್ಲರೂ ಸಮವಾಗಿ ಹಂಚಿಕೊಂಡು, ಪ್ರತಿಯೊಬ್ಬರೂ ಬೇರೆ ಬೇರೆ ಅಡಿಗೆ ಮಾಡಿಕೊಂಡು ಊಟಮಾಡುತ್ತಾರೆ. ಆದಿನ ಏನು ಮಿಕ್ಕಿದರೂ ಅದನ್ನು ಬಡಬಗ್ಗರಿಗೆ ಕೊಟ್ಟು ಬಿಡುತ್ತಾರೆ. ಮಾರನೆ ದಿನಕ್ಕೆ ಏನೂ ಇಟ್ಟುಕೊಳ್ಳುವುದಿಲ್ಲ.

ಈ ದರ್ವೇಶಿಗಳ ಬಳಿ ನಾಲ್ಕು ಪೆಟ್ಟಿಗೆ ಸಾಮಾನುಗಳಿದ್ದುವು. ಅರಬ್ಬಿ ಮತ್ತು ಪಾರಸಿ ಭಾಷೆಯ ಪುಸ್ತಕಗಳೂ ಅಡಿಗೆಯ ಪಾತ್ರೆಪರಟೆಗಳೂ ಇದ್ದುವು. ಅವುಗಳನ್ನು ಹೊರಲು ಹತ್ತು ಹನ್ನೆರಡು ಎತ್ತುಗಳಿದ್ದುವು.

ಮುಂದೆ ನನಗೆ ಒಬ್ಬ 'ರಾಜ'ನಿಗೆ ಸೇರಿದ ಬರ್ಗ್ಗಾಂತ್ ಎಂಬ ರಾಜ್ಯ ಸಿಕ್ಕಿತು. ಹಿಂದೊಮ್ಮೆ ನಾನು ಆಗ್ರಾಕ್ಕೆ ಹೋದಾಗ ಇಲ್ಲಿಯ ರಾಜನನ್ನು ನೋಡಲಾಗಿರಲಿಲ್ಲ.

---

[1] ಕೊತ್ವಾಲ (ಕೊತ್ವವಾಲ) : ನಗರ ರಕ್ಷಕ ; ಈಗಿನ ಟಾನ್ ಪೋಲೀಸು ಇನ್ಸ್ಪೆಕ್ಟರನಿಗೆ ಸಮ.

ಅವನ ಕಡೆಯ ಸರದಾರನನ್ನು ಮಾತ್ರ ನೋಡಲು ಸಾಧ್ಯವಾಗಿತ್ತು. ಈಗ ಅವನು ನನ್ನನ್ನು ಬಹಳ ಗೌರವದಿಂದ ಕಂಡು ಅಕ್ಕಿ, ತುಪ್ಪ, ಹಣ್ಣುಗಳನ್ನು ಕೊಟ್ಟು ಸತ್ಕರಿಸಿದ. ಇದಕ್ಕೆ ಪ್ರತಿಯಾಗಿ ನಾನು ಚಿನ್ನ, ಬೆಳ್ಳಿ ಜರತಾರಿಯ ಕ್ಯಾಲಿಕೊ ಬಟ್ಟೆಯನ್ನೂ ರೇಷ್ಮೆಯ ನಡುಪಟ್ಟಿಗಳನ್ನೂ ಬಣ್ಣದ ನಾಲ್ಕು ಕರವಸ್ತ್ರಗಳನ್ನೂ ಒಂದು ಬ್ರಾಂದಿ ಮತ್ತು ಒಂದು ಸ್ಪಾನಿಷ್ ವೈನು (ದ್ರಾಕ್ಷಿ ಮದ್ಯದ) ಸೀಸೆಗಳನ್ನೂ ಕೊಟ್ಟೆ.

ಆಮೇಲೆ, ಹಿಂದಿರುಗುವಾಗ ಒಂದು ಸಂದರ್ಭದಲ್ಲಿ ನಾನು ನನ್ನ ಭಾರವಾದ ಸಾಮಾನುಗಳನ್ನು ಮುಂಚೆಯೇ ಗಾಡಿಗಳಲ್ಲಿ ಕಳುಹಿಸಿದೆ. ಸಾಮಾನ್ಯವಾಗಿ ನನ್ನೊಡನೆ ಇರುತ್ತಿದ್ದ ೬೦ 'ಪಿಒನ್' (peon)ಗಳು ಮತ್ತು ಎಳೆಂಟು ಜನ ಸಹಚರರೊಡನೆ ಒಂದು ದಿನ ಇಲ್ಲಿ ಬಿಡಾರಮಾಡಿದೆ. ಆಗ ನನ್ನ ಪಿಒನ್‌ಗಳು ಹೇಳಿದರು, ಬರ್ಗ್ಲಾಂತ್ ರಾಜನ ರಾಜ್ಯದಲ್ಲಿ ಹೋಗಬೇಕಾದರೆ ಇನ್ನೂ ನೂರು ಪಿಒನ್‌ಗಳನ್ನು ನೇಮಿಸಿಕೊಂಡ ಹೊರತು ಸಾಧ್ಯವಿಲ್ಲ ಎಂದು. ನಾನು ಅವರ ಅಂಜುಬುರುಕತನಕ್ಕಾಗಿ ಬೈಯ್ದು, ನೂರು ಜನ ಬೇಡ ಐವತ್ತು ಜನ ಸಾಕೆಂದು ಹೇಳಿ ಅಷ್ಟು ಜನರನ್ನು ಕರೆತರಲು ನನ್ನ ಕಡೆಯವರನ್ನು ಕಳುಹಿಸಿದೆ. ರಾಜನ ರಾಜ್ಯದಲ್ಲಿ ಮೂರು ದಿನಗಳ ಕಾಲ ಪ್ರಯಾಣಮಾಡಬೇಕಾ ಗಿತ್ತು. ಅಷ್ಟು ದಿನಕ್ಕೆ ಅವರು ತಲಾ ನಾಲ್ಕು ರೂಪಾಯಿ ಕೇಳಿದರು. ಒಂದು ತಿಂಗಳಿಗೆ ನಾಲ್ಕು ರೂಪಾಯಿ ಕೇಳುವ ಕಡೆ ಇವರು ಮೂರು ದಿನಕ್ಕೆ ನಾಲ್ಕು ರೂಪಾಯಿ ಕೇಳಿದರು. ನಾನು ಬೇಡವೆಂದು ಹೇಳಿ ಮಾರನೆಯ ದಿನ ಹೊರಡಲು ಅನುವಾದೆ. ಆಗ ನನ್ನೊಡನೆ ಬಂದಿದ್ದ ಪಿಒನ್‌ಗಳೆಲ್ಲಾ ಮುಂದೆ ಏನಾಗುವುದೊ ಎಂಬ ಹೆದರಿಕೆಯಿಂದ ಬರುವುದಿಲ್ಲ ಎಂದರು. ಆದರೂ ನಾನು ನನ್ನೊಡನೆ ಬಂದ ನಾಲ್ಕೈದು ಅನುಚರರನ್ನು ಕಟ್ಟಿಕೊಂಡು ಪ್ರಯಾಣಹೊರಟೆ.

ದಾರಿಯಲ್ಲಿ ಐವತ್ತು ಜನ ಸವಾರರು ನಮ್ಮನ್ನು ಅಡ್ಡಹಾಕಿದರು. ನಾನು ಧೈರ್ಯಗೆಡದೆ, ನಾನು ಮತ್ಯಾರೂ ಅಲ್ಲ, ಐದಾರು ವಾರಗಳ ಹಿಂದೆ ಬಂದಿದ್ದ ಅದೇ 'ಫರಂಗೀ (Frank)ಯುವ ಎಂದೆ. ಅದೃಷ್ಟವಶಾತ್ ನಾನು ಯಾರಿಗೆ ಹಿಂದೆ ಬ್ರಾಂದಿ ಮತ್ತು ವೈನನ್ನು ಕೊಟ್ಟಿದ್ದೆನೋ ಆ ಸರದಾರನೇ ನಾಲ್ಕೈದು ಜನ ಸವಾರರೊಡನೆ ಬಂದ. ನನ್ನನ್ನು ಕಂಡು ಅವನಿಗೆ ಬಹಳ ಸಂತೋಷವಾಯಿತು. ನಾನು ಹಿಂದೆ ಕೊಟ್ಟಂಥ ವೈನು ಇದೆಯೇ ಎಂದು ಕೇಳಿದ. ಇದಕ್ಕುತ್ತರವಾಗಿ ನಾನು ಅದಿಲ್ಲದೆ ಪ್ರಯಾಣಮಾಡು ವುದೇ ಇಲ್ಲ ಎಂದೆ. ಈ ಮಾತನ್ನು ಕೇಳಿದ ಆತ ತನ್ನ ರಾಜನಿಗೆ ಈ ವಿಚಾರವನ್ನು ತಿಳಿಸಿದ. ರಾಜ ನಾನಿದ್ದ ಬಳಿಗೆ ಬಂದು ಒಂದೆರಡು ದಿನ ತನ್ನೊಡನಿದ್ದು ಹೋಗಬೇಕೆಂದು ಹೇಳಿದ. ಅವನ ಆಹ್ವಾನವನ್ನು ಅಂಗೀಕರಿಸಿ ನಾನು ಮರಗಳ ಕೆಳಗೆ ಎರಡು ದಿನ ಬಿಡಾರ ಮಾಡಿದೆ. ಆ ಎರಡು ದಿನಗಳೂ ರಾಜನು ಬಂದು ಮದ್ಯಪಾನಮಾಡುತ್ತಾ ಖುಷಿ ಯಾಗಿ ಕಾಲ ಕಳೆದ. ಕುಡಿಯುವ ವೇಳೆ 'ಬಲದಿನೆ (Baladine) ಎಂಬ ನರ್ತಕಿಯರ

ಗಾಯನ ನೃತ್ಯಗಳಾದುವು[1] ಅವರಿಲ್ಲದೆ ಹೋದರೆ ಇಂಡಿಯನರಿಗೂ ಮತ್ತು ಪರ್ಷಿಯನರಿಗೂ ಸರಿಯಾದ ಖುಷಿ ಆಗುವುದಿಲ್ಲವಂತೆ !

ನಾನು ಹೊರಡುವಾಗ ರಾಜ ನನ್ನ ರಕ್ಷಣೆಗೆ ಇನ್ನೂರು ಜನ ಕುದುರೆಸವಾರರನ್ನು ಕಳುಹಿಸಿಕೊಟ್ಟ. ಅವರು ಮೂರು ದಿನ ನನ್ನನ್ನು ನೋಡಿಕೊಂಡುದಕ್ಕೆ ಅವರಿಗೆ ನಾನು ಕೊಟ್ಟದ್ದು ಮೂರು ನಾಲ್ಕು ಪೌಂಡುಗಳಷ್ಟು ತೂಕದ ಹೊಗೆಸೊಪ್ಪು ಅಷ್ಟೆ.

ಅಹಮದಾಬಾದ್ ಮುಟ್ಟಿ ಇದನ್ನೆಲ್ಲಾ ಹೇಳಿದಾಗ ಅಲ್ಲಿಯವರಿಗೆಲ್ಲಾ ಆಶ್ಚರ್ಯ, ಪರಸ್ಥಳದವರನ್ನು ಪರದಾಡಿಸುವ ರಾಜ ನನಗೆ ಅಷ್ಟೊಂದು ಮರ್ಯಾದೆ ಮಾಡಿದನೇ ಎಂದು !

ಹಲವಾರು ಸ್ಥಳಗಳನ್ನು ಹಾದು ಮುಂದೆ ಹೋದರೆ ಸಿಕ್ಕುವುದು ಮೆರ್ತಾ (Mertha = ಮರ್ತಾ) ಎಂಬ ಊರು. ನಾನೊಮ್ಮೆ ನನ್ನ ಪ್ರವಾಸದ ವೇಳೆ ಬಂದಾಗ ಇಲ್ಲಿ ತಂಗಬೇಕಾಗಿಬಂದಿತು. ಆದರೆ ಇಲ್ಲಿದ್ದ ಕಾರವಾನ್ ಸರಾಯ್‌ಗಳೆಲ್ಲಾ ಆಗ ಭರ್ತಿಯಾಗಿದ್ದುವು. ಷಾಜಹಾನನ ಚಿಕ್ಕಪ್ಪ, ಅಂದರೆ ಷೈಸ್ತಾಖಾನನ ಹೆಂಡತಿ, ಷಾಜಹಾನನ ಮಗ ಸುಲ್ತಾನ್ ಷೂಜನಿಗೆ ತನ್ನ ಮಗಳನ್ನು ಮದುವೆಮಾಡಲು ಕರೆದುಕೊಂಡುಹೋಗುತ್ತಿದ್ದುದೆ ಇದಕ್ಕೆ ಕಾರಣ. ಸರಾಯ್‌ಗಳಲ್ಲಿ ಜಾಗ ಸಿಕ್ಕದ ಕಾರಣ ನಾನು ನನ್ನ ಡೇರೆಯನ್ನು ಊರ ಹೊರಗೆ ದೊಡ್ಡಮರಗಳ ಕೆಳಗೆ ಹೊಡಿಸಿದೆ. ಆದರೆ ಎರಡು ಗಂಟೆಗಳನಂತರ ಆನೆಗಳು ಬಂದು ಆ ಮರಗಳನ್ನು ಹಂಚಿಕಡ್ಡಿಗಳನ್ನು ಮುರಿಯುವಂತೆ ಲಟಪಟ ಮುರಿದು ಎಸೆದುಬಿಟ್ಟವು. ಬೇಗಮಳ ಆಜ್ಞೆಯಂತೆ ಹೀಗೆ ಮರಗಳನ್ನು ಮುರಿದು ಹಾಕಲಾಯಿತಂತೆ. ಮೆರ್ತಾ ನಿವಾಸಿಗಳು ಆಕೆಯನ್ನು ಮರ್ಯಾದೆಯಿಂದ ಎದುರುಗೊಂಡು ಸಲ್ಲಿಸಬೇಕಾದ ನಜರು–ಮುಜರುಗಳನ್ನು ಸಲ್ಲಿಸದಿದ್ದುದೇ ಆಕೆಯ ಆಜ್ಞೆಗೆ ಕಾರಣವಂತೆ !

ಆಗ್ರಾ ತಲಪುವುದಕ್ಕೆ ಇನ್ನೂ ಹಲವಾರು ಊರುಗಳ ಮೂಲಕ ಪ್ರಯಾಣ ಮಾಡಬೇಕು. ಸೂರತ್ತಿನಿಂದ ಈ ಮಾರ್ಗವಾಗಿ ಆಗ್ರಾ ೪೧೫ ಕೋಶಗಳು. ಇಷ್ಟು ದೂರ ಪ್ರಯಾಣ ಮಾಡಲು ೩೩ ದಿನಗಳಾಗುತ್ತವೆ. ಆದರೆ ಅಲ್ಲಿ ಇಲ್ಲಿ ತಂಗುತ್ತಾ ಬರಬೇಕಾಗುವುದರಿಂದ ಆಗ್ರಾ ತಲಪಲು ವಾಸ್ತವವಾಗಿ ೩೫ ಅಥವಾ ೪೦ ದಿನಗಳಾಗುತ್ತವೆ.

---

[1]ಬಲದಿನೆ : ಈ ಪದ ಪೋರ್ಚುಗೀಸ್ ಭಾಷೆಯ 'ಬಯಿಲ್ ಆಡೇಯಿರಾ' ಎಂಬ ಪದದಿಂದ ಬಂದದ್ದು ಎಂದು ಗೊತ್ತಾಗುತ್ತದೆ. 'ಬಯ್ಲರ್' ಎಂದರೆ ನೃತ್ಯ. ಆದ್ದರಿಂದ ಬಯಿಲ್‌ಅಡೇಯಿರಾ ಎಂದರೆ ನರ್ತಕಿ ಎಂದು ಅರ್ಥವಂತೆ.

ಈಗ ಕಂದಹಾರ್[1]ನಿಂದ ಆಗ್ರಾಕ್ಕೆ ಹೋಗುವ ಎರಡು ಮಾರ್ಗಗಳ ಬಗ್ಗೆ ನಾಲ್ಕು ಮಾತು ಹೇಳಬೇಕು. ಒಂದು ಮಾರ್ಗ ಕಾಬೂಲ್[2] ಮುಖಾಂತರ ; ಇನ್ನೊಂದು ಮುಲ್ತಾನ್[3] ಮುಖಾಂತರ. ಎರಡನೆಯ ದಾರಿಯಲ್ಲಿ ಪ್ರಯಾಣ ಮೊದಲನೆಯ ದಾರಿಯ ಪ್ರಯಾಣಕ್ಕಿಂತ ಹತ್ತು ದಿನಗಳು ಕಮ್ಮಿ. ಆದರೆ ಕಾರವಾನ್ ಅಷ್ಟು ದಿವಸಗಳೊಳಗೆ ಹೋಗುವುದು ಅಪರೂಪ. ಏಕೆಂದರೆ, ಉದ್ದಕ್ಕೂ ಮರಳುಗಾಡು. ಅಲ್ಲದೆ, ಮೂರು ನಾಲ್ಕು ದಿವಸಗಳು ನೀರಿಲ್ಲದೆ ಪ್ರಯಾಣಮಾಡಬೇಕು. ಈ ಕಾರಣ ಪ್ರಯಾಣಿಕರು ಸಾಮಾನ್ಯವಾಗಿ ಕಾಬೂಲ್ ಮುಖಾಂತರದ ಮಾರ್ಗವನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ. ಕಂದಹಾರದಿಂದ ಕಾಬೂಲ್ ಹಾಗೂ ದಿಲ್ಲಿಯ ಮೂಲಕ ಆಗ್ರಾಕ್ಕೆ ಹೋಗುವ ದಾರಿ ಎಪ್ಪತ್ತು ಮಜಲು (stages)ಗಳಷ್ಟಾಗುತ್ತದೆ. ಆದರೆ ತುರ್ತು ಕೆಲಸವಿರುವ ವರ್ತಕರು ಮೂರು ನಾಲ್ಕು ಜನ ಸೇರಿಕೊಂಡು ಕುದುರೆಗಳ ಮೇಲೆ ಹೋಗುತ್ತಾರೆ. ಆಗ ಪ್ರಯಾಣವನ್ನು ಅರ್ಧ ಕಾಲದಲ್ಲಿ, ಅಂದರೆ ೬೦ ರಿಂದ ೭೫ ದಿನಗಳಲ್ಲಿ ಮುಗಿಸಬಹುದು.

ಮುಲ್ತಾನಿನಲ್ಲಿ ಹೇರಳವಾದ ಕ್ಯಾಲಿಕೊ ಬಟ್ಟೆ ತಯಾರಾಗುತ್ತದೆ. ಈ ಬಟ್ಟೆಗಳನ್ನು (ಸಿಂಧೂ) ನದಿಯ ಮೇಲಿರುವ ತಟ್ಟಾ ಎಂಬಲ್ಲಿಗೆ ಕಳುಹಿಸಿ ಅಲ್ಲಿಂದ ರಫ್ತು ಮಾಡುತ್ತಾರೆ. ಆದರೆ ಆ ಬಂದರಿನಲ್ಲಿ ಮರಳು ಮುಚ್ಚುತ್ತಿರುವುದರಿಂದ ದೊಡ್ಡ ದೊಡ್ಡ ಹಡಗುಗಳು ಬರುವುದು ಕಡಿಮೆಯಾಗಿ ವ್ಯಾಪಾರ ಹಿಂದ ಬೀಳುತ್ತಿದೆ. ಈ ಕಾರಣ ಮುಲ್ತಾನಿನಲ್ಲಿದ್ದ ಕುಶಲ ಕೆಲಸಗಾರರು ಊರು ಬಿಟ್ಟು ಬೇರೆ ಬೇರೆ ಕಡೆ ಹೊರಟುಹೋಗುತ್ತಿದ್ದಾರೆ. ಪರ್ಷಿಯಾಕ್ಕೆ ವಲಸೆಹೋಗುವ ಬನಿಯರು ಮೊದಲು ಮುಲ್ತಾನಿಗೆ ಬಂದು, ಅಲ್ಲಿಂದ ಪರ್ಷಿಯಾಕ್ಕೆ ಹೋಗುತ್ತಾರೆ. ಬನಿಯರು ಯಹೂದಿಗಳ ವೃತ್ತಿಯನ್ನು ಅನುಸರಿಸುತ್ತಾರೆ. ಆದರೆ ವ್ಯಾಪಾರದಲ್ಲಿ ಮಾತ್ರ ಯಹೂದಿಗಳನ್ನು ಮೀರಿಸುತ್ತಾರೆ. ಕೆಲವು ವಿಶೇಷ ದಿನಗಳಲ್ಲಿ ಮಾತ್ರ ಈ ಜನ ಕೋಳಿ ತಿನ್ನುತ್ತಾರೆ. ಇವರಲ್ಲಿ ಇಬ್ಬರು ಮೂವರು ಸಹೋದರರು ಒಬ್ಬಳನ್ನೇ ಮದುವೆಯಾಗುವ ಸಂಪ್ರದಾಯವುಂಟು. ಎಲ್ಲರಿಗಿಂತ ಹಿರಿಯವನಾದ ಸಹೋದರನೇ ಹುಟ್ಟಿದ ಮಕ್ಕಳಿಗೆ ತಂದೆಯೆಂದು ಪರಿಗಣಿಸಲ್ಪಡುತ್ತಾನೆ.

---

[1] ಕಂದಹಾರ್ : ಆಫ್‌ಘಾನಿಸ್ಥಾನದ ದಕ್ಷಿಣ ಭಾಗದ ನಗರ. ಕಾಬೂಲಿನ ನೈರುತ್ಯಕ್ಕೆ ೩೫೦ ಮೈಲಿ ದೂರದಲ್ಲಿದೆ. ಪ್ರಾಚೀನ ಕಾಲದಿಂದಲೂ ಮುಖ್ಯ ವ್ಯಾಪಾರಸ್ಥಳ.

[2] ಕಾಬೂಲ್ : ಆಫ್‌ಘಾನಿಸ್ಥಾನದ ರಾಜಧಾನಿ.

[3] ಮುಲ್ತಾನ್ : ಪಾಕಿಸ್ಥಾನದ ನಗರ. ಜಮಖಾನೆ, ರೇಷ್ಮೆ ಮತ್ತು ಹತ್ತಿಬಟ್ಟೆ ತಯಾರಿಕೆಗೆ ಪ್ರಸಿದ್ಧಿ.

ಈ ಊರಿನವರಾದ ಅಸಂಖ್ಯಾತ 'ಬಲದಿನ್' (Baladin) ಮತ್ತು 'ಬಲದಿನೆ' (Baladine)ಯರು ಪರ್ಶಿಯಾದ ನಾನಾ ಕಡೆಗಳಲ್ಲಿ ಇದ್ದಾರೆ.

ಮುಲ್ತಾನಿನಿಂದ ಮುಂದೆ ಸಿಕ್ಕುವುದು ಕಾಬುಲ್. ಇದು ದೊಡ್ಡ ಪಟ್ಟಣ. ಇಲ್ಲಿಗೆ ಉಸ್ಬೆಕ್[1]ನಿಂದ ಕುದುರೆಗಳನ್ನು ತಂದು ಮಾರಾಟಮಾಡುತ್ತಾರೆ. ವರ್ಷೆ ವರ್ಷೆ ೬೦,೦೦೦ (ರೂಪಾಯಿ)ಗಳಿಗಿಂತ ಹೆಚ್ಚಿನ ಮೊಬಲಗಿನಷ್ಟು ಕುದುರೆಗಳು ಮಾರಾಟ ವಾಗುತ್ತವೆ.

ಕಾಬೂಲ್‌ನಿಂದ ಆಟ್ಟೋಕ್ ಮುಖಾಂತರ ಪ್ರಯಾಣಮಾಡಿದರೆ ಸಿಕ್ಕುವುದು ಲಾಹೋರ್. ಈ ಪಟ್ಟಣ ಒಂದು ಸುಬೆಯ ರಾಜಧಾನಿ. ಇಂಡಸ್ ನದಿಯನ್ನು ಸೇರುವ ಐದು ನದಿಗಳಲ್ಲಿ ಒಂದು ನದಿಯ ಬಳಿ (ರವಿ ನದಿ) ಈ ಪಟ್ಟಣವನ್ನು ಕಟ್ಟಲಾಗಿದೆ. ಐದು ನದಿಗಳ ಕಾರಣವಾಗಿ ಈ ಪ್ರದೇಶಕ್ಕೆಲ್ಲಾ 'ಪೆನ್ಜಾಬ್' (Penjab : ಪಂಜಾಬ್) ಎಂಬ ಹೆಸರು ಬಂದಿದೆ. ಲಾಹೋರ್ ಪಟ್ಟಣ ದೊಡ್ಡದಾಗಿದ್ದು ಒಂದು ಕೋಶಕ್ಕಿಂತ ಹೆಚ್ಚು ಉದ್ದವಾಗಿದೆ. ಆದರೆ ಬಹುತೇಕ ಮನೆಗಳು ಪಾಳುಬೀಳುತ್ತಿವೆ. ಬಹಳ ಮಳೆಯ ಕಾರಣ ಅನೇಕ ಮನೆಗಳು ಬಿದ್ದುಹೋಗುತ್ತಿವೆ. ರಾಜನ ಅರಮನೆಯು ಸುಂದರವಾಗಿದೆ. ಕುಡಿಯಲು ಇಲ್ಲಿ ವೈನ್ ಸಿಕ್ಕುತ್ತದೆ.

ಇಲ್ಲಿ ಒಂದು ವಿಚಾರ ಹೇಳಬೇಕು. ಅದೇನೆಂದರೆ, ಲಾಹೋರ್ ಮತ್ತು ಉತ್ತರ ದಲ್ಲಿರುವ ರಾಜ್ಯಗಳನ್ನು ಬಿಟ್ಟನಂತರ ಆ ಕಡೆ ಇರುವ ಹೆಂಗಸರ ಮೈಮೇಲೆ ಎಲ್ಲಿಯೂ ಕೂದಲು ಕಾಣಿಸದಿರುವುದು. ಗಂಡಸರ ಗಡ್ಡದ ಮೇಲೂ ಕೂದಲು ಅಷ್ಟಕ್ಕಷ್ಟೆ.[1]

ಲಾಹೋರಿನಿಂದ ಮುಂದೆ ಸಿಕ್ಕುವ ದೊಡ್ಡ ಊರೊಂದರೆ ದಿಲ್ಲಿ. ಈ ದಾರಿಯ ಉದ್ದಕ್ಕೂ ಮತ್ತು ದಿಲ್ಲಿಯಿಂದ ಆಗ್ರಾದವರೆಗೂ ದಾರಿಯು ಎರಡು ಕಡೆ ಸೊಗಸಾದ ಸಾಲುಮರಗಳ ದೃಶ್ಯವನ್ನು ನೋಡಬಹುದು. ಕೆಲವು ಕಡೆಗಳಲ್ಲಿ ಮಾತ್ರ ಮರಗಳು ಒಣಗಿಹೋಗಿವೆ. ಜನರು ಅವುಗಳ ಜಾಗದಲ್ಲಿ ಬೇರೆ ಮರಗಳನ್ನು ನೆಟ್ಟಿಲ್ಲ.

ದಿಲ್ಲಿ ಜಮುನಾ ನದಿಯ ದಡದಲ್ಲಿದೆ. ಷಾಜಹಾನ್ ತನ್ನ ಹೆಸರಿನಲ್ಲಿ 'ಜಹಾನಾಬಾದ್' ಎಂಬ ಹೊಸ ಪಟ್ಟಣವನ್ನು ಕಟ್ಟಿಸಿದ್ದಾನೆ. ಇಲ್ಲಿಯ ಒಳ್ಳೆಯ ಹವೆಯ ಕಾರಣದಿಂದಾಗಿ ಆಗ್ರಾ ಬಿಟ್ಟು ಇಲ್ಲಿರಲು ಚಕ್ರವರ್ತಿ ಆರಂಭಮಾಡಿದಾಗಿನಿಂದ

---

[1]ಉಸ್ಬೆಕ್ : ಈಗ ಸೋವಿಯತ್ ರಷ್ಯಾಕ್ಕೆ ಸೇರಿರುವ ಉಸ್ಬೆಕಿಸ್ಥಾನ. ಪೂರ್ಣ ಹೆಸರು ಉಸ್ಬೆಕ್ ಸೋವಿಯತ್ ಸಮಾಜವಾದಿ ಗಣರಾಜ್ಯ (Uzbek Soviet Socialist Republic). ಬಹು ಭಾಗ ಮರಳ್ಗಾಡಿನಿಂದ ಕೂಡಿದ್ದರೂ ಮಧ್ಯ ಏಷ್ಯಾ ಗಣರಾಜ್ಯಗಳಲ್ಲೆಲ್ಲಾ ಹೆಚ್ಚು ಪ್ರಗತಿ ಹೊಂದಿದ ರಾಜ್ಯ. ರಾಜಧಾನಿ ತಾಷ್ಕೆಂಟ್ (Tashkent).

[1]ಈ ಜನರ ತಲೆಯ ಮೇಲೂ ಕೂದಲು ಇರಲಿಲ್ಲವೆಂಬುದು ಟಾವೆರ್ನ್ಯೇನ ಅಭಿಪ್ರಾಯ ವಲ್ಲವೆಂದು ಕಾಣುತ್ತದೆ.

ಹಾಳುಬಿದ್ದು ದಿಲ್ಲಿ ಅದು ಬಡಬಗ್ಗರ ಊರಾಗಿದೆ. ಇಂಡಿಯಾದ ಬೇರೆ. ಕಡೆಗಳಲ್ಲಿರು ವಂತೆ ಇಲ್ಲಿರುವ ಬೀದಿಗಳು ಕಿರಿದು ; ಮನೆಗಳು ಬಿದಿರಿನಿಂದ ಕಟ್ಟಿದವು. ಮೊಗಲ್ ಆಸ್ಥಾನದ ಮೂರು ನಾಲ್ಕು ಶ್ರೀಮಂತ ಸರದಾರರು (nobles) ಮಾತ್ರ ವಿಶಾಲವಾದ ಆವರಣಗಳೊಳಗೆ ಡೇರೆಗಳನ್ನು ಹಾಕಿಕೊಂಡು ವಾಸಮಾಡುತ್ತಾರೆ. ಆಸ್ಥಾನದಲ್ಲಿದ್ದ ಸನ್ಯಾಸ್ಯ ಜೆಸ್ಸೂಯಿಟ್ ಫಾದರ್ ಇದ್ದದ್ದು ಇಲ್ಲಿಯೇ.

ದಿಲ್ಲಿಯಂತೆ ಜಹಾನಾಬಾದ್ ನಗರವೂ ಅಡ್ಡಾದಿಡ್ಡಿಯಾಗಿ ಕಟ್ಟಲಾಗಿರುವ ಊರು. ಇವೆರಡಕ್ಕೂ ಮಧ್ಯೆ ಒಂದು ಗೋಡೆ ಮಾತ್ರ ಇದೆ. ಖಾಸಗಿಯವರೆಲ್ಲರ ಮನೆಗಳ ಸುತ್ತ ದೊಡ್ಡ ಆವರಣವಿದೆ. ಆವರಣದ ಮಧ್ಯೆ ಮನೆ ಇದೆ. ಈ ಕಾರಣ, ಈ ಮನೆಗಳಲ್ಲಿ ಕೂಡಿಹಾಕಿದ ಹೆಂಗಸರನ್ನು ನೋಡುವುದು ಕಷ್ಟ. ರಾಜನ ಅರಮನೆ ಅರ್ಧ ಹರಿದಾರಿಯ ಸುತ್ತಳತೆಯಷ್ಟು ದೊಡ್ಡದಾಗಿದೆ. ರಾಜನ ಅಂಗರಕ್ಷಕರನ್ನು 'ಒಮ್ರಾ' ಗಳೆಂದು ಕರೆಯುತ್ತಾರೆ. ಒಮ್ರಾ(Omarh)'ಅಮೀರ' ಎಂಬುದರ ಬಹುವಚನ. ರಾಜನು ದರ್ಬಾರಿಗೆ ಕುಳಿತುಕೊಳ್ಳುವ ಸ್ಥಳವನ್ನು 'ದಿವಾನ್' (Divan)ಎಂದು ಕರೆಯುತ್ತಾರೆ. ರಾಜನ ಪ್ರಧಾನ ಮಂತ್ರಿಯನ್ನು (First Minister of State) 'ನವಾಬ' (Nawab)ನೆಂದು ಕರೆಯುತ್ತಾರೆ. ರಾಜನು ಸಿಂಹಾಸನದ ಮೇಲೆ ಕುಳಿತಿರುವವರೆಗೆ ಯಾರೂ ಅಲ್ಲಿಂದ ಕದಲುವಂತಿಲ್ಲ. ಆದರೆ ನನಗೆ ರಾಜ ವಿನಾಯಿತಿ ನೀಡಿದ್ದ.

ದಿಲ್ಲಿಯಿಂದ ಆಗ್ರಾಕ್ಕೆ ಹೋಗುವ ದಾರಿಯಲ್ಲಿ ಮಥುರಾ ಎಂಬ ಹೆಸರಾಂತ ದೇವಸ್ಥಾನ ಸಿಕ್ಕುತ್ತದೆ. ಮೊದಲಿಗೆ ಜಮುನಾ ನದಿ ಈ ದೇವಸ್ಥಾನಕ್ಕೆ ತಾಗಿ ಹರಿಯು ತ್ತಿತ್ತು. ಈ ಕಾರಣ ಬಹಳ ಜನ ಯಾತ್ರಿಕರು ಬಂದು ನದಿಯಲ್ಲಿ ಸ್ನಾನಮಾಡಿ ದೇವ ಸ್ಥಾನಕ್ಕೆ ಹೋಗುತ್ತಿದ್ದರು. ಆದರೆ ಈಗ ನದಿ ಒಂದು ಕೋಶದಷ್ಟು ದೂರ ಹಿಂದಕ್ಕೆ ಸರಿದಿದೆ. ಆದ್ದರಿಂದ ಮೊದಲಿನಂತೆ ಯಾತ್ರಾರ್ಥಿಗಳು ಇಲ್ಲಿಗೆ ಬರುತ್ತಾ ಇಲ್ಲ.

ಆಗ್ರಾ ಮರಳುಮಣ್ಣಿನ ಪ್ರದೇಶದಲ್ಲಿರುವ ನಗರ. ಈ ಕಾರಣವೇ ಇಲ್ಲಿ ಸಹಿಸ ಲಾರದ ಬಿಸಿಲು. ಇಡೀ ಇಂಡಿಯಾದಲ್ಲೆಲ್ಲಾ ಅತ್ಯಂತ ದೊಡ್ಡದಾದ ಪಟ್ಟಣ ಆಗ್ರಾ. ಇದು ಮೊದಲಿಗೆ ರಾಜರುಗಳ ವಾಸಸ್ಥಳವಾಗಿತ್ತು. ಶ್ರೀಮಂತರ ಮನೆಗಳನ್ನು ಬಿಟ್ಟರೆ ಉಳಿದವರ ಮನೆಗಳೆಲ್ಲಾ ಇಂಡಿಯಾದ ಬೇರೆ ಕಡೆಯ ಮನೆಗಳಂತಿವೆ. ಆಗ್ರಾದಲ್ಲಿ ಮುಖ್ಯವಾದುದೆಂದರೆ ರಾಜನ ಅರಮನೆ ಮತ್ತು ಕೆಲವು ಸುಂದರವಾದ ಸಮಾಧಿಮಂದಿರ ಗಳು. ರಾಜನು ಈಗ ಜಹಾನಾಬಾದಿನಲ್ಲಿರುವುದರಿಂದ ಅರಮನೆಯ ಮೇಲುಸ್ತುವಾರಿ ಯನ್ನು ಒಬ್ಬ ನಂಬಿಕಸ್ತನಾದ ಅಮೀರನಿಗೆ ವಹಿಸಿದ್ದಾನೆ. ಈ ಅಮೀರನಿಗೂ ಡಚ್ಚರು ಮತ್ತು ಎಲ್ಲಾ ಫರಂಗಿಗಳಿಗೂ ತುಂಬ ಸ್ನೇಹ. ಇಲ್ಲಿರುವ ಡಚ್ ಫ್ಯಾಕ್ಟರಿಯ[1]

[1]ಫ್ಯಾಕ್ಟರಿ : ಇಂಗ್ಲೀಷರು, ಫ್ರೆಂಚರು, ಡಚ್ಚರು ಮತ್ತು ಪೋರ್ಚುಗೀಸರು ವ್ಯಾಪಾರ ಕ್ಕಾಗಿ ಭಾರತ ಮತ್ತು ದೂರ ಪ್ರಾಚ್ಯದಲ್ಲಿ ಕಟ್ಟಿಕೊಂಡ ಕೋಠಿಗಳಿಗೆ 'ಫ್ಯಾಕ್ಟರಿ' ಗಳು ಎಂಬ ಹೆಸರಿತ್ತು.

ಮುಖ್ಯಸ್ಥನಾದ ಮೆಸ್ಯವೇಲಾ (M Velant) ಎಂಬುವನೊಡನೆ ಅರಮನೆ ನೋಡಲು ಹೋಗಿದ್ದೆ. ಅರಮನೆ ಬಹಳ ಭವ್ಯವಾದುದೆಂದು ಹೇಳಲೇಬೇಕು.

ಸಮಾಧಿಗಳಲ್ಲಿ ಅತ್ಯಂತ ಸೊಗಸಾದುದೆಂದರೆ ಷಾಜಹಾನನ ಹೆಂಡತಿಯದು[1]. ಷಾಜಹಾನ್ ಬೇಕಾಗಿಯೇ ಈ ಸಮಾಧಿಯನ್ನು ತಸಿಮ್‌ಮಕಾನ್ ಎಂಬಲ್ಲಿ ಕಟ್ಟಿಸಿದ. ಏಕೆಂದರೆ, ಅಲ್ಲಿಗೆ ಬರುವ ಎಲ್ಲಾ ಪರದೇಶದವರೂ ಅದನ್ನು ನೋಡಿ ಮೆಚ್ಚಲಿ ಎಂಬುದು ಅವನ ಉದ್ದೇಶವಾಗಿತ್ತು. ಈ ಭವ್ಯ ಕಟ್ಟಡವನ್ನು ಕಟ್ಟಲು ೨೨ ವರ್ಷಗಳು ಹಿಡಿದುವು. ಈ ಕಟ್ಟಡವನ್ನು ಕಟ್ಟಲು ಆರಂಭಿಸಿದಾಗಿನಿಂದ ಅದು ಮುಗಿಯುವವರೆಗೂ ನಾನು ಅದನ್ನು ನೋಡುತ್ತಾ ಬಂದಿದ್ದೇನೆ. ಒಂದೆ ಸಮನೆ ದಿನವಹಿ ೨೦,೦೦೦ ಜನ ಕೆಲಸಮಾಡುತ್ತಿದ್ದರು ಇದರಿಂದ ಆ ಕಟ್ಟಡ ಕಟ್ಟಲು ಆಗಿರುವ ವೆಚ್ಚವೆಷ್ಟು ಎಂದು ಊಹಿಸಿಕೊಳ್ಳಿ. ಇಲ್ಲಿ ಮರ ಸಿಕ್ಕದಿದ್ದ ಕಾರಣ ಕಾಲಾವಧಿಗಾಗಿ ಇಟ್ಟಿಗೆ ಗಳನ್ನೇ ಉಪಯೋಗಿಸಬೇಕಾಯಿತು. ಈ ಕಲಾವಧಿಗಳನ್ನು ಕಟ್ಟುವ ಖರ್ಚೆ ಮುಖ್ಯ ಕಟ್ಟಡದ ಖರ್ಚಿಗಿಂತ ಹೆಚ್ಚಾಯಿತಂತೆ ! ನದಿಯ ಆ ಕಡೆ ಷಾಜಹಾನ್ ತನ್ನ ಸಮಾಧಿ ಭವನವನ್ನು ಕಟ್ಟಿಸಲು ಆರಂಭಿಸಿದ. ಆದರೆ ತನ್ನ ಮಕ್ಕಳೊಡನೆ ಮಾಡಬೇಕಾಗಿಬಂದ ಯುದ್ಧದ ಕಾರಣ ಅದಕ್ಕೆ ಅಡ್ಡಿಯೊದಗಿತು. ಈಗ ಆಳುವ ಔರಂಗಜೇಬನಿಗೆ ಅದನ್ನು ಮುಗಿಸುವ ಮನಸ್ಸಿಲ್ಲ. ಎರಡು ಸಾವಿರ ಸಿಪಾಯಿಗಳೊಡನೆ ಒಬ್ಬ ಖೋಜಾ, ಬೇಗಮಳ ಸಮಾಧಿಯನ್ನೂ ತಸಿಮ್‌ಮಕಾನನ್ನೂ ಕಾಯುತ್ತಿದ್ದಾನೆ.

ಪಟ್ಟಣದ ಇನ್ನೊಂದು ಕಡೆ ರಾಜ ಅಕ್ಬರನ ಸಮಾಧಿಯಿದೆ.

ನಾನು ೧೬೬೫ರ ನವೆಂಬರ್ ೨೫ರಂದು ಆಗ್ರಾದಿಂದ ಬಂಗಾಳಕ್ಕೆ ಹೊರಟೆ. ಮಾರನೆಯ ದಿನ ಫಿರೋಜಾಬಾದ್ ತಲುಪಿದೆ. ಇದು ಸಣ್ಣ ಪಟ್ಟಣ. ಜಹಾನಾಬಾದ್ ನಲ್ಲಿ ಜಫರ್‌ಖಾನ್ ನನ್ನಿಂದ ಪಡೆದಿದ್ದ ಸಾಮಾನುಗಳ ಬೆಲೆ ೮,೦೦೦ ರೂಪಾಯಿ ಗಳನ್ನು ಇಲ್ಲಿ ಈಸಿಕೊಂಡೆ.

ಡಿಸೆಂಬರ್ ೧ನೇ ತಾರೀಖು ನನಗೆ ೧೧೦ ಗಾಡಿಗಳು ಸಿಕ್ಕಿದುವು. ಪ್ರತಿ ಗಾಡಿಗೂ ಆರು ಎತ್ತುಗಳನ್ನು ಕಟ್ಟಿದ್ದರು. ಪ್ರತಿ ಗಾಡಿಯ ಮೇಲೂ ೫೦,೦೦೦ ರೂಪಾಯಿಗಳನ್ನು ಹೇರಿದ್ದರು. ಇದು ಬಂಗಾಳದ ಆದಾಯ. ಎಲ್ಲಾ ಖರ್ಚು ಕಳೆದು ಮತ್ತು ಸುಬೇದಾರನ ಜೇಬು ಭರ್ತಿಯಾದ ಮೇಲೆ ಬರುವ ಆದಾಯ ೫೫ ಲಕ್ಷ ರೂಪಾಯಿಗಳು.

ಮುಂದೆ ಪ್ರಯಾಣ ಸಾಗಿತು. ಒಂದು ದಿನದಾರಿಯಲ್ಲಿ ಪಳಗಿಸಿದ ಒಂದು ಘೇಂಡಾ ಮೃಗವನ್ನು ಕಂಡೆ. ಒಬ್ಬ ಹುಡುಗ ಅದಕ್ಕೆ ಹುಲ್ಲು ತಿನ್ನಿಸುತ್ತಿದ್ದ. ನಾನೂ ಒಂದಷ್ಟು ಹುಲ್ಲು ತಿನ್ನಿಸಿದೆ.

---

[1] ಇದು ಷಾಜಹಾನ ತನ್ನ ಮಮತೆಯ ಮಡದಿ ಮುಮ್ತಾಜ್ ಮಹಲಳ ಜ್ಞಾಪಕಾರ್ಥವಾಗಿ ಕಟ್ಟಿಸಿರುವ ತಾಜ್‌ಮಹಲ್,

ಡಿಸಂಬರ್ ೫ನೇ ತಾರೀಖು ಔರಂಗಜೇಬನು ತನ್ನ ಹೆಸರಿನಲ್ಲಿ ಕಟ್ಟಿಸಿರುವ ಔರಂಗಬಾದ್ ಎಂಬ ಊರಿನ ಮುಖಾಂತರ ಪ್ರಯಾಣಮಾಡಿ ೬ನೇ ತಾರೀಖು ಗಂಗಾ ನದಿಯನ್ನು ಸಮೀಪಿಸಿದೆ. ನನ್ನ ಜೊತೆ ರಾಜನ ವೈದ್ಯನಾದ ಮೆಸ್ಯ ಬೆರ್‌ನ್ಯೇ ಮತ್ತು ರಾಷೆಪೋ (Rechepot) ಎಂಬ ಇನ್ನೊಬ್ಬ ಇದ್ದರು. ಜನ ಅಷ್ಟೊಂದು ಹೊಗಳುವ ಗಂಗಾನದಿ ಅಷ್ಟೇನು ಅಗಲವಾಗಿಲ್ಲದಿರುವುದನ್ನುಕಂಡು ನನಗೆ ಅತ್ಯಾಶ್ಚರ್ಯವಾಯಿತು. ನಾವೆಲ್ಲ ಒಂದೊಂದು ಲೋಟ ವೈನ್ ಮದ್ಯಕ್ಕೆ ಗಂಗಾನದಿಯ ನೀರನ್ನು ಸೇರಿಸಿ ಕುಡಿದೆವು. ಹೊಟ್ಟೆ ಗುಡು ಗುಡು ಅನ್ನಲಾರಂಭಿಸಿತು. ಆಳುಕಾಳುಗಳಿಗೆ ಇನ್ನೂ ಹೆಚ್ಚು. ನದಿಯ ದಡದಲ್ಲಿ ಮನೆ ಕಟ್ಟಿಕೊಂಡಿರುವ ಡಚ್ಚರು ಕಾಯಿಸದೆ ಯಾವಾಗಲೂ ಈ ನೀರನ್ನು ಕುಡಿಯುವುದಿಲ್ಲ. ಸ್ಥಳದ ಜನರಿಗಂತೂ ಹುಟ್ಟಿದಾರಭ್ಯ ಈ ನೀರನ್ನು ಕುಡಿದು ಕುಡಿದು ಅಭ್ಯಾಸವಾಗಿಬಿಟ್ಟಿದೆ. ರಾಜನೂ ಅವನ ಆಸ್ಥಾನದವರೂ ಈ ನೀರಲ್ಲದೆ ಬೇರೆ ನೀರು ಕುಡಿಯುವುದಿಲ್ಲ. ದಿನವೂ ಗಂಗಾನದಿಯ ನೀರನ್ನು ಹೊತ್ತುಕೊಂಡುಹೋಗುವ ಅನೇಕ ಒಂಟೆಗಳನ್ನು ನೋಡಬಹುದು.

ಗಂಗಾ ಮತ್ತು ಜಮುನಾ ನದಿಗಳ ಸಂಗಮ ಸ್ಥಳ ಅಲ್ಲಾಹಬಾದು. ಇಲ್ಲಿಯ ಸುಬೇದಾರ ಬಹಳ ಪ್ರಸಿದ್ಧನಾದ ಶ್ರೀಮಂತ. ಇವನ ಆರೋಗ್ಯ ಸರಿಯಾಗಿಲ್ಲವಾದ ಕಾರಣ ಇವನ ಬಳಿ ಒಬ್ಬ ಪಾರಸೀ ವೈದ್ಯನೂ,ಮೆಸ್ಯ ಕ್ಲಾಡ್ ಮಯೇಯ್ ಬೂರ್ಷೇಸ್ (M. Claude Maille Bourges) ಎಂಬ ಫರಂಗೀ ವೈದ್ಯನೂ ಇದ್ದಾರೆ. ಈ ಫರಂಗಿ ವೈದ್ಯನು ಔಷದಿ ಕೊಡುವುದಲ್ಲದೆ ಶಸ್ತ್ರಚಿಕಿತ್ಸೆಯನ್ನು ಸಹ ಮಾಡುತ್ತಾನೆ. ಗಂಗಾನದಿಯ ನೀರು ಕುಡಿಯಬೇಡಿರೆಂದೂ, ಅದರ ಬದಲು ಭಾವಿಯ ನೀರನ್ನು ಕುಡಿಯಿರೆಂದೂ ಈತ ನಮಗೆ ಸಲಹೆ ಮಾಡಿದ.

ಪರ್ಷಿಯಾ ವೈದ್ಯರುಗಳಲ್ಲಿ ಪ್ರಧಾನವೈದ್ಯನಾದವನು ಯಾವುದೊ ಕಾರಣದ ಮೇಲೆ ತನ್ನ ಹೆಂಡತಿಯನ್ನು ಮಹಡಿಯಿಂದ ಕೆಳಕ್ಕೆ ತಳ್ಳಿಬಿಟ್ಟ. ಮೂಳೆ ಮುರಿದುಕೊಂಡ ಆಕೆ ಸುಬೇದಾರನಿಗೆ ದೂರು ಹೇಳಿದಳು. ಸುಬೇದಾರ ಪ್ರಧಾನವೈದ್ಯನನ್ನು ಕೆಲಸ ದಿಂದ ತೆಗೆದುಹಾಕಿದ. ವೈದ್ಯನು ತನ್ನ ಹೆಂಡತಿ ಮತ್ತು ಪರಿವಾರ ಸಮೇತ ಊರು ಬಿಟ್ಟು ಹೋಗುತ್ತಿರುವಾಗ ಸುಬೇದಾರನಿಗೆ ದೇಹಲಸ್ಯವುಂಟಾಗಿ ಪುನಃ ವೈದ್ಯನಿಗೆ ಹೇಳಿಕಳುಹಿಸಿದ. ವೈದ್ಯನು ಹಿಂದಿರುಗುವುದಕ್ಕೆ ಮುಂಚೆ ತನ್ನ ಹೆಂಡತಿ, ನಾಲ್ಕು ಮಕ್ಕಳು, ಹದಿಮೂರು ಜನ ಸೇವಕಿಯರು—ಇಷ್ಟು ಜನರನ್ನು ಕೊಂದೇ ಮತ್ತೆ ಸುಬೇದಾರನ ಸೇವೆಯಲ್ಲಿ ಸೇರಿಕೊಂಡ.

ನಾನು ೮ನೇ ತಾರೀಖು ಸುಬೇದಾರನಿಂದ ಅಪ್ಪಣೆ ಪಡೆದು, ದೊಡ್ಡ ದೋಣಿ ಯೊಂದರಲ್ಲಿ ಕುಳಿತು ಗಂಗಾನದಿ ದಾಟಿದೆ. ನದಿಯ ಆಚೀಚೆಯ ಕಡೆ ಒಬ್ಬೊಬ್ಬ 'ದರೋಗಾ' (Darogah) ಕುಳಿತಿರುತ್ತಾನೆ. ಸುಬೇದಾರನಿಂದ ಅನುಮತಿ ಪಡೆಯದವ ರನ್ನು ನದಿ ದಾಟಲು ಬಿಡುವುದಿಲ್ಲ. ಅಲ್ಲದೆ ಪ್ರತಿ ಭರ್ತಿ ಗಾಡಿಗೆ ನಾಲ್ಕು ರೂಪಾಯಿ

ಸುಂಕ ಕೊಡಬೇಕು. ಸವಾರಿಗಾಡಿಗಳು ಒಂದಕ್ಕಿಂತ ಹೆಚ್ಚಾಗಿದ್ದರೆ ಮಾತ್ರ ಸುಂಕ ಕೊಡಬೇಕು.

೧೧ನೇ ತಾರೀಖು ಬನಾರಸ್ ಸಿಕ್ಕಿತು. ಇದು ದೊಡ್ಡ ಪಟ್ಟಣ. ಆದರೆ ಬೀದಿಗಳು ಬಹಳ ಕಿರಿದು. ಇಲ್ಲಿ ಹತ್ತಿ ಮತ್ತು ರೇಷ್ಮೆ ಬಟ್ಟೆಗಳನ್ನು ಹಾಗೂ ಮತ್ತಿತರ ಸರಕುಗಳನ್ನು ತಯಾರುಮಾಡಿ ಅವರೇ ಮಾರುತ್ತಾರೆ. ಆದ್ದರಿಂದ ಪರದೇಶದವರು ಈ ಬಟ್ಟೆಗಳನ್ನು ದಳ್ಳಾಳಿಗಳಿಲ್ಲದೆ ನೇರವಾಗಿ ಕೊಂಡುಕೊಳ್ಳಬಹುದು. ಬಟ್ಟೆಗಳನ್ನು ಮಾರಾಟ ಮಾಡುವುದಕ್ಕೆ ಮೊದಲು ರಾಜನಿಂದ ಗುತ್ತಿಗೆ ಪಡೆದ ಗುತ್ತಿಗೆದಾರನ ಬಳಿಗೆ ಹೋಗಿ, ಕೊಡಬೇಕಾದ ರುಸುಂ ಕೊಟ್ಟು ರಹದಾರಿ ಮುದ್ರೆ ಒತ್ತಿಸಿಕೊಂಡು ಬರಬೇಕು. ಹಾಗೆ ಮಾಡದಿದ್ದರೆ ದಂಡ ಕೊಡಬೇಕಾಗುತ್ತದೆ. ಅಲ್ಲದೆ, ಛಡಿ ಶಿಕ್ಷೆಗೂ ಗುರಿಯಾಗಬೇಕಾಗುತ್ತದೆ. ಇಲ್ಲಿ ವಿಗ್ರಹಾರಾಧಕರಿಗೆ ಸೇರಿದ ಮುಖ್ಯ ದೇವಸ್ಥಾನವಿದೆ. ಇದರ ವಿಚಾರ ಆಮೇಲೆ ಹೇಳುತ್ತೇನೆ.

ಪಟ್ಟಣದ ಹೊರಗಡೆ ಭೂತಾನದ ರಾಜನದು ಎಂದು ಹೇಳುವ ಸಮಾಧಿ ಇದೆ. ಭೂತಾನದ ರಾಜ ಇಲ್ಲಿಗೆ ಬಂದು ಈ ರಾಜ್ಯವನ್ನು ಗೆದ್ದುಕೊಂಡನೆಂದೂ, ಸತ್ತಮೇಲೆ ಅವನನ್ನು ಇಲ್ಲಿ ಸಮಾಧಿಮಾಡಿದರೆಂದೂ ಹೇಳುತ್ತಾರೆ.

ನಾನು ಬನಾರಸ್‌ನಲ್ಲಿದ್ದ ಎರಡು ದಿನವೂ ಒಂದೇಸಮನೆ ಮಳೆ ಸುರಿಯುತ್ತಿತ್ತು. ಆದರೂ ೧೩ನೇ ತಾರೀಖು ಸುಬೇದಾರನ ಅನುಮತಿ ಪಡೆದು ಗಂಗಾನದಿ ದಾಟಿದೆ. ಎಲ್ಲವನ್ನು ಪರೀಕ್ಷೆಮಾಡದೆ ಯಾರನ್ನೂ ನದಿ ದಾಟಲು ಬಿಡುವುದಿಲ್ಲ. ಹೀಗೆ ನದಿ ದಾಟಿ, ಹಲವು ಊರುಗಳನ್ನು ಹಾದು, ೨೦ನೇ ತಾರೀಖು ಪಾಟ್ನಾ[1] ತಲುಪಿದೆ. ಊರು ಸಾಮಾನ್ಯವಾಗಿದೆ. ಎಲ್ಲಾ ಕಡೆ ಇರುವಂತೆ ಇಲ್ಲಿರುವ ಮನೆಗಳೂ ಸಾಧಾರಣ. ಮನೆಯ ಮೇಲ್ಛಾವಣಿಗೆ ಬಿದಿರು ಬಿಗಿದು, ಹುಲ್ಲು ಹೊದಿಸಿದ್ದಾರೆ. ಇಲ್ಲಿಗೆ ಸಮೀಪದಲ್ಲಿರುವ ಡಚ್ ಕಂಪೆನಿಯವರು ಪೆಟ್ಲುಪ್ಪು ತಯಾರಿಸುತ್ತಾರೆ.

ಪಾಟ್ನಾಕ್ಕೆ ಬಂದಾಗ ಬೀದಿಯಲ್ಲಿ ನನಗೂ ಮೆಸ್ಯ ಬೆರ್ನ್ಯೇಗೂ ಚಪ್ರಾ (Chapra) ಎಂಬ ಊರಿನಿಂದ ಹಿಂದಿರುಗುತ್ತಿದ್ದ ಕೆಲವು ಡಚ್ಚರು ಸಿಕ್ಕಿದರು. ಅವರು ತಮ್ಮ ಬಂಡಿಗಳನ್ನು ನಿಲ್ಲಿಸಿ ನಮಸ್ಕರಿಸಿ ನಮ್ಮನ್ನು ಸ್ವಾಗತಿಸಿದರು. ಷಿರಾಜಿನ ಎರಡು ಸೀಸೆ ವೈನನ್ನು ನಡುಬೀದಿಯಲ್ಲೇ ಖಾಲಿಮಾಡುವವರೆಗೆ ನಾವು ಬೇರೆಯಾಗಲಿಲ್ಲ. ಇಲ್ಲಿ ಯಾರು ಹೇಗೆ ಬೇಕಾದರೂ ಸ್ವತಂತ್ರವಾಗಿ ಇರಬಹುದು ; ಅವರಿವರ ಅಡ್ಡಿ ಆತಂಕಗಳಿಲ್ಲ.

---

[1] ಪಾಟ್ನಾ : ಪ್ರಾಚೀನ ಪಾಟಲಿಪುತ್ರದ ಇಂದಿನ ಹೆಸರು. ಗ್ರೀಕರು ಈ ನಗರವನ್ನು ಪಾಲಿಬೋತ್ರ (Palibothra) ಎಂದು ಕರೆದಿದ್ದಾರೆ. ಸೋನ್ (Sone) ಮತ್ತು ಗಂಗಾ ಸಂಗಮಸ್ಥಳದಲ್ಲಿದೆ. ಚಂದ್ರಗುಪ್ತ ಮೌರ್ಯನಿಂದ ಸ್ಥಾಪಿತವಾಯಿತು. ಈಗ ಭಾರತ ಗಣರಾಜ್ಯಕ್ಕೆ ಸೇರಿದ ಬಿಹಾರ ರಾಜ್ಯದ ಆಡಳಿತಕೇಂದ್ರ.

ನಾನು ಪಾಟ್ನಾದಲ್ಲಿ ಎಂಟು ದಿನಗಳು ತಂಗಿದ್ದೆ. ಆಗ ೧,೦೦೦ ಕಾಲ್ದಳವನ್ನು ಹೊಂದಿದ ಮಿಂಬಶಿಯೊಬ್ಬ (೧,೦೦೦ದ ಸರದಾರ) ಒಬ್ಬ ಹುಡುಗನ ಮೇಲೆ ಅತ್ಯಾಚಾರ ನಡೆಸಿದ ಕಾರಣ, ಆ ಹುಡುಗ ಆತನನ್ನು ಕೊಂದುಹಾಕಿದ ಒಂದು ಪ್ರಸಂಗ ನಡೆಯಿತು.

೨೯ನೇ ಜನವರಿ ನಾನು ಪಾಟ್ನಾದಿಂದ ಡಾಕಾಕ್ಕೆ ಹೊರಟೆ. ೩೧ನೇ ತಾರೀಖು ಮೂಂಗಿರ್ (ಮೂಂಘೈರ್) ಮುಟ್ಟಿ, ಅಲ್ಲಿ ಆ ದಿನ ತಂಗಿದೆ.

೧೬೬೬ರ ಜನವರಿ ೧ನೇ ತಾರೀಖು ಎರಡು ಘಂಟೆಗಳ ಪ್ರಯಾಣಮಾಡಿ ಗಂಡಕ್‌ನದಿಯು ಗಂಗಾನದಿಯನ್ನು ಸೇರುವ ಸ್ಥಳವನ್ನು ತಲುಪಿದೆ. ಜನವರಿ ೪ ರಂದು ರಾಜಮಹಲ್ ತಲುಪಿ, ಆ ದಿನ ಅಲ್ಲಿ ನಿದ್ದೆಮಾಡಿದೆ. ವ್ಯಾಪಾರ ಹಾಗೂ ಬೇಟೆಗಳಿಗೆ ಇರುವ ಅನುಕೂಲತೆಗಳ ಕಾರಣ ರಾಜಮಹಲ್ ಮೊದಲಿಗೆ ಬಂಗಾಳ ಸುಬೇದಾರರುಗಳ ರಾಜಧಾನಿಯಾಗಿತ್ತು. ಆದರೆ ನದಿ ಊರಿನಿಂದ ದೂರ ದೂರ ಸರಿದದ್ದರಿಂದಲೂ, ಅರಕಾನ್[1] ರಾಜನು ಬಂಗಾಳದ ಮೇಲೆ ಬೀಳುವುದನ್ನು ತಡೆಯುವುದಕ್ಕೂ ಮತ್ತು ಗಂಗಾನದಿಯ ಮುಖದಲ್ಲಿ ನೆಲೆಸಿರುವ ಪೋರ್ಚುಗೀಸ್ ಪುಂಡರು ಡಾಕಾ ನಿವಾಸಿಗಳನ್ನು ಪೀಡಿಸುವುದನ್ನು ತಪ್ಪಿಸುವುದಕ್ಕೂ ಸುಬೇದಾರನೂ ವರ್ತಕರೂ ಈಗ ರಾಜಮಹಲ್‌ನಿಂದ ಡಾಕಾಕ್ಕೆ ಹೋಗಿದ್ದಾರೆ.

ದೊನಾಪುರ್ ಎಂಬ ಊರನ್ನು ೬ನೇ ತಾರೀಖು ತಲುಪಿದೆ. ಇಲ್ಲಿಂದ ಬೆರ್‌ನ್ಯೇ ಖಾಸಿಂಬಜಾರಿಗೆ ಹೋದರು. ಅಲ್ಲಿಂದ ಹುಗ್ಲಿಗೆ ಹೋಗುವುದಾಗಿ ಹೇಳಿದರು. ನಾನು ರಾಜಮಹಲ್‌ನಿಂದ ೧೨ ಮೈಲಿ ಕೋಶ ದೂರದಲ್ಲಿರುವ ತೌತಿಪುರ ಎಂಬ ಊರಿನಲ್ಲಿ ತಂಗಿದೆ. ಬೆಳಿಗ್ಗೆ ಎದ್ದು ನೋಡಿದಾಗ ಮರಳ ಮೇಲೆ ಅನೇಕ ಮೊಸಳೆಗಳು ಮಲಗಿ ನಿದ್ದೆಮಾಡುತಿದ್ದುದು ಕಂಡಿತು.

ಮೂರನೆಯ ದಿನದ ಪ್ರಯಾಣದಲ್ಲಿ ಅನೇಕಾನೇಕ ಮೊಸಳೆಗಳನ್ನು ಕಂಡೆ. ಮೊಸಳೆಗೆ ಹೊಡೆದರೆ ಏಟು ತಗಲುವುದಿಲ್ಲವೆಂದು ಸಾಮಾನ್ಯವಾಗಿ ಹೇಳುವುದುಂಟು. ಇದನ್ನು ಪರೀಕ್ಷೆ ಮಾಡುವ ಉದ್ದೇಶದಿಂದ ನಾನು ನನ್ನ ಬಂದೂಕಿನಿಂದ ಒಂದು ಮೊಸಳೆಗೆ ಹೊಡೆದೆ. ದವಡೆಗೆ ಏಟುಬಿದ್ದು ರಕ್ತ ಸುರಿಯಿತು. ಆದರೆ ಮೊಸಳೆ ನಿಲ್ಲದೆ ಓಡಿಹೋಗಿ ನದಿಯನ್ನು ಸೇರಿಕೊಂಡಿತು. ಮತ್ತೆ ಮೂರನೆಯ ದಿನ ನನ್ನ ಬಂದೂಕಿನಿಂದ ಎರಡು ಮೊಸಳೆಗಳಿಗೆ ಗುಂಡುಹೊಡೆದೆ. ಏಟು ತಗುಲಿದ ಕೂಡಲೇ ಅವು ಸತ್ತು ಅಡಿಮೇಲಾಗಿ ಬಿದ್ದುಕೊಂಡವು. ಕಾಗೆಗಳಿಂದಾಗಿ ನಮಗೆ ಒಂದು ಒಳ್ಳೆಯ ಮಾನು

---

[1]ಅರಕಾನ್ : ಬಂಗಾಳಕೊಲ್ಲಿಯ ಅಭಿಮುಖವಾಗಿ ೪೦೦ ಮೈಲಿ ತೀರವಿರುವ ಬರ್ಮಾ ಗಣರಾಜ್ಯದ ಭಾಗ. ಪ್ರಾಚೀನ ರಾಜ್ಯವಾದ ಅರಕಾನ್ ೧೭೮೪ರಲ್ಲಿ ಬರ್ಮಾದ ವಶವಾಯಿತು. ೧೮೨೬ರಲ್ಲಿ ಇಂಗ್ಲಿಷರು ಅದನ್ನು ಗೆದ್ದುಕೊಂಡರು. ಅರಕಾನ್ ಜನ ಬೌದ್ಧಮತಾವಲಂಬಿಗಳು.

ಸಿಕ್ಕಿತು. ಬೆಸ್ತರು ಆ ಮೀನು ಹಿಡಿದು ನದಿಯ ಜೊಂಡಿನೊಳಗೆ ಬಚ್ಚಿಟ್ಟಿದ್ದರಂತೆ. ಕಾಗೆಗಳು ಅದರ ಸುತ್ತ ಹಾರಾಡುತ್ತಿದ್ದುದನ್ನು ಕಂಡ ನಮ್ಮ ದೋಣಿಗರು ಹುಡುಕಿ ಮೀನನ್ನು ಪತ್ತೆಹಚ್ಚಿದರು. ಅದನ್ನು ಬೇಯಿಸಿ ಸೊಗಸಾದ ಅಡಿಗೆಮಾಡಿ ಉಂಡೆವು. ಹೀಗೆ ಹಲವಾರು ಊರುಗಳ ಮೂಲಕ ಪ್ರಯಾಣಮಾಡಿ, ಅಲ್ಲಲ್ಲಿ ತಂಗಿ, ೧೩ನೆಯ ತಾರೀಖು ಸಂಜೆ ಡಾಕಾ ತಲುಪಿದೆವು.

ಡಾಕಾ ದೊಡ್ಡ ಪಟ್ಟಣ. ಪ್ರತಿಯೊಬ್ಬರೂ ಗಂಗಾನದಿಗೆ ಆದಷ್ಟು ಸಮೀಪವಾಗಿ ತಮ್ಮ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಮನೆಗಳೆಂದರೆ ಬಿದಿರು ಮತ್ತು ಮಣ್ಣಿನಿಂದ ಕಟ್ಟಿದ ಗುಡಿಸಲುಗಳು, ಅಷ್ಟೆ. ಸುಬೇದಾರನ ಮನೆಯೂ ಮರದಿಂದ ಕಟ್ಟಲಾದ ಸಾಧಾರಣ ಮನೆ. ಮನೆಯ ಸುತ್ತ ವಿಶಾಲವಾದ ಆವರಣವಿದೆ. ಈ ಆವರಣದಲ್ಲಿ ಹಾಕಿರುವ ಗುಡಾರಗಳೊಳಗೇ ಹೆಚ್ಚಾಗಿ ಸುಬೇದಾರನ ವಾಸ. ಡಚ್ಚರು ತಮ್ಮ ಸರಕುಗಳ ಭದ್ರತೆಗಾಗಿ ಒಳ್ಳೊಳ್ಳೆಯ ಮನೆಗಳನ್ನು ಕಟ್ಟಿಸಿಕೊಂಡಿದ್ದಾರೆ. ಇಂಗ್ಲಿಷರದೂ ಒಂದು ಒಳ್ಳೆಯ ಮನೆ ಇದೆ. ಅಗಸ್ಟಿನ್ ಪಾದ್ರಿಗಳಿಗೆ (ಫಾದರುಗಳಿಗೆ) ಸೇರಿದ ಇಗರ್ಜಿಯನ್ನು ಇಟ್ಟಿಗೆಯಿಂದ ಕಟ್ಟಲಾಗಿದೆ. ಅಲ್ಲದೆ, ಅದರ ಕಟ್ಟಡದ ಕೆಲಸವೂ ಚೆನ್ನಾಗಿದೆ.

ನನ್ನ ಹಿಂದಿನ ಭೇಟಿಯ ಕಾಲದಲ್ಲಿ ಡಾಕಾದ ಸುಬೇದಾರ ಷೈಸ್ತಾಖಾನನಿಗೂ ಅರಕಾನ್ ರಾಜನಿಗೂ ಯುದ್ಧ ನಡೆಯುತ್ತಿತ್ತು. ಅರಕಾನ್ ರಾಜನ ನೌಕಾತಂಡ ೨೦೦ ಗ್ಯಾಲಿ ಹಡಗುಗಳನ್ನು, ಅಂದರೆ ಗುಲಾಮರು ನಡೆಸುವ ಒಂದಸ್ತಿನ ಚಪ್ಪಟೆಯ ಹಡಗುಗಳನ್ನು ಹೊಂದಿದೆ. ಈ ಗ್ಯಾಲಿ ಹಡಗುಗಳು ಬಂಗಾಳ ಕೊಲ್ಲಿಯನ್ನು ಹಾದು, ಗಂಗಾನದಿಯನ್ನು ಪ್ರವೇಶಿಸಿ, ಡಾಕಾದ ಆಚೆಗೂ ಏರುವ ಸಮುದ್ರದ ಉಬ್ಬರದಲ್ಲಿ ಡಾಕಾದವರೆಗೆ ಹೋಗುತ್ತವೆ. ಈಗ ಡಾಕಾ ಪ್ರಾಂತವನ್ನು ಆಳುವ ಷೈಸ್ತಾಖಾನ್ ಔರಂಗಜೇಬನ ಸೋದರಮಾವ (uncle). ಇಡೀ ರಾಜ್ಯದಲ್ಲೆಲ್ಲಾ ಬಹು ವಿಚಕ್ಷಣೆಯುಳ್ಳ ಮನುಷ್ಯನೆಂದು ಹೆಸರು ಪಡೆದಿದ್ದಾನೆ. ಈತ ಅರಕಾನ್ ರಾಜನ ಕಡೆಯ ಅನೇಕ ಅಧಿಕಾರಿಗಳಿಗೆ ಲಂಚ ಕೊಟ್ಟು, ಪೋರ್ಚುಗೀಸರು ನಡೆಸುತ್ತಿದ್ದ ರಾಜನ ಕಡೆಯ ನಲವತ್ತು ಗ್ಯಾಲಿ ಹಡಗುಗಳು ತನ್ನ ಕಡೆ ಬರುವಂತೆ ಮಾಡಿದ. ಪೋರ್ಚುಗೀಸರಿಗೆ ಕೈತುಂಬ ಸಂಬಳಕೊಟ್ಟು ಇಟ್ಟುಕೊಂಡ. ಆದರೆ ಸ್ಥಳದವರಿಗೆ ಸಿಕ್ಕಿದ ಸಂಬಳ ಒಂದ ಕ್ಕೆರಡರಷ್ಟು ಅಷ್ಟೆ. ಗ್ಯಾಲಿ ಹಡಗುಗಳನ್ನು ಬಹಳ ವೇಗವಾಗಿ ನಡೆಸಬಹುದು. ಕೆಲವು ಎಷ್ಟು ಉದ್ದವಾಗಿವೆ ಎಂದರೆ, ಹಡಗಿನ ಇಬ್ಬದಿಯೂ ಇಬಿಬ್ಬರು ಅಂಬಿಗರು ಕುಳಿತು ನಡೆಸುವಂತಹ ಐವತ್ತು ಐವತ್ತು ಹುಟ್ಟುಗಳು ಇರುತ್ತವೆ. ಅಲ್ಲದೆ, ಹಡಗನ್ನು ಚಿನ್ನದ ಮುಲಾಮು ಮತ್ತು ಇತರ ರೀತಿಯ ಅಲಂಕಾರಗಳಿಂದ ಚಂದಮಾಡಿರುತ್ತಾರೆ. ಡಚ್ಚರಿಗೆ ಸೇರಿದ ಗ್ಯಾಲಿಗಳೂ ಉಂಟು.[1]

---

[1]ಡಚ್ಚರ ಮತ್ತು ಪೋರ್ಚುಗೀಸರ ಸಹಾಯದಿಂದ ಷೈಸ್ತಾಖಾನನು ಚಿಟ್ಟಗಾಂಗನ್ನು ೧೬೬೬ರಲ್ಲಿ ವಶಪಡಿಸಿಕೊಂಡನು.

ಡಾಕಾಕ್ಕೆ ಬಂದ ಮಾರನೆಯ ದಿನ ನಾನು ನವಾಬನನ್ನು (ಗೌರ್‍ನರನನ್ನು) ಕಂಡು, ಅಮೂಲ್ಯವಾದ ಪಚ್ಚೆಯನ್ನು ಜೋಡಿಸಿ ಮಾಡಿದ ಅಪರಂಜಿ ಆಭರಣವನ್ನು ಒಪ್ಪಿಸಿದೆ. ನಾನು ಡಚ್ಚರ ಮನೆಯಲ್ಲಿ ತಂಗಿದೆ. ಆ ಸಂಜೆ ಅತ ದಾಳಿಂಬೆ, ಚೀನೀ ಕಿತ್ತಳೆಗಳು, ಎರಡು ಪರ್ಷಿಯನ್ ಕಲ್ಲಂಗಡಿ ಹಣ್ಣುಗಳು ಮತ್ತು ಮೂರು ತರಹ ಸೇಬು ಹಣ್ಣುಗಳನ್ನು ನಾನಿರುವಲ್ಲಿಗೆ ಕಳುಹಿಸಿಕೊಟ್ಟ.

೧೫ನೇ ತಾರೀಖು ನನ್ನ ಬಳಿ ಇದ್ದ ಸಾಮಾನುಗಳನ್ನು ನವಾಬನಿಗೆ ತೋರಿಸಿದೆ. ಅವನ ಮಗನಿಗೆ ಒಂದು ಗಡಿಯಾರ, ಒಂದು ಜೊತೆ ಪಿಸ್ತೂಲು ಮತ್ತು ಒಂದು ದೂರ ದರ್ಶಕಯಂತ್ರ (telescope)—ಇಷ್ಟನ್ನು ಕೊಟ್ಟೆ. ಮಗನ ವಯಸ್ಸು ಸುಮಾರು ಹತ್ತು ವರ್ಷಗಳಿರಬಹುದು. ತಂದೆ ಮಕ್ಕಳಿಬ್ಬರಿಗೂ ಕೊಟ್ಟ ಬಹುಮಾನದ ಒಟ್ಟು ಬೆಲೆ ೫,೦೦೦ ಲೀವ್ರ್‌ಗಳಷ್ಟು.

ಮಾರನೆಯ ದಿನ ನನ್ನ ಸಾಮಾನುಗಳಿಗೆ ಬೆಲೆ ಕಟ್ಟಲಾಯಿತು. ಹಣವನ್ನು ಖಾಸಿಂ ಬಜಾರ್‌ನಲ್ಲಿ ಹುಂಡಿಯ ಮೂಲಕ ಕೊಡುವುದೆಂದಾಯಿತು. ಅದನ್ನು ಈಸಿಕೊಳ್ಳಲು ನಾನು ನವಾಬನ ವಜೀರನ ಬಳಿಗೆ ಹೋದೆ. ಬೇಕೆಂದರೆ ಹಣವನ್ನು ಡಾಕಾದಲ್ಲಿಯೇ ಪಡೆಯಬಹುದಾಗಿತ್ತು. ಆದರೆ ಆ ಹಣವನ್ನು ನದಿಯ ಮೇಲೆ ಸಾಗಿಸುವಾಗ ದೋಣಿ ಯನ್ನು ತಲೆಕೆಳಗೆ ಮಾಡಿ ಮುಳುಗಿಸಿ, ಆಮೇಲೆ ನದಿಯ ತಳ ಹುಡುಕಿ ಹಣ ತೆಗೆದು ಕೊಳ್ಳುವ ಮೋಸಮಾಡಿಯಾರೆಂದು ಡಚ್ಚರು ಹೆದರಿಸಿದ್ದರಿಂದ ಹುಂಡಿಯ ಮೂಲಕ ಹಣ ಪಡೆಯುವುದು ಕ್ಷೇಮಕರವೆಂದು ತೀರ್ಮಾನಿಸಿದೆ.

೨೦ನೇ ತಾರೀಖು ನಾನು ನವಾಬನನ್ನು ಕಂಡು ಅವನಿಂದ ಬೀಳ್ಕೊಂಡೆ. ಅವನು ನನಗೆ ಕೊಟ್ಟ ರಹದಾರಿಯಲ್ಲಿ ನನ್ನನ್ನು ತನ್ನ ಮನೆವಾರ್ತೆಗೆ ಸೇರಿದವನೆಂದು ಬರೆಸಿದ್ದ. ಈ ರಹದಾರಿಯ ಕಾರಣ ನಾನು ಮೊಗಲ್ ಸಾಮ್ರಾಜ್ಯದಲ್ಲಿ ಯಾವ ಕಡೆಗೆಂದರೆ ಆ ಕಡೆಗಳಿಗೆ ನವಾಬನ ಪರಿವಾರಕ್ಕೆ ಸೇರಿದವನೆಂದು ಸಲೀಸಾಗಿ ಹೋಗಬಹುದಿತ್ತು.

೨೧ನೆಯ ತಾರೀಖು ಡಚ್ಚರು ನನಗೊಂದು ಭೋಜನಕೂಟ ಏರ್ಪಡಿಸಿದರು. ಇದಕ್ಕೆ ಇಂಗ್ಲಿಷರೂ ಪೋರ್ಚುಗೀಸರೂ ಬಂದಿದ್ದರು. ೨೩ರಿಂದ ೨೯ನೆಯ ತಾರೀಖಿನ ವರೆಗೆ ೧೧,೦೦೦ ರೂಪಾಯಿ ಬೆಲೆಯ ಕೆಲವು ಸರಕುಗಳನ್ನು ಕೊಂಡುಕೊಂಡು ದೋಣಿ ಗಳಿಗೆ ತುಂಬಿ, ಬೇಕಾದವರಿಂದ ಬೀಳ್ಕೊಂಡು, ಡಾಕ್ಕಾದಿಂದ ಹೊರಟೆ. ಎರಡು ಹರಿದಾರಿಗಳಷ್ಟು ದೂರ ಡಚ್ಚರು ತಮ್ಮ ಸಣ್ಣ ದೋಣಿಗಳಲ್ಲಿ ಬಂದು ನನ್ನನ್ನು ಕಳುಹಿಸಿ ಕೊಟ್ಟರು. ಉದ್ದಕ್ಕೂ ಸ್ಪಾನಿಷ್ ವೈನನ್ನು ಕುಡಿದದ್ದೂ ಕುಡಿದದ್ದೇ.

ನಾನು ಫೆಬ್ರವರಿ ೧೧ರವರೆಗೆ ನದಿಯ ಮೇಲೆ ಸಾಗಿ ಹಡ್ರಾಜ್‌ಪುರ ಎಂಬಲ್ಲಿ ನನ್ನ ಸೇವಕರನ್ನು ಹಾಗೂ ಸರಕುಗಳನ್ನು ಬಿಟ್ಟು, ಒಂದು ಕುದುರೆಯನ್ನು ಬಾಡಿಗೆಗೆ ತೆಗೆದು ಕೊಂಡು ಖಾಸಿಂಬಜಾರಿಗೆ ಹೊರಟೆ. ನನ್ನ ಸಾಮಾನುಗಳನ್ನು ಹೊರಲು ಇನ್ನೊಂದು

ಕುದುರೆ ಸಿಕ್ಕದೆಹೋದ ಕಾರಣ, ಆ ಕೆಲಸಕ್ಕೆ ಇಬ್ಬರು ಹೆಂಗಸರನ್ನು ನೇಮಿಸಿಕೊಂಡೆ. ಸಂಜೆ ಖಾಸಿಂಬಜಾರ್ ಮುಟ್ಟಿ, ಬಂಗಾಳದಲ್ಲಿರುವ ಡಚ್ಚರ ಎಲ್ಲಾ ವಸಾಹತುಗಳ ನಿರ್ದೇಶಕನ (ಡೈರೆಕ್ಟರ) ಮನೆಯಲ್ಲಿ ತಂಗಿದೆ. ೧೫ನೆಯ ತಾರೀಖು ಈ ಡೈರೆಕ್ಟರ್ ಒದಗಿಸಿದ ಪಲ್ಲಕ್ಕಿಯಲ್ಲಿ ಕುಳಿತು ಮುರ್ಷಿದಾಬಾದಿಗೆ ಹೋದೆ. ಇದು ಖಾಸಿಂಬಜಾರಿನಿಂದ ಮೂರು ಕೋಶ ದೂರದಲ್ಲಿರುವ ದೊಡ್ಡ ಪಟ್ಟಣ. ಅಲ್ಲಿಗೆ ಹೋಗಿ ನನ್ನ ಹಣಕ್ಕೆ ಷೈಸ್ತಾಖಾನ್ ಕೊಟ್ಟಿದ್ದ ಹುಂಡಿಯನ್ನು ತೋರಿಸಿ ಹಣ ಕೇಳಿದೆ. ಹಣ ಕೊಡಬೇಕಾದ ಆ ಮನುಷ್ಯ ಹುಂಡಿ ಸರಿಯಾಗಿದೆ, ಆದರೆ ಇಷ್ಟರಲ್ಲಾಗಲೇ ಹಣ ಕೊಡದಿದ್ದಲ್ಲಿ ಈಗ ಕೊಡಕೂಡದೆಂದು ನವಾಬನಿಂದ ಅಪ್ಪಣೆ ಬಂದಿದೆಯೆಂದು ತಿಳಿಸಿದ. ಕಾರಣ ಏನೆಂದು ಗೊತ್ತಾಗಲಿಲ್ಲ. ನಾನು ನವಾಬನಿಗೆ ಪತ್ರ ಬರೆದು ಕಾರಣವನ್ನು ಕೇಳಿದೆ. ಉತ್ತರ ಬರುವುದರೊಳಗೆ ಹುಗ್ಲಿಗೆ ಹೋಗಿಬಂದೆ. ಹುಗ್ಲಿಯಲ್ಲಿದ್ದ ಡಚ್ಚರು ನನ್ನನ್ನು ಚೆನ್ನಾಗಿ ನೋಡಿಕೊಂಡರು. ಯುರೋಪಿನ ಭಕ್ಷ್ಯ-ಭೋಜ್ಯಗಳನ್ನು ಮಾಡಿಸಿ ಬಡಿಸಿದರು. ಮಾರ್ಚಿ ೩ನೆಯ ತಾರೀಖು ಖಾಸಿಂಬಜಾರಿಗೆ ಹಿಂದಿರುಗಿದ ನಾನು ವಿನಿಮಯದ ಕಚೇರಿಗೆ ಹೋಗಿ ಷೈಸ್ತಾಖಾನನಿಂದ ಏನಾದರು ಉತ್ತರ ಬಂದಿದೆಯೆ ಎಂದು ಕೇಳಿದೆ. ನಾನು ಬರೆದಿದ್ದ ಪತ್ರವಲ್ಲದೆ ಇಲ್ಲಿಯ ಡಚ್ಚರ ವಸಾಹತುಗಳ ಡೈರೆಕ್ಟರ್ ಸಹ ಒಂದು ಪತ್ರ ಬರೆದು, ಹೀಗೆ ಹಣ ಕೊಡಲು ಸತಾಯಿಸಿದರೆ ಮುಂದೆ ಒಳ್ಳೊಳ್ಳೆಯ ಸರಕುಗಳು ಯುರೋಪಿನಿಂದ ಇಂಡಿಯಾಕ್ಕೆ ಬರುವುದು ಕಷ್ಟವಾಗಬಹುದೆಂದು ತಿಳಿಸಿದ್ದರು. ಉತ್ತರ ಬಂದಿತು. ೨೦,೦೦೦ ರೂಪಾಯಿ ಮುರಿದುಕೊಂಡು ಉಳಿದ ಹಣ ಕೊಡಬೇಕೆಂದು ತಿಳಿಸಲಾಗಿತ್ತು. ಇದರಿಂದ ನಾನು ತೃಪ್ತನಾಗದಿದ್ದಲ್ಲಿ ನನ್ನ ಸರಕುಗಳನ್ನು ವಾಪಸ್ಸು ತೆಗೆದುಕೊಂಡುಹೋಗಬೇಕೆಂದು ನವಾಬ ತಿಳಿಸಿದ್ದ. ನವಾಬನು ಹೀಗೆ ಮಾಡಲು ಮೊಗಲ್ ಆಸ್ಥಾನದಲ್ಲಿರುವ ಮೂವರು ದಗಾಕೋರರು ನನ್ನ ಮೇಲೆ ಮಾಡಿದ ಪಿತೂರಿಯೇ ಕಾರಣವಾಗಿತ್ತು. ಇಂಡಿಯಾದೇಶಕ್ಕೆ ಪರದೇಶದ ವರ್ತಕರು ಯಾವ ಒಳ್ಳೆಯ ಒಡವೆವಸ್ತುಗಳನ್ನು ತಂದರೂ ಅವುಗಳನ್ನು ಮೊದಲು ಮೊಗಲ್ ಚಕ್ರವರ್ತಿಗೆ ತೋರಿಸಬೇಕು. ಮೊಗಲ್ ಚಕ್ರವರ್ತಿಗೆ (ಔರಂಗಜೇಬನಿಗೆ) ತೋರಿಸುವುದಕ್ಕೆ ಮುಂಚೆ ಅವನ್ನು ಪರಿಶೀಲಿಸಿ ಬೆಲೆಕಟ್ಟಲು ಮೂವರು ಪರಿಶೀಲಕರಿದ್ದಾರೆ. ಇವರಲ್ಲಿ ಇಬ್ಬರು ಪರ್ಷಿಯಾದ ಮಹಮ್ಮದೀಯರು ; ಒಬ್ಬ ಬನಿಯ. ಈ ಮೂವರು ಮಾಡುವ ಮೋಸಕ್ಕೆ ಮಿತಿಯೇ ಇಲ್ಲ. ಬೇಕಾಗಿಯೇ ಬೆಲೆಯನ್ನು ಅರ್ಧಕ್ಕರ್ಧ ಕಮ್ಮಿ ಕಟ್ಟುತ್ತಾರೆ. ಸರಿಯಾದ ಬೆಲೆ ಬೇಕೆಂದರೆ ಆ ಒಡವೆ-ವಸ್ತುಗಳನ್ನು ಅವರಿಗೇ ಮಾರಬೇಕು. ಹೀಗೆಲ್ಲಾ ಮೋಸಮಾಡುತ್ತಾರೆ. ರಾಜನ ಸೋದರಮಾವ ಜಾಫರ್‌ಖಾನ್ ಎಂಬುವನು ಕೆಲವು ಆಭರಣಗಳನ್ನು ಕೊಂಡುಕೊಂಡು ನನಗೆ ದುಡ್ಡು ಕೊಡದೆ ಸತಾಯಿಸಿದ್ದ. ಕಡಿಮೆ ಬೆಲೆ ಕೊಡಲು ಬಂದಿದ್ದ. ಇದಕ್ಕೆ ಒಪ್ಪದೆಹೋದ ನನ್ನ ಮೇಲೆ ಸೇಡುತೀರಿಸಿಕೊಳ್ಳಲು ಆತ ಈ ಮೂವರು ಮೇಲ್ವಿಚಾರಕರಿಗೆ ಹೇಳಿ ಷೈಸ್ತಾಖಾನನಿಗೆ ಚಾಡಿ ಚುಚ್ಚಿಸಿದ್ದ.

ಕೊನೆಗೆ ಶೈಸ್ತಾಖಾನ ೨೦,೦೦೦ಕ್ಕೆ ಬದಲು ೧೧,೦೦೦ ರೂಪಾಯಿ ಮುರಿದುಕೊಂಡು ಉಳಿದ ದುಡ್ಡು ಕೊಟ್ಟೆ.

ನಾನು ಆಗಲೇ ಹೇಳಿದ್ದೇನೆ, ಶೈಸ್ತಾಖಾನನಿಗೆ ಯಾವ ಯಾವ ಬಹುಮಾನಗಳನ್ನು ಕೊಟ್ಟೆ ಎಂದು. ಇಷ್ಟು ಹೇಳಿ, ರಾಜನಿಂದ ಹಿಡಿದು ಉಳಿದ ಸಣ್ಣಪುಟ್ಟವರಿಗೆಲ್ಲ ಏನೇನು ಕೊಟ್ಟೆ ಎಂದು ಹೇಳದೆ ಸುಮ್ಮನಿರುವುದು ಸರಿಯಲ್ಲ. ಯಾರಾದರೂ ರಾಜನನ್ನು ಕಾಣಬೇಕಾದರೆ ಅವನಿಗೆ ಕೊಡಬೇಕೆಂದಿರುವ ಬಹುಮಾನ ಯೋಗ್ಯವಾದುದೇ ಎಂದು ಪರೀಕ್ಷೆಮಾಡಲು ಆರಂಭಿಸುತ್ತಾರೆ. ಹಾಗೆ ಮಾಡುವಾಗ ಯಾರನ್ನೂ ಬರಿಗೈಯಲ್ಲಿ ನೋಡುವಂತಿಲ್ಲ. ಯಾರಿಗೆ ಏನೇನು ಕೊಟ್ಟೆ ಎಂಬುದನ್ನು ಈಗ ಹೇಳುತ್ತೇನೆ ಕೇಳಿ.

೧೬೬೫ರ ಸೆಪ್ಟೆಂಬರ್ ೫ನೇ ತಾರೀಖು ಜಹಾನಾಬಾದಿಗೆ ಬಂದು ರಾಜನನ್ನು ನೋಡಿದೆನಷ್ಟೆ. ಆಗ ಅವನಿಗೆ ಕೊಟ್ಟ ನಜರುಗಳು ಯಾವುವೆಂದರೆ : ಗಿಲೀಟುಮಾಡಿದ ಮತ್ತು ಒಳ್ಳೆಯ ಕುಶಲಕೆಲಸ ಮಾಡಿದ ೪೩೭೩೮ ಲೀವ್ರ್‌ಗಳಷ್ಟು ಬೆಲೆಯ ಕಂಚಿನ ಗುರಾಣಿ. ಫ್ರಾನ್ಸ್‌ನಲ್ಲಿ ಮಾಡಿದ ಈ ಗುರಾಣಿಯನ್ನು ನೋಡಿ ಆಸ್ಥಾನದ ಶ್ರೀಮಂತ ಸರದಾರರೆಲ್ಲಾ ಆಚ್ಚರಿಗೊಂಡರು. ರಾಜನ ಲಾಂಛನವನ್ನು ಹೊರುವ ಆನೆಯ ಮೇಲಿಟ್ಟು ಮೆರವಣಿಗೆ ಮಾಡುವಷ್ಟು ಚೆನ್ನಾಗಿದೆ ಎಂದು ಅದನ್ನು ಹೊಗಳಿದರು. ಶಿಲಾಸ್ಫಟಿಕದಲ್ಲಿ ಮಾಡಿ ಪಚ್ಚೆ ಮತ್ತು ಮಾಣಿಕ್ಯಗಳನ್ನು ಚಿನ್ನದೊಳಗೆ ಹದಿದ ಯುದ್ಧದಂಡ ಇನ್ನೊಂದು ನಜರು. ಇದರ ಬೆಲೆ ೩೧೯೯ ಲೀವ್ರ್‌ಗಳು. ಇಷ್ಟಲ್ಲದೆ, ೨೮೯೨ ಲೀವ್ರ್‌ಗಳ ಒಂದು ಜೀನು ಕೊಟ್ಟೆ. ಇಷ್ಟೆಲ್ಲವುಗಳ ಒಟ್ಟು ಬೆಲೆ ೧೨,೧೯೯ ಲೀವ್ರ್‌ಗಳಷ್ಟಾಯಿತು. ರಾಜನ ಸೋದರಮಾವ ನವಾಬ್ ಜಾಫರ್‌ಖಾನನಿಗೆ ಒಂದು ಮೇಜು ಮತ್ತು ಹರಳಿನ ಉಂಗುರ ಕೊಟ್ಟೆ. ಮಹಾಖಜಾಂಚಿಗೆ ಒಂದು ಕೈಗಡಿಯಾರ ಕೊಟ್ಟೆ. ಖಜಾನೆಯ ಸೇವಕರು, ಸರಾಫರು—ಇವರುಗಳಿಗೆ ೨೦೦ ರೂಪಾಯಿ ಕೊಟ್ಟೆ. ಔರಂಗಜೇಬನ ಸಹೋದರಿ ಮಹಾ ಬೇಗಮುಳ ಖೋಜಾನಿಗೆ ಬಣ್ಣಹಾಕಿದ ಪುಟ್ಟಪೆಟ್ಟಿಗೆಯಲ್ಲಿ ಇಟ್ಟ ಒಂದು ಕೈಗಡಿಯಾರ ಕೊಟ್ಟೆ.

ಹೀಗೆ, ಮೇಲೆ ಹೇಳಿದವರಿಗೆ, ಶೈಸ್ತಾಖಾನನಿಗೆ, ಖಾನನ ಮನೆಯ ಮನೆವಾರ್ತೆಗಾರರಿಗೆ, ಅರಮನೆಯ ಮಹಾದ್ವಾರಗಳನ್ನು ಕಾಯುವ ಸರದಾರರುಗಳಿಗೆ, ರಾಜನು ಎರಡು ಸಲ ನನಗೆ ಕೊಟ್ಟ ಖಿಲ್ಲತ್ತುಗಳನ್ನು ತೆಗೆದುಕೊಂಡು ಬಂದವರಿಗೆ, ಮತ್ತು ಬೇರೆಯವರು ಕಳುಹಿಸಿದ ಖಿಲ್ಲತ್ತುಗಳನ್ನು ತಂದವರಿಗೆ ಕೊಟ್ಟ ಬಹುಮಾನಗಳೆಲ್ಲವುಗಳ ಒಟ್ಟು ಬೆಲೆ ೨೩,೧೮೭ ಲೀವ್ರ್‌ಗಳಷ್ಟಾಯಿತು.

ತುರ್ಕಿ, ಪರ್ಷಿಯಾ ಮತ್ತು ಇಂಡಿಯಾ ದೇಶಗಳ ರಾಜರ ಆಸ್ಥಾನಗಳಲ್ಲಿ ಏನಾದರೂ ತಮ್ಮ ಕೆಲಸ ಮಾಡಿಸಿಕೊಳ್ಳಬೇಕೆನ್ನುವವರು ಬೆಲೆಬಾಳುವ ಬಹುಮಾನಗಳನ್ನೂ, ಜೇಬು ತುಂಬ ಹಣವನ್ನೂ ತೆಗೆದುಕೊಂಡುಹೋಗಬೇಕು.

ನಾನು ಗೋಲ್ಕೊಂಡಾಕ್ಕೆ ಹಲವಾರು ಸಲ ಹೋಗಿಬಂದಿದ್ದೇನೆ ; ಮತ್ತು ಬೇರೆ

ಬೇರೆ ಮಾರ್ಗಗಳಲ್ಲಿ ಪ್ರಯಾಣಮಾಡಿದ್ದೇನೆ. ಕೆಲವು ಸಲ ಹೋರ್ಮ್ಸ್ ರೇವಿನಿಂದ ಮಸುಲಿಪಟ್ಟಣಕ್ಕೆ ಸಮುದ್ರದ ಮೇಲೂ, ಕೆಲವು ಸಲ ಆಗ್ರಾದಿಂದಲೂ, ಹೆಚ್ಚಾಗಿ ಸೂರತ್ತಿನಿಂದಲೂ ಹೋಗಿಬಂದಿದ್ದೇನೆ. ಈ ಪ್ರಯಾಣಗಳಲ್ಲಿ, ೪೫೧೬ ಮತ್ತು ೧೬೫೩ ರಲ್ಲಿ ಮಾಡಿದ ಎರಡು ಪ್ರಯಾಣಗಳ ವಿಚಾರ ಮಾತ್ರ ಹೇಳುತ್ತೇನೆ.

೧೬೪೫ರ ಜನವರಿ ೧೯ರಂದು ನಾನು ಸೂರತ್ತಿನಿಂದ ಹೊರಟು, ಬಾರ್ದೋಲಿ, ನವಾಪುರ ಮಾರ್ಗವಾಗಿ ದೌಲತಾಬಾದ್ ತಲುಪಿದೆ. ಮೊಗಲ್ ಚಕ್ರವರ್ತಿಯ ಅತ್ಯಂತ ಶ್ರೇಷ್ಠವಾದ ಕೋಟೆಗಳಲ್ಲಿ ಇದೊಂದು. ಬೆಟ್ಟದ ಮೇಲಿರುವ ಕೋಟೆಗೆ ಹೋಗಬೇಕಾದರೆ ಒಂದೇ ಒಂದು ದಾರಿ ಇದೆ. ಅದೂ ಸಹ ಒಂದು ಆನೆ ಅಥವಾ ಒಂದು ಒಂಟೆ ಹೋಗುವಷ್ಟು ಮಾತ್ರ ಅಗಲವಾಗಿದೆ. ಬೆಟ್ಟದ ಬುಡದಲ್ಲಿ ಪಟ್ಟಣ ಇದೆ. ಬಿಜಾಪುರ ಮತ್ತು ಗೋಲ್ಕೊಂಡ ರಾಜರುಗಳು ಮೊಗಲ್ ರಾಜನ ಮೇಲೆ ದಂಗೆಯೆದ್ದಾಗ ಈ ಕೋಟೆ ಅವರ ಕೈವಶವಾಗಿ, ಮತ್ತೆ ಜಹಾಂಗೀರನ ಕಾಲದಲ್ಲಿ ಅವರ ಕೈತಪ್ಪಿತು. ಷೈಸ್ತಾಖಾನನ ಮಾವ ಅಜಂಖಾನನು ಈ ಕೋಟೆಯನ್ನು ವಶಪಡಿಸಿಕೊಳ್ಳುವ ಕಾಲದಲ್ಲಿ ದಖನಿ ಸೈನ್ಯದ ದಂಡನಾಯಕನಾಗಿದ್ದ ಸುಲ್ತಾನ್ ಖುರುಮನು ಆಮೇಲೆ ಷಾಜಹಾನ ನಡೆಸಿದ ಒಂದು ಉಪಾಯದಿಂದ ಕೋಟೆ ಅವರ ವಶವಾಯಿತು.

ದೌಲತಾಬಾದಿನಿಂದ ಮುಂದೆ ಹೋದರೆ ಸಿಕ್ಕುವುದು ಔರಂಗಾಬಾದ್. ಔರಂಗಾಬಾದ್ ಮೊದಲಿಗೆ ಒಂದು ಹಳ್ಳಿ. ಔರಂಗಜೇಬ ತನ್ನ ಹೆಂಡತಿಯ ಜ್ಞಾಪಕಾರ್ಥವಾಗಿ ಈ ಊರು ಕಟ್ಟಿಸಿದ. ಆತನ ಹೆಂಡತಿಯ ಸಮಾಧಿಯೂ ಇಲ್ಲಿದೆ. ಬಹಳ ವೆಚ್ಚ ಮಾಡಿ ಸಮಾಧಿಯನ್ನು ಕಟ್ಟಲಾಗಿದೆ. ಏಕೆಂದರೆ, ಲಾಹೋರಿನ ಅಕ್ಕಪಕ್ಕದಿಂದ ತಂದ ಅಮೃತಶಿಲೆಯಿಂದ ಇದನ್ನು ಕಟ್ಟಿದ್ದಾರೆ. ಅಲ್ಲಿಂದ ಕಲ್ಲು ಬರಬೇಕಾದರೆ ನಾಲ್ಕು ತಿಂಗಳ ಕಾಲ ಹಿಡಿಯುತ್ತಿತ್ತು. ನಾನೊಮ್ಮೆ ಸೂರತ್ತಿನಿಂದ ಗೋಲ್ಕೊಂಡಾಕ್ಕೆ ಹೋಗುತ್ತಿರುವಾಗ ಈ ಅಮೃತಶಿಲೆಗಳನ್ನು ಹೇರಿದ್ದ ೩೦೦ ಗಾಡಿಗಳನ್ನು ಕಂಡೆ. ಬಹಳ ಚಿಕ್ಕದಾದ ಗಾಡಿಯೊಂದನ್ನು ೧೨ ಎತ್ತುಗಳು ಎಳೆಯುತ್ತಿದ್ದುವು.

ದೌಲತಾಬಾದಿನಿಂದ ಮುಂದೆ ಪ್ರಯಾಣಮಾಡಿ ನಂದೇರ್ ಎಂಬಲ್ಲಿ ನದಿಯನ್ನು (ಗೋದಾವರಿ ನದಿಯನ್ನು) ದಾಟಿ, ಸತುಲಾನಗರದ (Satulanagara) ಬಳಿ ಗೋಲ್ಕೊಂಡಾ ರಾಜ್ಯವನ್ನು ಪ್ರವೇಶಿಸಿದೆ. ಇಲ್ಲಿಂದ ಗೋಲ್ಕೊಂಡ ಪಟ್ಟಣ ೪೨ ಕೋಶಗಳು. ಸೂರತ್ತಿನಿಂದ ಗೋಲ್ಕೊಂಡಾಕ್ಕೆ ೩೨೪ ಕೋಶಗಳು. ಇಷ್ಟು ದೂರದ ಪ್ರಯಾಣವನ್ನು ೨೭ ದಿನಗಳಲ್ಲಿ ಮುಗಿಸಿದೆ.

ಒಟ್ಟಿನಲ್ಲಿ ಹೇಳಬೇಕೆಂದರೆ, ಗೋಲ್ಕೊಂಡಾ ರಾಜ್ಯ ಶ್ರೀಮಂತವಾದದ್ದು. ದವಸ ಧಾನ್ಯ, ಭತ್ತ, ದನ-ಕುರಿ, ಕೋಳಿ-ಕೊಕ್ಕರೆ ಮುಂತಾದ ಆವಶ್ಯಕವಾದವುಗಳು ದೊರೆಯುತ್ತವೆ. ಇಲ್ಲಿ ಅನೇಕ ಕೆರೆ ಕಟ್ಟೆಗಳಿವೆ. ಅವುಗಳಲ್ಲಿ ಸಿಕ್ಕುವ ಮೀನು ಬಹಳ ರುಚಿ. ಅದರಲ್ಲೂ ಮಧ್ಯಭಾಗದ ಸಾಲುಮುಳ್ಳನ್ನು ಬಿಟ್ಟರೆ ಬೇರೆ ಮುಳ್ಳುಗಳೇ ಇಲ್ಲದ ಒಂದು

ಜಾತಿ ಮೀನಂತೂ (ಬಹುಶಃ 'ಶಿಲ' ಎಂಬ ಮೀನು) ಬಹಳ ರುಚಿ. ಎಲ್ಲೆಲ್ಲೂ ಕೆರೆ ಕುಂಟೆಗಳೇ ಇವೆ.

ಗೋಲ್ಕೊಂಡಾ ರಾಜ್ಯದ ರಾಜಧಾನಿಗೆ ಭಾಗನಗರ (ಭಾಗ್ಯನಗರ) ಎಂದು ಹೆಸರು. ಆದರೆ ಇದನ್ನು ಸಾಮಾನ್ಯವಾಗಿ ಗೋಲ್ಕೊಂಡಾ ಎಂದೇ ಕರೆಯುವುದು. ಭಾಗನಗರಕ್ಕೆ ೨ ಕೋಶ ದೂರದಲ್ಲಿರುವ ಗೋಲ್ಕೊಂಡಾ ಎಂಬ ಹೆಸರಿನ ಕೋಟೆಯಿಂದ ಈ ಊರಿಗೆ ಆ ಹೆಸರು ಬಂದಿದೆ. ರಾಜ[1] ಕೋಟೆಯೊಳಗೆ ವಾಸಮಾಡುತ್ತಾನೆ. ದೊಡ್ಡ ಸೈನ್ಯವೂ ಅಲ್ಲಿದೆ.

ಈಗ ಆಳುವ ರಾಜನ ಮುತ್ತಾತನು ಆತನ ಮಮತೆಯ ಮಡದಿ 'ನಗರ್' ಎಂಬು ವಳ ಹೆಸರಿನಲ್ಲಿ ಭಾಗನಗರವನ್ನು ಕಟ್ಟಿಸಿದ.[2] ಗೋಲ್ಕೊಂಡಾದ ಸುತ್ತಮುತ್ತಲ ಪ್ರದೇಶ ಮಟ್ಟಸವಾಗಿದೆ. ಪಟ್ಟಣದ ಸುತ್ತಮುತ್ತ ಮಾತ್ರ ಅಸಂಖ್ಯಾತ ಬಂಡೆಕಲ್ಲು ಗಳನ್ನು ನೋಡಬಹುದು. ಊರಿನ ಬಳಿ ದೊಡ್ಡ ನದಿಯೊಂದು (ಮೂಸಿ ನದಿ) ಹರಿದು ಮಸುಲಿಪಟ್ಟದ ಬಳಿ ಬಂಗಾಳಾಕೊಲ್ಲಿಯನ್ನು ಸೇರುತ್ತದೆ. ಊರಿನ ಬೀದಿಗಳು ಅಗಲ ವಾಗಿದ್ದರೂ ಧೂಳು ವಿಪರೀತ. ಬೇಸಿಗೆಯಲ್ಲಂತೂ ಈ ಧೂಳಿನಿಂದ ಸಹಿಸಲಾರದಷ್ಟು ತಾಪತ್ರಯ.

ಮೇಲೆ ಹೇಳಿದ ನದಿಯನ್ನು ದೊಡ್ಡ ಸೇತುವೆಯ ಮೂಲಕ ದಾಟಬೇಕು. ಈ ಸೇತುವೆ ಸಿಕ್ಕುವುದಕ್ಕೆ ಮುಂಚೆ ಔರಂಗಾಬಾದ್ ಎಂಬ ದೊಡ್ಡ ಉಪನಗರ (suburb) ಸಿಕ್ಕುತ್ತದೆ. ಈ ಉಪನಗರದಲ್ಲಿಯೇ ವರ್ತಕರೂ, ದಲ್ಲಾಳಿಗಳೂ, ಕುಶಲ ಕೆಲಸಗಾರರೂ ನೆಲೆಸಿರುವುದು. ಭಾಗನಗರದಲ್ಲಿ ಶ್ರೀಮಂತರು, ಅರಮನೆಯ ಅಧಿಕಾರಿ ಗಳು ಮತ್ತು ಸೇನಾಧಿಕಾರಿಗಳು ಮಾತ್ರ ಇದ್ದಾರೆ. ವರ್ತಕರು ಬೆಳಿಗ್ಗೆ ಹತ್ತು ಹನ್ನೊಂದು ಗಂಟೆಗೆ ಅಲ್ಲಿಗೆ ಹೋಗಿ ವ್ಯಾಪಾರ ಸಾಪಾರ ಮುಗಿಸಿಕೊಂಡು ಸಂಜೆ ಹಿಂದಿ ರುಗುತ್ತಾರೆ. ಉಪನಗರದ ಮೂಲಕವೇ. ನೀವು ಪಟ್ಟಣದಿಂದ ಗೋಲ್ಕಾಂಡಾಕ್ಕೆ ಹೋಗಬೇಕು.

ಮೇಲೆ ಹೇಳಿದ ಸೇತುವೆಯನ್ನು ದಾಟಿದರೆ ಅರಮನೆಗೆ ಹೋಗುವ ಅಗಲವಾದ ಬೀದಿ ಸಿಕ್ಕುತ್ತದೆ. ಈ ಬೀದಿಯ ಬಲಗಡೆ ಹಲವಾರು ಸರದಾರರ ಮನೆಗಳೂ, ನಾಲ್ಕೈದು ಕಾರವಾನ್‌ಸರಾಯ್‌ಗಳೂ ಇವೆ. ಈ ಕಾರವಾನ್‌ಸರಾಯ್‌ಗಳು ಎರಡು ಅಂತಸ್ತಿನ ದೊಡ್ಡ ದೊಡ್ಡ ಹಜಾರಗಳೂ ಕೋಣೆಗಳೂ ಉಳ್ಳ ಭಾರಿ ಕಟ್ಟಡಗಳು.

---

[1] ಟಾವೆರನ್ಯೇ ೧೬೪೧–೧೬೬೮ರ ನಡುವೆ ಐದು ಸಲ ಭಾರತಕ್ಕೆ ಬಂದ. ಆ ಕಾಲದಲ್ಲಿ ಗೋಲ್ಕೊಂಡ ರಾಜ್ಯದ ಸುಲ್ತಾನನಾಗಿದ್ದವನು ಅಬ್ದುಲ್ ಕುತುಬ್ ಷಾ (೧೬೧೨–೧೬೭೨).

[2] ಭಾಗನಗರ ಅಥವಾ ಭಾಗ್ಯನಗರವನ್ನು ಕಟ್ಟಿಸಿದವನು ಕುತುಬ್ ಷಾ ಮಹಮ್ಮದ್ ಕೂಲಿ (೧೬೧೨–೧೫೪೩) ಎಂಬುವನು. ಅವನ ಮೆಚ್ಚಿನ ಮಡದಿಯ ಹೆಸರು ಭಾಗಮತಿ ಎಂದು; ನಗರ್ ಎಂದಲ್ಲ.

ಬೀದಿಯ ಕೊನೆಯಲ್ಲಿ ದೊಡ್ಡ ಚೌಕವೊಂದು ಸಿಕ್ಕುತ್ತದೆ. ಈ ಚೌಕದ ಒಂದು ಕಡೆಗೆ ಅರಮನೆಯ ಒಂದು ಭಾಗದ ಗೋಡೆ ತಾಗಿಕೊಂಡಿದೆ. ಈ ಗೋಡೆಯ ಮಧ್ಯೆ ಉಪ್ಪರಿಗೆಯ ಮೊಗಸಾಲೆ (balcony) ಇದೆ. ತನ್ನ ಪ್ರಜೆಗಳಿಗೆ ದರ್ಶನ ಕೊಡಲು ರಾಜ ಇಲ್ಲಿ ಕುಳಿತುಕೊಳ್ಳುತ್ತಾನೆ. ಅರಮನೆಯ ಮುಖ್ಯದ್ವಾರ ಇಲ್ಲಿಲ್ಲ ; ಹತ್ತಿರದಲ್ಲೇ ಇರುವ ಇನ್ನೊಂದು ಚೌಕದೊಳಗಿದೆ. ಆ ಮುಖ್ಯದ್ವಾರದೊಳಗೆ ಹೋದರೆ ಮೊಟ್ಟ ಮೊದಲು ದೊಡ್ಡ ಅಂಗಳವೊಂದು ಕಾಣುತ್ತದೆ. ಇದರ ಸುತ್ತ ರಾಜನ ರಕ್ಷಣಾ ಸಿಬ್ಬಂದಿ ಇರುವ ಮುಖಮಂಟಪ (portico)ಗಳಿವೆ. ಈ ಅಂಗಳದಿಂದ ಆಚೆ ಹೋದರೆ ಇನ್ನೊಂದು ಇದೇ ತರಹ ಅಂಗಳ ಸಿಕ್ಕುತ್ತದೆ. ಈ ಅಂಗಳದ ಸುತ್ತ ತಾರಸಿಯ ಮಾಡುಳ್ಳ ಅಂದವಾದ ಹಲವಾರು ಕೋಣೆಗಳಿವೆ. ಈ ಕೋಣೆಗಳ ತಾರಸಿಯ ಮಾಡಿನ ಮೇಲೆ ಸೊಗಸಾದ ತೋಟಗಳಿವೆ ; ಅಲ್ಲದೆ ಭಾರಿ ಭಾರಿ ಮರಗಳೂ ಇವೆ. ಅಚ್ಚರಿ ಯೆಂದರೆ, ಕೋಣೆಗಳ ಕಮಾನುಗಳು ಆ ತೋಟದ ಹಾಗೂ ಮರಗಿಡಗಳ ಭಾರಿ ತೂಕ ವನ್ನು ಹೇಗೆ ಹೊರಬಲ್ಲವು ಎಂಬುದು. ಒಟ್ಟಿನಲ್ಲಿ, ಈ ಮನೆ ಎಲ್ಲಾ ರೀತಿಯಲ್ಲೂ ಅರಮನೆ.

ಇಲ್ಲಿ ಐವತ್ತು ವರ್ಷಗಳ ಹಿಂದೆಯೇ ಒಂದು ಸೊಗಸಾದ ಪಗೋಡಾ (pagoda) ಕಟ್ಟಲು ಆರಂಭಿಸಿದ್ದಾರೆ ಇದು ಮುಗಿದಾಗ ಇಡೀ ಇಂಡಿಯಾದಲ್ಲಿಯೇ ಭವ್ಯವಾದ ಕಟ್ಟಡವಾಗುವುದರಲ್ಲಿ ಸಂದೇಹವಿಲ್ಲ.[1]

ಪಟ್ಟಣದ ಇನ್ನೊಂದು ಕಡೆ, ಅಂದರೆ ಮಸುಲಿಪಟ್ಟಣಕ್ಕೆ ಹೋಗುವ ಕಡೆ, ಎರಡು ದೊಡ್ಡ ಕೆರೆಗಳಿವೆ. ಕೆರೆಗಳಲ್ಲಿ ರಾಜನ ವಿಹಾರಕ್ಕಾಗಿ ಅಲಂಕರಿಸಿಟ್ಟ ಹಲವಾರು ದೋಣಿಗಳನ್ನು ಇಟ್ಟಿದ್ದಾರೆ ; ಮತ್ತು ಕೆರೆಗಳ ಬಳಿ ಆಸ್ಥಾನದ ಮುಖ್ಯ ಅಧಿಕಾರಿಗಳ ಅಂದವಾದ ಅನೇಕ ಮನೆಗಳಿವೆ.

ಪಟ್ಟಣದಿಂದ ಮೂರು ಕೋಶ ದೂರದಲ್ಲಿ ಒಂದು ಚೆಂದವಾದ ಮಸೀದಿ ಇದೆ. ಇದರೊಳಗೆ ಗೋಲ್ಕೊಂಡಾ ರಾಜರುಗಳ ಗೋರಿಗಳಿವೆ. ಇಲ್ಲಿ ಪ್ರತಿ ದಿನ ಸಂಜೆ ನಾಲ್ಕು ಘಂಟೆ ಹೊತ್ತಿಗೆ ರೊಟ್ಟಿ ಮತ್ತು 'ಪಲಾವ್' (palao) ಅನ್ನ–ಇವುಗಳನ್ನು ಬಡಬಗ್ಗರಿಗೆ ಕೊಡುತ್ತಾರೆ. ನಿಜವಾಗಿಯೂ ಅಂದಚೆಂದವಾದುದನ್ನು ನೋಡಬೇಕೆಂದು ನಿಮಗೆ ಮನಸ್ಸಿದ್ದರೆ ಯಾವುದಾದರೂ ಹಬ್ಬದ ದಿನ ಈ ಗೋರಿಗಳನ್ನು ನೋಡಿ. ಆ ದಿನ ಬೆಳಗಿನಿಂದ ಸಂಜೆಯವರೆಗೆ ಬಹು ಬೆಲೆಯಾದ ಜಮಖಾನಗಳನ್ನು ಗೋರಿಗಳಿಗೆ ಹೊದಿಸಿ ರುತ್ತಾರೆ.

ಪಟ್ಟಣದ ವ್ಯವಸ್ಥೆ ಮತ್ತು ಶಿಸ್ತಿನ ಬಗ್ಗೆ ನಾನು ಕಂಡದ್ದನ್ನು ಈಗ ಹೇಳುತ್ತೇನೆ. ಯಾರಾದರು ಆಗಂತುಕನು ಪಟ್ಟಣಕ್ಕೆ ಬಂದರೆ ಅವನನ್ನು ಹೆಬ್ಬಾಗಿಲುಗಳ ಬಳಿ

---

[1] ಇದು ಮಹಮ್ಮದ್ ಕೂಲಿ (೧೫೮೧–೧೬೧೧) ಕಟ್ಟಿಸಿದ ಜುಮ್ಮಾ ಮಸೀದಿ.

ಚೆನ್ನಾಗಿ ಶೋಧಿಸುತ್ತಾರೆ. ಆತನ ಬಳಿ ಉಪ್ಪು ಅಥವಾ ತಂಬಾಕು ಇವೆಯೇ ಎಂಬು ದನ್ನು ಪತ್ತೆಹಚ್ಚುವುದು ಶೋಧನೆಯ ಉದ್ದೇಶ. ಈ ಎರಡು ವಸ್ತುಗಳಿಂದ ರಾಜನಿಗೆ ಭಾರಿ ಆದಾಯ ಬರುತ್ತದೆ. ಕೆಲವು ವೇಳೆ ಒಳಗೆ ಪ್ರವೇಶಮಾಡಲು ಅಪ್ಪಣೆ ಸಿಗಬೇಕಾ ದರೆ ಒಂದೆರಡು ದಿವಸಗಳು ಕಾಯಬೇಕಾಗುತ್ತದೆ. ಬಾಗಿಲು ಕಾಯುವ ರಕ್ಷಣಾದಳದ ಅಧಿಕಾರಿಗೆ ಸಿಪಾಯಿ ಪರಸ್ಥಳದವನೊಬ್ಬ ಬಂದಿರುವ ವಿಚಾರವನ್ನು ತಿಳಿಸುತ್ತಾನೆ. ಆ ಅಧಿಕಾರಿ, 'ದರೋಗ' (Darogha)ನಿಗೆ ತಿಳಿಸುತ್ತಾನೆ. ಆದರೆ ಸಾಮಾನ್ಯವಾಗಿ ದರೋಗಾ ಏನಾದರೊಂದು ಕೆಲಸದಲ್ಲಿ ತೊಡಗಿರುತ್ತಾನಾದ್ದರಿಂದ ಅಥವಾ ಪಟ್ಟಣದ ಹೊರಗಡೆ ಹೋಗಿರುತ್ತಾನಾದ್ದರಿಂದ ಅಥವಾ ಆವನು ಸಿಕ್ಕಲೇಇಲ್ಲವೆಂದು ಸಿಪಾಯಿ ನೆಚಹೇಳಬಹುದಾದ ಕಾರಣದಿಂದ ಪ್ರವೇಶ ದೊರೆಯಲು ಒಂದೆರಡು ದಿನ ನಿಧಾನವಾಗ ಬಹುದು. ಸಿಪಾಯಿಯನ್ನು ಸರಿಯಾಗಿ ನೋಡಿಕೊಂಡರೆ ಈ ರಹಸ್ಯ ವರ್ತನೆಗಳೆಲ್ಲಾ ಸಲೀಸಾಗಿ ನಿವಾರಣೆಯಾಗಿ ಜಾಗ್ರತೆ ಪ್ರವೇಶ ದೊರೆಯಬಹುದು.

ಪ್ರಜೆಗಳ ದೂರು ಮತ್ತು ಅಹವಾಲುಗಳನ್ನು ವಿಚಾರಿಸಬೇಕಾದಾಗ ನಾನು ಈಗಾಗಲೇ ಹೇಳಿರುವ ಮೊಗಸಾಲೆಯಲ್ಲಿ ರಾಜ ಕುಳಿತುಕೊಳ್ಳುತ್ತಾನೆ. ಜನರು ಅದಕ್ಕೆ ಎದುರಾಗಿ ಚೌಕದ ಇನ್ನೊಂದು ಕಡೆ ನಿಂತುಕೊಳ್ಳುತ್ತಾರೆ. ಜನಗಳಿಗೂ ರಾಜನು ಕುಳಿತುಕೊಳ್ಳುವ ಮೊಗಸಾಲೆ ಇರುವ ಅರಮನೆಯ ಗೋಡೆಗೂ . ಮಧ್ಯೆ ಗೂಟಗಳನ್ನು ನೆಟ್ಟು ಹಗ್ಗ ಕಟ್ಟಿರುತ್ತಾರೆ. ಅಪ್ಪಣೆಯಾದ ಹೊರತು ಯಾರೂ ಈ ಹಗ್ಗದ ಗಡಿ ಯಿಂದಾಚೆ ಹೋಗಕೂಡದು. ರಾಜನ ಮಂತ್ರಿಯೊಬ್ಬ (Secretary of State) ಮೊಗಸಾಲೆಯ ಕೆಳಗೆ ಚೌಕದಲ್ಲಿ ನಿಂತು ಅರ್ಜಿ ಅಹವಾಲುಗಳನ್ನು ಈಸಿಕೊಳ್ಳುತ್ತಾನೆ. ಐದಾರು ಅರ್ಜಿ ಅಹವಾಲುಗಳು ಸೇರಿದ ಮೇಲೆ ಅವುಗಳನ್ನು ದಾರ ಕಟ್ಟಿದ ಒಂದು ಚೀಲದಲ್ಲಿಡುತ್ತಾನೆ. .. ಮೇಲುಗಡೆ ರಾಜನ ಬಳಿ ನಿಂತಿರುವ ಒಬ್ಬ ಖೋಜಾ ಆ ಚೀಲ ವನ್ನು ಅದಕ್ಕೆ ಕಟ್ಟಿರುವ ದಾರದಿಂದ ಮೇಲಕ್ಕೆ ಎಳೆದುಕೊಂಡು ರಾಜನಿಗೆ ಒಪ್ಪಿಸುತ್ತಾನೆ.

ಪ್ರತಿ ಸೋಮವಾರ ಸರದಿಯ ಮೇಲೆ ಮುಖ್ಯ ಸರದಾರರು ಅರಮನೆಯ ಕಾವಲು ಕಾಯುವ ಜವಾಬ್ದಾರಿ ವಹಿಸಿಕೊಳ್ಳುತ್ತಾರೆ. ಒಂದು.ವಾರದ ತನಕ ಒಬ್ಬನ.ಸರದಿ. ಈ ಕಾವಲು ಕಾಯುವ ಸರದಾರ ನಗರದ ಸುತ್ತ ಗುಡಾರಗಳನ್ನು ಹೊಡೆದು ಅವುಗಳಲ್ಲಿ ಬೀಡುಬಿಡುತ್ತಾನೆ. ಹೀಗೆ ಸರದಾರರ ತನ್ನ ಕಾವಲು ಮುಗಿಸಿ ಮನೆಗೆ ಹಿಂದಿರುಗುವಾಗ ಆನೆ, ಒಂಟೆ, ಕುದುರೆ, ಗಾಡಿ, ಕಾಲ್ದಳ ಹಾಗೂ ನರ್ತಕಿಯರೊಡ ಗೂಡಿ ಅಂಬಾರಿಯಲ್ಲಿ ಕುಳಿತು ಶಿಸ್ತಿನಿಂದ ಬರುತ್ತಾನೆ. ಈ ಸರದಾರರು ಅವರವರ ಅಂತಸ್ತಿಗೆ ತಕ್ಕಂತೆ ವೈಭವದಿಂದ ಮೆರವಣಿಗೆ ಬರುವುದನ್ನು ನಾನು ಭಾಗನಗರದಲ್ಲಿ ಮೂರು ನಾಲ್ಕು ತಿಂಗಳು ನಿಂತಾಗ ನೋಡಿ ಆನಂದಪಟ್ಟದ್ದೇನೆ.

ಸಿಪಾಯಿಗಳ ಮುಖ್ಯ ಉಡುಪೆಂದರೆ ಮೂರು ನಾಲ್ಕು ಮೊಳ ಉದ್ದದ ಬಟ್ಟೆ. ಇದನ್ನು ಸೊಂಟಕ್ಕೆ ಸುತ್ತಿ ಕಚ್ಚೆಹಾಕಿಕೊಂಡಿರುತ್ತಾರೆ. ಸಿಪಾಯಿಗಳು ಹೆಂಗಸರಂತೆ

ಉದ್ದವಾಗಿ ಕೂದಲು ಬೆಳಸಿ ಗಂಟುಹಾಕಿಕೊಳ್ಳುತ್ತಾರೆ. ಮೂರು ಮೂಲೆಯ ಒಂದು ಚೌಕವನ್ನು ತಲೆಯ ಮೇಲೆ ಹಾಕಿಕೊಂಡು ಅದನ್ನು ಗಡ್ಡದ ಕೆಳಗೆ ಗಂಟುಹಾಕಿಕೊಳ್ಳು ತ್ತಾರೆ. ಅಗಲ ಕತ್ತಿಯನ್ನು ಸೊಂಟದ ನಡುಪಟ್ಟಿಗೆ ಸಿಕ್ಕಿಸಿಕೊಂಡಿರುತ್ತಾರೆ. ಇವರ ಬಂದೂಕದ ಕೊಳವೆಗಳು ನಮ್ಮವುಗಳಿಗಿಂತ ಹೆಚ್ಚು ಭದ್ರ ; ಅಲ್ಲದೆ ಅವುಗಳನ್ನು ಮಾಡಿ ರುವ ಕಬ್ಬಿಣ ಹೆಚ್ಚು ಉತ್ತಮ ಹಾಗೂ ಸ್ವಚ್ಛ. ಈ ಕಾರಣ ಇವರ ಬಂದೂಕಗಳು ಸಿಡಿಯುವುದಿಲ್ಲ. ಅಶ್ವದಳದವರು ಬಿಲ್ಲು ಬಾಣ, ಲೋಹದ ಮುಳ್ಳುಳ್ಳ ದಂಡ ಮತ್ತು ಗುರಾಣಿ, ಶಿರಸ್ತ್ರಾಣ, ಮತ್ತು ಉಕ್ಕಿನ ಅಂಗಿ–ಇವುಗಳಿಂದ ಸಜ್ಜಿತರಾಗಿರುತ್ತಾರೆ.

ಈ .ಪಟ್ಟಣ, ಉಪನಗರ ಹಾಗೂ ಕೋಟೆ–ಇಲ್ಲೆಲ್ಲಾ ಇರುವ ವೇಶ್ಯೆಯರ ಸಂಖ್ಯೆ ೨೦,೦೦೦ಕ್ಕೂ ಹೆಚ್ಚು. ಈ ವೇಶ್ಯೆಯರು ತಮ್ಮ ಹೆಸರುಗಳನ್ನು 'ದರೋಗ'ನ ಬಳಿ ಇರುವ ದಾಖಲೆಪುಸ್ತಕದಲ್ಲಿ ಬರೆಸಿದ ಹೊರತು ವೇಶ್ಯಾವೃತ್ತಿಯನ್ನು ನಡೆಸುವಂತಿಲ್ಲ. ವೇಶ್ಯಾವೃತ್ತಿಯನ್ನು ನಡೆಸಲು ರಾಜನಿಗೆ ಯಾವ ತೆರಿಗೆಯನ್ನೂ ಕೊಡಬೇಕಾಗಿಲ್ಲ. ಆದರೆ ಪ್ರತಿ ಶುಕ್ರವಾರ ಹೇಳಿದಷ್ಟು ಜನ ವೇಶ್ಯೆಯರು ತಮ್ಮ ಪರಿವಾರ ಹಾಗೂ ವಾದ್ಯ ಸಮೇತ ಮೊಗಸಾಲೆಯ ಮುಂದಿನ ಚೌಕದಲ್ಲಿ ಹಾಜರಿರಬೇಕು; ಮತ್ತು ರಾಜ ಇದ್ದರೆ ಅವನ ಮುಂದೆ ನರ್ತನಮಾಡಬೇಕು. ಅವನಿಲ್ಲದಿದ್ದರೆ ರಾಜನ ಕಡೆಯ ಖೋಜಾನ ಅಪ್ಪಣೆ ಪಡೆದು ಹೊರಟುಹೋಗುತ್ತಾರೆ.

ಈ ವೇಶ್ಯೆಯರು ಸಂಜೆಯ ತಂಪುಹೊತ್ತಿನಲ್ಲಿ ಅವರವರ ಮನೆಯ ಬಾಗಿಲುಗಳಲ್ಲಿ ಕುಳಿತುಕೊಂಡಿರುವುದನ್ನು ನೋಡಬಹುದು. ಅವರ ಮನೆಗಳೆಂದರೆ ಬಹುತೇಕ ಸಣ್ಣ ಗುಡಿಸಲುಗಳು, ಅಷ್ಟೆ. ಕತ್ತಲಾದ ಮೇಲೆ ಗುರುತಿಗಾಗಿ ಒಂದು ದೀಪ ಹಚ್ಚಿ ಬಾಗಿಲ ಬಳಿ ಇಡುತ್ತಾರೆ. ಆ ವೇಳೆಯಲ್ಲಿಯೇ 'ತಾರಿ' (tari=toddy=ಹೆಂಡ) ಯನ್ನು ಮಾರುವ ಅಂಗಡಿಗಳು ತೆರೆಯುವುದು. ಈ 'ತಾರಿ' ಎಂಬುದು ಮರದಿಂದ ಪಡೆದ ಮದ್ಯ. ಇದು ನಮ್ಮ ಹೊಸ ವೈನುಗಳಷ್ಟೇ (new wines) ರುಚಿಯಾಗಿರುತ್ತದೆ. ಇದನ್ನು ಐದಾರು ;ಕೋಶಗಳ ದೂರದಿಂದ ಚರ್ಮದ ತಿತ್ತಿಗಳಲ್ಲಿ ತುಂಬಿ ಕುದುರೆಗಳ ಮೇಲೆ ಹೇರಿಕೊಂಡುಬರುತ್ತಾರೆ. ದಿನ ೫೦೦ ರಿಂದ ೬೦೦ ಕುದುರೆಗಳು ಪಟ್ಟಣ ವನ್ನು ಪ್ರವೇಶಿಸುತ್ತವೆ. ಹೆಂಡದ ಮೇಲೆ ತೆರಬೇಕಾದ ತೆರಿಗೆಯಿಂದ ರಾಜನಿಗೆ ತುಂಬಾ ಆದಾಯವುಂಟು. ಈ ಹೆಂಡದ ಕಾರಣವಾಗಿಯೇ ಅಷ್ಟೊಂದು ಮಂದಿ ವೇಶ್ಯೆಯರಿಗೆ ಅನುಮತಿ ಕೊಟ್ಟಿರುವುದು. ವೇಶ್ಯೆಯರಿಂದಾಗಿ ತಾರಿಯ ಸೇವನೆ ಹೆಚ್ಚು. ತಾರಿಯನ್ನು ಮಾರುವ ಅಂಗಡಿಗಳು ವೇಶ್ಯೆಯರ ಮನೆಗಳಿಗೆ ಹತ್ತಿರವೇ ಇವೆ.

ಈ ವೇಶ್ಯೆಯರು ಎಷ್ಟೊಂದು ನಯ ನಾಜೂಕಿನ ಹೆಣ್ಣುಗಳೆಂದರೆ, ಈಗ ಆಳುತ್ತಿ ರುವ ರಾಜ ಮಸುಲಿಪಟ್ಟಣಕ್ಕೆ ಹೋದಾಗ ಒಂಬತ್ತು ಜನ ವೇಶ್ಯೆಯರು ಆನೆಯ ಆಕಾರದಲ್ಲಿ ಪರಸ್ಪರ ಜೋಡಿಸಿಕೊಂಡು ಬೀದಿಯಲ್ಲಿ ಸಾಗಿದರು. ನಾಲ್ಕು ಜನ ನಾಲ್ಕು

ಕಾಲುಗಳಾದರೆ, ನಾಲ್ಕು ಜನ ಶರೀರವಾದರು ; ಒಬ್ಬಾಕೆ ಸೊಂಡಿಲಾದಳು.[1] ಹೆಣ್ಣು ಗಳಿಂದಾದ ಈ ಆನೆಯ ಮೇಲೆ ರಾಜ ಒಂದು ತರಹ ಅಂಬಾರಿ ಹಾಕಿ ಕುಳಿತು ಪಟ್ಟಣ ವನ್ನು ಪ್ರವೇಶಿಸಿದ.

ಗೋಲ್ಕೊಂಡಾದ ಹೆಂಗಸರು ಗಂಡಸರೆಲ್ಲಾ ಒಳ್ಳೆಯ ಮೈಕಟ್ಟುಳ್ಳ ಅಂದಚೆಂದದ ಮುಖವುಳ್ಳ ಜನ. ಬೇಸಾಯಮಾಡುವ ಜನರು ಮಾತ್ರ ಒಂದು ಸ್ವಲ್ಪ ಕಪ್ಪು. ಈಗ ರಾಜ್ಯವಾಳುವ ರಾಜನ ಹೆಸರು ಅಬ್ದುಲ್–ಕುತಬ್–ಷಾ.[2] ಇವನ ಮೂಲವನ್ನು ನಾಲ್ಕು ಮಾತಿನಲ್ಲಿ ಹೇಳಿಬಿಡುತ್ತೇನೆ. ಅಕ್ಬರನ ಕಾಲದಲ್ಲಿ ಮೊಗಲ್ ರಾಜ್ಯ ನರ್ಮದಾ ನದಿಯ ವರೆಗೆ ಮಾತ್ರ ಹಬ್ಬಿತ್ತು. ನರ್ಮದಾನದಿಯಿಂದೀಚೆಗೆ ಕೇಪ್ ಕಾಮೊರಿನ್[3] ವರೆಗಿನ ದೇಶ ನರಸಿಂಗದ (ವಿಜಯನಗರದ) ರಾಜನಿಗೆ ಸೇರಿತ್ತು. ಮೊದಲಿನಿಂದ ತೈಮೂರ್‌ಲಂಗನ ಅನಂತರ ರಾಜ್ಯವಾಳಿದವರಿಗೂ ಈ ರಾಜನಿಗೂ ಯುದ್ಧಗಳಾಗುತ್ತಲೇ ಬಂದಿವೆ. ರಾಜನ ಬಳಿ ನಾಲ್ಕು ಕಾಲ್ದಳಗಳಿದ್ದುವು. ಒಂದೊಂದಕ್ಕೂ ಬೇರೆ ಬೇರೆ ದಳಪತಿಗಳಿದ್ದರು ಈ ದಳಪತಿಗಳು ಇದ್ದ ಸ್ಥಳಗಳು ಯಾವುವೆಂದರೆ ಗೋಲ್ಕೊಂಡ, ಬಿಜಾಪುರ, ದೌಲತಾಬಾದ್ ಮತ್ತು ಬುರ್ಹಾನ್‌ಪುರ. ನರಸಿಂಗದ ರಾಜನು ಮಕ್ಕಳಿಲ್ಲದೆ ಕಾಲವಾದಾಗ ಈ ನಾಲ್ಕು ಜನ ದಳಪತಿಗಳು ತಮ್ಮ ತಮ್ಮ ಭಾಗದಲ್ಲಿ ತಾವೇ ರಾಜರೆಂದು ಕರೆದುಕೊಂಡರು. ರಾಜ ವಿಗ್ರಹಾರಾಧಕ. ಆದರೂ ದಳಪತಿಗಳು ಮಹಮ್ಮದೀಯರಾಗಿದ್ದರು. ಗೋಲ್ಕೊಂಡಾ ರಾಜ ಷಿಯಾ ಪಂಥಕ್ಕೆ ಸೇರಿದವ. ಇವನು ಎಲ್ಲರಿಗಿಂತಲೂ ಹೆಚ್ಚು ಶಕ್ತಿವಂತನಾಗಿಯೂ ಇದ್ದ. ನರಸಿಂಗದ ರಾಜ ಸತ್ತಮೇಲೆ ಈ ನಾಲ್ಕು ಜನ ರಾಜರುಗಳು ಸೇರಿಕೊಂಡು ಮೊಗಲನ ಮೇಲೆ ಯುದ್ಧಮಾಡಿ ಭಾರಿ ಜಯ ಪಡೆದರು. ರಾಜರೆಂದು ಮೆರೆಯುವುದಕ್ಕೆ ಅವರಿಗೆ ಈಗ ಯಾವ ಅಡೆತಡೆಗಳೂ ಇಲ್ಲದಂತಾದುವು. ಆದರೆ ಆಮೇಲೆ ಅಕ್ಬರನ ಮಗ ಜಹಾಂಗೀರನು ಬುರಾನ್‌ಪುರವನ್ನೂ, ಅವನ ಮಗ ಷಾಜಹಾನ ದೌಲತಾ ಬಾದನ್ನೂ, ಷಾಜಹಾನನ ಮಗ ಔರಂಗಜೇಬ ಬಿಜಾಪುರದ ಒಂದು ಭಾಗವನ್ನೂ ಗೆದ್ದು ಕೊಂಡರು. ಗೋಲೊಂಡಾ ರಾಜನನ್ನು ಮಾತ್ರ ಗೆಲ್ಲಲುಹೋಗದೆ, ಅವನಿಂದ ವರ್ಷಕ್ಕೆ ಎರಡು ಲಕ್ಷ ಪಗೋಡಾ[4]ಗಳ ಪೊಗದಿ ಬರುವಂತೆ ಮಾಡಿಕೊಂಡರು.

---

[1]ಮೊಗಲ್ ಚಿತ್ರಕಲೆಯಲ್ಲಿ ಸ್ತ್ರೀಯರು ಆನೆಯ ಆಕಾರವನ್ನು ತಾಳಿರುವ ಚಿತ್ರವನ್ನು ಕಾಣಬಹುದು.

[2]ಅಬ್ದುಲ್–ಕುತಬ್–ಷಾ : ಈತ ಪಟ್ಟಕ್ಕೆ ಬಂದದ್ದು ಕ್ರಿ.ಶ. ೧೬೧೧ರಲ್ಲಿ.

[3]ಕೇಪ್–ಕಾಮೊರಿನ್ : ಕನ್ಯಾಕುಮಾರಿ ಭೂಶಿರ.

[4]ಪಗೋಡ (Pagoda): ದಕ್ಷಿಣ ಭಾರತದ ಯಾವುದೇ ಹಳೆಯ ಚಿನ್ನದ ನಾಣ್ಯ. ವಿಜಯ ನಗರದ ಅರಸರ ಕಾಲದಲ್ಲಿದ್ದ ಚಿನ್ನದ ನಾಣ್ಯಗಳು ಗದ್ಯಾಣ, ವರಾಹ, ಪೊನ್; ಪ್ರತಾಪ, ಕಾಟ್ಟಿ, ಪಣ ಮತ್ತು ಹಾಗ.

ಈಗ ಗಂಗಾನದಿಯ ದಕ್ಷಿಣದಲ್ಲಿರುವ ದಖನ್ ಮಹಾ ಪ್ರಸ್ಥಭೂಮಿಯಲ್ಲಿ ಬಹಳ ಶಕ್ತಿವಂತನಾದ ರಾಜನೆಂದರೆ ವೆಲೊ (Vellow : ವೆಲ್ಲೂರು) ರಾಜ. ಈತನ ರಾಜ್ಯ ಒಂದು ಕಡೆ ಕೇಪ್ ಕಾಮೊರಿನ್‌ವರೆಗೂ, ಇನ್ನೊಂದು ಕಡೆ ನರಸಿಂಗದ ರಾಜನ ರಾಜ್ಯ ದೊಳಕ್ಕೂ ಹಬ್ಬಿದೆ. ಆದರೆ ಈತನ ರಾಜ್ಯದಲ್ಲಿ ಯಾವ ವ್ಯಾಪಾರ–ಸಾಪಾರವೂ ಇಲ್ಲದ ಕಾರಣ ಸದ್ದಿಲ್ಲದೆ ಇದ್ದಾನೆ. ಪರದೇಶದವರು ಅವನ ರಾಜ್ಯಕ್ಕೆ ಹೋಗುವುದೇ ಅಪರೂಪ.

ಗೋಲ್ಕೊಂಡಾದ ಈಗಿನ ರಾಜನಿಗೆ ಗಂಡುಮಕ್ಕಳಿಲ್ಲ. ಮೂರು ಹೆಣ್ಣುಮಕ್ಕಳು ಮಾತ್ರ ಇದ್ದಾರೆ. ಎಲ್ಲರಿಗೂ ಮದುವೆಯಾಗಿದೆ. ಮೊದಲನೆಯ ಮಗಳನ್ನು ಮೆಕ್ಕಾದ ಮಹಾ 'ಷೇಖ'ನಿಗೆ ಕೊಟ್ಟಿದೆ. ಈ ಮದುವೆಯ ಪ್ರಸಂಗ ಹೇಳಬೇಕಾದಷ್ಟು ವಿಚಿತ್ರ ವಾಗಿದೆ. ಮೆಕ್ಕಾದ ಷೇಖ ತಿರುಕನ ವೇಶದಲ್ಲಿ ಗೋಲ್ಕೊಡಾಕ್ಕೆ ಬಂದ. ಅರಮನೆಯ ಬಾಗಿಲ ಬಳಿ ಹಲವಾರು ತಿಂಗಳುಗಳ ಕಾಲ ಕಾಲಹಾಕಿದ. ಆಸ್ಥಾನದ ಸಣ್ಣಪುಟ್ಟವರು ಯಾರು ಏನು ಕೇಳಿದರೂ ಉತ್ತರ ಕೊಡುತ್ತಿರಲಿಲ್ಲ. ಕೊನೆಗೆ ಇವನ ವಿಚಾರ ರಾಜನ ಕಿವಿ ಮುಟ್ಟಿತು. ರಾಜ ಅರಬ್ಬೀ ಭಾಷೆ ಬರುತ್ತಿದ್ದ ತನ್ನ ಹಿರಿಯ ವೈದ್ಯನನ್ನು ಕಳುಹಿಸಿ ಇವನು ಬಂದ ಕಾರಣವೇನೆಂದು ಕೇಳಿಸಿದ. ಬುದ್ಧಿವಂತನಂತೆ ಕಂಡ ಈತನನ್ನು ವೈದ್ಯನೂ ಇತರರೂ ರಾಜನ ಬಳಿಗೆ ಕರೆದುಕೊಂಡುಹೋದರು. ಕೊನೆಗೆ ಈ ಷೇಖನು ತಾನು ರಾಜಕುಮಾರಿಯನ್ನು ಮದುವೆಯಾಗಲು ಬಂದಿರುವುದಾಗಿ ಬಾಯಿಬಿಟ್ಟ. ಇದನ್ನು ಕೇಳಿ ರಾಜನಿಂದ ಹಿಡಿದು ಎಲ್ಲರಿಗೂ ಆಶ್ಚರ್ಯವಾಯಿತು. ಆತನಿಗೆ ಹುಚ್ಚು ಹಿಡಿದಿರಬೇಕೆಂದೇ ಅವರೆಲ್ಲ ಭಾವಿಸಿದರು. ಆದರೆ ಆತ ತನ್ನ ಅಭಿಲಾಷೆಯನ್ನು ಪದೇಪದೇ ಹೇಳುತ್ತಾ, ತನ್ನ ಅಭಿಲಾಷೆ ನೆರವೇರದಿದ್ದರೆ ದೇಶಕ್ಕೆ ದೊಡ್ಡ ಅನಾಹುತವಾಗಬಹು ದೆಂದು ಹೆದರಿಸಿದ. ಇದರಿಂದಾಗಿ ಈತ ಬಹಳ ಕಾಲ ಬಂದಿಖಾನೆಯಲ್ಲಿರಬೇಕಾಯಿತು.

---

[1]ವೆಲೊ ರಾಜ: (Raja fo Vellore): ಟಾವರ್ನ್ಯೇ ತನ್ನ ಭಾರತದ ಐದು ಪ್ರವಾಸ ಗಳ ಕಾಲದಲ್ಲಿ ದಖನ್ನಿಗೆ ಬಂದು ಹೋದಾಗ ವಿಜಯನಗರ ಸಾಮ್ರಾಜ್ಯ ತನ್ನ ವೈಭವವನ್ನು ಕಳೆದುಕೊಂಡಿತ್ತು. ಆರವೀಡು ಸಂತತಿಯ ಶ್ರೀರಂಗರಾಯ (೧೬೪೨–೧೬೬೪) ವೇಲೂರಿನಲ್ಲಿ ಆಳುತ್ತಿದ್ದ. ಈತನ ಸಾಮಂತರು: ಶ್ರೀರಂಗಪಟ್ಟಣದ ಅರಸ, ಜಿಂಜಿ, ಮಧುರೆ ಮತ್ತು ಕೆಳದಿಯ ನಾಯಕರು. ಶ್ರೀರಂಗರಾಯನನ್ನು ಟಾವರ್ನ್ಯೆ 'ಬಹಳ ಶಕ್ತಿವಂತನಾದ ರಾಜನೆಂದರೆ ವೆಲೊ ರಾಜ' ಎಂದಿರುವ ಕಾರಣ, ೧೬೬೪ರಲ್ಲಿ ಮೀರ್ ಜುಮ್ಲಾನ ನಾಯಕತ್ವದಲ್ಲಿ ಗೋಲ್ಕೊಂಡ ರಾಜ್ಯದ ದಂಡು ಹಾಗೂ ಬಿಜಾಪುರದ ಸೈನ್ಯ ಇವು ಒಟ್ಟಿಗೆ ವೇಲೂರಿಗೆ ಮುತ್ತಿಗೆಹಾಕಿದಾಗ ಶ್ರೀರಂಗ ರಾಯ ವೇಲೂರನ್ನು ಬಿಟ್ಟು ಕೆಳದಿಯ ಶಿವಪ್ಪನಾಯಕನ ಆಶ್ರಯ ಪಡೆಯುವುದಕ್ಕೆ ಮುಂಚೆಯೇ ತನ್ನ ಪ್ರವಾಸಗಳ ಟಿಪ್ಪಣಿಯಲ್ಲಿ ಶ್ರೀರಂಗರಾಯನ ಬಗ್ಗೆ ತಾನು ಸಂಗ್ರಹಿಸಿದ ವಿಷಯಗಳನ್ನು ದಾಖಲೆ ಮಾಡಿಕೊಂಡಿರಬೇಕು.

ಕೊನೆಗೆ ಈತನನ್ನು ಮುಸಲಿಸಪಟ್ಟಣದ ಮೂಲಕ ಮೆಕ್ಕಾಕ್ಕೆ ರವಾನಿಸಿದರು. ಎರಡು ವರ್ಷಗಳನಂತರ ಆ ಷೇಖ ಮತ್ತೆ ಗೋಲ್ಕೊಂಡಾಕ್ಕೆ ಹಿಂದಿರುಗಿದ. ಬಂದವನು ರಾಜ ಕುಮಾರಿಯನ್ನು ಮದುವೆಯಾಗಿಯೇಬಿಟ್ಟ. ಅಷ್ಟೇ ಅಲ್ಲ, ಗೋಲೊಂಡಾ ರಾಜ್ಯವು ಔರಂಗಜೇಬನ ವಶವಾಗದಂತೆ ನೋಡಿಕೊಂಡ. ಆ ಮೇಲೆ ಈ ಷೇಖ ಗೋಲ್ಕೊಂಡಾ ರಾಜನಿಗೆ ತುಂಬಾ ಬೇಕಾದವನಾದ. ಅಳಿಯನನ್ನು ಮಾವ ತನ್ನ ಮುಖ್ಯ ಮಂತ್ರಿಯ ನ್ನಾಗಿ ನೇಮಿಸಿಕೊಂಡು, ಇವನಿಗೆ ದೊಡ್ಡ ಮರ್ಯಾದೆ ಮಾಡಿದ. ಈ ಷೇಖನ ಕಾರ ಣವೇ ಭಾಗನಗರದ ದೊಡ್ಡ ಪಗೋಡಾ[1] (ದೇವಸ್ಥಾನವೋ ? ಮಸೀದಿಯೋ?)ಪೂರ್ಣ ವಾಗದೆ ಹಾಗೆಯೇ ಉಳಿದಿರುವುದು. ಅದನ್ನು ಪೂರ್ಣಮಾಡಿದರೆ ರಾಜ್ಯಕ್ಕೆ ಹಾನಿ ಎಂದು ಈ ಷೇಖ ಹೆದರಿಸಿದ.

ಈ ಷೇಖನಿಗೆ ಗಣಿತಶಾಸ್ತ್ರ ಬಲ್ಲವರನ್ನು ಕಂಡರೆ ಬಹಳ ಪ್ರೇಮ. ಈ ಕಾರಣ ಈತ ಮುಹಮ್ಮದೀಯನಾದರೂ ಗಣಿತಶಾಸ್ತ್ರಬಲ್ಲ ಎಲ್ಲ ಕ್ರೈಸ್ತರನ್ನೂ ಪ್ರೀತಿಸುತ್ತಿದ್ದ. ಈ ತರಹ ಪ್ರೀತಿ ವಿಶ್ವಾಸವನ್ನು ಫಾದರ್ ಎಫ್ರಾಯಿಮ್ (Father Ephraim) ಎಂಬ ಕಾಪುಚಿನ್ ಪಾದ್ರಿಯ ಬಗ್ಗೆಯೂ ತೋರಿಸಿದ. ಈ ಪಾದ್ರಿ ಪೆಗೂ[2]ಗೆ ಹೋಗುವ ಮಾರ್ಗದಲ್ಲಿ ಗೋಲ್ಕೊಂಡಾಕ್ಕೆ ಬಂದಿದ್ದ. ಈ ಪಾದ್ರಿಯನ್ನು ತನ್ನ ರಾಜ್ಯದಲ್ಲಿ ಇರಿಸಿಕೊಳ್ಳ ಬೇಕೆಂದು ಷೇಖ ಬಹಳ ಪ್ರಯತ್ನಪಟ್ಟ. ಆತನಿಗೆ ಬೇಕಾದ ಕ್ರೈಸ್ತಜನರನ್ನು ಒದಗಿಸಿ ಕೊಡುವುದಾಗಿಯೂ ಹೇಳಿದ. ಅನೇಕ ಕ್ರೈಸ್ತ ಪೋರ್ಚುಗೀಸರೂ, ಆರ್ಮೇನಿಯನರೂ ಪ್ರತಿ ವರ್ಷ ವ್ಯಾಪಾರಕ್ಕಾಗಿ ಅಲ್ಲಿಗೆ ಬರುತ್ತಿದ್ದರು. ಆದರೆ ಫಾದರ್ ಒಪ್ಪಲಿಲ್ಲ. ತಾನು ಪೆಗೂಗೆ ಹೋಬೇಕೆಂದು ತನ್ನ ಹಿರಿಯರ ಅಪ್ಪಣೆಯಾಗಿರುವುದರಿಂದ ಅಲ್ಲಿಗೆ ಹೋಗಿಯೇ ತೀರಬೇಕೆಂದು ಹೇಳಿ ಹೊರಟುಬಿಟ್ಟ. ಹೊರಡುವ ಮುನ್ನ ಷೇಖನನ್ನು ಕಂಡಾಗ ಅತ ಬಹು ದೊಡ್ಡ 'ಖಿಲತ್' (Khilat) ಕೊಟ್ಟು ಗೌರವವಿಸಿದ. ಆ ಖಿಲತ್ತಿನಲ್ಲಿ ಒಂದು ತಲೆಯುಡಿಗೆ, 'ಕಬಯಾ' (Kabaya–ನಿಲುವಂಗಿ), ಎರಡು ಜೊತೆ ಶರಾಯಿ, ಎರಡು ಶರಟುಗಳು, ಎರಡು ನಡುಪಟ್ಟಿಗಳು, ಕೊರಳಿಗೂ ತಲೆಗೂ ಬಿಸಿಲಿನ ತಾಪಕ್ಕಾಗಿ ಸುತ್ತಿ ಕೊಳ್ಳುವ ವಸ್ತ್ರ—ಇಷ್ಟು ಸೇರಿದ್ದುವು. ಈ ಖಿಲತ್ತಿನಿಂದ ಬಹಳ ಅಚ್ಚರಿಪಟ್ಟ ಫಾದರ್ ತನಗೆ ಅವುಗಳ ಉಪಯೋಗವಿಲ್ಲವೆಂದು ತಿಳಿಸಿದ. ಆದರೂ ಷೇಖ ಅದನ್ನು ಹಿಂದೆ ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ಬೇಕಾದರೆ ಅದನ್ನು ಆತನ ಸ್ನೇಹಿತರಾರಿಗಾದರೂ ಕೊಡಬಹುದೆಂದು ಹೇಳಿದ. ಎರಡು ತಿಂಗಳನಂತರ ಸೂರತ್ತಿನಲ್ಲಿ ಆ ಖಿಲತ್ತು ಫಾದರ್ ಎಫ್ರಾಯಿಮರಿಂದ ನನಗೆ ದೊರೆಯಿತು.

[1]ಪಗೋಡ (pagoda) : ಪೋರ್ಚುಗೀಸರು ದೇವಾಲಯಗಳನ್ನು ಪಗೋಡ ಎಂದು ಕರೆದಿದ್ದಾರೆ.

[2]ಪೆಗು : ಬರ್ಮಾರಾಜ್ಯದ ಒಂದು ಪಟ್ಟಣ. ರಂಗೂನ್ ನಗರದ ಈಶಾನ್ಯಕ್ಕೆ ೪೫ ಮೈಲಿ ದೂರದಲ್ಲಿದೆ.

ಈ ಫಾದರ್ ಗೋಲ್ಕೊಂಡಾದಿಂದ ಮಸುಲಿಪಟ್ಟಣದ ವರೆಗೆ ನಡೆದುಕೊಂಡು ಹೋಗ ಬಾರದೆಂದು ಷೇಖನು ಒಂದು ಎತ್ತನ್ನೂ, ಇಬ್ಬರು ಆಳುಗಳನ್ನೂ ಕೊಟ್ಟು ಕಳುಹಿಸಿದ. ಈ ಪಾದ್ರಿ ಆ ತರುವಾಯ ಗೋವಾದಲ್ಲಿ ಬಹಳ ಕಷ್ಟನಷ್ಟಗಳಿಗೆ ಒಳಗಾದರು.

ಗೋಲ್ಕೊಂಡಾ ರಾಜನ ಎರಡನೇ ಮಗಳನ್ನು ಔರಂಗಜೇಬನ ಹಿರಿಯ ಮಗ ಸುಲ್ತಾನ್ ಮಹಮ್ಮದನಿಗೆ ಕೊಟ್ಟು ಮದುವೆಯಾಗಿದೆ. ಗೋಲ್ಕೊಂಡಾ ರಾಜನ ಪ್ರಧಾನ ದಂಡನಾಯಕನಾದ ಮೀರ್ ಜುಮ್ಲಾನಿಗೂ ರಾಜನಿಗೂ ಕಾರಣಾಂತರ ಒದಗಿದ ಮನಸ್ತಾಪದಿಂದ ಅವನು ಔರಂಗಜೇಬನ ಕಡೆ ಸೇರಿಕೊಂಡು ಮೊಗಲ ಸೈನ್ಯ ಗೋಲ್ಕೊಂಡಾಕ್ಕೆ ಮುತ್ತಿಗೆಹಾಕುವಂತೆ ಮಾಡಿದ. ಈ ಮುತ್ತಿಗೆಯಲ್ಲಿ ಗೋಲ್ಕೊಂಡಾ ರಾಜ ಶರಣಾಗತನಾಗುವುದನ್ನು ಮೇಲೆ ಹೇಳಿದ ಷೇಖ ತಪ್ಪಿಸಿದ. ಕೊನೆಗೆ ಇಬ್ಬರಿಗೂ ರಾಜೀಸಂಧಾನವಾಗಿ, ಗೋಲ್ಕೊಂಡಾ ರಾಜ ತನ್ನ ಎರಡನೇ ಮಗಳನ್ನು ಔರಂಗಜೇಬನ ಮೊದಲನೇ ಮಗನಿಗೆ ಕೊಡುವಂತೆಯೂ, ರಾಜನು ಸತ್ತಮೇಲೆ ಆತನ ಸಿಂಹಾಸನಕ್ಕೆ ಎರಡನೆ ಅಳಿಯನೇ ಉತ್ತರಾಧಿಕಾರಿಯಾಗಬೇಕೆಂದೂ ಒಪ್ಪಂದವಾಯಿತು.

ರಾಜನ ಮೂರನೇ ಮಗಳನ್ನು ಮೆಕ್ಕಾದ ಮತ್ತೊಬ್ಬ ಷೇಖನಿಗೆ ಕೊಡುವುದೆಂದು ಮಾತಾಗಿತ್ತು ; ಮದುವೆಯ ದಿನವೂ ಗೊತ್ತಾಗಿತ್ತು. ಆದರೆ ಈ ಮದುವೆ ಸೈನ್ಯದ ದಂಡನಾಯಕನಾದ ಅಬ್ದುಲ್ ಜಾಫರ್ ಬೇಗ್ ಎಂಬುವನಿಂದ ತಪ್ಪಿತು. ಆಕೆಯನ್ನು ಮಿರ್ಜಾ ಅಬ್ದುಲ್ ಹಸನ್ ಎಂಬ ರಾಜನ ದಾಯಾದಿಗೆ ಕೊಟ್ಟು ಮದುವೆ ಮಾಡಿದರು. ಈ ದಂಪತಿಗಳಿಗೆ ಎರಡು ಗಂಡುಮಕ್ಕಳು ಹುಟ್ಟಿದರು. ಈ ಮೊಮ್ಮಕ್ಕಳು ಹುಟ್ಟಿದರೋ ಇಲ್ಲವೋ, ಔರಂಗಜೇಬನ ಮಗನಿಗೆ ಸಿಂಹಾಸನ ತಪ್ಪಿಹೋಯಿತು. ಔರಂಗಜೇಬನ ಆ ಮಗ ಈಗ ಗ್ವಾಲಿಯರ್ ಕೋಟೆಯಲ್ಲಿ ಔರಂಗಜೇಬನ ಬಂದಿಯಾಗಿದ್ದಾನೆ. ಕಾರಣ, ಆತನು ಚಿಕ್ಕಪ್ಪನಾದ ಸುಲ್ತಾನ ಸೂಜನ ಕಡೆ ಸೇರಿಕೊಂಡದ್ದು.

ಈಗ ಗೋಲ್ಕೊಂಡಾ ರಾಜನಿಗೆ ಮೊಗಲರ ಹೆದರಿಕೆಯಿಲ್ಲ. ಬೇಕಾದಷ್ಟು ಹಣ ಕೂಡಿಹಾಕಿರುವ ಕಾರಣ ಸಂದರ್ಭ ಬಂದರೆ ಯುದ್ಧಮಾಡಬಲ್ಲ ಶಕ್ತಿ ಪಡೆದಿದ್ದಾನೆ. ಅಲ್ಲದೆ, ಈತ ಅಲಿ ಪಂಥಕ್ಕೆ (ಷಿಯಾ ಪಂಥಕ್ಕೆ) ಸೇರಿದವನಾದ ಕಾರಣ ತಮ್ಮ ಅದೃಷ್ಟ ಪರೀಕ್ಷೆಗಾಗಿ ಇಂಡಿಯಾಕ್ಕೆ ಬರುವ ಅನೇಕಾನೇಕ ಪರ್ಷಿಯನರು ಮೊಗಲನ ಆಸ್ಥಾನಕ್ಕೆ ಹೋಗುವ ಬದಲು, ಗೋಲ್ಕೊಂಡಾ ಆಸ್ಥಾನಕ್ಕೆ ಬರುತ್ತಿದ್ದಾರೆ. ಹೀಗೆಯೇ ಬಿಜಾಪುರದ ರಾಜನ ಆಸ್ಥಾನದಲ್ಲಿಯೂ ನಡೆಯುತ್ತಿದೆ.

ನೇರವಾದ ದಾರಿಯಲ್ಲಿ ಗೋಲ್ಕೊಂಡಾದಿಂದ ಮಸುಲಿಪಟ್ಟಣಕ್ಕೆ ೧೦೦ ಕೋಶ ಗಳ ದೂರ. ಆದರೆ ನೀವು ವಜ್ರದ ಗಣಿಯ ಮುಖಾಂತರ ಹೋಗಬೇಕೆಂದರೆ ದೂರ ೧೧೨ ಕೋಶಗಳಾಗುವುದು. ಸಾಮಾನ್ಯವಾಗಿ ನಾನು ಈ ದಾರಿಯಲ್ಲೇ ಹೋಗುತ್ತಿ ದ್ದುದು. ಗಣಿ ಇರುವ ಊರನ್ನು ಪಾರಸಿ ಭಾಷೆಯಲ್ಲಿ 'ಕೌಲಾರ್' (Coulour : ಈಗಿನ ಕೊಲ್ಲೂರು) ಎಂತಲೂ, ಇಂಡಿಯನ್ ಭಾಷೆಯಲ್ಲಿ 'ಗಣಿ' ಎಂತಲೂ ಕರೆಯುತ್ತಾರೆ.

ಗೋಲ್ಕೊಂಡಾದಿಂದ ನಾಲ್ಕು ಕೋಶ ದೂರದಲ್ಲಿ ತೆನಾರ (Tenara) ಎಂಬ ಸುಂದರವಾದ ಊರು ಸಿಕ್ಕುತ್ತದೆ. ಇಲ್ಲಿ ಅಂದಚಂದದ ನಾಲ್ಕು ಭವನಗಳಿವೆ. ಇವುಗಳ ಸುತ್ತಾ ವಿಶಾಲವಾದ ತೋಟಗಳಿವೆ. ಶ್ರೀಮಂತರು ಈ ಭವನಗಳಲ್ಲಿ ತಂಗುತ್ತಾರೆ. ಆದರೆ ಒಂದನ್ನು ಮಾತ್ರ ರಾಣಿಗೆ ಮೀಸಲು ಇಟ್ಟಿದ್ದಾರೆ. ಆಕೆ ಇಲ್ಲದಾಗ ಅದರ ಒಳಕ್ಕೆ ಹೋಗಿ ನೋಡಿಕೊಂಡು ಬರಬಹುದು. ಬಡ ಪ್ರಯಾಣಿಕರಿಗಾಗಿ ಸಣ್ಣಪುಟ್ಟ ಸತ್ರಗಳಿವೆ. ಇಲ್ಲಿ ಪ್ರತಿ ದಿನ ಸಂಜೆ ಬೇಯಿಸಿದ ರೊಟ್ಟಿ, ಅನ್ನ ಮತ್ತು ತರಕಾರಿ ಪಲ್ಯ–ಇವುಗಳನ್ನು ಕೊಡುತ್ತಾರೆ. ಇನ್ನೊಬ್ಬರು ಮಾಡಿದ್ದನ್ನು ತಿನ್ನದ ವಿಗ್ರಹಾರಾಧಕರಿಗೆ ರೊಟ್ಟಿಗೆ ಹಿಟ್ಟು ಮತ್ತು ಬೆಣ್ಣೆ ಕೊಡುತ್ತಾರೆ. ರೊಟ್ಟಿ ತಟ್ಟಿ ಬೇಯಿಸಿ ಅದರ ಎರಡು ಕಡೆಗೂ ಬೆಣ್ಣೆ ಸವರಿಕೊಂಡು ತಿನ್ನುತ್ತಾರೆ.

ಕೊಲ್ಲೂರು ಸಮೀಪಿಸಿದಂತೆ ದಾರಿ ಬಹಳ ಪ್ರಯಾಸವಾಗುತ್ತದೆ. ಕಲ್ಲುಗೊಟರಿನ ಆಟಕಾವು ದಾರಿ ಅದು. ಇದರಿಂದಾಗಿ ನಾನು ಎರಡು ಮೂರು ಕಡೆ ನನ್ನ ಗಾಡಿಯನ್ನು ಬಿಚ್ಚಿಹಾಕಿ ಸಾಗಿಸಬೇಕಾಯಿತು. ಗಾಡಿಯನ್ನು ಸುಲಭವಾಗಿ ಬಿಚ್ಚಬಹುದು. ಕಲ್ಲುಗೊಟರುಗಳ ಸಂದುಗಳಲ್ಲಿ ಮಣ್ಣು ಇರುವ ಕಡೆ 'ಕಸ್ಸಿಯಾ' (cassia : ಬಂದರ್ ಲಾಠಿ, ಅಂದರೆ ಕೋತಿಕಡ್ಡಿ) ಎಂಬ ಗಿಡ ಬೆಳೆದಿರುತ್ತದೆ. ಇಡೀ ಇಂಡಿಯಾದಲ್ಲಿ ಮಲ ಪ್ರವೃತ್ತಿಗೆ ಇದು ಅತ್ಯುತ್ತಮವಾದದ್ದು. ನನ್ನ ಸೇವಕರು ದಾರಿ ಸಾಗಿಸುವಾಗ ಇದನ್ನು ತಿನ್ನುತ್ತಾ ಹೋಗುತಿದ್ದರು.

ಕೊಲ್ಲೂರು ಬಳಿ ಹರಿಯುವ ನದಿಯನ್ನು (ಕೃಷ್ಣಾ ನದಿಯನ್ನು) ಬೆಜವಾಡ ಎಂಬ ಸ್ಥಳದ ಬಳಿ ದಾಟಿ ಮುಂದೆ ಮುಂದೆ ಪ್ರಯಾಣ ಮಾಡಿದರೆ ಮಸುಲಿಪಟ್ಟಣ ಸಿಕ್ಕುತ್ತದೆ. ಮಸುಲಿಪಟ್ಟಣ ಅಡ್ಡಾದಿಡ್ಡಿಯಾಗಿ ಕಟ್ಟಿರುವ ಊರು. ಮನೆಗಳನ್ನು ಮರದಿಂದ ಕಟ್ಟಿದ್ದಾರೆ. ಅವು ಒಂದಕ್ಕೊಂದು ತಾಗಿಕೊಂಡಿರದೆ ಪ್ರತ್ಯೇಕವಾಗಿ ಬಿಡಿಬಿಡಿಯಾಗಿವೆ. ಇಲ್ಲಿರುವ ಬಂದರಿನ ಕಾರಣ ಈ ಊರು ಪ್ರಾಮುಖ್ಯತೆ ಪಡೆದಿದೆ. ಬಂದರು ಇಡೀ ಬಂಗಾಳಕೊಲ್ಲಿಯಲ್ಲಿಯೇ ಅತ್ಯುತ್ತಮವಾದುದು. ಇಲ್ಲಿಂದ ಹಡಗುಗಳು ಪೆಗು, ಸಯಾಂ, ಅರಕಾನ್, ಬಂಗಾಳ, ಕೊಚಿನ್ ಚೀನಾ, ಮೆಕ್ಕಾ, ಹೋರ್ಮ್ಸ್, ಮಡಗಾಸ್ಕರ್, ಸುಮಾತ್ರ ಮತ್ತು ಮನಿಲಾಗಳಿಗೆ ಹೋಗುತ್ತವೆ.

ಗೋಲ್ಕೊಂಡಾದಿಂದ ಮಸುಲಿಪಟ್ಟಣಕ್ಕೆ ಪ್ರಯಾಣಮಾಡಬೇಕಾದರೆ ಚಕ್ರದ ವಾಹನಗಳನ್ನು ಉಪಯೋಗಿಸಲು ಸಾಧ್ಯವಿಲ್ಲ. ಏಕೆಂದರೆ, ದಾರಿಯುದ್ದಕ್ಕೂ ದೊಡ್ಡ ದೊಡ್ಡ ಗುಡ್ಡಗಳೂ, ಕೆರೆಕಟ್ಟೆಗಳೂ, ನದಿಗಳೂ ಅಡ್ಡಬರುತ್ತವೆ. ಅಲ್ಲದೆ, ದಾರಿ ಬಹಳ ಇಕ್ಕಟ್ಟು. ಬಹಳ ಪ್ರಯಾಸದಿಂದ ಸಣ್ಣ ಗಾಡಿಗಳಲ್ಲಿ ಪ್ರಯಾಣಮಾಡಬಹುದು ಅಷ್ಟೆ. ನಾನು ಈಗಾಗಲೇ ಹೇಳಿದಂತೆ ಈ ಸಣ್ಣಗಾಡಿಗಳನ್ನು ಸಹ ಹಲವಾರು ಕಡೆ, ಕಟ್ಟಿರುವ ಎತ್ತುಗಳನ್ನು ಬಿಚ್ಚಿ ಮುಂದಕ್ಕೆ ಸಾಗಿಸಬೇಕು. ಇದೇ ರೀತಿ ಮಸುಲಿಪಟ್ಟಣದಿಂದ ಕೇಪ್ ಕುಮಾರಿಗೆ ಹೋಗಬೇಕಾದರೂ ಮಾಡಬೇಕಾಗುತ್ತದೆ. ಈ ಪ್ರದೇಶಗಳಲ್ಲಿ ಎತ್ತಿನ

ಗಾಡಿಗಳೇ ಇಲ್ಲ. ಎತ್ತು ಮತ್ತು ಕುದುರೆಗಳು ಮಾತ್ರ ಕಾಣುತ್ತವೆ. ಪ್ರಯಾಣಕ್ಕೂ ಸಾಮಾನು ಸರಂಜಾಮು ಸಾಗಿಸುವುದಕ್ಕೂ ಇವುಗಳನ್ನು ಉಪಯೋಗಿಸುತ್ತಾರೆ. ಗಾಡಿಗಳಿಲ್ಲದಿದ್ದರೂ ಅವುಗಳಿಗಿಂತ ಅನುಕೂಲವಾದ ಪಲ್ಲಕ್ಕಿಗಳಿವೆ. ಈ ಪಲ್ಲಕ್ಕಿಗಳ ಪ್ರವಾಸ ಬಹು ಸುಖಕರ ; ಅಲ್ಲದೆ ಖರ್ಚೂ ಕಡಿಮೆ.

ಸೂರತ್ತಿನಿಂದ ಗೋವಾಕ್ಕೆ ಭೂಮಿಯ ಮೇಲಾಗಲಿ, ಸಮುದ್ರದ ಮೇಲಾಗಲಿ ಹೋಗಬಹುದು. ಆದರೆ ಭೂಮಿಯ ಮೇಲೆ ಹೋಗುವಾಗ ದಾಮನ್‌ನಿಂದ ರಾಜಾಪುರದವರೆಗೆ ದಾರಿ ತುಂಬ ಕಷ್ಟ. ಆದ್ದರಿಂದ ಬಹುತೇಕ ಪ್ರವಾಸಿಗಳು ಸಮುದ್ರದ ಮೇಲೆ "ಅಲ್ಮಡಿಯರ್" (Almadier) ಎಂಬ ದೋಣಿಗಳಲ್ಲಿ ಅಲ್ಲಲ್ಲಿ ತಂಗಿ ಹೋಗುತ್ತಾರೆ. ಮಲಬಾರ್ ಕಡಲುಗಳ್ಳರ ಕಾಟವಿದ್ದರೂ ಸಮುದ್ರಮಾರ್ಗವೇ ಉತ್ತಮ.

ಸೂರತ್ತಿನಿಂದ ಗೋವಾಕ್ಕೆ ಹೋಗುವ ದಾರಿಯ ಅಳತೆಯನ್ನು 'ಕೋಶ' ಎಂದು ಕರೆಯದೆ, 'ಗೋಸ್' (gos) ಎಂದು ಕರೆಯುತ್ತಾರೆ. ಒಂದು ಗೋಸ್ ಎಂದರೆ ನಮ್ಮ ನಾಲ್ಕು ಸಾಮಾನ್ಯ ಹರಿದಾರಿಗಳು. ಸೂರತ್ತಿನಿಂದ ಗೋವಾಕ್ಕೆ ಒಟ್ಟು ೭೧ ಗೋಸಗಳು.

ಮಲಬಾರ್ ಕಡಲುಗಳ್ಳರು ಬಹಳ ಕಠಿಣ ಹೃದಯದ ಮಹಮ್ಮದೀಯರು. ಕ್ರೈಸ್ತರನ್ನು ಕಂಡರೆ ರಕ್ತ ಕಾರುತ್ತಾರೆ. ಒಬ್ಬ ಬರಿಗಾಲಿನ ಕಾರ್ಮೆಲೈಟ್ ಪಾದ್ರಿ (Bare Foot Carmelite Father) ಇವರ ಕೈಗೆ ಸಿಕ್ಕಿಬಿಟ್ಟ. ಅವನಿಂದ ಬಿಡುಗಡೆಯ ಹಣ ಪಡೆಯುವ ಉದ್ದೇಶದಿಂದ ಅವನ ಕೈಕಾಲುಗಳನ್ನು ತುಂಡು ತುಂಡು ಮಾಡಿದ್ದನ್ನು ನಾನು ನೋಡಿದೆ. ಈ ಕಳ್ಳರು ಒಂದೊಂದು ಹಡಗಿನಲ್ಲಿ ೨೦೦ರಿಂದ ೩೫೦ ಜನರಂತೆ ಇರುತ್ತಾರೆ. ಹತ್ತು ಹದಿನೈದು ಹಡಗುಗಳು ಒಟ್ಟಿಗೆ ಕೂಡಿಕೊಂಡು ದೊಡ್ಡ ಹಡಗಿನ ಮೇಲೆ ಬೀಳುತ್ತವೆ. ಮದ್ದುಗುಂಡುಗಳ ಹೆದರಿಕೆ ಇಲ್ಲ ಈ ಕಳ್ಳರಿಗೆ. ಈ ಕಳ್ಳರೇನಾದರೂ ಪೋರ್ಚುಗೀಸರ ಕೈಗೆ ಸಿಕ್ಕಿದರೆ ಕೂಡಲೇ ಅವರನ್ನು ನೇಣುಹಾಕಿಯೊ ಅಥವಾ ಸಮುದ್ರಕ್ಕೆ ಎಸೆದೊ ಅವರ ಗತಿ ಮುಗಿಸಿಬಿಡುತ್ತಾರೆ.

ನಾನು ಗೋವಾಕ್ಕೆ ಎರಡು ಸಲ ಹೋಗಿಬಂದಿದ್ದೇನೆ. ಒಂದು ಸಲ, ೧೬೪೧ರಲ್ಲಿ ; ಇನ್ನೊಂದು ಸಲ, ೧೬೪೮ರಲ್ಲಿ. ಮೊದಲ ಸಲ ಹೋದಾಗ ಏಳು ದಿವಸಗಳು ಮಾತ್ರ ಇದ್ದು, ಬಿಕೊಲ್ಲಿ (ಬಿಕೊಲಂ), ಬಿಜಾಪುರ, ಗೋಲ್ಕೊಂಡಾ ಮತ್ತು ಔರಂಗಾಬಾದ್ ಮುಖಾಂತರ ಸೂರತ್ತಿಗೆ ಹಿಂದಿರುಗಿದೆ. ಸೂರತ್ತಿಗೆ ಹೋಗಬೇಕಾದರೆ ಗೋಲ್ಕೊಂಡಾಕ್ಕೆ ಹೋಗಬೇಕಾಗಿಲ್ಲ. ಆದರೆ ಅಲ್ಲಿ ನನಗೆ ಕೆಲಸ ಇದ್ದುದರಿಂದ ಹೋಗಬೇಕಾಯಿತು.

ಬಿಜಾಪುರ ದೊಡ್ಡ ಪಟ್ಟಣ. ಆದರೆ ಇಲ್ಲಿ ಹೇಳಿಕೊಳ್ಳುವಂಥ ದೊಡ್ಡ ಕಟ್ಟಡಗಳಾಗಲಿ ವ್ಯಾಪಾರವಾಗಲಿ ಇಲ್ಲ. ರಾಜನ ಅರಮನೆ ದೊಡ್ಡದಾಗಿಯೇನೊ ಇದೆ. ಆದರೆ ಕಟ್ಟಡವನ್ನು ಸರಿಯಾಗಿ ಕಟ್ಟಿಲ್ಲ. ಅಲ್ಲದೆ, ಈ ಅರಮನೆಯ ಸುತ್ತ ಇರುವ ಕಂದಕದ ನೀರಿನಲ್ಲಿ ಭಾರಿ ಮೊಸಳೆಗಳಿವೆ. ಈ ಕಾರಣವಾಗಿ ಅರಮನೆಯ ಹತ್ತಿರ

ಹೋಗುವುದು ಕಷ್ಟ. ಬಿಜಾಪುರದ ರಾಜನಿಗೆ ಸೇರಿದ ಮೂರು ಒಳ್ಳೆಯ ಬಂದರುಗಳಿವೆ. ಅವು ಯಾವುವೆಂದರೆ : ರಾಜಾಪುರ, ದಭೋಲ್ ಮತ್ತು ಕರೆಪುಟ್ಟನ್ (Kareputtan). ಈ ಮೂರರಲ್ಲಿ ಕರೆಪುಟ್ಟನ್ ಅತ್ಯುತ್ತಮವಾದುದು. ಇಲ್ಲಿ ಬೆಟ್ಟವು ಸಮುದ್ರಕ್ಕೆ ತಾಗಿ ಕೊಂಡಂತೆ ಇದೆ. ನೀರಿನ ಆಳ ೧೪–೧೫ ಆಳುಪ್ರಮಾಣ. ಬೆಟ್ಟದ ಮೇಲೆ ಕೋಟೆಯೂ ಸಿಹಿನೀರಿನ ಸೌಕರ್ಯವೂ ಇವೆ. ಕರೆಪುಟ್ಟನ್ ಗೋವಾದಿಂದ ಉತ್ತರಕ್ಕೆ ಐದು ದಿನ ಗಳ ಪ್ರಯಾಣದಷ್ಟು ದೂರದಲ್ಲಿದೆ. ರಾಯ್‌ಬಾಗ್ ಎಂಬ ಇನ್ನೊಂದು ಊರಿದೆ. ಇಲ್ಲಿ ಬಿಜಾಪುರದ ರಾಜ ತನ್ನ ಮೆಣಸನ್ನು ಮಾರಾಟಮಾಡುತ್ತಾನೆ. ಬಿಜಾಪುರದ ರಾಜ ಗೋಲ್ಕೊಂಡಾ ರಾಜನಂತೆ ಒಮ್ಮೆ ಮೊಗಲರಿಗೆ ಅಧೀನನಾಗಿದ್ದ. ಈಗ ಇಲ್ಲ.

'ನಾಯರ್ ಶಿವಾಜಿಯ' (Nair Shivaji) ಕಾರಣದಿಂದಾಗಿ ಬಿಜಾಪುರ ರಾಜ್ಯ ತೊಂದರೆಗೊಳಗಾಗಿದೆ. ರಾಜನ ರಕ್ಷಣಾಪಡೆಯ ನಾಯಕನಾಗಿದ್ದ ಶಿವಾಜಿ (ಷಾಹಜಿ) ದಂಗೆ ಎದ್ದ. ರಾಜ ಅವನನ್ನು ಸೆರೆಮನೆಗೆ ಹಾಕಿದ. ಅಲ್ಲಿಯೇ ಅವನು ತನ್ನ ಸಾವನ್ನು ಕಾಣಬೇಕಾಯಿತು. ಅವನ ಮಗ ಶಿವಾಜಿ ದರೋಡೆಕಾರರ (bandits) ಗುಂಪಿಗೆ ಯಜಮಾನನಾಗಿ, ಸೈನ್ಯ ಕಟ್ಟಿ, ಬಿಜಾಪುರದ ರಾಜನ ಮೇಲೆ ಯುದ್ಧಮಾಡಿ, ಮಲಬಾರ್ ತೀರಪ್ರದೇಶದ ಕೆಲವು ಭಾಗಗಳನ್ನೂ, ರಾಜಾಪುರ, ಕರೇಪುಟ್ಟನ್, ದಭೋಲ್ ಮುಂತಾದ ಸ್ಥಳಗಳನ್ನೂ ವಶಪಡಿಸಿಕೊಂಡನು. ಬಿಜಾಪುರದ ರಾಜನಿಗೆ ಮಕ್ಕಳಿಲ್ಲವಾದ ಕಾರಣ ಒಬ್ಬ ಹುಡುಗನನ್ನು ದತ್ತುತೆಗೆದುಕೊಂಡ. ರಾಜನು ಸತ್ತ ಮೇಲೆ ಈ ಹುಡುಗ ಪಟ್ಟಕ್ಕೆ ಬಂದ. ಇವನ ಮೇಲೂ ಶಿವಾಜಿ ತನ್ನ ಯುದ್ಧ ಮುಂದುವರಿಸಿದ. ಕೊನೆಗೆ ರಾಜೀಸಂದಾನ ನಡೆದು ಬಿಜಾಪುರ ರಾಜ್ಯದಲ್ಲಿ ಶಾಂತಿ ನೆಲೆಸಿತು. ಆಗ ರಾಣಿಯು ಮೆಕ್ಕಾ ಯಾತ್ರೆ ಮಾಡಿಕೊಂಡು ಬಂದಳು. ಆಕೆ ಮೆಕ್ಕಾದಿಂದ ಹಿಂದಿರುಗುವಾಗ ನಾನು ಇಸ್ಫಹಾನಿನಲ್ಲಿದ್ದೆ.

ನಾನು ಎರಡನೆಯ ಸಲ ಗೋವಾಕ್ಕೆ ಡಚ್ ಹಡಗಿನಲ್ಲಿ ಹೋಗಿದ್ದೆ. ದಾರಿಯಲ್ಲಿ ಬಿಜಾಪುರ ರಾಜ್ಯಕ್ಕೆ ಸೇರಿದ ವೆಂಗೂರ್ಲಾ ಎಂಬ ಬಂದರು ಸಿಕ್ಕಿತು. ಇಡೀ ಇಂಡಿಯಾ ದಲ್ಲಿಯೇ ಅತ್ಯುತ್ತಮವಾದ ಬಂದರು ಇದು. ಇಲ್ಲಿಯ ನೀರು ಹಾಗೂ ಅಕ್ಕಿ ಬಹಳ ಶ್ರೇಷ್ಠವಾದುವು. ಏಲಕ್ಕಿಗೂ ಈ ಊರು ಹೆಸರಾಗಿದೆ. ಸಾಮಾನುಗಳನ್ನು ಸುತ್ತಲು ಬೇಕಾದ 'ತೋಟಿ' (toti=tɑt, ಅಂದರೆ ಗೋಣಿತಾಟು) ಎಂಬ ಚಾಪೆಯಂಥ ಬಟ್ಟೆ ಯನ್ನು ಇಲ್ಲಿ ನೇಯುತ್ತಾರೆ. ಇಲ್ಲಿ ಡಚ್ ಕಂಪೆನಿಯವರು ತಮ್ಮ ಸಿಬ್ಬಂದಿಯನ್ನು ಇಟ್ಟು ವ್ಯಾಪಾರನಡೆಸುತ್ತಾರೆ.

ಗೋವಾ ದೊಡ್ಡ ಪಟ್ಟಣ ಅನೇಕಾನೇಕ ಕೋಣೆಗಳಿರುವ ವೈಸರಾಯ್ ಅರಮನೆ ಇದೆ. ಮಾವಿನಹಣ್ಣು, ಅನನಾಸ್, ತೆಂಗು–ಇವುಗಳನ್ನು ಇಲ್ಲಿ ಬೆಳೆಯುತ್ತಾರೆ. ದನದ ಮಾಂಸ ಮತ್ತು ಹಂದಿಯ ಮಾಂಸ ಜನರ ಸಾಮಾನ್ಯ ಆಹಾರ. ಡಚ್ಚರು ಪೋರ್ಚುಗೀಸರ ಪ್ರಾಬಲ್ಯವನ್ನು ಕುಗ್ಗಿಸುವುದಕ್ಕೆ ಮುಂಚೆ ಗೋವಾ ವೈಭವದ ತುತ್ತ

ಮನೆಯಾಗಿತ್ತು. ಈಗ ಪೋರ್ಚುಗೀಸರು ವ್ಯಾಪಾರ–ಸಾಪಾರಗಳನ್ನು ಕಳೆದುಕೊಂಡು ಬರಿಗೈ ಆಗಿದ್ದಾರೆ. ನನ್ನ ಮೊದಲನೇ ಬೇಟಿಯ ಕಾಲದಲ್ಲಿ ೨೦೦೦ ಏಕಸ್ (ecus) ಆದಾಯವಿದ್ದವರು, ನನ್ನ ಎರಡನೇ ಬೇಟಿಯ ವೇಳೆ (ಸುಮಾರು ಏಳು ವರ್ಷಗಳ ಅಂತರದಲ್ಲಿ) ಸಂಜೆ ಹೊತ್ತು ಗುಟ್ಟಾಗಿ ಭಿಕ್ಷೆ ಬೇಡುವ ಸ್ಥಿತಿಗೆ ಇಳಿದಿದ್ದರು. ಅವರು ಹಿಂದಿನ ಅದ್ದೂರಿಯನ್ನು ಮರೆತು, ಅದರಲ್ಲಿಯೂ ಹೆಂಗಸರು, ಪಲ್ಲಕ್ಕಿಗಳಲ್ಲಿ ಕುಳಿತು ಬಾಗಿಲ ಬಳಿಗೆ ಬಂದು ಹುಡುಗನೊಬ್ಬನ ಮೂಲಕ ಭಿಕ್ಷೆಗೆ ಹೇಳಿಕಳುಹಿಸುತ್ತಿದ್ದರು. ಮನೆಯವರು ಏನಾದರೂ ಕೊಡುವುದಿದ್ದರೆ ಕೊಟ್ಟು ಕಳುಹಿಸುತ್ತಿದ್ದರು ; ಅಥವಾ ಅವರ ಮುಖ ನೋಡಬೇಕೆಂಬ ಆಸೆಯಿದ್ದರೆ ಬರಹೇಳುತ್ತಿದ್ದರು. ಅವರ ಮುಖ ನೋಡುವುದು ಅಷ್ಟು ಸುಲಭವಾಗುತ್ತಿರಲಿಲ್ಲ. ಏಕೆಂದರೆ, ಅವರು ತಲೆಯ ತುಂಬ ಬುರುಕಿಹಾಕಿಕೊಳ್ಳುತ್ತಿದ್ದರು. ನಾವೇ ಏನಾದರೂ ಬಾಗಿಲ ಬಳಿಗೆ ಹೋಗಿ ದಾನ ಕೊಡಲು ಹೋದರೆ ಅವರು ಯಾರಾದರೂ ಒಬ್ಬ ಧಾರ್ಮಿಕ ಅಧಿಕಾರಿ ಕೊಟ್ಟ ಪರಿಚಯ ಪತ್ರ ತೋರಿಸುತ್ತಿದ್ದರು. ಆ ಪತ್ರದಲ್ಲಿ ಅವರು ಹಿಂದೆ ಬಾಳಿ ಬದುಕಿದವರೆಂದೂ, ಈಗ ಈ ಸ್ಥಿತಿಗೆ ಇಳಿದಿದ್ದಾರೆಂದೂ ಬರೆದಿರುತ್ತಿತ್ತು. ಹೀಗೆ, ನೀವು ಹೆಂಗಸರ ಪರಿಚಯಮಾಡಿಕೊಂಡು, ಮನೆಯೊಳಕ್ಕೆ ಕರೆದು ಆತಿಥ್ಯ ಮಾಡಬೇಕಾಗುತ್ತಿತ್ತು. ಕೆಲವು ವೇಳೆ ಈ ಆತಿಥ್ಯ ಮಾರನೆದಿನದವರೆಗೂ ಮುಂದುವರೆಯುತ್ತಿತ್ತು.

ಇಂಡಿಯಾಕ್ಕೆ ಹೋದ ಪೋರ್ಚುಗೀಸರು 'ಫಿದಾಲ್ಗೊ' (Fidalgo)ಗಳಂತೆ ಮೆರೆಯುತ್ತಾ, ತಮ್ಮ ಹೆಸರಿನ ಹಿಂದೆ 'ದೋಂ' (Dom) ಎಂದು ಸೇರಿಸಿಕೊಂಡು, ಜಂಬದ ಕೋಳಿಗಳಂತೆ ಇದ್ದಾರೆ. ತಮ್ಮ ಹೆಂಗಸರ ನಡತೆಯ ಬಗ್ಗೆ ಅನುಮಾನ ಬಂದರೆ ಸಾಕು ಅವರನ್ನು ಮುಗಿಸಿಬಿಡುತ್ತಾರೆ. ಏನು ಮಾಡಿದರೂ ಕಾನೂನು ಅವರನ್ನು ರಕ್ಷಿಸುತ್ತದೆ. ಏಕೆಂದರೆ, ಅವರೇ ಅದರ ಪಾಲಕರು. ನ್ಯಾಯಾಲಯದಲ್ಲಿ ವಿಚಾರಣೆ ಮುಗಿಯುವುದೇ ಇಲ್ಲ. ಈ ವಿಚಾರಣೆ ನಡೆಸುವವರು 'ಕನರಿನರು' (Kanarins). ಅವರೇ ಇಲ್ಲಿಯ ವಕೀಲರು. ಅವರಂತಹ ಉಪಾಯದ ಹಾಗೂ ಚಮತ್ಕಾರದ ಜನ ಪ್ರಪಂಚದಲ್ಲಿಯೇ ಇಲ್ಲ.

ಡಚ್ಚರು ಇಂಡಿಯಾಕ್ಕೆ ಬರದಿದ್ದರೆ ಪೋರ್ಚುಗೀಸರ ಮನೆಗಳಲ್ಲಿ ಒಂದು ತುಂಡು ಕಬ್ಬಿಣ ಸಿಗುವುದೇ ಕಷ್ಟವಾಗಿ, ಎಲ್ಲಾ ಚಿನ್ನ ಬೆಳ್ಳಿಯೇ ಇರುತ್ತಿತ್ತು. ಎರಡು ಮೂರ ಸಲ ಜಪಾನ್, ಫಿಲಿಫೈನ್, ಮೊಲಕ್ಕಾ, ಚೀನಾಗಳಿಗೆ ಹೋಗಿಬಂದರೆ ಸಾಕು, ಐದಾರು ಪಟ್ಟು ಲಾಭಸಂಪಾದಿಸಿಕೊಂಡು ಬರಬಹುದಾಗಿತ್ತು. ಗೋವಾದ ವೈಸರಾಯಿಗಳು ಚಕ್ರವರ್ತಿಗಳಿಗಿಂತ ಹೆಚ್ಚು ಶ್ರೀಮಂತರು. ಈ ವೈಸರಾಯ್‌ಗಳಿಗೆ ಮೊಸಾಂಬಿಕ್, ಮಲಕ್ಕಾ, ಹೋರ್ಮಜ್, ಮಸ್ಕತ್ ಮತ್ತು ಸಿಲೋನ್–ಈ ಐದು ಸ್ಥಳಗಳ ಗೌರ್ನರುಗಳು ಅಧೀನ. ಈ ಗೌರ್ನರುಗಳ ಆದಾಯ ಹೇಳತೀರದು. ನನ್ನ ಕೊನೆಯ ಪ್ರವಾಸದ ವೇಳೆ ಮೊಸಾಂಬಿಕಿನ ಗೌರ್ನರ್ ಗೋವಾಕ್ಕೆ ಹಿಂದಿರುಗುವುದನ್ನು ನೋಡಿದೆ,

ಅವನ ಬಳಿ ಸುಮಾರು ಎರಡು ಲಕ್ಷ ಏಕಸ್ (ಆಗ ಸುಮಾರು ಒಂದು ಲಕ್ಷ ಪೌಂಡುಗಳು) ಬೆಲೆ ಬಾಳುವ ಪನ್ನಂಬರವಿತ್ತು. ಇಷ್ಟಲ್ಲದೆ, ಆತನ ಬಳಿ ಚಿನ್ನ ಬೆಳ್ಳಿ ಹೇರಳವಾಗಿತ್ತು.

ಗೋವಾ ನಾಡಿನ ಜನರನ್ನು 'ಕನರೀಸ್' (Kanarese) ಎಂದು ಕರೆಯುತ್ತಾರೆ. ಇವರು ಕಾನೂನಿಗೆ ಸಂಬಂಧಿಸಿದಂತೆ ವಕೀಲ, ದಲ್ಲಾಲಿ ಹಾಗೂ ಕಾರಕೂನರಾಗಿರುವುದನ್ನು ಬಿಟ್ಟರೆ ಪೋರ್ಚುಗೀಸರ ಕೆಳಗೆ ಯಾವ ಹುದ್ದೆಗಳಲ್ಲಿಯೂ ಇಲ್ಲ. ಈ ಕನರೀಸನೊಬ್ಬನೇನಾದರೂ ಬಿಳಿಯನನ್ನೊ ಅಥವಾ ಯುರೋಪಿಯನನ್ನೊ ಹೊಡೆದರೆ ಅವನಿಗೆ ಕ್ಷಮೆ ಎನ್ನುವುದಿಲ್ಲ; ಅವನ ಕೈ ಕತ್ತರಿಸುವುದೇ ಶಿಕ್ಷೆ. ಸ್ಪಾನಿಯರ್ಡರೂ (ಸ್ಪೈನ್ ದೇಶದವರೂ), ಪೋರ್ಚುಗೀಸರೂ ಇವರನ್ನು ತಮ್ಮ ವ್ಯಾಪಾರದ ಪ್ರತಿನಿಧಿಗಳಾಗಿ ನೇಮಿಸಿಕೊಳ್ಳುತ್ತಾರೆ. ಮನಿಲ್ಲಾ ಮತ್ತು ಫಿಲಿಫೈನುಗಳಲ್ಲಿ ತುಂಬ ಶ್ರೀಮಂತರಾದ ಕರಿಯರಿದ್ದಾರೆ. ಈ ಶ್ರೀಮಂತರಲ್ಲಿ ಕೆಲವರು ಕಾಲುಚೀಲ ಹಾಕಿಕೊಳ್ಳಬೇಕಾದರೆ ವೈಸರಾಯನಿಂದ ಅಪ್ಪಣೆಪಡೆಯಬೇಕು. ಆ ಅಪ್ಪಣೆಗೆ ಆರೇಳು ಸಾವಿರ ಪೌಂಡುಗಳಷ್ಟು ಹಣ ಕೊಟ್ಟದ್ದುಂಟು. ಕಾಲುಚೀಲ ಷೂಗಳನ್ನು ಈ ಕರಿಯರು ಧರಿಸುವಂತಿಲ್ಲ. ಈ ಕಾರಣದಿಂದಾಗಿ, ಶ್ರೀಮಂತಿಕೆಯ ಉಡುಪು ಧರಿಸಿ ಮೂವತ್ತು ನಲವತ್ತು ಜನ ಸೇವಕರೊಡಗೊಂಡ ಈ ಕರಿಯರು ಬರಿಗಾಲಿನಲ್ಲೇ ಹೋಗುವುದನ್ನು ನೋಡಬಹುದು. ಹಡಗಿನ ವ್ಯಾಪಾರಮಾಡಲು ಇವರಿಗೆ ಪೋರ್ಚುಗೀಸರು ಅನುಮತಿ ಕೊಟ್ಟಿದ್ದರೆ ಇಂಡಿಯಾದಲ್ಲಿ ಪೋರ್ಚುಗೀಸರು ಹೆಚ್ಚು ಸ್ಥಳವನ್ನು ಗೆದ್ದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ; ಕನಿಷ್ಟ ಪಕ್ಷ ಸುಲಭವಾಗಿ ಗೆದ್ದುಕೊಳ್ಳಲು ಈ ಕರಿಯರು ಬಿಡುತ್ತಿರಲಿಲ್ಲ.

ಈ ಕರಿಯರು ಬಹಳ ಬುದ್ಧಿವಂತರು ಮತ್ತು ಒಳ್ಳೆಯ ಸಿಪಾಯಿಗಳು. ಶಾಲೆಗಳಲ್ಲಿ ಪೋರ್ಚುಗೀಸರ ಮಕ್ಕಳು ಒಂದು ವರ್ಷದಲ್ಲಿ ಕಲಿಯುವುದನ್ನು ಇವರ ಮಕ್ಕಳು ಆರು ತಿಂಗಳಲ್ಲಿ ಕಲಿತುಬಿಡುತ್ತಾರೆ. ಈ ಕಾರಣ ಪೋರ್ಚುಗೀಸರು ಇವರನ್ನು ಅದುಮಿ ಇಟ್ಟಿದ್ದಾರೆ.

ಗೋವೆಯ ಸುತ್ತ-ಮುತ್ತ ಇರುವ ಸ್ಥಳದ ಜನರು ವಿಗ್ರಹಾರಾಧಕರು. ಇವರು ನಾನಾ ತರಹದ ವಿಗ್ರಹಗಳನ್ನು ಪೂಜಿಸುತ್ತಾರೆ. ಆ ವಿಗ್ರಹಗಳ ಚಿತ್ರಗಳನ್ನು ಈ ಪುಸ್ತಕದಲ್ಲಿ ಬರೆದಿದ್ದೇನೆ.[1] ಬಹುಮಂದಿ ವಿಗ್ರಹಾರಾಧಕರು ಕೋತಿಗಳನ್ನು ಪೂಜಿಸುತ್ತಾರೆ. ಸಲ್ಸಟ್ಟಿ ಗ್ರಾಮದಲ್ಲಿ ಬಹಳ ಸಮರ್ಥವಾದ ಕಾರ್ಯ ನಿರ್ವಹಿಸಿದ ಕೋತಿಯ (ಹನುಮಾನನ) ವಿಗ್ರಹವಿತ್ತು. ಇಂಡಿಯಾದ ನಾನಾ ಕಡೆಗಳಿಂದ ಭಕ್ತರು ಬಂದು ಇದಕ್ಕೆ ಪೂಜೆ ಸಲ್ಲಿಸುತ್ತಿದ್ದರು. ಈ ವಿಗ್ರಹಾರಾಧನೆ ತಪ್ಪೆಂದು ಗೋವಾದ ಧಾರ್ಮಿಕ

---

[1] ಈ ಚಿತ್ರಗಳು ಇಲ್ಲಿಯವರೆಗೂ ದೊರೆತಿಲ್ಲವೆಂದು ಗೊತ್ತಾಗುತ್ತದೆ.

ಮುಖಂಡರು ತೀರ್ಮಾನಿಸಿ ಈ ವಿಗ್ರಹವನ್ನು ತೆಗೆದುಕೊಂಡುಹೋಗಿ ಸಮುದ್ರಕ್ಕೆ ಬಿಸಾಡಿಬಿಟ್ಟರು.

ಗೋವಾದಲ್ಲಿರುವ ಆಸ್ಪತ್ರೆ ಹಿಂದೆ ಬಹಳ ಪ್ರಸಿದ್ಧಿಯಾಗಿತ್ತು. ಅದಕ್ಕೆ ತುಂಬಾ ಆದಾಯ ಬರುತ್ತಿತ್ತು. ರೋಗಿಗಳನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ನಾನು ಮೊದಲನೇ ಸಲ ಗೋವಾಕ್ಕೆ ಬಂದಾಗಲೂ ಆ ಸ್ಥಿತಿಯಲ್ಲಿಯೇ ಇತ್ತು. ಆದರೆ ಈಚೆಗೆ ಆಸ್ಪತ್ರೆಯ ಮೇಲ್ವಿಚಾರಕರುಗಳನ್ನು ಬದಲಾಯಿಸಿಬಿಟ್ಟಿದ್ದಾರೆ. ರೋಗಿಗಳನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲ. ಅನೇಕ ಯೂರೋಪಿಯನರು ಆಸ್ಪತ್ರೆ ಸೇರಿದರೆ ಹೊರಗೆ ಬರುವುದು ಗೋರಿಗೆ ಹೋಗುವುದಕ್ಕೆ, ಅಷ್ಟೆ. ಇತ್ತೀಚೆಗೆ ಮಾತ್ರ ರಕ್ತಸ್ರಾವ ಮಾಡಿ ರೋಗವನ್ನು ಗುಣಪಡಿಸುವ ವಿಧಾನ ಗೊತ್ತಾಗಿರುವುದು. ಮೂವತ್ತು ನಲವತ್ತು ಸಲ ರಕ್ತಸ್ರಾವ ಮಾಡಿಸಿ ಕೆಟ್ಟರಕ್ತವನ್ನು ಹೊರಗೆ ತೆಗೆಯುತ್ತಾರೆ. ನಾನೊಂದು ಸಲ ಸೂರತ್ತಿನಲ್ಲಿ ಈ ಚಿಕಿತ್ಸೆ ಮಾಡಿಸಿಕೊಂಡೆ. ಕೆಟ್ಟರಕ್ತ ಹೋದಕೂಡಲೆ ರೋಗಿ ಗುಣಮುಖನಾಗುತ್ತಾನೆ. ಆಗ ಬೆಣ್ಣೆ ಮತ್ತು ಮಾಂಸಗಳನ್ನು ತಿನ್ನಕೂಡದು. ತಿಂದರೆ ಅಪಾಯ. ಗುಣಮುಖರಾಗುತ್ತಿರುವ ಬಡ ರೋಗಿಗಳು "ದಾಹ ! ದಾಹ !" ಎಂದು ನೀರಿಗಾಗಿ ಪರದಾಡುತ್ತಾರೆ. ಆದರೆ ಅವರನ್ನು ನೋಡಿಕೊಳ್ಳುವ ದಾದಿಯರು ನೀರು ಕೊಡಬಾರದು ಎಂದು ವೈದ್ಯರು ಹೇಳಿದ್ದಾರೆಂದು ತಿಳಿಸಿ, ಸತಾಯಿಸಿ ದುಡ್ಡು ಕೊಟ್ಟರೆ ಗುಟ್ಟಾಗಿ ನೀರು ಕೊಡುತ್ತಾರೆ. ಈ ದಾದಿಯರು ಈಗ ಕರಿಯ ಜನರು, ಅಂದರೆ 'ಮೆಸ್ತಿಫ'ರು.

ಆಗಾಗ್ಗೆ ರಕ್ತಸ್ರಾವ ಮಾಡಿಸುವುದರ ಬಗ್ಗೆ ಯೂರೋಪಿನವರಿಗೆ ಒಂದು ಮಾತು ಹೇಳುವುದು ಮರೆತುಹೋಯಿತು. ಅವರು ತಮ್ಮ ಬಣ್ಣವನ್ನೂ ಒಳ್ಳೆಯ ಆರೋಗ್ಯವನ್ನೂ ಪಡೆಯಬೇಕಾದರೆ ದಿನಾ ಬೆಳಿಗ್ಗೆ ಒಂದು ಲೋಟ, ಮಧ್ಯಾಹ್ನ ಒಂದು ಲೋಟ, ಸಂಜೆ ಒಂದು ಲೋಟ ಹೀಗೆ ಮೂರು ಲೋಟ....[1] ಕುಡಿಯಬೇಕೆಂದು ಹೇಳುತ್ತಾರೆ. ಆದರೆ ಅದನ್ನು ಹೇಗೆ ತಾನೆ ಕುಡಿಯುವುದು! ಹೇಳಿದಷ್ಟು ಕುಡಿಯದೆ ಅಲ್ಪ ಸ್ವಲ್ಪ ಕುಡಿಯುತ್ತಾರೆ. ಈ ಚಿಕಿತ್ಸಾ ವಿಧಾನವನ್ನು ಈ ದೇಶದ ವಿಗ್ರಹಾರಾಧಕರಿಂದ ಕಲಿತುಕೊಂಡಿದ್ದಾರೆ. ರೋಗಿಯು ಅದನ್ನು ಕುಡಿಯುತ್ತಾನೋ ಇಲ್ಲವೋ ಗೊತ್ತಿಲ್ಲ. ಅಂತೂ ಇದನ್ನು ಕುಡಿಯಬೇಕಾದ ಹನ್ನೆರಡು ದಿವಸಗಳ ತನಕ ರೋಗಿ ಆಸ್ಪತ್ರೆ ಬಿಡುವಂತಿಲ್ಲ.

---

[1] ಮೂಲಗ್ರಂಥದಲ್ಲಿಯೂ ಹೀಗೆ ಜಾಗ ಬಿಟ್ಟಿದೆ. ಇಲ್ಲಿ ಹೇಳಿರುವ ಚಿಕಿತ್ಸಾ ವಿಧಾನ 'ಸ್ವಮೂತ್ರ ಚಿಕಿತ್ಸಾ ವಿಧಾನ' ಎಂಬುದರಲ್ಲಿ ಸಂದೇಹವಿಲ್ಲ. ಈ ಚಿಕಿತ್ಸಾ ವಿಧಾನವನ್ನು ಕುರಿತು ದೊಡ್ಡ ದೊಡ್ಡ ಗ್ರಂಥಗಳೇ ಬಂದಿವೆ. ಕನ್ನಡದಲ್ಲಿ ಎಣ್ಣೆಕೊಪ್ಪದ ಶ್ರೀಮಲ್ಲಿಕಾರ್ಜುನಪ್ಪಗೌಡರ 'ಸ್ವಮೂತ್ರ ಚಿಕಿತ್ಸಾ' ಎಂಬ ಗ್ರಂಥ ನೋಡಿ.

ನಾನು ಗೋವಾದಲ್ಲಿ ೧೬೪೮ರ ಜನವರಿ ೨೧ರಿಂದ ಮಾರ್ಚಿ ೧೧ರ ವರೆಗೆ ಇದ್ದೆ. ಗೋವಾದ ವೈಸರಾಯ್ ಹೆಸರು ಡಾಂ. ಫಿಲಿಪ್ಪೆ ದ ಮಾಸ್ಕರನ್ಹಾಸ್ ಎಂದು. ಈತ ಮೊದಲಿಗೆ ಸಿಲೋನ್‌ನಲ್ಲಿ ಗೌರ್‍ನರ್ ಆಗಿದ್ದ. ಇವನಷ್ಟು ಶ್ರೀಮಂತರಾದ ವೈಸರಾಯ್‌ಗಳು ಗೋವಾದಲ್ಲಿ ಇಲ್ಲಿಯವರೆಗೆ ಇದ್ದದ್ದಿಲ್ಲ. ಈತ ತನ್ನಲ್ಲಿದ್ದ ಬಹು ಬೆಲೆಬಾಳುವ ಹಾಗೂ ತೂಕವಾದ ವಜ್ರಗಳಲ್ಲಿ ಎರಡನ್ನು ನನಗೆ ತೋರಿಸಿದ. ಈ ವೈಸರಾಯನ್ನು ಕೊನೆಗೆ ವಿಷಕೊಟ್ಟು ಸಾಯಿಸಿದರು. ಇವನ ಪ್ರತಿಮೆಯನ್ನು ಮಾಡಿಸಿ ಗೋವಾ ಬೀದಿಯಲ್ಲಿ ತೂಗುಹಾಕಿದರು. ಇವನು ಸಿಲೋನಿನಲ್ಲಿದ್ದಾಗ ಅನೇಕರನ್ನು ವಿಷ ಹಾಕಿ ಸಾಯಿಸಿದ್ದಕ್ಕೆ ತಕ್ಕ ಪ್ರತೀಕಾರವಾಯಿತೆಂದು ಜನ ಮಾತನಾಡಿಕೊಳ್ಳುತ್ತಿದ್ದರು. ನಾನು ಗೋವಾದಲ್ಲಿದ್ದಾಗಲೇ ಇಂತಹ ವಿಷವಿಕ್ಕಿದ ಪ್ರಸಂಗ ನಡೆಯಿತು.

ಗೋವಾ ವೈಸರಾಯಿಗಳು ಎಂಥವನನ್ನೇ ಆಗಲಿ, ಕೊನೆಗೆ ತಮ್ಮ ಮಕ್ಕಳನ್ನು ಸಹ, ತಮ್ಮ ಜೊತೆ ಊಟಕ್ಕೆ ಕುಳ್ಳಿರಿಸಿಕೊಳ್ಳುವುದಿಲ್ಲ. ಆದರೆ ಅವರು ಊಟಕ್ಕೆ ಕುಳಿತುಕೊಳ್ಳುವ ಕೋಣೆಯ ಒಂದು ಕಡೆ ಪರದೆಯ ಮರೆಯಲ್ಲಿ ಮುಖ್ಯ ಅಧಿಕಾರಿಗಳಿಗೂ, ಅತಿಥಿಗಳಿಗೂ ಊಟಕ್ಕೆ ಬಡಿಸುವ ವ್ಯವಸ್ಥೆ ಮಾಡಿರುತ್ತಾರೆ.

ನಾನು ಗೋವಾದಲ್ಲಿದ್ದ ವೇಳೆ ಇಂಕ್ವಿಸಿಟರನನ್ನು[1] (Inquisitor) ಕಂಡು ನನ್ನ ಗೌರವ ಸಲ್ಲಿಸಿದೆ. ಈ ಇಂಕ್ವಿಸಿಟರನನ್ನು ಬೇಡಿ ಒಬ್ಬ ಫ್ರೆಂಚನನ್ನು ಬಂದನದಿಂದ ಬಿಡಿಸಿದೆ. ಆ ಫ್ರೆಂಚನ ಹೆಸರು ದು ಬೆಲ್ಲೋಯ್ (Du Belloy) ಎಂದು.

ನಾನು ಗೋವಾದಿಂದ ವೆಂಗೂರ್ಲಾಕ್ಕೆ ಹಿಂದಿರುಗಿ, ಅಲ್ಲಿಂದ ಬಟೇವಿಯಾಕ್ಕೆ[3] ಹೋದೆ. ವೆಂಗೂರ್ಲಾದಲ್ಲಿ ನಾನು ಇದ್ದ ಒಂಬತ್ತು ದಿನಗಳಲ್ಲಿ ನಡೆದ ಒಂದು ಪ್ರಸಂಗವನ್ನು ಹೇಳಬೇಕೆನಿಸುತ್ತದೆ. ಅದೇನೆಂದರೆ, ಒಬ್ಬ ವಿಗ್ರಹಾರಾಧಕ ಸತ್ತುಹೋದ. ಅವನ ಶವವನ್ನು ದಹನಮಾಡಲು ಚಿತೆ ಸಿದ್ಧವಾಯಿತು. ಮಕ್ಕಳಿಲ್ಲದ ಅವನ ಹೆಂಡತಿ ಗೌರ್‍ನರನ ಅಪ್ಪಣೆ ಪಡೆದು ಗಂಡನೊಡನೆ ಸಹಗಮನಮಾಡಲು ತಯಾರಾದಳು. ಪುರೋಹಿತರು ಮತ್ತು ನೆಂಟರಿಷ್ಟರ ಸಮೇತ ಆಕೆ ಚಿತೆಯ ಬಳಿಗೆ ಬಂದು, ಅದನ್ನು ಮೂರು ಸಲ ಪ್ರದಕ್ಷಿಣೆ ಮಾಡಿದಳು. ಆಗ ಇದ್ದಕ್ಕಿದ್ದಂತೆ ಭಾರಿ ಮಳೆ ಬಂದುಬಿಡಲು, ಪುರೋಹಿತರುಗಳು ಆತುರದಲ್ಲಿ ಆಕೆಯನ್ನು ಚಿತೆಗೆ ತಳ್ಳಿ ಓಡಿಹೋದರು. ಆದರೆ ಆ ಭಾರಿ ಮಳೆಯ ಕಾರಣ ಬೆಂಕಿ ಆರಿಹೋಯಿತು ; ಆಕೆಗೆ ಬೆಂಕಿಯಿಂದ ಒಂದಷ್ಟು ಸುಟ್ಟ ಗಾಯಗಳಾಗಿದ್ದುವು. ಮಧ್ಯರಾತ್ರಿ ಆಕೆ ಚಿತೆಯ ಮೇಲಿಂದ ಎದ್ದುಬಂದು ತನ್ನ ಸಂಬಂಧಿಗಳೊಬ್ಬರ ಮನೆಯ ಬಾಗಿಲು ತಟ್ಟಿದಳು. ಈ ವಿಚಾರ ಡಚ್ಚರಿಗೂ ಕಾಪು

---

[1]ಇಂಕ್ವಿಜಿಟರ್: ಮೊಕದ್ದಮೆಯನ್ನು ವಿಚಾರಿಸುವ ಅಧಿಕಾರಿ ; ಪೋಲೀಸು ಅಧಿಕಾರಿ.

[3]ಬಟೇವಿಯಾ: ಇಂಡೋನೇಷಿಯಾ ರಾಜಧಾನಿ ಜಕರ್ತಾನಗರಕ್ಕೆ ಇದ್ದ ಹಳೆಯ ಹೆಸರು. ಜಾವಾದ್ವೀಪದ ವಾಯುವ್ಯತೀರದ ರೇವುಪಟ್ಟಣ.

ಚಿನ್ ಪಾದ್ರಿಯಾದ ಫಾದರ್ ಜನ್ನೋ (Zenon)ರಿಗೂ ತಿಳಿದು, ಅವರು ಅಲ್ಲಿಗೆ ಹೋದರು. ಅರ್ಧಂಬರ್ಧ ಸುಟ್ಟ ಆಕೆ ನೋಡಲು ಬಹು ವಿಕಾರವಾಗಿ ಕಾಣುತ್ತಿದ್ದಳು. ಅಸಾಧ್ಯವಾದ ನೋವಿನಿಂದ ನರಳುತ್ತಿದ್ದರೂ ಆಕೆ ಮತ್ತೆ ಚಿತೆಗೆ ಬೀಳುವ ತನ್ನ ನಿರ್ಧಾರ ವನ್ನು ಬದಲಿಸಲಿಲ್ಲ. ಎರಡು ದಿನಗಳನಂತರ ಆಕೆ ಮತ್ತೆ ಚಿತೆಯಲ್ಲಿ ಬಿದ್ದು ಭಸ್ಮ ವಾದಳು.

ಈ ಹಿಂದೆಯೇ ಫಾದರ್ ಎಫ್ರಾಯಿಮ್ (Father Ephraim) ವಿಚಾರವನ್ನು ಪ್ರಸ್ತಾಪಮಾಡಿರುವೆನಷ್ಟೆ. ಭಾಗನಗರದಲ್ಲಿಯೇ ನಿಲ್ಲಿಸಿಕೊಳ್ಳಬೇಕೆಂಬ ಗೋಲ್ಕೊಂಡಾ ರಾಜನ ಮೊದಲನೇ ಅಳಿಯ ಷೇಖನ ಪ್ರಯತ್ನ ಸಾಗದಿರಲು ಷೇಖ ಅವರನ್ನು ಮಸುಲಿ ಪಟ್ಟಣಕ್ಕೆ ಕಳುಹಿಸಿಕೊಟ್ಟ. ಆದರೆ ಅಲ್ಲಿಗೆ ಹೋದಮೇಲೆ ಅವರಿಗೆ ಪೆಗೂಗೆ ಹೋಗಲು ಹಡಗು ಸಿಕ್ಕದೆ ಹೋದ ಕಾರಣ, ಅವರು ಮದ್ರಾಸಿಗೆ ಹೋಗುವಂತೆ ಇಂಗ್ಲಿಷರು ಪುಸಲಾಯಿಸಿದರು. ಮದ್ರಾಸಿನಲ್ಲಿ ಇಂಗ್ಲಿಷರಿಗೆ ಸೇರಿದ ಫೋರ್ಟ್ ಸೆಂಟ್ ಜಾರ್ಜ್ ಎಂಬ ಹೆಸರಿನ ಕೋಟೆ ಇದೆ. ಅಲ್ಲದೆ, ಗೋಲ್ಕೊಂಡಾ ರಾಜ್ಯದಲ್ಲಿ ಮತ್ತು ಬೆಂಗಾಳ ಹಾಗೂ ಪೆಗೂ ದೇಶಗಳಲ್ಲಿ ವ್ಯವಹಾರ ನಡೆಸುವ ಒಂದು ಕಚೇರಿಯೂ ಇದೆ. ಮದ್ರಾಸಿ ನಲ್ಲಿಯೇ ಇದ್ದರೆ ಇಂಡಿಯಾದ ಅನೇಕ ಜನರನ್ನು ಮತಾಂತರಮಾಡುವುದಕ್ಕೆ ಒಳ್ಳೆಯ ಅವಕಾಶವಿದೆಯೆಂದು ಫಾದರ್ ಎಫ್ರಾಯಿಮರಿಗೆ ಹೇಳಿ, ಅವರಿಗೆ ಒಂದು ಮನೆಯನ್ನೂ ಇಗರ್ಜಿಯನ್ನೂ ಕಟ್ಟಿಸಿಕೊಟ್ಟರು.

ಮದ್ರಾಸಿಗೂ ಸೆಂಟ್ ಥೋಮಿಗೂ[1] ಅರ್ಧ ಹರಿದಾರಿ ದೂರ ಅಷ್ಟೆ. ಸೆಂಟ್ ಥೋಮಿನಲ್ಲಿ ತಕ್ಕಷ್ಟು ವ್ಯಾಪಾರ ನಡೆಯುತ್ತಿತ್ತು. ಅದರಲ್ಲಿಯೂ ಹತ್ತಿಬಟ್ಟೆಗಳ ವ್ಯಾಪಾರ ಹೇಳುವಷ್ಟು ಸಾಗುತ್ತಿತ್ತು. ಅನೇಕ ಕುಶಲಕೆಲಸಗಾರರೂ, ವರ್ತಕರೂ, ಇಂಗ್ಲಿಷರು ಇದ್ದ ಮದ್ರಾಸಿನಲ್ಲಿ ಇರಲು ಅಪೇಕ್ಷೆಪಡುತ್ತಿದ್ದರು. ಆದರೆ ಅಲ್ಲಿ ತಮ್ಮ ಧರ್ಮವನ್ನು ಆಚರಿಸುವುದಕ್ಕೆ ಅವಕಾಶವಿರಲಿಲ್ಲ. ಆದರೆ ಯಾವಾಗ ಇಂಗ್ಲಿಷರು ಫಾದರ್ ಎಫ್ರಾಯಿಮ್ ಅವರನ್ನು ಅಲ್ಲಿ ತಂದಿರಿಸಿದರೋ ಆಗಿನಿಂದ ಸೆಂಟ್ ಥೋಮ್ ನಲ್ಲಿದ್ದ ಅನೇಕ ಪೋರ್ಚುಗೀಸರು ಅಲ್ಲಿಗೆ ತಮ್ಮ ವಸತಿಯನ್ನು ಬದಲಾಯಿಸಿದರು. ಫಾದರ್ ಅವರು ಇಂಗ್ಲಿಷಿನಲ್ಲಿ ಅಷ್ಟೇ ಅಲ್ಲ, ಪೋರ್ಚುಗೀಸ್ ಭಾಷೆಯಲ್ಲೂ, ಸ್ಥಳದ ಭಾಷೆಯಲ್ಲೂ ಬೋಧನೆಮಾಡುವ ಶಕ್ತಿ ಸಂಪಾದಿಸಿದ್ದರು. ಬರಬರುತ್ತಾ ಜನರೆಲ್ಲ ಮದ್ರಾಸಿಗೆ ಹೋಗಿ ನೆಲೆಸಲಾರಂಭಿಸಿದರು. ಇದು ಪೋರ್ಚುಗೀಸರ ಮುಖ್ಯಸ್ಥರಿಗೆ ಸರಿಬೀಳದೆ ಫಾದರ್ ಎಫ್ರಾಯಿಮ್ ಅವರನ್ನು ಮುಗಿಸಿಬಿಡುವ ಆಲೋಚನೆ ಮಾಡಿದರು.

---

[1]ಸೆಂಟ್ ಥೋಮ್ (ಸೆಂಟ್ ಥಾಮಸ್) : ಕ್ರೈಸ್ತ ಧರ್ಮವನ್ನು ಪ್ರಚಾರಮಾಡಲು ಕ್ರಿಸ್ತನು ಕಳುಹಿಸಿದ ಶಿಷ್ಯರಲ್ಲಿ ಒಬ್ಬ. ಈತ ಮದರಾಸಿನ ಬಳಿ ನೆಲೆಸಿದ್ದ. ಅವನು ನೆಲೆಸಿದ್ದ ಸ್ಥಳಕ್ಕೆ ಸೈಂಟ್ ಥಾಮಸ್ ಮೌಂಟ್ ಎಂದು ಹೆಸರು.

ಇಂಗ್ಲಿಷರಿಗೂ ಪೋರ್ಚುಗೀಸರಿಗೂ ಆಗಾಗ್ಗೆ ಏನಾದರೊಂದು ಮನಸ್ತಾಪ ಒದಗುತ್ತಿತ್ತು. ಅದನ್ನು ಪರಿಹರಿಸಬೇಕೆಂದು ಇಬ್ಬರೂ ಈ ಪಾದ್ರಿಯವರನ್ನು ಕೇಳಿಕೊಳ್ಳುತ್ತಿದ್ದರು. ಒಮ್ಮೆ ಅವರಿಬ್ಬರ ಮನಸ್ತಾಪವನ್ನು ಪರಿಹಾರಮಾಡಲು ಸೆಂಟ್ ಥೋಮ್‌ಗೆ ಬಂದಾಗ ಪೋರ್ಚುಗೀಸರು ಇಂಗ್ಲಿಷರ ಮೇಲೆ ಬೀಳುವ ನೆಪಮಾಡಿಕೊಂಡು ಫಾದರ್ ಅವರನ್ನು ಮೋಸದಿಂದ ಎತ್ತಿಕೊಂಡುಹೋಗಿ ಒಂದು ದೋಣಿಯಲ್ಲಿ ಹಾಕಿ ಗೋವಾಕ್ಕೆ ಸಾಗಿಸಿಕೊಂಡುಹೋಗಿಬಿಟ್ಟರು. ದೋಣಿಯಲ್ಲಿ ಫಾದರ್ ಅವರಿಗೆ ಕೊಡಬಾರದ ಹಿಂಸೆ ಕೊಟ್ಟರು. ಕೈಕಾಲುಗಳಿಗೆ ಬೇಡಿಹಾಕಿದರು. ಇಪ್ಪತ್ತೆರಡು ದಿನಗಳು ದೋಣಿಯಲ್ಲೇ ಇಟ್ಟುಕೊಂಡಿದ್ದು, ಕೊನೆಗೆ ಗೋವೆಯಲ್ಲಿ ಇಂಕ್ವಿಸಿಷನ್ (Inquisition) ಮಂದಿರದಲ್ಲಿ ಇಟ್ಟರು.

ಈ ಸುದ್ದಿ ಯೂರೋಪಿನಲ್ಲೆಲ್ಲಾ ಭಾರಿ ಗದ್ದಲವನ್ನೆಬ್ಬಿಸಿತು. ಅವರನ್ನು ಬಿಟ್ಟುಬಿಡಬೇಕೆಂದು ಪೋಪರ ಅಪ್ಪಣೆ ಬಂದಿತು. ಹಾಗೆ ಬಿಡದಿದ್ದರೆ ಗೋವಾದ ಕ್ರೈಸ್ತ ಪುರೋಹಿತ ವರ್ಗವನ್ನೇ ಮತದಿಂದ ಹೊರಗೆಹಾಕುವುದಾಗಿ ಬೆದರಿಸಲಾಗಿತ್ತು. ಆದರೆ ಅದಕ್ಕೆ ಯಾವ ಬೆಲೆಯನ್ನೂ ಕೊಡಲಿಲ್ಲ. ಕೊನೆಗೆ ಗೋಲ್ಕೊಂಡಾದ ರಾಜನೇ ಫಾದರ್ ಎಫ್ರಾಯಿಮ್ ಅವರನ್ನು ಉಳಿಸಿದ. ಫಾದರ್ ಅವರನ್ನು ಮೋಸದಿಂದ ಗೋವಾಕ್ಕೆ ಸಾಗಿಸಿದ ವೇಳೆ ಆತ ಕರ್ನಾಟದ (Carnatica) ರಾಜನ ಮೇಲೆ ಯುದ್ಧದಲ್ಲಿ ತೊಡಗಿದ್ದ. ಅವನ ಸೈನ್ಯ ಸೆಂಟ್ ಥೋಮಿಗೆ ಹತ್ತಿರದಲ್ಲಿಯೇ ಇತ್ತು. ಫಾದರ್ ಅವರನ್ನು ಬಿಡುಗಡೆಮಾಡದಿದ್ದರೆ ಸೆಂಟ್ ಥೋಮ್ ಮೇಲೆ ಧಾಳಿಮಾಡುವುದಾಗಿ ಆತ ಬೆದರಿಕೆಹಾಕಿದ. ಇದನ್ನು ಕೇಳಿದ ಕೂಡಲೇ ಸೆಂಟ್ ಥೋಮಿನ ಗೌರ್ನರ್ ಹೆದರಿ ಗೋವಾಕ್ಕೆ ಒಂದರ ಮೇಲೊಂದು ದೋಣಿ ಕಳುಹಿಸಿ ಕೂಡಲೇ ಫಾದರ್ ಅವರನ್ನು ಬಿಡುಗಡೆ ಮಾಡಿಸಬೇಕೆಂದು ಕೇಳಿಕೊಂಡ. ಈ ಕೇಳಿಕೆಯನ್ನು ಮನ್ನಿಸಿ ಫಾದರ್ ಅವರಿಗೆ ತಿಳಿಸಲಾಯಿತು, ಅವರನ್ನು ಬಿಡುಗಡೆ ಮಾಡಲಾಗಿದೆ ಎಂದು. ಆದರೆ ಸೆರೆಮನೆಯ ಬಾಗಿಲು ತೆರೆದಿದ್ದರೂ ಫಾದರ್ ಹೊರಗೆ ಹೋಗಲಿಲ್ಲ. ಕ್ರೈಸ್ತ ಪುರೋಹಿತವರ್ಗದ ಜನರೆಲ್ಲ ಬಂದು ತನ್ನನ್ನು ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುವವರೆಗೆ ತಾನು ಹೊರಗೆ ಬರುವುದಿಲ್ಲವೆಂದು ಫಾದರ್ ಹೇಳಿಬಿಟ್ಟರು. ಬೇರೆ ಮಾರ್ಗವಿಲ್ಲದೆ ಪುರೋಹಿತರೆಲ್ಲ ಮೆರವಣಿಗೆಯಲ್ಲಿ ಫಾದರ್ ಅವರನ್ನು ಕರೆದುಕೊಂಡು ಹೋಗಿ ಕಾಪುಚಿನ್ ಕಾನ್ವೆಂಟಿನಲ್ಲಿ ಬಿಟ್ಟರು.

ಇಂಕ್ವಿಸಿಷನ್‌ನಲ್ಲಿ ಇರುವಾಗ ತಾವು ಅನುಭವಿಸಿದ ಕಷ್ಟವನ್ನು ಫಾದರ್ ಅವರು ಆಗಾಗ್ಗೆ ನನಗೆ ಹೇಳುತ್ತಿದ್ದರು. ಇಂಕ್ವಿಸಿಟರನಾಗಲೀ ಅವನ ಸಹಾಯಮಂಡಳಿಯ ಸದಸ್ಯರಾಗಲಿ ಯಾರೂ ಪವಿತ್ರ ಗ್ರಂಥಗಳನ್ನು ಓದಿದವರಂತೆ ಕಾಣಲಿಲ್ಲವಂತೆ. ಕೇಡಿಗಳಲ್ಲಿ ಕೇಡಿ ಎನಿಸಿಕೊಂಡ ಒಬ್ಬ ಮಾಲ್ತೇಸನೊಡನೆ (Maltese) ಫಾದರ್ ಇಫ್ರಾಯಿಮ್ ಅವರನ್ನು ಒಂದು ಕೋಣೆಯಲ್ಲಿ ಕೂಡಿಹಾಕಿದ್ದರು. ಆ ಮಾಲ್ತೇಸನಿಗೆ

ದೇವರನ್ನು ಬಯ್ಯದೆ ಬಾಯಿಂದ ಎರಡು ಮಾತು ಬರುತ್ತಿರಲಿಲ್ಲ. ಹಗಲೂ ರಾತ್ರಿ ಹೊಗೆಬತ್ತಿ ಸೇದುತ್ತಾ ಫಾದರ್ ಅವರ ಮುಖಕ್ಕೆ ಹೊಗೆ ಊದುತ್ತಿದ್ದುದೇ ಅವನು ಮಾಡುತ್ತಿದ್ದ ಕೆಲಸ. 'ಇಂಕ್ವಿಸಿರ್ಷ' ವಿಚಾರಣೆಗೆ ಒಳಪಟ್ಟವರನ್ನೆಲ್ಲಾ ಶೋಧಿಸಲಾಗು ತ್ತಿತ್ತು. ಫಾದರ್ ಎಫ್ರಾಯಿಮ್ ಅವರನ್ನೂ ಶೋಧಿಸಿದರು. ಆದರೆ ಅವರ ಅಂಗಿಗೆ ಹೊಲೆದಿದ್ದ ಸೀಸದಕಡ್ಡಿಗಳು ಶೋಧಕರ ಕೈಗೆ ಸಿಕ್ಕಲಿಲ್ಲ. ಹೊಗೆಬತ್ತಿ ಸೇದುತ್ತಿದ್ದ ಆ ಮಾಲ್ತೇಸನಿಗೆ ದಿನವಹಿ ಹೊಗೆಸೊಪ್ಪನ್ನು ಸರಬರಾಜುಮಾಡಲಾಗುತ್ತಿತ್ತು. ಅದನ್ನು ಕಾಗದದಲ್ಲಿ ಸುತ್ತಿಕೊಡುತ್ತಿದ್ದರು. ಹೊಗೆಸೊಪ್ಪು ಸುತ್ತಿದ ಆ ಚೂರು ಕಾಗದಗಳನ್ನು ಫಾದರ್ ಅವರು ಕೂಡಿಹಾಕಿ, ಅವುಗಳ ಮೇಲೆ ತಮ್ಮ ದಿನನಿತ್ಯದ ಅನುಭವಗಳನ್ನೂ ಆಲೋಚನೆಗಳನ್ನೂ ಬರೆಯುತ್ತಿದ್ದರಂತೆ. ಫಾದರ್ ಅವರಿಗೆ ಮಾಲುಗಣ್ಣು. ಅವರಿದ್ದ ಕೋಣೆಗೆ ಇದ್ದುದು ಆರು ಅಂಗುಲ ಚದರದ ಸಲಾಕಿ ಹಾಕಿದ ಕಂಡಿಯೊಂದು, ಅಷ್ಟೆ. ಆ ಕಂಡಿಯ ಬೆಳಕಿನಲ್ಲಿ ಬರೆಯಬೇಕಾದರೆ ಅವರು ತಮ್ಮ ಕಣ್ಣು ಯಾವ ಕಡೆಗೆ ಮಾಲಿತ್ತೊ ಅದಕ್ಕೆ ವಿರುದ್ಧವಾದ ಕಡೆಗೆ ದೃಷ್ಟಿಬೀರಿ ಬರೆಯಬೇಕಾಗಿತ್ತು. ಈ ಕಾರಣ ಅವರ ಮಾಲುಗಣ್ಣು ಒಂದು ರೀತಿಯಲ್ಲಿ ಸರಿಯಾಯಿತು ಎಂದೇ ಹೇಳಬೇಕು.

ಫಾದರ್ ಎಫ್ರಾಯಿಮ್ ಅವರು ಇಂಕ್ವಿಸಿರ್ಷ ಬಗ್ಗೆ ಬೇಕಾದಷ್ಟು ಬರೆಯಬಹು ದಾಗಿತ್ತು. ಆದರೆ ಹಾಗೆ ಬರೆಯಲು ಅವಕಾಶ ಕೊಡುತ್ತಿರಲಿಲ್ಲ. ಅಲ್ಲದೆ, ಫಾದರ್ ಇನ್ನೊಬ್ಬರ ಮೇಲೆ ಸೇಡು ತೀರಿಸಿಕೊಳ್ಳುವ ಸ್ವಭಾವದವರಲ್ಲ. ಅಂತೂ ಹದಿನೈದರಿಂದ ಇಪ್ಪತ್ತು ತಿಂಗಳುಗಳ ಕಾಲ ಸೆರೆಮನೆಯಲ್ಲಿ ಕಾಲಹಾಕಿದ ಫಾದರ್ ಎಫ್ರಾಯಿಮ್ ಅವರು ಹದಿನೈದು ದಿನಗಳ ಕಾಲ ಕಾಪುಚಿನ್ ಕಾನ್‌ವೆಂಟಿನಲ್ಲಿದ್ದು, ಆರೋಗ್ಯ ಸುಧಾ ರಿಸಿಕೊಂಡು ಮದ್ರಾಸಿಗೆ ಹಿಂದಿರುಗಿದರು. ಹಿಂದಿರುಗುವಾಗ ದಾರಿಯಲ್ಲಿ ಗೋಲ್ಕೊಂಡಾಕ್ಕೆ ಹೋಗಿ, ರಾಜನಿಗೂ ಷೇಖನಿಗೂ ತಮ್ಮ ಕೃತಜ್ಞತೆಗಳನ್ನು ಸಲ್ಲಿಸಿದರು. ಭಾಗನಗರ ದಲ್ಲಿಯೇ ಇರಬೇಕೆಂದು ರಾಜ ಅವರನ್ನು ಕೇಳಿಕೊಂಡ. ಆದರೆ ಅವರು ಒಪ್ಪದೇ ಹೋದರು. ಗೋಲ್ಕೊಂಡ ರಾಜ ಮೊದಲ ಪ್ರಯಾಣಕ್ಕೆ ಕೊಟ್ಟಂತೆ ಈಗಲೂ ಒಂದು ಎತ್ತನ್ನೂ ಹಲವಾರು ಸೇವಕರನ್ನೂ ದಾರಿಖರ್ಚಿಗೆ ಹಣವನ್ನೂ ಕೊಟ್ಟು ಪಾದ್ರಿ ಯವರನ್ನು ಕಳುಹಿಸಿದ.

ಡಚ್ ಕಂಪೆನಿಯು ಸಿಲೋನ್ ದ್ವೀಪದಲ್ಲಿ ಪೋರ್ಚುಗೀಸರಿಗೆ ಸೇರಿದ್ದನ್ನೆಲ್ಲಾ ಸೂರೆಮಾಡಿದ ಮೇಲೆ ಕೊಚ್ಚಿನ್ ಪಟ್ಟಣದ ಮೇಲೆ ತನ್ನ ಕಣ್ಣುಹಾಕಿತು. ಕೊಚ್ಚಿನ್ ಪ್ರದೇಶದಲ್ಲಿ 'ಬಾಸ್ಟರ್ಡ್' (bastard=ಕೃತಕ : ಖೋಟ ; ಕಾಡುದಾಲ್ಚಿನ್ನಿ) ಎಂಬ ದಾಲ್ಚಿನ್ನಿ ಬೆಳೆಯುತ್ತಿತ್ತು. ಈ ಕಾಡುದಾಲ್ಚಿನ್ನಿಯ ಕಾರಣ ಸಿಲೋನಿನ ದಾಲ್ಚಿನ್ನಿಯ ವ್ಯಾಪಾರಕ್ಕೆ ತೊಂದರೆಯುಂಟಾಗಿತ್ತು. ಡಚ್ಚರಿಗೆ ದಾಲ್ಚಿನ್ನಿಯ ವ್ಯಾಪಾರದ ಬಗ್ಗೆ ಬಹಳ ಆಸಕ್ತಿ. ಇದನ್ನು ತಿಳಿದ ವರ್ತಕರು ಕೊಚ್ಚಿನ್ನಿನ ದಾಲ್ಚಿನ್ನಿಯನ್ನು ಅಗ್ಗದ ಬೆಲೆಗೆ ಕೊಂಡು ಗೊಂಬ್ರೂನಿಗೆ ಸಾಗಿಸಿ, ಅಲ್ಲಿಂದ ಪರ್ಷಿಯಾ, ಮಹಾ ಟಾರ್ಟರಿ,

ಮಾಸ್ಕೊವಿ, ಜಾರ್ಜಿಯಾ, ಮಿಂಗ್ರೆಲಿಯಾ ಮತ್ತು ಕಪ್ಪುಸಮುದ್ರದ ಅಕ್ಕಪಕ್ಕದ ಪ್ರದೇಶಗಳಿಗೆ ರವಾನೆಮಾಡುತ್ತಿದ್ದರು. ಅಲ್ಲದೆ, ಬಹುಭಾಗ ದಾಲ್ಚಿನ್ನಿ ಬಸ್ಸೋರಾ, ಬಾಗದಾದ್, ಅರೇಬಿಯಾ, ಮೆಸಪೊಟೋಮಿಯಾ, ಅಂಟೋಲಿಯಾ, ಕಾನ್‌ಸ್ಟಾಂಟಿನೋಪಲ್, ರೊಮೇನಿಯಾ, ಹಂಗೇರಿ ಮತ್ತು ಪೋಲೆಂಡ್‌ಗಳಿಗೂ ಹೋಗುತ್ತಿತ್ತು. ಮೇಲೆ ಹೇಳಿದ ದೇಶಗಳಲೆಲ್ಲಾ ದಾಲ್ಚಿನ್ನಿಯನ್ನು ಬಹಳವಾಗಿ ಉಪಯೋಗಿಸುತ್ತಾರೆ. ತಿಂಡಿ ಪದಾರ್ಥಗಳಿಗೆಲ್ಲ ಪರಿಮಳಕ್ಕಾಗಿ ಪುಡಿಮಾಡಿಯೋ, ಇಲ್ಲ ಚೂರುಮಾಡಿಯೋ ಹಾಕುತ್ತಾರೆ. ಮೇಜಿನ ಮೇಲೆ ಅನ್ನದ ಭಕ್ಷ್ಯವನ್ನು ಬಡಿಸಿದಾಗ, ಅದರಲ್ಲಿಯೂ ಕ್ರೈಸ್ತರು ತಮ್ಮ 'ಲೆಂಟ್' ಉಪವಾಸದ ಹಬ್ಬದಲ್ಲಿ, ದಾಲ್ಚಿನ್ನಿಯನ್ನು ಸೇರಿಸದೆ ಇರುವುದಿಲ್ಲ. ಹಂಗೇರಿಯವರಂತೂ ಇದರ ಉಪಯೋಗದಲ್ಲಿ ಎತ್ತಿದ ಕೈ. ತುರುಕರು ಮತ್ತು ಇತರ ಏಷ್ಯನರು ಸಹ ಮಾಂಸ ಮತ್ತು ಮಸಾಲೆಹಾಕಿ ಮಾಡುವ ಅವರ 'ಪಿಲ್ಲಾವ್' ಅನ್ನದಲ್ಲಿ ದಾಲ್ಚಿನ್ನಿಯ ಚೂರುಗಳನ್ನು ಸೇರಿಸದೆ ಇರುವುದಿಲ್ಲ.

ಕೊಚ್ಚಿನ್ ಪಟ್ಟಣವನ್ನು ಪೋರ್ಚುಗೀಸರಿಂದ ವಶಪಡಿಸಿಕೊಳ್ಳುವುದಕ್ಕಾಗಿ ಡಚ್ಚರು ಬಟೇವಿಯಾದಿಂದಲೂ, ಸಿಲೋನಿನಿಂದಲೂ ಹಡಗುಗಳಲ್ಲಿ ಸೈನ್ಯವನ್ನು ಕಳುಹಿಸಿದರು. ಸೈನ್ಯ ಕೊಚ್ಚಿನ್ನಿಗೆ ಮುತ್ತಿಗೆಹಾಕಿತು. ಕೊಚ್ಚಿನ್ ರಾಜನಿಗೆ ಸೇರಿದ ಅಮನೆಗಳಲ್ಲಿ ಒಂದನ್ನು ವಶಪಡಿಸಿಕೊಂಡು ಅದನ್ನು ಶೋಧಿಸಲಾಯಿತು. ಆದರೆ ಅದರೊಳಗೆ ಯಾರೂ ಇರಲಿಲ್ಲ ; ಹಿಂದಿನ ವರ್ಷವೇ ಅದನ್ನು ಕೊಳ್ಳೆಹೊಡೆಯಲಾಗಿತ್ತು. ಡಚ್ಚರು ಕೊಚ್ಚಿನ್‌ ನಾಡಿನ ನಾಲ್ಕು ರಾಜರುಗಳನ್ನೂ ೧೬೦೦ ಕರಿಯರನ್ನೂ(blacks) ಕೊಂದುಹಾಕಿದರು. ಒಬ್ಬ ಮುದಿ ರಾಣಿ ಸೆರೆ ಸಿಕ್ಕಿದಳು. ಅವಳನ್ನು ಜಾಮೊರಿನ್ ರಾಜನ ವಶಕ್ಕೆ ಒಪ್ಪಿಸಲಾಯಿತು. ಜಾಮೊರಿನ್ ರಾಜ ಈ ಸಮುದ್ರತೀರದ ರಾಜರುಗಳಲ್ಲೆಲ್ಲಾ ಬಹಳ ಶಕ್ತಿವಂತ. ಡಚ್ಚರು ಕೊಚ್ಚಿನ್ ಪಟ್ಟಣವನ್ನು ವಶಪಡಿಸಿಕೊಂಡರೆ ಕ್ರಾಂಗನೂರು ಪಟ್ಟಣವನ್ನು ಆತನಿಗೆ ಕೊಡುವುದಾಗಿ ವಾಗ್ದಾನಮಾಡಿದ್ದರು. ಹಲವು ತಿಂಗಳುಗಳ ಕಾಲ ಕೊಚ್ಚಿನ್ ಪಟ್ಟಣದ ಮೇಲೆ ಧಾಳಿ ನಡೆಯಿತು. ಎರಡು ಕಡೆಯೂ ಅಪಾರ ಪ್ರಾಣಹಾನಿಯಾಯಿತು. ಕೊನೆಗೆ ಪೋರ್ಚುಗೀಸರು ಶರಣಾಗತರಾದರು. ಪಟ್ಟಣವೂ ಶಸ್ತ್ರಾಸ್ತ್ರಗಳೂ ಡಚ್ಚರ ವಶವಾದುವು.[1]

ಪಟ್ಟಣವು ವಶವಾದರೆ ಅದನ್ನು 'ಲೂಟಿ'ಮಾಡಲು ಸಿಪಾಯಿಗಳಿಗೆ ಅವಕಾಶಕೊಡುವುದಾಗಿ ಡಚ್ ಸೇನಾಧಿಪತಿ ವಾಗ್ದಾನಮಾಡಿದ್ದ. ಆದರೆ ಕೆಲವು ಕಾರಣಗಳಿಂದ ಆ ವಾಗ್ದಾನದಂತೆ ನಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಲೂಟಿ ಮಾಡುವ ಬದಲು ಪ್ರತಿಯೊಬ್ಬರಿಗೂ ಆರು ತಿಂಗಳ ಸಂಬಳವನ್ನು ಹೆಚ್ಚಿಗೆ ಕೊಡುವುದಾಗಿ ಹೇಳಿದ. ಕೊನೆಗೆ ಅದು ತಲಾ ಎಂಟು ರೂಪಾಯಿಗಳಿಗೆ ಇಳಿಯಿತು. ಜಾಮೊರಿನ

---

[1]ಡಚ್ಚರು ಕೊಚ್ಚಿನ್ ವಶಪಡಿಸಿಕೊಂಡದ್ದು ೧೬೬೩ರಲ್ಲಿ.

ನಿಗೆ ಕೊಟ್ಟ ಮಾತಿನಂತೆ ಕ್ರಾಂಗನೂರನ್ನು ಅವನ ವಶಕ್ಕೆ ವಹಿಸಲಾಯಿತು. ಆದರೆ ಅದನ್ನು ಕೊಡುವುದಕ್ಕೆ ಮುಂಚೆ ಅದರ ಕೋಟೆ ಕೊತ್ತಲಗಳನ್ನು ಧ್ವಂಸಮಾಡಿಬಿಟ್ಟರು.

ಕೊಚ್ಚಿನ್ ವಶವಾದ ಮೇಲೆ ಕನ್ನಾನೂರ್ ಸುಲಭವಾಗಿ ಡಚ್ಚರ ವಶವಾಯಿತು.

ಗೆದ್ದುಕೊಂಡ ಕೊಚ್ಚಿನ್ ಪಟ್ಟಣವನ್ನು ಆಳಲು ಡಚ್ಚರು ಒಬ್ಬ ಗೌರ್ನರನನ್ನು (Governor) ನೇಮಿಸಿದರು. ಆತ ಬಹಳ ಕ್ರೂರವಾಗಿ ವರ್ತಿಸತೊಡಗಿದ. ಹೊಗೆ ಸೊಪ್ಪಿನ ಮೇಲೂ 'ಸುರಿ' (Suri=Sura=ಸುರ=ಹೆಂಡ)ಯ ಮೇಲೂ ತೆರಿಗೆ ಹೇರಿದ. ಬಡ ಸಿಪಾಯಿಗಳಿಗೆ ಅವು ಸಿಕ್ಕುವುದು ಕಷ್ಟವಾಯಿತು. ಡಚ್ಚರ ಸೇನಾ ಪಾಳೆಯದಲ್ಲಿ ರಷೆಪೊ (Rachepot) ಎಂಬ ಸಿಪಾಯಿ ಇದ್ದ. ಈತ ಹಾಜರಿ ಕರೆದಾಗ ಹಾಜರಾಗದೆ ಅರ್ಧ ಗಂಟೆ ನಿಧಾನಮಾಡಿದನೆಂದು ಅವನಿಗೆ ಗವರ್ನರ್ ಮೂರು ದಿನಗಳ ಕಾಲ ಮರದಕುದುರೆ ಸವಾರಿ ಮಾಡುವ ಶಿಕ್ಷೆ ವಿಧಿಸಿದ. ಈ ಶಿಕ್ಷೆ ಬಹಳ ಕ್ರೂರ ವಾದದ್ದು. ಮರದ ಕುದುರೆಯ ಬೆನ್ನು ಬಹಳ ಚೂಪು. ಅಲ್ಲದೆ, ಕಾಲಿಗೆ ಭಾರವಾದ ಚುಚ್ಚುಮೊಳೆ (spurs)ಗಳು ಬೇರೆ. ಈ ಕಾರಣ ಮೂರು ನಾಲ್ಕು ಗಂಟೆಗಳ ಸವಾರಿಯ ಅನಂತರ ಮನುಷ್ಯ ಚಿಂದಿ ಚಿಂದಿಯಾಗಿಬಿಡುತ್ತಾನೆ.

ರಷೆಪೋಗೆ ವಿಧಿಸಿದ ಶಿಕ್ಷೆ ಮೂರು ಗಂಟೆಯದಲ್ಲ, ಮೂರು ದಿನಗಳದ್ದು. ಈ ಮೂರು ದಿನದ ಶಿಕ್ಷೆಯಿಂದ ಬದುಕಿ ಉಳಿಯುವುದು ಅಸಾಧ್ಯವೆಂದುಕೊಂಡ ಆತ ಹೆದರಿ ಒಬ್ಬ ಫ್ರೆಂಚ್ ಸಿಪಾಯಿಯ ಮನೆಯಲ್ಲಿ ಕದ್ದು ಅವಿತುಕೊಂಡ. ಆ ಸಿಪಾಯಿಗೆ ಆಗ ತಾನೆ ಮದುವೆಯಾಗಿತ್ತು. ಮದುವೆಯಾದ ಸಿಪಾಯಿಗಳು ವಾರಕ್ಕೆ ಮೂರು ದಿನ ಅವರ ಮನೆಯಲ್ಲಿ ಮಲಗಬಹುದಾಗಿತ್ತು. ರಷೆಪೊ ತಪ್ಪಿಸಿಕೊಂಡಿರುವುದು ಗೊತ್ತಾದಾಗ ಗೌರ್ನರ್ ಅವನನ್ನು ಹಿಡಿದುಕೊಟ್ಟವರಿಗೆ ಬಹುಮಾನ ಕೊಡುವುದಾಗಿಯೂ, ಯಾರು ಅವನನ್ನು ಇಟ್ಟುಕೊಂಡಿದ್ದಾರೊ ಅವರಿಗೆ ಮರಣದಂಡನೆ ವಿಧಿಸುವುದಾಗಿಯೂ ಡಂಗೂರ ಹೊಡೆಸಿದ.

ತನಗೆ ಆಶ್ರಯಕೊಟ್ಟ ಸಿಪಾಯಿಗೆ ತೊಂದರೆ ಕೊಡಬಾರದೆಂದು ರಷೆಪೊ ರಾತ್ರಾರಾತ್ರಿ ಐದಾರು ಸಿಪಾಯಿಗಳೊಡಗೂಡಿ ಪರಾರಿಯಾದ. ಮಳೆ ಸುರಿಯುತ್ತಿತ್ತು. ಜೊತೆಗೆ ಕಗ್ಗತ್ತಲು ಬೇರೆ. ಆದರೂ ಇಡೀ ರಾತ್ರಿಯೆಲ್ಲಾ ನಡೆದು ಬೆಳಕು ಹರಿಯುವ ಹೊತ್ತಿಗೆ ಪೊರಕಾಡ್ ಎಂಬ ಊರಿನ ಬಳಿಗೆ ಬಂದ. ಇಲ್ಲಿ ತುಂಬಿ ಹರಿಯುವ ನದಿಯನ್ನು ಈಜಿದ. ಸ್ಥಳದ ವಿಗ್ರಹಾರಾಧಕರು ಅವನನ್ನೂ ಅವನ ಸಹಚರರನ್ನೂ ಮುಟ್ಟಿದರೆ ಮೈಲಿಗೆಯಾಗುವುದೆಂದು ಮನೆಯೊಳಕ್ಕೆ ಸೇರಿಸಲಿಲ್ಲ. ಸ್ಥಳದ ಭಾಷೆ ಗೊತ್ತಿರಲಿಲ್ಲ ಆ ಬಡಪಾಯಿಗಳಿಗೆ. ತಿನ್ನಲು ಅನ್ನವಿಲ್ಲ, ಕುಡಿಯಲು ಒಳ್ಳೆಯ ನೀರಿಲ್ಲ. ಸ್ಥಳದ ಜನ ಇವರನ್ನು ಮುಟ್ಟಿದರೆ ಮೂರು ಸಲ ಸ್ನಾನಮಾಡಿ ಮೈಲಿಗೆ ಕಳೆದುಕೊಳ್ಳುತ್ತಿದ್ದರು.

ಕೊನೆಗೆ ರಷೆಪೊನಿಗೂ ಅವನ ಸಹಚರರಿಗೂ ಒಬ್ಬ ಜೆಸ್ಯೂಯಿಟ್ ಪಾದ್ರಿ ಸಿಕ್ಕಿದರು. ಅವರ ಕಷ್ಟಗಳನ್ನು ಪಾದ್ರಿಯವರು ಕೇಳಿ, ಗೊಡೊರ್ಮೆ (Godorme) ರಾಜನಿಗೆ

ತಾಳೆಗರಿಯ ಮೇಲೆ ಮಲಬಾರ್ ಬಾಷೆಯಲ್ಲಿ ಒಂದು ಪತ್ರ ಬರೆದುಕೊಟ್ಟರು. ಆ ರಾಜನ ಬಳಿಗೆ ರಷೆಪೊ ಹೋದ. ಅಲ್ಲಿ ಪೋರ್ಚುಗೀಸ್ ಭಾಷೆ ಬಲ್ಲ ಒಬ್ಬ ಮಲಬಾರಿ ಇದ್ದ. ರಷೆಪೊನೂ ಅವನ ಸಹಚರರೂ ಆ ರಾಜನ ಸೇವೆಗೆ ಸೇರಿಕೊಂಡರು. ಆದರೆ ಕೊಡುತ್ತಿದ್ದ ಸಂಬಳ ಅವರ ಊಟ ತಿಂಡಿಗೆ ಸಾಕಾಗುತ್ತಿರಲಿಲ್ಲ. ಗಾಯಗಳು ಮಾಯುವವರೆಗೆ ಮತ್ತು ಮಲಬಾರ್ ಭಾಷೆಯನ್ನು ಕಲಿತುಕೊಳ್ಳುವವರೆಗೆ, ಅಂದರೆ ಸುಮಾರು ನಲವತ್ತು ದಿನಗಳವರೆಗೆ ಅಲ್ಲಿದ್ದು ಆಮೇಲೆ ರಷೆಪೋನೂ ಅವನ ಸಹಚರರೂ ರಾತ್ರಾರಾತ್ರಿ ಮದರಾಸ್ ಕಡೆಗೆ ಹೊರಟುಬಿಟ್ಟರು. ಮಲಬಾರಿನ ಜನ ಮಾನಮುಚ್ಚಿಕೊಳ್ಳುವುದಕ್ಕೆ ಎಷ್ಟು ಬಟ್ಟೆ ಬೇಕೊ ಅಷ್ಟು ಬಟ್ಟೆಯಲ್ಲದೆ ಹೆಚ್ಚು ಬಟ್ಟೆ ಹಾಕುವುದಿಲ್ಲ. ರಾಜನೂ ಅಷ್ಟೆ. ಅವನ ಕಿವಿಯಲ್ಲಿರುವ ಚಿನ್ನದ ಆಭರಣವನ್ನು ಬಿಟ್ಟರೆ ಅವನನ್ನು ರಾಜನೆಂದು ಹೇಳುವಂತಿರಲಿಲ್ಲ.

ಮದರಾಸಿಗೆ ಹೋಗಲು ಈಶಾನ್ಯ ದಿಕ್ಕಿಗೆ ತಮ್ಮ ಪ್ರಯಾಣವನ್ನು ಆರಂಭಿಸಿದರು. ಜನರ ಭಾಷೆ ತಿಳಿಯದು. ಮಡಿ ಮೈಲಿಗೆಗಳ ಕಾರಣ ಊಟೋಪಚಾರಗಳು ಅಷ್ಟಕ್ಕಷ್ಟೆ. ಬಿಳಿಯ ಬಣ್ಣದ ಇವರನ್ನು ಕಂಡು ಓಡಿಹೋದ ಜನರೆಷ್ಟೋ! ಬೆಟ್ಟಗಳನ್ನು ಹತ್ತಿ ಕಾಡುಗಳಿಗೆ ಬಂದಾಗ ಅಲ್ಲಿ ಜಿಗಣೆಗಳ ಕಾಟ. ಅವುಗಳು ಕಚ್ಚುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಡೆದುಹೋಗುವ ಬದಲು ಓಡಬೇಕಾಯಿತು. ಆದರೂ ಒಂದೊಂದು ಜಿಗಣೆ ಕಾಲಿಗೋ ತೊಡೆಗೋ ಅಂಟಿಕೊಂಡು ರಕ್ತ ಹೀರಿ ಮುಂಗೈ ಗಾತ್ರ ಆಗುತ್ತಿದ್ದುವು. ಹರಿಯುವ ನೀರಿನಲ್ಲಿ ನಿಂತು ಆ ಜಿಗಣೆಗಳನ್ನು ಕಿತ್ತಾಗ ರಕ್ತ ನೀರನ್ನೆಲ್ಲಾ ಕೆಂಪಗೆ ಮಾಡುತಿತ್ತು.

ಈ ರೀತಿ ಕಷ್ಟದಲ್ಲಿ ಪ್ರಯಾಣಮಾಡಿ ದೊಡ್ಡ ದೇವಸ್ಥಾನ ಇರುವ ಊರಿಗೆ ಬಂದರು. ಆ ಊರಿನಲ್ಲಿ ಅನೇಕ ಬ್ರಾಹ್ಮಣ ಅಥವಾ ಬನಿಯ ಹಿಂದೂ ಪುರೋಹಿತರಿದ್ದರು. ಅವರು ಇವರ ಮೇಲಿನ ಕನಿಕರದಿಂದ ಉಣ್ಣಲು ಅನ್ನಕೊಟ್ಟರು. ಆದರೆ ಕೊಡುವಾಗ ಇವರನ್ನು ಮುಟ್ಟಿಸಿಕೊಳ್ಳದೆ ದೂರದಲ್ಲಿ ನಿಂತು ಅನ್ನ ಹಾಕಿದರು. ಯೂರೋಪಿನಲ್ಲಿ ಪ್ಲೇಗು ತಗುಲಿದವರಿಗೆ ಅನ್ನವನ್ನು ಒಂದು ಬಟ್ಟೆಯಲ್ಲಿ ಕಟ್ಟಿ ಎಸೆಯುವಂತೆ ಅವರು ಈ ಬಿಳಿಯರಿಗೆ ಅನ್ನ ಎಸೆದರು.[1] ಮೂರು ದಿನಗಳಿಂದ ಅನ್ನವಿಲ್ಲದೆ ಹಸಿದಿದ್ದ ಇವರು ಪಟ್ಟಾಗಿ ಉಂಡರು. ಹೀಗೆ ಉಂಡ ಕಾರಣ ಮಾರನೆಯ ದಿನ ಜ್ವರದಿಂದ ತಾಪತ್ರಯ ಪಡಬೇಕಾಯಿತು. ಇಂಡಿಯಾದಲ್ಲಿ ಉಪವಾಸ ಮಾಡಿ ಯಾವ ಕಾಯಿಲೆ

---

[1]ಮಧ್ಯಯುಗದ ಯೂರೋಪಿನ ಜನ ಪ್ಲೇಗ್ ಜಾಡ್ಯಕ್ಕೆ ಬಹಳವಾಗಿ ಹೆದರುತ್ತಿದ್ದರು: ಪ್ಲೇಗ್ ತಗುಲಿದವರನ್ನು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಲಂಡನ್ ನಗರದಲ್ಲಿ ಪ್ಲೇಗ್ ಹರಡಿದಾಗ (೧೬೬೫) ರೋಗಿಗಳ ಸಮೇತ ಮನೆಗಳ ಬಾಗಿಲುಗಳಿಗೆ ಪಟ್ಟಿಹಾಕಿ ಮೊಳೆ ಹೊಡೆದು ಹೊರಟುಹೋಗುತ್ತಿದ್ದರು.

ಯನ್ನಾದರೂ ಗುಣಪಡಿಸಿಕೊಳ್ಳಬಹುದು. ಇದೇ ಉಪಾಯವನ್ನು ನಮ್ಮವರು ಅನುಸರಿಸಿದರು.

ಗುಣವಾದ ಮೇಲೆ ಮುಂದೆ ಜಿಗಣೆಗಳ ಕಾಟದಿಂದ ಪಾರಾಗಲು ಒಂದು ಗಿಡದ ಎಲೆಯಿಂದ[1] ಕಾಲುಗಳನ್ನು ತಿಕ್ಕಿಕೊಳ್ಳಬೇಕೆಂದು ಜನರು ಸಲಹೆಮಾಡಿದರು. ಅಲ್ಲದೆ, ಅವರಿಗೆ ಒಂದು ಉಂಡೆ ಸುಣ್ಣ ಕೊಟ್ಟು, ಜಿಗಣೆ ಕಚ್ಚಿದಾಗ ಸುಣ್ಣವನ್ನು ಬೇಕೆಂದೂ ಆಗ ಜಿಗಣೆ ಬಿದ್ದುಹೋಗುವುದೆಂದೂ ಹೇಳಿದರು. ಉಪ್ಪೂ ಬೆಂಕಿಯೂ ಜಿಗಣೆ ಕಡಿತವನ್ನು ತಪ್ಪಿಸುತ್ತವೆ ಎಂದು ತಿಳಿದುಬಂದಿತು. ಸ್ಥಳದ ಜನರು ಜಿಗಣೆಗಳಿರುವ ಕಡೆ ಹೋಗುವಾಗ ಕೈಯಲ್ಲಿ ಬೆಂಕಿಯ ದೊಂದಿಯನ್ನು ಹಿಡಿದುಕೊಂಡು ಹೋಗುತ್ತಾರೆ.

ಅಂತೂ ನಮ್ಮ ಪ್ರವಾಸಿಗರು ಜನರು ಹೇಳಿದಂತೆ ನಡೆದುಕೊಂಡು, ದಾರಿ ಸಾಗಿಸಿ ಜಿಂಜಿ ಎಂಬ ಊರನ್ನು ತಲುಪಿದರು. ಅವರು ಜಿಂಜಿಯಿಂದ ಮುಂದೆ ತಮ್ಮ ಪ್ರಯಾಣವನ್ನು ಮುಂದುವರೆಸಿ, ಹತ್ತು ದಿವಸಗಳ ನಂತರ ಮದ್ರಾಸು ಮುಟ್ಟಿದರು. ಅಲ್ಲಿ ಅವರಿಗೆ ಫಾದರುಗಳಾದ ಎಫ್ರಾಯಿಮ್ ಮತ್ತು ಜೆನ್ನೊ (Father Ephraim and Zenon) ಅವರುಗಳು ಆಶ್ರಯ ಕೊಟ್ಟು ಯೋಗಕ್ಷೇಮ ನೋಡಿಕೊಂಡರು. ಬಿಸಿಲಿನ ಬೇಗೆಯಿಂದ ಅವರ ಶರೀರವೆಲ್ಲಾ ಕಪ್ಪಾಗಿ ಹೋಗಿತ್ತು. ಐದಾರು ದಿನಗಳ ವಿಶ್ರಾಂತಿಯ ನಂತರ ಕಂದಾಗಿದ್ದ ಅವರ ಚರ್ಮ ಸುಲಿದೇಹೋಯಿತು.

ಇಂಗ್ಲಿಷರ ಹಡಗುಗಳು ಮದ್ರಾಸಿನಿಂದ ಯೂರೋಪಿಗೆ ಹೋಗುತ್ತಿದ್ದುವು. ಇವುಗಳಲ್ಲಿ ರಾಷೆಪೊ ಬಿಟ್ಟು ಉಳಿದವರು ಯೂರೋಪಿಗೆ ಪ್ರಯಾಣಮಾಡಿದರು. ರಾಷೆಪೊ ಮದ್ರಾಸಿನಲ್ಲಿ ನಿಂತು ತನ್ನ ಖರ್ಚಿಗೆ ಬೇಕಾದ ಹಣ ಸಂಪಾದಿಸಿಕೊಂಡು ಸೂರತ್ತಿಗೆ ಪ್ರಯಾಣ ಹೊರಟ. ಸೂರತನ್ನು ತಲುಪಿ, ಅಲ್ಲಿಂದ ಆಗ್ರಾಕ್ಕೂ ಆಗ್ರಾದಿಂದ ದಿಹ್ಲಿಗೂ ಹೋದ. ನಾನು ನನ್ನ ಕೊನೆಯ ಪ್ರವಾಸದಲ್ಲಿ ದಿಹ್ಲಿಗೆ ಬಂದಾಗ ರಷೆಪೊ ಅಲ್ಲಿಗೆ ಬಂದ. ಅವನ ಕಷ್ಟವನ್ನು ಕಂಡ ನಾನು ಕನಿಕರದಿಂದ ನನ್ನ ಸೇವೆಗೆ ನೇಮಿಸಿಕೊಂಡೆ. ನಾನು ದಿಹ್ಲಿ ಬಿಡುವಾಗ ಅವನಿಗೆ ಒಂದಿಷ್ಟು ಹಣವನ್ನು ಸಾಲವಾಗಿ ಕೊಟ್ಟೆ. ಆದರೆ ಅವನು ಅದನ್ನು ಹಿಂದಿರುಗಿಸಲೇ ಇಲ್ಲ. ಅವನಿಂದಲೇ ನಾನು ಮೇಲೆಹೇಳಿದ ಪ್ರಯಾಣದ ವಿವರಗಳನ್ನು ತಿಳಿದುಕೊಂಡದ್ದು.

ನನ್ನ ಮೂರನೆ ಪ್ರವಾಸದಲ್ಲಿ ೧೬೫೨ನೇ ಇಸವಿ ಮೇ ೧೧ನೇ ತಾರೀಖು ನಾನು ಗೋಲ್ಕೊಂಡಾ ರಾಜನಿಗೆ ಸೇರಿದ ದೊಡ್ಡ ಹಡಗೊಂದರಲ್ಲಿ ಗೊಂಬ್ರೂನ್‌ನಿಂದ ಮಸುಲಿಪಟ್ಟಂಗೆ ಹೊರಟೆ. ಪ್ರತಿ ವರ್ಷ ಗೋಲ್ಕೊಂಡಾ ರಾಜನ ಹಡಗೊಂದು ಮಸ್ಲಿನ್

---

[1]ಬಹುಶಃ ಹೊಗೆಸೊಪ್ಪಿನ ಎಲೆ ಇರಬೇಕು. ಈಗಲೂ ಜಿಗಣೆಗಳ ಕಾಟವಿರುವ ಮಲೆನಾಡಿನಲ್ಲಿ ಜನರು ಹೊಗೆಸೊಪ್ಪು ಮತ್ತು ನಶ್ಯಗಳನ್ನು ಕಾಲಿಗೆ ತಿಕ್ಕಿಕೊಂಡು ಜಿಗಣೆಯ ಕಾಟ ತಪ್ಪಿಸಿಕೊಳ್ಳುತ್ತಾರೆ.

ಮತ್ತು 'ಚೀಟ್' (ಚೀಟಿ) ಬಟ್ಟೆಗಳನ್ನು ಹೊತ್ತುಕೊಂಡು ಪರ್ಷಿಯಾಕ್ಕೆ ಹೋಗುತ್ತದೆ. ಚೀಟ್ ಎಂದರೆ ಕೈಯಿಂದ ಹೂಗಳ ಕಸೂತಿಹಾಕಿದ ಬಣ್ಣದ ಕ್ಯಾಲಿಕೋ ಬಟ್ಟೆ. ಕಸೂತಿಹಾಕಿದ ಈ ಬಟ್ಟೆಗಳು ಮುದ್ರಣಮಾಡಿದ ಬಟ್ಟೆಗಳಿಗಿಂತ ಅಂದವಾಗಿರುತ್ತವೆ. ಅಲ್ಲದೆ ಬೆಲೆಯಾದವುಗಳು. ಇಂಡಿಯನರಿಗಾಗಲಿ, ಪರ್ಷಿಯನರಿಗಾಗಲಿ ಸಮುದ್ರ ಯಾನದ ಗಂಧವೇ ಇಲ್ಲದ ಕಾರಣ ಡಚ್ ಕಂಪೆನಿಯವರು ಹಡಗು ನಡೆಸಲು ಒಬ್ಬ ಪೈಲಟ್ (ಹಡಗು ನಡೆಸುವವನು), ಒಬ್ಬ ಉಪ ಪೈಲಟ್ ಮತ್ತು ಇಬ್ಬರು ಗೋಲಂದಾಜರನ್ನು ಒದಗಿಸುತ್ತಾರೆ. ನಾನು ಹೊರಟ ಹಡಗಿನಲ್ಲಿ ಆರು ಜನ ಡಚ್ಚರೂ, ಇಂಡಿಯಾದ ನೂರು ಜನ ನಾವಿಕರೂ ಇದ್ದರು. ಅಲ್ಲದೆ ಪರ್ಷಿಯಾದ ರಾಜ ಗೋಲ್ಕೊಂಡ ರಾಜನಿಗೆ ಬಹುಮಾನವಾಗಿ ಕಳುಹಿಸಿದ ೫೫ ಕುದುರೆಗಳಿದ್ದುವು. ಅಷ್ಟೇ ಅಲ್ಲದೆ, ೧೦೦ ಜನ ಆರ್ಮೇನಿಯಾ ಮತ್ತು ಪರ್ಷಿಯಾ ವರ್ತಕರೂ ಇದ್ದರು. ಈ ವರ್ತಕರು ಇಂಡಿಯಾಕ್ಕೆ ವ್ಯಾಪಾರಕ್ಕಾಗಿ ಬರುತ್ತಿದ್ದರು.

ಪರ್ಷಿಯಾ ಖಾರಿಯನ್ನು ಬಿಡುವಾಗ ಗಾಳಿ ಮಂದವಾಗಿಯೂ, ಅನುಕೂಲ ವಾಗಿಯೂ ಬೀಸುತ್ತಿತ್ತು. ಆದರೆ ಮುಂದೆ ಮುಂದೆ ಹೋದಾಗ ಸಮುದ್ರ ಅಲ್ಲೋಲ ಕಲ್ಲೋಲವಾಗಿಬಿಟ್ಟಿತು. ನೈರುತ್ಯಮಾರುತಗಳು ಬಹಳ ಬಲವಾಗಿ ಬೀಸುತ್ತಿದ್ದುವು. ನಮ್ಮ ಹಡಗಿಗೆ ನೀರು ನುಗ್ಗಿತು. ಅದೃಷ್ಟವಶಾತ್ ಇಂಡಿಯಾಕ್ಕೆ ಹೋಗುತ್ತಿದ್ದ ಒಬ್ಬ ವರ್ತಕನ ಬಳಿ ಎರಡು ಪಿಂಡಿ ಹಸುವಿನ ಚರ್ಮಗಳಿದ್ದುವು. ಈ ಚರ್ಮವನ್ನು ನಾವು 'ರಷ್ಯ ಚರ್ಮ' (Russian leather) ಎಂದು ಕರೆಯುತ್ತೇವೆ. ಈ ಚರ್ಮವನ್ನು ಹಾಸಿಗೆಯ ಮೇಲೆ ಹಾಸಿ ಮಲಗಿದರೆ ತಣ್ಣಗಿರುತ್ತದೆ. ಹಡಗಿನಲ್ಲಿ ನಾಲ್ಕೈದು ಜನ ಚಮ್ಮಾರರೂ ಇದ್ದರು. ಈ ಚಮ್ಮಾರರು ದೊಡ್ಡ ದೊಡ್ಡ ಚರ್ಮದ ಬಾನಿಗಳನ್ನು ಹೊಲೆದುಕೊಟ್ಟರು. ಈ ಬಾನಿಗಳನ್ನು ಉಪಯೋಗಿಸಿ ಎಲ್ಲರೂ ಕೂಡಿಕೊಂಡು ನೀರನ್ನು ಹೊರಕ್ಕೆ ಹಾಕಿದೆವು.

ಅದೇ ದಿನ ಬಂದು ವಿಚಿತ್ರ ನಡೆಯಿತು. ಬಿರುಗಾಳಿ ಭೋರೆಂದು ಬೀಸುತಿತ್ತು. ಆ ಬಿರುಗಾಳಿಯ ಜೊತೆಗೆ ಮೂರು ಸಿಡಿಲುಗಳು ನಮ್ಮ ಹಡಗನ್ನು ಅಪ್ಪಳಿಸಿದುವು. ಮೊದಲ ಸಿಡಿಲು ಹಡಗಿನ ಮುನ್‌ಕೂವೆಗೆ (foremast) ಹೊಡೆಯಿತು. ಆ ಸಿಡಿಲ ಬಡಿತಕ್ಕೆ ಕೂವೆ ಉದುದ್ದವಾಗಿ ಸೀಳಿಹೋಯಿತು. ಸಿಡಿಲು ಹಡಗಿನ ಉದ್ದಕ್ಕೂ ಹಬ್ಬಿ, ಮೂರು ಜನರನ್ನು ಆಹುತಿ ತೆಗೆದುಕೊಂಡಿತು. ಎರಡು ಗಂಟೆಗಳ ತರುವಾಯ ಮತ್ತೊಂದು ಸಿಡಿಲು! ಅದು ಹಡಗಿನ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ (stem to stem) ಸಾಗಿ ಇಬ್ಬರನ್ನು ಬಡಿಯಿತು. ಇದಾದ ತುಸು ಹೊತ್ತಿನಲ್ಲೇ ಮೂರನೆಯ ಸಿಡಿಲು ಅಪ್ಪಳಿಸಿತು. ನಾನು ಆಗ ಪೈಲಟ್ ಮತ್ತು ಉಪ ಪೈಲಟ್ ರೊಡನೆ ಮುಖ್ಯ ಕೂವೆಯ (main mast) ಬಳಿ ಇದ್ದೆ. ಅಡಿಗೆಯವ ಊಟ ಬಡಿ ಸಲೇ ಎಂದು ಕೇಳಲು ಅಲ್ಲಿಗೆ ಬಂದ. ಆಗ ಎರಗಿದ ಮೂರನೇ ಸಿಡಿಲು ಅವನ ಹೊಟ್ಟೆ

ಯಲ್ಲಿ ಸಣ್ಣ ತೂತೊಂದನ್ನು ಮಾಡಿ, ಹಂದಿಯನ್ನು ಬೆಂಕಿಯಲ್ಲಿ ಸೀದಂತೆ ಅವನ ತಲೆ ಕೂದಲನ್ನು ಸೀದುಬಿಟ್ಟೆತು. ಅವನಿಗೆ ಮತ್ತೇನು ಆಗಲಿಲ್ಲ. ಹೊಟ್ಟೆಯಲ್ಲಿ ಆದ ತೂತಿಗೆ ಕೊಬ್ಬರಿ ಎಣ್ಣೆ ಹಚ್ಚಿದಾಗ ಆತ ಉರಿಯಿಂದ ಕೂಗಿಕೊಂಡ

ಜೂನ್ ೨೪ನೇ ತಾರೀಖು ನಾವು ನೆಲ ಕಂಡೆವು. ಕಂಡ ನೆಲ ಸಿಲೋನಿನ ಪಾಯಿಂಟ್-ದ-ಗಲ್ಲೇ ಆಗಿತ್ತು. ಇಲ್ಲಿಂದ ಮಸುಲಿಪಟಂವರೆಗೆ ಹವೆ ಅನುಕೂಲ ವಾಗಿತ್ತು. ಜುಲೈ ೨ ರಂದು ಮಸುಲಿಪಟಂ ಮುಟ್ಟಿದೆವು. ಹಡಗು ಇಳಿದು ನಾನು ಆ ಊರಿನಲ್ಲಿ ಇದ್ದ ಡಚ್ಚರು, ಸ್ವೀಡನ್ನರು ಮತ್ತು ಇಂಗ್ಲಿಷರ ಆತಿಥ್ಯ ಸ್ವೀಕರಿಸಿ, ಸಂತೋಷ ದಿಂದ ಕಾಲ ಕಳೆದೆ. ಮದುವೆಯಾದ ಕೆಲವು ಡಚ್ಚರೂ ಅವರ ಹೆಂಡತಿಯರೂ ಊರ ಹೊರಗಿನ ತೋಟಕ್ಕೆ ವಿಹಾರಕ್ಕಾಗಿ ಕರೆದುಕೊಂಡುಹೋದರು. ಪರ್ಷಿಯಾದಿಂದ ತಂದ ಮದ್ಯ ಕುಡಿದೆವು, ಹಾಡಿದೆವು ಮತ್ತು ಕುಣಿದೆವು. ಇಂಗ್ಲಿಷರು ಇಲ್ಲಿ ಸಿಗುವ ನರ್ತಕಿಯ ರನ್ನು ಕರೆದು ಹಾಡಿಸಿ ಕುಣಿಸಿ ನನ್ನನ್ನು ಸಂತೋಷಪಡಿಸಿದರು.

ಜೂನ್ (ಜುಲೈ) ೧೮ ಮತ್ತು ೧೯ ರಂದು ನಾವು ಒಂದು ಪಲ್ಲಕ್ಕಿ, ಮೂರು ಕುದುರೆಗಳು, ಆರು ಎತ್ತುಗಳನ್ನು ಕೊಂಡುಕೊಂಡೆವು. ಸಾಮಾನುಗಳನ್ನು ಗಾಡಿಗಳ ಮೇಲೆ ಹೇರಿಕೊಂಡು, ನಮ್ಮ ಬಳಿ ಇದ್ದ ಮುತ್ತುಗಳನ್ನು ಗೋಲ್ಕೊಂಡಾ ರಾಜನಿಗೆ ಮಾರುವ ಉದ್ದೇಶದಿಂದ, ಗೋಲ್ಕೊಂಡಾಕ್ಕೆ ಹೊರಡಬೇಕೆನ್ನುವಾಗ ಡಚ್ಚರು ಹೇಳಿದರು, "ಮೀರ್ ಜುಮ್ಲಾ ಮೊದಲು ಮುತ್ತುಗಳನ್ನು ನೋಡಿ ಒಪ್ಪಿದ ಹೊರತು ರಾಜ ಅವುಗಳನ್ನು ಕೊಂಡುಕೊಳ್ಳುವುದಿಲ್ಲ" ಎಂದು. ಮೀರ್ ಜುಮ್ಲಾ ಆಗ ಕರ್ನಾಟಕ್ (Carnatic)ಪ್ರಾಂತದಗಂಡೀ ಕೋಟೆಯಲ್ಲಿ ಇದ್ದ. ಆದ್ದರಿಂದ ನಾವು ಅಲ್ಲಿಗೆ ಹೊರಟೆವು.

ಜೂನ್ (ಜುಲೈ) ೨೦ನೇ ತಾರೀಖು ೫ಗಂಟೆಗೆ ಮಸುಲಿಪಟ್ಟಣಂ ಬಿಟ್ಟು, ಆ ರಾತ್ರಿ ಒಂದು ತೋಟದಲ್ಲಿ ತಂಗಿ, ಅಲ್ಲಿದ್ದ ಡಚ್ಚರ ಮುಖ್ಯಸ್ಥನ ಆತಿಥ್ಯವನ್ನು ಸ್ವೀಕರಿಸಿ, ಬೆಳಿಗ್ಗೆ ಮತ್ತೆ ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ೨೭ ನೇ ತಾರೀಖು ಬೆಜವಾಡ (Bezawada) ಎಂಬ ದೊಡ್ಡ ಹಳ್ಳಿಯನ್ನು ತಲುಪಿದೆವು. ಮಳೆಯ ಕಾರಣ ದಾರಿಯಲ್ಲಿ ಸಿಕ್ಕ ಹಳ್ಳಕೊಳ್ಳಗಳೆಲ್ಲಾ ತುಂಬಿ ಹರಿಯುತ್ತಿದ್ದುವು. ಬೆಜವಾಡದ ಬಳಿ ಹರಿಯುವ ನದಿಯು (ಕೃಷ್ಣಾನದಿ) ಪ್ರವಾಹದಲ್ಲಿತ್ತು. ದೋಣಿಯು ಆ ಪ್ರವಾಹವನ್ನು ಹಾಯುವುದು ಸಾಧ್ಯವಿರಲಿಲ್ಲ. ಅಲ್ಲದೆ ಪರ್ಷಿಯಾ ದೇಶದ ರಾಜನು ಗೋಲ್ಕೊಂಡಾ ರಾಜನಿಗೆ ಕಳು ಹಿಸಿದ್ದ ಕುದುರೆಗಳನ್ನು ದಾಟಿಸಬೇಕಾಗಿತ್ತು. ಐವತ್ತೈದು ಕುದುರೆಗಳಲ್ಲಿ ಐದು ಸತ್ತು ಈಗ ಐವತ್ತು ಉಳಿದಿದ್ದುವು. ಈ ಕುದುರೆಗಳನ್ನು ಮೊದಲು ಗಂಡೀಕೋಟೆಯಲ್ಲಿದ್ದ ಗೋಲ್ಕೊಂಡಾ ರಾಜನ ಮುಖ್ಯ ಮಂತ್ರಿಗೆ, ಅಂದರೆ ನವಾಬ ಮೀರ್ ಜಮ್ಲಾನಿಗೆ,

---

[1]ಗಲ್ಲೆ (Galle): ಸಿಲೋನ್ ದ್ವೀಪದ ನೈರುತ್ಯ ಭಾಗದ ರೇವುಪಟ್ಟಣ.

ತೋರಿಸಲು ತೆಗೆದುಕೊಂಡು ಹೋಗಲಾಗುತಿತ್ತು. ಅವನಿಗೆ ತೋರಿಸದೆ ಮತ್ತು ಅವನು ಒಪ್ಪದೆ ಯಾವುದನ್ನೂ ರಾಜನಿಗೆ ಒಪ್ಪಿಸುವಂತಿಲ್ಲ.

ಬೆಜವಾಡದಲ್ಲಿ ನಾವು ತಂಗಿದ್ದ ಕಾಲದಲ್ಲಿ ಅಲ್ಲಿರುವ ಅನೇಕ ದೇವಸ್ಥಾನಗಳನ್ನು ನೋಡಲು ಹೋದೆವು. ಅಲ್ಲಿಯ ಗೌರ್ನರ್ ಮತ್ತು ಅಧಿಕಾರಿಗಳನ್ನು ಬಿಟ್ಟರೆ ಉಳಿದೆಲ್ಲ ಜನ ವಿಗ್ರಹಾರಾಧಕರು. ಬೆಜವಾಡದಲ್ಲಿರುವ ದೇವಸ್ಥಾನ ಬಹಳ ಚೆನ್ನಾಗಿದೆ. ಇದು ಐವತ್ತೆರಡು ಕಂಬಗಳ ಕಲ್ಲಿನ ದೊಡ್ಡ ಕಟ್ಟಡ. ಕಲ್ಲಿನಲ್ಲಿ ಕಡೆದ ವಿಧ ವಿಧ ವಿಗ್ರಹಗಳನ್ನು ದೇವಸ್ಥಾನದಲ್ಲೆಲ್ಲಾ ನೋಡಬಹುದು. ಎತ್ತರವಾದ ಸ್ಥಳದಲ್ಲಿ ಕಟ್ಟಿದ ಇನ್ನೊಂದು ದೇವಸ್ಥಾನವನ್ನು ನೋಡಿದೆವು. ಇಲ್ಲಿ ನಾಲ್ಕು ಅಡಿ ಎತ್ತರದ ಚಕ್ಕಲು-ಚೊಕ್ಕಲು ಹಾಕಿ ಕೊಂಡಿದ್ದ ವಿಗ್ರಹವಿತ್ತು. ಇದರ ತಲೆಯ ಮೇಲೆ ಮೂರು ಕಿರೀಟಗಳೂ, ನಾಲ್ಕು ಕೊಂಬುಗಳೂ ಇದ್ದುವು. ವಿಗ್ರಹದ ಮುಖ ಮನುಷ್ಯನ ಮುಖದಂತಿತ್ತು ; ಅಲ್ಲದೆ, ಪೂರ್ವಾಭಿಮುಖವಾಗಿತ್ತು. ದೇವಸ್ಥಾನಗಳಿಗೆ ಬರುವ ಭಕ್ತರು ಎರಡು ಕೈಗಳನ್ನೂ ಜೋಡಿಸಿ ಹಣೆಯವರೆಗೆ ಎತ್ತಿ ಕೈಮುಗಿಯುತ್ತಾ ಬಾಯಲ್ಲಿ 'ರಾಮ' 'ರಾಮ' ಎಂದು ಹೇಳುತ್ತಿದ್ದರು. ವಿಗ್ರಹದ ಹತ್ತಿರ ಹೋದಾಗ ತೂಗುಹಾಕಿರುವ ಗಂಟೆಯನ್ನು ಮೂರು ಸಲ ಬಾರಿಸುತ್ತಿದ್ದರು.

ಮೇಲೆ ಹೇಳಿದ ವಿಗ್ರಹದ ಪೂಜೆಗೆ ಅರವತ್ತು ಜನ ಅರ್ಚಕರು ಇದ್ದಾರೆ. ಇವರೂ ಇವರ ಹೆಂಡತಿ ಮಕ್ಕಳೂ ವಿಗ್ರಹಕ್ಕೆ ಅರ್ಪಿಸುವ ನೈವೇದ್ಯದಿಂದ ಜೀವನ ನಡೆಸುತ್ತಾರೆ. ನೈವೇದ್ಯವನ್ನು ಅರ್ಪಿಸಿದ ಭಕ್ತರಿಗೆ ದೇವರೇ (God) ಅದನ್ನು ಸ್ವೀಕರಿಸಿದನೆಂಬ ಭಾವನೆ ಬರುವಂತೆ ಮಾಡಲು ಅದನ್ನು ಎರಡು ದಿನಗಳ ತನಕ ವಿಗ್ರಹದ ಮುಂದೆ ಇಟ್ಟಿದ್ದು, ಮೂರನೆಯ ದಿನದ ಸಂಜೆ ತಾವೇ ಉಪಯೋಗಿಸುತ್ತಾರೆ. ಕಾಯಿಲೆ ಕಸಾಲೆಗಳಿಂದ ನರಳುವವರು ತಮ್ಮ ಅಂಗದ ಯಾವುದಾದರೂ ಒಂದು ಭಾಗವನ್ನು ಹೋಲುವಂತಹ ವಸ್ತುವನ್ನು ಚಿನ್ನ, ಬೆಳ್ಳಿ ಅಥವಾ ತಾಮ್ರದಿಂದ ಮಾಡಿಸಿ ವಿಗ್ರಹಕ್ಕೆ ಒಪ್ಪಿಸುತ್ತಾರೆ. ಭಕ್ತರು ಬಹಳ ದೂರದಿಂದ ಬರುತ್ತಾರೆ. ಅವರಲ್ಲಿ ಬಡವರಾದವರಿಗೆ ಅರ್ಚಕರು ಶ್ರೀಮಂತ ರಿಂದ ಪಡೆದ ನೈವೇದ್ಯವನ್ನು ಹಾಕುತ್ತಾರೆ.

ದೇವಸ್ಥಾನದಲ್ಲಿ ದೊಡ್ಡ ಉತ್ಸವ ನಡೆಯುವುದು ಅಕ್ಟೋಬರ್ ತಿಂಗಳಿನಲ್ಲಿ. ಆಗ ನಾನಾ ಕಡೆಗಳಿಂದ ಬಹಳ ಜನ ಬಂದು ಸೇರುತ್ತಾರೆ.

ನಾವು ದೇವಸ್ಥಾನವನ್ನು ನೋಡಲು ಹೋದಾಗ ಗಂಡನನ್ನು ಕಳೆದುಕೊಂಡ ಹೆಂಗಸೊಬ್ಬಳನ್ನು ನೋಡಿದೆವು. ಆಕೆ ಮೂರು ದಿನಗಳಿಂದ ಬೇಡಿಕೊಳ್ಳುತ್ತಿದ್ದಳು, ತನ್ನ ಮಕ್ಕಳುಮರಿಗಳ ಪಾಡೇನು ಎಂದು. ಅಲ್ಲಿದ್ದ ಒಬ್ಬ ಅರ್ಚಕನನ್ನು ಕೇಳಿದೆ, ವಿಗ್ರಹವು ಯಾವಾಗ ಉತ್ತರ ಹೇಳುವುದು ಎಂದು. ಆತ ಇನ್ನೂ ದೇವರಿಗೆ ಮನಸ್ಸು ಬಂದಿಲ್ಲವೆಂದೂ, ಬಂದಾಗ ಹೇಳುತ್ತದೆಯೆಂದೂ ತಿಳಿಸಿದ. ಇದರಲ್ಲೇನೊ ಮೋಸ ಇರಬೇಕೆಂದು-ಕೊಂಡ ನಾನು, ಅರ್ಚಕರೆಲ್ಲ ಊಟಕ್ಕೆ ಹೋದ ಹೊತ್ತಿನಲ್ಲಿ ದೇವಸ್ಥಾನ

ದೊಳಕ್ಕೆ ಹೋದೆ. ಅಲ್ಲಿ ಒಬ್ಬನೇ ಒಬ್ಬ ಅರ್ಚಕ ಬಾಗಿಲು ಕಾಯುತ್ತಿದ್ದ. ನನಗೆ ಕುಡಿಯಲು ನೀರುಬೇಕೆಂದು ಹೇಳಿ, ಅದನ್ನು ತರುವ ನೆಪದಲ್ಲಿ ಆತನನ್ನು ಅಲ್ಲಿಂದ ಕಳು ಹಿಸಿದೆ. ಅವನು ಆ ಕಡೆ ಹೋದಾಗ ನಾನು ಗರ್ಭಗುಡಿಯನ್ನು ಪ್ರವೇಶಿಸಿದೆ. ಆ ಕತ್ತಲಿನಲ್ಲಿ ಅಲ್ಪಸ್ವಲ್ಪವಾಗಿ ನನ್ನನ್ನು ಕಂಡ ಆ ಹೆಂಗಸು ತನ್ನ ಅಳುವನ್ನು ಹೆಚ್ಚು ಮಾಡಿದಳು. ನಾನು ಆ ಕತ್ತಲೆಯಲ್ಲಿ ತಡವರಿಸಿಕೋಂಡು ವಿಗ್ರಹದ ಹಿಂದಕ್ಕೆ ಹೋದೆ. ಅಲ್ಲಿ ನೋಡಿದಾಗ ವಿಗ್ರಹದಲ್ಲಿ ಒಂದು ಕಂಡಿ ಇರುವುದು ಕಂಡಿತು. ಈ ಕಂಡಿಯ ಮೂಲಕ ಮನುಷ್ಯ ವಿಗ್ರಹದೊಳಕ್ಕೆ ಹೋಗಿ ಅಲ್ಲಿ ಅವಿತುಕೊಂಡು ವಿಗ್ರಹವೇ ಮಾತಾ ಡಿದಂತೆ ಮಾತಾಡಬಹುದಾಗಿತ್ತು. ನಾನು ಹಾಗೆ ಮಾಡಬೇಕೆನ್ನುವಷ್ಟರಲ್ಲಿ ನೀರು ತರಲು ಹೋದ ಅರ್ಚಕ ವಾಪಸು ಬಂದ. ನನ್ನನ್ನು ಕಂಡ ಆತ ಸಿಕ್ಕಾಬಟ್ಟೆ ಬಯ್ಯ ಲಾರಂಭಿಸಿದ. ಗರ್ಭಗುಡಿಯನ್ನು ಅಪವಿತ್ರಮಾಡಿಬಿಟ್ಟೆ ಎಂದು ಆತ ರೇಗಾಡಿದ. ಎರಡು ರುಪಾಯಿಗಳನ್ನು ಅವನ ಕೈಗೆ ಹಚ್ಚಿದ ಮೇಲೆ ನಾವಿಬ್ಬರೂ ಸ್ನೇಹಿತರಾಗಿ ಬಿಟ್ಟೆವು. ಅಷ್ಟೇ ಅಲ್ಲ, ಆತ ನನಗೆ ವೀಳಯದೆಲೆ ಅಡಕೆ ಕೊಟ್ಟು ಕಳುಹಿಸಿದ.

೩೧ನೇ ತಾರೀಖು ಬೆಜವಾಡ ಬಿಟ್ಟು, ನದಿ ದಾಟಿ, 'ಗಣಿ'ಗೆ ಅಂದರೆ ಕೊಲ್ಲೂರಿಗೆ ಪ್ರಯಾಣಮಾಡಿದೆವು. ದಾರಿಯಲ್ಲಿ ಕಹ ಕಲಿ (Kaba Kali=Kakani= ಕಕಾನಿ) ಎಂಬ ಹಳ್ಳಿಯೂ, ಕೊಂಡೆವೀರ್ (ಕೊಂಡವೀಡು) ಎಂಬ ದೊಡ್ಡ ಪಟ್ಟಣವೂ ಸಿಕ್ಕಿದುವು. ಆಗಸ್ಟ್ ೭ನೇ ತಾರೀಖು ನೆಲೌರ್ (ನೆಲ್ಲೂರು) ಎಂಬ ಪಟ್ಟಣಕ್ಕೂ, ೧೧ನೇ ತಾರೀಖು ಸಮುದ್ರ ತೀರದಲ್ಲಿರುವ ಪಲಿಕಾಟೇ (ಪುಲಿಕಾಟ್) ಎಂಬ ಸ್ಥಳಕ್ಕೂ ಹೋದೆವು. ಪಲಿಕಾಟೆಯಲ್ಲಿ ಡಚ್ಚರ ಕೋಟೆಯಿದೆ. ಈ ಕೋಟೆಯೊಳಗೆ ೨೦೦ ಸಿಪಾಯಿಗಳೂ ವರ್ತಕರೂ ಇದ್ದಾರೆ. ಇದರ ಗೌರ್ನರ್ ನಾವು ಬೇರೆ ಕಡೆ ಹೋಗಲು ಬಿಡಲಿಲ್ಲ. ತನ್ನ ಜೊತೆಯೇ ಊಟಕ್ಕೆ ಏರ್ಪಡಿಸಿದ. ನಮ್ಮನ್ನು ತುಂಬ ಪ್ರೀತಿ ವಿಶ್ವಾಸಗಳಿಂದ ಕಂಡುಕೊಂಡ.

ಇಲ್ಲಿನ ಜನ ಕುಡಿಯುವ ನೀರನ್ನು ಪಡೆಯುವ ವಿಧಾನ ಹೇಳತಕ್ಕದ್ದಾಗಿದೆ. ಜನಗಳು ಸಮುದ್ರದ ಉಬ್ಬರ ಇಳಿದ ಮೇಲೆ ತೀರಕ್ಕೆ ಹೋಗಿ ಮರಳನ್ನು ಅಗೆದು ಗುಂಡಿ ತೋಡುತ್ತಾರೆ. ಈ ಗುಂಡಿಗಳಲ್ಲಿ ಸಿಕ್ಕುವ ನೀರು ಒಳ್ಳೆಯ ಸಿಹಿನೀರು.

೧೨ನೇ ತಾರೀಖು ಪಲಿಕಾಟೆಯಿಂದ ಹೊರಟು, ಮಾರನೆ ದಿನ ಮದ್ರಾಸ್ ತಲುಪಿದೆವು. ಅಲ್ಲಿ ಕಾಪುಚಿನರ ಕಾನ್‌ವೆಂಟಿನಲ್ಲಿ ತಂಗಿದೆವು. ಫಾದರ್ ಎಫ್ರೈಮರು ಹಾಗೂ ಫಾದರ್ ಜೆನೋನರು ಇದ್ದರು. ಇವರ ವಿಚಾರ ನಾನು ಆಗಲೇ ಹೇಳಿದ್ದೇನೆ.

ಮದ್ರಾಸಿಗೆ ಬಂದ ಮಾರನೆಯ ದಿನ ಇಂಗ್ಲಿಷ್ ಅಧ್ಯಕ್ಷನನ್ನು ನೋಡಲು ಹೋದೆವು. ಅವನೊಡನೆ ಊಟಮಾಡಿದೆವು. ಆಗಸ್ಟ್ ೧೫ನೇ ತಾರೀಖು ಸೇಂಟ್ ಥೋಮಿನಲ್ಲಿರುವ ಗೌರ್ನರನನ್ನು ನೋಡಲು ಹೋದೆವು. ಆತ ನಮ್ಮನ್ನು ಬಹಳ ಮರ್ಯಾದೆಯಿಂದ ಕಂಡು ಊಟಕ್ಕೆ ಇರಿಸಿಕೊಂಡ. ಊಟಮಾಡಿಕೊಂಡು ಆಗಸ್ಟೈನ್

ಮತ್ತು ಜೆಸ್ಯೂಯಿಟ್ ಪಾದರುಗಳ (ಪಾದ್ರಿಗಳ) ಇಗರ್ಜಿಗಳನ್ನು ನೋಡಿದೆವು. ಸಂಜೆ ತಂಗಾಳಿಯಲ್ಲಿ ಅಡ್ಡಾಡುತ್ತಾ ಮದರಾಸಿಗೆ ಹಿಂದಿರುಗಿದೆವು. ಆ ದಿನ ನಮಗೆ ಕೆಲವು ಜನ ಪೋರ್ಚುಗೀಸರು ಸಿಕ್ಕಿದರು.

೧೬ ನೇ ತಾರೀಖು ಗೌರ್ನರನೂ ಪೋರ್ಚುಗೀಸರೂ ನಮಗೆ ಬಹುಮಾನವಾಗಿ ಹಂದಿಯ ಮಾಂಸ, ದನದ ನಾಲಿಗೆ, ವೀನು, ಕಲ್ಲಂಗಡಿ ಮುಂತಾದ ಹಣ್ಣು–ಇವುಗಳನ್ನು ಕಳುಹಿಸಿಕೊಟ್ಟರು. ಎಂಟು ಹತ್ತು ಜನ ಅವುಗಳನ್ನು ಹೊತ್ತುಕೊಂಡು ಬಂದರು. ನಾವು ಕಾಪುಚಿನ್ ಕಾನ್‌ವೆಂಟಿನಲ್ಲಿ ತಂಗಿದ್ದೆವಾದಕಾರಣ ನಮ್ಮೊಡನಿದ್ದ ಮೆಸ ದು ಜಾರ್ಡಿನ್ (M. Du Jardin) ಬಿಷಪ್ಪರಿರಬೇಕೆಂದು ಅವರ ಭಾವನೆಯಾಗಿತ್ತು. ಈ ಭಾವನೆಯೇ ನಮಗಷ್ಟೊಂದು ಮರ್ಯಾದೆ ಸಿಗಲು ಕಾರಣವಾಗಿತ್ತು.

(ಆಗಸ್ಟ್) ೨೩ ರಂದು ನಾವು ಔದೆಕೋಟೆಗೆ (Oudecot–Woode cotah) ಬಂದೆವು. ದಾರಿಯ ಇಕೆಲ್ಲಗಳಲ್ಲಿ ಬಿದಿರಿನ ಮೆಳೆಗಳು. ಕೆಲವು ಕಡೆ ಕಾಡು ಒತ್ತಾಗಿ ಬೆಳೆದು ಮುಂದೆ ಹೋಗುವುದೇ ಬಹಳ ಕಷ್ಟವಾಗಿತ್ತು. ಈ ಕಾಡುಗಳಲ್ಲಿ ಅಸಂಖ್ಯಾತ ಕೋತಿಗಳು. ದಾರಿಯ ಒಂದು ಕಡೆಯ ಕೋತಿಗಳಿಗೂ ಇನ್ನೊಂದು ಕಡೆಯ ಕೋತಿ ಗಳಿಗೂ ವೈರ. ನಾವು ಪುಲಿಕಾಟ್‌ನಲ್ಲಿದ್ದಾಗ ಅಲ್ಲಿಯ ಗೌರ್ನರ್ ಹೇಳಿದ್ದ, ಈ ಕಾಡಿನಲ್ಲಿ ಹೋಗುವಾಗ ಕೋತಿಯ ಜಗಳ ನೋಡದೆ ಹೋಗಬೇಡಿ ಎಂದು. ಈ ಪ್ರದೇಶದಲ್ಲಿ ಒಂದೊಂದು ಹರಿದಾರಿಗೂ (league) ದಾರಿಗೆ ಅಡ್ಡಲಾಗಿ ತಡೆ ಕಟ್ಟಿ, ಬಾಗಿಲು ಬಿಟು ಅವನ್ನು ಎಚ್ಚರಿಕೆಯಿಂದ ಕಾಯುವ ವ್ಯವಸ್ಥೆ ಮಾಡಲಾಗಿದೆ. ದಾರಿಯಲ್ಲಿ ಹೋಗುವ ವರನ್ನೆಲ್ಲ ಇಲ್ಲಿ ತಡೆದು ಅವರು ಎಲ್ಲಿಂದ ಬಂದದ್ದು, ಎಲ್ಲಿಗೆ ಹೋಗುತ್ತಾರೆ–ಇವನ್ನೆಲ್ಲ ವಿಚಾರಿಸುತ್ತಾರೆ. ಈ ವ್ಯವಸ್ಥೆಯಿಂದ ಯಾವ ಪ್ರಯಾಣಿಕನಾದರೂ ಸರಿ, ಕೈಯಲ್ಲಿ ಚಿನ್ನ ಹಿಡಿದ್ದಿದರೂ ಸುರಕ್ಷಿತವಾಗಿ ದಾರಿ ಸಾಗಿಸಬಹುದು.

ದಾರಿಯ ಉದ್ದಕ್ಕೂ ಅಲ್ಲಲ್ಲಿ ಅಕ್ಕಿ ದೊರೆಯುತ್ತದೆ. ಐದಾರು ಕುಕ್ಕೆಗಳಷ್ಟು ಅಕ್ಕಿಯನ್ನು ಕೊಂಡು, ನಲವತ್ತು ಐವತ್ತು ದಾಪುಗಳ ದೂರದಲ್ಲಿ ಕುಕ್ಕೆಗಳನ್ನೂ ಅವುಗಳ ಬಳಿ ಎರಡು ಅಡಿ ಉದ್ದ ಒಂದು ಅಂಗುಲ ದಪ್ಪದ ಐದಾರು ಕೋಲುಗಳನ್ನು ಇಟ್ಟು ಮುಂದೇನಾಗುವುದೆಂದು ನೋಡುತ್ತ ಸ್ವಲ್ಪ ದೂರದಲ್ಲಿ ನಿಲ್ಲಬೇಕು. ಕೋತಿ ಗಳು ಕಾಡಿನಿಂದ ಹೊರಟು ಅಕ್ಕಿಯ ಕುಕ್ಕೆಗಳ ಬಳಿಗೆ ಬರುತ್ತವೆ. ಅರ್ಧ ಗಂಟೆಯ ಕಾಲ ಅವು ಒಂದನ್ನೊಂದು ಅಣಕಿಸುತ್ತಾ ಇದ್ದು, ಕೊನೆಗೆ ಅಕ್ಕಿಯನ್ನು ತಿನ್ನಲು ಸನ್ನಾಹ ಮಾಡುತ್ತವೆ. ಹೆಣ್ಣು ಕೋತಿಗಳು, ಅದರಲ್ಲಿಯೂ ಮರಿಯನ್ನು ಇರುಕಿದ ಹೆಣ್ಣು ಕೋತಿಗಳು, ಗಂಡು ಕೋತಿಗಳಿಗಿಂತ ಹೆಚ್ಚು ಧೈರ್ಯವಾದವುಗಳು. ದಾರಿಯ ಒಂದು ಕಡೆಯ ಕೋತಿಗಳು ಮುಂದೆ ಹೋಗಿ ಕುಕ್ಕೆಗಳನ್ನು ಸಮೀಪಿಸಿದ ಕೂಡಲೇ ಇನ್ನೊಂದು ಕಡೆಯ ಕೋತಿಗಳು ಬಂದು ಅವುಗಳನ್ನು ಕಚ್ಚುತ್ತವೆ. ಸರಿ, ಒಂದ ಕ್ಕೊಂದು ಜಗಳ ಶುರುವಾಗಿಬಿಡುತ್ತದೆ. ಅಲ್ಲಿಯೇ ಇರುವ ಕೋಲುಗಳನ್ನು ಹಿಡಿದು

ಚಚ್ಚಾಡುತ್ತವೆ. ಸೋತ ಕೋತಿಗಳು ಕಾಡಿನೊಳಕ್ಕೆ ಓಡಿಹೋಗುತ್ತವೆ. ತಲೆ ಒಡೆದು ರಕ್ತ ಸೋರುತ್ತಾ ಕಿರ್ರೊ ಎಂದು ಕಿರಿಚಿಕೊಳ್ಳುತ್ತಿರುತ್ತವೆ. ಗೆದ್ದ ಕೋತಿಗಳು ಕುಕ್ಕೆಗಳಲ್ಲಿರುವ ಅಕ್ಕಿಯನ್ನು ತಿನ್ನುತ್ತವೆ. ಕೊನೆಕೊನೆಗೆ ಹೋಗಲಿ ಎಂದು ಎದುರು ಪಕ್ಷದ ಹೆಣ್ಣು ಕೋತಿಗಳಿಗೆ ಅಕ್ಕಿ ತಿನ್ನಲು ಅವಕಾಶ ಮಾಡಿಕೊಡುತ್ತವೆ.

ನಾವು ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ೨೩ನೇ ತಾರೀಖು ಒಂಬತ್ತು ಹರಿದಾರಿ ನಡೆದು, ಕೌರುವ[1] ಎಂಬಲ್ಲಿ ಬೀಡುಬಿಟ್ಟೆವು. ಇಲ್ಲಿ ನಮ್ಮ ಊಟೋಪಚಾರಕ್ಕಾಗಲಿ, ಎತ್ತು ಮತ್ತು ಕುದುರೆಗಳ ಮೇವಿಗಾಗಲಿ ಏನೂ ಸಿಕ್ಕಲಿಲ್ಲ. ಕೌರುವ ಅಷ್ಟು ಇಷ್ಟು ಹೆಸರಾದ ದೇವಸ್ಥಾನ[2]. ಇಲ್ಲಿ ಇರುವಾಗ ಕೌರುವಾಕ್ಕೆ ಹತ್ತಿರದಲ್ಲಿರುವ ಬೆಟ್ಟದ ಮೇಲೆ ಬೀಡುಬಿಟ್ಟಿದ್ದ ಮೀರ್ ಜುಮ್ಲಾನ ಮುಖ್ಯ ಕ್ಯಾಪ್ಟನ್ (ದಂಡನಾಯಕ) ಒಂದು ಪಾಳೆಯುವನ್ನು ಗೆದ್ದುಕೊಳ್ಳಲು ಹೋಗುತ್ತಿದ್ದ. ಅವನ ಸೈನ್ಯದ ಹಲವಾರು ತುಕಡಿಗಳನ್ನು ನೋಡಿದೆವು. ಕೆಲವು ಸಿಪಾಯಿಗಳು ಕೈಭಲ್ಲೆಗಳನ್ನೂ (handpikes), ಕೆಲವರು ಬಂದೂಕುಗಳನ್ನೂ, ಮತ್ತೆ ಕೆಲವರು ಕೋಲುಗಳನ್ನೂ ಹಿಡಿದಿದ್ದರು. ಇಲ್ಲಿಯ ಹವೆ ತುಂಬ ಹಿತಕರವಾಗಿತ್ತು. ಇದಕ್ಕೆ ಕಾರಣ, ಇಲ್ಲಿರುವ ಅಸಂಖ್ಯಾತ ಮರಗಳು ಮತ್ತು ಕೆರೆಕಟ್ಟೆಗಳು.

ಮೀರ್ ಜುಮ್ಲಾನ ಕ್ಯಾಪ್ಟನ್ ಇಷ್ಟು ಹತ್ತಿರದಲ್ಲಿರುವನೆಂದು ಕೇಳಿದಾಗ, ನಾವು ಅವನನ್ನು ಕಂಡುಬರೋಣವೆಂದು ಅವನಿರುವಲ್ಲಿಗೆ ಹೋದೆವು. ಅವನು ತನ್ನ ಡೇರೆಯೊಳಗೆ ಅನೇಕ ಸರದಾರರೊಡಗೂಡಿ ಕುಳಿತಿದ್ದ. ಈ ಸರದಾರರು ಬಹುತೇಕ ವಿಗ್ರಹಾರಾಧಕರು. ನಾವು ಅವನಿಗೆ ಸಲಾಂ ಹೇಳಿ, ಬೆಳ್ಳಿಯಿಂದ ಮಾಡಿದ ಒಂದು ಜೊತೆ ಪಿಸ್ತೂಲುಗಳನ್ನು ಅರ್ಪಿಸಿದೆವು ಅಲ್ಲದೆ, ಕೆಂಪು ಬಣ್ಣದ ಎರಡು ಗಜ ಡಚ್ ಬಟ್ಟೆ ಕೊಟ್ಟೆವು. ಆತ ನಾವು ಬಂದ ಉದ್ದೇಶವೇನೆಂದು ಕೇಳಿದ. ಮೀರ್ ಜುಮ್ಲಾನನ್ನು ನೋಡಲು ಬಂದಿದ್ದೇವೆಂದು ನಾವು ತಿಳಿಸಿದೆವು. ನಾವು ಡಚ್ಚರೆಂದು ಆತನ ಭಾವನೆಯಾಗಿತ್ತು. ಆದರೆ ನಾವು ಫ್ರೆಂಚರೆಂದು ತಿಳಿದಾಗ ಅವರ ಬಗ್ಗೆ ಹೆಚ್ಚು ವಿಚಾರ ತಿಳಿದುಕೊಳ್ಳಲು ಆತ ನಮ್ಮನ್ನು ಇರಿಸಿಕೊಂಡು, ಊಟಕ್ಕೆ ಏರ್ಪಡಿಸಿದ. ಒಂದು ಸೋಫ್ರಾ (Sofra=Sufra : ಊಟದ ಬಟ್ಟೆ) ಹಾಸಿದರು. ವಿಗ್ರಹಾರಾಧಕರಾದ ಸರದಾರರು ಹೊರಟುಹೋದರು. ಏಕೆಂದರೆ, ಅವರು ಮುಹಮ್ಮದೀಯರು ಮಾಡಿದ ಅಡಿಗೆ

---

[1] ಕೌರುವ (Courua) : ಟಾವರ್ನ್ಯೇ ಪುಲಿಕಾಟ್ ಸರಹದ್ದಿನಲ್ಲಿ ಸಂಚರಿಸುತ್ತಿರುವ ಈ ಸಂದರ್ಭದಲ್ಲಿ ಸಮೀಪದ ತಿರುಪತಿಗೆ ೧೨ ಮೈಲಿ ದೂರದಲ್ಲಿರುವ ಒಂಟಿಮಾನ್ ಕೂರ್ವ ಗ್ರಾಮವನ್ನು ಸೂಚಿಸುವಂತೆ ಕಾಣುತ್ತದೆ.

[2] ಇದು ತಿರುಪತಿ ಬೆಟ್ಟದ ತಪ್ಪಲಿನ ಕೆಳತಿರುಪತಿ ಅಥವಾ ಗೋವಿಂದರಾಜ ಪಟ್ಟಣ ಇರಬಹುದು.

ಊಟಮಾಡುವುದಿಲ್ಲ. ಊಟಮಾಡಲು ನನ್ನದೇನು ಅಭ್ಯಂತರವಿಲ್ಲವೆಂದು ತಿಳಿದು ಕೊಂಡ ಆತ ನನಗೆ ಒತ್ತಾಯಮಾಡಿ 'ಪಿಲ್ಲಾವ್' ಅನ್ನವನ್ನು ಬಡಿಸಿ ಊಟಮಾಡಿಸಿದ. ಮಾರನೆಯ ದಿನ ಇದ್ದು ಆನೆಬೇಟೆ ನೋಡಿಕೊಂಡು ಹೋಗಿರೆಂದು ಹೇಳಿದ. ಆದರೆ ನಾವು ಕಾಲ ವ್ಯರ್ಥಮಾಡಬಾರದೆಂದುಕೊಂಡು ಅಲ್ಲಿ ನಿಲ್ಲದೆ ಹೊರಟುಬಿಟ್ಟೆವು.

ಆರೇಳು ದಿನಗಳ ಹಿಂದೆ ಐದು ಆನೆಗಳನ್ನು ಹಿಡಿದಿದ್ದರಂತೆ. ಇವುಗಳಲ್ಲಿ ಮೂರು ಆನೆಗಳು ತಪ್ಪಿಸಿಕೊಂಡಿದ್ದುವಂತೆ. ತಪ್ಪಿಸಿಕೊಂಡ ಆನೆಗಳನ್ನು ಹಿಡಿಯಲು ಏರ್ಪಾಡು ನಡೆಯುತ್ತಿತ್ತು. ಆನೆಗಳನ್ನು ಹಿಡಿಯುವ ಕೆಲಸದಲ್ಲಿ ತೊಡಗಿದ್ದಾಗ ಹತ್ತು ಹನ್ನೆರಡು ಜನ ಬಡರೈತರು ಆನೆಗಳಿಗೆ ಸಿಕ್ಕಿ ಸತ್ತರೆಂದು ತಿಳಿದುಬಂದಿತು. ಆನೆಗಳನ್ನು ಹಿಡಿಯುವ ರೀತಿಯನ್ನು ನಾವು ತಿಳಿದುಕೊಂಡೆವು : ಕಾಡಿನಲ್ಲಿ ಮರಗಿಡಗಳನ್ನು ಕಡಿದು, ಸಲೀಸಾಗಿ ಹೋಗುವಂತಹ ದಾರಿಮಾಡಿ, ಆ ದಾರಿಯಲ್ಲಿ ಗುಂಡಿಗಳನ್ನು ತೋಡಿ, ಮೇಲೆ ಸೊಪ್ಪು ಸೆದೆಗಳಿಂದ ಗುಂಡಿಗಳು ಕಾಣದಂತೆ ಮುಚ್ಚುತ್ತಾರೆ. ಕಾಡಿನಲ್ಲಿರುವ ಆನೆಗಳನ್ನು ತಮಟೆ, ದೋಣು ಮುಂತಾದ ವಾದ್ಯಗಳನ್ನು ಬಡಿದು ಮತ್ತು ಬೆಂಕಿ ಹೊತ್ತಿಸಿದ ಬಾಣಗಳನ್ನು ಎಸೆದು ಬೆದರಿಸಿ ಆ ದಾರಿಯ ಕಡೆಗೆ ಅಟ್ಟುತ್ತಾರೆ. ಗುಂಡಿಗಳಿರುವುದನ್ನು ಕಾಣದ ಆನೆಗಳು ಅವುಗಳೊಳಕ್ಕೆ ಬಿದ್ದು ಮೇಲೆ ಬರಲು ಒದ್ದಾಡುತ್ತವೆ. ಆಗ ಕಬ್ಬಿಣದ ಸರಪಳಿಗಳನ್ನು ಆನೆಗಳ ಹೊಟ್ಟೆಗೂ ಕಾಲುಗಳಿಗೂ ಬಿಗಿದು, ಅವುಗಳನ್ನು ಒಂದು ವಿಶೇಷ ವಿಧಾನದಿಂದ ಮೇಲಕ್ಕೆ ಎತ್ತುತ್ತಾರೆ. ಈ ರೀತಿ ಐದು ಆನೆಗಳನ್ನು ಹಿಡಿದರು. ಅವುಗಳಲ್ಲಿ ಮೂರು ಆನೆ ತಪ್ಪಿಸಿಕೊಂಡುವು. ತಪ್ಪಿಸಿಕೊಂಡ ಆನೆಗಳು ಮತ್ತೆ ಮೋಸಹೋಗಬಾರದೆಂದು ಮರದ ದೊಡ್ಡ ಕೊಂಬೆಯೊಂದನ್ನು ಮುರಿದು ಸೊಂಡಲಿನಲ್ಲಿ ಹಿಡಿದು, ಹೆಜ್ಜೆ ಇಡುವ ಮುನ್ನ ಕೊಂಬೆಯಿಂದ ನೆಲ ಬಡಿದು ಗುಂಡಿ ಪಂಡಿಗಳಿಲ್ಲವೆಂದು ಮಂದಟ್ಟುಮಾಡಿಕೊಂಡು ಮುಂದೆ ಸಾಗುತ್ತವೆಯಂತೆ. ಈ ಕಾರಣದಿಂದ ತಪ್ಪಿಸಿಕೊಂಡ ಆನೆಗಳನ್ನು ಮತ್ತೆ ಹಿಡಿಯುವುದು ಬಹಳ ಕಷ್ಟ ಎಂದು ಬೇಟೆಗಾರರು ನಮಗೆ ಹೇಳಿದರು. ಆನೆಗಳು ಈ ರೀತಿ ಎಚ್ಚರಿಕೆ ವಹಿಸುವ ವಿಚಿತ್ರ ರೀತಿಯನ್ನು ನೋಡುವ ಅವಕಾಶ ಖಂಡಿತ ದೊರೆಯುವುದಿದ್ದರೆ ನಮ್ಮ ಕೆಲಸ ಎಷ್ಟೇ ತುರ್ತಿನದಾಗಿದ್ದರೂ ಎರಡು ಮೂರು ದಿನ ನಿಂತು ಅದನ್ನು ನೋಡಿಕೊಂಡೇ ಹೋಗುತ್ತಿದ್ದೆವು. ಆದರೆ ಅದು ಖಚಿತವಿರಲಿಲ್ಲ.

ನಾವು ಆಗಸ್ಟ್ ೨೭ನೇ ತಾರೀಖು ನಮ್ಮನ್ನು ಸತ್ಕರಿಸಿದ ಸರದಾರನಿಂದ ಬೀಳ್ಕೊಂಡು ಎರಡು ಗಂಟೆಗಳ ಪ್ರಯಾಣಮಾಡುವಲ್ಲಿ, ಒಂದು ಹಳ್ಳಿಯ ಬಳಿ ಹಿಡಿದ ಆನೆಗಳಲ್ಲಿ ತಪ್ಪಿಸಿಕೊಳ್ಳದೆ ಉಳಿದಿದ್ದ ಎರಡು ಆನೆಗಳನ್ನು ಪಳಗಿದ ಆನೆಗಳ ಮಧ್ಯೆ ಸೇರಿಸಿ ಕರೆದುಕೊಂಡು ಹೋಗುತ್ತಿದ್ದುದನ್ನು ಕಂಡೆವು. ಆನೆಗಳಿಗೆ ಅದು ಇದು ಮೇವು ಕೊಟ್ಟು ತಿನ್ನು ಎಂದು ಹೇಳುತ್ತಿದ್ದರು. ತಿನ್ನದೆಹೋದಾಗ ಪಳಗಿದ ಆನೆಗಳು ಮಾವುತನ ಸನ್ನೆಯಂತೆ ತಲೆಯ ಮೇಲೆ ಮತ್ತು ಸೊಂಡಲಿನ ಮೇಲೆ ಬಡಿಯುತ್ತಿದ್ದುವು.

ಹಿಡಿದ ಆನೆ ರೇಗಿ ತಿರುಗಿಬಿದ್ದರೆ ಇನ್ನೊಂದು ಆನೆ ಪಕ್ಕದಿಂದ ಹೊಡೆಯುತಿತ್ತು. ಅನಿವಾರ್ಯವಾಗಿ ಕಾಡಾನೆ ಹೇಳಿದಂತೆ ಕೇಳುತಿತ್ತು.

ಆನೆಗಳ ವಿಚಾರ ಪ್ರಸ್ತಾಪಮಾಡುವಾಗ ಈ ಪ್ರಾಣಿಗಳ ಸ್ವಭಾವವನ್ನು ಕುರಿತು ಒಂದು ವಿಷಯ ಹೇಳಬೇಕೆನಿಸುತ್ತದೆ. ಹಿಡಿದು ಪಳಗಿಸಿದ ಗಂಡಾನೆ ಹೆಣ್ಣಾನೆಯನ್ನು ಕೂಡುವುದಿಲ್ಲ[1]. ಆದರೂ ಅದಕ್ಕೆ ಒಮ್ಮೊಮ್ಮೆ ಮಸ್ತ್ ಬರುತ್ತದೆ. ಒಮ್ಮೆ ಷಾಜಹಾನ ಆನೆಯ ಮೇಲೆ ಕುಳಿತು ಬೇಟೆಯಾಡುತ್ತಿರುವಾಗ ಆನೆಗೆ ಮಸ್ತ್ ಬಂದುಬಿಟ್ಟಿತು. ಆನೆಯ ಮೇಲೆ ಷಾಜಹಾನನ ಜೊತೆ ಅವನ ಮಗನು ತಂದೆಗೆ ಬೀಸಣಿಗೆ ಬೀಸುತ್ತಾ ಕುಳಿತಿದ್ದ. ಮಸ್ತ್ ಬಂದ ಆನೆಯನ್ನು ಹತೋಟಿಯಲ್ಲಿಡುವುದು ಮಾವುತನಿಗೆ ಬಹಳ ಕಷ್ಟವಾಗಿಕಂಡಾಗ ಆತ ರಾಜನಿಗೆ ಹೇಳಿದ, ಅದರ ರೋಷವನ್ನು ಶಮನಮಾಡದಿದ್ದರೆ ಅದು ಕುಳಿತವರನ್ನು ಮರಗಳ ಮಧ್ಯೆ ಕೊಂಡೊಯ್ದು ಅಲ್ಲಿ ಕೊಂದುಬಿಡುವುದು ಖಂಡಿತ ; ಹಾಗೆ ಆಗುವ ಬದಲು ತಾನು ಆನೆಗೆ ಆಹುತಿಯಾಗಲು ಅಪ್ಪಣೆ ಕೊಡಬೇಕು ಎಂಬುದಾಗಿ. ತನ್ನ ಹೆಂಡತಿ ಮಕ್ಕಳನ್ನು ಕಾಪಾಡಬೇಕೆಂದು ಆ ಮಾವುತ ರಾಜನನ್ನೂ ಅವನ ಮಗನನ್ನೂ ಬೇಡಿಕೊಂಡ. ರಾಜ ಆಗಲಿ ಎಂದ. ಆ ಕೂಡಲೇ ಮಾವುತ ಕೆಳಕ್ಕೆ ಬಿದ್ದುಬಿಟ್ಟ. ಅವನನ್ನು ಆನೆ ತನ್ನ ಸೊಂಡಿಲಿನಿಂದ ಹಿಡಿದು ಕಾಲ ಕೆಳಗೆ ಹಾಕಿಕೊಂಡು ಒಸಗಿ ತನ್ನ ರೋಷವನ್ನು ತೀರಿಸಿಕೊಂಡು ಶಾಂತವಾಯಿತು. ಆ ಬಡಬಾಯಿ ಮಾವುತನಿಗೆ ಹೆಂಡತಿಯೂ ಮೂರು ಮಕ್ಕಳೂ ಇದ್ದರು. ಮಾವುತನ ಉಪಕಾರಕ್ಕಾಗಿ ಷಾಜಹಾನ ಅವರಿಗೆ ೧೦,೦೦೦ ರೂಪಾಯಿಗಳನ್ನು ಕೊಟ್ಟುದಲ್ಲದೆ, ಮಕ್ಕಳನ್ನು ಆಸ್ಥಾನದಲ್ಲಿ ಕೆಲಸಕ್ಕೆ ನೇಮಿಸಿಕೊಂಡನು.

ಇನ್ನೊಂದು ವಿಷಯ, ಆನೆಯ ಚರ್ಮ. ಆನೆ ಬದುಕಿರುವಾಗ ಅದರ ಚರ್ಮ ಬಹಳ ಒರಟಾಗಿ ಕಂಡರೂ ಸತ್ತ ಮೇಲೆ ಬಹು ಮೃದುವಾಗುತ್ತದೆ, ಹಕ್ಕಿಯುಂಟನಂತೆ. ಮತ್ತೊಂದು ವಿಷಯವೇನೆಂದರೆ, ಹೆಣ್ಣಾನೆ ಕೆಲವು ಋತುಗಳಲ್ಲಿ ಹುಲ್ಲು ಸೊಪ್ಪು ಸೆದೆಗಳನ್ನು ಶೇಖರಿಸಿ ನಾಲ್ಕೈದು ಅಡಿ ಎತ್ತರದ ಹಾಸಿಗೆ ಮಾಡಿಕೊಂಡು ಗಂಡಾನೆಗಾಗಿ ಕಾಯುತ್ತದೆ ಎಂಬುದು. ಮಲಗಿಕೊಂಡು ಗಂಡಾನೆಗಾಗಿ ಕೂಗುತ್ತದೆಯಂತೆ ಈ ರೀತಿ ಬೇರೆ ಪ್ರಾಣಿಗಳು ಮಾಡುವುದಿಲ್ಲ.

ನಾನು ಆನೆಗಳ ಬಗ್ಗೆ ಎಷ್ಟೋ ವಿಚಾರಗಳನ್ನು ತಿಳಿದುಕೊಂಡರೂ ಅವು ಎಷ್ಟು ಕಾಲ ಬದುಕುತ್ತವೆ ಎಂಬ ವಿಚಾರವನ್ನು ಸರಿಯಾಗಿ ತಿಳಿಯಲಾಗಲಿಲ್ಲ. ಆನೆಗಳನ್ನು ಸಾಕುವವರನ್ನು ಕೇಳಿದರೆ, ಅವರು ಅವರ ಅಪ್ಪನ ಕಾಲದಿಂದ ಮತ್ತು ತಾತನ ಕಾಲದಿಂದ ಅದೇ ಆನೆ ಇದೆ ಎಂದು ಹೇಳುತ್ತಾರೆಯೇ ಹೊರತು, ಇಷ್ಟು ವರ್ಷ ಎಂದು

---

[1] ಈ ರೀತಿ ನಂಬಿಕೆಯಿದ್ದರೂ, ಪಳಗಿದ ಆನೆಗಳು ಕೂಡಿ ಮರಿಹಾಕಿದ ನಿದರ್ಶನಗಳಿವೆ. ಮೈಸೂರಿನ ಮೃಗಾಲಯದಲ್ಲಿ ಇಂಥ ಆನೆಗಳು ಮರಿಹಾಕಿದ್ದು ತಿಳಿದುಬಂದಿದೆ,

ಹೇಳುವುದಿಲ್ಲ. ಅವರು ಹೇಳುವುದನ್ನೆಲ್ಲಾ ಲೆಕ್ಕಾಚಾರಹಾಕಿ ನೋಡುವಲ್ಲಿ ಆನೆಯ ವಯಸ್ಸು ೧೨೦ ರಿಂದ ೧೩೦ ವರ್ಷಗಳೆಂದು ಕಾಣುತ್ತದೆ.

ಇಂಡಿಯಾ ದೇಶವನ್ನು ಕುರಿತು ಬರೆದ ಪ್ರವಾಸಿಗಳು ಮೊಗಲ್ ಚಕ್ರವರ್ತಿಯ ಬಳಿ ಮೂರು ನಾಲ್ಕು ಸಾವಿರ ಆನೆಗಳಿವೆಯೆಂದು ಸಲೀಸಾಗಿ ಹೇಳಿಬಿಡುತ್ತಾರೆ. ಹಾಲಿ ಜಹಾನಾಬಾದಿನಲ್ಲಿ ಬಿಡಾರಮಾಡಿರುವ ಮೊಗಲ್ ಚಕ್ರವರ್ತಿಯ ಬಳಿ ಆನೆಗಳ ಮೇಲ್ವಿಚಾರಣೆ ನೋಡಿಕೊಳ್ಳುವವನನ್ನು ಕೇಳಿದಾಗ ಆತ ಕೇವಲ ೫೦೦ ಆನೆಗಳು ಮಾತ್ರ ಇವೆ ಎಂದು ಹೇಳಿದ. ಇವನ್ನು ಅರಮನೆಯ ಆನೆಗಳೆಂದು ಕರೆಯುತ್ತಾರೆ. ಏಕೆಂದರೆ, ಇವನ್ನು ಅರಮನೆಯ ರಾಣೀವಾಸದ ಸಾಮಾನುಸರಂಜಾಮುಗಳನ್ನು ಸಾಗಿಸುವುದಕ್ಕೂ, ಅವರ ಸವಾರಿಗೂ ಉಪಯೋಗಿಸುತ್ತಾರೆ. ಯುದ್ಧಕ್ಕಾಗಿ ಎಂಬತ್ತು ತೊಂಬತ್ತು ಆನೆಗಳನ್ನು ಮಾತ್ರ ಇಟ್ಟಿದ್ದಾರೆ. ಪ್ರತಿ ಆನೆಯ ಖರ್ಚಿಗೆ ಇಷ್ಟು ರೂಪಾಯಿಗಳೆಂದು ನಿಗದಿಯಾಗಿರುತ್ತದೆ. ಬಹಳ ಬಲಶಾಲಿಯಾದ ಆನೆಯನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ರಾಜನ ಮಗನಿಗೆ ವಹಿಸಲಾಗಿದೆ. ಅದರ ಮೇವು, ತಿಂಡಿ ತೀರ್ಥ ಹಾಗೂ ಮಾವುತನ ಖರ್ಚಿಗೆಂದು ತಿಂಗಳಿಗೆ ೫೦೦ ರೂಪಾಯಿಗಳನ್ನು ಕೊಡಲಾಗುತ್ತದೆ. ಉಳಿದ ಆನೆಗಳ ಖರ್ಚಿಗೆಂದು ತಿಂಗಳಿಗೆ ೨೦ ರೂಪಾಯಿಗಳಿಂದ ೪೦೦ ರೂಪಾಯಿಗಳ ವರೆಗೂ ಕೊಡಲಾಗುವುದು. ಈ ಆನೆಗಳೆಲ್ಲಾ ಪಟ್ಟಣದಲ್ಲಿ ಇರುವುದಿಲ್ಲ. ಬಹುತೇಕ ಆನೆಗಳನ್ನು ದಿನಾ ಬೆಳಿಗ್ಗೆ ಹಳ್ಳಿಗಳ ಕಡೆ ತೆಗೆದುಕೊಂಡುಹೋಗಿ ಮರಗಿಡಗಳ ಸೊಪ್ಪನ್ನೂ, ಕಬ್ಬು ಮುಂತಾದ ರೈತರು ಬೆಳೆಸ ಬೆಳೆಗಳನ್ನೂ ತಿನ್ನಿಸುತ್ತಾರೆ. ಈ ಆನೆಗಳಿಂದಾಗಿ ರೈತರಿಗೆ ಬಹಳ ಕಷ್ಟ. ಹೊರಗಡೆ ಎಷ್ಟು ಮೇವನ್ನು ಆನೆಗಳಿಗೆ ಒದಗಿಸಿದರೆ ಅಷ್ಟೂ ಉಳಿತಾಯ, ಆನೆಗಳನ್ನು ಸಾಕುವುದಕ್ಕೆ ಕೊಟ್ಟ ಖರ್ಚಿನಲ್ಲಿ.

ನಾವು ನಮ್ಮ ದಾರಿ ಸಾಗಿಸಿ ೬ನೇ ತಾರೀಖು ಔಟಮೆದ (Ootemeda–Vontimitta–ಕಡಪ್ಪಾ ಜಿಲ್ಲೆಯ ಒಂಟಿಮಿತ) ಎಂಬ ಊರಿಗೆ ಬಂದೆವು.

ಇಡೀ ಇಂಡಿಯಾದಲ್ಲೆಲ್ಲಾ ಭವ್ಯವೆಂದು ಹೆಸರಾದ ದೇವಸ್ಥಾನಗಳಲ್ಲಿ ಒಂದು ಇಲ್ಲಿದೆ[1]. ಈ ದೇವಸ್ಥಾನದಿಂದ ಐನೂರು ದಾಪುಗಳಷ್ಟು ದೂರದಲ್ಲಿ ಒಂದು ದೊಡ್ಡ ಕೊಳ ಇದೆ. ಕೊಳದ ಸುತ್ತ ಎಂಟು ಹತ್ತು ಅಡಿ ಚಚ್ಚೌಕವಾದ ಗುಡಿಗಳಿವೆ. ಕೊಳದ ಬಳಿ ಒಬ್ಬ ಬ್ರಾಹ್ಮಣ (Brahmin) ಇರುತ್ತಾನೆ. ಬ್ರಾಹ್ಮಣೇತರರು ಕೊಳದಲ್ಲಿ ಸ್ನಾನಮಾಡದಂತೆಯೂ, ಬಟ್ಟೆ ಬರೆಗಳನ್ನು ಒಗೆಯದಂತೆಯೂ ನೋಡಿಕೊಳ್ಳುವುದು ಇವನ ಕೆಲಸ. ಯಾರಿಗಾದರೂ ನೀರು ಬೇಕಾದರೆ ಮಣ್ಣಿನ ಪಾತ್ರೆಯಲ್ಲಿ ನೀರು ಹಾಕುತ್ತಾನೆ. ಅಕಸ್ಮಾತ್ ಈ ಮಣ್ಣಿನ ಪಾತ್ರೆಯನ್ನು ಬೇರೆಯವರು ಮುಟ್ಟಿಬಿಟ್ಟರೆ ಅದನ್ನು ಒಡೆದುಹಾಕುತ್ತಾನೆ. ಬ್ರಾಹ್ಮಣೇತರನೊಬ್ಬ ಅಕಸ್ಮಾತ್ ಕೊಳದಲ್ಲಿ ಸ್ನಾನ

---

[1] ಇದು ಅಲ್ಲಿಯ ಕೋದಂಡರಾಮಸ್ವಾಮಿ ದೇವಸ್ಥಾನ.

ಮಾಡಿಬಿಟ್ಟರೆ ಇಡೀ ಕೊಳದ ನೀರನ್ನು ಹೊರಕ್ಕೆ ತೆಗೆದುಹಾಕುತ್ತಾರೆ. ಆದರೆ ಹಸಿದು ಬಂದವರಿಗೆ ತಮ್ಮಲ್ಲಿ ಇರುವ ಅನ್ನಪಾನಗಳನ್ನು ಕೊಟ್ಟು ತೃಪ್ತಿಪಡಿಸುತ್ತಾರೆ.

ದಾರಿಯಲ್ಲಿ ಹೋಗುವಾಗ ಅಲ್ಲಲ್ಲಿ ಹೆಂಗಸರು ಕುಳಿತುಕೊಂಡಿದ್ದು ದಾರಿಹೋಕರಿಗೆ ಹೊಗೆಬತ್ತಿ ಹೊತ್ತಿಸಿಕೊಳ್ಳಲು ಬೆಂಕಿ ಕೊಡುತ್ತಾರೆ. ಹೊಗೆಸೊಪ್ಪು ಇಲ್ಲದವರಿಗೆ ಸೇದಲು ಹುಕ್ಕ ಕೊಡುತ್ತಾರೆ. ಮತ್ತೆ ಕೆಲವು ಹೆಂಗಸರು ಅನ್ನವನ್ನೂ ಕಿಚಿರಿಯನ್ನೂ ಬೇಯಿಸಿ ಕೊಡುತ್ತಾರೆ. ಹೀಗೆ ಮಾಡುವ ಹೆಂಗಸರಲ್ಲಿ ಕೆಲವರು ಏಳೆಂಟು ವರುಷಗಳ ಕಾಲ ಈ ತರಹ ಸೇವೆ ಸಲ್ಲಿಸುವುದಾಗಿ ಹರಕೆ ಮಾಡಿಕೊಂಡಿರುತ್ತಾರಂತೆ. ಕೆಲವು ಹೆಂಗಸರು ಹೆದ್ದಾರಿ ಮತ್ತು ಹೊಲ ಗದ್ದೆಗಳಲ್ಲಿ ಕುದುರೆ, ಎತ್ತು ಮತ್ತು ಹಸುಗಳ ಹಿಂದೆ ತಿರುಗುತ್ತಿರುತ್ತಾರೆ. ಆ ಪ್ರಾಣಿಗಳು ಹಾಕಿದ ಲದ್ದಿ ಮತ್ತು ತೊಪ್ಪೆಗಳಲ್ಲಿ ಜೀರ್ಣ ವಾಗದ ಕಾಳು ಕಡ್ಡಿಗಳನ್ನು ಆಯ್ದು ತಿನ್ನುತ್ತಾರೆ. ಹೀಗೆ ಮಾಡುತ್ತೇವೆಂದು ಇವರು ಹರಕೆ ಮಾಡಿಕೊಂಡಿರುತ್ತಾರಂತೆ. ನಮ್ಮಲ್ಲಿ ಸಿಕ್ಕುವ ಬಾರ್ಲಿ ಮತ್ತು ಓಟ್ಸ್ (Barley and Oats) ಇಲ್ಲಿ ದೊರೆಯುವುದಿಲ್ಲವಾದ್ದರಿಂದ ದನಗಳಿಗೆ ಹುರುಳಿ ತಿನ್ನಿಸುತ್ತಾರೆ. ಈ ಹುರುಳಿಯನ್ನು ಬೀಸುವಕಲ್ಲಿನಲ್ಲಿ ಒಡೆದು, ಅರ್ಧ ಗಂಟೆ ಹೊತ್ತು ನೆನೆ ಹಾಕಿ ತಿನ್ನಿಸುತ್ತಾರೆ. ಕುದುರೆಗಳಿಗೆ ಪ್ರತಿ ದಿನ ಸಂಜೆ ಹುರುಳಿ ತಿನ್ನಿಸುತ್ತಾರೆ. ಬೆಳಗಿನ ಹೊತ್ತು ಎರಡು ಪೌಂಡು ಕಪ್ಪಗಿರುವ ಅಂಟುಬೆಲ್ಲವನ್ನು ಅಷ್ಟೇ ತೂಕದ ಹಿಟ್ಟು ಮತ್ತು ಒಂದು ಪೌಂಡು ಬೆಣ್ಣೆಯಲ್ಲಿ ಸೇರಿಸಿ ಮಿದಿದು ಉಂಡೆಮಾಡಿ ಬಾಯೊಳಗೆ ಹಾಕುತ್ತಾರೆ. ತಿನ್ನಿಸಿದ ಮೇಲೆ ಕುದುರೆಯ ಬಾಯಿ ಮತ್ತು ಹಲ್ಲುಗಳನ್ನು ತೊಳೆಯುತ್ತಾರೆ, ಬೇಡವಾದ ರುಚಿ ಬಾಯಲ್ಲಿ ಉಳಿಯಬಾರದು ಎಂದು. ಹಗಲು ಹೊತ್ತು (ಗರಿಕೆ) ಹುಲ್ಲನ್ನು ಗೆಡ್ಡೆ ಸಮೇತ ಕಿತ್ತು ಚೆನ್ನಾಗಿ ತೊಳೆದು ತಿನ್ನಿಸುತ್ತಾರೆ.

ಸೆಪ್ಟೆಂಬರ್ ೧೮ರಂದು ಆರು ಹರಿದಾರಿಗಳಷ್ಟು ದೂರ ಮಾತ್ರ ಪ್ರಯಾಣಮಾಡಿ ಗಂಡಿಕೋಟೆ ತಲುಪಿ, ಅಲ್ಲಿ ಆ ದಿನ ಬಿಡಾರಮಾಡಿದೆವು. ಮೂರು ತಿಂಗಳ ಮುತ್ತಿಗೆಯ ನಂತರ ಈ ಊರನ್ನು ನವಾಬ ತನ್ನ ವಶಪಡಿಸಿಕೊಂಡು ಕೇವಲ ಎಂಟು ದಿನಗಳಾಗಿದ್ದುವು. ಡಚ್ಚರ ಸೈನ್ಯದಲ್ಲಿದ್ದ ಫ್ರೆಂಚನೊಬ್ಬ ಅವರ ಸೇವೆಯನ್ನು ತ್ಯಜಿಸಿ ನವಾಬನ ಕಡೆ ಬರದಿದ್ದರೆ ಈ ಊರನ್ನು ವಶಪಡಿಸಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲನಂತೆ. ಈ ಫ್ರೆಂಚನಲ್ಲದೆ ಇಂಗ್ಲಿಷ್, ಡಚ್ ಮತ್ತು ಇಟಾಲಿಯನ್ ಗೋಲಂದಾಜರೂ ನವಾಬನ ಕಡೆ ಇದ್ದರು. ಅವರೆಲ್ಲರೂ ಕೂಡಿ ಊರನ್ನು ವಶಪಡಿಸಿಕೊಳ್ಳಲು ಸಹಾಯಮಾಡಿದರು.

ಕರ್ನಾಟಿಕ್ (Karnatic) ರಾಜ್ಯದಲ್ಲಿರುವ ಸುಭದ್ರ ಊರುಗಳಲ್ಲಿ ಗಂಡಿ ಕೋಟೆಯೂ ಒಂದು. ಊರು ಎತ್ತರವಾದ ಗುಡ್ಡದ ಮೇಲೆ ಇದೆ. ಅಲ್ಲಿಗೆ ಹತ್ತಿ ಹೋಗಲು ಇರುವ ದಾರಿ ಬಹಳ ಕಿಷ್ಕಿಂದ ; ಇಪ್ಪತ್ತು ಇಪ್ಪತ್ತೈದು ಅಡಿ ಅಗಲ ಅಷ್ಟೆ. ಕೆಲವು ಕಡೆ ಏಳೆಂಟು ಅಡಿಗಳು ಮಾತ್ರ. ಈಗ ನವಾಬ ದಾರಿಯನ್ನು ಅಗಲಮಾಡಿಸು ತ್ತಿದ್ದಾನೆ.

ಗಂಡಿಕೋಟೆಯ 'ರಾಜ' ವಿಗ್ರಹಾರಾಧಕರಲ್ಲಿ ಬಹಳ ಬಲಶಾಲಿಯೆಂದು ಹೆಸರಾಗಿದ್ದಾನೆ. ಅವನ ಬಳಿ ಎರಡೇ ಫಿರಂಗಿಗಳು ಇದ್ದುದು. ಒಂದು ಹನ್ನೆರಡು ಪೌಂಡುಗಳದ್ದು ; ಇನ್ನೊಂದು ಏಳೆಂಟು ಪೌಂಡುಗಳದ್ದು. ಹನ್ನೆರಡು ಪೌಂಡಿನ ಫಿರಂಗಿಯನ್ನು ಹೆಬ್ಬಾಗಿಲ ಮೇಲೂ, ಇನ್ನೊಂದನ್ನು ಒಂದು ತರಹ ಕೊತ್ತಲದ ಮೇಲೂ ಇಟ್ಟಿದ್ದರು. ರಾಜನ ಸೇವೆಯಲ್ಲಿದ್ದ ಫರಂಗಿ ಗೋಲಂದಾಜರನ್ನು ತನ್ನ ಕಡೆ ಮಾಡಿಕೊಳ್ಳದೆ ಗಂಡಿಕೋಟೆಯನ್ನು ವಶಮಾಡಿಕೊಳ್ಳುವುದು ಸಾಧ್ಯವಿಲ್ಲವೆಂದು ಅರಿತ ನವಾಬ (ಮೀರ್ ಜುಮ್ಲಾ) ಆ ಗೋಲಂದಾಜರಿಗೆ ಸಿಕ್ಕುತ್ತಿದ್ದುದಕ್ಕಿಂತ ನಾಲ್ಕು ತಿಂಗಳ ಸಂಬಳವನ್ನು ಹೆಚ್ಚಾಗಿ ಕೊಡುವುದಾಗಿ ಪುಸಲಾಯಿಸಿ, ಅವರು ತನ್ನ ಕಡೆ ಬರುವಂತೆ ಮಾಡಿದ. ಹೇಗಾದರೂ ಮಾಡಿ ತನ್ನ ಫಿರಂಗಿಗಳನ್ನು ಆ ಬೆಟ್ಟದ ಮೇಲಕ್ಕೆ ಸಾಗಿಸಬೇಕೆಂದು ಆ ಫರಂಗಿಗಳಿಗೆ ಹೇಳಿದ. ಇದರಲ್ಲಿ ಆ ಫರಂಗಿಗಳು ಯಶಸ್ವಿಯಾದರು. ಊರಿನ ಹೆಬ್ಬಾಗಿಲ ಫಿರಂಗಿಗಳನ್ನು ಹಾರಿಸಿ ಕೆಡವಿದಾಗ ಊರು ಶರಣಾಗತವಾಯಿತು.

ನಾವು ಇಲ್ಲಿಗೆ ಬಂದಾಗ ನವಾಬನ ಸೈನ್ಯವೆಲ್ಲ ಬೆಟ್ಟದ ಕೆಳಗೆ ಮೈದಾನದಲ್ಲಿ ಬೀಡುಬಿಟ್ಟಿತ್ತು. ಇಲ್ಲಿ ಒಳ್ಳೆಯ ನದಿಯೊಂದು ಹರಿಯುತ್ತದೆ. ನನ್ನನ್ನೂ ಜಾರ್ಡಿನ್ ಅವರನ್ನೂ ಕಂಡ ಒಬ್ಬ ಇಂಗ್ಲಿಷ್ ಗೋಲಂದಾಜ ನಾವು ಫರಂಗಿಯವರೆಂದು ಗುರುತು ಹಿಡಿದು, ನಮ್ಮ ಬಳಿಗೆ ಬಂದು, ರಾತ್ರಿ ತನ್ನೊಡನೆ ಇರಬೇಕೆಂದು ಕೇಳಿಕೊಂಡ.[1] ಅವನಿಂದ ತಿಳಿಯಿತು, ನವಾಬನ ಬಳಿ ಕ್ಲಾಡ್ ಮೈಲ್ಯೇ (Claude Maille) ಎಂಬ ಗೋಲಂದಾಜನಿದ್ದು, ನವಾಬನಿಗಾಗಿ ಫಿರಂಗಿಗಳನ್ನು ಎರಕಹೊಯ್ಯುತ್ತಿದ್ದಾನೆ ಎಂದು. ಈ ಮೈಲ್ಯೇ ನಮಗೆ ಹಿಂದೆ ಬಟೇವಿಯಾದಲ್ಲಿ ಪರಿಚಯವಾಗಿದ್ದ. ಅವನನ್ನು ನೋಡಲು ಬೆಟ್ಟ ಹತ್ತಿ ಪಟ್ಟಣಕ್ಕೆ ಹೋದೆವು ನಮ್ಮನ್ನು ಕಂಡು ಆತನಿಗೆ ತುಂಬ ಸಂತೋಷವಾಯಿತು. ನಾವು ಬಂದಿರುವ ವಿಚಾರ ನವಾಬನಿಗೂ ಗೊತ್ತಾಗಿ, ಆತ ನಮ್ಮ ಬಿಡಾರಕ್ಕೂ ಮತ್ತು ಊಟೋಪಚಾರಕ್ಕೂ ವ್ಯವಸ್ಥೆ ಮಾಡುವಂತೆ ಅಪ್ಪಣೆ ಮಾಡಿದ್ದ. ನಮಗಷ್ಟೇ ಅಲ್ಲದೆ, ನಮ್ಮ ಕುದುರೆಗಳಿಗೂ ಎತ್ತುಗಳಿಗೂ ಮೇವು ನೀರಿನ ಏರ್ಪಾಡು ಮಾಡಲಾಗಿತ್ತು.

ಮಾರನೆಯ ದಿನ (೩ನೇ ತಾರೀಖು) ನಾವು ನವಾಬನನ್ನು ಕಾಣಲು ಹೋದೆವು. ಅವನು ತನ್ನ ಗುಡಾರದೊಳಗೆ ಕುಳಿತಿದ್ದ. ನಮ್ಮನ್ನು ವಿಶ್ವಾಸದಿಂದ ಸ್ವಾಗತಿಸಿ ನಮ್ಮ ಊಟೋಪಚಾರ ಸರಿಯಾಗಿ ನಡೆಯುತ್ತಿದೆಯೋ ಎಂದು ಕೇಳಿದ ಮೇಲೆ, ನಾವು ಯಾವ

---

[1] ಮೊಗಲರ ಕಾಲದಲ್ಲಿ ವ್ಯಾಪಾರಕ್ಕಾಗಿ ಬಂದ ಇಂಗ್ಲಿಷರ ಮತ್ತು ಫ್ರೆಂಚರ ನಡುವೆ ಟಾವೆರ್‌ನ್ಯೆ ಕೈಕೊಂಡ ಭಾರತ ಪ್ರವಾಸ ಕಾಲದಲ್ಲಿ (೧೭ನೆ ಶತಮಾನದ ಮಧ್ಯ ದಶಕಗಳಲ್ಲಿ) ಯಾವ ವೈರವೂ ಇರಲಿಲ್ಲವೆಂಬುದು ಇಂಗ್ಲಿಷ್ ಗೋಲಂದಾಜನ ಈ ವರ್ತನೆಯಿಂದ ತಿಳಿದು ಬರುತ್ತದೆ.

ಕೆಲಸದ ಬಗ್ಗೆ ಬಂದಿರುವುದು ಎಂದು ವಿಚಾರಿಸಿದ. ಇದಕ್ಕೆ ಉತ್ತರವಾಗಿ ನಾವು ರಾಜನಿಗಾಗಿ (ಮೊಗಲ್ ಚಕ್ರವರ್ತಿಗಾಗಿ) ಕೆಲವು ಬೆಲೆಯಾದ ವಸ್ತುಗಳನ್ನು ತಂದಿರುವುದಾಗಿಯೂ, ಅವುಗಳನ್ನು ಮೊದಲು ನವಾಬನಿಗೆ ತೋರಿಸಿದ ಹೊರತು ರಾಜನಿಗೆ ತೋರಿಸುವಂತಿಲ್ಲವಾದ್ದರಿಂದ ಅವನ್ನು ತೋರಿಸಲು ಬಂದಿರುವುದಾಗಿಯೂ ಹೇಳಿದೆವು. ಇದರಿಂದ ಸುಪ್ರೀತನಾದ ನವಾಬ ನಮಗೆ ವೀಳೆಯ ಕೊಟ್ಟು ಕಳುಹಿಸಿದ. ನಾವು ಪಟ್ಟಣಕ್ಕೆ ಹಿಂದಿರುಗಿದೆವು. ಗೋಲಂದಾಜರೆಲ್ಲ ನಮಗಾಗಿ ಊಟಕ್ಕೆ ಕಾಯುತ್ತಿದ್ದರು. ಮೈಲ್ಕೇಯ ಮನೆಯಲ್ಲಿ ಊಟದ ಏರ್ಪಾಡಾಗಿತ್ತು. ನವಾಬ ಎರಡು ಸೀಸೆ ಮಧ್ಯೆ ಕಳುಹಿಸಿದ್ದ–ಒಂದು ಸ್ಪಾನಿಷ್ ವೈನು, ಇನ್ನೊಂದು ಷಿರಾಜಿನ ವೈನು. ಈ ವೈನುಗಳು ಈ ದೇಶದಲ್ಲಿ ಸಿಕ್ಕುವುದು ಅಪರೂಪ. ಬ್ರಾಂದಿಯಂತೂ ಬೇಕಾದಷ್ಟಿತ್ತು, ಏಕೆಂದರೆ ಅದನ್ನು ಇಲ್ಲಿಯೇ ಅಕ್ಕಿ ಮತ್ತು ಸಕ್ಕರೆಯಿಂದ (ಬೆಲ್ಲದಿಂದ) ಹೇರಳವಾಗಿ ತಯಾರಿಸುತ್ತಾರೆ.

ನಾಲ್ಕನೇ ತಾರೀಖು ನಾವು ಮತ್ತೆ ನವಾಬನನ್ನು ಕಂಡೆವು. ರಾಜನಿಗೆ ಮಾರಬೇಕೆಂದು ತಂದಿದ್ದ ಆಭರಣಗಳನ್ನು ತೋರಿಸಿದೆವು. ನಮ್ಮ ಬಳಿ ಪೇರುಹಣ್ಣಿನ ಆಕಾರದ ಅಂದಚೆಂದದ ಭಾರಿ ಮುತ್ತುಗಳಿದ್ದುವು. ಈ ಮುತ್ತುಗಳ ತೂಕ ಒಂದೊಂದು ಕನಿಷ್ಠ ಪಕ್ಷ ೨೪ ಕ್ಯಾರೆಟ್ಟುಗಳು. ಇವನ್ನೆಲ್ಲಾ ನವಾಬನೂ ಅವನ ಕಡೆಯವರೂ ನೋಡಿದ ಮೇಲೆ ಬೆಲೆ ಎಷ್ಟು ಎಂದು ಕೇಳಿದರು. ನಾವು ಬೆಲೆ ಹೇಳಿದೆವು. ಮುತ್ತುಗಳನು ಹಿಂದಿರುಗಿಸಿದ, ನವಾಬ ತಾನು ಆಲೋಚನೆ ಮಾಡುವುದಾಗಿ ಹೇಳಿದ. ತನ್ನೊಡನೆ ಊಟ ಮಾಡಬೇಕೆಂದು ಒತ್ತಾಯ ಮಾಡಿದ. ಊಟಮಾಡಿಕೊಂಡು ಪಟ್ಟಣಕ್ಕೆ ಹಿಂದಿರುಗಿದೆವು.

೧೦ನೇ ತಾರೀಖಿನವರೆಗೆ ನವಾಬನನ್ನು ನೋಡಲಾಗಲಿಲ್ಲ. ಆ ದಿನ ಬೆಳಿಗ್ಗೆ ನವಾಬ ನಮಗೆ ಹೇಳಿಕಳುಹಿಸಿದ. ನಾವು ಹೋಗಿ ಅವನ ಗುಡಾರದಲ್ಲಿ ಕುಳಿತುಕೊಂಡ ಮೇಲೆ ಸೇವಕರು ನವಾಬನ ಮುಂದೆ ವಜ್ರಗಳ ಐದು ಸಣ್ಣ ಚೀಲಗಳನ್ನು ತಂದಿಟ್ಟರು. ಪ್ರತಿ ಚೀಲದಲ್ಲಿ ಒಂದು ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ವಜ್ರಗಳಿದ್ದುವು. ಒಂದೊಂದೂ ಒಂದು ಅಥವಾ ಅರ್ಧ ಕ್ಯಾರೆಟ್ ತೂಕದ್ದು. ಈ ವಜ್ರಗಳನ್ನು ತೋರಿಸಿದ ನವಾಬ ಇವಕ್ಕೆ ನಮ್ಮ ದೇಶದಲ್ಲಿ ಗಿರಾಕಿ ಉಂಟೇ ಎಂದು ಕೇಳಿದ. ಬಹಳ ಚೆನ್ನಾಗಿ ಹೊಳಪುಳ್ಳ ವಜ್ರಗಳಿಗೆ ಮಾತ್ರ ಯೂರೋಪಿನಲ್ಲಿ ಗಿರಾಕಿ ಉಂಟೆಂದೂ, ಸ್ವಲ್ಪ ಮಾಸಲು ಹೊಳಪಿನ ಈ ವಜ್ರಗಳಿಗೆ ಗಿರಾಕಿ ಅಷ್ಟು ಇಲ್ಲವೆಂದೂ ನಾವು ಹೇಳಿದೆವು. ನವಾಬನ ಬಳಿಯಿದ್ದ ಈ ವಜ್ರಗಳನ್ನು ಆತ ಒಂದು ವರ್ಷ ಕಾಲದಲ್ಲಿ ೧೨,೦೦೦ ಜನರಿಂದ ಅಗೆಸಿ ತೆಗೆಸಿದ್ದ. ಉತ್ಕೃಷ್ಟವಾದ ವಜ್ರಗಳು ದೊರೆಯದೆಹೋದ ಕಾರಣ ಅಗೆಯುವ ಕೆಲಸ ನಿಲ್ಲಿಸಿ ಜನರನ್ನೆಲ್ಲಾ ಮತ್ತೆ ಬೇಸಾಯಕ್ಕೆ ಕಳುಹಿಸಿಕೊಟ್ಟಿದ್ದ. ಅವನು ತೋರಿಸಿದ ವಜ್ರಗಳು ನಮಗೆ ಬೇಕಿಲ್ಲವೆಂದು ಗೊತ್ತಾದಾಗ, ಮತ್ತೆ ಅವುಗಳನ್ನು ಚೀಲದೊಳಕ್ಕೆ ಹಾಕಿದ. ನಮಗೆ ಅವನೊಡನೆ ಮತ್ತೆ ಸಹಭೋಜನವಾಯಿತು. ಊಟಮಾಡಿದ ಮೇಲೆ ಆತನೂ

ಅವನ ಸರದಾರರೂ ಕುದುರೆ ಹತ್ತಿ, ಬೇಟೆಗೆ ಹೊರಟರು. ನಮ್ಮನ್ನೂ ಕರೆದ. ನಾವು ಸಬೂಬು ಹೇಳಿಕೊಂಡೆವು. ನಮ್ಮ ಮುತ್ತುಗಳ ಬಗ್ಗೆ ಯಾವ ಮಾತೂ ಆಡದೆ ನವಾಬ ಹೊರಟುಹೋದ.

೧೧ನೇ ತಾರೀಖು ಫರಂಗಿ ಗೋಲಂದಾಜರೆಲ್ಲಾ ಕೂಗುತ್ತ ನವಾಬನ ಗುಡಾರದ ಕಡೆ ಹೊರಟರು. ನಾಲ್ಕು ತಿಂಗಳ ಹೆಚ್ಚಿಗೆ ಸಂಬಳ ಕೊಡುವುದಾಗಿ ಮಾಡಿದ ವಾಗ್ದಾನದಂತೆ ನವಾಬ ನಡೆದುಕೊಂಡಿಲ್ಲವೆಂದೂ, ಕೊಡದಿದ್ದರೆ ತಾವು ಅವನ ಸೈನ್ಯವನ್ನು ಬಿಟ್ಟು ಬೇರೆ ಕಡೆ ಹೋಗುವುದಾಗಿಯೂ ಗಲಾಟೆಮಾಡಿದರು. ನಾಳೆ ಕೊಡುತ್ತೇನೆಂದು ನವಾಬ ಸಮಾಧಾನ ಹೇಳಿಕಳುಹಿಸಿದ. ನವಾಬ ಮೂರನೇ ದಿನ ಅವರಿಗೆ ಮೂರು ತಿಂಗಳ ಸಂಬಳ ಕೊಟ್ಟು, ತಿಂಗಳ ಕೊನೆಯಲ್ಲಿ ಇನ್ನೊಂದು ತಿಂಗಳ ಸಂಬಳ ಕೊಡುವುದಾಗಿ ಮಾತು ಕೊಟ್ಟ. ಇಷ್ಟೊಂದು ಹಣ ಕೈಗೆ ಸಿಕ್ಕಿತೋ ಇಲ್ಲವೋ ಗೋಲಂದಾಜರು ತಿಂದು ಕುಡಿದು ಮಜಾ ಉಡಾಯಿಸಲಾರಂಭಿಸಿದರು. ಅರ್ಧಕ್ಕಿಂತ ಹೆಚ್ಚು ಹಣವನ್ನು ಬಲದಿನೆಯರು (ವೇಶ್ಯೆಯರು) ಕಸಿದುಕೊಂಡರು.

೧೩ನೇ ತಾರೀಖು ನವಾಬ ವೈಲ್ಯೇ ತಯಾರಿಸುತ್ತಿದ್ದ ಎರಕದ ಕಾರ್ಖಾನೆಯನ್ನು ನೋಡಲು ಪಟ್ಟಣಕ್ಕೆ ಹೋದ. ಫಿರಂಗಿಗಳನ್ನು ಬೆಟ್ಟದ ಕೆಳಗಿನಿಂದ ಮೇಲಕ್ಕೆ ಸಾಗಿಸುವುದು ಕಷ್ಟವಾದ ಕೆಲಸವಾಗಿದ್ದರಿಂದ, ಮೇಲೆಯೇ ಪಟ್ಟಣದಲ್ಲಿ ಅವುಗಳನ್ನು ಎರಕಹೊಯ್ಯಿಸಲು ವ್ಯವಸ್ಥೆ ನಡೆದಿತ್ತು. ೪೮ ಪೌಂಡಿನ ಹತ್ತು ಫಿರಂಗಿಗಳನ್ನೂ, ೨೪ ಪೌಂಡಿನ ಹತ್ತು ಫಿರಂಗಿಗಳನ್ನೂ ಎರಕಹೊಯ್ಯುವುದಾಗಿ ವೈಲ್ಯೇ ಒಪ್ಪಿಕೊಂಡಿದ್ದ. ಫಿರಂಗಿಗಳಿಗೆ ಬೇಕಾದ ತಾಮ್ರವನ್ನು ನಾನಾ ಕಡೆಗಳಿಂದ ಶೇಖರಿಸಿ ತರಲಾಗಿತ್ತು. ನವಾಬನ ಸೈನಿಕರು ದೇವಸ್ಥಾನಗಳಿಗೆ ನುಗ್ಗಿ ವಿಗ್ರಹಗಳನ್ನು ಕಿತ್ತುತಂದರು. ಗಂಡಿಕೋಟೆ ದೇವಸ್ಥಾನದಲ್ಲಿ ಬಹಳ ವಿಗ್ರಹಗಳುಂಟು. ಇವುಗಳಲ್ಲಿ ಚಿನ್ನ ಬೆಳ್ಳಿಯ ವಿಗ್ರಹಗಳಲ್ಲದೆ, ಆರು ತಾಮ್ರದ ವಿಗ್ರಹಗಳು ಇದ್ದುವು. ಇವುಗಳಲ್ಲಿ ಮೂರು ಹಿಮ್ಮಡಿಯ ಮೇಲೆ ಕುಳಿತಂಥ ವಿಗ್ರಹಗಳು ; ಮೂರು ಹತ್ತು ಅಡಿ ಎತ್ತರ ಇದ್ದಂಥವುಗಳು. ಇವನ್ನು ಕರಗಿಸಲು ವೈಲ್ಯೇ ಎಲ್ಲಾ ಏರ್ಪಾಡುಮಾಡಿಕೊಂಡ. ಬೇರೆ ಕಡೆಗಳಿಂದ ತಂದ ತಾಮ್ರದ ವಿಗ್ರಹಗಳನ್ನು ಕರಗಿಸುವುದು ಅವನಿಂದ ಸಾಧ್ಯವಾಯಿತು. ಆದರೆ ಈ ಆರು ವಿಗ್ರಹಗಳನ್ನು ಕರಗಿಸುವುದು ಸಾಧ್ಯವಾಗದೇಹೋಯಿತು. ನವಾಬ ಅವುಗಳನ್ನು ಕರಗಿಸಲು ಎಷ್ಟು ಹಣ ಬೇಕಾದರೂ ಖರ್ಚುಮಾಡಲು ಸಿದ್ಧನಿದ್ದ. ಆದರೂ ಅವನ್ನು ಕರಗಿಸುವುದು ವೈಲ್ಯೇಯಿಂದ ಆಗದೇಹೋಯಿತು; ದೇವಸ್ಥಾನದ ಅರ್ಚಕರು ಏನೋ ಕಟ್ಟುಮಾಡಿಸಿದ್ದಾರೆಂದು, ನವಾಬ ಅವರನ್ನು ಹೆದರಿಸಿ ಬೆದರಿಸಿ ನೋಡಿದ. ಒಟ್ಟಿನಲ್ಲಿ, ವೈಲ್ಯೇ ಮಾಡಲು ಸಾಧ್ಯವಾದದ್ದು ಎರಡೇ ಎರಡು ಫಿರಂಗಿಗಳನ್ನು ಮಾತ್ರ. ಅವುಗಳಲ್ಲಿ ಒಂದು ಒಡೆದೇಹೋಯಿತು. ಇನ್ನೊಂದು ಪೂರ್ತಾ

ಮುಗಿಯಲಿಲ್ಲ. ತನ್ನ ಕೆಲಸದಲ್ಲಿ ಯಶಸ್ವಿಯಾಗದ ಆತ ಅದನ್ನು ಬಿಟ್ಟುಬಿಟ್ಟು, ಕೊನೆಗೆ ನವಾಬನ ಸೇವೆಯನ್ನೂ ತ್ಯಜಿಸಿದ.

೧೮ನೇ ತಾರೀಖು ನಾವು ನವಾಬನನ್ನು ಕಾಣಲು ಹೋದೆವು. ನಾವು ತೋರಿಸಿದ ಸರಕುಗಳ ಬಗ್ಗೆ ಆತನು ಏನು ಹೇಳುತ್ತಾನೊ ತಿಳಿಯೋಣ ಎಂದು ಹೋಗಿದ್ದೆವು. ಆದರೆ ಆ ದಿನ ಆತ ಅನೇಕ ಅಪರಾಧಿಗಳ ವಿಚಾರಣೆಯಲ್ಲಿ ತೊಡಗಿದ್ದ ಕಾರಣ ಅವನನ್ನು ನೋಡಲು ಆಗಲಿಲ್ಲ. ಅಪರಾಧಿಯನ್ನು ಕೂಡಲೇ ವಿಚಾರಣೆ ನಡೆಸಿ ಶಿಕ್ಷೆಗೆ ಗುರಿಪಡಿಸದೆ ಬಂದೀಖಾನೆಯಲ್ಲಿ ಇಟ್ಟುಕೊಳ್ಳುವ ಪದ್ಧತಿ ಇಲ್ಲ, ಈ ದೇಶದಲ್ಲಿ. ಅಪರಾಧಿ ಸಿಕ್ಕಿದ ಕೂಡಲೇ ವಿಚಾರಣೆ ನಡೆಸಿ ತಪ್ಪಿತಸ್ಥನಾಗಿದ್ದಲ್ಲಿ ಶಿಕ್ಷೆ ವಿಧಿಸುತ್ತಾರೆ. ಖುಲಾಸೆ ಅಥವಾ ಶಿಕ್ಷೆ–ಇವುಗಳಲ್ಲಿ ಯಾವುದಾದರೂ ಜಾಗ್ರತೆ ಮುಗಿಯಬೇಕು. ನವಾಬ ತನ್ನ ವಿಚಾರಣೆ ಮುಗಿಸಿ ಡೇರೆಯಿಂದ ಹೊರಗೆ ಬಂದಾಗ ಬಾಗಿಲಲ್ಲಿ ನಮ್ಮನ್ನು ಕಂಡ. ಮಾರನೆಯ ದಿನ ಬೆಳಿಗ್ಗೆ ಹೊತ್ತಿನಂತೆ ಬರಲು ಹೇಳಿ ಹೊರಟುಹೋದ.

ಅದರಂತೆ ಮಾರನೆ ದಿನ ನಾವು ಬೆಳಿಗ್ಗೆ ಏಳು ಗಂಟೆಗೆ ನವಾಬನ ಬಳಿಗೆ ಹೋದೆವು. ನಾವು ಬಂದಿರುವುದನ್ನು ದ್ವಾರಪಾಲಕರು ತಿಳಿಸಿದಾಗ ಒಳಗೆ ಬರಲು ಆತನ ಅಪ್ಪಣೆ ಆಯಿತು. ಒಳಗೆ ನವಾಬ ತನ್ನ ಇಬ್ಬರು ಕಾರ್ಯದರ್ಶಿಗಳ ಜೊತೆ ಕುಳಿತಿದ್ದ. ಡೇರೆಯ ಒಳಗಡೆ ಜಮುಖಾನ ಹಾಸಿದ್ದರು. ಆದ್ದರಿಂದ ನಾವು ನಮ್ಮ ಪಾದರಕ್ಷೆಗಳನ್ನೂ ಕಾಲುಚೀಲಗಳನ್ನೂ ತೆಗೆದು, ಬರಿಗಾಲಿನಲ್ಲಿ ಒಳಕ್ಕೆ ಹೋಗಿ, ನಮ್ಮ ಕಡೆ ದರ್ಜಿಗಳು ಕುಳಿತುಕೊಳ್ಳುವ ರೀತಿಯಲ್ಲಿ ಕುಳಿತುಕೊಂಡೆವು. ನವಾಬನು ತನ್ನ ಕೈಕಾಲು ಬೆರಳುಗಳ ಸಂಧಿಗಳಲ್ಲಿ ಅನೇಕ ಕಾಗದ ಪತ್ರಗಳನ್ನು ಸಿಕ್ಕಿಸಿಕೊಂಡು ಕುಳಿತಿದ್ದ. ಒಮ್ಮೆ ಕಾಲ್ಬೆರಳುಗಳಿಗೆ ಸಿಕ್ಕಿಸಿದ್ದ, ಇನ್ನೊಮ್ಮೆ ಕೈಬೆರಳುಗಳಿಗೆ ಸಿಕ್ಕಿಸಿದ್ದ ಕಾಗದ ಪತ್ರಗಳನ್ನು ಎಳೆದುಕೊಂಡು ತನ್ನ ಕಾರ್ಯದರ್ಶಿಗಳಿಗೆ ಹೇಳಿ ಉತ್ತರ ಬರೆಸುತ್ತಿದ್ದ. ಕೆಲವು ಪತ್ರಗಳಿಗೆ ತಾನೇ ಉತ್ತರ ಬರೆಯುತ್ತಿದ್ದ. ಕಾರ್ಯದರ್ಶಿಗಳಿಗೆ ಹೇಳಿ ಬರೆಸಿದ ಪತ್ರಗಳನ್ನು ಓದಿಸಿ ಕೇಳಿಕೊಳ್ಳುತ್ತಿದ್ದ. ಆಮೇಲೆ ಅವನ್ನೆಲ್ಲಾ ಈಸಿಕೊಂಡು ತಾನೇ ಮುದ್ರೆ ಒತ್ತಿ, ಕೆಲವನ್ನು ಕಾಲಾಳುಗಳಿಗೂ ಮತ್ತೆ ಕೆಲವನ್ನು ಕುದುರೆ ಸವಾರರಿಗೂ ಕೊಟ್ಟುಕಳುಹಿಸಿದ.[1] . ಇಂಡಿಯಾದಲ್ಲಿ ಕಾಲಾಳುಗಳ ಕೈಯಲ್ಲಿ

---

[1] ಇಂಗ್ಲೀಷರು ೧೭೭೯ರಲ್ಲಿ ತಮ್ಮ ಪರವಾಗಿ ಶಾಂತಿ ದೂತನನ್ನಾಗಿ ಹೈದರ್ ಆಲಿಯ ಬಳಿಗೆ ಕಳುಹಿಸಿದ ಪಾದ್ರಿ ರೆವರೆಂಡ್ ಡಬ್ಲ್ಯು ಷಿವರ್ಟ್ಸ್ (Schwartz)ಸಹ ಇದೇ ಮಾದರಿಯ ವರ್ಣನೆಯನ್ನು ನೀಡುತ್ತಾನೆ. "When I sat near Haidar, I particularly observed in what a regular succession, and with what rapid despatch, his affairs proceeded one after the other. When ever he made a pause in speaking, an account was read to him of the district and the letters received. He heard it, and ordered the answer immediately. The writer ran, wrote the letter, read it and Haider affixed his seal."—C. Hayavadana Rao, *Mysore Gazetter*, Vol. II, Part IV, P. 2538.

ಕೊಟ್ಟುಕಳುಹಿಸಿದ ಕಾಗದಗಳು ಕುದುರೆ ಸವಾರರ ಕೈಯಲ್ಲಿ ಕಳುಹಿಸುವುದಕ್ಕಿಂತ ಜಾಗ್ರತೆ ಮುಟ್ಟುತ್ತವೆ. ಇದಕ್ಕೆ ಕಾರಣ ಹೀಗಿದೆ : ಪ್ರತಿ ಎರಡು ಹರಿದಾರಿಗಳ ಅಂತರ ದಲ್ಲಿ ಸಣ್ಣ ಗುಡಿಸಲುಗಳಿರುತ್ತವೆ. ಇಲ್ಲಿ ಓಡಲು ಇಬ್ಬರು ಮೂವರು ಪತ್ರವಾಹಕರು ಸಿದ್ಧವಾಗಿ ನಿಂತಿರುತ್ತಾರೆ. ಈ ಗುಡಿಸಲುಗಳ ಬಳಿಗೆ ಪತ್ರ ತಂದವನು ಬಂದ ಕೂಡಲೇ ತಾನು ತಂದ ಪತ್ರವನ್ನು ಗುಡಿಸಲ ಬಳಿ ಎಸೆಯುತ್ತಾನೆ. ಎಸೆದ ಕೂಡಲೆ ಆ ಇಬ್ಬರು ಮೂವರಲ್ಲಿ ಒಬ್ಬ ಅದನ್ನು ಎತ್ತಿಕೊಂಡು ಓಡುತ್ತಾನೆ. ಕಾಗದವನ್ನು ಕೈಗೆ ಕೊಡು ವುದು ಅಪಶಕುನವೆಂಬ ಭಾವನೆ ಇದೆ. ಈ ಕಾರಣ ಅದನ್ನು ಇನ್ನೊಬ್ಬನ ಕೈಗೆ ಕೊಡದೆ, ಅವನ ಕಾಲ ಕಡೆಗೆ ಎಸೆಯುತ್ತಾರೆ.

ಇಂಡಿಯಾದ ಅನೇಕ ಹೆದ್ದಾರಿಗಳ ಇಕ್ಕೆಲದಲ್ಲೂ ಸಾಲುಮರಗಳನ್ನು ನೆಡಿಸಿರುವರು. ಈ ಸಾಲುಮರಗಳನ್ನು ನೋಡಿಕೊಂಡು ದಾರಿಯನ್ನು ಪತ್ತೆಹಚ್ಚಬಹುದು. ಸಾಲು ಮರಗಳಿಲ್ಲದ ದಾರಿಗಳಲ್ಲಿ ೫೦೦ ದಾಪುಗಳಿಗೊಂದರಂತೆ ಸಣ್ಣ ಸಣ್ಣ ಕಲ್ಲುಗಳನ್ನು ನೆಟ್ಟಿ ದ್ದಾರೆ. ಈ ಕಲ್ಲುಗಳಿಗೆ ಹತ್ತಿರದ ಹಳ್ಳಿಯವರು ತಪ್ಪದೆ ಆಗಾಗ್ಗೆ ಸುಣ್ಣ ಬಳಿಯುತ್ತಿರ ಬೇಕು. ಹೀಗಾಗಿ ರಾತ್ರಿಯಾಗಿರಲಿ, ಅಥವಾ ಮಳೆ ಹೊಯ್ಯುತ್ತಿರಲಿ ಪತ್ರವಾಹಕರು ಈ ಬಿಳಿಯ ಕಲ್ಲುಗಳನ್ನು ನೋಡಿಕೊಂಡು ದಾರಿ ಸಾಗಿಸುತ್ತಾರೆ.

ನಾವು ನವಾಬನೊಡನೆ ಕುಳಿತಿರುವಾಗ ನಾಲ್ಕು ಜನ ಖೈದಿಗಳು ಬಾಗಿಲ ಬಳಿ ಇದ್ದಾರೆಂದು ತಿಳಿಸಲಾಯಿತು. ಅರ್ಧ ಗಂಟೆಯ ತನಕ ನವಾಬ ಆ ಬಗ್ಗೆ ಯಾವ ಉತ್ತರವನ್ನೂ ಹೇಳಲಿಲ್ಲ. ಪತ್ರಗಳಿಗೆ ಉತ್ತರ ಬರೆಸುವುದು ಮತ್ತು ತಾನೇ ಬರೆಯುವುದು ಈ ಕೆಲಸದಲ್ಲಿ ಮಗ್ನನಾಗಿದ್ದ. ಕೊನೆಗೆ ಖೈದಿಗಳನ್ನು ಕರೆದುಕೊಂಡು ಬರುವಂತೆ ಹೇಳಿದ. ಖೈದಿಗಳನ್ನು ವಿಚಾರಿಸಿದಾಗ ಅವರು ತಾವು ಮಾಡಿರುವ ಅಪರಾದ ವನ್ನು ಒಪ್ಪಿಕೊಂಡರು. ಇದನ್ನು ಕೇಳಿದ ಮೇಲೆ ನವಾಬ ಮತ್ತೆ ಅರ್ಧ ಗಂಟೆ ಕಾಲ ಏನೂ ಮಾತಾಡದೆ ಕಾಗದ ಪತ್ರಗಳನ್ನು ಬರೆಸುವುದರಲ್ಲಿ ಮಗ್ನನಾದ. ಇಷ್ಟು ಹೊತ್ತಿಗೆ ಅವನ ಅನೇಕ ಅಧಿಕಾರಿಗಳು ಡೇರೆಯನ್ನು ಪ್ರವೇಶಿಸಿ ಬಹಳ ನಮ್ರತೆಯಿಂದ ತಮ್ಮ ತಮ್ಮ ಮುಜರೆ ಸಲ್ಲಿಸಿದರು. ನವಾಬ ಕೇವಲ ತನ್ನ ತಲೆಯನ್ನು ಓರೆಮಾಡಿ, ಆ ಮುಜರೆ ಗಳನ್ನು ಸ್ವೀಕರಿಸಿದ.

ತಪ್ಪೊಪ್ಪಿಕೊಂಡ ಆ ನಾಲ್ಕು ಜನ ಖೈದಿಗಳಲ್ಲಿ ಒಬ್ಬ ಒಂದು ಮನೆಯನ್ನು ಪ್ರವೇಶಿಸಿ ಅಲ್ಲಿದ್ದ ಒಬ್ಬ ಹೆಂಗಸನ್ನೂ, ಆಕೆಯ ಮೂರು ಕಂದಗಳನ್ನೂ ಕೊಂದಿದ್ದನಂತೆ. ಅವನ ಕೈಕಾಲುಗಳನ್ನು ಕತ್ತರಿಸಿ ಊರ ಹೊರಗಡೆ ಬಯಲಿನಲ್ಲಿ ಬಿಸಾಡಬೇಕೆಂದು ಆಜ್ಞೆ ಯಾಯಿತು. ಇನ್ನೊಬ್ಬ ಹೆದ್ದಾರಿಯಲ್ಲಿ ದರೋಡೆ ಮಾಡಿದ್ದ. ಅವನ ಹೊಟ್ಟೆ ಸೀಳಿ ಚರಂಡಿಯಲ್ಲಿ ಬಿಸಾಡಬೇಕೆಂಬ ಶಿಕ್ಷೆ ವಿಧಿಸಲಾಯಿತು. ಉಳಿದ ಇಬ್ಬರು ಯಾವ ಅಪರಾದ ಮಾಡಿದ್ದರೊ ನನಗೆ ತಿಳಿಯಲಿಲ್ಲ. ಆದರೆ ಅವರ ತಲೆಗಳನ್ನು ಕತ್ತರಿಸಿ ಹಾಕ ಬೇಕೆಂದು ಅಪ್ಪಣೆಯಾಯಿತು.

ಇಷ್ಟೆಲ್ಲಾ ಮುಗಿಯುವುದರೊಳಗೆ ಊಟಕ್ಕೆ ಬಡಿಸಿದರು. ನವಾಬ ಸಾಮಾನ್ಯ ಹತ್ತು ಗಂಟೆಗೆ ಊಟ ಮಾಡುತ್ತಾನೆ. ನಮ್ಮನ್ನು ಊಟಕ್ಕೆ ಕರೆದ. ಊಟ ಆಯಿತು. 'ಸುಫ್ರಾ' (ಊಟದ ಬಟ್ಟೆ) ತೆಗೆದ ಮೇಲೆ ಇಬ್ಬರು ಮೂವರು ಬಿಟ್ಟರೆ ಉಳಿದವರೆಲ್ಲಾ ಹೊರಟುಹೋದರು. ಆಗ ನಾವು ದುಭಾಷಿಯ ಮೂಲಕ ಕೇಳಿದೆವು, ನಾವು ತಂದಿರುವ ಸರಕುಗಳನ್ನು ರಾಜನಿಗೆ ತೋರಿಸಬಹುದೇ ಎಂದು. ನಾವು ಗೋಲ್ಕೊಂಡಾಕ್ಕೆ ಹೋಗ ಬೇಕೆಂದೂ, ಅಲ್ಲಿರುವ ತನ್ನ ಮಗನಿಗೆ ತಾನು ಪತ್ರ ಬರೆಯುವುದಾಗಿಯೂ ನವಾಬ ತಿಳಿಸಿದ. ನಮ್ಮನ್ನು ಕರೆದುಕೊಂಡು ಹೋಗಲು ಹದಿನಾರು ಕುದುರೆ ಸವಾರರನ್ನು ನೇಮಿಸಿದ.

ಹದಿನಾರನೇ ತಾರೀಖು ಬೆಳಿಗ್ಗೆ ಗಂಡಿಕೋಟೆಯಿಂದ ಹೊರಟೆವು. ಊರಿನಲ್ಲಿದ್ದ ಫರಂಗೀ ಗೋಲಂದಾಜರ ಪೈಕಿ ಬಹು ಮಂದಿ ನಮ್ಮನ್ನು ಬೀಳ್ಕೊಡಲು ನಮ್ಮೊಡನೆ ಹೊರಟರು. ಜೊತೆಯಲ್ಲಿ ಬೇಕಾದಷ್ಟು ತಿಂಡಿ ತೀರ್ಥಗಳನ್ನು ತೆಗೆದುಕೊಂಡು ಬಂದರು. ಸಂಜೆಯೊಳಗೆ ಏಳು ಹರಿದಾರಿಗಳಷ್ಟು ದೂರ ಪ್ರಯಾಣಮಾಡಿ ಕೊಟಪಲ್ಲಿ ಎಂಬ ಊರಿ ನಲ್ಲಿ ತಂಗಿದೆವು.

ಮಾರನೆಯ ದಿನ ಬೆಳಗ್ಗೆ ಗೋಲಂದಾಜರೊಡನೆ ತಿಂಡಿ ತಿಂದೆವು. ಅವರು ಗಂಡಿ ಕೋಟೆಗೆ ಹಿಂದಿರುಗಿದರು. ನಾವು ನಮ್ಮ ಮುಂದಿನ ದಾರಿ ಸಾಗಿಸಿದೆವು. ನವಾಬನು ಕಳುಹಿಸಿದ ಹದಿನಾರು ಕುದುರೆ ಸವಾರರು ನಮ್ಮೊಡನೆ ಇದ್ದರು. ದಾರಿಯಲ್ಲಿ ತುಂಬಿ ಹರಿಯುತ್ತಿದ್ದ ಒಂದು ನದಿ (ಬಹುಶಃ ಉತ್ತರ ಪಿನಾಕಿನಿ) ಸಿಕ್ಕಿತು. ಇದನ್ನು ದಾಟಿ ಕೊಟೀನ್ (Coteen) ಎಂಬ ಊರಿನಲ್ಲಿ ಆ ದಿನ ತಂಗಿದೆವು. ಈ ಊರಿನಲ್ಲಿ ನಮ್ಮನ್ನು ಬಿಟ್ಟು ಆ ಕುದುರೆ ಸವಾರರು ಗಂಡಿಕೋಟೆಗೆ ಹೊರಟರು. ಅವರು ಸಲ್ಲಿಸಿದ ಸೇವೆಗಾಗಿ ವಿಳೆಯದೆಲೆ ಹೊಗೆಸೊಪ್ಪಿನ ಖರ್ಚಿಗೆಂದು ನಾಲ್ಕೈದು ರುಪಾಯಿ ತೆಗೆದುಕೊಳ್ಳುವಂತೆ ಅವರ ಮುಖಂಡನನ್ನು ಒಪ್ಪಿಸಿದೆವು. ಅಷ್ಟು ಬಿಟ್ಟು, ಬೇರೇನನ್ನೂ ತೆಗೆದುಕೊಳ್ಳಲು ಅವರು ಒಪ್ಪಲಿಲ್ಲ.

ನದಿಯನ್ನು ಹರಿಗೋಲಿನಲ್ಲಿ ದಾಟಿದೆವು. ಕಡ್ಡಿಗಳ ಮೇಲೆ ಎತ್ತಿನ ಚರ್ಮ ಹಾಸಿ ದೊಡ್ಡ ಬುಟ್ಟಿಯಂತೆ ಮಾಡಿದವುಗಳೇ ಈ ಹರಿಗೋಲುಗಳು. ಕುದುರೆಗಾಡಿಗಳನ್ನು ಮತ್ತು ಎತ್ತಿನಗಾಡಿಗಳನ್ನು ಎರಡು ಹರಿಗೋಲುಗಳ ಮಧ್ಯೆ ಗಾಡಿಯ ಈಚು ಮತ್ತು ನೊಗ ಗಳಿಗೆ ಬಿಗಿದು ದಾಟಿಸುತ್ತಾರೆ. ಕುದುರೆಗಳು ಅವೇ ಈಜಿಗೊಂಡು ಬರಬೇಕು ; ಹಿಂದಿ ನಿಂದ ಒಬ್ಬ ಚಾವಟಿಯಿಂದ ಬಾರಿಸಿದರೆ, ಇನ್ನೊಬ್ಬ ಹರಿಗೋಲಿನಲ್ಲಿ ಕುಳಿತು ಅವುಗಳ ಲಗಾಮು ಹಿಡಿದಿರುತ್ತಾನೆ. ಹೇರೆತ್ತುಗಳನ್ನು ನದಿಯ ಸಮೀಪದಲ್ಲಿ ಹೊರೆ ಇಳಿಸಿ ನದಿ ಯಲ್ಲಿ ಈಜಿಕೊಂಡು ಹೋಗಲು ಅಟ್ಟುತ್ತಾರೆ. ಅವು ಯಾರ ಸಹಾಯವೂ ಇಲ್ಲದೆ ಈಜು ತ್ತವೆ. ಪ್ರತಿ ಹರಿಗೋಲಿನಲ್ಲಿ ನಾಲ್ಕು ಜನರಿರುತ್ತಾರೆ. ಇವರು ನಾಲ್ಕು ಮೂಲೆಗಳಲ್ಲಿ ನಿಂತು ಹುಟ್ಟುಹಾಕುತ್ತಾರೆ. ಯಾರಾದರೂ ಒಬ್ಬ ಸಮನಾಗಿ ಹುಟ್ಟುಹಾಕದೆ

ಹೋದರೆ ಹರಿಗೋಲು ಮೂರು ನಾಲ್ಕು ಸಲ ಗಿರ್ರೆಂದು ತಿರುಗಿ ಪ್ರವಾಹದ ಸೆಳೆತಕ್ಕೆ ಸಿಕ್ಕಿ ಅಪಾಯಕ್ಕೀಡಾಗಬಹುದು. ಹಾಗೆ ಆಗದಂತೆ ನೋಡಿಕೊಳ್ಳಬೇಕು.

ನದಿಯನ್ನು ದಾಟಿದ ಮೇಲೆ ನಮ್ಮ ಪ್ರಯಾಣ ಮುಂದುವರಿಯಿತು. ೨೨ನೇ ತಾರೀಖು ಎಮೇಲಿಪಟಾಕ್ಕೆ (Emelipata=Vamulpetta : ವಾಮುಲ್‌ಪೇಟೆ) ಹೋಗುವ ದಾರಿಯಲ್ಲಿ ನಾಲ್ಕು ಸಾವಿರ ಜನರು ಇಪ್ಪತ್ತು ಪಲ್ಲಕ್ಕಿಗಳ ಸಮೇತ ಹೋಗುತ್ತಿದ್ದುದನ್ನು ಕಂಡೆವು. ಪ್ರತಿ ಪಲ್ಲಕ್ಕಿಯಲ್ಲಿ ಒಂದು ವಿಗ್ರಹವಿತ್ತು. ಚಿನ್ನ ಬೆಳ್ಳಿಯ ಜರತಾರಿ ವಸ್ತ್ರಗಳಿಂದಲೂ, ಅಂದಚೆಂದದ ಗೊಂಡೆಹೂಗಳಿಂದಲೂ ಅಲಂಕಾರಮಾಡಿದ್ದ ಪ್ರತಿಯೊಂದು ಪಲ್ಲಕ್ಕಿಯನ್ನು ನಾಲ್ಕರಿಂದ ಹನ್ನೆರಡು ಮಂದಿ ಬೋಯಿಗಳು ಹೊತ್ತುಕೊಂಡಿದ್ದರು. ಪಲ್ಲಕ್ಕಿಯ ಅಕ್ಕಪಕ್ಕ ಐದು ಅಡಿ ವ್ಯಾಸದ ದೊಡ್ಡ ಬೀಸಣಿಗೆಗಳನ್ನು ಹಿಡಿದುಕೊಂಡಿದ್ದರು. ಈ ಬೀಸಣಿಗೆಗಳನ್ನು ಬಣ್ಣದ ಉಷ್ಟ್ರಪಕ್ಷಿ ಮತ್ತು ನವಿಲಿನ ಬಣ್ಣದ ಗರಿಗಳಿಂದ ಮಾಡಿದ್ದರು. ಈ ಬೀಸಣಿಗೆಗಳ ಹಿಡಿಗಳು ಐದಾರು ಅಡಿಗಳಷ್ಟು ಉದ್ದವಾಗಿದ್ದು ಅವಕ್ಕೆ ಚಿನ್ನ ಬೆಳ್ಳಿಯ ತಗಡಿನಿಂದ ಅಲಂಕಾರಮಾಡಿದ್ದರು. ಈ ಬೀಸಣಿಗೆಗಳಿಗಿಂತ ಇನ್ನೂ ದೊಡ್ಡದಾದ ಒಂದು ಬೀಸಣಿಗೆ ಇತ್ತು. ಇದನ್ನು ಪಲ್ಲಕ್ಕಿಯ ಮೇಲೆ ನೆರಳಾಗುವಂತೆ ಹಿಡಿದುಕೊಂಡಿದ್ದರು. ಅದನ್ನು ಬಣ್ಣ ಬಣ್ಣದ ಗರಿಗಳಿಂದಲೂ, ಚಿನ್ನ ಬೆಳ್ಳಿಯ ಕಿರುಗಂಟೆಗಳಿಂದಲೂ ಅಲಂಕಾರ ಮಾಡಿದ್ದರು. ದೇವರಿಗೆ ಪ್ರೀತಿಯಾಗಲೆಂದು ಆಗಾಗ್ಗೆ ಈ ಬೀಸಣಿಗೆಯನ್ನು ಅಲ್ಲಾಡಿಸಿ ಗಂಟೆಗಳನ್ನು ಘಲಿರೆನ್ನಿಸುತ್ತಿದ್ದರು. ಈ ಜನರು ವಿಗ್ರಹಗಳ ಸಮೇತ ಬುರ್ಹಾನ್‌ಪುರದ ಕಡೆಯಿಂದ ಬಂದರೆಂದೂ, ಕರ್ನಾಟಿಕ್ ರಾಜನ ರಾಜ್ಯದಲ್ಲಿದ್ದ 'ರಾಮ್ ರಾಮ್' ಎಂಬ ದೇವರಿಗೆ ಹೋಗುತ್ತಿರುವರೆಂದೂ ತಿಳಿಯಿತು. ಆಗಲೇ ಇವರು ಹೊರಟು ಮುವತ್ತು ದಿನಗಳಾಗಿದ್ದುವು. ಆ ದೇವರು ಇರುವ ಸ್ಥಳ ಮುಟ್ಟಬೇಕಾದರೆ ಇನ್ನೂ ಹದಿನಾಲ್ಕು ಹದಿನೈದು ದಿನಗಳು ಬೇಕೆಂದು ಗೊತ್ತಾಯಿತು. ನನ್ನ ಸೇವಕರಲ್ಲಿ ಒಬ್ಬ ಈ ಜನಕ್ಕೆ ಸೇರಿದವನಿದ್ದ. ಆತ ತಾನೂ ಯಾತ್ರೆಹೋಗಬೇಕು, ಅನುಮತಿ ಕೊಡಿ ಎಂದು ಕೇಳಿದ. ತಾನು ಮಾಡಿಕೊಂಡ ಹರಕೆಯನ್ನು ಬಹಳ ದಿನಗಳಿಂದ ತೀರಿಸಲಾಗಿಲ್ಲವೆಂದು ಆತ ಹೇಳಿಕೊಂಡ ಮೇಲೆ ನಾನು ಆಗಬಹುದು ಎಂದೆ. ನಾನು ಅನುಮತಿ ಕೊಡದಿದ್ದರೂ ಆತ ಹೊರಟುಹೋಗಿಬಿಡುತ್ತಿದ್ದ. ಅಂತೂ ನನ್ನ ಅನುಮತಿ ಪಡೆದುಹೋದ ಆತ ಎರಡು ತಿಂಗಳಿನ ತರುವಾಯ ಮತ್ತೆ ನಮ್ಮನ್ನು ಸೂರತ್ತಿನಲ್ಲಿ ಸೇರಿಕೊಂಡ. ಆಗ ಅವನನ್ನು ಯಾತ್ರೆಯ ವಿಚಾರವಾಗಿ ಕೇಳಿದೆ. ಅವನು ಒಂದು ವಿಚಿತ್ರ ವಿಚಾರ ಹೇಳಿದ. ಯಾತ್ರಿಗಳೊಡನೆ ಆತ ಐದಾರು ದಿನಗಳ ಕಾಲ ಪ್ರಯಾಣಮಾಡಿದ ಅನಂತರ ದಾರಿಯಲ್ಲಿ ಒಂದು ನದಿ ಸಿಕ್ಕಿತಂತೆ. ಇದ್ದಕ್ಕಿದ್ದಂತೆ ಮಳೆ ಹೊಯ್ದು ಕಾರಣ ಅಷ್ಟೇನು ನೀರಿಲ್ಲದ ಆ ನದಿಯಲ್ಲಿ ನೀರು ತುಂಬಿ ಹರಿಯಲಾರಂಭಿಸಿತು. ಆಗ ನದಿ ದಾಟುವುದು ಅಸಾಧ್ಯವೆನಿಸಿತು. ಆ ನದಿಯನ್ನು ದಾಟಿ ಆಚೆ ಕಡೆ ಇದ್ದ ಹಳ್ಳಿಯಲ್ಲಿ ತಂಗಬೇಕೆಂದು ಅವರು ಯೋಚಿಸಿದ್ದರು. ತೀರ್ಥಯಾತ್ರೆ ಹೋಗುವ

ಜನ ತಮ್ಮೊಡನೆ ತಿಂಡಿತೀರ್ಥಗಳನ್ನು ತೆಗೆದುಕೊಂಡುಹೋಗುವುದಿಲ್ಲ. ದಾರಿಯ ಬಳಿಯ ಹಳ್ಳಿಗಳಲ್ಲಿ ಬೇಕಾದ ದವಸ ಧಾನ್ಯಗಳು ಸಿಕ್ಕುತ್ತವೆ. ಅವನ್ನು ಕೊಂಡು ಅಡಿಗೆ ಮಾಡಿ ಊಟಮಾಡುತ್ತಾರೆ. ಈಗ ಪ್ರವಾಹದ ಕಾರಣ ನದಿಯನ್ನು ದಾಟಿ ಆಚೆ ದಡಕ್ಕೆ ಹೋಗುವಂತಿರಲಿಲ್ಲ. ಹೆಂಗಸರು ಮತ್ತು ಮಕ್ಕಳುಮರಿಗಳೆಲ್ಲಾ ಹಸಿವು ಹಸಿವು ಎಂದು ಸಂಕಟಪಡಲಾರಂಭಿಸಿದರು. ಆಗ ಅವರೊಡನಿದ್ದ ಅರ್ಚಕರಲ್ಲಿ ಹಿರಿಯನಾದವನೊಬ್ಬ ಎಲ್ಲಾ ಜನರ ಮಧ್ಯೆ ಕುಳಿತು ವೈತುಂಬ ಬಟ್ಟೆ ಹೊದೆದುಕೊಂಡು ಯಾರಿಗೆ ಅನ್ನ ಬೇಕು ಎಂದು ಕೇಳಿದ. ಏನೇನು ಬೇಕು ಮತ್ತು ಎಷ್ಟು ಜನಕ್ಕೆ ಬೇಕು ಎಂದು ಕೇಳಿದ. ಯಾರಿಗೆ ಏನೇನು ಬೇಕೊ ಅದನ್ನು ಕೇಳಿದರು. ಆತ ತಾನು ಹೊದೆದಿದ್ದ ಬಟ್ಟೆಯ ಮೂಲೆಯನ್ನು ಸ್ವಲ್ಪ ಮೇಲೆತ್ತಿ ಸಟ್ಟುಗದಿಂದ ಅವರು ಕೇಳಿದ್ದನ್ನು ಬಡಿಸಲು ನಾಲ್ಕು ಸಾವಿರ ಜನರೂ ಉಂಡರಂತೆ.

ಇದನ್ನು ಹೇಳಿದ ನನ್ನ ಸೇವಕ ಸುಳ್ಳು ಹೇಳಿರಬೇಕೆಂದು ಭಾವಿಸಿ, ಆ ಮೇಲೆ ಬುರ್ಹಾನ್‌ಪುರಕ್ಕೆ ಹೋದ ಹಲವಾರು ಸಂದರ್ಭಗಳಲ್ಲಿ ಈ ಬಗ್ಗೆ ವಿಚಾರಿಸಿದಾಗ ಜನರು ಹಾಗೆ ನಡೆದದ್ದು ನಿಜ ಎಂದು ರಾಮನ ಮೇಲೆ ಆಣೆ ಇಟ್ಟು ಹೇಳಿದರು. ಆದರೂ ನಾನು ಇದನ್ನು ನಂಬಲು ಸಾಧ್ಯವಾಗಲಿಲ್ಲ.

ನಾವು ನಮ್ಮ ಪ್ರಯಾಣವನ್ನು ಮುಂದುವರಿಸಿ, ೨೪ ನೇ ತಾರೀಖು ತ್ರಿಪಂತೇ (ತ್ರಿಪುರಾಂತಕಂ) ಎಂಬ ಊರನ್ನು ತಲುಪಿದೆವು. ಇಲ್ಲಿಯ ದೊಡ್ಡ ಗುಡ್ಡದ ಮೇಲೆ ಭವ್ಯವಾದ ದೇವಸ್ಥಾನವಿದೆ.

ಇಲ್ಲಿಂದ ಹೊರಟು ದಾರಿ ಸಾಗಿಸಿ, ೨೭ ನೇ ತಾರೀಖು ಒಂದು ದೊಡ್ಡ ನದಿಯ ಬಳಿಗೆ ಬಂದೆವು. ಇದನ್ನು (ಕೃಷ್ಣಾನದಿಯನ್ನು) ಹರಿಗೋಲುಗಳಲ್ಲಿ ದಾಟಲು ಅರ್ಧ ದಿನವೇ ಆಗುತ್ತದೆಯಂತೆ. ನಾವು ಬಂದಾಗ ಕಡವಿನಲ್ಲಿ ಹರಿಗೋಲುಗಳಾಗಲಿ ಜನರಾಗಲಿ ಇರಲಿಲ್ಲ. ಕೊನೆಗೆ ಒಬ್ಬ ಮನುಷ್ಯ ಬಂದ. ಅವನಲ್ಲಿ ಮಾತಾಡಿ ನಮ್ಮನ್ನು ದಾಟಿಸುವುದಕ್ಕೆ ಒಪ್ಪಿಸಿದೆವು. ನಾವು ಕೊಟ್ಟ ಹಣ ಖೋಟಾ ಅಲ್ಲವೆಂದು ಮನದಟ್ಟುಮಾಡಿಕೊಳ್ಳಲು ಆತ ಹಣವನ್ನು ಬೆಂಕಿಯಲ್ಲಿ ಎಸೆದು ನಾಣ್ಯಗಳು ಕಪ್ಪಾಗುವುವೋ ಇಲ್ಲವೋ ಎಂದು ಖಚಿತಮಾಡಿಕೊಂಡ. ಕಪ್ಪಾದರೆ ಬೇರೆ ನಾಣ್ಯಕೊಡಬೇಕು. ಹೀಗೆ ಯಾರಾರು ದುಡ್ಡು ಕೊಟ್ಟರೋ ಅವರೆಲ್ಲರೂ ಕೊಟ್ಟ ನಾಣ್ಯಗಳನ್ನು ಪರೀಕ್ಷೆಮಾಡಿದ. ಇಷ್ಟು ಮಾಡಿದ ಮೇಲೆ ಹರಿಗೋಲು ಸಮೇತ ಬರಬೇಕೆಂದು ತನ್ನ ಕಡೆಯವರನ್ನು ಕೂಗಿ ಕರೆದ. ಬೇಕೆಂತಲೇ ಈ ಹರಿಗೋಲುಗಳನ್ನು ಆಚೆ ದಡದಲ್ಲಿ ಬಚ್ಚಿಟ್ಟಿರುತ್ತಾರೆ. ಈ ದಡದ ಕಡೆ ನದಿ ದಾಟಲು ಜನ ಬರುತ್ತಾರೆಂದರೆ ಆ ಕಡೆಗೆ ಹರಿಗೋಲುಗಳನ್ನು ಕಳುಹಿಸಿಬಿಟ್ಟು, ಪುಕ್ಕಟೆ ನದಿ ದಾಟಿಸುವುದನ್ನು ತಪ್ಪಿಸಿಕೊಳ್ಳುತ್ತಾರೆ. ಈಗ ದುಡ್ಡು ಕೈಗೆ ಬಂದ ಮೇಲೆ ಆ ಕಡೆ ಜನರು ಹರಿಗೋಲುಗಳನ್ನು ತಲೆಯ ಮೇಲೆ ಹೊತ್ತು ದಡಕ್ಕೆ ಬಂದು ನೀರಿನಲ್ಲಿ ಹಾಕಿ ನದಿ ದಾಟಿ ಈಚೆಗೆ ಬಂದರು.

ನಾವು ನದಿ ದಾಟಿ ಪ್ರಯಾಣವನ್ನು ಮುಂದುವರಿಸಿದೆವು. ಅಕ್ಟೋಬರ್ ೧ನೇ ತಾರೀಖು ಸೋಮವಾರ ನಾವು 'ಅತೆನರ' (Atenara-Tenara) ಎಂಬ ಮನೆಯಲ್ಲಿ ಮಲಗಿದೆವು. ಈ ಮನೆ ಈಗ ಆಳುವ ರಾಜನ ತಾಯಿ ತನ್ನ ವಿಹಾರಾರ್ಥವಾಗಿ ಕಟ್ಟಿಸಿದ ಮನೆಗಳಲ್ಲಿ ಒಂದು. ಈ ಮನೆಯಲ್ಲಿ ಪ್ರಯಾಣಿಕರು ಇಳಿದುಕೊಳ್ಳುವುದಕ್ಕೆ ಅನೇಕ ಕೋಣೆಗಳುಂಟು. ಇಲ್ಲಿ ಒಂದು ವಿಷಯ ಹೇಳಬೇಕು. ಏನೆಂದರೆ, ನಾವು ಪ್ರಯಾಣ ಮಾಡಿದ ಕರ್ನಾಟಕ್ ರಾಜ್ಯದಲ್ಲಾಗಲಿ, ಗೋಲ್ಕೊಂಡಾ ಅಥವಾ ಬಿಜಾಪುರ ರಾಜ್ಯ ಗಳಲ್ಲಾಗಲಿ ಎಲ್ಲಿಯೂ ವೈದ್ಯರುಗಳಿರಲ್ಲ ರಾಜ ಮಹಾರಾಜರುಗಳನ್ನು ನೋಡಿಕೊಳ್ಳುವ ವೈದ್ಯರಲ್ಲದೆ ಬೇರೆ ವೈದ್ಯರಿಲ್ಲ. ಜನಸಾಮಾನ್ಯರು ನಾರುಬೇರುಗಳನ್ನು ತಂದು ತಮಗೆ ತಿಳಿದ ಔಷಧಿಗಳನ್ನು ತಾವೇ ಮಾಡಿಕೊಳ್ಳುತ್ತಾರೆ. ಮಳೆ ಬಿದ್ದಾಗ ಬೆಳಗಿನ ಹೊತ್ತು ಮುದುಕಿಯರು ಊರ ಹೊರಗೆಲ್ಲಾ ಅಡ್ಡಾಡಿ ಈ ನಾರುಬೇರುಗಳನ್ನು ಶೇಖರಿಸುವುದನ್ನು ನೋಡಬಹುದು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವೈದ್ಯರಿದ್ದಾರೆ. ಆದರೆ ಅವರು ಮಾರುಕಟ್ಟೆಗಳಲ್ಲಿ ಒಂದು ಕಡೆ ಕುಳಿತು ತಮ್ಮಲ್ಲಿಗೆ ಬಂದವರಿಗೆ ಮಾತ್ರ ಔಷಧಿ ಕೊಡು ತ್ತಾರೆ. ಮೊದಲು ನಾಡಿ ಹಿಡಿದು ನೋಡುತ್ತಾರೆ. ಆಮೇಲೆ ಔಷಧಿ ಕೊಡುವಾಗ ಬಾಯಲ್ಲಿ ಏನೇನೊ ಮಟಮಟ ಅನ್ನುತ್ತಾರೆ.

ಅಕ್ಟೋಬರ್ ಎರಡನೇ ತಾರೀಖು ನಾವು ಗೋಲ್ಕೊಂಡಾಕ್ಕೆ ಕೇವಲ ನಾಲ್ಕು ಹರಿದಾರಿ ದೂರದಲ್ಲಿದ್ದೆವು. ಅಲ್ಲಿ ರಾಜನ ಡಚ್ ವೈದ್ಯ ಪೀಟ್ರೆ ದ್ಯ ಲೋ (Pitre De Lau) ಎಂಬುವನ ಮನೆಯಲ್ಲಿ ತಂಗಿದೆವು. ಈ ಡಚ್ ವೈದ್ಯನನ್ನು ಬಟೇವಿಯಾದಿಂದ ಬಂದ ಎಂ. ಷೆಟ್ಯೂರ್ (M. Cheteur) ಎಂಬ ರಾಯಭಾರಿ ಕರೆದುಕೊಂಡು ಬಂದನು. ರಾಜನ ಅಪೇಕ್ಷೆಯಂತೆ ಈ ಯುವಕ ಅವನ ಆಸ್ಥಾನದಲ್ಲಿಯೇ ನಿಂತು ರಾಜನ ವೈದ್ಯ ನಾದ. ರಕ್ತವನ್ನು ತೆಗೆದು ಕಾಯಿಲೆಗಳನ್ನು ಗುಣಪಡಿಸುವ ವೈದ್ಯಚಿಕಿತ್ಸಾವಿಧಾನ ಈತನಿಗೆ ಚೆನ್ನಾಗಿ ಬರುತ್ತದೆ. ನಾಲಗೆ ಕೆಳಗೆ ಕೊಯ್ದು ಎಂಟು ಔನ್ಸು ರಕ್ತ ತೆಗೆದರೆ ರಾಜನಿಗೆ ಬರುತ್ತಿದ್ದ ತಲೆನೋವು ಗುಣವಾಗುವುದೆಂದು ವೈದ್ಯನಾದ ದ್ಯ ಲೋ ಹೇಳಿದ. ದ್ಯ ಲೋ ಅಷ್ಟೇ ರಕ್ತ ತೆಗೆದು ರಾಜನ ತಲೆನೋವನ್ನು ಗುಣಪಡಿಸಿದ. ಅಂತಃಪುರದ ಸ್ತ್ರೀಯರೂ ರಕ್ತತೆಗೆಸಿಕೊಳ್ಳಲು ಆಸೆಪಟ್ಟರು. ಅವರು ಪರದೆ ಹಿಂದೆ ಇರುವಂಥವರು. ಪರಕೀಯರು ಅವರ ಮುಖ ನೋಡುವಂತಿಲ್ಲ. ಆದರೂ ದ್ಯ ಲೋ ಪರದೆ ಈ ಕಡೆ ಕುಳಿತು ಆ ಕಡೆಯಿಂದ ಪರದೆಯ ತೂತಿನೊಳಗೆ ನೀಡಿದ್ದ ಕೈಗಳಿಂದ ರಕ್ತ ತೆಗೆದನು. ದ್ಯ ಲೋನಿಗೆ ಈ ಸೇವೆಗಾಗಿ ಕೈತುಂಬ ಪಗೋಡಾ ಹಣವೂ, ಜರತಾರಿ ಉಡುಪಿನ ಗೌರವವೂ ದೊರೆತವು.

ನಾವು ಗೋಲ್ಕೊಂಡಾ ತಲುಪಿದ ಎರಡು ದಿನಗಳ ಅನಂತರ ನವಾಬ ಮೀರ್ ಜುಮ್ಲಾನ ಮಗನನ್ನು ನೋಡಲು ಹೋದೆವು. ಆದರೆ ಆತನೊಡನೆ ಆ ದಿನ ಮಾತ ನಾಡಲಾಗಲಿಲ್ಲ. ಮಾರನೆ ದಿನವೂ ಹಾಗೆಯೇ ಆಯಿತು. ಯಾರೋ ಹೇಳಿದರು,

ನಾವು ಈ ರೀತಿ ಮಾಡುತ್ತಾ ನಮ್ಮ ಮನಸ್ಸ ಸಂತೋಷಪಡಿಸಿಕೊಳ್ಳಬಹುದೇ ಹೊರತು, ನವಾಬನ ಮಗನನ್ನು ನೋಡಲು ಸಾಧ್ಯವಾಗಲಾರದು ಎಂದು. ಈತ ರಾಜನ ದರ್ಬಾರು ನಡೆಯುವವರೆಗೆ ಅಲ್ಲಿದ್ದು ಆಮೇಲೆ ತನ್ನ ಮನೆಗೆ ಹೋದರೆ ಅಲ್ಲಿ ತನ್ನ ಅಂತಃಪುರದ ಸ್ತ್ರೀಯರೊಡನೆ ಮಗ್ನನಾಗಿಬಿಡುತ್ತಾನಂತೆ. ನಮ್ಮ ಸ್ನೇಹಿತ ವೈದ್ಯ ದ್ಯ ಲೋ ನಮ್ಮ ತಾಪತ್ರಯ ನೋಡಿ ತನಗೆ ಪರಿಚಯವಿದ್ದ ರಾಜವೈದ್ಯನ ಮೂಲಕ ನವಾಬನ ಮಗನನ್ನು ಭೇಟಿಮಾಡಿಸುವುದಾಗಿ ಹೇಳಿದ. ಅವನ ಪ್ರಯತ್ನ ಸಫಲವಾಯಿತು. ರಾಜನ ಮಗ ನಮಗೆ ಹೇಳಿಕಳುಹಿಸಿದ. ಅವನನ್ನು ಕಂಡಾಗ ಆತ ಸಲಾಮು ಹೇಳಿ, ಸಾವಿರ ಸಲ ಕ್ಷಮೆ ಕೇಳಿ, ನಾವು ಕುಳಿತುಕೊಳ್ಳುವಂತೆ ಮಾಡಿ, ಬಂದ ವಿಚಾರ ಕೇಳಿದ. ನಾವು ತಂದ ಮುತ್ತುಗಳನ್ನು ರಾಜನಿಗೆ ತೋರಿಸಲು ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಂಡೆವು. ರಾಜಕುಮಾರ ಅವನ್ನು ಮೊದಲು ತನಗೆ ತೋರಿಸಬೇಕೆಂದ. ಮಾರನೇ ದಿನ ಆ ಕೆಲಸ ಮಾಡಿದೆವು. ತೋರಿಸಿದ ಮುತ್ತುಗಳನ್ನು ಒಂದು ಚೀಲದಲ್ಲಿ ಹಾಕಿ ನಮ್ಮ ಮುದ್ರೆಗಳನ್ನು ಒತ್ತಬೇಕೆಂದು ಹೇಳಿದ. ಹಾಗೆಯೇ ಮಾಡಿದೆವು. ರಾಜನು ಅವನ್ನು ನೋಡಿದ ನಂತರ ಚೀಲಕ್ಕೆ ಅವನ ಮುದ್ರೆಒತ್ತುತ್ತಾನೆಂದು ತಿಳಿಸಿದ. ಯಾರಾದರೂ ಮಧ್ಯೆ ಮೋಸಮಾಡಬಾರದೆಂಬ ಉದ್ದೇಶದಿಂದ ಈ ಮುದ್ರೆಗಳನ್ನು ಒತ್ತುವುದಾಗಿ ಆತ ತಿಳಿಸಿದ.

ಮಾರನೇ ದಿನ ಹೊತ್ತಿಗೆ ಮುಂಚೆ ನಾವು ದ್ಯ ಲೋನ ಜೊತೆ ಬೇಟೆಯಾಡಲು ಹೋದೆವು. ಎಂಟು ಒಂಬತ್ತು ಗಂಟೆಗೆ ಬೇಟೆಯಿಂದ ಹಿಂದಿರುಗಿ, ನದಿಯಲ್ಲಿ ಅರಮನೆಯ ಆನೆಗಳ ಮೈ ತೊಳೆಯುವುದನ್ನು ನೋಡಿದೆವು. ಆನೆ ಮಲಗಿದರೆ ಮೇಲೇಳುವುದಿಲ್ಲ ಎಂಬ ಮಾತು ಕೇಳಿದ್ದೆವು. ಇದು ಸುಳ್ಳು. ನೀರಿನಲ್ಲಿ ಒಂದು ಮಗ್ಗಲಿಗೆ ಮಲಗಿದ ಆನೆ ಒಂದು ಕಡೆ ಮೈ ತಿಕ್ಕಿಸಿಕೊಂಡ ಮೇಲೆ, ಇನ್ನೊಂದು ಮಗ್ಗಲಿಗೆ ಹೊರಳುವುದನ್ನು ನಾವು ಕಣ್ಣಾರೆ ಕಂಡೆವು. ಆನೆಗಳನ್ನು ತೊಳೆದ ಮೇಲೆ ಹಳದಿ ಮತ್ತು ಕೆಂಪು ಬಣ್ಣಗಳಿಂದ ಅವುಗಳ ಹಣೆಯನ್ನೂ ಕಣ್ಣುಗಳನ್ನೂ ಅಲಂಕಾರಮಾಡಿದರು. ಬೆನ್ನಿಗೆ ತೆಂಗಿನಕಾಯಿ ಮತ್ತು ಕೊಬ್ಬರಿ ಎಣ್ಣೆ ತಿಕ್ಕಿದರು.

೧೫ ನೇ ತಾರೀಖು (ಅಕ್ಟೋಬರ್) ಮಧ್ಯಾಹ್ನ ಎರಡು ಗಂಟೆಗೆ ರಾಜವೈದ್ಯ ನಮಗೆ ಹೇಳಿಕಳುಹಿಸಿದ. ನಾವು ಹೋದೆವು. ಆತ ನಾವು ಒತ್ತಿದ್ದ ಮುದ್ರೆಯ ಜೊತೆಗೆ ರಾಜನ ಮುದ್ರೆ ಒತ್ತಿದ ಮುತ್ತುಗಳ ಚೀಲವನ್ನು ನಮಗೆ ಹಿಂದಿರುಗಿ ಕೊಟ್ಟು, ಅವುಗಳ ಬೆಲೆ ಕೇಳಿದ. ನಾವು ಒಂದೊಂದು ಮುತ್ತಿಗೂ ಬೆಲೆ ಹೇಳಿದೆವು. ಅಲ್ಲಿದ್ದ ಒಬ್ಬ ಖೋಜಾ ಅದನ್ನೆಲ್ಲಾ ಬರೆದುಕೊಂಡ. ನಮ್ಮನ್ನು ಬೆಲೆ ಕೇಳಿದ ಆ ಖೋಜಾ ಗೋಲ್ಕೊಂಡಾ ರಾಜನ ಆಸ್ಥಾನದಲ್ಲಿರುವ ಜನಕ್ಕೆ ಏನೂ ಗೊತ್ತಿಲ್ಲವೆಂಬಂತೆ ನಾವು ಈ ರೀತಿ ಅಡ್ಡಾದಿಡ್ಡಿ ಬೆಲೆ ಹೇಳುತ್ತಿರುವೆವೆಂದೂ, ರಾಜನು ನಿತ್ಯ ಇಂಥ ಬೆಲೆಯಾದ ಸರಕುಗಳನ್ನು ನೋಡುತ್ತಲೇ ಇರುವನೆಂದೂ ಹೇಳಿದ. ಈ ಮಾತನ್ನು ಕೇಳಿ ನಾನು ಸಿಟ್ಟಾಗಿ ಖೋಜಾನಿಗೆ

ಬೆಲೆವೆಣ್ಣಿನ ಬೆಲೆ ಗೊತ್ತಿರಬಹುದು, ಆದರೆ ಮುತ್ತಿನ ಬೆಲೆ ಗೊತ್ತಿರಲಿಕ್ಕಿಲ್ಲ ಎಂದು ಉತ್ತರ ಇತ್ತೆ. ನಮ್ಮ ಮುತ್ತುಗಳನ್ನು ನಮ್ಮ ಜೇಬಿನೊಳಗೆ ಹಾಕಿಕೊಂಡು, ರಾಜವೈದ್ಯನಿಗೆ ನಮಸ್ಕಾರ ಹೇಳಿ, ನಮ್ಮ ಬಿಡಾರಕ್ಕೆ ಹಿಂದಿರುಗಿದೆವು. ಬಂದ ಕೂಡಲೇ ಎರಡು ಗಾಡಿಗಳನ್ನು (coaches) ಬಾಡಿಗೆಗೆ ತೆಗೆದುಕೊಂಡೆವು. ನಮ್ಮಲ್ಲಿ ಪ್ರತಿಯೊಬ್ಬರ ಬಳಿ ಕಡಿವಾಣಹಾಕಿದ ಕುದುರೆಗಳಿದ್ದುವು. ಮಾರನೆ ದಿನ ಬೆಳಗ್ಗೆ ಗೋಲ್ಕೊಂಡಾದಿಂದ ಹೊರಟುಬಿಟ್ಟೆವು. ಹೆಚ್ಚು ದೂರ ದಾರಿ ಸಾಗಲಿಲ್ಲ. ಏಕೆಂದರೆ, ರಾಜನ ಸೇವೆಯಲ್ಲಿದ್ದ ಪೋರ್ಚುಗೀಸ್, ಇಂಗ್ಲಿಷ್ ಮತ್ತು ಡಚ್ ಗೋಲಂದಾಜರು ನಮ್ಮೊಡನೆ ಬಂದಿದ್ದರು. ಅವರೂ ನಾವೂ ಖುಷಿಯಾಗಿ ಕಾಲ ಕಳೆದೆವು.

ಗೋಲ್ಕೊಂಡಾದಿಂದ ಸೂರತ್ತಿಗೆ ಒಂದೇ ಒಂದು ಮಾರ್ಗ. ಆದ್ದರಿಂದ ಈ ಹಿಂದೆಯೇ ಸೂರತ್ತಿನಿಂದ ಗೋಲ್ಕೊಂಡಾಕ್ಕೆ ಬರುವಾಗ ಹೇಳಿದ ವಿಚಾರವಲ್ಲದೆ ಬೇರೇನೂ ಹೆಚ್ಚಿನ ವಿಚಾರ ಹೇಳುವುದು ಈಗ ಯಾವುದೂ ಇಲ್ಲ. ಒಂದೇ ಒಂದು ವಿಚಾರ ಹೇಳಬೇಕಾಗಿದೆ. ಅದೇನೆಂದರೆ, ನಾವು ಗೋಲ್ಕೊಂಡಾ ಬಿಟ್ಟು ಐದು ದಿನದ ದಾರಿ ನಡೆದು ಮೊಗಲ್ ಚಕ್ರವರ್ತಿಯ ರಾಜ್ಯದಲ್ಲಿ ಹೋಗುತ್ತಿರುವಾಗ ಗೋಲ್ಕೊಂಡಾ ರಾಜನು ನಮ್ಮನ್ನು ಕರೆತರಲು ಕುದುರೆಸವಾರರನ್ನು ಕಳುಹಿಸಿಕೊಟ್ಟ. ನಾವು ಇಷ್ಟು ಜಾಗ್ರತೆ ಹೇಳದೆ ಕೇಳದೆ ಹೋಗುವೆವೆಂದು ನಂಬಿರಲಿಲ್ಲವೆಂದೂ, ನಮ್ಮ ಬಳಿ ಇರುವ ಮುತ್ತುಗಳನ್ನು ತಾನು ಕೊಂಡುಕೊಳ್ಳುವುದಾಗಿಯೂ ಆತ ಹೇಳಿಕಳುಹಿಸಿದ್ದ. ನಾವು ಆಗಲೇ ಮೊಗಲ್ ಆಧಿಪತ್ಯದಲ್ಲಿ ಇದ್ದುದರಿಂದ ಆ ಸವಾರರ ನಾಯಕ ಒತ್ತಾಯಮಾಡಿ ನಮ್ಮನ್ನು ಕರೆದುಕೊಂಡುಹೋಗುವಂತಿರಲಿಲ್ಲ. ನಮ್ಮ ಷಾರ್ಡಿನ್ ಆಗಲೇ ಹಿಂದಿರುಗುವುದಕ್ಕೆ ಮನಸ್ಸು ಇಳಿಯುಬಿಟ್ಟಿದ್ದ. ಆದರೆ ಆ ನಾಡಿನ ವಿಷಯ ತಿಳಿದಿದ್ದ ನಾನು ಒಪ್ಪದೆ ಹೋದೆ.

ನಾವು ನಮ್ಮ ಪ್ರಯಾಣವನ್ನು ಮುಂದುವರಿಸಿ ಸೂರತ್ ತಲುಪಿದೆವು. ಇಲ್ಲಿಗೆ ಬಂದ ಕೆಲವೇ ದಿನಗಳಲ್ಲಿ ಷಾರ್ಡಿನ್ ಪಿತ್ತವಿಕಾರದಿಂದ ಸತ್ತುಹೋದ. ನಾನು ಆಗ್ರಾಕ್ಕೆ ಹೋಗಿ ಷಾಜಹಾನನ್ನು ಕಾಣಬೇಕೆಂದು ಮನಸ್ಸುಮಾಡಿದೆ. ಅಷ್ಟರಲ್ಲಿ ಗುಜರಾತಿನ ಸುಬೇದಾರನಾದ ನವಾಬ್ ಷೈಸ್ತಾಖಾನನಿಂದ ಅಪ್ಪಣೆ ಬಂದಿತು, ನನ್ನ ಬಳಿ ಇರುವ ಬೆಲೆಯಾದ ಮುತ್ತುಗಳನ್ನು ರಾಜನು ಕೊಡಬಹುದಾದ ಬೆಲೆಗೆ ತಾನು ಕೊಂಡುಕೊಳ್ಳಲು ಇಚ್ಛಿಸುವುದಾಗಿ. ಆತ ಅಹಮದಾಬಾದಿನಲ್ಲಿದ್ದ. ಈ ಸುದ್ದಿ ಬಂದದ್ದು ಷಾರ್ಡಿನ್ ಕಾಯಿಲೆ ಮಲಗಿದ್ದಾಗ.

ಸತ್ತುಹೋದ ಷಾರ್ಡಿನನ ಉತ್ತರಕ್ರಿಯೆಗಳನ್ನು ಮುಗಿಸಿಕೊಂಡು ಅಹಮದಾಬಾದಿಗೆ ಹೊರಟೆ. ಹೋದಕೂಡಲೇ ನವಾಬನೊಡನೆ ಒಂದಷ್ಟು ವ್ಯಾಪಾರ ನಡೆಸಿದೆ. ಅವನಿಗೆ ಮುತ್ತುರತ್ನಗಳ ವಿಚಾರ ಚೆನ್ನಾಗಿ ಗೊತ್ತಿದ್ದುದರಿಂದ ಎಷ್ಟು ಬೆಲೆ ಕೊಡಬೇಕೆಂಬುದರ ಬಗ್ಗೆ ಹೆಚ್ಚು ಜಿಜ್ಞಾಸೆ ನಡೆಯಲಿಲ್ಲ. ಚಿನ್ನದ ನಾಣ್ಯ ಅಥವಾ ಬೆಳ್ಳಿ

ನಾಣ್ಯ–ಇವೆರಡರಲ್ಲಿ ಯಾವುದು ಬೇಕಾದರೂ ಕೊಡುವುದಾಗಿ ಹೇಳಿದ. ಚಿನ್ನದ ನಾಣ್ಯ ವಾದರೆ ಹೊರೆ ಕಮ್ಮಿ ಎಂದು ಆ ನಾಣ್ಯದಲ್ಲಿ ಬೆಲೆಯನ್ನು ಪಡೆದೆ. ಅವನ ಬಳಿ ಬೆಳಕು ಕಾಣದ ಹಳೆಯ ಚಿನ್ನದ ಮೊಹರುಗಳಿದ್ದುವು. ಬಹಳ ಅಪ್ಪಟ ಚಿನ್ನ ಅದು. ಆಗ ಒಂದು ಚಿನ್ನದ ರೂಪಾಯಿಗೆ ೧೪ ಬೆಳ್ಳಿ ರೂಪಾಯಿಗಳಂತೆ ಚಲಾವಣೆ ಇತ್ತು. ಖಾನ ೧೪ ೧/೨ ರೂಪಾಯಿನಂತೆ ಹೇಳಿದ. ಚೌಕಾಸಿ ಮಾಡಿ ೧೪ ೧/೪ಕ್ಕೆ ಒಪ್ಪಿಸಿದೆ. ಬೇರೆ ವಿಷಯಗಳಲ್ಲಿ ಉದಾರಿಯಾಗಿ ಇದ್ದ ಈತ ವ್ಯಾಪಾರಸಾಪಾರಗಳಲ್ಲಿ ಬಹಳ ಬಿಗಿ ಯಾದ ಆರ್ಥಿಕತಜ್ಞನಂತೆ ಕಂಡುಬಂದನು.

ಅಹಮದಾಬಾದಿನಲ್ಲಿ ನಾನು ಒಬ್ಬ ಡಚ್ಚನ ಮನೆಯಲ್ಲಿ ಇಳಿದುಕೊಂಡಿದ್ದೆ. ನಾನು ಇಳಿದುಕೊಂಡಿದ್ದ ಕಡೆಗೆ ದಿನಾ ನವಾಬ ನಾಲ್ಕು ಬೆಳ್ಳಿ ತಟ್ಟೆಗಳಲ್ಲಿ 'ಪಿಲ್ಲಾವ್' (Pillau) ಕಳುಹಿಸುತ್ತಿದ್ದ. ಒಂದು ದಿನ ಮೊಗಲ್ ರಾಜ ಹತ್ತು ಹನ್ನೆರಡು ಜನರ ಮೇಲೆ ಹೊರಿಸಿ ಕಳುಹಿಸಿದ ಸೇಬುಗಳಲ್ಲಿ ನನಗಷ್ಟು ಕಳುಹಿಸಿದ. ಈ ಸೇಬುಗಳನ್ನು ಪರ್ಷಿಯಾದಿಂದ ಕಂದಹಾರದ ಮೂಲಕ ತರಿಸಲಾಗಿತ್ತು. ಅಹಮದಾಬಾದಿನಲ್ಲಿ ಈ ಸೇಬುಗಳ ಬೆಲೆ ೩೦೦ರಿಂದ ೪೦೦ ರೂಪಾಯಿಗಳಷ್ಟು ಆಗುತ್ತಿತ್ತು. ನಾನೂ ಡಚ್ಚನೂ ಹೆಂಗಸರೂ (ladies) ಊಟೋಪಚಾರಗಳಲ್ಲಿ ಸಂತೋಷವಾಗಿ ಕಾಲ ಕಳೆದೆವು. ಇಷ್ಟ ಲ್ಲದೆ, ಷೈಸ್ತಾಖಾನ ನನಗೆ ಒಂದು 'ಖಿಲತ್' (kilat) ಅನ್ನೂ, ಜೊತೆಗೆ ಒಂದು ಕತ್ತಿ ಮತ್ತು 'ಖಂಜರ' (khanjar=ಈಟಿ)ವನ್ನೂ ಕೊಟ್ಟು ಗೌರವಿಸಿದ. ಇವುಗಳೆಲ್ಲದರ ಬೆಲೆ ೧೦೦೦ ರೂಪಾಯಿಗಳು. ನಾನು ಕೇಳಿದ ಕುದುರೆ ಕೊಡುವುದಾಗಿ ಹೇಳಿದ. ನನಗೆ ವಯಸ್ಸಾದ ಕುದುರೆ ಬೇಡವೆಂದು, ಒಂದು ಮರಿ ಕುದುರೆಯನ್ನು ಆರಿಸಿ ಲಾಯ ದಿಂದಲೇ ಅದನ್ನು ಹತ್ತಿ ಡಚ್ಚನ ಮನೆಗೆ ಹೊರಟೆ. ಆದರೆ ಆ ಕುದುರೆ ಕುಣಿದು ಕುಪ್ಪಳಿಸಿಕೊಂಡು ಹೋಗುತ್ತಿತ್ತೇ ಹೊರತು ನಡಗೆಯಲ್ಲಿ ಹೋಗಲೊಲ್ಲದು. ಒಬ್ಬ ಡಚ್ ಯುವಕ ಹತ್ತಿ ನೋಡಿದ. ಹತ್ತುವುದೇ ತಡ ಆತ ಜೀನಿನಿಂದ ಬಿದ್ದುಬಿಟ್ಟ. ಆಗ ನಾನು ಷೈಸ್ತಾಖಾನನಿಗೆ ಹೇಳಿದೆ, ವಯಸ್ಸಾದ ಕುದುರೆಯೇ ಸಾಕು ಎಂದು. ಆಗ ಅವನ ತಂದೆ ಸವಾರಿಮಾಡುತ್ತಿದ್ದ ಒಂದು ಕುದುರೆಯನ್ನು ಕೊಡಿಸಿದ. ಮೊದಲಿಗೆ ಅದನ್ನು ಕೊಂಡಾಗ ಅದರ ಬೆಲೆ ೩೦೦೦ ಏಕಸುಗಳಂತೆ (ಅಂದರೆ ಆಗ್ಗೆ ಸುಮಾರು ೭೦೦ ಪೌಂಡುಗಳು). ನನ್ನ ಪ್ರಯಾಣಕ್ಕೆ ಈ ಕುದುರೆ ಬೇಕಾಗಲಿಲ್ಲವಾದ್ದರಿಂದ ಇದನ್ನು ೪೦೦ ರೂಪಾಯಿಗಳಿಗೆ ಒಬ್ಬ ಫ್ರೆಂಚನಿಗೆ ಮಾರಿದೆ. ಆ ಫ್ರೆಂಚನನ್ನು ಷೈಸ್ತಾಖಾನನ ಬಳಿ ಕೆಲಸಕ್ಕೆ ಸೇರಿಸಿದೆ. ಬಂದ ಸಂಬಳದಲ್ಲಿ ಆತ ಸಾಕಷ್ಟು ಉಳಿಸಬಹುದಾಗಿತ್ತು. ಆದರೆ ವಿಷಯಲಂಪಟನಾದ ಆತ ಸಂಪಾದನೆಯನ್ನೆಲ್ಲಾ ಕಳೆದುಕೊಂಡುಬಿಟ್ಟ.

ಅಹಮದಾಬಾದಿನಿಂದ ಸೂರತ್ತಿಗೆ ಹಿಂದಿರುಗಿದ ನಾನು ಗೋಲ್ಕೊಂಡಾಕ್ಕೆ ಪ್ರಯಾಣಮಾಡಿದೆ. ಅಲ್ಲಿಂದ ವಜ್ರದ ಗಣಿಗೆ ಹೋದೆ. ಗಣಿಗೆ ಹೋದ ಉದ್ದೇಶ ವಜ್ರಗಳನ್ನು ಖರೀದಿ ಮಾಡುವುದಕ್ಕಾಗಿ. ಗಣಿಯಿಂದ ವಾಪಸು ಸೂರತ್ತಿಗೆ ಹಿಂದಿರುಗಿದೆ.

ಅಲ್ಲಿ ಗೊತ್ತಾಯಿತು, ಇಂಗ್ಲೀಷರಿಗೂ ಡಚ್ಚರಿಗೂ ಯುದ್ಧ ಆರಂಭವಾಗಿದೆ ಮತ್ತು ಈ ಕಾರಣ ಡಚ್ಚರು ಪರ್ಷಿಯಾಕ್ಕೆ ಹಡಗುಗಳನ್ನು ಕಳುಹಿಸುವುದಿಲ್ಲ ಎಂದು. ಇಂಗ್ಲಿಷರೂ ಹಾಗೆಯೇ ಹೇಳಿದರು. ಅವರು ಕಳುಹಿಸಿದ ನಾಲ್ಕು ಹಡಗುಗಳು ಯಾವ ಘಳಿಗೆಯಲ್ಲೆಂದರೆ ಆ ಘಳಿಗೆ ಹಿಂದಿರುಗಬಹುದೆಂಬ ನಿರೀಕ್ಷೆಯಲ್ಲಿದ್ದರು. ಹೀಗಾಗಿ, ಹಡಗಿನಲ್ಲಿ ಹೋರ್ಮುಸಿಗೆ ಹೋಗುವ ಮಾತೇ ಇಲ್ಲ. ಆಗ್ರಾ ಮತ್ತು ಕಂದಹಾರ್‌ಗಳ ಮೂಲಕ ಭೂಮಾರ್ಗವಾಗಿಯೇ ಪ್ರಯಾಣ ಮಾಡಬೇಕಾಗಿತ್ತು. ಆದರೆ ಆ ಮಾರ್ಗ ಬಹಳ ದೂರ; ಅಲ್ಲದೆ ಯುದ್ಧದ ಕಾರಣ ಪರ್ಷಿಯಾ ಮತ್ತು ಇಂಡಿಯಾದ ಸೈನ್ಯಗಳು ಯುದ್ಧದಲ್ಲಿ ತೊಡಗಿದ್ದುವು. ಆದ್ದರಿಂದ ಪ್ರಯಾಣಮಾಡುವುದು ಬಹಳ ಕಷ್ಟ ಎಂದು ನನಗೆ ಗೊತ್ತಾಯಿತು.

ಹೀಗೆ ಏನೂ ಕೆಲಸವಿಲ್ಲದೆ ಸೂರತ್ತಿನಲ್ಲಿ ಕಾಲ ಕಳೆಯಬೇಕಲ್ಲ ಎಂಬ ಯೋಚನೆಯಲ್ಲಿರುವಾಗ, ಜನವರಿ ೨ನೇ ತಾರೀಖು (೧೬೫೩) ಬಟೇವಿಯಾದಿಂದ ಡಚ್ಚರ ಐದು ಹಡಗುಗಳು ಬಂದುವು. ನನಗಾದ ಸಂತೋಷ ಅಷ್ಟಿಷ್ಟಲ್ಲ. ಈ ಹಡಗುಗಳ ಮುಖ್ಯಸ್ಥ ನನಗೆ ಗೊತ್ತಿದ್ದವನು. ಅವುಗಳಲ್ಲಿ ಜಾಗ ಸಿಕ್ಕುವುದಕ್ಕೆ ತೊಂದರೆ ಇಲ್ಲ ಎಂದು ತಿಳಿದಾಗಲಂತೂ ಪರಮ ಸಂತೋಷವಾಯಿತು. ಹಡಗುಗಳ ಅಧಿಪತಿಗಳನ್ನು (commanders) ವಸಾಹತುಗಳ ಮುಖ್ಯಸ್ಥರುಗಳೆಂದು ಕರೆಯುತ್ತಾರೆ. ಈ ಮುಖ್ಯಸ್ಥರುಗಳು ಯಾರೇ ಆಗಲಿ ನನಗೆ ಬೇಕಾದವರಾಗಿರುತ್ತಿದ್ದರು. ಏಕೆಂದರೆ, ಅವರ ಸ್ವಂತ ಹಣದಲ್ಲಿ ನಾನು ಅವರಿಗಾಗಿ ವಜ್ರಗಳನ್ನು ಕೊಂಡುಕೊಡುತ್ತಿದ್ದೆ. ಅವರು ಸ್ವಂತ ವ್ಯಾಪಾರ ಮಾಡುವುದಕ್ಕೆ ಕಂಪೆನಿ ಅವಕಾಶಕೊಟ್ಟಿರಲಿಲ್ಲ. ಆದ್ದರಿಂದ ಗುಟ್ಟಾಗಿ ನನ್ನ ಮೂಲಕ ವ್ಯಾಪಾರ ಮಾಡುತ್ತಿದ್ದರು. ಹೀಗಾಗಿ ನನ್ನ ಬಗ್ಗೆ ಡಚ್ ಹಡಗುಗಳ ಮುಖ್ಯಸ್ಥರೆಲ್ಲಾ ದಯಾದಾಕ್ಷಿಣ್ಯ ತೋರಿಸುತ್ತಿದ್ದರು. ಅಲ್ಲದೆ ನಾನು ಅವರ ಹೆಂಡತಿಯರಿಗೆ ಸಂತೋಷವಾಗುವಂತೆ ನಡೆದುಕೊಳ್ಳುತ್ತಿದ್ದೆ. ಪರ್ಷಿಯಾದಿಂದ ಇಂಡಿಯಾಕ್ಕೆ ಬರುವಾಗಲೆಲ್ಲ ಒಳ್ಳೆಯ ವೈನನ್ನೂ ರುಚಿಯಾದ ಹಣ್ಣುಗಳನ್ನು ತರುತ್ತಿದ್ದೆ. ಇಂಡಿಯಾದಲ್ಲಿದ್ದ ಡಚ್ಚರಿಗಿಂತ ಚೆನ್ನಾಗಿ ಅಡುಗೆಮಾಡುವ ಅಡುಗೆಯವನೊಬ್ಬ ಯಾವಾಗಲೂ ನನ್ನ ಬಳಿ ಇರುತ್ತಿದ್ದ. ಅವನಿಗೆ ರುಚಿರುಚಿಯಾದ ಸಾರು (soup) ಮಾಡುವುದು ಮತ್ತು ತರಹ ತರಹ ಅಡುಗೆ ಮಾಡುವುದು ಬರುತ್ತಿತ್ತು. ನಾನು ಪಾರಿವಾಳಗಳನ್ನು ಘಮಘಮ ಎನ್ನುವ ರೀತಿಯಲ್ಲಿ ಹುರಿಸಿ, ಲಘು ಭೋಜನಕೂಟಗಳನ್ನು ಏರ್ಪಡಿಸುತ್ತಿದ್ದೆ. ಈ ಭೋಜನಗಳಾದ ಮೇಲೆ ಸ್ಥಳದಲ್ಲಿ ಸಿಕ್ಕುವ ಜನರ ಆಟಪಾಟ ವಿನೋದಗಳನ್ನು ಏರ್ಪಡಿಸುತ್ತಿದ್ದೆ. ಈ ಕೂಟಗಳಿಗೆ ಡಚ್ ಹೆಂಗಸರು ತಮ್ಮ ಗಂಡಂದಿರೊಂದಿಗೆ ಬಂದು ಬಹು ಸಂತೋಷವಾಗಿ ಕಾಲ ಕಳೆಯುತ್ತಿದ್ದರು.

ಯುದ್ಧದ ಕಾರಣ ಹಡಗಿನಲ್ಲಿ ಹೋಗುವುದರ ಅಪಾಯವನ್ನು ಆ ಹಡಗುಗಳ ಮುಖ್ಯಸ್ಥ ನನಗೆ ಹೇಳಿದರೂ ನಾನು ಕೆಲಸವಿಲ್ಲದೆ ಸೂರತ್ತಿನಲ್ಲಿ ಕುಳಿತುಕೊಳ್ಳಲಾರದೆ

ಹೊರಟೇಬಿಟ್ವೆ. ೧೬೫೪ರ ಜನವರಿ ೬ನೇ ತಾರೀಖು ಹಡಗಿನಲ್ಲಿ ಹೊರಟು, ದಿಯು ಮುಟ್ಟಿ, ಅಲ್ಲಿಂದ ಸಿಂಧ್‌ಗೆ ಹೊರಟೆ. ಅಲ್ಲಿ ಇಂಗ್ಲಿಷ್ ಹಡಗುಗಳಿಗೂ ನಮ್ಮ ಹಡಗುಗಳಿಗೂ ಯುದ್ಧ ಆಗಿಯೇಬಿಟ್ಟಿತು. ಕೊನೆಗೆ ಇಂಗ್ಲಿಷರು ಗೆದ್ದರು. ಆದರೆ ಎರಡೂ ಕಡೆ ಸತ್ತವರು ಬಹಳ. ಸೂರತ್ತಿನಲ್ಲಿ ೩೮ರವರೆಗೆ ಲಂಗರು ಹಾಕಿ ಸುಧಾರಿಸಿಕೊಂಡು, ಗೊಂಬ್ರೂನನ್ನು ಮಾರ್ಚಿ ೭ನೇ ತಾರೀಖು ಮುಟ್ಟಿದೆವು. ಅಲ್ಲಿಗೆ ಹೋದ ಕೂಡಲೇ ನಾನು ಮಾಡಿದ ಕೆಲಸವೆಂದರೆ, ಯುದ್ಧದಲ್ಲಿ ನನ್ನನ್ನು ಕಾಪಾಡಿದ ಆ ಪರಮಾತ್ಮನಿಗೆ ಪ್ರಣಾಮಗಳನ್ನು ಅರ್ಪಿಸಿದುದು.

ಈಗ ನಾನು ಈ ಚರಿತ್ರೆಯನ್ನು (ಮೊಗಲ್ ಚಕ್ರವರ್ತಿಗಳ ಚರಿತ್ರೆಯನ್ನು) ಯಾವ ವ್ಯಾಖ್ಯಾನವೂ ಇಲ್ಲದೆ ಮತ್ತು ನನ್ನ ಪ್ರವಾಸದ ವೇಳೆ ಹೇಗೆ ಆ ವಿಷಯಗಳನ್ನು ಸಂಗ್ರಹಿಸಿದೆ ಎಂಬುದನ್ನು ವರ್ಣಿಸದೆ ಬರೆಯುತ್ತಿದ್ದೇನೆ. ಇದನ್ನು ಓದಿದದವರು ತಮ್ಮದೇ ಆದ ನೈತಿಕ ಹಾಗೂ ರಾಜಕೀಯ ಪ್ರತಿಕ್ರಿಯೆಗಳಿಗೆ ಬರುವುದಾದರೆ ನನ್ನ ಅಭ್ಯಂತರವಿಲ್ಲ. ನಾನು ಸ್ಥಳದಲ್ಲಿಯೇ ಮಾಡಿಕೊಂಡ ಟಿಪ್ಪಣಿಗಳ ಅನುಸಾರ ಮೊಗಲ್ ಸಾಮ್ರಾಜ್ಯದ ಚಿತ್ರವನ್ನು ಚಾಚೂ ತಪ್ಪದೆ ಚಿತ್ರಿಸಿದರೆ ಸಾಕೆಂದು ಭಾವಿಸಿದ್ದೇನೆ[1].

ಹಿಂದೂಸ್ಥಾನದ ಬಹು ಭಾಗವನ್ನು ಹೊಂದಿರುವ ಈ ದೊಡ್ಡದೂ ವಿಶಾಲವೂ ಆದ ಮೊಗಲ್ ಸಾಮ್ರಾಜ್ಯ ಇಂಡಸ್ ನದಿಯ ಈ ಕಡೆ ಇರುವ ಪರ್ವತಗಳಿಂದ ಆ ಕಡೆ ಗಂಗಾ ನದಿಯಿಂದಾಚೆ ಅರಕಾನ್, ತಿಪೆರಾ (ತ್ರಿಪುರ) ಮತ್ತು ಅಸ್ಸಾಂ ರಾಜ್ಯಗಳವರೆಗೆ ವ್ಯಾಪಿಸಿದೆ. ಪಶ್ಚಿಮಕ್ಕೆ ಪರ್ಷಿಯಾ ಮತ್ತು ಟಾರ್ಟರಿವರೆಗೆ, ದಕ್ಷಿಣಕ್ಕೆ ಗೋಲ್ಕೊಂಡಾ ಬಿಜಾಪುರರಾಜ್ಯಗಳವರೆಗೆ, ಉತ್ತರಕ್ಕೆ ಕಾಕಸಸ್ ಪರ್ವತಗಳು ಮತ್ತು ಕಸ್ತೂರಿಯ ದೇಶವಾದ ಭೂತಾನದವರೆಗೆ, ವಾಯುವ್ಯ ದಿಕ್ಕಿಗೆ ಜಗತಾಯ್ (ಕಾಥೇ-ಹಿಂದಿನ ಚೀನಾದೇಶದ ಉತ್ತರ ಭಾಗ)ವರೆಗೆ ಹಬ್ಬಿದೆ.

ಅನೇಕ ಜನ ಇಂಡಿಯಾದ ಬಗ್ಗೆಯೂ ಮತ್ತು ಇಂಡಿಯನರ ಜಾಯಮಾನದ (genius) ಬಗ್ಗೆಯೂ ಆಗಲೇ ಬರೆದಿದ್ದಾರೆ. ಆದ್ದರಿಂದ ಅವುಗಳ ಬಗ್ಗೆ ನಾನು ಮತ್ತೆ

---

[1] ಟಾವೆರ್‌ನ್ಯೇ ಕೊಟ್ಟಿರುವ ಈ ಚರಿತ್ರೆಗೂ ಬೆರ್‌ನ್ಯೇ ಪ್ರವಾಸಿ ತಿಳಿಸಿರುವ ಚರಿತ್ರೆಗೂ ತುಂಬಾ ಹೋಲಿಕೆ ಇದೆ. ಈ ಕಾರಣ ಈ ಇಬ್ಬರು ಪ್ರವಾಸಿಗರು ಒಟ್ಟೊಟ್ಟಿಗೆ ಪ್ರವಾಸ ಮಾಡಿದ ಸಂದರ್ಭಗಳಲ್ಲಿ ಟಾವೆರ್‌ನ್ಯೇ ಸಹಸಂಚಾರಿ ಬೆರ್‌ನ್ಯೇಯಿಂದ ವಿಷಯಗಳನ್ನು ಸಂಗ್ರಹಿಸಿರಬಹುದು. ಬೆರ್‌ನ್ಯೇನ ಪ್ರವಾಸಗ್ರಂಥ ಪ್ರಕಟವಾದ ತರುವಾಯ ಟಾವೆರ್‌ನ್ಯೇನ ಗ್ರಂಥ ಪ್ರಕಟವಾಯಿತಾದ ಕಾರಣ, ಮೊದಲೇ ಪ್ರಕಟವಾದ ಬೆರ್‌ನ್ಯೇನ ಗ್ರಂಥದಿಂದ ಟಾವೆರ್‌ನ್ಯೇ ವಿಷಯಗಳನ್ನು ಪಡೆದುಕೊಂಡಿರುವ ಸಾಧ್ಯತೆಯೂ ಉಂಟು. ಏನೇ ಆಗಲಿ, ಟಾವೆರ್‌ನ್ಯೇ ತಾನು ಸಂಗ್ರಹಿಸಿದ ಹಲವಾರು ಸಂಗತಿಗಳನ್ನು ತನ್ನದೇ ಆದ ಶೈಲಿಯಲ್ಲಿ ಹೊಸ ರೂಪಕೊಟ್ಟು ವರ್ಣಿಸಿದ್ದಾನೆ.

ಬರೆಯಲು ಹೋಗದೆ, ಹೆಚ್ಚು ಮುಖ್ಯವಾದ, ಆದರೆ ಬಹಳ ಜನಕ್ಕೆ ಗೊತ್ತಿಲ್ಲದ ವಿಷಯಗಳನ್ನು ಕುರಿತು ಮಾತ್ರ ಬರೆಯಲಿದ್ದೇನೆ. ಮೊಟ್ಟಮೊದಲು ಇಂಡಿಯಾದ ರಾಜರುಗಳ, ಅಂದರೆ ಮೊಗಲರೆಂದು ಸಾಮಾನ್ಯವಾಗಿ ಕರೆಯಲ್ಪಡುವವರ, ಮನೆತನದ ವಿಚಾರ ಹೇಳುತ್ತೇನೆ. 'ಮೊಗಲ' ಎಂದರೆ ಬಿಳಿಯ ಎಂದರ್ಥ. ಏಕೆಂದರೆ, ಇಂಡಿಯಾದಲ್ಲಿಯೇ ಹುಟ್ಟಿ ಬೆಳೆದವರ ಬಣ್ಣ ಕಂದು ಅಥವಾ ಆಲಿವ್ ಎಣ್ಣೆ ಬಣ್ಣಕ್ಕೆ ಇರುತ್ತದೆ. ಇವರನ್ನು ಮೊದಲಿಗೆ ಗೆದ್ದುಕೊಂಡ ಹೊರಗಿನವರ ಬಣ್ಣ ಬಿಳುಪು. ಈ ಕಾರಣ ಅವರನ್ನು 'ಬಿಳಿಯರು' ಅಥವಾ 'ಮೊಗಲರು' ಎಂದು ಕರೆದರು.

ಹಿಂದಿನ ತಲೆಮಾರುಗಳ ಹೆಸರಾಂತ ವೀರರು ಸಾಧಿಸಲಾರದುದನ್ನು ಸಾಧಿಸಿ, ಚೀನಾದಿಂದ ಪೋಲೆಂಡ್‌ವರೆಗಿನ ವಿಶಾಲ ಪ್ರದೇಶವನ್ನು ಗೆದ್ದ ತಾಮುರ್ ಲೆಂಗನ ಅಥವಾ ತಾಮುರ್ ಲೇನ್ ಎಂದು ಸಾಮಾನ್ಯವಾಗಿ ಕರೆಯಲ್ಪಡುವವನ ಸಂತತಿಯಲ್ಲಿ ಹನ್ನೊಂದನೆಯವನು ಈಗ ಆಳುವ ಔರಂಗಜೇಬ. ತಾಮುರ್ ಲೇನನ ತರುವಾಯ ಆಳಿದವರು ಇಂಡಸ್ ಮತ್ತು ಗಂಗಾ ನದಿಗಳ ಮಧ್ಯೆ ಇದ್ದ ಇಂಡಿಯಾವನ್ನೆಲ್ಲಾ ಗೆದ್ದುಕೊಂಡು ಅಲ್ಲಿಯ ರಾಜರುಗಳನ್ನು ನಿರ್ನಾಮಮಾಡಿದರು. ಹೀಗಾಗಿ, ಔರಂಗಜೇಬನ ಸ್ವಾಧೀನದಲ್ಲಿ ಈಗ ಗುಜರಾಜ್, ಡೆಕ್ಕನ್, ದಿಹ್ಲಿ, ಮುಲ್ತಾನ್, ಲಾಹೋರ್, ಕಾಶ್ಮೀರ, ಬಂಗಾಳ—ಈ ರಾಜ್ಯಗಳೂ, ಅನೇಕ ನಾಡುಗಳೂ ಸೇರಿವೆ. ಇಷ್ಟಲ್ಲದೆ, ಅವನಿಗೆ ಪೊಗದಿಗಳನ್ನೂ ಕಪ್ಪ ಕಾಣಿಕೆಗಳನ್ನೂ ಕೊಟ್ಟುಕೊಂಡಿರುವ ರಾಜರುಗಳೂ, ಶ್ರೀಮಂತ ಸರದಾರರೂ, ಪಾಳೆಯಗಾರರೂ ಅನೇಕರು ಇದ್ದಾರೆ.

ತಾಮುರ್‌ಲೇನನಿಂದ ಹಿಡಿದು ಔರಂಗಜೇಬನವರೆಗೆ ಆಳಿದ ರಾಜರುಗಳು ಯಾರಾರೆಂದರೆ :

(೧) ತಾಮೂರ್ ಲೇನ, ಅಂದರೆ 'ಕುಂಟ'. ಇವನ ಒಂದು ಕಾಲು ಇನ್ನೊಂದು ಕಾಲಿಗಿಂತ ತುಂಡಾಗಿತ್ತು. ಸತ್ತಮೇಲೆ ಈತನನ್ನು ಸಮರ್‌ಖಂಡ್ ನಾಡಿನಲ್ಲಿ ಹೂಳಿದರು. ಅಲ್ಲಿಯೇ ಈತ ಹುಟ್ಟಿದ್ದು ;

(೨) ತಾಮೂರ್ ಲೇನನ ಮಗ ಮಿರಾನ್ ಷಾ ;

(೩) ಈತನ ಮಗ ಸುಲ್ತಾನ್ ಮಹಮ್ಮದ್ ;

(೪) ಈತನ ಮಗ ಸುಲ್ತಾನ್ ಅಬೂ ಸಯ್ಯದ್ ಮಿರ್ಜಾ ;

(೫) ಈತನ ಮಗ ಉಮರ್ ಷೇಖ್ ಮಿರ್ಜಾ ;

(೬) ಈತನ ಮಗ ಸುಲ್ತಾನ್ ಬಾಬರ್, ಎಂದರೆ 'ಕೆಚ್ಚೆದೆಯ ರಾಜಕುಮಾರ.' ಬಾಬರನೇ ಮೊದಲಿಗೆ ಇಂಡಿಯಾದಲ್ಲಿ ಸರ್ವಶಕ್ತನಾಗಿ ರಾಜ್ಯವಾಳಿದವನು. ಈತ ಸತ್ತದ್ದು ೧೫೩೨ರಲ್ಲಿ ;

(೭) ಬಾಬರನ ಮಗ ಹುಮಾಯೂನ್, ಎಂದರೆ 'ಸಂತಸ'. ಈತ ಸತ್ತದ್ದು ೧೫೫೨ರಲ್ಲಿ ;

(೮) ಹುಮಾಯೂನನ ಮಗನ ಹೆಸರು ಅಬ್ದುಲ್ ಫತೇ ಜಲಾಲ್–ಉದ್–ದಿನ್ ಮಹಮ್ಮದ್ ಎಂದು. ಈತನನ್ನು ಸಾಮಾನ್ಯವಾಗಿ 'ಅಕ್ಬರ್' ಎಂದರೆ 'ಮಹಾ ಶಕ್ತಿವಂತ' ಎಂಬ ಹೆಸರಿನಿಂದ ಕರೆಯುತ್ತಾರೆ. ಈತ ೫೪ ವರ್ಷಗಳ ಕಾಲ ಆಳಿ, ೧೬೦೫ರಲ್ಲಿ ಕಾಲವಾದ ;

(೯) ಈತನ ಮಗ ಸುಲ್ತಾನ್ ಸಲೀಂ ಅಥವಾ ಜಹಾಂಗೀರ್ ಪಾದಿಷಾ (ಬಾದ್‌ಷಾ). ಹಾಗೆಂದರೆ 'ವಿಶ್ವವಿಕ್ರಮಿ' ಎಂದು. ತಂದೆ ಸತ್ತನಂತರ ಸಿಂಹಾಸನಕ್ಕೆ ಬಂದ ಈತ ೧೬೨೭ರಲ್ಲಿ ಕಾಲವಾದನು. ಈತನಿಗೆ ನಾಲ್ಕು ಗಂಡುಮಕ್ಕಳು : ಸುಲ್ತಾನ್‌ಖುಸ್ರು, ಸುಲ್ತಾನ್‌ಖುರ್ರಂ, ಸುಲ್ತಾನ್ ಪರ್‌ವೆಜ್, ಮತ್ತು ಷಾ ದಾನಿಯಾಲ್ ;

(೧೦) ಸುಲ್ತಾನ್ ಖುರ್ರಂ ಜಹಾಂಗೀರನ ಅನಂತರ ಪಟ್ಟಕ್ಕೆ ಬಂದ. ಈತನನ್ನು ಷಾಜಹಾನ್ ಎಂದು ಕರೆಯುತ್ತಿದ್ದರು ;

(೧೧) ಈಗ ಆಳುವ ಚಕ್ರವರ್ತಿಯ ಹೆಸರು ಔರಂಗಜೇಬ, ಅಂದರೆ 'ಸಿಂಹಾಸನದ ರತ್ನ' ಎಂದು.

ಇಡೀ ಏಷ್ಯಾದಲ್ಲಿ ಮೊಗಲ್ ಚಕ್ರವರ್ತಿಯು ಬಹು ಬಲಾಢ್ಯನೂ ಶ್ರೀಮಂತನೂ ಎಂಬುದರಲ್ಲಿ ಸಂದೇಹವಿಲ್ಲ.

ಮೊಗಲ್ ಸಾಮ್ರಾಜ್ಯದಲ್ಲಿ ಷಾಜಹಾನ ಚಕ್ರವರ್ತಿ ಸತ್ತುಹೋದನೆಂಬ ಸುಳ್ಳು ಸುದ್ದಿಯ ಕಾರಣದ ಮೇಲೆ ಉಂಟಾದ ಕ್ರಾಂತಿಗಳು ಮುಖ್ಯವೂ ನೆನೆಸಿಕೊಳ್ಳುವಂಥವೂ ಆದ ಅನೇಕ ಪ್ರಸಂಗಗಳಿಂದ ಕೂಡಿವೆ. ಅವುಗಳನ್ನು ಇಡೀ ಪ್ರಪಂಚಕ್ಕೆ ತಿಳಿಸುವುದು ಅವಶ್ಯಕ.

ಷಾಜಹಾನ್ ಚಕ್ರವರ್ತಿ ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ರಾಜ್ಯವಾಳಿದನು. ತಂದೆ ತನ್ನ ಮಕ್ಕಳನ್ನು ನೋಡಿಕೊಳ್ಳುವಂತೆ ಈತ ತನ್ನ ಪ್ರಜೆಗಳನ್ನು ನೋಡಿಕೊಂಡ. ಕಳ್ಳಕಾಕರಿಗೆ ಅವಕಾಶವೇ ಇರಲಿಲ್ಲ. ಹೆದ್ದಾರಿಗಳಲ್ಲಿ ಕಳ್ಳತನ ದರೋಡೆಗಳಿರಲಿಲ್ಲ. ಅಷ್ಟರಮಟ್ಟಿಗೆ ಇತ್ತು ತಳವಾರಿಕೆ. ಹೀಗೆ ರಾಜ್ಯಭಾರಮಾಡಿದ ರಾಜ ತನ್ನ ಇಳಿವಯಸ್ಸಿನಲ್ಲಿ ಅವಿವೇಕದ ಒಂದು ಕೆಲಸ ಮಾಡಿಬಿಟ್ಟ. ಇಷ್ಟೇ ಅಲ್ಲದೆ, ಯಾವುದೋ ಒಂದು ಔಷಧಿಯನ್ನೂ ಉಪಯೋಗಿಸಿದ. ಇದರಿಂದಾಗಿ ಅವನಿಗೆ ಸಾಯುವುದೊಂದೇ ಬಾಕಿ ಉಳಿಯಿತು. ಎರಡು ಮೂರು ತಿಂಗಳ ಕಾಲ ತನ್ನ ಅಂತಃಪುರದಲ್ಲಿ ಇರಬೇಕಾಯಿತು. ವಾರಕ್ಕೆ ಮೂರು ಸಲ ಅಥವಾ ಕನಿಷ್ಠಪಕ್ಷ ಹದಿನೈದು ದಿನಗಳಿಗೊಮ್ಮೆಯಾದರೂ ರಾಜರುಗಳು ತಮ್ಮ ಪ್ರಜೆಗಳಿಗೆ ದರ್ಶನಕೊಡುವ ಪದ್ಧತಿ ಮೊದಲಿನಿಂದ ನಡೆದುಕೊಂಡು ಬಂದಿದೆ. ಆದರೆ ಅಂತಃಪುರವನ್ನು ಸೇರಿದ ಷಾಜಹಾನ ಜನಗಳಿಗೆ ದರ್ಶನಕೊಡುವುದು ಬಹು ಅಪರೂಪವಾಯಿತು. ಹೀಗಾಗಿ ಆತ ಸತ್ತುಹೋಗಿರಬೇಕೆಂದು ಜನಗಳು ಭಾವಿಸಿದರು.

ಷಾಜಹಾನನಿಗೆ ಆರು ಜನ ಮಕ್ಕಳು : ನಾಲ್ಕು ಗಂಡು, ಎರಡು ಹೆಣ್ಣು. ಗಂಡು ಮಕ್ಕಳಲ್ಲಿ ಹಿರಿಯವ ದಾರಾಷಾ ; ಎರಡನೆಯವ ಸುಲ್ತಾನ್ ಷೂಜಾ ; ಮೂರನೆಯವ ಈಗ ರಾಜ್ಯವಾಳುವ ಔರಂಗಜೇಬ ಮತ್ತು ಕೊನೆಯವ ಮುರಾದ್ ಭಕ್ಷ. ಹೆಣ್ಣು ಮಕ್ಕಳಲ್ಲಿ ಹಿರಿಯವಳು ಬೇಗಂ ಸಾಹಿಬ್ ಮತ್ತು ಕಿರಿಯವಳು ರೋಷನಾರಾ ಬೇಗಂ. ಈ ಹೆಸರುಗಳೆಲ್ಲಾ ಈ ದೇಶದ ಭಾಷೆಯಲ್ಲಿ ಶೂರ, ಧೀರ, ಗಂಭೀರ ಮುಂತಾದ ಅರ್ಥ ಗಳನ್ನು ಕೊಡುತ್ತವೆ. ಇವರ ಹುಟ್ಟುಹೆಸರುಗಳೇ ಬೇರೆ ಆಮೇಲೆ ಇವರಿಗೆ ಮೇಲ್ಕಂಡಂಥ ಹೆಸರುಗಳನ್ನು ಕೊಟ್ಟರು. ಇದೇ ಕ್ರಮ ಯೂರೋಪಿನಲ್ಲಿಯೂ ಇದೆ.

ತಂದೆಗೆ ನಾಲ್ಕು ಜನ ಗಂಡುಮಕ್ಕಳ ಮೇಲೂ ಸಮನಾದ ಪ್ರೀತಿಯಿತ್ತು. ಒಬ್ಬೊಬ್ಬ ಮಗನನ್ನು ಒಂದೊಂದು ಪ್ರಾಂತದ ಅಥವಾ ಉಪರಾಜ್ಯದ ಗೌರ್ನರ್ ಅಥವಾ ವೈಸರಾಯ್ (ಸುಬೇದಾರ್) ಆಗಿ ನೇಮಿಸಿದ್ದ. ಹಿರಿಯ ಮಗ ದಾರಾಷಾನಿಗೆ ದಿಲ್ಲಿ ರಾಜ್ಯವನ್ನು ಕೊಟ್ಟು ತನ್ನ ಬಳಿಯೇ ಇಟ್ಟುಕೊಂಡಿದ್ದ. 'ಸಿಂಧಿ' ರಾಜ್ಯದ ಮೇಲೂ ದಾರಾಷಾನಿಗೆ ಅಧಿಕಾರವಿತ್ತು. ಆದರೆ ಅದನ್ನು ಆತ ಒಬ್ಬ ಉಪರಾಜ್ಯಪಾಲನ ಮೂಲಕ ನಡೆಸುತ್ತಿದ್ದ. ಸುಲ್ತಾನ್ ಷೂಜನಿಗೆ ಬಂಗಾಳ ರಾಜ್ಯವನ್ನೂ, ಔರಂಗಜೇಬ ನಿಗೆ ಡೆಕ್ಕನ್ ರಾಜ್ಯವನ್ನೂ, ಮುರಾದ್ ಭಕ್ಷನಿಗೆ ಗುಜರಾತ್ ರಾಜ್ಯವನ್ನೂ ವಹಿಸಿದ್ದ. ಎಲ್ಲಾ ಮಕ್ಕಳಿಗೂ ಸಮಾಧಾನವಾಗುವ ರೀತಿಯಲ್ಲಿ ರಾಜ್ಯಗಳನ್ನು ಹಂಚಿರುವೆನೆಂದು ತಂದೆ ಭಾವಿಸಿದರೂ, ಮಕ್ಕಳಲ್ಲಿ ಅತೃಪ್ತಿ ಅಸಮಾಧಾನಗಳು ಇದ್ದೇ ಇದ್ದುವು. ಇವೇ ಮೊಗಲ್ ಸಾಮ್ರಾಜ್ಯದಲ್ಲಿ ಆಂದೋಳನಕ್ಕೆ ಎಡೆಮಾಡಿಕೊಟ್ಟವು.

ಅಂತಃಪುರವನ್ನು ಸೇರಿ ಸ್ತ್ರೀಯರ ಮಧ್ಯೆ ಮರೆಯಾದ ಷಾಜಹಾನ ಸತ್ತೇಹೋಗಿ ದ್ದಾನೆಂದು ಜನ ಭಾವಿಸಿದರಷ್ಟೆ. ಅಷ್ಟೇ ಅಲ್ಲದೆ, ಹಿರಿಯ ಮಗ ದಾರಾಷಾ ಚಕ್ರಾಧಿ ಪತ್ಯವನ್ನು ತನ್ನದಾಗಿ ಮಾಡಿಕೊಳ್ಳಲು ತಂದೆಯ ಸಾವನ್ನು ಮರೆಮಾಚಿದ್ದಾನೆಂದೂ ಜನ ಭಾವಿಸಿದರು ತಾನು ಸಾಯುವುದು ಖಂಡಿತ ಎಂದು ಷಾಜಹಾನನಿಗೆ ಸ್ಪಷ್ಟವಾದಾಗ ಆತ ರಾಜ್ಯದ ಎಲ್ಲಾ ಅಮೀರರುಗಳನ್ನು ಕರೆಸಿಕೊಂಡು ಅವರ ಮುಂದೆ ತನ್ನ ಹಿರಿಯ ಮಗನಾದ ದಾರಾಷಾನಿಗೆ ಸಿಂಹಾಸನದ ಮೇಲೆ ಕುಳಿತುಕೊಳ್ಳುವಂತೆ ಹೇಳಿರಬೇಕು. ಅಕಸ್ಮಾತ್ ತನ್ನ ಸಾವು ನಿಧಾನವಾದರೂ ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿ ಮರಣ ಹೊಂದಬೇಕೆಂದು ಆತನ ಆಸೆಯಾಗಿತ್ತು. ಉಳಿದ ಮೂರು ಮಕ್ಕಳು ತನ್ನ ಬಗ್ಗೆ ಇತ್ತೀಚೆಗೆ ತೋರಿಸುತ್ತಿದ್ದ ಅನಾದರಣೆಯೂ, ಹಿರಿಯ ಮಗನು ತೋರಿಸುತ್ತಿದ್ದ ಆದರಣೆಯೂ ತಂದೆಯ ಈ ನಿರ್ಧಾರಕ್ಕೆ ಕಾರಣವಾಗಿತ್ತು. ಹಾಸಿಗೆ ಹಿಡಿದು ಮಲಗಿದ ತಂದೆಯ ಶುಶ್ರೂಷೆಯನ್ನು ದಾರಾಷಾ ಹಗಲು ರಾತ್ರಿ ತಪ್ಪದೆ ಮಾಡುತ್ತಿದ್ದ. ರಾತ್ರಿ ಹೊತ್ತು ಸಹ ಆತ ತಂದೆಯ ಮಂಚದ ಬಳಿ, ಕೆಳಗೆ ಜಮಖಾನದ ಮೇಲೆ ಮಲಗಿ ಕೊಳ್ಳುತ್ತಿದ್ದ.

ತಂದೆ ಸತ್ತುಹೋದನೆಂಬ ಸುಳ್ಳು ಸುದ್ದಿಯನ್ನು ಕೇಳಿದ ಉಳಿದ ಮೂರು

ಮಕ್ಕಳು ಸಿಂಹಾಸನಕ್ಕೆ ಹಾತೊರೆದರು. ಗುಜರಾತಿನ ಮುರಾದ್ ಭಕ್ಷ್ ಸೂರತ್ತಿಗೆ ಮುತ್ತಿಗೆ ಹಾಕಿ ಅದನ್ನು ವಶಮಾಡಿಕೊಂಡು, ಅಲ್ಲಿ ಸಿಕ್ಕಿದ ಅಪಾರ ಭಂಡಾರವನ್ನು ತನ್ನದಾಗಿ ಮಾಡಿಕೊಂಡ. ಸೂರತ್ತಿನ ಕೊತ್ವಾಲನು ಇನ್ನೂ ಬದುಕಿರುವ ಚಕ್ರವರ್ತಿಯಿಂದ ತನಗೆ ಅಪ್ಪಣೆ ಬಂದಹೊರತು ನಗರವನ್ನು ಒಪ್ಪಿಸುವುದಿಲ್ಲವೆಂಬ ನಿಲವು ತಾಳಿದ. ಆದರೆ ಮುರಾದ್ ಭಕ್ಷ್‌ನ ಕಡೆಯ ಖೋಜಾ[1] ಷಾಬಾಷ್‌ಖಾನ್ ಯೂರೋಪಿನವನೊಬ್ಬನ ಸಹಾಯದಿಂದ ಎರಡು ಸಿಡಿಮದ್ದಿನ ಗಡಿಗೆಗಳನ್ನು ಉಪಯೋಗಿಸಿ, ಕೋಟೆಯನ್ನು ಕೆಡವಿ, ಒಳನುಗ್ಗಿ, ಹೆಂಗಸರು ಮಕ್ಕಳನ್ನು ಸೆರೆಹಿಡಿದು ತನ್ನ ವಶಪಡಿಸಿಕೊಂಡು, ನಗರವನ್ನು ಒಪ್ಪಿಸದಿದ್ದರೆ ಅವರನ್ನೆಲ್ಲಾ ಕೊಂದುಹಾಕುವುದಾಗಿ ಹೆದರಿಸಿದ. ಅನಿವಾರ್ಯವಾಗಿ ನಗರದ ಕೊತ್ವಾಲ ಶರಣಾಗತನಾಗಬೇಕಾಯಿತು. ನಗರದಲ್ಲಿ ಸಿಕ್ಕಿದ ಭಂಡಾರವನ್ನು ಷಾಬಾಷ್‌ಖಾನ ಅಹಮದಾಬಾದಿನಲ್ಲಿದ್ದ ಮುರಾದ್ ಭಕ್ಷ್‌ನ ಬಳಿಗೆ ಕಳುಹಿಸಿಕೊಟ್ಟ.

ಸೂರತ್ತು ತನ್ನ ವಶವಾಯಿತೆಂಬ ಸುದ್ದಿ ಕೇಳಿದ ಕೂಡಲೇ ಮುರಾದ್ ಭಕ್ಷ ಒಂದು ಸಿಂಹಾಸನವನ್ನು ತಯಾರಿಸಿ, ಅದರ ಮೇಲೆ ಕುಳಿತು, ತಾನು ಗುಜರಾತಿಗಷ್ಟೇ ಅಲ್ಲ, ಇಡೀ ಮೊಗಲ್ ಸಾಮ್ರಾಜ್ಯಕ್ಕೇ ರಾಜನೆಂದು ಘೋಷಿಸಿಕೊಂಡ. ಹೊಸದಾಗಿ ತನ್ನ ಹೆಸರಿನಲ್ಲಿ ನಾಣ್ಯಗಳನ್ನು ಟಂಕಿಸಿದ. ಪಟ್ಟಣಗಳಿಗೆ ಹೊಸ ಹೊಸ ಕೊತ್ವಾಲರನ್ನು ನೇಮಿಸಿದ. ಆದರೆ ಆ ಅಭದ್ರ ಸಿಂಹಾಸನವನ್ನೇರಿ, ತನಗೆ ಪಡೆಯಲು ಹಕ್ಕಿಲ್ಲದ ರಾಜದಂಡವನ್ನು ಕಸಿದುಕೊಳ್ಳಲೆತ್ನಿಸಿದ ಈ ಕಿರಿಯ ಮಗ ಕೊನೆಗೆ ಸೆರೆಮನೆಯ ಕಿರುಕುಳದಲ್ಲಿ ಕೊರಗಬೇಕಾಯಿತು.

ಸೂರತ್ತಿಗೆ ಸೈನ್ಯ ಕಳುಹಿಸಿ, ನಗರವು ತನ್ನ ಕೊನೆಯ ತಮ್ಮ ಮುರಾದ್‌ಭಕ್ಷ್‌ನ ವಶವಾಗದಂತೆ ಮಾಡಬೇಕೆಂದು ಅಣ್ಣ ದಾರಾ ಷಾ ಕಾತುರನಾಗಿದ್ದರೂ, ಅದು ಸಾಧ್ಯವಾಗಲಿಲ್ಲ. ಏಕೆಂದರೆ, ಆತ ಮರಣಶಯ್ಯೆಯಲ್ಲಿ ಮಲಗಿದ್ದ ತಂದೆಯನ್ನು ನೋಡಿಕೊಳ್ಳುವುದರ ಜೊತೆಗೆ ಮುರಾದ್ ಭಕ್ಷ್‌ನಿಗಿಂತ ಹೆಚ್ಚು ಬಲಾಢ್ಯನೂ, ಹೆಚ್ಚು ತಾಪತ್ರಯ ಕೊಡುತಿದ್ದವನೂ ಆದ ಮೊದಲ ತಮ್ಮ ಸುಲ್ತಾನ್ ಷೂಜನನ್ನು ಎದುರಿಸಬೇಕಾಗಿತ್ತು. ಅವನಾಗಲೇ ಬಂಗಾಳವನ್ನು ತನ್ನ ಸ್ವಾಧೀನಮಾಡಿಕೊಂಡು, ಲಾಹೋರಿನ ಮೇಲೆ (ಅಹಾಬಾದಿನ ಮೇಲೆ) ದಂಡೆತ್ತಿಬರುತ್ತಿದ್ದ. ಆದರೂ, ದಾರಾಷಾನಿಗೆ ತನ್ನ ಹಿರಿಯ ಮಗ ಸುಲೇಮಾನ್ ಷೆಕೋನ ಕೈಯಲ್ಲಿ ದೊಡ್ಡ ಸೈನ್ಯವನ್ನು ಕೊಟ್ಟು ತಮ್ಮನ ಮೇಲೆ ಕಳುಹಿಸುವುದೊಂದೇ ತಾನು ಮಾಡಲು ಸಾಧ್ಯವಾದ ಕೆಲಸವಾಗಿತ್ತು. ಕಿರಿಯ ಹುಡುಗ ಚಿಕ್ಕಪ್ಪನಿಗೆ ತಕ್ಕ ಬುದ್ಧಿ ಕಲಿಸಿದ. ಆತನನ್ನು ಬಂಗಾಳಕ್ಕೆ ಹಿಮ್ಮೆಟ್ಟಿಸಿ, ತಂದೆಯ ಬಳಿಗೆ ಹಿಂದಿರುಗಿದ. ಈ ಮಧ್ಯೆ, ಗುಜರಾತಿನ ಮುರಾದ್‌ಭಕ್ಷ ಇಂಡಿಯಾದ ಚಕ್ರವರ್ತಿಯೆಂದು ಮೆರೆಯುತ್ತಾ, ಅಣ್ಣಂದಿರನ್ನು ಸದೆಬಡಿದು ಆಗ್ರಾದಲ್ಲಿಯೋ ಅಥವಾ ಜಹಾನಾಬಾದಿನಲ್ಲಿಯೋ ತನ್ನ ರಾಜಧಾನಿಯನ್ನು ಮಾಡಿಕೊಳ್ಳುವ ಕನಸುಕಾಣುತ್ತಿದ್ದ.

ಅತ್ತ ಡೆಕ್ಕನ್ನಿನಲ್ಲಿ ಔರಂಗಜೇಬ ಎಲ್ಲ ಅಣ್ಣ ತಮ್ಮಂದಿರಿಗಿಂತ ಹೆಚ್ಚಿನ ಆಸೆಯುಳ್ಳವನಾಗಿ, ಅಷ್ಟೇ ಅಲ್ಲ—ಎಲ್ಲ ಕಾಪಟ್ಯಗಳ ಅವತಾರವಾಗಿ, ಅವರು ತಮ್ಮ ಪ್ರತಾಪವನ್ನೆಲ್ಲಾ ವೆಚ್ಚಮಾಡಿಕೊಂಡ ಬಳಿಕ ತನ್ನ ಕೆಲಸ ಸಾಧಿಸಬೇಕೆಂದು ಸದಾವಕಾಶಕ್ಕಾಗಿ ಕಾಯುತ್ತಿದ್ದ. ತನಗೆ ರಾಜ್ಯಗೀಜ್ಯದ ಆಸೆಯಿಲ್ಲವೆಂಬಂತೆ ನಟಿಸಿದ. ಪ್ರಪಂಚವೇ ಬೇಡ ಎಂಬಂತೆ 'ದೆರ್ವಿಷ' (ದರ್ವೇಷಿ=ಫಕೀರ) ನಂತೆ ಇರಲಾರಂಭಿಸಿದ. ತನ್ನೀ ನಡತೆಯನ್ನು ತನ್ನ ತಮ್ಮ ಮುರಾದ್‌ಭಕ್ಷ ನಂಬಲಿ ಎಂಬಂತೆ, ತಾನು ಅಣ್ಣ ದಾರಾಷಾನ ಮೇಲೆ ಯುದ್ಧಮಾಡಿ ನ್ಯಾಯವಾಗಿ ತಮ್ಮನಿಗೆ ಸಲ್ಲಬೇಕಾದ ಸಿಂಹಾಸನವನ್ನು ಗೆದ್ದುಕೊಡುವುದಾಗಿ ಹೇಳಿದ. ಅರಿಯದ ಆ ಯುವಕ ಸಿಂಹಾಸನದ ಮೇಲಿನ ಆಸೆಯ ಕಾರಣ ಔರಂಗಜೇಬನನ್ನು ನಂಬಿದ. ಇಬ್ಬರ ಸೈನ್ಯಗಳೂ ಒಂದುಗೂಡಿ ಆಗ್ರಾ ಕಡೆ ಹೊರಟವು. ದಾರಾಷಾ ಅವರನ್ನು ಎದುರಿಸಿದ. ಉಗ್ರ ಹೋರಾಟ ನಡೆಯಿತು. ಮುರಾದ್ ಭಕ್ಷ ಸಿಂಹದಂತೆ ಹೋರಾಡಿದ: ಐದು ಬಾಣಗಳು ಅವನ ಮೈಗೆ ಹೊಕ್ಕವು. ಅವನನ್ನು ಹೊತ್ತ ಆನೆ ಬಾಣಗಳಿಂದ ಮುಚ್ಚಿಹೋಯಿತು. ರಕ್ತದ ಕೋಡಿ ಹರಿಯಿತು. ದಾರಾನೇ ಗೆದ್ದನೆಂದು ಕಂಡಿತು. ಔರಂಗಜೇಬನು ಹಿಮ್ಮೆಟ್ಟಿದಂತೆ ಕಂಡಿತು. ಆದರೆ ಯಾವಾಗ ದಾರಾನ ಕಡೆಯ ದಳವಾಯಿಗಳಲ್ಲಿ ಕೆಲವರು ಅವನನ್ನು ತ್ಯಜಿಸಿ ತನ್ನ ಕಡೆ ಬರುತ್ತಿದ್ದಾರೆಂದು ಗೊತ್ತಾಯಿತೋ ಆಗ ಆತ ದಾರಾನ ಮೇಲೆ ಎರಗಿದ. ದಾರಾ ತನಗಾದ ಮೋಸವನ್ನು ಅರಿತು ಔರಂಗಜೇಬನನ್ನು ಎದುರಿಸುವುದುಬೇಡವೆಂದು ಯುದ್ಧರಂಗದಿಂದ ಆಗ್ರಾಕ್ಕೆ ಹಿಂದಿರುಗಿದ. ಆಗ್ರಾದಲ್ಲಿದ್ದ ತಂದೆ ಷಾಜಹಾನ ಮಗನಿಗೆ ಬುದ್ಧಿವಾದ ಹೇಳಿದ, ಸೈನ್ಯವನ್ನೂ ಅರಮನೆಯ ಭಂಡಾರವನ್ನೂ ದಿಲ್ಲಿಗೆ ಸಾಗಿಸಿಬಿಡು ಎಂದು. ದಾರಾ ಹಾಗೆಯೇ ಮಾಡಿದ.

ಹೀಗಾಗಿ, ಔರಂಗಜೇಬನಿಗೆ ಜಯವಾಯಿತೆಂದೇ ಹೇಳಬೇಕು. ಮುರಾದ್ ಭಕ್ಷ ಏಟು ತಿಂದು ತನ್ನ ಡೇರೆಯನ್ನು ಸೇರಿ ಗಾಯಗಳಿಗೆ ಔಷಧಿ ಹಾಕಿಸಿಕೊಳ್ಳುತ್ತಿದ್ದ. ಹೀಗೆ, ನಂಬಲು ಅನರ್ಹರಾದ ಇಂಡಿಯನರ ಕಾರಣದಿಂದಾಗಿ ಔರಂಗಜೇಬ ತನ್ನ ಜಯವನ್ನು ಸಾಧಿಸಲು ಸಾಧ್ಯವಾಯಿತು.

ಗಾಯಗಳನ್ನು ವಾಸಿಮಾಡಿಕೊಂಡ ಮುರಾದ್ ಭಕ್ಷ, ಅಣ್ಣ ಔರಂಗಜೇಬನನ್ನು ಕಾಣಲು ಹೋದ. ತಮ್ಮನ ಶೌರ್ಯ ಧೈರ್ಯಗಳನ್ನು ಹೊಗಳಿದ ಅಣ್ಣ ಔರಂಗಜೇಬ ಇನ್ನೇನು ಚಕ್ರಾಧಿಪತ್ಯವೇ ಆತನಿಗೆ ಸಿಕ್ಕಿದಂತಾಯಿತೆಂದು ಹೊಗಳಿದ. ಈ ಹೊಗಳಿಕೆಯ ಮಾತಿಗೆ ಮುರಾದ ಮರುಳಾಗಿಬಿಟ್ಟ. ಹಾಗೆ ಮರುಳಾಗಬೇಡವೆಂದು ಆತನ ಖೋಜಾ ಷಾಬಾಷ್‌ಖಾನ್ ಎಚ್ಚರಿಸಿದರೂ, ಅಣ್ಣನ ಉರುಳಿಗೆ ತಮ್ಮ ಬಿದ್ದೇಬಿಟ್ಟ. ಅಣ್ಣ ತಮ್ಮನನ್ನು ಭೋಜನಕ್ಕೆ ಕರೆದ. ತಮ್ಮ ಬೇಡವೆಂದರೂ ಅಣ್ಣ ಬಿಡಲಿಲ್ಲ. ಭೋಜನದ ವೇಳೆಯಲ್ಲಿ ವಿಷಹಾಕಿ ಸಾಯಿಸಿಬಿಡುವನೇನೊ ಎಂದು ತಮ್ಮನಿಗೆ ಹೆದರಿಕೆ ಹುಟ್ಟಿತು. ಆದರೆ ಅಣ್ಣ ಹಾಗೆ ಮಾಡಲಿಲ್ಲ. ಪ್ರಾಣ ಸಹಿತ ಅವನನ್ನು ಬಂಧಿಸಿ

ಗ್ವಾಲಿಯರ್ ಕೋಟೆಗೆ ಕಳುಹಿಸಿ ಅಲ್ಲಿ ಬಂಧನದಲ್ಲಿಟ್ಟ—ಯುದ್ಧದ ಗಾಯಗಳನ್ನು ಚೆನ್ನಾಗಿ ವಾಸಿಮಾಡಿಕೊಳ್ಳಲಿ ಎಂದು !

ಅಕ್ಬರನ ಮಗನೂ ಹುಮಾಯೂನನಿಗೆ ಮೊಮ್ಮಗನೂ ಆದ ಜಹಾಂಗೀರ್ ಇಪ್ಪತ್ತುಮೂರು ವರ್ಷಗಳ ಕಾಲ ಶಾಂತವಾಗಿ ರಾಜ್ಯವಾಳಿ ಪ್ರಜೆಗಳಿಗೂ ಪರದೇಶ ದವರಿಗೂ ಬೇಕಾದವನಾಗಿದ್ದ. ಆದರೆ ಇಷ್ಟು ದೀರ್ಘಕಾಲದ ಆಡಳಿತ ಅವನ ಮಕ್ಕಳಲ್ಲಿ ಇಬ್ಬರಿಗೆ ಒಪ್ಪಿಗೆಯಾಗಲಿಲ್ಲ. ಅವರಿಗೆ ವಯಸ್ಸಾಗುತ್ತಾ ಬಂದಿತ್ತು. ಎಷ್ಟು ದಿನ ಕಾಯುವುದು ಸಿಂಹಾಸನಕ್ಕೆ ? ಹಿರಿಯ ಮಗ ಲಾಹೋರಿನಲ್ಲಿ ದೊಡ್ಡ ಸೈನ್ಯವೊಂದನ್ನು ಕಟ್ಟಿಕೊಂಡು ಅಪ್ಪನ ಮೇಲೆ ದಂಡೆತ್ತಿ ಹೊರಟ. ಇವನಿಗೆ ಬುದ್ಧಿ ಕಲಿಸಬೇಕೆಂದು ಕೊಂಡ ಅಪ್ಪ ಅವನ ಸೈನ್ಯಕ್ಕಿಂತ ಭಾರಿಯಾದ ಸೈನ್ಯದೊಡಗೂಡಿಹೋಗಿ ಮಗನನ್ನು ಸೆರೆಹಿಡಿದುಕೊಂಡುಬಂದ. ಆ ರಾಜದ್ರೋಹಿಯನ್ನು ಕೊಲ್ಲಿಸಬಹುದಾಗಿತ್ತು. ಆದರೆ ಮಗನ ಮೇಲಿನ ಪ್ರೀತಿಯ ಕಾರಣ ಹಾಗೆ ಮಾಡದೆ, ಅವನ ಕಣ್ಣುಗಳ ಮೇಲೆ ಕಾದ ಕಬ್ಬಿಣದ ಬರೆ ಎಳೆದು ಕುರುಡನನ್ನಾಗಿ ಮಾಡಿದ, ಅಷ್ಟೆ ! ಈ ಕುರುಡುಮಗನನ್ನು ತನ್ನ ಬಳಿಯೇ ಇಟ್ಟುಕೊಂಡಿದ್ದ,ಒಂದಲ್ಲ ಒಂದು ದಿನ ಹಿರಿಯ ಮಗನಾದ ಇವನನ್ನೇ, ಅಂದರೆ ಸುಲ್ತಾನ್ ಬೊಲಾಕಿಯನ್ನೇ ರಾಜನನ್ನಾಗಿ ಮಾಡುವ ಉದ್ದೇಶದಿಂದ.

ಆದರೆ ಸುಲ್ತಾನ್ ಖುರ್ರಾಂ, ಆಮೇಲೆ ಷಾಜಹಾನ್‌ನೆಂದು ಹೆಸರಾದ ಖುರ್ರಾಂ, ತಾನು ಎರಡನೆಯ ಮಗನಾದ ಕಾರಣ ಸಿಂಹಾಸನಕ್ಕೆ ಅಧಿಕಾರಿಯೆಂದು ಭಾವಿಸಿ, ತಂದೆ ಸಾಯುವತನಕ ಕಾಯದೆ, ಅದಕ್ಕೆ ಮುಂಚೆಯೇ ಅದನ್ನು ಏರುವ ನಿರ್ಧಾರ ಮಾಡಿದ. ಆದರೆ ತನ್ನ ಮನಸ್ಸಿನಲ್ಲಿದ್ದುದನ್ನು ಬಯಲುಮಾಡದೆ ತಂದೆಗೆ ವಿಧೇಯನೆಂಬಂತೆ ವರ್ತಿಸುತ್ತಾ ಬಂದ. ಹೀಗೆ ತಂದೆಯ ಮನಸ್ಸನ್ನು ಒಲಿಸಿಕೊಂಡ ಆತ ಕುರುಡನಾದ ಅಣ್ಣನನ್ನು ಡೆಕ್ಕನ್ ರಾಜ್ಯಕ್ಕೆ ಕರೆದುಕೊಂಡುಹೋಗಲು ಅನುಮತಿ ಕೇಳಿದ. ಖುರ್ರಾಂನ ಒಳಸಂಚನ್ನು ಅರಿಯದ ತಂದೆ ಇದಕ್ಕೆ ಒಪ್ಪಿದ. ತನ್ನ ಕೈವಶನಾದ ಅಣ್ಣನನ್ನು ಖುರ್ರಾಂ ಯಾರಿಗೂ ಕಾಣದಂತೆ ಮುಗಿಸಿಬಿಟ್ಟ. ಯಾರಿಗೂ ಕಾಣದೇಹೋದರೆ ದೇವರಿಗೆ ಕಾಣುವುದಿಲ್ಲವೆ ? ಆತ ತಾನು ಎಸಗಿದ ಘೋರಪಾತಕಕ್ಕೆ ತಕ್ಕ ಶಿಕ್ಷೆ ಅನುಭವಿಸುವುದನ್ನು ಮುಂದೆ ತಿಳಿಸುತ್ತೇನೆ.

ಕುರುಡನಾದ ಅಣ್ಣ ಸತ್ತಮೇಲೆ ತಮ್ಮ ಸುಲ್ತಾನ್‌ಖುರ್ರಾಂ ತನ್ನನ್ನು ತಾನೇ ಷಾಜಹಾನನೆಂದು, ಎಂದರೆ ಪ್ರಪಂಚದ ರಾಜನೆಂದು, ಕರೆದುಕೊಂಡ. ಅಣ್ಣನು ಮಾಡಲಾಗದೆ ಬಿಟ್ಟಿದ್ದ ಕೆಲಸವನ್ನು, ಅಂದರೆ ತಂದೆಯನ್ನು ಮುಗಿಸಿ ಸಿಂಹಾಸನವನ್ನೇರುವ ಸನ್ನಾಹವನ್ನು ಮಾಡಿದ. ಇದಕ್ಕೆ ಬೇಕಾದ ಸೈನ್ಯವನ್ನು ಕಟ್ಟಿದ. ತಂದೆ ಜಹಾಂಗೀರ ಸುಮ್ಮನಿರಲಿಲ್ಲ. ದ್ರೋಹಿಯಾದ ಮಗನಿಗೆ ತಕ್ಕುದ್ದು ಮಾಡಬೇಕೆಂದು ಭಾರಿ ಸೈನ್ಯವೊಂದನ್ನು ಡೆಕ್ಕನಿಗೆ ಕಳುಹಿಸಿದ. ಖುರ್ರಾಂ ತಲೆಮರೆಸಿಕೊಂಡು ಈ ಊರಲ್ಲಿ ಒಂದು ದಿನ,ಆ ಊರಲ್ಲಿ ಒಂದು ದಿನ ಹೀಗೆ ಭಿಕ್ಷುಕನಂತೆ ಕಾಲಹಾಕಿ, ಕೊನೆಗೆ

ಬಂಗಾಳಕ್ಕೆ ಹೋದ. ಜಹಾಂಗೀರ ಅಲ್ಲಿಗೂ ಬಿಡಲಿಲ್ಲ. ಮತ್ತಷ್ಟು ಭಾರಿ ಸೈನ್ಯಸಮೇತ ಅವನ ಬೆನ್ನುಹತ್ತಿದ. ಆದರೆ ಮಕ್ಕಳಿಬ್ಬರೂ ಮಾಡಿದ ದ್ರೋಹದಿಂದ ಆ ವಯಸ್ಸಾದ ದೊರೆ ಬಹು ಸಂಕಟಗೊಂಡು ಕೊನೆಗೆ ದಾರಿಯಲ್ಲಿ ಸತ್ತುಹೋದ.[1]

ಈಗ ಷಾಜಹಾನನಿಗೆ (ಖುರ್ರಾಂನಿಗೆ) ಯಾವ ಅಡೆತಡೆಗಳೂ ಇರಲಿಲ್ಲ. ಆದರೆ ಜಹಾಂಗೀರ ಸಾಯುವಾಗ ತನ್ನ ಮಗನ ಮಗನಾದ ಸುಲ್ತಾನ್ ಬೋಲಾಕಿಯನ್ನು ತನ್ನ ಪ್ರಧಾನ ದಂಡನಾಯಕನೂ ಮುಖ್ಯ ಮಂತ್ರಿಯೂ ಆದ ಅಸಫ್ ಖಾನನ ಕಡೆಗೆ ವಹಿಸಿ ಅವನನ್ನೇ ಸಿಂಹಾಸನಕ್ಕೆ ಉತ್ತರಾಧಿಕಾರಿಯೆಂದು ಭಾವಿಸಬೇಕೆಂದು ಹೇಳಿ ಸತ್ತಿದ್ದ. ತಂದೆಯ ಮೇಲೆ ದಂಗೆಯೆದ್ದ ಕಾರಣ ಷಾಜಹಾನ ಸಿಂಹಾಸನಕ್ಕೆ ಅನರ್ಹ ನೆಂದು ಜಹಾಂಗೀರ ಹೇಳಿದ್ದ. ರಾಜನ ಅಪ್ಪಣೆಯಂತೆ ನಡೆಯುವುದಾಗಿ ಅಸಫ್ ಖಾನ ತನ್ನ ಎದೆ ಮುಟ್ಟಿ ಪ್ರಮಾಣಮಾಡಿದ್ದ. ಆದರೆ ಆತ ಮನಸ್ಸಿನಲ್ಲಿ ಮಾಡಿಕೊಂಡಿದ್ದು ಬೇರೊಂದು. ಆತ ತನ್ನ ಹಿರಿಯ ಮಗಳನ್ನು ಷಾಜಹಾನನಿಗೆ ಕೊಟ್ಟು ಮದುವೆಮಾಡಿದ್ದ. ಆ ಮಗಳ ಹೊಟ್ಟೆಯಲ್ಲಿ ಆಗಲೇ ಹೇಳಿದಂತೆ ನಾಲ್ಕು ಜನ ಗಂಡುಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಹುಟ್ಟಿದ್ದರು. ಅಳಿಯನನ್ನು ರಾಜನನ್ನಾಗಿ ಮಾಡದೆ ಬೇರೊಬ್ಬನನ್ನು— ಅಂದರೆ ಅಳಿಯನ ಅಣ್ಣನ ಮಗನನ್ನು ರಾಜನನ್ನಾಗಿ ಮಾಡುವುದು ಅವನ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಮಗಳ ಗಂಡ ಹೆಚ್ಚೋ ಕೊಟ್ಟ ಮಾತು ಹೆಚ್ಚೋ ! ಮಗಳ ಗಂಡನೇ ಹೆಚ್ಚಾದ. ರಾಜ್ಯದಲ್ಲಿ ಯಾರೂ ಅವನ ಮಾತಿಗೆ ತುಟಿಕ್ ಪಿಟಕ್ಕೆನ್ನುವ ಸ್ಥಿತಿಯಲ್ಲಿರಲಿಲ್ಲ. ಆದರೂ ಜನ ಮೆಚ್ಚುವಂತೆ ತನ್ನ ಕಾರ್ಯ ಸಾಧಿಸಬೇಕಲ್ಲ! ಒಂದು ಸುದ್ದಿ ಹುಟ್ಟಿಸಿದ. ಅದೇನೆಂದರೆ, ಷಾಜಹಾನ್ ಸತ್ತುಹೋಗಿದ್ದಾನೆ ಮತ್ತು ಆತನ ಶವವನ್ನು ಆಗ್ರಾಕ್ಕೆ ತಂದು ತಂದೆಯ ಗೋರಿಯ ಬಳಿ ಹೂಳಲಾಗುವುದು ಎಂದು. ಈ ವಿಚಾರವನ್ನು ರಾಜನೆನಿಸಿಕೊಳ್ಳಬೇಕೆಂದಿದ್ದ ಸುಲ್ತಾನ್ ಬೊಲಾಕಿಗೆ ಬಹಳ ಹುನಾರಿ ನಿಂದ ಹೇಳಿ, ಸತ್ತುಹೋದ ಷಾಜಹಾನನ ಶವವನ್ನು ಆಗ್ರಾದ ಹೊರಗೆ ಎದುರುಗೊಳ್ಳ ಬೇಕಾದ್ದು ರಾಜಧರ್ಮವೆಂದು ತಿಳಿಸಿದ. ಬೊಲಾಕಿ ನಂಬಿಬಿಟ್ಟ. ಷಾಜಹಾನ್ ವೇಷ ಮರೆಸಿಕೊಂಡು, ಸಾಕಷ್ಟು ಗಾಳಿ ಆಡುತ್ತಿದ್ದ ಒಂದು ಚಟ್ಟದ ಪೆಟ್ಟಿಗೆಯಲ್ಲಿ ಮಲಗಿ ಕೊಂಡ. ಇಡೀ ಮೊಗಲ್ ಸೈನ್ಯ ಆಗ್ರಾ ಬಿಟ್ಟು ರಾಜನ ಸಮೇತ ಹೊರಗೆ ಬಂದಿತು. ಚಟ್ಟದ ಮೇಲಿದ್ದ ಬಟ್ಟೆ ತೆಗೆದದ್ದೇ ತಡ, ಸತ್ತ ಷಾಜಹಾನ್ ಜೀವವಾಗಿ ಎದ್ದುನಿಂತ ಆ ಸಮಸ್ತ ಸೇನೆ ಹಾಗೂ ಸೇನಾಧಿಕಾರಿಗಳು ಬದುಕಿದ್ದ ಷಾಜಹಾನನನ್ನು ಕಂಡು ತಮ್ಮ ಗೌರವ ಸೂಚಿಸಿದರು. ಷಾಜಹಾನನೇ ರಾಜನೆಂಬ ಮಾತು ಕಿವಿಯಿಂದ ಕಿವಿಗೆ ಹೋಯಿತು. ಕೊನೆಗೆ ಘೋಷಣೆಯೂ ಆಯಿತು, ಅವನೇ ರಾಜನೆಂದು. ಷಾಜಹಾನ ಮೊಗಲ್ ಸಾಮ್ರಾಜ್ಯದ ಚಕ್ರವರ್ತಿಯಾದ.

---

[1] ಜಹಾಂಗೀರ್ ಸತ್ತದ್ದು ೧೬೨೭ ರ ಅಕ್ಟೋಬರ್ ೨೮ ರಂದು.

ಆ ಯುವಕ ರಾಜನಿಗೆ—ಎಲ್ಲರಿಂದಲೂ ತ್ಯಜಿಸಲ್ಪಟ್ಟ ಆ ಸುಲ್ತಾನ್ ಬೊಲಾಕಿಗೆ ತಲೆತಪ್ಪಿಸಿಕೊಳ್ಳುವುದರ ಹೊರತು ಬೇರೆ ಮಾರ್ಗವಿರಲಿಲ್ಲ. ತಲೆಮರೆಸಿಕೊಂಡು ಆತ ಫಕೀರನಂತೆ ಅಲೆದಾಡಿದ. ಕೊನೆಗೆ ಪರ್ಷಿಯಾಕ್ಕೆ ಹೋಗಿ ಅಲ್ಲಿಯ ರಾಜ ಷಾ ಸಫಿ ಎಂಬಾತನ ಮರೆಹೊಕ್ಕ. ಷಾ ಅವನನ್ನು ಬಹು ಮರ್ಯಾದೆಯಿಂದ ಕಂಡು ರಾಜ ಯೋಗ್ಯವಾದ ಜೀವನಕ್ಕೆ ಅವಕಾಶಮಾಡಿಕೊಟ್ಟ. ನಾನು ಪರ್ಷಿಯಾದಲ್ಲಿ ಪ್ರವಾಸಮಾಡಿದಾಗ ಬೊಲಾಕಿಯನ್ನು ಕಂಡು ಮಾತನಾಡಿಸಿದೆನಲ್ಲದೆ, ಆತನೊಡನೆ ಕುಡಿದು ತಿಂದು ಕಾಲ ಕಳೆದಿದ್ದೇನೆ.

ಈ ರೀತಿ ಸಿಂಹಾಸನವನ್ನೇರಿದ ಷಾಜಹಾನ ತನ್ನ ಸ್ಥಾನವನ್ನು ಭದ್ರಮಾಡಿಕೊಳ್ಳಲು ಹಿಂದಿನ ರಾಜನಿಗೆ ಬೇಕಾಗಿದ್ದವರನ್ನೆಲ್ಲಾ ಕೊಲ್ಲಿಸಿಬಿಟ್ಟ. ಹೀಗೆ ಅವನ ರಾಜ್ಯಭಾರದ ಆರಂಭಕಾಲ ಇಂತಹ ಕೊಲೆಗಳಿಂದ ಕೂಡಿರುವಲ್ಲಿ ಅವನ ಕೊನೆಗಾಲ ಇನ್ನೂ ಕ್ರೂರವಾಗಿತ್ತು. ಹೇಗೆ ಅವನು ತನ್ನ ತಂದೆಯಿಂದ ರಾಜ್ಯವನ್ನು ಕಸಿದುಕೊಂಡನೋ, ಹಾಗೆ ಅವನ ಮಗನಾದ ಔರಂಗಜೇಬನಿಂದಲೇ ರಾಜ್ಯವು ಕಸಿಯಲ್ಪಟ್ಟಿತು.

ಈ ಹಿಂದೆ ಹೇಳಿದಂತೆ ಮುರಾದ್ ಭಕ್ಷ್ನನ್ನು ಸೆರೆಹಿಡಿದು ಗ್ವಾಲಿಯರ್ ಕೋಟೆಯಲ್ಲಿ ಬಂಧನದಲ್ಲಿಟ್ಟು, ಔರಂಗಜೇಬ ಆಗ್ರಾ ಪ್ರವೇಶಿಸಿ ಷಾಜಹಾನ್ ಸತ್ತೇಹೋಗಿದ್ದಾನೆ ಎನ್ನುವ ರೀತಿಯಲ್ಲಿ ನಡೆದುಕೊಳ್ಳಲಾರಂಭಿಸಿದ. ಒಂದು ಕಡೆ ಔರಂಗಜೇಬ ಹೀಗೆ ಹೇಳುತ್ತಿದ್ದರೆ, ಇನ್ನೊಂದು ಕಡೆ ಷಾಜಹಾನ್ ತಾನು ಸತ್ತಿಲ್ಲ ಎಂದು ಹೇಳಲಾರಂಭಿಸಿದ. ಆದರೆ ಆಗ್ರಾ ಕೋಟೆಯನ್ನು ತನ್ನ ವಶಪಡಿಸಿಕೊಂಡ ಬಲಾಢ್ಯನಾದ ಔರಂಗಜೇಬನ ಮುಂದೆ ಷಾಜಹಾನ್ ಏನೂ ಮಾಡಲಾಗಲಿಲ್ಲ. ಅಲ್ಲದೆ ಅದೃಷ್ಟವೂ ಔರಂಗಜೇಬನ ಕಡೆಗೆ ವಾಲಿತು. ಆಗ್ರಾದಲ್ಲಿದ್ದ ಬಾವಿಗಳೆಲ್ಲ ಒಣಗಿಹೋಗಿದ್ದುವು. ಕುಡಿಯುವ ನೀರಿಗೆ ನದಿಯೇ (ಯಮುನಾ ನದಿ) ಗತಿಯಾಗಿತ್ತು. ನದಿಗೆ ಹೋಗಿ ನೀರು ತರಲು ಒಂದು ಕಳ್ಳದಾರಿ ಮಾಡಿಕೊಂಡಿದ್ದರು, ಷಾಜಹಾನನ ಕಡೆಯವರು. ಈ ಕಳ್ಳದಾರಿಯನ್ನೂ ಔರಂಗಜೇಬ ಮೊದಲೇ ಪತ್ತೆಹಚ್ಚಿ ತಿಳಿದುಕೊಂಡಿದ್ದ. ಕುಡಿಯುವ ನೀರಿಗೆಲ್ಲಿ ಕಲ್ಲುಬಿದ್ದೀತೊ ಎಂದು ಹೆದರಿದ ಷಾಜಹಾನ ತಾನಿನ್ನೂ ಬದುಕಿರುವ ವಿಚಾರವನ್ನು ತಿಳಿಸಲು ತನ್ನ ಮನೆವಾರ್ತೆಗಾರ ಫಜಲ್‌ಖಾನನನ್ನು ಔರಂಗಜೇಬನ ಬಳಿಗೆ ಕಳುಹಿಸಿದ. ಮಗನು ಡೆಕ್ಕನಿಗೆ ವಾಪಸುಹೋಗಬೇಕೆಂತಲೂ, ಹಾಗೆ ಮಾಡಿದಲ್ಲಿ ತಾನು ಎಲ್ಲವನ್ನೂ ಮನ್ನಿಸಿ ಬಿಡುವುದಾಗಿಯೂ ಹೇಳಿಸಿದ. ಆದರೆ ಔರಂಗಜೇಬ ತನ್ನ ನಿಲುವನ್ನೇ ಸಾಧಿಸಲಾರಂಭಿಸಿದ. ತಂದೆ ಸತ್ತಿರುವುದು ನಿಜ ; ಅವನು ಸತ್ತಿರುವನೆಂಬ ಕಾರಣವೇ ನಾನು ಸಿಂಹಾಸನಕ್ಕೆ ಹೋರಾಡಿದ್ದು ; ಹಾಗೇನಾದರೂ ರಾಜ ಸತ್ತಿಲ್ಲದೆ ಬದುಕಿಯೇ ಇದ್ದ ಪಕ್ಷದಲ್ಲಿ, ತಾನು ಆತನನ್ನು ಕಂಡು ಅವನ ಪಾದಪದ್ಮಂಗಳಿಗೆ ನಮಸ್ಕಾರಮಾಡಿ ಡೆಕ್ಕನಿಗೆ ಹಿಂದಿರುಗುತ್ತೇನೆ —ಹೀಗೆಂದು ಉತ್ತರ ಕಳಿಸಿದ. ಈ ವಿಚಾರವನ್ನು ಫಜಲ್‌ಖಾನ್ ಷಾಜಹಾನನಿಗೆ ತಿಳಿಸಲು, ಆತ ಮಗನು ಬಂದು ತನ್ನನ್ನು ನೋಡಬಹುದೆಂದು ಹೇಳಿದ. ತಂತ್ರದಲ್ಲಿ

ಅಪ್ಪನನ್ನು ವಿೂರಿಸುತ್ತಿದ್ದ ಮಗನಿಗೆ ಈ ವಿಚಾರ ತಿಳಿದಾಗ ಆತ ತಾನು ಅಪ್ಪನನ್ನು ಕಾಣಬೇಕಾದರೆ ಕೋಟೆಯೊಳಗಿರುವ ರಕ್ಷಣಾದಳವನ್ನು ಬದಲಾಯಿಸಿ ತನ್ನ ರಕ್ಷಣಾದಳ ವನ್ನೇ ಇಡಬೇಕೆಂದು ಹೇಳಿದ. ಮುದುಕನಾದ ತಂದೆ ಬೇರೆ ದಾರಿ ಕಾಣದೆ ಮಗನು ಹೇಳಿದ್ದಕ್ಕೆ ಒಪ್ಪಿದ. ಅದರಂತೆ ಷಾಜಹಾನನ ರಕ್ಷಣಾದಳ ಕೋಟೆಯಿಂದ ಹೊರಗೆ ಹೋಯಿತು ; ಔರಂಗಜೇಬನ ದಳ ಹೊರಗಡೆಯಿಂದ ಕೋಟೆಯನ್ನು ಪ್ರವೇಶಿಸಿತು. ಈ ರಕ್ಷಣಾದಳದ ನಾಯಕತ್ವವನ್ನು ಔರಂಗಜೇಬ ತನ್ನ ಹಿರಿಯ ಮಗ ಸುಲ್ತಾನ್ ಮಹಮ್ಮದನಿಗೆ ವಹಿಸಿ, ಷಾಜಹಾನನ್ನು ಸಕಾಲದಲ್ಲಿ ಸೆರೆಹಿಡಿಯುವಂತೆ ಹೇಳಿಕಳುಹಿಸಿದ.

ಔರಂಗಜೇಬನು ಮಾತ್ರ ಆ ಕೂಡಲೇ ಕೋಟೆಯನ್ನು ಪ್ರವೇಶಿಸಲಿಲ್ಲ. ಈ ಹೊತ್ತು, ನಾಳೆ ಎಂದು ನೆಪಹೇಳುತ್ತಾ ಬಂದ. ಶುಭಲಗ್ನದಲ್ಲಿ ತಂದೆಯನ್ನು ಭೇಟಿಮಾಡ ಬೇಕೆಂದು ಆತನು ಹೇಳುತ್ತಾ, ಆ ಲಗ್ನವನ್ನು ಜ್ಯೋತಿಷ್ಕರು ಇನ್ನು ನಿಶ್ಚಯಮಾಡಿಲ್ಲ ಎಂದುಕೊಳ್ಳುತ್ತಾ ಆಗ್ರಾದಿಂದ ಎರಡು ಮೂರು ಹರಿದಾರಿ ದೂರದಲ್ಲಿದ್ದ ಹಳ್ಳಿಯಮನೆ ಯೊಂದರಲ್ಲಿ ತಂಗಲುಹೋದ. ಇದು ಜನರಿಗೆ ಬಹಳ ಅಸಮಾಧಾನವನ್ನುಂಟುಮಾಡಿತು. ತಂದೆ ಮಕ್ಕಳು ಭೇಟಿಯಾಗಿ ಅವರಿಬ್ಬರ ಜಗಳ ತಪ್ಪಿ, ದೇಶದಲ್ಲಿ ಶಾಂತಿಯುಂಟಾದರೆ ಸಾಕೆಂದು ಅವರು ಹಾರೈಸುತ್ತಿದ್ದರು.

ಆದರೆ, ಔರಂಗಜೇಬ ಮಾಡಿದ್ದೇ ಬೇರೊಂದು. ತಂದೆಯನ್ನು ಕಾಣುವುದು ಅವನಿಗೆ ಬೇಕಿರಲಿಲ್ಲ. ಕಾಣದಿದ್ದರೆ ಹೋಗಲಿ, ಆತ ತಂದೆಯ ಖರ್ಚುವೆಚ್ಚಗಳಿಗೆ ಬೇಕಾದ ಹಣಕ್ಕೂ ಖೋತಾಮಾಡಿಬಿಟ್ಟ. ಹಿಂದೆ ದಾರಾಷಾ ದಿಲ್ಲಿಗೆ ಸಾಗಿಸಲು ಸಾಧ್ಯವಾಗದೆ ಬಿಟ್ಟುಹೋಗಿದ್ದ ಭಂಡಾರವನ್ನೆಲ್ಲಾ ಆತ ವಶಪಡಿಸಿಕೊಂಡ. ತನ್ನ ಸಹೋದರಿ ಬೇಗಂ ಸಾಹೇಬಳನ್ನು ಕೋಟೆಯೊಳಗೆ ಬಂಧನದಲ್ಲಿಟ್ಟು, ಆಕೆ ತಂದೆಯ ಬಳಿ ಯಾವಾಗಲೂ ಬಿದ್ದಿರುವಂತೆ ಮಾಡಿದ. ಆಕೆಗೆ ತಂದೆ ಕೊಟ್ಟಿದ್ದ ಬದುಕು ಭಂಡಾರಗಳನ್ನೆಲ್ಲಾ ಆಕೆಯಿಂದ ಕಸಿದುಕೊಂಡ.

ಹೆತ್ತ ಮಗನೇ ಈ ರೀತಿ ತನ್ನನ್ನು ಅವಹೇಳನಮಾಡಿದ್ದನ್ನು ಸಹಿಸಲಾರದ ತಂದೆ ಷಾಜಹಾನ್ ಕೋಟೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟ. ತನ್ನನ್ನು ತಡೆದ ಕೋಟೆಯ ಕೆಲವು ಕಾವಲುಗಾರರನ್ನು ಕೊಂದುಹಾಕಿದ. ಇದು ಔರಂಗಜೇಬನ ಕಿವಿಯನ್ನು ಮುಟ್ಟಿತು. ಆದರ ಪರಿಣಾಮವಾಗಿ ಮತ್ತಷ್ಟು ನಿರ್ಬಂಧಕ್ಕೆ ತಂದೆ ಒಳಗಾಗ ಬೇಕಾಯಿತು. ಅಷ್ಟು ಅದ್ದೂರಿಯಿಂದ ಮೆರೆದ ರಾಜನ ಸಹಾಯಕ್ಕೆ ಒಬ್ಬ ಸಿಪಾಯಿ ಯೂ ಬರದಿದ್ದುದು ಆಶ್ಚರ್ಯಕರ! ಪ್ರಜೆಗಳೂ ಅವನನ್ನು ಕೈಬಿಟ್ಟರು. ಅವರ ಕಣ್ಣೆಲ್ಲ ಹುಟ್ಟುತ್ತಿದ್ದ ಸೂರ್ಯನ ಕಡೆಗಿದ್ದುವು. ಇನ್ನೂ ಬದುಕಿದ್ದ ಷಾಜಹಾನ ಅವರ ಮನಸ್ಸಿನಿಂದ ಜಾರಿದ್ದ. ಔರಂಗಜೇಬ ಆ ಜಾಗವನ್ನು ಆಕ್ರಮಿಸಿಕೊಂಡಿದ್ದ. ಎಲ್ಲಾದರು ಒಬ್ಬಿಬ್ಬರು ಆ ನಿರ್ಭಾಗ್ಯ ದೊರೆಯ ಪರ ಇದ್ದರೂ ಹೆದರಿಕೆಯಿಂದ ತಮ್ಮ ನಿಷ್ಠೆಯನ್ನು ಬಹಿರಂಗ ಪಡಿಸಿಕೊಳ್ಳುತ್ತಿರಲಿಲ್ಲ. ಮಕ್ಕಳನ್ನು ತಂದೆ ನೋಡಿಕೊಳ್ಳುವಂತೆ ಷಾಜಹಾನ ತನ್ನ

ಪ್ರಜೆಗಳ ಲಾಲನೆಪಾಲನೆ ಮಾಡಿದ್ದ. ರಾಜರಿಗೆ ಅಪರೂಪವಾದ ದಯಾದಾಕ್ಷಿಣ್ಯ ಗಳಿಂದ ನಡೆದುಕೊಂಡ ಆ ರಾಜನಿಗೆ ಸಿಕ್ಕಿದ ಸೌಭಾಗ್ಯ ಇದು.

ಹೀಗೆ ಆಗ್ರಾ ಕೋಟೆಯಲ್ಲಿ ಆತ ಬಂದಿಯಾಗಿ ನವೆದು ನವೆದು ಕೊನೆಗೆ ೧೬೬೬ರ ಕೊನೆಯಲ್ಲಿ ಕಾಲವಾದ. ತಾನು ಬದುಕಿದ್ದಾಗ ಕಟ್ಟಲು ಆರಂಭಿಸಿದ್ದ ಜಹಾನಾ ಬಾದ್ ನಗರವನ್ನು (ದಿಲ್ಲಿಯನ್ನು)ಸಾಯುವ ಮುನ್ನ ನೋಡಬೇಕೆಂಬ ಆಸೆ ಇತ್ತು ಅವನಿಗೆ. ಆದರೆ ಅದಕ್ಕೆ ಮಗ ಔರಂಗಜೇಬನ ಅನುಮತಿ ಬೇಕಿತ್ತು. ಮಗನು ಅನುಮತಿ ಕೊಡಲು ತಯಾರಿದ್ದ. ಬೇಕೆಂದರೆ, ಜಹಾನಾಬಾದಿನಲ್ಲೇ ಇದ್ದುಬಿಡಲಿ ಬಂದಿಯಾಗಿ ಎಂದು ಔರಂಗಜೇಬ ಹೇಳಿದ. ಆದರೆ ಒಂದೇ ಒಂದು ಷರತ್ತು. ಹೋಗುವಾಗ ಬರು ವಾಗ ಜಮುನಾ ನದಿಯನ್ನು ದೋಣಿಯಲ್ಲಿ ಮಾತ್ರ ದಾಟಬೇಕು. ತಂದೆ ಭೂಮಾರ್ಗ ವಾಗಿ ಆನೆಯ ಮೇಲೆ ಹೋದರೆ ಜನರು ಅವನನ್ನು ಕಂಡಾಗ ಏನೆಲ್ಲ ಮಾಡಿಬಿಡುವರೊ ಎಂಬ ಹೆದರಿಕೆ ಔರಂಗಜೇಬನಿಗೆ. ಮಗನು ವಿಧಿಸಿದ ಇಂಥ ಷರತ್ತಿಗೆ ಒಪ್ಪಲು ತಂದೆ ತಯಾರಿರಲಿಲ್ಲ. ಹೋಗುವುದೇ ಬೇಡವೆಂದು ತೀರ್ಮಾನಿಸಿದ. ಇಂಥ ಅವಹೇಳನಕ್ಕೆ ಗುರಿಯಾದ ಆ ಮುದಿರಾಜ ಕೊರಗಿ ಸೊರಗಿ .ಒಂದು ದಿನ ಭೂಮಿಗೊರಗಿದ. ಸತ್ತ ಸುದ್ದಿ ಬಂದ ಕೂಡಲೆ ಔರಂಗಜೇಬ ಆಗ್ರಾ ಕೋಟೆಯನ್ನು ಪ್ರವೇಶಿಸಿ ತಂದೆಗೆ ಸೇರಿದ ಸಮಸ್ತ ನಗನಾಣ್ಯಗಳನ್ನು ತನ್ನ ವಶಪಡಿಸಿಕೊಂಡ. ಎಷ್ಟೋ ಆಭರಣಗಳನ್ನು ಷಾಜಹಾನ ಕೈಯಿಂದ ಮುಟ್ಟಿರಲೇ ಇಲ್ಲ.

ಬೇಗಂ ಸಾಹೇಬಳ ಬಳಿಯೂ ಬೆಲೆಯಾದ ಮುತ್ತುರತ್ನಗಳು ಇದ್ದುವು. ಆಕೆಯ ಮೈಮೇಲೆ ಹೇರಿದ್ದ ಬೆಳ್ಳಿ ಬಂಗಾರದ ಒಡವೆಗಳನ್ನೆಲ್ಲಾ ಆಗಲೇ ಔರಂಗಜೇಬ ಕಿತ್ತು ಕೊಂಡಿದ್ದ. ಈಗ ಅವಳ ಬಳಿ ಉಳಿದಿದ್ದ ಮುತ್ತುರತ್ನಗಳನ್ನು ಕಿತ್ತುಕೊಂಡು, ತನ್ನ ಜೇಬಿಗೆ ತುಂಬಿಕೊಂಡ. ತಂದೆ ಷಾಜಹಾನನಿಗೂ ಸಹೋದರಿ ಬೇಗಂಸಾಹೇಬಳಿಗೂ ಅನೀತಿಯ ಸಂಭಂದವಿತ್ತೆಂದು ಸಂದೇಹವಿತ್ತು. ಆದರೂ ಔರಂಗಜೇಬ ಆಕೆಯನ್ನು ಮರ್ಯಾದೆಯಿಂದಲೇ ಕಂಡು, ಅವಳ ಒಡವೆ ವಸ್ತುಗಳನ್ನೆಲ್ಲ ಕಸಿದುಕೊಂಡ. ಆಕೆ ಯನ್ನು ಆಗ್ರಾದಿಂದ ತೆಗೆದು ಜಹಾನಾಬಾದಿನಲ್ಲಿ ಇಟ್ಟ. ಆನೆಯ ಮೇಲೆ ಜಹಾನಾ ಬಾದಿಗೆ ಹೋಗುತ್ತಿದ್ದ ಆಕೆಯನ್ನು ನಾನು ಬಂಗಾಳದಿಂದ ಆಗ್ರಾಕ್ಕೆ ಹಿಂದಿರುಗುತ್ತಿ ದ್ದಾಗ ಊರ ಹೊರಗೆ ಕಂಡೆ. ಕೊಂಚ ಕಾಲದ ನಂತರ ಆಕೆಯೂ ಸತ್ತುಹೋದಳೆಂಬ ಸುದ್ದಿ ಹಬ್ಬಿತು. ವಿಷ ಹಾಕಿದ ಕಾರಣ ಆಕೆ ಸತ್ತಳೆಂದು ಪ್ರಪಂಚವೆಲ್ಲಾ ಅಂದು ಕೊಳ್ಳುತಿತ್ತು.

ಈಗ ದಾರಾಷಾನ ವಿಚಾರವೇನಾಯಿತೆಂದು ನೋಡೋಣ :

ತಂದೆಯ ಬುದ್ಧಿವಾದದಂತೆ ಆಗ್ರಾದಲ್ಲಿದ್ದ ಭಂಡಾರವನ್ನು ಸಾಗಿಸಿಕೊಂಡು ಲಾಹೋರಿಗೆ ಹೋದ ದಾರಾ ಔರಂಗಜೇಬನ ಮೇಲೆ ಯುದ್ಧಮಾಡಲು ಮತ್ತೊಂದು ಸೈನ್ಯ ಸಿದ್ಧಮಾಡಿಕೊಳ್ಳುತ್ತಿದ್ದ. ಅವನ ನೆಚ್ಚು ಮೆಚ್ಚಿನವರು ಈಗಲೂ ಅವನನ್ನು

ನಂಬಿ ಅವನ ಬಳಿಯೇ ಇದ್ದರು. ಅವನ ಹಿರಿಯ ಮಗ ಸುಲೇಮಾನ್ ಷೇಕೊ ರಾಜ ರೂಪಸನೊಡನೆ (ರಾಜ ರೂಪ್‌ಸಿಂಗನೊಡನೆ) ಕೂಡಿಕೊಂಡು ಸೈನ್ಯವನ್ನು ಕಟ್ಟುವ ಕೆಲಸದಲ್ಲಿ ತೊಡಗಿದ್ದ. ಐವತ್ತು ಲಕ್ಷ ರೂಪಾಯಿಗಳನ್ನು ಕೈಯಲ್ಲಿ ಇಟ್ಟುಕೊಂಡು ಸೈನಿಕರನ್ನು ನೇಮಿಸಿಕೊಳ್ಳುವ ಕೆಲಸ ಮಾಡಿದ. ಆದರೆ ಇಷ್ಟೊಂದು ಹಣವನ್ನು ನೋಡಿದ ರಾಜ ರೂಪ ಮೋಸದಿಂದ ಆ ಹಣವನ್ನು ಕಿತ್ತುಕೊಂಡುಬಿಟ್ಟ. ಇನ್ನೆಲ್ಲಿ ತನ್ನ ಪ್ರಾಣಕ್ಕೆ ಸಂಚಕಾರ ಬಂದೀತೊ ಎಂದು ಹೆದರಿದ ಆ ರಾಜಕುಮಾರ, ಶ್ರೀನಗರರಾಜ್ಯಕ್ಕೆ ಹೋಗಿ, ಅಲ್ಲಿ ರಾಜ ನಕ್ತಿರಾಣಿಯ (ರಾಜಾ ಪೃಥ್ವಿಸಿಂಗನ) ಆಶ್ರಯ ಪಡೆದ. ಆ ರಾಜನೂ ದ್ರೋಹ ಬಗೆದ. ಷೆಕೋನನ್ನು ಬಂಧಿಸಿ ಔರಂಗಜೇಬನಿಗೆ ಒಪ್ಪಿಸಿಬಿಟ್ಟ.

ಇವನ್ನೆಲ್ಲಾ ನೋಡಿದ ದಾರಾಷಾ ದಿಕ್ಕೆಟ್ಟು ಲಾಹೋರಿನಿಂದ ಸಿಂದ್ ರಾಜ್ಯಕ್ಕೆ ಹೋದ. ಹೊರಡುವ ಮುನ್ನ ತನ್ನ ಸಮಸ್ತ ಭಂಡಾರವನ್ನು ಒಬ್ಬ ನಂಬಿಕಸ್ತನ ಸುಪರ್ದಿಗೆ ವಹಿಸಿ, ಅದನ್ನೆಲ್ಲಾ ನದಿಯಮೇಲೆ ದೋಣಿಯಲ್ಲಿ ಸಾಗಿಸಿಕೊಂಡು ತಾನಿರುವಲ್ಲಿಗೆ ಬರುವಂತೆ ಹೇಳಿದ. ಸಿಂದ್‌ನಿಂದ ಹೊರಟು ಕಾಂಚನಗಂಗಾ ರಾಜನ ಬಳಿಗೆ ಹೋದ. ಅವನಿಂದಲೂ ಯಾವ ಸಹಾಯ ದೊರೆಯದೇಹೋದ ಕಾರಣ ಗುಜರಾತಿಗೆ ಹೋದ. ಅಲ್ಲಿಯ ಜನ ಷಾಜಹಾನನ ಅನಂತರ ಇವನೇ ಚಕ್ರವರ್ತಿಯೆಂದು ಭಾವಿಸಿ, ಬಹು ಸಂತೋಷದಿಂದ ಸ್ವಾಗತಿಸಿದರು. ಮುರಾದ್‌ಭಕ್ಷ್ ಸೂರತ್ತಿನಲ್ಲಿ ಒಬ್ಬ ರಾಜನನ್ನು (ರಜಪೂತನನ್ನು) ಕೊತ್ವಾಲನನ್ನಾಗಿ ನೇಮಿಸಿದ್ದ. ಆತ ಮುರಾದ್‌ಭಕ್ಷ್‌ನ ಅಪ್ಪಣೆಯಿಲ್ಲದೆ ದಾರಾಷಾನ ಮಾತಿನಂತೆ ನಡೆಯುವುದು ಸಾಧ್ಯವಿಲ್ಲವೆಂದು ಹೇಳಿಬಿಟ್ಟ.

ಈ ಮಧ್ಯೆ ಜಸ್ವಂತ್ ಸಿಂಗ್ ಎಂಬ ಬಹು ಬಲಾಢ್ಯನಾದ ರಾಜನೊಬ್ಬ ಔರಂಗಜೇಬನ ಪಕ್ಷವನ್ನು ಬಿಟ್ಟು ದಾರಾಷಾನ ಪಕ್ಷಕ್ಕೆ ಬರುವುದಾಗಿ ಗೊತ್ತಾಯಿತು. ದಾರಾಷಾ ಅಜ್ಮೀರಕ್ಕೆ ಬಂದು ತನ್ನ ಸೈನ್ಯವನ್ನು ಕೂಡಿಕೊಳ್ಳಬಹುದೆಂದು ಆ ರಾಜ ತಿಳಿಸಿದ್ದ. ಅದರಂತೆ ದಾರಾ ಅಜ್ಮೀರಕ್ಕೆ ಹೋದ. ಇಷ್ಟರಲ್ಲಿ ಆ ರಾಜ, ರಾಜಾ ಜಯಸಿಂಗನ ಮಾತಿಗೆ ಕಟ್ಟುಬಿದ್ದು ದಾರಾನಿಗೆ ಕೈಕೊಟ್ಟ. ಅಣ್ಣ ತಮ್ಮಂದಿರ ಸೈನ್ಯಗಳು ಎದುರುಬದರು ನಿಂತು ಯುದ್ಧಕ್ಕೆ ತೊಡಗಿದವು. ಮೂರು ದಿನಗಳ ಕಾಲ ರಕ್ತದ ಕೋಡಿಯೇ ಹರಿಯಿತು; ಎಂಟು ಒಂಬತ್ತು ಸಾವಿರ ಜನಗಳು ಹತರಾದರು. ಮೋಸಕ್ಕೊಳಗಾದ ದಾರಾಷಾ ಬೇರೊಂದು ಮಾರ್ಗ ಕಾಣದೆ ಶತ್ರುಗಳ ಕೈಗೆ ಬೀಳುವುದರ ಬದಲು ತಪ್ಪಿಸಿಕೊಳ್ಳುವುದೊಳ್ಳೆಯದೆಂದು ಭಾವಿಸಿ, ತನ್ನ ಹೆಂಡತಿಯರು ಮತ್ತು ಕೆಲವು ಮಕ್ಕಳುಗಳ ಸಮೇತ ಅಹಮದಾಬಾದ್ ಕಡೆಗೆ ಹೊರಟ. ಅಹಮದಾಬಾದ್ ಸಮೀಪಿಸುತ್ತಿರುವಾಗ ದಾರಾನ ಹೆಂಡತಿಯರಲ್ಲಿ ಒಬ್ಬಳಿಗೆ ಏನೋ ಒಂದು ರೋಗ ಸಂಭವಿಸಿತು. ಆಕೆ ಬಹಳವಾಗಿ ನರಳಲಾರಂಭಿಸಿದಳು. ಹೆಸರಾಂತ ವೈದ್ಯ ಬೆರ್‌ನ್ಯೇ ಸುತ್ತಮುತ್ತ ಅಲ್ಲೆಲ್ಲಿಯೋ ಇರುವನೆಂದು ಗೊತ್ತಾಯಿತು. ಅವನನ್ನು ಹುಡುಕಿ ಕರೆತರುವಂತೆ ದಾರಾ ತನ್ನವರಿಗೆ ಹೇಳಿ ಕಳುಹಿಸಿದ. ಮೆಸ್ಯ ಬೆರ್‌ನ್ಯೇ ಅವರು ಫ್ರೆಂಚ್ ವೈದ್ಯರು. ಅವರು ಮೊಗಲ್

ಆಸ್ಥಾನವನ್ನು ನೋಡಲು ಆಗ್ರಾಕ್ಕೆ ಹೋಗುತ್ತಿದ್ದರು. ಬೆರ್‌ನೈೕ ಅವರು ತಮ್ಮ ವೈಯಕ್ತಿಕ ಗುಣಗಳಿಂದಲೂ ಅವರ ಪ್ರವಾಸ ಕಥನಗಳಿಂದಲೂ ಇಡೀ ಪ್ರಪಂಚಕ್ಕೆ ಹೆಸರಾಗಿದ್ದಾರೆ. ದಾರಾಷಾ ಹೇಳಿಕಳುಹಿಸಲು ಅವರು ಅವನ ಡೇರೆಯನ್ನು ಪ್ರವೇಶಿಸಿ, ಆತನ ಹೆಂಡತಿಗೆ ಒದಗಿದ್ದ ರೋಗನೇನೆಂದು ಪರೀಕ್ಷಿಸಿ ಔಷಧಿ ಕೊಟ್ಟರು. ಕಾಯಿಲೆ ಕೂಡಲೇ ಗುಣವಾಯಿತು. ಇಂಥ ವೈದ್ಯನನ್ನು ತನ್ನ ಬಳಿ ಇಟ್ಟುಕೊಳ್ಳುವುದು ಒಳ್ಳೆಯ ದೆಂದು ಆಲೋಚಿಸಿದ ದಾರಾ, ತನ್ನ ಬಳಿ ಇರಬೇಕೆಂದು ಬೆರ್‌ನೈೕ ಅವರನ್ನು ಕೇಳಿ ಕೊಂಡ. ಅದಕ್ಕೆ ಬೆರ್‌ನೈೕ ಒಪ್ಪುವ ಸಂಭವವಿತ್ತು. ಆದರೆ ದಾರಾನಿಗೆ ನಿಲ್ಲಲು ನೆಲೆಯೇ ಇಲ್ಲದಂತಾಗಿತ್ತು. ತನ್ನ ಕಡೆಯ ಶಿಬಿರಾಧಿಕಾರಿಯನ್ನು ಅಹಮದಾಬಾದಿಗೆ ಕಳುಹಿಸಿ ಅಲ್ಲಿ ತನ್ನ ವಸತಿಗೆ ಏರ್ಪಾಡುಮಾಡಬೇಕೆಂದು ತಿಳಿಸಿದ್ದ. ಆದರೆ ಅಲ್ಲಿಯ ಕೊತ್ವಾಲನು ಔರಂಗಜೇಬನ ಕಡೆ ಜಾರಿಕೊಂಡು ದಾರಾನಿಗೆ ಇರಲು ಜಾಗವಿಲ್ಲದಂತೆ ಮಾಡಿಬಿಟ್ಟ. ಈ ದ್ರೋಹಕ್ಕೊಳಗಾದ ದಾರಾ ಬೇರೊಂದು ದಾರಿ ಕಾಣದೆ ರಾತ್ರಾ ರಾತ್ರಿ ಸಿಂಧ್ ಕಡೆಗೆ ಹೊರಟುಬಿಟ್ಟ. ಬೆರ್‌ನೈೕ ತನ್ನ ದಾರಿ ತನಗೆ ಎಂದು ಆಗ್ರಾ ಕಡೆ ಹೊರಟುಹೋದರು.

ಸಿಂಧೂದೇಶವನ್ನು ತಲುಪಿದ ದಾರಾನ ಉದ್ದೇಶ, ಪರ್ಷಿಯಾದ ದೊರೆ ಎರಡನೆಯ ಷಾ ಅಬ್ಬಾಸನ ಸಹಾಯವನ್ನು ಪಡೆಯುವುದಾಗಿತ್ತು. ಸಮುದ್ರದ ಮೇಲೆ ಹಾದು ಪರ್ಷಿಯಾ ಮುಟ್ಟುವುದಕ್ಕೆ ಸಿಂಧೂ ದೇಶದ ದೊರೆ ಸಿದ್ಧತೆ ಮಾಡಿಸಿದ್ದನು. ಆದರೆ ಮತ್ತೆಲ್ಲಿ ಮೋಸಕ್ಕೊಳಗಾಗಿಬಿಡುವೆನೋ ಎಂದು ಹೆದರಿದ ದಾರಾ ಭೂಮಾರ್ಗ ವಾಗಿಯೇ ಅಲ್ಲಿಗೆ ಹೊರಟನು. ಕಂದಹಾರಿಗೆ ಹೋಗಬೇಕಾದರೆ ಪಠಾಣರು ಇರುವ ನಾಡಿನಲ್ಲಿ ದಾರಿ ಸಾಗಿಸಬೇಕಾಗಿತ್ತು. ಹಾಗೆ ಮಾಡುವಾಗ ದಾರಾ ಅಲ್ಲಿಯ ಪಾಳೆಯ ಗಾರನೊಬ್ಬನ ಆಶ್ರಯ ಕೋರಿದ. ಆ ಪಾಳೆಯಗಾರನ ಹೆಸರು ಜುಯಿನ್‌ಖಾನ್. ಆತ ದಾರಾನ ತಂದೆ ಷಾಜಹಾನನಿಂದ ಮರಣದಂಡನೆಗೆ ಗುರಿಯಾಗಿದ್ದ. ತಂದೆಯನ್ನು ಬೇಡಿಕೊಂಡು ದಾರಾ ಆ ಮರಣದಂಡನೆಯನ್ನು ತಪ್ಪಿಸಿದ್ದ. ತನ್ನ ಪ್ರಾಣವನ್ನು ಉಳಿಸಿದ ಕೃತಜ್ಞತೆಯೂ ಇಲ್ಲದೆ ಆ ಖಾನ ಈಗ ದಾರಾನಿಗೆ ಕೈಕೊಟ್ಟ.

ಇವೆಲ್ಲಕ್ಕಿಂತ ಹೆಚ್ಚಾಗಿ ದಾರಾನ ಮೆಚ್ಚಿನ ಮಡದಿಯೊಬ್ಬಳು ಬೇಸಿಗೆಯ ಬಿಸಿಲ ಧಗೆಯಲ್ಲಿ ಕುಡಿಯಲು ನೀರಿಲ್ಲದೆ ಸತ್ತುಹೋದಳೆಂಬ ಘೋರವಾರ್ತೆ ದಾರಾನ ಕಿವಿ ಮುಟ್ಟಿತು. ಇದನ್ನು ಕೇಳಿ ತತ್ತರಿಸಿದ ದಾರಾ ಸತ್ತವನಂತೆ ಬಿದ್ದುಬಿಟ್ಟ. ಅಲ್ಲಿದ್ದ ವರು ಅವನಿಗೆ ಶೈತ್ಯೋಪಚಾರ ಮಾಡಿ ಎಚ್ಚರಿಸಿದರು. ಎಚ್ಚೆತ್ತ ದಾರಾ ಹುಚ್ಚನಂತೆ ತನ್ನ ಬಟ್ಟೆಗಳನ್ನು ಹರಿದುಕೊಂಡು ಅತ್ತನು. ಎಂತೆಂಥ ಕಷ್ಟಗಳಿಗೂ ಅಲ್ಲಾಡದಿದ್ದ ನಿರ್ಭಾಗ್ಯ ದಾರಾ ತನ್ನ ಮೆಚ್ಚಿನ ಮಡದಿಯ ಮರಣವನ್ನು ಸಹಿಸಲಾರದಾದ. ಯಾರು ಎಷ್ಟು ಸಂತೈಸಿದರೂ ಸುಮ್ಮನಿರಲೊಲ್ಲ. ದುಃಖಕ್ಕೊಳಗಾದವನಿಗೆ ತಕ್ಕ ಉಡುಪಿನಲ್ಲಿ ತಲೆಗೊಂದು ಎಂಥದೋ ಒರಟು ಬಟ್ಟೆಯೊಂದನ್ನು ಸುತ್ತಿಕೊಂಡು, ಆ ವಿಶ್ವಾಸ

ಘಾತುಕ ಜೆಯಿನ್‌ಖಾನನ ಮನೆಗೆ ಹೋದ. ಅಲ್ಲಿ ದಾರಾ ಮಂಚದ ಮೇಲೆ ಮಲಗಿ ವಿಶ್ರಾಂತಿ ಪಡೆದು ಎದ್ದಾಗ ಮತ್ತೊಂದು ಘೋರ ಸುದ್ದಿ ಅವನಿಗಾಗಿ ಕಾಯುತ್ತಿತ್ತು. ಆ ಪಾಪಿ ಜುಯಿನ್‌ಖಾನ ದಾರಾನ ಎರಡನೇ ಮಗ ಸೆಫೆರ್ಹ್ ಷಿಕೋನನ್ನು ಹಿಡಿಯಲು ಹೋದಾಗ ಆ ಚಿಕ್ಕವಯಸ್ಸಿನ ಹುಡುಗ ಎದುರುಬಿದ್ದು ತನ್ನ ಬಿಲ್ಲುಬಾಣಗಳಿಂದ ಮೂರು ಜನರನ್ನು ಕೊಂದುಹಾಕಿದ ಆದರೂ ಏಕಾಂಗಿಯಾಗಿದ್ದ ಆತ ತನ್ನನ್ನು ಹಿಡಿಯಲು ಬಂದ ಬಹು ಜನರನ್ನು ಎದುರಿಸಲು ಸಾಧ್ಯವಾಗದೆ ಸೆರೆಯಾದ. ದಾರಾ ಎದ್ದು ಕುಳಿತಾಗ ಅವನ ಮುಂದೆ ಹಿಚಂಡಿ ಕಟ್ಟಿದ್ದ ಮಗ ನಿಂತಿದ್ದ. ನಿರ್ಭಾಗ್ಯನಾದ ಆ ತಂದೆ ಮಗನ ಈ ದಾರುಣಸ್ಥಿತಿಗೆ ಕಾರಣವನ್ನು ಕೂಡಲೇ ಅರಿತು, ಈ ರೀತಿ ಪ್ರಲಾಪಿಸಿದ :

"ಹೇ ಪಾಪಿ ! ಕೃತಜ್ಞಹೀನ ! ಮುಗಿಸು ನಿನ್ನ ಕೆಲಸ ! ಆರಂಭಿಸಿದ ನಿನ್ನ ಕೆಲಸವನ್ನು ಕೊನೆಮಾಡು, ಕೊಲೆಪಾತಕಿ ! ನಾವೆಲ್ಲ ದುರಾದೃಷ್ಟಕ್ಕೂ ಔರಂಗಜೇಬನ ಅನೀತಿಯ ಆಸೆಗೂ ಬಲಿಯಾಗಿದ್ದೇವೆ. ಆದರೆ ನಿನ್ನ ಪ್ರಾಣ ಉಳಿಸಿದ್ದೇ ನನ್ನ ಪ್ರಾಣಕ್ಕೆ ಸಂಚಕಾರ ತಂದಿತು ಎಂಬುದು ಜ್ಞಾಪಕವಿರಲಿ. ರಾಜರನ್ನು ಯಾರೂ ಇಲ್ಲಿಯವರೆಗೆ ಹಿಂಗಟ್ಟು ಕಟ್ಟಲಿಲ್ಲವೆಂಬುದನ್ನು ನೀನು ಮರೆಯಬೇಡ, ತಿಳಿಯಿತೆ!"

ಈ ಮಾತುಗಳನ್ನು ಕೇಳಿದ ಜುಯಿನ್‌ಖಾನ್ ಕೊಂಚ ಕನಿಕರಪಟ್ಟುಕೊಂಡು ದಾರಾನ ಮಗನಿಗೆ ಕಟ್ಟಿದ್ದ ಕಟ್ಟುಗಳನ್ನು ಬಿಚ್ಚಿಸಿದ. ಆದರೆ ತಂದೆಮಕ್ಕಳಿಬ್ಬರ ಮೇಲೆ ಬಲವಾದ ಕಾವಲು ಇಟ್ಟ. ತಾನು ದಾರಾನನ್ನು ಸೆರೆಹಿಡಿದಿರುವುದಾಗಿ ಜುಯಿನ್‌ಖಾನ್ ರಾಜ ಜಸ್ವಂತ್‌ಸಿಂಗನಿಗೂ, ಅಬ್ದುಲ್ ಖಾನನಿಗೂ ಸುದ್ದಿ ಕಳುಹಿಸಿದ. ಅವರು ಬರುವುದರೊಳಗೆ ಜುಯಿನ್‌ಖಾನ್ ದಾರಾನ ಭಂಡಾರವನ್ನೆಲ್ಲಾ ಸೂರೆಮಾಡಿದುದಲ್ಲದೆ, ಅವನ ಹೆಂಡತಿ ಮಕ್ಕಳಿಗೆ ಕೊಡಬಾರದ ಹಿಂಸೆ ಕೊಟ್ಟ.

ಜಸ್ವಂತ್‌ಸಿಂಗನೂ, ಅಬ್ದುಲ್ಲಾ ಖಾನನೂ ಬಂದರು. ಬಂದವರು ದಾರಾನನ್ನು ಮತ್ತು ಅವನ ಮಗನನ್ನು ಒಂದು ಆನೆಯ ಮೇಲೂ, ಅವನ ಹೆಂಡತಿ ಮಕ್ಕಳನ್ನು ಇನ್ನೊಂದು ಆನೆಯ ಮೇಲೂ ಹೇರಿ ಜಹಾನಾಬಾದಿಗೆ (ದಿಲ್ಲಿಗೆ) ಕಳುಹಿಸಿಕೊಟ್ಟರು. ಆ ಊರನ್ನು ದಾರಾ ಸೆಪ್ಟೆಂಬರ್ ೯ನೇ ತಾರೀಖು ಪ್ರವೇಶಿಸಿದಾಗ ಅವನನ್ನು ನೋಡಲು ಊರಿಗೆ ಊರೇ ನೆರೆದಿತ್ತು. ರಾಜನಾಗಿ ಮೆರೆಯಬೇಕಾದವನಿಗೆ ಈ ಗತಿ ಒದಗಿದುದನ್ನು ಜನರು ನೋಡಿದರು. ದಾರಾನಿಗೆ ಇನ್ನು ಮುಂದೆ ರಾಜಪದವಿ ಇಲ್ಲ ಎಂಬುದು ಜನರಿಗೆ ಖಚಿತವಾಗಲಿ ಎಂದು ಔರಂಗಜೇಬ ಅವನ ಮೆರವಣಿಗೆ ಊರಿನ ಬೀದಿಗಳಲ್ಲೆಲ್ಲಾ ಸಾಗಬೇಕೆಂದು ಅಪ್ಪಣೆಮಾಡಿದ್ದ. ತಮ್ಮ ಅಚ್ಚುಮೆಚ್ಚಿನ ರಾಜಕುಮಾರನಿಗೆ ಒದಗಿದ ಈ ದಾರುಣ ಸ್ಥಿತಿಯನ್ನು ಕಂಡ ಜನ ಏನೂ ಮಾಡಲಾರದೆ ಕೈಕೈ ಹಿಸುಕಿಕೊಂಡು ಸುಮ್ಮನಾದರು. ಹಿಂದೆ ಉದಾರಿಯಾದ ಅವನ ಅನ್ನ ಉಂಡ ಕೆಲವು ಕೃತಜ್ಞತೆಯ ಸಿಪಾಯಿಗಳು ಘಾತಕಿಯೂ ಪಾತಕಿಯೂ ಆದ ಜುಯಿನ್‌ಖಾನನನ್ನು, ಅವನು ತನ್ನ

ಊರಿಗೆ ಹಿಂದಿರುಗಲು ಕಾಡಿನಲ್ಲಿ ಪ್ರಯಾಣ ಮಾಡುತ್ತಿರುವಾಗ ಹಿಡಿದು ಕೊಂದು ಹಾಕಿ ತಮ್ಮ ಮನಸ್ಸಿಗೆ ಸಮಾಧಾನತಂದುಕೊಂಡರು.

ರಾಜನೀತಿಯಲ್ಲಿಯೂ ಕೃತ್ರಿಮದಲ್ಲಿಯೂ ಎತ್ತಿದ ಕೈಯಾದ ಔರಂಗಜೇಬ, ದಾರಾಷಾನನ್ನು ರಾಜ್ಯದಿಂದ ಹೊರಗೆ ಕಳುಹಿಸುವುದು ತನ್ನ ಉದ್ದೇಶವೇ ಹೊರತು, ಅವನನ್ನು ಬಂದಿಯಾಗಿ ಇಡುವ ಉದ್ದೇಶವನ್ನು ತಾನು ಹೊಂದಿಲ್ಲವೆಂದು ಹೇಳಿಸ ತೊಡಗಿದ. ಆದರೆ ಅತನ ಮನಸ್ಸಿನಲ್ಲಿದ್ದುದೇ ಬೇರೆಯಾಗಿತ್ತು. ಜಹಾನಾಬಾದಿನ ಬೀದಿ ಗಳಲ್ಲಿ ಮೆರವಣಿಗೆ ಮಾಡಿಸಿದ ತರುವಾಯ ದಾರಾಷಾನನ್ನು ಅಸಿರ್‌ಫೆರ್ ಕೋಟೆಯಲ್ಲಿ ಬಂಧನದಲ್ಲಿಡಲು ಕರೆದುಕೊಂಡುಹೋಗುವಾಗ ಅವನನ್ನು ಮುಗಿಸಿಬಿಡಬೇಕೆಂದು ತನ್ನ ಕಡೆಯವರಿಗೆ ಗುಟ್ಟಾಗಿ ಹೇಳಿದ್ದ.

ಕೋಟೆಗೆ ಹೋಗುವ ದಾರಿಯಲ್ಲಿ ಒಂದು ಹಾಯವಾದ ತಾಣದಲ್ಲಿ ದಾರಾನ ಡೇರೆ ಹೊಡೆದರು. ದಾರಾನ ಊಟವಾದ ನಂತರ ಸಾಯೀಫ್‌ಖಾನ ಡೇರೆಯನ್ನು ಪ್ರವೇಶಿಸಿದ. ಈತ ಹಿಂದೆ ದಾರಾನ ಸೇವೆಯಲ್ಲಿದ್ದ. ಅವನನ್ನು ಕಂಡ ದಾರಾ ತನ್ನ ಮೆಚ್ಚಿನ ಹಿಂಬಾಲಕರಲ್ಲಿ ಒಬ್ಬ ಬಂದನೆಂದು ಸಂತೋಷವನ್ನು ವ್ಯಕ್ತಪಡಿಸಿದ. ಆಗ ಸಾಯೀಫ್‌ಖಾನ ಹೇಳಿದ :

"ನಾನು ಹಿಂದೆ ನಿಮ್ಮ ಸೇವೆಯಲ್ಲಿದ್ದುದು ನಿಜ. ಆದರೆ ಈಗ ನಾನು ಔರಂಗ ಜೇಬನ ಗುಲಾಮ ; ನಿಮ್ಮ ತಲೆಯೊಡನೆ ಹಿಂದಿರುಗಬೇಕೆಂದು ನನಗೆ ಅವರ ಅಪ್ಪಣೆ ಯಾಗಿದೆ".

"ಹಾಗಿದ್ದರೆ ನಾ ಸಾಯಬೇಕೆ !" ಎಂದ ದಾರಾ.

"ಹೌದು, ಅದು ರಾಜನ ಅಪ್ಪಣೆ. ಅದನ್ನು ನೆರವೇರಿಸಲು ನಾನು ಇಲ್ಲಿಗೆ ಬಂದಿ ದ್ದೇನೆ" ಎಂದ ಸಾಯೀಫ್‌ಖಾನ.

ಡೇರೆಯ ಹಿಂಬದಿಯಲ್ಲಿ ಮಲಗಿದ್ದ ದಾರಾನ ಮಗ ಸೆಪೆರ್ಹ್ ಷಕೊ ಈ ಸಂಭಾ ಷಣೆಯನ್ನು ಕೇಳಿ ಎಚ್ಚರಗೊಂಡವನು ತನ್ನಿಂದ ಕಸಿದುಕೊಂಡಿದ್ದ ಅಸ್ತ್ರಶಸ್ತ್ರಗಳನ್ನು ಮತ್ತೆ ಕೈಗೆ ತೆಗೆದುಕೊಂಡು ತಂದೆಯ ಸಹಾಯಕ್ಕೆ ನುಗ್ಗಿದ. ಆದರೆ ಸಾಯೀಫ್ ಖಾನನ ಜೊತೆ ಬಂದವರು ಅವನನ್ನು ಹಿಡಿದರು. ದಾರಾನೂ ಅವರ ಮೇಲೆ ಬೀಳಲು ಪ್ರಯತ್ನಪಟ್ಟ. ಆದರೆ ಅದೆಲ್ಲ ವ್ಯರ್ಥವೆಂದು ಅರಿತುಕೊಂಡ ಅವನು ದೇವರ ಪ್ರಾರ್ಥ ನೆಗೆ ಒಂದಿಷ್ಟು ಅವಕಾಶ ಕೊಡಿರೆಂದು ಕೇಳಿದ. ಅವಕಾಶ ಸಿಕ್ಕಿತು. ಸೆಪೆರ್ಹ್ ಷಕೋನನ್ನು ದೂರ ಎಳೆದುಕೊಂಡುಹೋದರು. ಅತ್ತ ಅವನನ್ನು ಕರೆದುಕೊಂಡು ಹೋದರೋ ಇಲ್ಲವೋ ಇತ್ತ ಒಬ್ಬ ಗುಲಾಮ ದಾರಾನ ಕತ್ತನ್ನು ಕತ್ತರಿಸಿಬಿಟ್ಟ. ಸಾಯೀಫ್‌ಖಾನ ದಾರಾನ ಶಿರವನ್ನು ತೆಗೆದುಕೊಂಡುಹೋಗಿ ಔರಂಗಜೇಬನಿಗೆ ತೋರಿಸಿದ. ಅಣ್ಣನ ಸಾವಿನಿಂದ ತನಗೆ ಸಿಂಹಾಸನ ಭದ್ರವಾಯಿತೆಂದು ಭಾವಿಸಿ ತಮ್ಮ ಸಂತೋಷಪಟ್ಟ !

ಸೆಪೆಹರ್ ಷಿಕೊನನ್ನು ಕರೆದುಕೊಂಡು ಹೋಗಿ ಗ್ವಾಲಿಯರ್‌ನಲ್ಲಿ ಬಂಧನದಲ್ಲಿದ್ದ ಚಿಕ್ಕಪ್ಪನ ಜೊತೆ ಇಟ್ಟರು. ದಾರಾನ ಹೆಂಡತಿ ಮಕ್ಕಳನ್ನು ಔರಂಗಜೇಬನ ಅಂತಃಪುರ ದಲ್ಲಿ ಇಟ್ಟರು.

ಈಗ ಇನ್ನೊಬ್ಬ ಉಳಿದಿದ್ದಾನೆ ಔರಂಗಜೇಬನ ಹಾದಿಗೆ ಮುಳ್ಳಾಗಿ. ಅವನೇ ಔರಂಗಜೇಬನ ಇನ್ನೊಬ್ಬ ಅಣ್ಣ ಸುಲ್ತಾನ್ ಷೂಜ. ಆತ ಬಂಗಾಳದಲ್ಲಿ ದೊಡ್ಡ ಸೈನ್ಯವನ್ನು ಕಟ್ಟಿ ಆಗ್ರಾ ಕಡೆ ದಂಡೆತ್ತಿ ಬರುವ ಸನ್ನಾಹದಲ್ಲಿದ್ದಾನೆ. ಆತನನ್ನು ಸದೆ ಬಡಿಯುವ ಮುನ್ನವೇ ಔರಂಗಜೇಬ ಮೊಗಲ್ ಸಿಂಹಾಸನದ ಮೇಲೆ ಕುಳಿತುಕೊಳ್ಳಲು ನಿರ್ಧರಿಸಿದ. ತಂದೆ ಷಾಜಹಾನನನ್ನೂ ತಮ್ಮ ಮುರಾದ್ ಭಕ್ಷ್‌ನನ್ನೂ ಬಂಧನದಲ್ಲಿ ಟ್ಟಿದ್ದ ; ಯಾವ ದಯಾದಾಕ್ಷಿಣ್ಯವೂ ಇಲ್ಲದೆ ಅಣ್ಣ ದಾರಾಷಾನ ತಲೆ ಕಡಿಸಿದ್ದ. ಈಗ ಸರಿಯಾದ ಸಮಯ ಸಿಂಹಾಸನವನ್ನೇರಲು ! ಅವನ ಅದೃಷ್ಟವೂ ಚೆನ್ನಾಗಿತ್ತು. ರಾಜ್ಯದ ಶ್ರೀಮಂತ ಸರದಾರರೆಲ್ಲ ಅವನೇ ಚಕ್ರವರ್ತಿಯಾಗಲು ಅರ್ಹ ಎಂದರು. ಸಿಂಹಾಸನವೂ ಸಿದ್ಧವಾಗಿತ್ತು. ತಾಮುರ್ ಲೇನನು ಮಾಡಿಸಲು ತೊಡಗಿದ್ದ ಸಿಂಹಾಸನವನ್ನು ತಯಾ ರಿಸುವ ಕೆಲಸವನ್ನು ಷಾಜಹಾನ ಮುಗಿಸಿದ್ದ. ಇಷ್ಟು ಕಾಲ ತಯಾರಿಸಿದ ಆ ಸಿಂಹಾಸನ ಬಹು ಬೆಲೆಯಾದುದೂ, ವೈಭವಯುತವಾದುದೂ ಆಗಿತ್ತು. ಅಂಥ ಸಿಂಹಾಸನ ಈ ಹಿಂದೆ ಪ್ರಪಂಚದಲ್ಲೆಲ್ಲಿಯೂ ಇರಲಿಲ್ಲ. ಔರಂಗಜೇಬ ಆ ಸಿಂಹಾಸನ ವನ್ನೇರುವ ಮುನ್ನ ರಾಜ್ಯದ ಮಹಾ ಖಾಜಿ ಅವನನ್ನು ರಾಜನೆಂದು ಘೋಷಿಸಬೇಕಾ ಗಿತ್ತು. "ತಂದೆ ಬದುಕಿರುವಾಗ ಮಗನು ಸಿಂಹಾಸನವನ್ನೇರುವುದು ಸರಿಯಲ್ಲ. ಅಲ್ಲದೆ, ಯಾರಿಗೆ ಸಿಂಹಾಸನಕ್ಕೆ ಅಧಿಕಾರವಿತ್ತೋ ಅಂಥ ಅಣ್ಣನನ್ನೇ ಕೊಲ್ಲಿಸಿದ್ದಾನೆ. ಆದ್ದರಿಂದ ಸಿಂಹಾಸನವನ್ನೇರಲು ಔರಂಗಜೇಬನಿಗೆ ಅಧಿಕಾರವಿಲ್ಲ"—ಎಂದು ಆ ಮಹಾ ಖಾಜಿ ಬಹಿರಂಗವಾಗಿಯೇ ಹೇಳಿದ.

ಆ ಖಾಜಿ ಇದ್ದರೆ ತಾನೆ ತಾಪತ್ರಯ ! ಔರಂಗಜೇಬ ಇಸ್ಲಾಂ ಧಾರ್ಮಿಕ ಪಂಡಿತರ ಸಭೆ ಸೇರಿಸಿದ. ಅವರ ಮುಂದೆ ತನ್ನ ವಾದ ಮಂಡಿಸಿದ. ಮುದುಕನೂ ದುರಾಚಾರಗಳಿಂದ ದೇಹಶಕ್ತಿಯನ್ನು ಕಳೆದುಕೊಂಡವನೂ ಆದ ತಂದೆ ರಾಜ್ಯ ಆಳಲು ಅನರ್ಹ. ಕುಡುಕನೂ ವಿಗ್ರಹಾರಾಧಕರ ಪೋಷಕನೂ ಆದ ದಾರಾಷಾನ ಗತಿ ಮುಗಿಸಿದ್ದೇ ಸರಿ. ಔರಂಗಜೇಬ ತನ್ನ ಈ ವಾದಗಳ ಜೊತೆಗೆ ಭಯಭೀತಿಗಳನ್ನೂ ತೋರಿ ಸಿದ. ಧಾರ್ಮಿಕ ಪಂಡಿತ ಮಂಡಲಿ ಔರಂಗಜೇಬನೇ ಪಟ್ಟಕ್ಕೆ ಅರ್ಹ ಎಂದು ತೀರ್ಮಾನಿ ಸಿತು. ಆಗಲೂ ಆ ಮಹಾ ಖಾಜಿ ಇದನ್ನು ವಿರೋಧಿಸಿದ. ಆಗ ಅವನನ್ನೇ ಅಧಿಕಾರ ದಿಂದ ಕೆಳಗಿಳಿಸಿದನು, ರಾಜನಾಗಲು ಹಾತೊರೆಯುತ್ತಿದ್ದ ಔರಂಗಜೇಬ. ಮತ್ತೊಬ್ಬ ಮಹಾ ಖಾಜಿಯು ನೇಮಕನಾಯಿತು. ಈತ ಔರಂಗಜೇಬನೇ ರಾಜನೆಂದು

ಘೋಷಿಸಿದ. ೧೬೬೦ರ ಅಕ್ಟೋಬರ್ ೨೦ರಂದು ಔರಂಗಜೇಬ ಮೊಗಲ್ ಸಾಮ್ರಾಜ್ಯದ ಚಕ್ರವರ್ತಿಯಾದ.[1]

ಸಿಂಹಾಸನವನ್ನೇರಿದ ಔರಂಗಜೇಬನಿಗೆ ಅನ್ನಿಸಿತು, ಬಂಗಾಳದಲ್ಲಿ ಸೈನ್ಯವನ್ನು ಸಿದ್ಧಪಡಿಸಿಕೊಂಡಿರುವ ಅಣ್ಣ ಸುಲ್ತಾನ್ ಷೂಜನನ್ನು ಬಲಿಹಾಕಿದ ಹೊರತು ತನಗೆ ಭದ್ರತೆ ಇಲ್ಲವೆಂದು. ಅವನನ್ನು ಎದುರಿಸಲು ತನ್ನ ಹಿರಿಯ ಮಗ ಸುಲ್ತಾನ್ ಮಹಮ್ಮದನೊಡನೆ ದೊಡ್ಡ ಸೈನ್ಯವನ್ನು ಕಳುಹಿಸಿದ. ಹೆಸರಾಂತ ದಳಪತಿ ಮೀರ್ ಜುಮ್ಲಾನನ್ನು ಅವನ ಸಹಾಯಕ್ಕೆ ನೇಮಿಸಿದ. ಎದುರೆದುರಿಗೆ ಯುದ್ಧವೇನೋ ಆಯಿತು. ವಿಜಯಲಕ್ಷ್ಮಿ ಒಮ್ಮೆ ಈ ಕಡೆ, ಇನ್ನೊಮ್ಮೆ ಆ ಕಡೆ ತೊನೆದಾಡಿದಳು. ನೇರ ಯುದ್ಧದ ಜೊತೆಗೆ ಭೇದೋಪಾಯಗಳನ್ನು ಅನುಸರಿಸದೆ ವಿಜಯ ತಮ್ಮದಾಗದೆಂದು ಔರಂಗಜೇಬನ ಮಗ ಮಹಮ್ಮದ್ ಮತ್ತು ಭೇದೋಪಾಯಗಳಲ್ಲಿ ಹೆಸರಾದ ಮೀರ್ ಜುಮ್ಲಾ ಅರಿತರು. ಹಿಂದಾಗಲೇ ಗೋಲ್ಕೊಂಡಾ ರಾಜನನ್ನು ಬಿಟ್ಟು ಷಾಜಹಾನನ ಕಡೆ ಸೇರಿ, ಆಮೇಲೆ ಷಾಜಹಾನನನ್ನೂ ಬಿಟ್ಟು ಔರಂಗಜೇಬನ ಕಡೆ ಸೇರಿ, ತನ್ನ ಶ್ರೀಮಂತಿಕೆಯನ್ನೂ ಕೀರ್ತಿಯನ್ನೂ ಹೆಚ್ಚಿಸಿಕೊಂಡಿದ್ದ ಮೀರ್ ಜುಮ್ಲಾ, ಸುಲ್ತಾನ್ ಸೂಜನ ಕಡೆಯ ದಳವಾಯಿ ದಂಡನಾಯಕರುಗಳಿಗೆ ಹಣ ಹಾಗೂ ಅಧಿಕಾರದ ಆಸೆಗಳನ್ನು ತೋರಿಸಿದ. ಅವು ಎಲ್ಲಿ ಸಿಕ್ಕಿದರೆ ಅಲ್ಲಿಗೆ ಹಾರುವ ಸ್ವಭಾವದ ಆ ಜನ ಷೂಜನನ್ನು ತ್ಯಜಿಸಿ ಔರಂಗಜೇಬನ ಕಡೆ ವಾಲಿದರು. ಬಹಿರಂಗವಾಗಿ ಯುದ್ಧ ಸಾಗಿದರೂ ಮನಸ್ಸಿಲ್ಲದವರು ಗೆಲ್ಲುವುದು ತಾನೆ ಹೇಗೆ ? ಷೂಜನಿಗೆ ಮೋಸವಾಯಿತು. ಇದನ್ನು ಅರಿತ ಆತ ತನ್ನ ಹೆಂಡತಿ ಮಕ್ಕಳೊಡನೆ ಪಲಾಯನಮಾಡಿದ. ಧಣಿಯನ್ನು ಅನುಸರಿಸುವುದನ್ನು ಬಿಟ್ಟು ಅವನ ಕಡೆಯವರು ಅವನು ಬಿಟ್ಟುಹೋದ ಭಂಡಾರ ಒಡವೆ ವಸ್ತುಗಳ ಲೂಟಿಗೆ ಕೈಹಾಕಿದರು. ಮೀರ್ ಜುಮ್ಲಾ ಇದಕ್ಕೆ ಸಂಪೂರ್ಣ ಅನುಮತಿಯನ್ನು ಕೊಟ್ಟ.

ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಓಡಿಹೋದ ಷೂಜಾ ದೋಣಿಗಳಲ್ಲಿ ಗಂಗಾ ನದಿಯನ್ನು ದಾಟಿ, ಅರಕಾನ್ ರಾಜ್ಯದಲ್ಲೆಲ್ಲೊ ಸೇರಿಕೊಂಡು ಪ್ರಾಣ ಉಳಿಸಿಕೊಂಡ.

ಹೆತ್ತ ತಂದೆಯನ್ನು ಬಂಧನದಲ್ಲಿಡಿಸಿದ ಮತ್ತು ಒಂದಿಗೆ ಹುಟ್ಟಿದ ಅಣ್ಣನನ್ನು ಕೊಲೆಮಾಡಿಸಿದ ಔರಂಗಜೇಬ ತನ್ನ ಹೆತ್ತ ಮಗನನ್ನು ನಂಬಿದ್ದು ಆಶ್ಚರ್ಯವೇ ಸರಿ ! ರಾಜಕಾರಣದಲ್ಲಿ ಬಹು ಹುಷಾರಿಯಾಗಿದ್ದ ತಂದೆಗೆ ತನ್ನ ಹಿರಿಯ ಮಗ ಮಹಮ್ಮದನಿಗೆ ದೊಡ್ಡ ಸೈನ್ಯವನ್ನು ವಹಿಸಿದ್ದು ತಪ್ಪೆಂದು ಭಾಸವಾಯಿತು. ಅಲ್ಲದೆ, ಹಿಂದಿಬ್ಬರು ರಾಜರುಗಳಿಗೆ ಮೋಸಮಾಡಿದ ಮೀರ್ ಜುಮ್ಲಾನ ಸಹಾಯವನ್ನು ಅವನಿಗೆ ಒದಗಿಸಿದ್ದು ಮತ್ತೂ ತಪ್ಪಾಗಿ ಕಂಡಿತು. ಆದರೆ ಇದನ್ನೆಲ್ಲಾ ತೋರಿಸಿಕೊಳ್ಳಲಿಲ್ಲ. ಉಪಾಯ

---

[1] ಈ ತಾರೀಖು ಸರಿಯಲ್ಲವೆಂದೂ, ಔರಂಗಜೇಬ ರಾಜನಾದುದು ೧೬೫೮ರ ಆಗಸ್ಟ್ ತಿಂಗಳಿನಲ್ಲಿ ಎಂದೂ ಗೊತ್ತಾಗುತ್ತದೆ.

ವಾಗಿ ಮಗನನ್ನು ಬಂಧಿಸುವ ಆಲೋಚನೆ ಮಾಡಿದ. ಮಗನೂ ಏನೋ ಒಂದು ತರಹ ಮಂಕುಕವಿದವನಂತೆ ವರ್ತಿಸುತ್ತಿದ್ದ. ಇದರ ಅರ್ಥವನ್ನು ಊಹಿಸಿದ ಔರಂಗಜೇಬ ಮಗನನ್ನು ಬಂಧಿಸಿ ತನ್ನ ಬಳಿಗೆ ಕಳುಹಿಸಬೇಕೆಂದು ಮೀರ್ ಜುಮ್ಲಾನಿಗೆ ಒಂದು ಪತ್ರ ಬರೆದು ಕಳುಹಿಸಿದ ಈ ಪತ್ರ ಮೀರ್ ಜುಮ್ಲಾನ ಕೈಗೆ ಹೋಗುವ ಬದಲು ಮಗ ಮಹಮ್ಮದನಿಗೆ ಹೋಯಿತು. ಓದಿನೋಡಿಕೊಂಡ ಮಗನಿಗೆ ಅಪ್ಪನ ಕುತಂತ್ರ ತಿಳಿಯಿತು. ತನ್ನ ಮುಂದಿನ ಗತಿ ಆಲೋಚಿಸಿಕೊಂಡವನು, ಹೆದರಿ ಅರಕಾನಿಗೆ ಓಡಿಹೋದ. ದೊಡ್ಡಪ್ಪನನ್ನು ಕೂಡಿಕೊಳ್ಳದೆ ಗತಿಯಿಲ್ಲವೆಂದು ತೀರ್ಮಾನಿಸಿಕೊಂಡು ಆತ ಅಲ್ಲಿಗೆ ಕದ್ದು ಓಡಿದ.

ಮಗನು ತಪ್ಪಿಸಿಕೊಂಡ ಸುದ್ದಿಯನ್ನು ತಿಳಿದ ಔರಂಗಜೇಬ ಮೀರ್ ಜುಮ್ಲಾನನ್ನು ಆಕ್ಷೇಪಿಸುವುದಕ್ಕೆ ಹೋಗದೆ, ಉಪಾಯದಿಂದ ಮಗನನ್ನು ಒಲಿಸಿ ತನ್ನ ಬಳಿಗೆ ಕಳುಹಿಸಬೇಕೆಂದು ಬರೆದ. ಆ ಕೆಲಸವನ್ನು ಮೀರ್ ಜುಮ್ಲಾ ಮಾಡಿದ. ಒಳ್ಳೆಯ ಮಾತಿಗೆ ಮರುಳಾದ ಮಗ ತಂದೆಯನ್ನು ಕಾಣಲು ಜಹಾನಾಬಾದಿಗೆ ಹೊರಟ. ಮೀರ್ ಜುಮ್ಲಾನು ಕಳುಹಿಸಿದ ರಕ್ಷಣಾ ಸಿಬ್ಬಂದಿಯೊಡನೆ ಜಹಾನಾಬಾದಿಗೆ ಬಂದ ಮಗನಿಗೆ ಅರಮನೆಯೊಳಕ್ಕೆ ಬರಲು ಔರಂಗಜೇಬ ಅವಕಾಶಕೊಡಲಿಲ್ಲ. ಅರಮನೆಯ ಹೊರಗೆ ಒಂದು ಮನೆಯಲ್ಲಿ ಇರಿಸಿದ. ತನಗೆ ಆರೋಗ್ಯ ಸರಿಯಿಲ್ಲವೆಂದು ತಂದೆ ಮಗನಿಗೆ ನೆಪ ಹೇಳಿದ. ವಾಸ್ತವವಾಗಿ ಮಗನು ತಾನು ಇದ್ದ ಮನೆಯಲ್ಲಿಯೇ ಬಂಧನಕ್ಕೊಳಗಾದ.

ಈಗ ದಾರಾಷಾನ ಮಗ ಸುಲ್ತಾನ್ ಸುಲೇಮಾನ್ ಷಕೋನ ಗತಿಯೇನಾಯಿತೆಂದು ನೋಡೋಣ. ರಾಜಾ ರೂಪನ ದ್ರೋಹಕ್ಕೊಳಗಾದ ಆತ ತಲೆತಪ್ಪಿಸಿಕೊಂಡು ಹೊರಟು ಶ್ರೀನಗರ ರಾಜ್ಯದಲ್ಲಿ ಅಲ್ಲಿಯ ರಾಜ ನಕ್ತಿರಾಣಿಯ (ರಾಜ ಪೃಥ್ವಿಸಿಂಗನ) ಆಶ್ರಯದಲ್ಲಿ ಇದ್ದ. ನಕ್ತಿರಾಣಿ ದೇವರ ಮೇಲೆ ಆಣೆಯಿಟ್ಟು ವಾಗ್ದಾನ ಮಾಡಿದ್ದ, ತಾನು ಷಕೋನನ್ನು ರಕ್ಷಣೆ ಮಾಡುತ್ತೇನೆ ಎಂದು. ಈ ವಾಗ್ದಾನದಿಂದ ಧೈರ್ಯ ತಾಳಿದ ಷಕೋ ಬೆಟ್ಟ ಗುಡ್ಡಗಳಲ್ಲಿ ಅಲೆಯುತ್ತಾ ತಲೆಮರೆಸಿಕೊಂಡಿರುವುದನ್ನು ಬಿಟ್ಟು ಸುಖ ಸಂತೋಷದಲ್ಲಿ ಕಾಲ ಕಳೆಯಲಾರಂಭಿಸಿದ.

ಷಕೋನನ್ನು ಹಿಡಿಯಲು ಔರಂಗಜೇಬ ತನ್ನ ಹತ್ತು ಸಹಸ್ರ ಸೈನ್ಯವನ್ನು ಶ್ರೀನಗರ ರಾಜ್ಯದ ಮೇಲೆ ಕಳುಹಿಸಿದ. ಆದರೆ ಆ ರಾಜ್ಯಕ್ಕೆ ಹೋಗುವ ದಾರಿ ಬಹು ಕಿರಿದಾದ್ದರಿಂದ ರಾಜನ ಕೇವಲ ಸಾವಿರ ಜನ ಸೈನಿಕರು ಔರಂಗಜೇಬನ ಭಾರಿ ಸೈನ್ಯವನ್ನು ಎದುರಿಸಿ ಹಿಂದಟ್ಟಿದರು. ಬಲವಂತವಾಗಿ ತನ್ನ ಕೆಲಸ ಸಾಧ್ಯವಿಲ್ಲವೆಂದು ಅರಿತ ಔರಂಗಜೇಬ ರಾಜನೊಡನೆ ಸಂಧಿಯ ಮಾತಾಡಿದ. ಆದರೆ ರಾಜ ತಾನು ಕೊಟ್ಟ ಭಾಷೆಗೆ ತಪ್ಪಲಾರೆನೆಂದು ಹೇಳಿಬಿಟ್ಟ. ಅಲ್ಲದೆ, ಅವನ ಜೋತಿಷ್ಕರು ಹೇಳಿದ್ದರಂತೆ, ಔರಂಗಜೇಬ ರಾಜ್ಯ ಕಳೆದುಕೊಳ್ಳುತ್ತಾನೆ ಮತ್ತು ಷಕೋ ರಾಜನಾಗುತ್ತಾನೆ—ಎಂದು.

ಔರಂಗಜೇಬ ಮತ್ತೊಂದು ಉಪಾಯ ಆಲೋಚಿಸಿದ. ತನ್ನ ಪ್ರಜೆಗಳು ಯಾರೂ ಶ್ರೀನಗರದ ರಾಜನ ಪ್ರಜೆಗಳೊಡನೆ ವ್ಯಾಪಾರ ಸಾಪಾರ ಮಾಡಕೂಡದೆಂದು ಅಪ್ಪಣೆ ಮಾಡಿದ. ಸುತ್ತ ಬೆಟ್ಟ ಗುಡ್ಡಗಳುಳ್ಳ ಶ್ರೀನಗರ ರಾಜ್ಯಕ್ಕೆ ಹೊರಗಡೆಯಿಂದ ಸಾಮಾನು ಸರಂಜಾಮುಗಳು ಬರಬೇಕು. ಜನರಿಗೆ ಯಾವಾಗ ಅವು ಸಿಕ್ಕದೆ ಹೋದುವೋ ಆಗ ಅವರು ಗೊಣಗಾಡಲಾರಂಭಿಸಿದರು. ಸುಲ್ತಾನ್ ಸುಲೇಮಾನ್ ಷಕೋನಿಗೆ ರಕ್ಷಣೆ ಕೊಟ್ಟದ್ದರಿಂದ ಇಷ್ಟೆಲ್ಲಾ ಜನಗಳಿಗೆ ತಾಪತ್ರಯ. ಈ ಮಧ್ಯೆ ಜ್ಯೋತಿಷ್ಕರು ಹೇಳಿದ್ದ ಭವಿಷ್ಯವೂ ಸುಳ್ಳಾಗುವಂತೆ ಕಾಣಲಾರಂಭಿಸಿತು. ಇದನ್ನೆಲ್ಲಾ ಅರಿತ ಔರಂಗಜೇಬ ಈ ಹಿಂದೆ ದಾರಾಷಾನಿಗೆ ಮೋಸಮಾಡಿದ್ದ ಜೆಸ್ವಂತ ಸಿಂಗನನ್ನು ಗುಪ್ತವಾಗಿ ರಾಜ ನಕ್ತ್ರರಾಣಿಯ ಬಳಿಗೆ ಕಳುಹಿಸಿದ. ಏನು ; ಮಾಡಿಯಾನು ಆ ರಾಜ ! ಕೊಟ್ಟ ಭಾಷೆಗೆ ತಪ್ಪುವುದೇ, ಇಲ್ಲ ರಾಜ್ಯದಲ್ಲಿ ಏಳಬಹುದಾದ ದಂಗೆಯನ್ನು ಎದುರಿಸುವುದೇ ? ಏನು ಮಾಡಬೇಕೆಂದು ತೋರದೆ ಬ್ರಾಹ್ಮಣರನ್ನು ಕೇಳಿದ. ತನ್ನ ಧರ್ಮ ಹಾಗೂ ಪ್ರಜೆಗಳನ್ನು ಕಾಪಾಡುವುದಕ್ಕಿಂತ ಅನ್ಯಧರ್ಮದವನನ್ನು ರಕ್ಷಿಸಲು ಹೋಗುವುದು ತಪ್ಪು ; ಹಾಗೆ ಮಾಡಿ ಔರಂಗಜೇಬನ ಆಕ್ರೋಶಕ್ಕೆ ಒಳಗಾಗುವುದು ಸರಿಯಲ್ಲ ಎಂದು ಆ ಬ್ರಾಹ್ಮಣರು ಹೇಳಿದರು. ಆದರೂ ನಕ್ತ್ರರಾಣಿಗೆ ತಾನೇ ನೇರವಾಗಿ ಷಕೋನನ್ನು ಔರಂಗಜೇಬನಿಗೆ ವಹಿಸುವುದು ಸರಿಕಾಣಲಿಲ್ಲ. ಬೇಕಾದರೆ ಆತನನ್ನು ಸೆರೆಹಿಡಿದುಕೊಳ್ಳಬಹುದೆಂದು ಜಸ್ವಂತ ಸಿಂಗನಿಗೆ ಹೇಳಿಕಳುಹಿಸಿದ. ಷಕೋಗೆ ಬೇಟೆಯ ಹುಚ್ಚು ; ಆಗ ಬಹು ಸುಲಭವಾಗಿ ಆತನನ್ನು ಹಿಡಿದುಕೊಳ್ಳಬಹುದು–ಎಂದು ತಿಳಿಸಿದ. ಇಷ್ಟು ಹೇಳಿದ್ದೇ ಸಾಕು ಜೆಸ್ವಂತ್ ಸಿಂಗನಿಗೆ. ತನ್ನ ಮಗನನ್ನು ಸೂಕ್ತ ಸಿಬ್ಬಂದಿಯೊಡನೆ ಕಳುಹಿಸಿ ಕಾಡಿನಲ್ಲಿ ಬೇಟೆಯಾಡುತ್ತಿದ್ದ ಷಕೋನನ್ನು ಬಂಧಿಸಿದ.

ಬಂಧಿಸಲ್ಪಟ್ಟ ಷಕೋನನ್ನು ಜಹಾನಾಬಾದಿಗೆ ತಂದು, ಔರಂಗಜೇಬನ ಮುಂದೆ ಹಾಜರ್ಪಡಿಸಿದರು. ತನ್ನ ಮುಂದಿನ ದಾರಿ ಸುಗಮವಾಗಿರಬೇಕೆಂದು ಆಲೋಚಿಸಿ ಔರಂಗಜೇಬ ಅವನನ್ನೂ ಮಗ ಸುಲ್ತಾನ್ ಮಹಮ್ಮದನನ್ನೂ ಗ್ವಾಲಿಯರ್ ಕೋಟೆಗೆ ಕಳುಹಿಸಿ, ಅಲ್ಲಿ ಅವರಿಬ್ಬರನ್ನೂ ಮುರಾದ್ ಭಕ್ಷನಿಗೆ ಸಂಗಾತಿಗಳನ್ನಾಗಿ ಮಾಡಿದ. ಇದು ಆದದ್ದು ೧೬೬೧ರ ಜನವರಿ ೩ನೇ ತಾರೀಖು.

ಇನ್ನು ಸುಲ್ತಾನ್ ಷೂಜನೊಬ್ಬನೇ ಔರಂಗಜೇಬನ ಹಾದಿಗೆ ಮುಳ್ಳಾಗಿ ಉಳಿದಿದ್ದಾನೆ. ಆ ಮುಳ್ಳು ತೆಗೆಯಬೇಕು. ಅದನ್ನು ತೆಗೆಯಲು ಅನುವಾದವನು ಅರಕಾನ್ ರಾಜ. ಅರಕಾನ್ ರಾಜನಿಂದ ತನಗೆ ಯಾವ ಸಹಾಯವೂ ದೊರೆಯದೆಂದು ಅರಿತ ಷೂಜಾ, ಮೆಕ್ಕಾ ಯಾತ್ರೆ ಮಾಡುವುದೆಂದೂ ಆಮೇಲೆ ಪರ್ಷಿಯಾ ರಾಜನ ಆಶ್ರಯ ಪಡೆಯುವುದೆಂದೂ ಆಲೋಚಿಸಿದ. ಅರಕಾನ್ ರಾಜನ ಬಳಿ ನದಿಯ ಮೇಲೆ ಮಾತ್ರ ಯಾನಮಾಡಬಲ್ಲ ಅಂದಚಂದದ ದೋಣಿಗಳಿದ್ದುವೇ ಹೊರತು, ಮಹಾಸಾಗರದಲ್ಲಿ ಯಾನಮಾಡಬಹುದಾದ ಹಡಗುಗಳು ಇರಲಿಲ್ಲ. ಪೆಗೂ ರಾಜನ ಬಳಿಯೂ ಅಂಥ

ನೌಕೆಗಳು ಇರಲಿಲ್ಲ. ಸರಿಯಾದ ಹಡಗುಗಳಿಲ್ಲದೆ ಮೆಕ್ಕಾಕ್ಕೆ ಹೋಗುವುದು ಸಾಧ್ಯ ವಿರಲಿಲ್ಲ. ಆದ್ದರಿಂದ ಆತ ಮೆಕ್ಕಾ ಯಾತ್ರೆ ಮಾಡುವ ಬದಲು ಅರಕಾನಿನಲ್ಲಿಯೇ ನಿಂತು, ರಾಜನ ಮಗಳನ್ನು ಮದುವೆಯಾದ ಒಂದು ಗಂಡುಮಗುವೂ ಆಯಿತು. ಗಂಡುಮಗು ಹುಟ್ಟಿದ್ದು ಮಾವ ಅಳಿಯಂದಿರಿಗೆ ಸಂತೋಷವನ್ನುಂಟುಮಾಡುವ ಬದಲು ಮನಸ್ತಾಪವನ್ನುಂಟುಮಾಡಿತು. ಮುಂದೆ ಈ ಮಗುವೇ ಪಟ್ಟಕ್ಕೆ ಬರುವುದೆಂದು ಆಗದವರು ರಾಜನ ತಲೆ ಕೆಡಿಸಿದರು.

ಅರಕಾನ್ ರಾಜ್ಯದಲ್ಲಿ ಕೆಲವು ಮಂದಿ ಮಹಮ್ಮದೀಯರಿದ್ದರು. ಈ ಮಹ ಮ್ಮದೀಯರೊಡನೆ ಕೂಡಿಕೊಂಡು ಸುಲ್ತಾನ್ ಷೂಜಾ ಮುಂದೆ ತನ್ನ ಸಿಂಹಾಸನವನ್ನೇ ಕಸಿದುಕೊಳ್ಳಲು ಸಾಧ್ಯ ಎಂದು ಅರಕಾನ್ ರಾಜ ಊಹಿಸಿದ. ಈ ಊಹೆ ನಿಜ ವಾಯಿತು. ಸುಲ್ತಾನ್ ಷೂಜನ ಬಳಿ ಆತನು ತಂದ ಭಂಡಾರ ಇನ್ನೂ ಇತ್ತು. ಆತ ಅದನ್ನು ಖರ್ಚುಮಾಡಿ ಮಹಮ್ಮದೀಯರನ್ನು ತನ್ನ ಕಡೆ ಮಾಡಿಕೊಂಡ ; ನಿಗದಿಯಾದ ದಿನ ಅರಮನೆಯನ್ನು ಪ್ರವೇಶಿಸಿ ರಾಜನಿಂದ ಹಿಡಿದು ಎಲ್ಲರನ್ನೂ ಕೊಂದು ತಾನೇ ರಾಜ ನೆಂದು ಕರೆದುಕೊಳ್ಳಬೇಕೆಂದು ಒಳಸಂಚು ನಡೆಸಿದ. ಆದರೆ ಈ ಒಳಸಂಚಿನ ಗುಟ್ಟು ಎರಡು ದಿನ ಮುಂಚೆಯೇ ರಟ್ಟಾಯಿತು. ಆಗ ಸುಲ್ತಾನ್ ಷೂಜಾ ದಾರಿಕಾಣದೆ ತನ್ನ ಮಗನ ಸಮೇತ ತಲೆ ತಪ್ಪಿಸಿಕೊಂಡು ಪೆಗೂ ರಾಜ್ಯಕ್ಕೆ ಓಡಿದ. ಆದರೆ ಹೋಗ ಬೇಕಾದ ದಾರಿ ಸುಲಭವಾಗಿರಲಿಲ್ಲ. ಬೆಟ್ಟ ಗುಡ್ಡ ಕಾಡು. ಅಲ್ಲದೆ ಹುಲಿ ಸಿಂಹಗಳ ಹಾವಳಿ. ಹಿಂದೆ ಅರಕಾನ್ ರಾಜನ ಕಡೆಯವರು ಹಿಮ್ಮೆಟ್ಟಿಸಿಕೊಂಡು ಬರುತ್ತಿದ್ದಾರೆ ! ಕೊನೆಗೆ ಸುಲ್ತಾನ್ ಷೂಜಾನನ್ನು ಬಿಟ್ಟು ಉಳಿದವರೆಲ್ಲ ಸಿಕ್ಕಿಬಿದ್ದರು. ಸಿಕ್ಕಿದ ವರಲ್ಲಿ ಷೂಜನ ಹೆಂಡತಿಯೂ, ಅವನ ಉಳಿದ ಹೆಣ್ಣು ಗಂಡು ಮಕ್ಕಳೂ ಇದ್ದರು. ಅವರಿದ್ದರೆ ತಾನೆ ತಾಪತ್ರಯ ಎಂದು ಅರಕಾನ್ ರಾಜ ಅವರೆಲ್ಲರನ್ನೂ ಮುಗಿಸಿದ.

ಆಮೇಲೆ ಸುಲ್ತಾನ್ ಷೂಜಾ ಏನಾದ ? ಯಾರಿಗೂ ಗೊತ್ತಿಲ್ಲ. ಒಬ್ಬೊಬ್ಬರು ಒಂದೊಂದು ಕಥೆ ಹೇಳುತ್ತಾರೆ. ಎಲ್ಲರೂ ಒಂದು ಮಾತು ಮಾತ್ರ ಖಚಿತವಾಗಿ ತಿಳಿಸುತ್ತಾರೆ. ಏನೆಂದರೆ, ಆತ ಶತ್ರುಗಳೊಡನೆ ಹೋರಾಡಿಯೋ ಅಥವಾ ಕಾಡು ಮೃಗಗಳಿಗೆ ಸಿಕ್ಕಿಯೋ ಸತ್ತಿರಬೇಕು ಎಂದು.

ದಾರಾಷಾನನ್ನು ಮುಗಿಸಿದ ಮೇಲೆ ಔರಂಗಜೇಬ ಸಿಂಹಾಸನವನ್ನೇರಿದನಷ್ಟೆ. ಅದಕ್ಕೆ ಮುಂಚೆ ನಡೆದ ಒಂದೆರಡು ಪ್ರಮುಖ ಸಂಗತಿಗಳನ್ನು ಹೇಳಬೇಕು. ಸಿಂಹಾಸನ ವನ್ನೇರುವ ರಾಜನು ತಕ್ಕ ವಸ್ತ್ರಾಭರಣಗಳನ್ನು ಧರಿಸಬೇಕಾದ್ದರಿಂದ ಅವನ್ನು ಕಳುಹಿಸಿ ಕೊಡುವಂತೆ ಆಗ್ರಾ ಕೋಟೆಯಲ್ಲಿ ಬಂಧನದಲ್ಲಿದ್ದ ತಂದೆ ಷಾಜಹಾನನಿಗೆ ಔರಂಗಜೇಬ ಹೇಳಿಕಳುಹಿಸಿದ. ಇದು ತಂದೆಗೆ ಬೇಜಾರಾಗುವ ಸಂಗತಿಯೆಂದು ತಿಳಿದಿದ್ದರೂ ಹಾಗೆ ಮಾಡಿದ. ತಂದೆಗೆ ನಿಜವಾಗಿಯೂ ಬೇಜಾರಾಯಿತು. ಬೇಜಾರಷ್ಟೇ ಅಲ್ಲ, ಅವಮಾನ ಮಾಡಿದಂತೆಯೂ ಆಯಿತು. ಮಗನ ಮಾತು ಕೇಳದೆ ತಂದೆ ಹುಚ್ಚನಂತೆ ವರ್ತಿಸ

ಲಾರಂಭಿಸಿದ. ತನ್ನ ಬಳಿ ಇದ್ದ ಮುತ್ತುರತ್ನಗಳನ್ನೆಲ್ಲಾ ಕುಟ್ಟಿ ಪುಡಿಮಾಡಿಬಿಡ ಬೇಕೆಂದು ಆತ ತನ್ನ ಉನ್ಮಾದದಲ್ಲಿ ಹಾರೆ ಕುಟ್ಟಣಗಳಿಗೆ ಹೇಳಿಕಳುಹಿಸಿದ. ಹೇಗಾದರೂ ಅವು ಔರಂಗಜೇಬನ ಕೈಗೆ ಸಿಕ್ಕಬಾರದೆಂದು ಅವನ ಹಠ. ಆದರೆ ಆತನ ಹಿರಿಯ ಮಗಳು ಬೇಗಂಸಾಹೇಬಳು ಅವನ ಕಾಲಿಗೆ ಬಿದ್ದು ಕೇಳಿಕೊಂಡಳು, ಹಾಗೆ ಮಾಡ ಬೇಡವೆಂದು. ಆ ಮುತ್ತು ರತ್ನಗಳನ್ನು ಪುಡಿ ಮಾಡಿದರೆ ಬಂದ ಭಾಗ್ಯವೇನು ? ತನಗಾದರೂ ಅವು ಸಿಕ್ಕಲಿ ಎಂಬುದೇ ಅವಳ ಮನಸ್ಸಿನಲ್ಲಿದ್ದುದು. ತಂದೆಯ ಬಳಿ ಇದ್ದ ಆಭರಣಗಳೆಲ್ಲ ಔರಂಗಜೇಬನಿಗೆ ದೊರೆತರೂ ಸಿಂಹಾಸನವನ್ನೇರಿದಾಗ ಅವನ ರುಮಾಲಿನಲ್ಲಿ ಇದ್ದುದು ಒಂದೇ ಒಂದು ಆಭರಣ, ಅಷ್ಟೆ. ಬೇಕೆಂದರೆ ಬೇರೆ ಆಭರಣಗಳನ್ನು ಧರಿಸುವ ಅವಕಾಶವಿತ್ತು. ಆದರೆ ಅವನು ಹಾಗೆ ಆ ಆಭರಣಗಳನ್ನು ಧರಿಸಲಿಲ್ಲ.

ಸಿಂಹಾಸನವನ್ನೇರಿದ ದಿನದಿಂದ ಔರಂಗಜೇಬ ಮದ್ಯ ಮಾಂಸಗಳನ್ನು ತೊರೆದು ಬಿಟ್ಟ. ಅನ್ನ ತರಕಾರಿಗಳೇ ಅವನಿಗೆ ಸಾಕಾಯಿತು. ತಾನು ಮಾಡಿದ ಪಾಪ ಕೃತ್ಯಗಳಿಗೆ ಆತ ವಿಧಿಸಿಕೊಂಡ ಶಿಕ್ಷೆ ಇದು. ಆದರೂ ಬಲಾಢ್ಯನಾಗಿ ಆಳಬೇಕೆಂಬ ಆಸೆ ಮಾತ್ರ ಹೋಗಲಿಲ್ಲ. ಸಾಯುವವರೆಗೂ ಇನ್ನೊಬ್ಬರಿಗೆ ಸಿಂಹಾಸನವನ್ನು ಬಿಟ್ಟುಕೊಡ ಬಾರದೆಂಬ ದೃಢ ನಿರ್ಧಾರ ಆತನದು.

ಔರಂಗಜೇಬ ಮೊಗಲ್ ಸಿಂಹಾಸನವನ್ನೇರಿದ ಸುದ್ದಿ ಏಷ್ಯಾದಲ್ಲೆಲ್ಲಾ ಹಬ್ಬಿತು. ನಾನಾ ಕಡೆಗಳಿಂದ ರಾಯಭಾರಿಗಳು ಜಹಾನಾಬಾದಿಗೆ ಬರಲಾರಂಭಿಸಿದರು. ಉಸ್ಬೆಕ್ ಟಾರ್ಟರರು, ಮೆಕ್ಕಾದ ಷರೀಫ್, ಓಮಾನಿನ ದೊರೆ, ಬಸ್ಸೋರದ ರಾಜ, ಇಥಿಯೋಪಿಯಾದ ಚಕ್ರವರ್ತಿ—ಇವರೆಲ್ಲ ತಮ್ಮ ರಾಯಭಾರಿಗಳನ್ನು ಕಳುಹಿಸಿ, ಮೊಗಲ್ ಚಕ್ರವರ್ತಿಯ ಸ್ನೇಹ ಸಂಬಂಧಗಳನ್ನು ಕೋರಿದರು. ಡಚ್ಚರು ಅವರ ಸೂರತ್ ಫ್ಯಾಕ್ಟರಿಯಲ್ಲಿದ್ದ ಅಡ್ರಿಕನ್ ಎಂಬುವನನ್ನು ಕಳುಹಿಸಿದರು. ಇವರಿಗೆಲ್ಲಾ ಅದ್ದೂರಿಯ ಸ್ವಾಗತ. ಯೂರೋಪಿನ ರಾಯಭಾರಿಗಳೆಂದರೆ ಇಂಡಿಯಾದ ರಾಜರುಗಳಿಗೆ ಬಹು ಹೆಮ್ಮೆ. ಅವರು ಬಂದರೆ ಅವರಿಗೆ ಬಹಳ ದಿನಗಳ ಕಾಲ ಸತ್ಕಾರ ನಡೆಯುತ್ತದೆ. ಬಂದ ರಾಯಭಾರಿಗಳೆಲ್ಲ ಅವರವರ ದೇಶದ ವಿಶೇಷ ವಸ್ತುಗಳನ್ನು ರಾಜನಿಗೆ ಒಪ್ಪಿಸಿ, ತಮ್ಮ ಮರ್ಯಾದೆ ಸೂಚಿಸಿದರು. ಔರಂಗಜೇಬನೂ ಅವರಿಗೆ ಸೂಕ್ತವಾದ ಮರ್ಯಾದೆ ಮಾಡಿ ಕಳುಹಿಸಿ ಕೊಟ್ಟ.

ಷಾಜಹಾನ ಸಾಯುವುದಕ್ಕೆ ಕೆಲವು ತಿಂಗಳುಗಳ ಮುಂಚೆ ಔರಂಗಜೇಬ ಪರ್ಷಿಯಾ ರಾಜನ ಬಳಿಗೆ ಒಬ್ಬ ರಾಯಭಾರಿಯನ್ನು ಕಳುಹಿಸಿಕೊಟ್ಟ. ಈ ರಾಯಭಾರಿಗೆ ತಿಂಗಳುಗಟ್ಟಲೆ ವೈಭವದ ಸತ್ಕಾರ ನಡೆಯಿತು. ಒಂದು ದಿನ ಪರ್ಷಿಯಾ ರಾಜ ರಾಯಭಾರಿಯನ್ನು ಕೇಳಿದ, ಆತ ಸುನ್ನಿಯೇ ಹೇಗೆ ಎಂದು. ತಾನು ಸುನ್ನಿ ಎಂದು ಹೇಳಿಕೊಳ್ಳುವಾಗ ರಾಯಭಾರಿ ತಾನು ಹಿಂದೆ ಷಾಜಹಾನನ ಸೇವೆಯಲ್ಲಿದ್ದುದನ್ನೂ ಅವನಿಂದ ಪಡೆದ ಸಂಪತ್ತನ್ನೂ ಹೇಳಿಕೊಂಡ. ಹಾಗೆ ಷಾಜಹಾನನಿಂದ ಉಪಕಾರ

ಹೊಂದಿದ್ದರೂ ಅವನನ್ನು ಬಂಧನದಲ್ಲಿಟ್ಟ ಪಿತೃದ್ರೋಹಿಯಾದ ಈಗ ಔರಂಗಜೇಬನ ಸೇವೆಯಲ್ಲಿ ಮತ್ತೆ ತೊಡಗಿದ ಈ ರಾಯಭಾರಿ ಹೀನಮನುಜನೇ ಇರಬೇಕೆಂದುಕೊಂಡ ಪರ್ಷಿಯಾ ರಾಜ, "ಸನ್ನಿಯಾಗಿ ಇಂಥ ನೀಚ ಕೆಲಸ ಮಾಡಿದ್ದಿ. ಗಡ್ಡ ಬಿಡುವ ಯೋಗ್ಯತೆ ನಿನಗೆ ಇಲ್ಲ" ಎಂದು ತುಚ್ಛವಾಗಿ ಬೈದು, ಗಡ್ಡವನ್ನು ಬೋಳಿಸಿಹಾಕುವಂತೆ ಅಪ್ಪಣೆಮಾಡಿದ. ಇದರಂಥ ಅಪಮಾನ ಬೇರೊಂದಿಲ್ಲ. ಈ ಅಪಮಾನವನ್ನು ಸಹಿಸಿಕೊಂಡ ರಾಯಭಾರಿ, ರಾಜನು ಕೊಟ್ಟ ನೂರೈವತ್ತು ಕುದುರೆಗಳು ಮತ್ತು ಬೆಳ್ಳಿ ಭಂಗಾರಗಳ ಸಮೇತ ಔರಂಗಜೇಬನ ಬಳಿಗೆ ಹಿಂದಿರುಗಿದ. ಪರ್ಷಿಯಾ ರಾಜ ಕಳುಹಿಸಿ ಕೊಟ್ಟ ಬಹುಮಾನ ಎರಡು ದಶಲಕ್ಷ (ರೂಪಾಯಿ ?)ಗಳಷ್ಟು ಇದ್ದು, ಔರಂಗಜೇಬನು ಕಳುಹಿಸಿದ್ದಕ್ಕಿಂತ ಬಹು ಹೆಚ್ಚಾಗಿತ್ತು.

ರಾಯಭಾರಿ ಬಓಬಕ್ ಖಾನ ಆಗ್ರಾಕ್ಕೆ ಹಿಂದಿರುಗಿಬಂದಾಗ ಔರಂಗಜೇಬ ಅಲ್ಲಿದ್ದ. ಆತ ತನ್ನ ರಾಯಭಾರಿಗಾದ ಅವಮಾನವನ್ನು ಕೇಳಿ ಸಿಟ್ಟಿಗೆದ್ದ. ಪರ್ಷಿಯಾದ ರಾಜ ಕಳುಹಿಸಿದ ನೂರೈವತ್ತು ಕುದುರೆಗಳನ್ನು ಊರ ಮಧ್ಯೆ ನಿಲ್ಲಿಸಿ "ಅಲಿಯ ಅನುಯಾಯಿಗಳು 'ನಗಿ'ಗಳಾಗದೆ, ಅಂದರೆ ಹೊಲಸುಮಾಡಿಕೊಳ್ಳದೆ, ಆ ಕುದುರೆಗಳನ್ನು ಏರುವಂತಿಲ್ಲ" ಎಂದು ಡಂಗುರ ಹೊಡೆಸಿದ. ಪಾಯಿಖಾನೆಮಾಡಿದವರನ್ನು ಕುದುರೆಯ ಮೇಲೆ ಹತ್ತಿಸಿ ಅವನ್ನು ಹೊಲಸು ಮಾಡಿಸಿದ. ಹೀಗೆ ಹೊಲಸು ಮಾಡಿಸಿದ ಕುದುರೆಗಳನ್ನು ಬಹಿರಂಗವಾಗಿ ಕಡಿಸಿಹಾಕಿಸಿದ. ತನಗೆ ಪರ್ಷಿಯಾ ರಾಜ ಕಳುಹಿಸಿದ್ದ ಬಹುಮಾನಗಳನ್ನೆಲ್ಲ ನಡುಬೀದಿಯಲ್ಲಿ ಹಾಕಿ ಸುಡಿಸಿದ. ಪರ್ಷಿಯಾ ರಾಜನನ್ನು ಹೀನಾಯವಾಗಿ ಬೈದು ಉಗುಳಿದ.

ಷಾಜಹಾನ ಕೊನೆಗೆ ಆಗ್ರಾ ಕೋಟೆಯಲ್ಲಿ ೧೬೬೭ರ ಕೊನೆಯಲ್ಲಿ ಕಾಲವಾದ. ಇನ್ನು ಔರಂಗಜೇಬನಿಗೆ ಯಾವ ಅಡ್ಡಿ ಆತಂಕವೂ ಇಲ್ಲದಂತಾಯಿತು. ಈಗ ರಾಜ್ಯ ಭಾರದ ಸುಖವನ್ನು ಅನುಭವಿಸಲಾರಂಭಿಸಿದ. ಸಹೋದರಿ ಬೇಗಮಳನ್ನು ಪ್ರೀತಿ ವಿಶ್ವಾಸದಿಂದ ಕಂಡು, ಆಕೆಯನ್ನು 'ರಾಜಕುಮಾರಿ ರಾಣಿ' (Princess Queen) ಎಂದು ಕರೆದ. ಬೇಗಮಳು ಬಹಳ ಬುದ್ಧಿವಂತಳು. ಚಕ್ರಾಧಿಪತ್ಯವನ್ನೇ ಆಳುವಷ್ಟು ಬುದ್ಧಿಶಕ್ತಿ. ಯುದ್ಧ ಆರಂಭವಾಗುವ ಮುನ್ನ ಅವಳ ತಂದೆ ಮತ್ತು ಸಹೋದರರು ಅವಳ ಮಾತು ಕೇಳಿದ್ದರೆ ಔರಂಗಜೇಬ ರಾಜ್ಯವನ್ನಾಳುತ್ತಲೇ ಇರಲಿಲ್ಲ; ಮೊಗಲ್ ರಾಜ್ಯದ ಕಥೆ ಬೇರೊಂದಾಗುತ್ತಿತ್ತು.

ಔರಂಗಜೇಬನ ಇನ್ನೊಬ್ಬ ಸಹೋದರಿ ರೋಷನಾರ ಬೇಗಂ ಮೊದಲಿನಿಂದಲೂ ಅಣ್ಣನ ಕಡೆಯೇ ಇದ್ದಳಷ್ಟೆ. ಅಣ್ಣ ಯುದ್ಧ ಆರಂಭಿಸಿದ್ದಾನೆಂದು ಸುದ್ದಿ ಕೇಳಿದ ಕೂಡಲೇ ಆಕೆ ತನ್ನ ಆಭರಣಗಳನ್ನೆಲ್ಲಾ ಅವನಿಗೆ ಕಳುಹಿಸಿಕೊಟ್ಟಿದ್ದಳು. ಅವಳ ಉಪಕಾರವನ್ನು ಮೆಚ್ಚಿದ ಅಣ್ಣ ತಾನು ರಾಜನಾದರೆ ತನ್ನ ತಂಗಿಯನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವಳಿಗೆ ಷಾ ಬೇಗಮಳೆಂಬ ಬಿರುದುಕೊಡುವುದಾಗಿ ಹೇಳಿದ್ದ. ಈಗ

ಆ ಮಾತಿನಂತೆ ನಡದುಕೊಂಡ. ಇಬ್ಬರಿಗೂ ತುಂಬಾ ಪರಸ್ಪರ ಪ್ರೀತಿ ವಿಶ್ವಾಸ. ಆದರೆ ಈಚೆಗೆ ನಾನು ಜಹಾನಾಬಾದಿನಲ್ಲಿದ್ದಾಗ ಗೊತ್ತಾಯಿತು, ಅವರಿಬ್ಬರಿಗೆ ಅಷ್ಟಕ್ಕಷ್ಟೇ ಎಂದು. ಇದಕ್ಕೆ ಕಾರಣವೇನು ಎಂದು ಗೊತ್ತಾಯಿತು. ರೋಷನಾರಳು ತನ್ನ ಅಂತಃ ಪುರಕ್ಕೆ ಒಬ್ಬ ಯುವಕನನ್ನು ಕರೆಸಿಕೊಂಡು ಗುಪ್ತಸಂಬಂಧ ಬೆಳೆಸಿಬಿಟ್ಟಳು. ಹದಿನೈದು ಇಪ್ಪತ್ತು ದಿನಗಳ ಅನಂತರ ಅವನು ಬೇಡವಾಯಿತು. ಅವನನ್ನು ಹೊರಗೆ ಕಳುಹಿಸುವ ಆಲೋಚನೆ ಮಾಡಿದಾಗ ಈ ವಿಷಯ ಔರಂಗಜೇಬನ ಕಿವಿಗೂ ಮುಟ್ಟಿತು. ಅಣ್ಣನಿಗೆ ಸಿಟ್ಟುಬರದಂತೆ ಮಾಡಲು ರೋಷನಾರ ತಾನು ಕರೆಸಿಕೊಂಡ ಯುವಕನ ಮೇಲೆ ಅಪಾದನೆ ಹೊರಿಸಿದಳು. ಅವನು ತನ್ನ ಅಂತಃಪುರವನ್ನು ಕಳ್ಳತನದಲ್ಲಿ ಪ್ರವೇಶಿಸಿ ಕದಿಯಲು ಬಂದಿದ್ದನೆಂದು ಹೇಳಿದಳು. ಇಂಥಾದ್ದು ಆಗುವುದಕ್ಕೆ ಅವಕಾಶಕೊಟ್ಟ ಕಾವಲುಗಾರರಾದ ಖೋಜಾಗಳನ್ನು ಶಿಕ್ಷೆಮಾಡಬೇಕೆಂದು ಹೇಳಿದಳು. ಇದನ್ನೆಲ್ಲಾ ಕೇಳಿದ ಔರಂಗಜೇಬ ತನ್ನ ಸಿಬ್ಬಂದಿಯೊಡನೆ ಅವಳ ಕೋಣೆಗೆ ಧಾವಿಸಿದ. ಆ ಯುವಕ ಹೆದರಿ ದಿಕ್ಕೆಟ್ಟುಬಿಟ್ಟ. ಕಿಟಕಿಯಿಂದ ಕೆಳಕ್ಕೆ ಹಾರಿದ. ಕೆಳಗೆ ಹರಿಯುವ ನದಿ. ಜನ ಮುತ್ತಿಕೊಂಡರು. ಅವನನ್ನು ಜೀವಸಹಿತ ಹಿಡಿದು ಪ್ರಧಾನ ಖಾಜಿಯ ಬಳಿಗೆ ಕರೆದು ಕೊಂಡು ಹೋಗುವಂತೆ ರಾಜನ ಅಪ್ಪಣೆಯಾಯಿತು. ಆಮೇಲೆ ಏನಾಯಿತೋ ಗೊತ್ತಿಲ್ಲ. ಇಂಥ ವಿಚಿತ್ರ ಪ್ರಸಂಗಗಳು ಅರಮನೆಯ ಅಂತಃಪುರದಲ್ಲಿ ನಡೆಯುವುದು ಕಷ್ಟವೇನಲ್ಲ ಬಿಡಿ.

ಈ ಹಿಂದೆಯೇ ಹೇಳಿದಂತೆ ರಾಜನ ಬಳಿ ನನಗಿದ್ದ ಕೆಲಸಕಾರ್ಯಗಳನ್ನೆಲ್ಲಾ ಮುಗಿಸಿಕೊಂಡು, ಹೊರಡುವ ಉದ್ದೇಶದಿಂದ ಅವನಿಗೆ ಹೇಳಿಬರಲು ೧೬೬೫ ನೇ ನವೆಂಬರ್ ೧ನೇ ತಾರೀಖು ಹೋದೆ. ತನ್ನ ಹುಟ್ಟಿದ ಹಬ್ಬ ನೋಡದೆ ಹೋಗಬೇಡ ವೆಂದು ರಾಜ ಹೇಳಿದ. ಹಬ್ಬದ ಅನಂತರ ತನ್ನ ಬಳಿ ಇರುವ ಒಡವೆ–ವಸ್ತುಗಳನ್ನು ತೋರಿಸುವುದಾಗಿಯೂ ತಿಳಿಸಿದ್ದ. ನಾನು ಈ ಆಹ್ವಾನವನ್ನು ಒಲ್ಲೆನೆನ್ನುವುದು ಸರಿಯಲ್ಲ ವೆಂದು ಭಾವಿಸಿ ನನ್ನ ಪ್ರಯಾಣವನ್ನು ಮುಂದಕ್ಕೆಹಾಕಿದೆ.

ಹುಟ್ಟಿದ ಹಬ್ಬ ನವೆಂಬರ್ ೪ನೇ ತಾರೀಖು ಆರಂಭವಾಗಿ ಐದು ದಿವಸ ನಡೆಯಿತು. ರಾಜನ ಹುಟ್ಟಿದಹಬ್ಬದ ದಿನ ಅವನನ್ನು ತೂಕಮಾಡುತ್ತಾರೆ. ಹಿಂದಿನ ವರ್ಷಕ್ಕಿಂತ ಈ ವರ್ಷ ತೂಕ ಹೆಚ್ಚಿದರೆ ಬಹಳ ಸಂತೋಷಪಡುತ್ತಾರೆ. ತುಲಾಭಾರದ ನಂತರ ರಾಜ ತನ್ನ ಅತ್ಯಂತ ಬೆಲೆಯಾದ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಾನೆ. ಆಗ ರಾಜ್ಯದ ಶ್ರೀಮಂತ ಸರದಾರರೆಲ್ಲ ಮುಜರೆ ಒಪ್ಪಿಸಿ ನರುಜ ಸಲ್ಲಿಸುತ್ತಾರೆ. ಅಂತಃಪುರದ ಸ್ತ್ರೀಯರಲ್ಲಿ ಕೆಲವರು ನಜರು ಕಳಿಸಿಕೊಡುತ್ತಾರೆ ಅಲ್ಲದೆ, ನಾನಾ ಪ್ರಾಂತ್ಯದ ಸುಬೇದಾ ರರು ಮತ್ತು ಕೊತ್ವಾಲರೂ ಹೆಸರಾಂತ ಶ್ರೀಮಂತಸರದಾರುಗಳೂ ತಮ್ಮ ತಮ್ಮ ನಜರು ಗಳನ್ನು ರಾಜನಿಗೆ ಒಪ್ಪಿಸುತ್ತಾರೆ. ವಜ್ರವೈಢೂರ್ಯಗಳು ಮುತ್ತುರತ್ನಗಳು ಬೆಳ್ಳಿ ಭಂಗಾರಗಳು, ಬೆಲೆಯಾದ ರತ್ನಗಂಬಳಿಗಳು, ಚಿನ್ನಬೆಳ್ಳಿಯ ಜರತಾರಿ ವಸ್ತುಗಳು, ಆನೆ

ಒಂಟೆಗಳು–ಇವೆಲ್ಲವೂ ರಾಜನಿಗೆ ಒಪ್ಪಿಸಲ್ಪಡುತ್ತವೆ. ಆ ಒಂದು ದಿನ ಒಪ್ಪಿಸುವ ಬಹುಮಾನಗಳ ಬೆಲೆ ಮೂರು ಕೋಟಿ ಲೀವ್ರ್‌ಗಳಷ್ಟು![1]

ಮೊಗಲ್ ಚಕ್ರವರ್ತಿಯ ಬಳಿ ಭವ್ಯವಾದ ಏಳು ಸಿಂಹಾಸನಗಳಿವೆ. ಒಂದನ್ನು ಸಂಪೂರ್ಣವಾಗಿ ವಜ್ರಗಳನ್ನು ಬಿಗಿದು ಅಲಂಕರಿಸಿದ್ದಾರೆ. ಉಳಿದವುಗಳನ್ನು ಮುತ್ತು ಮಾಣಿಕ್ಯಗಳಿಂದಲೂ, ಪಚ್ಚೆಗಳಿಂದಲೂ ಅಲಂಕರಿಸಿದ್ದಾರೆ. ಮುಖ್ಯ ಸಿಂಹಾಸನವನ್ನು ಅರಮನೆಯ ಆಸ್ಥಾನದ ಹಜಾರದಲ್ಲಿ ಇರಿಸಲಾಗಿದೆ. ಅದು ನಮ್ಮ ಕಡೆಯ ಬಿಡಾರದ ಮಂಚದ ಆಕಾರಕ್ಕೂ ಅಷ್ಟೇ ಗಾತ್ರಕ್ಕೂ ಇದೆ ; ಅಂದರೆ ಆರು ಅಡಿ ಉದ್ದ, ಮೂರಡಿ ಅಗಲ. ಕಾಲುಗಳು ಮಜಬೂತಾದದ್ದು, ಸುಮಾರು ಎರಡಡಿ ಎತ್ತರವಾಗಿವೆ. ಇದರ ಮೇಲೆ ಚಪ್ಪರ ಮೇಲ್ಕಟ್ಟುಗಳಿವೆ. ಚಪ್ಪರ ಮೇಲ್ಕಟ್ಟುಗಳನ್ನು ಮುತ್ತು ರತ್ನಗಳಿಂದ ಅಲಂಕಾರಮಾಡಿದ್ದಾರೆ. ಚಚ್ಚೌಕದ ಆಕಾರಕ್ಕಿರುವ ಚಪ್ಪರದ ಮೇಲೆ ಪುಕ್ಕವನ್ನೆತ್ತಿ ಕೊಂಡಿರುವ ನವಿಲಿನ ವಿಗ್ರಹವಿದೆ. ಈ ನವಿಲಿನ ಪುಕ್ಕವನ್ನು ನೀಲಮಣಿಗಳಿಂದಲೂ, ದೇಹವನ್ನು ಚಿನ್ನದಲ್ಲಿ ಹದಿದ ವಜ್ರಗಳಿಂದಲೂ ಮಾಡಿದ್ದಾರೆ. ಕೊರಳಿನಲ್ಲಿ ದೊಡ್ಡ ಮಾಣಿಕ್ಯವೊಂದು ನೇತಾಡುತ್ತದೆ. ನನ್ನ ಅಭಿಪ್ರಾಯದಲ್ಲಿ ಈ ಭವ್ಯವಾದ ಸಿಂಹಾಸನ ದಲ್ಲಿ ಬೆಲೆಯಾದುದೆಂದರೆ ಚಪ್ಪರ ಮೇಲ್ಕಟ್ಟನ್ನು ಹೊತ್ತಿರುವ ಹನ್ನೆರಡು ಕಂಬಗಳ ಸುತ್ತ ಬಿಗಿದಿರುವ ಮುತ್ತಿನ ಸರಗಳು. ಈ ಮುತ್ತುಗಳು ಒಂದೊಂದೂ ಆರರಿಂದ ಹತ್ತು ಕ್ಯಾರಟ್‌ಗಳಷ್ಟು ತೂಕ ಇವೆ ; ಅಲ್ಲದೆ, ಬಹು ಪ್ರಕಾಶಮಾನವಾಗಿಯೂ ಇವೆ.

ರಾಜನ ಭಂಡಾರದ ಲೆಕ್ಕಪತ್ರಗಳನ್ನು ಇಟ್ಟಿರುವವರಿಂದ ತಿಳಿಯಿತು, ಈ ಸಿಂಹಾಸನವನ್ನು ತಯಾರಿಸುವುದಕ್ಕೆ ನೂರೇಳು ಸಾವಿರ ಲಕ್ಷ ರೂಪಾಯಿಗಳು ಆಯಿತು ಎಂದು[2].

ರಾಜನ ಸಿಂಹಾಸನವಿರುವ ಹಜಾರದಲ್ಲಿ ಬಲಗಡೆ ಒಂದು ವಿಶೇಷ ಡೇರೆಯನ್ನು ಹಾಕಿದ್ದಾರೆ. ಇಲ್ಲಿ ಊರಿನ ಮುಖ್ಯ ನರ್ತಕಿಯರು ಇರುತ್ತಾರೆ. ಇವರು ಬೇಕೆಂದಾಗ ರಾಜನು ಸಿಂಹಾಸನದಲ್ಲಿ ಕುಳಿತಿರುವಾಗ ಹಾಡಿ ಕುಣಿಯುತ್ತಾರೆ. ಅಲ್ಲದೆ ರಾಜನು ಸಿಂಹಾಸನದ ಮೇಲೆ ಕುಳಿತಿರುವಾಗ ಕುದುರೆಗಳ ನಜರು ಒಪ್ಪಿಸುತ್ತಾರೆ. ಈ ಕುದುರೆ

---

[1]ಮೂರು ಕೋಟಿ ಲೀವ್ರ್‌ಗಳೆಂದರೆ ಆಗಿನ ಬೆಲೆ, ಪೌಂಡುಗಳಲ್ಲಿ ೨೨ ೧/೨ ಲಕ್ಷಗಳು.

[2]ಮಯೂರ ಸಿಂಹಾಸನ : ಈ ಸಿಂಹಾಸನದ ವಿವರಣೆಯಲ್ಲಿ ಟಾವರ್‌ನ್ಯೇ ತಪ್ಪಿದ್ದಾನೆಂದು ಹೇಳಲಾಗಿದೆ. ಈ ಅಂಕಿ ೧೦೭,೦೦೦,೦೦೦ ಅಂದರೆ ೧೦೭ ಲಕ್ಷ ಇರಬೇಕಂತೆ. ಬರ್‌ನ್ಯೇ ಪ್ರಕಾರ ಈ ಸಿಂಹಾಸನದ ಬೆಲೆ ನಾಲ್ಕು ಕೋಟಿ ಅಂದರೆ ೪೦೦ ಲಕ್ಷ ರೂಪಾಯಿಗಳು. ಈಚೆಗೆ ಪರ್ಷಿಯಾದ ರಾಜನ ಅರಮನೆಯಲ್ಲಿರುವ ಈ ಸಿಂಹಾಸನದ ಬೆಲೆಯು ಈಗಿರುವ ಸ್ಥಿತಿಯಲ್ಲಿ ೧೫,೦೦೦,೦೦೦ ಡಾಲರುಗಳು, ಅಥವಾ ೨,೬೦೦,೦೦೦ ಪೌಂಡುಗಳು ಎಂದು ಅಂದಾಜು. ಈ ಅಂದಾಜು ಆದದ್ದು ೧೮೮೮ಕ್ಕೆ ಮುಂಚೆ.

ಗಳ ಕುತ್ತಿಗೆಗಳನ್ನು ಮುತ್ತು ರತ್ನಗಳಿಂದಲೂ, ನೆತ್ತಿಯನ್ನು ಚಂದದ ಗರಿಗಳಿಂದಲೂ ಅಲಂಕಾರಮಾಡಿರುತ್ತಾರೆ. ಹೀಗೆ ಅಲಂಕಾರಮಾಡಿದ ಮೂವತ್ತು ಕುದುರೆಗಳನ್ನು ಹದಿನೈದು ಹದಿನೈದರ ಸಾಲಿನಲ್ಲಿ ಒಂದೊಂದು ಕುದುರೆಗೆ ಇಬ್ಬರಂತೆ ರಾಜನ ಮುಂದೆ ಹಿಡಿದುಕೊಂಡು ಬರುತ್ತಾರೆ. ರಾಜನು ಸಿಂಹಾಸನವನ್ನೇರಿದ ಅರ್ಧ ಅಥವಾ ಒಂದು ಗಂಟೆಯ ಮೇಲೆ ಬಹು ಭಾರಿಯಾದ ಏಳು ಆನೆಗಳು ಬರುತ್ತವೆ. ಬಹು ಚೆನ್ನಾಗಿ ಅಲಂಕಾರಮಾಡಿರುವ ಈ ಆನೆಗಳಲ್ಲಿ ಒಂದರ ಮೇಲೆ ರಾಜನು ಕುಳಿತುಕೊಳ್ಳುವ ಅಂಬಾರಿ ಇರುತ್ತದೆ. ಒಂದಾದ ಮೇಲೆ ಒಂದರಂತೆ ಆನೆಗಳನ್ನು ಸಿಂಹಾಸನದ ಮುಂದೆ ತಂದಾಗ ಅವು ಸೊಂಡಿಲನ್ನು ನೆಲಕ್ಕೆ ಮುಟ್ಟಿಸಿ ಮೂರು ಸಲ ಮೇಲೆತ್ತಿ ವಂದನೆ ಸಲ್ಲಿಸುತ್ತವೆ. ಇವುಗಳಲ್ಲಿ ರಾಜನಿಗೆ ಬಹು ಮೆಚ್ಚಿಕೆಯಾದ ಒಂದು ಆನೆಗೆ ತಿಂಗಳ ಖರ್ಚು ೫೦೦ ರೂಪಾಯಿಗಳಂತೆ ! ಇದಕ್ಕೆ ಬೇಕಾದ ತಿಂಡಿಯಲ್ಲದೆ ಕುಡಿಯಲು ಮದ್ಯ ವನ್ನೂ ಕೊಡುತ್ತಾರಂತೆ.

ರಾಜನ ಮುಂದೆ ಆನೆಗಳು ಬಂದುಹೋದಮೇಲೆ ಆತ ಸಿಂಹಾಸನದಿಂದ ಇಳಿದು ನಾಲ್ಕೈದು ಖೋಜಾ ಭಕ್ಷಿಗಳೊಡಗೂಡಿ ಅಂತಃಪುರಕ್ಕೆ ಹೋಗುತ್ತಾನೆ.

ಇನ್ನುಳಿದ ಐದು ಸಿಂಹಾಸನಗಳನ್ನು ಬೇರೊಂದು ಕಡೆ ಒಪ್ಪವಾಗಿ ಇಟ್ಟಿದ್ದಾರೆ. ಇವುಗಳನ್ನು ಬಹು ಬೆಲೆಯಾದ ಮುತ್ತುರತ್ನಗಳಿಂದ ಅಲಂಕರಿಸಿದ್ದಾರೆ. ನಾನು ಇವುಗಳ ವಿವರ ವರ್ಣನೆಮಾಡಲು ಹೋಗುವುದಿಲ್ಲ. ಹಾಗೆ ಮಾಡಿದರೆ ಓದುಗರಿಗೆ ಬೇಜಾರಾಗ ಬಹುದು. ಅತಿ ಸುಂದರವಾದ ವಸ್ತು ಬಹಳ ಕಾಲ ಕಣ್ಣುಮುಂದಿದ್ದರೆ ಅಸಹ್ಯವಾಗು ತ್ತದೆಯಲ್ಲವೆ !

ಅರ್ಧಗಂಟೆ ಅಂತಃಪುರದಲ್ಲಿದ್ದ ತರುವಾಯ ರಾಜ ಹೊರಗೆ ಬಂದು ಮೇಲೆ ಹೇಳಿದ ಐದು ಸಿಂಹಾಸನಗಳ ಪೈಕಿ ಮಧ್ಯದಲ್ಲಿಟ್ಟಿರುವ ಒಂದು ಸಿಂಹಾಸನದ ಮೇಲೆ ಕುಳಿತು ಕೊಳ್ಳುತ್ತಾನೆ. ಹಬ್ಬದ ಐದು ದಿನಗಳೂ ಆನೆಗಳ ಮತ್ತು ಒಂಟೆಗಳ ಮೆರವಣಿಗೆ ; ಶ್ರೀಮಂತ ಸರದಾರರೆಲ್ಲರ ಮುಜರೆ ನಜರುಗಳು ಸಲ್ಲುತ್ತವೆ. ಎಲ್ಲವೂ ಬಹು ವೈಭವ ದಿಂದ ನಡೆಯುತ್ತವೆ. ಇಡೀ ಏಷ್ಯಾದಲ್ಲಿ ಯಾರೇ ಆಗಲಿ, ಯೂರೋಪಿನ ಫ್ರಾನ್ಸ್ ದೊರೆಯು ಸಹ, ಈ ಮೊಗಲ್ ಚಕ್ರವರ್ತಿಯ ಅಷ್ಟೈಶ್ವರ್ಯವನ್ನು ಮೀರಿಸುವುದ ಕ್ಕಾಗುವುದಿಲ್ಲ. ಆದರೆ ಯುದ್ಧದಲ್ಲಿ ಮಾತ್ರ ಚತುರರೂ ಧೈರ್ಯಶಾಲಿಗಳೂ ಆದ ನಮ್ಮ ಯೂರೋಪಿಯನರ ಮುಂದೆ ಈತ ನಿಲ್ಲಲಾರ.

ತಂದೆಯಿಂದಲೂ ಅಣ್ಣಂದಿರಿಂದಲೂ ಕಸಿದುಕೊಂಡ ಸಿಂಹಾಸನದ ಮೇಲೆ ಕುಳಿತು ಕೊಂಡ ಔರಂಗಜೇಬ ತಾನು ಮಾಡಿದ ಪಾಪಗಳ ಪ್ರಾಯಶ್ಚಿತ್ತಕ್ಕಾಗಿಯೋ ಎಂಬಂತೆ, ಬಾಳಿನ ಭೋಗಗಳನ್ನು ಅನುಭವಿಸಿದ ಯಾವ ಪ್ರಾಣಿಯನ್ನೂ ತಿನ್ನುತ್ತಿಲ್ಲ. ಹಣ್ಣು ಹಂಪಲು ಸಿಹಿತಿಂಡಿಗಳನ್ನು ಮಾತ್ರ ತಿಂದುಕೊಂಡು ಕಾಲಹಾಕುತ್ತಿದ್ದಾನೆ. ಈ ಕಾರಣ ಈತ ಬಹಳ ಸಣ್ಣಗಾಗಿದ್ದಾನೆ. ಆಗಾಗ್ಗೆ ಆಚರಿಸುವ ಉಪವಾಸ ವ್ರತಗಳೂ

ಇದಕ್ಕೆ ಕಾರಣ. ಬಹು ದೊಡ್ಡ ಧೂಮಕೇತುವೊಂದು........ರಲ್ಲಿ ಇಂಡಿಯಾದಲ್ಲಿ ಕಾಣಿಸಿಕೊಂಡಿತು.[1] ಆ ವೇಳೆಯಲ್ಲಿ ಔರಂಗಜೇಬ ಕೇವಲ ಒಂದಿಷ್ಟು ರೊಟ್ಟಿ ತಿಂದು ನೀರು ಕುಡಿಯುತ್ತಿದ್ದ, ಅಷ್ಟೆ. ಈ ಅಲ್ಪ ಆಹಾರದಿಂದ ಅವನ ದೇಹ ಬಹಳ ಕ್ಷೀಣ ವಾಗಿ ಅವನೆಲ್ಲಿ ಸತ್ತುಹೋಗುವನೋ ಎಂಬಂತಾಗಿತ್ತು. ಇಷ್ಟೇ ಅಲ್ಲದೆ, ಆತ ಮಲಗು ತ್ತಿದ್ದುದು ನೆಲದ ಮೇಲೆ ಮತ್ತು ಹೊದೆಯುತ್ತಿದ್ದುದು ಹುಲಿಯ ಚರ್ಮ. ಹೀಗಾಗಿ, ಅಗಿನಿಂದ ಅವನ ಆರೋಗ್ಯ ಎಂದೂ ನೆಟ್ಟಗಿದ್ದದ್ದಿಲ್ಲ.

ಸಿಂಹಾಸನದ ಮೇಲೆ ಕುಳಿತುಕೊಂಡಿರುವಾಗ ಔರಂಗಜೇಬ ಮದ್ಯಪಾನ ಮಾಡಿದ್ದು ಮೂರೇ ಸಲ ಎಂದು ನನಗೆ ಜ್ಞಾಪಕ. ವಜ್ರ ವೈಢೂರ್ಯಗಳಿಂದ ಅಲಂಕೃತವಾದ ಚಿನ್ನದ ಬಟ್ಟಲಿನಲ್ಲಿ ತಂದುಕೊಟ್ಟ ಮದ್ಯವನ್ನು ಆತ ಕುಡಿದ. ಅಂತಃಪುರದ ಸ್ತ್ರೀಯರು ಮತ್ತು ಖೋಜಾಗಳನ್ನು ಬಿಟ್ಟರೆ ಯಾರೂ ಚಕ್ರವರ್ತಿ ಊಟಮಾಡುವುದನ್ನು ನೋಡು ವುದಕ್ಕಾಗುವುದಿಲ್ಲ. ಎಂಥವನೇ ಆಗಿರಲಿ ಅವನ ಮನೆಗೆ ಚಕ್ರವರ್ತಿ ಹೋಗಿ ಊಟ ಮಾಡುವುದು ಬಹಳ ಅಪರೂಪ. ಒಮ್ಮೆ ಚಕ್ರವರ್ತಿಯ ಪ್ರಧಾನ ಮಂತ್ರಿಯೂ, ತನ್ನ ಹೆಂಡತಿ ಕಡೆಯಿಂದ ಸೋದರಮಾವನೂ ಆದ ಜಫರ್‌ಖಾನನೊಬ್ಬನ ಮನೆಗೆ ಔತಣಕ್ಕೆ ಹೋದುದನ್ನು ನಾನು ನನ್ನ ಕೊನೆಯ ಪ್ರವಾಸದ ವೇಳೆ ಕಂಡೆ. ಜಫರ್ ಖಾನ ತನಗಾಗಿ ಒಂದು ಅರಮನೆ ಕಟ್ಟಿಸಿದ್ದ. ಅರಮನೆಯನ್ನು ನೋಡಲು ಔರಂಗ ಜೇಬನನ್ನು ಕರೆಸಿದಾಗ ಔತಣದ ಏರ್ಪಾಡು ನಡೆದಿತ್ತು. ಚಕ್ರವರ್ತಿ ತನಗೆ ಮಾಡಿದ ಮಹದುಪಕಾರಕ್ಕಾಗಿ ಜಫರ್‌ಖಾನನೂ ಅವನ ಹೆಂಡತಿಯೂ ಮುತ್ತು ರತ್ನಗಳನ್ನೂ ಆನೆ ಕುದುರೆ ಒಂಟೆಗಳನ್ನೂ ಬಹುಮಾನವಾಗಿ ಒಪ್ಪಿಸಿದರು. ಅವುಗಳೆಲ್ಲವುಗಳ ಬೆಲೆ ಏಳು ಲಕ್ಷ ರುಪಾಯಿಗಳಷ್ಟು ಎಂದು ತಿಳಿಯಿತು. ಇಡೀ ಇಂಡಿಯಾದಲ್ಲಿ ಜಫರ್ ಖಾನನ ಹೆಂಡತಿ ಬಹು ಧನವಂತಳೂ ಉದಾರಿಯೂ ಎಂದು ಹೆಸರಾಗಿದ್ದಾಳೆ. ಚಕ್ರ ವರ್ತಿಯ ಎಲ್ಲಾ ಹೆಂಡತಿಯರೂ ಹೆಣ್ಣುಮಕ್ಕಳೂ ಸೇರಿ ಮಾಡುವ ಖರ್ಚಿಗಿಂತ ಹೆಚ್ಚು ಖರ್ಚನ್ನು ಆಕೆಯೊಬ್ಬಳೇ ಮಾಡುತ್ತಾಳೆ. ಈ ಕಾರಣ ಜಫರ್‌ಖಾನ್ ಇಡೀ ಸಾಮ್ರಾಜ್ಯದ ಸ್ವಾಧೀನವನ್ನು ಪಡೆದಿದ್ದಾನೆ. ಆದರೂ ಅವನಿಗೆ ಸಾಲಸೋಲ ತಪ್ಪಿಲ್ಲ. ಔರಂಗಜೇಬ ಬಂದಾಗ ಜಫರ್‌ಖಾನನ ಹೆಂಡತಿ ಬಹು ಭಾರಿ ಔತಣವನ್ನೇ ಮಾಡಿಸಿ ದ್ದಳು. ಆದರೆ ಚಕ್ರವರ್ತಿ ಅಲ್ಲಿ ಊಟಮಾಡಲು ಒಪ್ಪದೆಹೋದ ಕಾರಣ, ಮಾಡಿದ ಅಡುಗೆಯನ್ನು ಅರಮನೆಗೆ ಕಳುಹಿಸಿಕೊಟ್ಟಳು. ಅಟ್ಟ ಭಕ್ಷ್ಯ ಭೋಜ್ಯಗಳು ಎಷ್ಟು ರುಚಿಯಾಗಿದ್ದುವೆಂದರೆ ಔರಂಗಜೇಬ ಅವನ್ನು ಬಹುವಾಗಿ ಮೆಚ್ಚಿ, ಅವನ್ನು ತಂದ

---

[1]ಇದು ೧೬೬೫ರಲ್ಲಿ ಕಾಣಿಸಿಕೊಂಡ ಧೂಮಕೇತು ಇರಬೇಕು. ಮೊದಲಿಗೆ ಯೂರೋಪಿ ನಲ್ಲಿ ಮಾರ್ಚಿ ತಿಂಗಳು ೨೭ರಂದು ಕಾಣಿಸಿಕೊಂಡಿತು. ನಾಲ್ಕು ವಾರಗಳ ಕಾಲ ಇದು ಕಾಣು ತ್ತಿತ್ತು. ೨೫ ಡಿಗ್ರಿ (೨೫°)ಗಳ ಉದ್ದದ ಬಾಲ ಇತ್ತು.

ಖೋಜಾನಿಗೆ ೫೦೦ ರೂಪಾಯಿಗಳನ್ನೂ, ಅಡುಗೆಯವರಿಗೆ ಆದರ ಎರಡಷ್ಟು ಹಣವನ್ನೂ ಕಳುಹಿಸಿಕೊಟ್ಟನಂತೆ.

ಔರಂಗಜೇಬ ಪಲ್ಲಕ್ಕಿಯಲ್ಲಿ ಕುಳಿತು ಮಸೀದಿಗೆ ಹೋಗುವಾಗ ಅವನ ಮಕ್ಕಳಲ್ಲಿ ಒಬ್ಬ ಕುದುರೆಯ ಮೇಲೆ ಕುಳಿತು ಅವನನ್ನು ಹಿಂಬಾಲಿಸುತ್ತಾನೆ. ಉಳಿದ ರಾಜ ಕುಮಾರರು ಮತ್ತು ಪರಿವಾರದವರು ಕಾಲ್ನಡಗೆಯಲ್ಲಿ ಹೋಗುತ್ತಾರೆ. ಅವನ ಮುಂದೆ ಎಂಟು ಆನೆಗಳು ಹೋಗುತ್ತವೆ. ಎಲ್ಲಕ್ಕಿಂತ ಮುಂದಿನ ಆನೆ ರಾಜಲಾಂಛನವನ್ನು ಹೊರುತ್ತದೆ. ಉಳಿದ ಆನೆಗಳ ಮೇಲೆ ಅಂಬಾರಿಗಳು ಇರುತ್ತವೆ. ರಾಜನು ಹೊರಗೆಹೋದಾಗ ಅವನನ್ನು ಐನೂರು ಆರುನೂರು ಜನ ಅಂಗರಕ್ಷಕರು ಹಿಂಬಾಲಿಸುತ್ತಾರೆ. ಈ ಅಂಗರಕ್ಷಕರು ಕೈಭರ್ಜಿಯಂಥ ಆಯುಧಗಳನ್ನು ಹಿಡಿದಿರು ತ್ತಾರೆ. ಈ ಭರ್ಜಿಗೆ ಸಿಕ್ಕಿಸಿರುವ ಕಬ್ಬಿಣದ ಅಲಗಿಗೆ ಬಾಣಬಿರುಸನ್ನು (fire works) ಸಿಕ್ಕಿಸಿರುತ್ತಾರೆ. ಒಂದು ಅಡಿ ಉದ್ದದ ಮತ್ತು ತೋಳಗಾತ್ರದ ಎರಡು ಬಾಣಬಿರುಸು ಗಳನ್ನು ಅಡ್ಡಡ್ಡ (cross)ವಾಗಿ ಕಟ್ಟಿರುತ್ತಾರೆ. ಇವನ್ನು ಹೊತ್ತಿಸಿದರೆ ಕೈಭರ್ಜಿ ೫೦೦ ಗಜ ದೂರಕ್ಕೆ ಹಾರುತ್ತದೆ. ರಾಜನ ಜೊತೆ ಮುನ್ನೂರು ನಾನೂರು ಬತ್ತಿಯ ಬಂದೂಕು (matchlack)ಗಳನ್ನು ಹಿಡಿದವರು ಇರುತ್ತಾರೆ. ಇವರು ಬಹು ಅಂಜು ಬುರುಕರು ; ಬಂದೂಕು ಹಾರಿಸುವುದಕ್ಕೆ ಬಾರದು. ಇಷ್ಟಲ್ಲದೆ, ರಾಜನನ್ನು ದೊಡ್ಡ ಅಶ್ವದಳವೂ ಹಿಂಬಾಲಿಸುತ್ತದೆ. ಇಂಡಿಯಾದ ಇಂತಹ ಸಾವಿರ ಸಿಪಾಯಿಗಳನ್ನು ಮಟ್ಟಹಾಕಲು ನಮ್ಮ ನೂರು ಜನ ಫರಂಗಿ ಸಿಪಾಯಿಗಳು ಸಾಕು. ಆದರೆ ನಮ್ಮವರು ಈ ಜನರಷ್ಟು ಕಟ್ಟುನಿಟ್ಟಾದ ಜೀವನ ನಡೆಸುವುದು ಕಷ್ಟ. ಇಲ್ಲಿಯ ಕಾಲ್ದಳದ ಮತ್ತು ಅಶ್ವದಳದ ಸಿಪಾಯಿಗಳು ಸ್ವಲ್ಪ ಹಿಟ್ಟನ್ನು ನೀರಿನಲ್ಲಿ ಮಿದಿದು ಅದಕ್ಕೆ ಬೆಲ್ಲ ಸೇರಿಸಿ ಉಂಡೆಮಾಡಿ ನುಂಗಿ ಹೊಟ್ಟೆ ತುಂಬಿಸಿಕೊಳ್ಳಬಲ್ಲರು. ಸಂಜೆ ಅಕ್ಕಿ ಮತ್ತು ಹಿಟ್ಟು ಸೇರಿಸಿ ಉಪ್ಪುಹಾಕಿ ಮಾಡಿದ 'ಖಿಚ್ರಿ' ತಿಂದು ಮಲಗಿಕೊಳ್ಳುತ್ತಾರೆ. ತಿನ್ನುವ ಮುಂಚೆ ಅದನ್ನು ತುಪ್ಪದಲ್ಲಿ ತುದಿಬೆರಳುಗಳಿಂದ ಅದ್ದಿ ತಿನ್ನುತ್ತಾರೆ. ಇಷ್ಟೇ ಆಹಾರ ಸಿಪಾಯಿಗಳದು ಮತ್ತು ಬಡಬಗ್ಗರದು. ನಮ್ಮವರಿಗೆ ಇನ್ನೊಂದು ಕಷ್ಟ ಏನೆಂದರೆ, ಇಲ್ಲಿಯವರು ಬಿಸಿಲನ್ನು ಸಹಿಸಿಕೊಳ್ಳುವಂತೆ ನಮ್ಮವರು ಸಹಿಸಿಕೊಳ್ಳಲಾರರು.

ಈ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ರೈತರ ಬಗ್ಗೆ ಒಂದು ಮಾತು ಹೇಳಬೇಕು. ಅವರಿಗೆ ಮಾನಮುಚ್ಚಿಕೊಳ್ಳುವುದಕ್ಕೆ ಎಷ್ಟು ಬೇಕೋ ಅಷ್ಟೇ ಬಟ್ಟೆ ಇರುವುದು. ಎಲ್ಲರೂ ಬಹು ಬಡತನದಲ್ಲಿ ತೊಳಲುತ್ತಿದ್ದಾರೆ. ಯಾರಾದರೊಬ್ಬ ದುಡಿದು ಆಸ್ತಿ ಪಾಸ್ತಿ ಹೊಂದಿದ ಎಂದರೆ ಆಗಲೇ ಅವನ ಮೇಲೆ ಸುಬೇದಾರರುಗಳ ಕಣ್ಣು ಬೀಳುತ್ತದೆ. ಏನಾದರೂ ಮಾಡಿ ಅದನ್ನು ಕಿತ್ತುಕೊಳ್ಳುತ್ತಾರೆ. ಈ ಸುಬೇದಾರರುಗಳ ಹಿಂಸೆ ಯನ್ನು ತಾಳಲಾರದೆ ಎಷ್ಟೋ ರೈತರುಗಳು ಪ್ರಾಂತಗಳನ್ನೇ ಬಿಟ್ಟುಹೋಗಿ ಭೂಮಿ ಯನ್ನು ಮರುಭೂಮಿಯನ್ನಾಗಿ ಮಾಡಿರುವುದನ್ನು ನೋಡಬಹುದು. ಮಹಮ್ಮದೀಯ

ರಾದ ಈ ಸುಬೇದಾರರುಗಳು ವಿಗ್ರಹಾರಾಧಕರನ್ನು ಬಹು ಕ್ರೂರವಾಗಿ ಹಿಂಸಿಸುತ್ತಾರೆ. ಈ ಹಿಂಸೆಯನ್ನು ತಾಳಲಾರದೆ ವಿಗ್ರಹಾರಾಧಕರು ಮುಹಮ್ಮದೀಯರಾದರೆ ಅದು ದುಡಿಮೆಯಿಂದ ವಿನಾಯಿತಿ ಪಡೆಯುವುದಕ್ಕೆ, ಅಷ್ಟೆ. ಅಂಥವರು ಸಿಪಾಯಿಗಳೋ ಫಕೀರರೋ ಆಗುತ್ತಾರೆ. ಈ ಫಕೀರರುಗಳು ತಾವು ಎಲ್ಲವನ್ನೂ ತ್ಯಾಗಮಾಡಿದ್ದೇವೆಂದು ಹೇಳಿಕೊಂಡು ಭಿಕ್ಷೆಯಿಂದ ಜೀವಿಸುತ್ತಾರೆ, ಆದರೆ ವಾಸ್ತವವಾಗಿ ಇವರು ಮಹಾ ಠಕ್ಕರು. ಇಂಡಿಯಾದಲ್ಲಿ ಎಂಟು ಲಕ್ಷ ಮುಹಮ್ಮದೀಯ ಫಕೀರರುಗಳು ಇದ್ದಾರೆಂದು ಅಂದಾಜು ಮಾಡಲಾಗಿದೆ. ವಿಗ್ರಹಾರಾಧಕರಲ್ಲಿ ಹನ್ನೆರಡು ಲಕ್ಷ ಜೋಗಿಗಳು ಇದ್ದಾರಂತೆ. ಇವರ ವಿಚಾರ ಆಮೇಲೆ ಹೇಳುತ್ತೇನೆ.

ಹದಿನೈದು ದಿನಗಳಿಗೊಮ್ಮೆ ರಾಜ ಬೇಟೆಗೆ ಹೋಗುತ್ತಾನೆ. ಆಗ ಆನೆಯ ಮೇಲೆ ಹೋಗಿ, ಪಲ್ಲಕ್ಕಿಯಲ್ಲಿ ಹಿಂದಿರುಗುತ್ತಾನೆ. ರಾಜನು ಆನೆಯ ಮೇಲೆ ಕುಳಿತಿರುವ ಕಡೆಗೆ, ಅಂದರೆ ಅವನು ಹಿಡಿದಿರುವ ಬಂದೂಕಿನ ಏಟಿಗೆ ಸಿಕ್ಕುವಂತೆ, ಬೇಟೆಯ ಮೃಗಗಳನ್ನು ತರುಬುತ್ತಾರೆ.

ರಾಣೀವಾಸದವರು—ಅವರು ಯಾರೇ ಆಗಲಿ—ಗ್ರಾಮಾಂತರ ಪ್ರದೇಶದ ಕಡೆ ಗಾಳಿಸೇವನೆಗೆ ಹೋಗುವುದನ್ನು ಬಿಟ್ಟರೆ, ಅರಮನೆಯಿಂದ ಹೊರಗೆ ಬರುವುದಿಲ್ಲ. ಕೆಲವರು ಮಾತ್ರ ಜಫರ್‌ಖಾನ ಮುಂತಾದ ಶ್ರೀಮಂತರ ಮನೆಯ ಹೆಂಗಸರನ್ನು ನೋಡಲು ಹೋಗುತ್ತಾರೆ. ಇದಕ್ಕೂ ರಾಜನ ವಿಶೇಷ ಅನುಮತಿ ಬೇಕು. ಹೊರಗಡೆ ಹೋಗುವುದು ಸಾಮಾನ್ಯವಾಗಿ ಬೆಳಗ್ಗೆ ಒಂಬತ್ತು ಗಂಟೆಯಲ್ಲಿ. ಅವರ ಜೊತೆ ಮೂರು ನಾಲ್ಕು ಜನ ಖೋಜಾಗಳೂ ಹತ್ತು ಹನ್ನೆರಡು ಜನ ಸೇವಕಿಯರೂ ಇರುತ್ತಾರೆ. ಅರಮನೆಯ ಪಲ್ಲಕ್ಕಿಗಳಲ್ಲಿ ಕುಳಿತು ಹೋಗುತ್ತಾರೆ. ಒಬ್ಬರೆ ಕುಳಿತುಕೊಳ್ಳುವ ಗಾಡಿಯನ್ನು ಪಲ್ಲಕ್ಕಿಯ ಹಿಂದೆ ಇಬ್ಬರು ಎಳೆದುಕೊಂಡು ಬರುತ್ತಾರೆ. ಯಾರ ಮನೆಗೆ ಹೋಗಬೇಕೊ ಆ ಮನೆಯ ಹೊರಬಾಗಿಲವರೆಗೆ ಮಾತ್ರ ಪಲ್ಲಕ್ಕಿಯಲ್ಲಿ ಹೋಗಿ, ಅಲ್ಲಿ ಇಳಿದು, ಗಾಡಿಯಲ್ಲಿ ಕುಳಿತುಕೊಳ್ಳುತ್ತಾರೆ. ಈ ಗಾಡಿಯನ್ನು ಜೊತೆಯಲ್ಲಿ ಬಂದ ಅವ್ವೆಯರು ಒಳಭಾಗದಲ್ಲಿರುವ ಅಂತಃಪುರದವರೆಗೆ ಎಳೆದುಕೊಂಡು ಹೋಗುತ್ತಾರೆ.

ಈ ರಾಣೀವಾಸದ ಹೆಣ್ಣುಗಳನ್ನು ಮದುವೆಯಾದವರು ಅವರು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕು. ಹಾಗೆ ನಡೆದುಕೊಳ್ಳದಿದ್ದರೆ ರಾಜನಿಗೆ ದೂರುಹೋಗುತ್ತದೆ. ಆಗ ರಾಜ ಗಂಡಂದಿರ ಸಾಮಾನುಗಳಿಗೂ ಆಸ್ತಿಪಾಸ್ತಿಗಳಿಗೂ ಕತ್ತರಿಹಾಕಿಬಿಡುತ್ತಾನೆ. ಮೊದಲು ಹುಟ್ಟಿದ ಮಗು, ಅದು ಗುಲಾಮಳ ಹೊಟ್ಟೆಯಲ್ಲಿ ಹುಟ್ಟಿದ್ದರು ಸಹ, ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗುವುದು. ಇದು ಇಲ್ಲಿಯ ಪದ್ಧತಿ. ಈ ಕಾರಣ ರಾಣೀವಾಸದಲ್ಲಿ ಯಾರಾದರೂ ಒಬ್ಬಳು ಗರ್ಭಿಣಿ ಎಂದು ಗೊತ್ತಾದರೆ ಉಳಿದವರೆಲ್ಲ ಸೇರಿ ಅವಳಿಗೆ ಗರ್ಭಸ್ರಾವವಾಗುವಂತೆ ಮಾಡಿಬಿಡುತ್ತಾರೆ. ೧೬೬೬ರಲ್ಲಿ ನಾನು ಪಟ್ನಾ ನಗರದಲ್ಲಿದ್ದಾಗ, ಷೈಸ್ತಾಖಾನನ ಹೆಂಡತಿ ತನ್ನ ಮಕ್ಕಳು ಮಾತ್ರ ಉಳಿಯಬೇಕೆಂದು

ಕೊಂಡು ಒಂದು ತಿಂಗಳೊಳಗೆ ಅಂತಃಪುರದ ಎಂಟು ಜನ ಹೆಂಗಸರಿಗೆ ಗರ್ಭಸ್ರಾವ ಮಾಡಿಸಿದಳು ಎಂದು ಖಾನನ ಪೋರ್ಚುಗೀಸ್ ಶಸ್ತ್ರವೈದ್ಯನೊಬ್ಬ ಹೇಳಿದ.

೧೬೬೫ರ ನವೆಂಬರ್ ೧ನೇ ತಾರೀಖು ನಾನು ಚಕ್ರವರ್ತಿಯಿಂದ ಬೀಳ್ಕೊಳ್ಳಲು ಹೋದೆ. ಆದರೆ ಆತ ತನ್ನ ಆಭರಣಗಳನ್ನು ನೋಡದೆ ನಾನು ಹೋಗಬಾರದು ಎಂದ. ಈ ಕಾರಣ ನಾನು ನಿಲ್ಲಬೇಕಾಯಿತು. ಎರಡು ದಿನಗಳ ತರುವಾಯ ಆತನ ಕಡೆಯ ಜನರು ಬಂದು ಆಭರಣಗಳನ್ನು ನೋಡಲು ಬರಬೇಕೆಂದು ಹೇಳಿದರು. ನಾನು ಹೋದೆ. ಒಂದು ಚಿಕ್ಕ ಕೋಣೆ. ಆ ಕೋಣೆ ಹಜಾರದ ಒಂದು ಕಡೆಗಿತ್ತು. ಚಕ್ರವರ್ತಿ ಹಜಾರದಲ್ಲಿ ಕುಳಿತು ಕೋಣೆಯಲ್ಲಿ ನಡೆಯುವುದನ್ನೆಲ್ಲ ನೋಡುತ್ತಿದ್ದ. ಕೋಣೆಯೊಳಗೆ ಆಭರಣಗಳ ಭಂಡಾರದ ಪಾರುಪತ್ತೇಗಾರ ಅಕಿಲ್‌ಖಾನ್ ಇದ್ದ. ನಾನು ಹೋದ ಮೇಲೆ ಇಬ್ಬರು ಖೋಜಾಗಳು ಮರದ ಎರಡು ದೊಡ್ಡ ತಟ್ಟೆಗಳ ತುಂಬ ಆಭರಣಗಳನ್ನು ತಂದರು. ಆ ಮರದ ತಟ್ಟೆಗಳಿಗೆ ಚಿನ್ನದ ಮುಲಾಮು ಮಾಡಲಾಗಿತ್ತು. ಆಭರಣಗಳ ಮೇಲೆ ಕೆಂಪು ಮತ್ತು ಹಸುರು ಮಕಮಲ್ ಬಟ್ಟೆಗಳನ್ನು ಮುಚ್ಚಿದ್ದರು. ಮುಚ್ಚಿದ್ದ ಬಟ್ಟೆಗಳನ್ನು ತೆಗೆದು ತಟ್ಟೆಯಲ್ಲಿದ್ದ ಆಭರಣಗಳನ್ನು ಮೂರು ಜನ ಕಾರಕೂನರು ಮೂರು ಸಲ ಎಣಿಸಿ ಮೂರು ಪಟ್ಟಿ ಮಾಡಿದರು. ಇಂಡಿಯನರು ಯಾವುದನ್ನು ಮಾಡಿದರೂ ಬಹಳ ಕಟ್ಟುನಿಟ್ಟಾಗಿಯೂ ಸಹನೆಯಿಂದಲೂ ಮಾಡುತ್ತಾರೆ. ಯಾರಾದರೊಬ್ಬ ಕೆಲಸದಲ್ಲಿ ಅನಾದರಣೆ ತೋರಿಸಿದರೆ ಅವನ ಕಡೆ ಹುಚ್ಚರನ್ನು ನೋಡುವಂತೆ ದಿಟ್ಟಿಸಿ ನೋಡಿ ಹುಸಿನಗುತ್ತಾರೆ. ಅಕಿಲ್‌ಖಾನ ಒಂದೊಂದಾಗಿ ವಜ್ರಗಳನ್ನೂ ಮುತ್ತುಗಳನ್ನೂ ಅವುಗಳನ್ನು ಬಿಗಿದು ಮಾಡಿದ ಆಭರಣಗಳನ್ನೂ ತೋರಿಸಿದ. ಮೊಟ್ಟಮೊದಲು ತೋರಿಸಿದ್ದು ಆ ಹೆಸರಾಂತ ವಜ್ರ. ಮೀರ್ ಜುಮ್ಲಾ ಗೋಲ್ಕೊಂಡಾ ರಾಜನಿಗೆ ಮೋಸಮಾಡಿ ಷಾಜಹಾನನ ಕಡೆ ಬಂದು ಸೇರಿಕೊಂಡಾಗ ಈ ವಜ್ರ ಮೊಗಲ್‌ರಾಜರ ಭಂಡಾರವನ್ನು ಸೇರಿತ್ತು. ಇದು ಕಡುಕೆಂಪು ಬಣ್ಣದ ದೊಡ್ಡ ವಜ್ರ. ಬಹು ಪ್ರಕಾಶಮಾನವಾಗಿ ಹೊಳೆಯುತ್ತದೆ. ತೂಕ ೩೧೯ ರತಿಗಳು. ವೆನೀಸ್ ನಗರದ ಹೊರೆನ್ಸಿಯೋ ಬೊರ್ಜಿಯೋ ಎಂಬುವನು ಈ ವಜ್ರದ ಕಮಲ ಬಿಡಿಸಿದನು. ಆದರೆ ಅವನು ಆ ಕೆಲಸವನ್ನು ಸಮರ್ಪಕವಾಗಿ ಮಾಡಲಿಲ್ಲ ಎಂದು ರಾಜ ಅವನಿಂದ ೧೦,೦೦೦ ರೂಪಾಯಿ ದಂಡ ವಸೂಲು ಮಾಡಿದ.[1]

---

[1]ಇದೇ ಹೆಸರಾಂತ ಕೊಹಿನೂರ್ ವಜ್ರ. ತೆವರ್ನ್ಯೇ ಕೊಲ್ಲೂರು ಎಂಬ ಗಣಿಯಲ್ಲಿ ಸಕ್ಕತೆಂದು ಹೇಳುವ ವಜ್ರ ಇದೇ ಎಂದು ಇತಿಹಾಸಕಾರರ ಅಭಿಪ್ರಾಯವಿದೆ. ಇದಕ್ಕೂ ರಷ್ಯಾದ ಓರ್ಲೋಫ್ ಎಂಬ ವಜ್ರಕ್ಕೂ ಸಂಬಂಧವಿಲ್ಲವಂತೆ. ಆ ವಜ್ರ ಕಾವೇರಿ ನದಿಯ ದಡದ ಮೇಲಿರುವ ಶ್ರೀರಂಗ ದೇವಸ್ಥಾನದಿಂದ ತಂದದ್ದೆಂದು ವಿದ್ವಾಂಸರ ಅಭಿಪ್ರಾಯ. (P.T.O)

ಈ ವಜ್ರವನ್ನು ನಾನು ಕೂಲಂಕಶವಾಗಿ ಪರೀಕ್ಷಿಸಿ ಅಕಿಲ್‌ಖಾನನ ಕೈಗೆ ಕೊಟ್ಟ ಮೇಲೆ ಆತ ನನಗೆ ಬೇರೆ ಹಲವಾರು ವಜ್ರಗಳನ್ನೂ ಹದಿನೇಳು ವಜ್ರಗಳಿಂದ ಮಾಡಿದ ಒಂದು ಆಭರಣವನ್ನೂ ಪೇರುಹಣ್ಣಿನಾಕಾರದ ಎರಡು ದೊಡ್ಡ ಮುತ್ತುಗಳನ್ನೂ ಒಂದು ದೊಡ್ಡ ಮುತ್ತಿನ ಅಂಗಿಗುಂಡಿಯನ್ನೂ ಕೊನೆಗೆ ಅತ್ಯುತ್ತಮವಾದ ಒಂದು ದುಂಡು ಮುತ್ತನ್ನೂ ತೋರಿಸಿದ. ಕೊನೆಯಲ್ಲಿ ತೋರಿಸಿದ ದುಂಡು ಮುತ್ತನ್ನು ಪರ್ಷಿಯಾದ ಎರಡನೇ ಷಾ ಅಬ್ಬಾಸನು ಮೊಗಲ್ ಚಕ್ರವರ್ತಿಗೆ ಬಹುಮಾನವಾಗಿ ಕಳುಹಿಸಿದನಂತೆ.

---

ಕೊಹಿನೂರ್ ವಜ್ರ ಔರಂಗಜೇಬನ ನಂತರ ಪಟ್ಟಕ್ಕೆ ಬಂದ ಮಹಮ್ಮದ್ ಷಾನ ಕೈಸೇರಿತು. ಆಮೇಲೆ ಅದನ್ನು ಪರ್ಷಿಯಾದ ನಾದಿರ್‌ಷಾ ಮಹಮ್ಮದ್‌ಷಾನಿಂದ (೧೭೩೯ ರಲ್ಲಿ) ಕಸಿದುಕೊಂಡು ತನ್ನ ದೇಶಕ್ಕೆ ತೆಗೆದುಕೊಂಡುಹೋದ. ನಾದಿರ್ ಷಾನ ಕೊಲೆಯಾದ ನಂತರ ಅದು ಅವನ ಮಗ ಷಾ ರೂಖನ ಕೈಸೇರಿತು. ಅವನು ಅದನ್ನು ೧೭೫೧ರಲ್ಲಿ ಕಾಬೂಲಿನ ರಾಜ ಅಹಮದ್‌ಷಾನಿಗೆ ಉಡುಗೊರೆಯಾಗಿ ಕೊಟ್ಟನು. ಅವನಿಂದ ಅದು ಅವನ ಮಗ ತೈಮೂರನಿಗೆ ಬಂದಿತು. ೧೮೦೯ರಲ್ಲಿ ಇತಿಹಾಸಕಾರ ಹಾಗೂ ಬ್ರಿಟಿಷ್ ಅಧಿಕಾರಿ ಎಲ್ಫಿನ್ ಸ್ಟೋನ್ ಎಂಬುವನು ಪೆಷಾವರಿಗೆ ಹೋಗಿದ್ದಾಗ ಅಲ್ಲಿಯ ರಾಜ ಅದನ್ನು ತನ್ನ ತೋಳಬಂದಿ ಯಲ್ಲಿ ಧರಿಸಿಕೊಂಡಿದ್ದನ್ನು ನೋಡಿದನಂತೆ. ಈ ರಾಜನ ಹೆಸರು ಷೂಜಾ. ಅವನನ್ನು ಅವನ ಸಹೋದರನಾದ ಮಹಮ್ಮದ್ ಎಂಬುವನು ಸಿಂಹಾಸನದಿಂದ ಉರುಳಿಸಿ ಖೈದಿಯನ್ನಾಗಿ ಮಾಡಿ ಬಿಟ್ಟ. ಹೀಗೆ ಖೈದಿಯಾದ ರಾಜನನ್ನು ಪಂಜಾಬಿನ ರಣಜಿತ್‌ಸಿಂಗನು ಬಿಡುಗಡೆಮಾಡಿದನು. ಆಗ ಕೊಹಿನೂರ್ ವಜ್ರ ರಣಜಿತ್‌ಸಿಂಗನ ಕೈಸೇರಿತು. ಆತ ಆಗಾಗ್ಗೆ ಆ ವಜ್ರವನ್ನು ಧರಿಸುತ್ತಿದ್ದ ನಂತೆ. ಸಾಯುವಾಗ ಆತ ಅದನ್ನು ಪುರಿ ಜಗನ್ನಾಥ ದೇವರಿಗೆ ಒಪ್ಪಿಸಬೇಕೆಂದು ಹೇಳಿ ಸತ್ತ ನಂತೆ. ಆದರೆ (೧೮೪೯ರಲ್ಲಿ) ಅವನ ರಾಜ್ಯವನ್ನು ಆಕ್ರಮಿಸಿಕೊಂಡ ಇಂಗ್ಲಿಷರು ಹಾಗೆ ಮಾಡದೆ ಅದನ್ನು ತಮ್ಮ ವಶಪಡಿಸಿಕೊಂಡರು. ಹೀಗೆ ತಮ್ಮ ವಶವಾದ ವಜ್ರವನ್ನು ಸುರಕ್ಷಿತ ವಾಗಿ ಇಡಬೇಕೆಂದು ಇಂಗ್ಲಿಷರು ಜಾನ್ ಲಾರೆನ್ಸ್ ಎಂಬುವನ ವಶಕ್ಕೆ ಕೊಟ್ಟರು. ಆ ಲಾರೆನ್ಸ್ ಅದನ್ನು ಒಂದು ತಗಡಿನ ಡಬ್ಬಿಯೊಳಗೆ ಹಾಕಿ ತನ್ನ ನಡುವಂಗಿಯ ಜೇಬಿನಲ್ಲಿ ಇಟ್ಟುಕೊಂಡ. ಆದರೆ ಹಾಗೆ ಇಟ್ಟದ್ದು ಮರೆತೇಹೋಗಿಬಿಟ್ಟಿತು. ಆರು ವಾರಗಳ ಅನಂತರ ಅದನ್ನು ಇಂಗ್ಲೆಂಡಿನ ರಾಣಿಗೆ ಒಪ್ಪಿಸಬೇಕೆಂದು ಆಲೋಚಿಸಲಾಗಿತ್ತು. ಆಗ ಲಾರೆನ್ಸ್ ತಡಕಾಡಿದ. ಇಂಡಿಯಾದಿಂದ ಕರೆದುಕೊಂಡುಹೋಗಿದ್ದ ಅವನ ಸೇವಕನೊಬ್ಬ ತನಗೆ ಸಿಕ್ಕಿದ ವಜ್ರವನ್ನು ಗಾಜಿನ ಚೂರೆಂದು ಭಾವಿಸಿದರೂ ಜೋಪಾನವಾಗಿ ಇಟ್ಟಿದ್ದ. ಅಂತೂ ಕೋಹಿನೂರ್ ವಜ್ರ ಎಲ್ಲೂ ಕಳೆದು ಹೋಗದೆ ಇಂಗ್ಲೆಂಡ್ ರಾಣಿಯ ಕೈಮುಟ್ಟಿತು. ೧೮೫೨ರಲ್ಲಿ ರಾಣಿಯ ಅಪ್ಪಣೆಯಂತೆ ಮತ್ತೆ ಅದನ್ನು ಕತ್ತರಿಸಲಾಯಿತು. ಆ ಕೆಲಸಮಾಡಲು ಮುವತ್ತೆಂಟು ದಿನಗಳು ಹಿಡಿದುವು. ಕತ್ತರಿಸಿದ ಮೇಲೆ ವಜ್ರದ ತೂಕ ೧೦೬ ೧/೧೦ ಕ್ಯಾರೆಟ್‌ಗಳಿಗೆ ಇಳಿಯಿತು. ಈ ಕೆಲಸಕ್ಕೆ ೮೦೦೦ ಪೌಂಡು ಗಳಷ್ಟು ಖರ್ಚಾಯಿತಂತೆ. (ಆಧಾರ : Bosworth Smith: Life of Lord Lawrence' ಎಂಬ ಗ್ರಂಥ.)

ಇವಲ್ಲದೆ, ಇನ್ನೂ ಅನೇಕ ಮುತ್ತುರತ್ನಗಳನ್ನೂ ಆಭರಣಗಳನ್ನೂ ನನಗೆ ತೋರಿಸಿದರು. ಮತ್ತಾವ ಫರಂಗಿಯುವನಿಗೂ ಇವನ್ನು ತೋರಿಸಿರಲಿಲ್ಲ. ಇದು ಕೇವಲ ನನಗೆ ಮಾತ್ರ ತೋರಿಸಿದ ವಿಶೇಷ ವಿಶ್ವಾಸ.

ಈಗ ನಾನು ನವಾಬ್ ಷೈಸ್ತಾಖಾನನು ನನಗೆ ಕೊಟ್ಟ ರಹದಾರಿಯ ಬಗ್ಗೆ ಎರಡು ಮಾತು ಹೇಳುತ್ತೇನೆ. ಈ ರಹದಾರಿಗಳನ್ನು ಪಡೆಯುವಾಗ ನನಗೂ ಷೈಸ್ತಾಖಾನನಿಗೂ ಪತ್ರವ್ಯವಹಾರ ನಡೆಯಿತು. ನಾನು ಬರೆದ ಪತ್ರಗಳಿಗೆ ಉತ್ತರವಾಗಿ ಬಂದ ಪತ್ರಗಳಿಂದ ಇಂಡಿಯನರು ಪತ್ರ ಬರೆಯುವ ರೀತಿ ಹಾಗೂ ವಿಧಾನಗಳನ್ನು ತಿಳಿದುಕೊಳ್ಳಬಹುದು. ಜಫರ್ ಖಾನನ ಮೂಲಕ ನನಗೆ ಮೊಗಲ್ ಚಕ್ರವರ್ತಿಯಿಂದಲೂ ಒಂದು ರಹದಾರಿಯನ್ನು ಕೊಡಲಾಗಿತ್ತು. ಆದರೆ ಅದನ್ನು ನನಗೆ ಬೇಕಾದ ರೀತಿಯಲ್ಲಿ ಬರೆಯದಿದ್ದುದರಿಂದ ಹಿಂದಿರುಗಿಸಿದೆ. ನಾನು ಈ ದೇಶಕ್ಕೆ ಬರುವಾಗ ಮತ್ತು ಈ ದೇಶದಿಂದ ಹೋಗುವಾಗ ನನ್ನ ಬಳಿ ಇರುವ ಸರಕುಗಳ ಮೇಲೆ, ಅವುಗಳನ್ನು ಮಾರಲಿ ಅಥವಾ ಮಾರದಿರಲಿ, ಯಾವ ತೆರಿಗೆಯನ್ನೂ ಹಾಕಕೂಡದೆಂಬಂತೆ ಪರ್ಷಿಯಾ ದೊರೆ ಕೊಟ್ಟಂಥ ರಹದಾರಿ ಕೊಡಬೇಕೆಂದು ಹೇಳಿದೆ. ಆ ತರಹ ರಹದಾರಿ ಕೊಡಲು ಸಾಧ್ಯವಿಲ್ಲವೆಂದು ಜಫರ್‌ಖಾನ್ ತಿಳಿಸಿದ. ಆದರೆ ಷೈಸ್ತಾಖಾನನು ಕೊಟ್ಟ ರಹದಾರಿಯಿಂದ ರಾಜನು ಕೊಡದ ಸೌಲಭ್ಯಗಳನ್ನು ಪಡೆದುಕೊಂಡೆ. ಈ ರಹದಾರಿ ಹಲವಾರು ವರ್ಷಗಳು ನನ್ನ ಬಳಿ ಇದ್ದುದರಿಂದ ನನ್ನ ವ್ಯಾಪಾರಸಾಪಾರಕ್ಕೆ ತುಂಬ ಅನುಕೂಲವಾಯಿತು. ನಾನು ಸೂರತ್ತಿನಲ್ಲಿ ಇದ್ದು ಷೈಸ್ತಾಖಾನನಿಗೆ ಪತ್ರಗಳನ್ನು ಬರೆದೆ. ಆದರೆ ಸೂರತ್ತಿನ ಕೊತ್ವಾಲ ಮಿರ್ಜಾ ಅರಬನು ತಂದೊಡ್ಡಿದ ಆತಂಕಗಳಿಂದಾಗಿ ಆರು ತಿಂಗಳುಗಳ ಕಾಲ ಸೂರತ್ತಿನಲ್ಲಿ ನಿಲ್ಲಬೇಕಾಯಿತು. ಕೊನೆಗೆ ನವಾಬ್ ಷೈಸ್ತಾಖಾನನಿಂದ ಕಟ್ಟುನಿಟ್ಟಾದ ಆಜ್ಞೆ ಬಂದಿತು; ನಾನು ಸೂರತ್ತಿನಿಂದ ಹೊರಡುವುದಕ್ಕೆ ಅವಕಾಶಮಾಡಿಕೊಡಬೇಕೆಂದು ಮತ್ತು ಹಾಗೆ ಮಾಡದಿದ್ದರೆ ಕೊತ್ವಾಲ ತನ್ನ ಅಧಿಕಾರಕ್ಕೆ ರಾಜೀನಾಮೆ ಕೊಡಬೇಕೆಂದು ಆಜ್ಞೆಯಾಯಿತು. ಈ ಆಜ್ಞೆಯನ್ನು ಓದಿದ ಸೂರತ್ತಿನ ಕೊತ್ವಾಲ ದಿಕ್ಕೆಟ್ಟವನಾದ. ಅವನನ್ನು ಬೀಳ್ಕೊಳ್ಳಲು ಹೋದಾಗ ಅವನು ನನ್ನ ಕಡೆ ಕಣ್ಣೆತ್ತಿಯೂ ನೋಡಲಿಲ್ಲ.

ಸೂರತ್ತಿನಿಂದ ಹೊರಟ ನಾನು ನವಾಬ ಷೈಸ್ತಾಖಾನನ್ನು ಕಾಣಲು ಔರಂಗಾಬಾದಿಗೆ ಹೊರಟೆ. ಆದರೆ ನವಾಬ ಅಲ್ಲಿ ಇರಲಿಲ್ಲ. ಆತ ರಾಜ ಶಿವಾಜಿಗೆ ಸೇರಿದ ಪಟ್ಟಣಗಳಲ್ಲೊಂದಾದ ಸೊಲ್ಲಾಪುರಕ್ಕೆ ಮುತ್ತಿಗೆಹಾಕಲು ತನ್ನ ಸೈನ್ಯ ಸಮೇತ ದಖನಿನಲ್ಲಿ ಇದ್ದ. ನಾನು ಅಲ್ಲಿಗೇ ಹೋದೆ. ನನ್ನ ಬಳಿ ಇದ್ದ ಸರಕುಗಳನ್ನು ಅವನಿಗೆ ತೋರಿಸಿ, ಸೂಕ್ತ ಬೆಲೆಗೆ ಮಾರಿದೆ. ನಾನು ಅವನ ಬಳಿ ಇರುವಷ್ಟು ಕಾಲವೂ ಆತ ನನಗಾಗಲೀ ನನ್ನ ಕುದುರೆಗಳಿಗಾಗಲೀ ಅನ್ನಪಾನಕ್ಕೆ ಯಾವ ಕೊರತೆಯೂ ಆಗದಂತೆ ನೋಡಿಕೊಂಡ. ಪ್ರತಿ ದಿನ ನನ್ನ ಬಿಡಾರಕ್ಕೆ ನಾಲ್ಕು ತಟ್ಟೆಗಳಲ್ಲಿ ಮಾಂಸದ ಭಕ್ಷ್ಯಗಳೂ ಎರಡು ತಟ್ಟೆಗಳಲ್ಲಿ ಸಿಹಿತಿಂಡಿಯೂ ಹಣ್ಣುಗಳೂ ಬರುತ್ತಿದ್ದುವು. ಆದರೆ ಅವೆಲ್ಲ ನನ್ನ ಸೇವಕರಿಗೆ

ಸಲ್ಲುತ್ತಿದ್ದುವು. ಏಕೆಂದರೆ, ನನ್ನ ಡೇರೆಯಲ್ಲಿ ಉಟಮಾಡುವ ಸಂದರ್ಭವೇ ಬರುತ್ತಿರಲಿಲ್ಲ.

ನವಾಬನ ಸೈನ್ಯದಲ್ಲಿ ಐದಾರು 'ರಾಜರು'ಗಳು, ಅಂದರೆ ವಿಗ್ರಹಾರಾಧಕರು, ಇದ್ದರು. ಅವರ ಊಟ ಹೇಗೆ ಇರುತ್ತೆ ಎಂಬುದರ ರುಚಿಯನ್ನು ನನಗೆ ತೋರಿಸುವಂತೆ ಅವರಿಗೆ ನವಾಬ ಹೇಳಿದ. ಅವರ ಊಟದ ರುಚಿ ನೋಡಿದೆ. ಆ ಊಟವೆಂದರೆ ಅನ್ನ ಮತ್ತು ತರಕಾರಿ ಮೆಣಸು, ಶುಂಠಿ ಮುಂತಾದ ಸಂಬಾರ ವಸ್ತುಗಳನ್ನು ಹೆಚ್ಚಾಗಿ ಹಾಕಿ ಮಾಡಿದ ಆ ಊಟ ನನಗೆ ಹಿಡಿಸಲೇ ಇಲ್ಲ.

ನಾನು ಇಲ್ಲಿ ಇರುವಾಗ ನವಾಬ ಸಿಡಿಮದ್ದಿನ ಕುಂಡವೊಂದನ್ನು ಸಿಡಿಸಿದ. ಆ ಶಬ್ದ ಕೇಳಿ ಸೊಲ್ಲಾಪುರದ ನಿವಾಸಿಗಳು ಹೆದರಿಬಿಟ್ಟರು. ಊರು ನಿರಾಯಾಸವಾಗಿ ವಶವಾಯಿತು. ಸೈನಿಕರಿಗೆ ಬಹಳ ನಿರಾಶೆಯಾಯಿತು. ಊರು ಶರಣಾಗತವಾದ ಕಾರಣ ಅವರಿಗೆ ಅದನ್ನು ಕೊಳ್ಳೆಹೊಡೆಯುವ ಅವಕಾಶ ತಪ್ಪಿಹೋಯಿತು.

ನನಗೆ ಬರಬೇಕಾದ ಹಣವನ್ನು ಆ ಕೂಡಲೇ ಕೊಡುವುದಾಗಿ ಷೈಸ್ತಾಖಾನ ಹೇಳಿದ. ಆದರೆ ಯುದ್ಧದ ಕಾರಣ ದಾರಿಯಲ್ಲಿ ಹಣವನ್ನು ಯಾರಾದರೂ ದೋಚಿಕೊಳ್ಳ ಬಹುದೆಂದು ಹೆದರಿ ನಾನು ಅದನ್ನು ದೌಲತಾಬಾದಿನಲ್ಲಿ ಪಡೆಯುವ ಬಗ್ಗೆ ವ್ಯವಸ್ಥೆ ಮಾಡಬೇಕೆಂದು ಕೇಳಿದೆ. ಇದಕ್ಕೆ ನವಾಬ ಒಪ್ಪಿದ. ನಾನು ದೌಲತಾಬಾದ್ ತಲುಪು ವುದಕ್ಕೆ ನಾಲ್ಕು ದಿನ ಮುನ್ನವೇ ಅಲ್ಲಿಯ ಖಜಾಂಚಿಗೆ ನವಾಬನಿಂದ ಅಪ್ಪಣೆ ಬಂದಿತ್ತು ನನಗೆ ಇಂತಿಷ್ಟು ಹಣ ಸಲ್ಲಿಸಬೇಕು ಎಂದು. ಇದರಿಂದ ಅರ್ಥವಾಗುತ್ತದೆ, ಇಂಡಿಯನರು ತಾವು ಕೊಂಡುಕೊಂಡ ಸರಕುಗಳಿಗೆ ಕೊಡಬೇಕಾದ ಹಣವನ್ನು ನಿಧಾನಮಾಡದೆ ಕೊಡಬೇಕೆಂಬ ಬಗ್ಗೆ ಎಷ್ಟು ಕಟ್ಟುನಿಟ್ಟು ಎಂಬ ವಿಚಾರ.

ಮೊಗಲ್ ಸಾಮ್ರಾಜ್ಯವನ್ನು ಕುರಿತು ಈ ಹಿಂದೆ ಬರೆದವರು, ಅಲ್ಲಿ ಪರದೇಶದ ವರಿಗೆ ದೊರಕುವ ವ್ಯಾಪಾರದ ಸರಕುಗಳು ಯಾವ್ಯಾವು ಎಂಬುದನ್ನು ವಿವರವಾಗಿ ಪಟ್ಟಿಮಾಡುವ ಮನಸ್ಸು ಮಾಡಲಿಲ್ಲ. ಈಗ ನಾನು ನನ್ನ ದೀರ್ಘ ಪ್ರವಾಸದಲ್ಲಿ ಸಂಗ್ರ ಹಿಸಿದ ವಿಷಯದ ಆಧಾರದ ಮೇಲೆ ಆ ಕೆಲಸವನ್ನು ಮಾಡಲಿದ್ದೇನೆ.

ಬಂಗಾಳ ರಾಜ್ಯದ ಒಂದು ಹಳ್ಳಿಯಾದ ಕಾಸಿಂಬಜಾರಿನಲ್ಲಿ ವರ್ಷಕ್ಕೆ ೨೨,೦೦೦ ಬೇಲುಗಳಷ್ಟು ರೇಷ್ಮೆ ದೊರೆಯುತ್ತದೆ. ಪ್ರತಿ ಬೇಲಿನ ತೂಕ ೧೦೦ ಲೀವ್ರ್‌ಗಳಷ್ಟು[1]. ಒಂದು ಲೀವ್ರ್‌ಗೆ ೧೬ ಔನ್ಸುಗಳು. ಹಿಂದೆ ಡಚ್ಚರು ಆರೇಳು ಸಾವಿರ ಬೇಲುಗಳಷ್ಟು ರೇಷ್ಮೆಯನ್ನು ಕೊಂಡು ಜಪಾನಿಗೊ ಹಾಲೆಂಡಿಗೊ ರಫ್ತುಮಾಡುತ್ತಿದ್ದರು. ಇನ್ನೂ ಹೆಚ್ಚು ರಫ್ತುಮಾಡಬೇಕೆಂಬುದು ಅವರ ಇಚ್ಛೆಯಾಗಿತ್ತು. ಆದರೆ ಟಾರ್ಟರಿ ವರ್ತ ಕರೂ ಮೊಗಲ್ ರಾಜ್ಯದ ವರ್ತಕರೂ ಇದಕ್ಕೆ ವಿರೋಧಮಾಡಿದರು. ಏಕೆಂದರೆ,

---

1ಲೀವ್ರ್ : ಇದು ಫ್ರೆಂಚ್ ನಾಣ್ಯವೂ ಹೌದು, ತೂಕವೂ ಹೌದು. ತೂಕವಾದರೆ ಒಂದು ಲೀವ್ರ್‌ಗೆ ೧೬ ಔನ್ಸುಗಳು.

ಅವರು ಕೊಂಡುಕೊಳ್ಳುತ್ತಿದ್ದುದು ಡಚ್ಚರು ಕೊಂಡುಕೊಳ್ಳುತ್ತಿದ್ದಷ್ಟನ್ನೇ. ಇನ್ನು ಉಳಿದದ್ದು ಗುಜರಾತ್ ರಾಜ್ಯಕ್ಕೂ ಹೆಚ್ಚಾಗಿ ಅಹಮದಾಬಾದ್ ಮತ್ತು ಸೂರತ್ತಿಗೂ ಬಟ್ಟೆ ನೇಯುವುದಕ್ಕೆ ಹೋಗುತ್ತಿತ್ತು. ಡಚ್ಚರು ತಾವು ಕೊಂಡುಕೊಂಡ ರೇಷ್ಮೆಯನ್ನು ಕಾಸಿಂಬಜಾರಿನಿಂದ ಗಂಗಾನದಿಯವರೆಗೆ ಹರಿಯುವ ಹದಿನೈದು ಹರಿದಾರಿ ದೂರದ ನಾಲೆಯ ಮೇಲೆ ದೋಣಿಗಳಲ್ಲಿ ಸಾಗಿಸಿ, ಅಲ್ಲಿಂದ ಗಂಗಾ ನದಿಯ ಮೇಲೆ ಹುಗ್ಲಿಗೆ ತೆಗೆದುಕೊಂಡು ಹೋಗಿ, ಹಡಗಿನಲ್ಲಿ ರವಾನಿಸುತ್ತಾರೆ.

ಸೂರತ್ತಿನಲ್ಲಿ ಪೂರ್ತ ರೇಷ್ಮೆ ಮತ್ತು ರೇಷ್ಮೆಯ ಜೊತೆಗೆ ಚಿನ್ನಬೆಳ್ಳಿಯ ಜರಿಗಳನ್ನು ಸೇರಿಸಿ ಜಮಖಾನಗಳನ್ನು ತಯಾರಿಸುತ್ತಾರೆ. ಆಗ್ರಾಕ್ಕೆ ೧೨ ಕೋಶ ದೂರದಲ್ಲಿರುವ ಫತೇಪುರದಲ್ಲಿ ಉಣ್ಣೆ ಜಮಖಾನಗಳನ್ನು ತಯಾರಿಸುತ್ತಾರೆ. ಅಲ್ಲದೆ ಚಿನ್ನ ಬೆಳ್ಳಿಯ ಸರಿಗೆ ಹಾಕಿದ ಸಾಟಿನ್ ಬಟ್ಟೆಯನ್ನೂ ಟಫೆಟ್ಟಾಗಳನ್ನೂ ತಯಾರಿಸುತ್ತಾರೆ. ಅಹಮದಾಬಾದಿನಲ್ಲಿ 'ಪಟೋಲೆ' (patole)[1] ಗಳನ್ನು ತಯಾರಿಸುತ್ತಾರೆ. ಈ ಪಟೋಲೆಗಳನ್ನು ರೇಷ್ಮೆಯಿಂದ ತಯಾರಿಸಿ ಅವುಗಳಿಗೆ ವಿಧವಿಧ ಹೂವು ಹಾಕಿರುತ್ತಾರೆ. ಈ ಪಟೋಲೆಗಳ ಬೆಲೆ ಒಂದೊಂದು ತುಂಡಿಗೆ ೮ ರಿಂದ ೪೦ ರೂಪಾಯಿಗಳು. ಡಚ್ಚರು ಈ ವ್ಯಾಪಾರದಲ್ಲಿ ಬಹಳ ಲಾಭ ಸಂಪಾದಿಸುತ್ತಾರೆ. ಡಚ್ ಕಂಪೆನಿಯ ಯಾರೂ ಸ್ವಂತ ವ್ಯಾಪಾರ ಮಾಡಕೂಡದು. ಏನು ವ್ಯಾಪಾರ ಮಾಡಿದರೂ ಕಂಪೆನಿಯೇ ಮಾಡಬೇಕು. ಈ ಪಟೋಲೆಗಳನ್ನು ಫಿಲಿಫೈನ್ಸ್, ಬೋರ್ನಿಯೋ, ಜಾವಾ, ಸುಮಾತ್ರಾ ಮುಂತಾದ ದೇಶಗಳಿಗೆ ರವಾನಿಸುತ್ತಾರೆ.

ಕಚ್ಚಾ ರೇಷ್ಮೆಯ ವಿಚಾರ ಹೇಳಬೇಕೆಂದರೆ, ಯಾವ ಕಚ್ಚಾ ರೇಷ್ಮೆಯೂ ಪಾಲೆಸ್ಟೈನ್ ರೇಷ್ಮೆಯಷ್ಟು ಬೆಳ್ಳಗಿಲ್ಲ. ಕಾಸಿಂಬಜಾರಿನ ರೇಷ್ಮೆ ಪರ್ಷಿಯಾ ಮತ್ತು ಸಿಸಿಲಿಯಾ ಕಚ್ಚಾ ರೇಷ್ಮೆಗಳಂತೆ ಹಳದಿ ಬಣ್ಣಕ್ಕಿರುತ್ತದೆ. ಆದರೆ ಕಾಸಿಂಬಜಾರಿನ ಜನರಿಗೆ ಅದನ್ನು ಪ್ಯಾಲೆಸ್ಟೈನಿನ ರೇಷ್ಮೆಯ ಹಾಗೆ ಬೆಳ್ಳಗೆಮಾಡುವ ವಿಧಾನ ಗೊತ್ತುಂಟು. ಬಾಳೆಯನ್ನು ಸುಟ್ಟು ಅದರ ಬೂದಿಯನ್ನು ನೀರಿನಲ್ಲಿ ಕದಡಿ ಅದರಲ್ಲಿ ತೊಳೆಯುತ್ತಾರೆ.

ಚೀಟಿಬಟ್ಟೆಗಳನ್ನು, ಅಂದರೆ ಬಣ್ಣ ಹಚ್ಚಿದ ಹತ್ತಿಬಟ್ಟೆಗಳನ್ನು ಗೋಲ್ಕೊಂಡಾ ರಾಜ್ಯದಲ್ಲಿ, ಅದರಲ್ಲಿಯೂ ಮಸುಲಿಪಟಮಿನ ಆಸುಬಾಸಿನಲ್ಲಿ ತಯಾರಿಸುತ್ತಾರೆ. ಈ ಚೀಟಿ ಬಟ್ಟೆಗಳನ್ನು 'ಕಲ್ಮೆಂದರ್' (Calmender) ಎಂದು ಕರೆಯುತ್ತಾರೆ. ಕಲ್ಮೆಂದರ್ ಎಂದರೆ

---

[1] ಪಟೋಲೆ : ಇದು ಕನರೀಸಿನ 'ಪಟ್ಟುದ'ಅಂದರೆ ರೇಷ್ಮೆಬಟ್ಟೆ ಎಂಬ ಪದದಿಂದ ಬಂದಿದೆ ಎಂದು ಹಾಬ್ಸನ್–ಜಾಬ್ಸನ್ ಎಂಬ ಶಬ್ದಕೋಶ (glossary) ತಿಳಿಸುತ್ತದೆ. ಜನಪದ ಸಾಹಿತ್ಯದಲ್ಲಿ 'ಪಟ್ಟೆಸೀರೆ' ಎಂಬ ಮಾತು ಆಗಾಗ್ಗೆ ಬರುವುದನ್ನು ಗಮನಿಸಿದರೆ, ಆ ಪದಕ್ಕೂ ಪಟೋಲೆ ಎಂಬ ಪದಕ್ಕೂ ಸಂಬಂಧವಿರುವಂತೆ ಕಾಣುತ್ತದೆ. ತಮಿಳಿನಲ್ಲಿ 'ಪಟ್ಟು' ಎಂದರೆ ರೇಷ್ಮೆ.

"ಕುಂಚದಿಂದ ಮಾಡಿದ್ದು" ಎಂದು ಅರ್ಥ[1]. ಆದರೆ ಚೀಟಿಬಟ್ಟೆಯ ತಯಾರಿಕೆ ಬಹಳ ಕಡಿಮೆ. ಅದನ್ನು ತಯಾರಿಸುವವರನ್ನೆಲ್ಲಾ ಒಟ್ಟಿಗೆ ಸೇರಿಸಿ ನೇಯಿಸಿದರೂ ಮೂರು ಬೇಲುಗಳಷ್ಟು ಬಟ್ಟೆ ಸಿಕ್ಕಿದರೆ ಹೆಚ್ಚು. ಮೊಗಲ್ ರಾಜ್ಯದಲ್ಲಿ ತಯಾರಿಸುವ ಚೀಟಿಬಟ್ಟೆ ಅಚ್ಚೊತ್ತಿ ಮಾಡಲ್ಪಟ್ಟದ್ದು. ಈ ಅಚ್ಚಿನ ಕಾರಣ ಮತ್ತು ಬಟ್ಟೆ ನವುರಾಗಿರುವ ಕಾರಣ ಇವು ತರಹ ತರಹವಾಗಿ ಅಂದಚಂದವಾಗಿ ಕಾಣುತ್ತವೆ. ಲಾಹೋರಿನಲ್ಲಿ ತಯಾರಾಗುವ ಚೀಟಿಬಟ್ಟೆ ಬಹಳ ಒರಟು. ಈ ಕಾರಣ ಬೆಲೆಯೂ ಬಹಳ ಕಡಿಮೆ. ಇದನ್ನು 'ಕೊರ್ಜಿ' (corge: ಥಾನು?) ಲೆಕ್ಕದಲ್ಲಿ ಮಾರುತ್ತಾರೆ. ಒಂದು ಕೊರ್ಜಿಯಲ್ಲಿ ಇಪ್ಪತ್ತು ತುಂಡು ಗಳಿರುತ್ತವೆ. ಬೆಲೆ ೧೬ ರಿಂದ ೩೦ರೂಪಾಯಿಗಳು. ಸಿರೋಂಜಿನಲ್ಲಿ ತಯಾರಾಗುವ ಚೀಟಿಬಟ್ಟೆಗಳ ಬೆಲೆ ಒಂದು ಕೊರ್ಜಿಗೆ ೨೦ ರಿಂದ ೬೦ರೂಪಾಯಿಗಳು.

ಚೀಟಿಬಟ್ಟೆಗಳನ್ನು ಹಾಸಿಗೆ ಮೇಲೆ ಹಾಸುವುದಕ್ಕೂ, ಮೇಜಿನ ಮೇಲೆ ಹಾಕುವ ಸುಫ್ರಾ (sufra)ಗಳಿಗೂ, ದಿಂಬಿನ ಚೀಲಗಳಿಗೂ, ಕರವಸ್ತ್ರಗಳಿಗೂ, ಗಂಡಸರು ಹೆಂಗಸರು ತೊಡುವ ನಡುವಂಗಿಗಳಿಗೂ ಉಪಯೋಗಿಸುತ್ತಾರೆ. ಪ್ರಕಾಶಮಾನವಾದ ಚೀಟಿಗಳನ್ನು ಬುರ್ಹಾನ್‌ಪುರದಲ್ಲಿ ತಯಾರಿಸುತ್ತಾರೆ. ಅವುಗಳಿಂದ ನಶ್ಯಹಾಕುವವರು ಉಪಯೋಗಿಸುವ ಕರವಸ್ತ್ರಗಳನ್ನು ತಯಾರಿಸುತ್ತಾರೆ.' ಅಲ್ಲದೆ ಇಡೀ ಏಷ್ಯಾದಲ್ಲಿ ಹೆಂಗಸರು ತಲೆಯ ಮೇಲೆ ಹಾಕಿಕೊಳ್ಳುವ ಒಂದು ತರಹ ಮುಸುಕಿಗೂ ಇದನ್ನು ಉಪಯೋಗಿಸುತ್ತಾರೆ. ಈ ಮುಸುಕಿನ ಬಟ್ಟೆಯನ್ನು 'ಒರ್ಮಿಸ್' (ormis) ಎಂದು ಕರೆಯುತ್ತಾರೆ.

ಬಣ್ಣಹಾಕದ ಹತ್ತಿಬಟ್ಟೆಯನ್ನು 'ಬಫ್ತಾಸ್' (baftas) ಎಂದು ಕರೆಯುತ್ತಾರೆ. ಇದನ್ನು ಆಗ್ರಾ ಮತ್ತು ಅಹಮದಾಬಾದ್‌ಗಳಿಗೆ ಸಾಗಿಸಿ, ಅಲ್ಲಿ ಅದಕ್ಕೆ ತರತರಹ ಬಣ್ಣಗಳನ್ನು ಹಾಕುತ್ತಾರೆ. ಆ ಊರುಗಳ ಬಳಿ ಬಣ್ಣಕ್ಕೆ ಬೇಕಾದ ನೀಲಿ ದೊರೆಯು ತ್ತದೆ. ಈ ಬಫ್ತಾಸ್ ಬಟ್ಟೆ ಒಂದು ತುಂಡಿಗೆ ಎರಡು ರೂಪಾಯಿನಿಂದ ಮೂವತ್ತು ನಲವತ್ತು ರೂಪಾಯಿಗಳವರೆಗೂ ಬೆಲೆಯಾಗುತ್ತದೆ. ಬಟ್ಟೆಯ ತೆಳುವು ಮತ್ತು ಹಾಕಿದ ಚಿನ್ನದ ಸರಿಗೆಯ ಮೇಲೆ ಬೆಲೆ ಹೆಚ್ಚು ಕಮ್ಮಿ ಆಗುತ್ತದೆ. ಈ ಬಟ್ಟೆಗಳನ್ನು ಒಂದು ತರಹ ನೀರಿನಲ್ಲಿ ತೇಲಿಬಿಟ್ಟು ಅಲೆಅಲೆಯಾಗಿ ಬಣ್ಣ ಬರುವಂತೆ ಮಾಡುತ್ತಾರೆ (like a waved camlet). ಇಂಥ ಬಟ್ಟೆಗಳ ಬೆಲೆ ಹೆಚ್ಚು.

ಎರಡರಿಂದ ಹನ್ನೆರಡು ರೂಪಾಯಿ ಬೆಲೆ ಬಾಳುವ ಬಟ್ಟೆಗಳನ್ನು ಮೇಲಿಂದೆಗೆ ರವಾನಿಸುತ್ತಾರೆ. ಅಲ್ಲಿಂದ ಅವುಗಳನ್ನು ಅಬಿಸೀನಿಯಾಕ್ಕೂ ಸಬಾ[2] ರಾಜ್ಯಕ್ಕೂ ರವಾನಿ

---

[1]ಕಲ್ಮೆಂದರ್ : ಕಲಂದಾರ್. ಕಲಂನಿಂದ, ಅಂದರೆ ಲೇಖನಿ ಅಥವಾ ಕುಂಚದಿಂದ ಮಾಡಿದ್ದು ಎಂದು ಅರ್ಥ.

[2]ಸಬಾ : ಅರೇಬಿಯಾ ನೈರುತ್ಯಭಾಗದ ಪ್ರಾಚೀನ ರಾಜ್ಯ.

ಸುತ್ತಾರೆ. ಅಲ್ಲಿ ಅವನ್ನು ಒಗೆಯಲು ಸಾಬೂನು ಉಪಯೋಗಿಸುವುದಿಲ್ಲ. ಅಲ್ಲಿಯ ಜನ ಸುಮ್ಮನೆ ನೀರಿನಲ್ಲಿ ಅವುಗಳನ್ನು ಅದ್ದಿ ಉಟ್ಟುಕೊಳ್ಳುತ್ತಾರೆ. ಹನ್ನೆರಡು ರೂಪಾಯಿಗಿಂತ ಹೆಚ್ಚು ಬೆಲೆಯ ಬಟ್ಟೆಗಳನ್ನು ಫಿಲಿಫೈನ್ಸ್, ಬೋರ್ನಿಯೋ, ಜಾವಾ, ಸುಮಾತ್ರಾ ಮುಂತಾದ ದ್ವೀಪಗಳಿಗೆ ರವಾನಿಸುತ್ತಾರೆ. ಆ ದ್ವೀಪಗಳ ಹೆಂಗಸರು ಅವುಗಳನ್ನು ಕತ್ತರಿಸದೆ ಹಾಗೆಯೇ ಉಡುತ್ತಾರೆ. ಸೊಂಟದ ಸುತ್ತ ಸುತ್ತಿ, ಕೊನೆಯ ದನ್ನು ಮೈಗೆ ರವಕೆಯಂತೆ ಸುತ್ತಿಕೊಳ್ಳುತ್ತಾರೆ.

ಬಿಳಿಯ ಹತ್ತಿಬಟ್ಟೆಗಳು ಆಗ್ರಾ, ಲಾಹೋರ್, ಬಂಗಾಳ, ಬರೋಡಾ, ಬ್ರೋಚ್ ಮುಂತಾದ ಕಡೆಗಳಿಂದ ಬರುತ್ತವೆ. ಕೋರಾ ಬಟ್ಟೆಯನ್ನು ರೆನೂನ್‌ಸರಿ ಮತ್ತು ಬ್ರೋಚ್‌ಗಳಿಗೆ ತಂದು, ಅದನ್ನು ವಿಶಾಲವಾದ ಬಯಲಿನಲ್ಲಿ ಹರಡಿ ಚೆಲುವೆಮಾಡು ತ್ತಾರೆ. ಆ ಸ್ಥಳಗಳಲ್ಲಿ ಬಟ್ಟೆಗಳನ್ನು ಚೆಲುವೆಮಾಡಲು ಇರುವ ಸೌಕರ್ಯವೆಂದರೆ ಅಲ್ಲಿ ಹೇರಳವಾಗಿ ಬೆಳೆಯುವ ನಿಂಬೆಹಣ್ಣು. ನಿಂಬೆಹಣ್ಣಿನ ರಸದಲ್ಲಿ ಚೆನ್ನಾಗಿ ನೆನಸಿದ ಹೊರತು ಬಟ್ಟೆಗಳು ಚೆನ್ನಾಗಿ ಚೆಲುವೆ ಆಗುವುದಿಲ್ಲ. ಆಗ್ರಾ, ಲಾಹೋರು ಮತ್ತು ಬಂಗಾಳದಿಂದ ಬರುವ ಹತ್ತಿಬಟ್ಟೆಗಳನ್ನು 'ಕೊರ್ಜೆ' ಲೆಕ್ಕದಲ್ಲಿ ಮಾರಾಟಮಾಡುತ್ತಾರೆ. ವರ್ತಕರು ಅಪೇಕ್ಷೆಪಟ್ಟಂತೆ ಅವನ್ನು ತಯಾರಿಸುತ್ತಾರೆ. ಬೆಲೆ ೧೬ ರೂಪಾಯಿಗಳಿಂದ ೩೦೦-೪೦೦ ರೂಪಾಯಿಗಳವರೆಗೆ ಇರುತ್ತದೆ. ರೆನೂನ್‌ಸರಿ ಮತ್ತು ಬ್ರೋಚ್‌ನಿಂದ ಬರುವ ಹತ್ತಿಬಟ್ಟೆಗಳು ಚೆಲುವೆಮಾಡುವ ಮುನ್ನ ೨೧ ಮೊಳ ಇದ್ದು, ಚೆಲುವೆ ಆದ ನಂತರ ೨೦ ಮೊಳ ಆಗುತ್ತವೆ. ಬರೋಡಾದ ಬಟ್ಟೆಗಳು ೨೦ ಮೊಳ ಇದ್ದು, ಚೆಲುವೆ ಮಾಡಿದಾಗ ೧೯ ೧/೨ ಮೊಳ ಆಗುತ್ತವೆ.

ಮೇಲೆ ಹೇಳಿದ ಬಟ್ಟೆಗಳ ಪನ್ನ ಚಿಕ್ಕದು. ದೊಡ್ಡ ಪನ್ನದ ಬಟ್ಟೆಗಳು, ಅಂದರೆ ಬಫ್ತಾಗಳ, ಅಗಲ ೧ ೧/೩ ಮೊಳ ಇದ್ದು, ಉದ್ದ ೨೦ ಮೊಳ ಇರುತ್ತವೆ. ಆದರೆ ತಯಾರುಮಾಡುವ ಸ್ಥಳಕ್ಕೇ ಹೋಗಿ ವರ್ತಕರು ತಮಗೆ ಬೇಕಾದಂತಹ ಇನ್ನೂ ದೊಡ್ಡ ಪನ್ನದ ಮತ್ತು ಹೆಚ್ಚು ನವುರಾದ ಬಟ್ಟೆಗಳನ್ನು ಹೇಳಿ ನೇಯಿಸಬಹುದು. ಇಂಥ ಬಟ್ಟೆ ಗಳಿಗೆ ಒಂದೊಂದು ತುಂಡಿಗೆ (piece) ೫೦೦ ಮಹಮೂದಿ ನಾಣ್ಯಗಳು ಆಗುತ್ತವೆ. ಒಮ್ಮೆ ಎರಡು ತುಂಡುಗಳಿಗೆ ೧೦೦೦ ಮಹಮೂದಿಗಳವರೆಗೂ ಬೆಲೆ ಕೊಟ್ಟದ್ದನ್ನು ನಾನೇ ನೋಡಿದ್ದೇನೆ. ಒಂದು ತುಂಡನ್ನು (ಥಾನನ್ನು) ಇಂಗ್ಲಿಷರೂ ಇನ್ನೊಂದನ್ನು ಡಚ್ಚರೂ ಕೊಂಡುಕೊಂಡರು. ಒಂದೊಂದು ತುಂಡು ೨೮ ಮೊಳ ಇತ್ತು.

ಇಂಡಿಯಾಕ್ಕೆ ಬಂದಿದ್ದ ಪರ್ಷಿಯಾ ರಾಯಭಾರಿ ಮಹಮ್ಮದ್ ಅಲಿ ಬೇಗ್ ಸ್ವದೇಶಕ್ಕೆ ಹಿಂದಿರುಗಿದಾಗ ತನ್ನ ದೊರೆಗೆ ಉಷ್ಟ್ರಪಕ್ಷಿಯ ಮೊಟ್ಟೆಯಷ್ಟು ಗಾತ್ರದ ತೆಂಗಿನ ಕಾಯಿ ಚಿಪ್ಪನ್ನು ಒಪ್ಪಿಸಿದ. ಆ ಚಿಪ್ಪನ್ನು ಮುತ್ತುರತ್ನಗಳಿಂದ ಅಲಂಕಾರಮಾಡ ಲಾಗಿತ್ತು. ಅದನ್ನು ತೆಗೆದು ಅದರೊಳಗಿದ್ದ ರುಮಾಲನ್ನು ಹೊರಗೆಳೆದಾಗ ಅದರ ಉದ್ದ ೬೦ ಮೊಳಗಳಷ್ಟಿತ್ತು! ಕೈಯಲ್ಲಿ ಬಟ್ಟೆ ಇದೆಯೋ ಇಲ್ಲವೋ ಎನ್ನುವಷ್ಟು ನವು

ರಾಗಿತ್ತು ಆ ಮಸ್ಲಿನ್ ಬಟ್ಟೆ. ನಾನು ಒಮ್ಮೆ ನನ್ನ ಪ್ರವಾಸಗಳಿಂದ ಹಿಂದಿರುಗುವಾಗ ಒಂದು ಲೀವ್ರ್‌ನಷ್ಟು ತೂಕದ ನೂಲಿಗೆ ೬೦೦ ಮಹಮೂದಿಗಳಷ್ಟು ದುಡ್ಡುಕೊಟ್ಟು ಅದನ್ನು ತೆಗೆದುಕೊಂಡು ಹೋದೆ. ನವುರಾಗಿ ಕಣ್ಣಿಗೆ ಕಾಣದಂತಿದ್ದ ಆ ನೂಲನ್ನು ನೋಡಿ ರಾಣಿ ಮೊದಲಾದ ಅಂತಃಪುರದ ಸ್ತ್ರೀಯರು ಆಚ್ಚರಿಪಟ್ಟರು.

ನೂತ ಮತ್ತು ನೂಲದ ಹತ್ತಿ ಬುರ್ಹಾನ್‌ಪುರ ಮತ್ತು ಗುಜರಾತ್ ಪ್ರಾಂತಗಳಿಂದ ಬರುತ್ತದೆ. ನೂಲದ ಹತ್ತಿಯನ್ನು ಯೂರೋಪಿಗೆ ರವಾನಿಸುವುದಿಲ್ಲ. ಏಕೆಂದರೆ, ಅದು ಹಡಗಿನಲ್ಲಿ ಹೆಚ್ಚು ಜಾಗ ತೆಗೆದುಕೊಳ್ಳುತ್ತದೆ. ಅದನ್ನು ಕೆಂಪುಸಮುದ್ರ, ಹೋರ್ಮಸ್, ಬಸ್ರೋರಗಳಿಗೂ ಫಿಲಿಫ್ಪೈನ್ ದ್ವೀಪಗಳಿಗೂ ರವಾನಿಸುತ್ತಾರೆ. ನೂತ ಹತ್ತಿಯನ್ನು ಇಂಗ್ಲಿಷ್ ಮತ್ತು ಡಚ್ ಕಂಪೆನಿಗಳು ಹೇರಳವಾಗಿ ಯೂರೋಪಿಗೆ ರಫ್ತುಮಾಡುತ್ತವೆ. ಆದರೆ ಅದು ಅಷ್ಟು ನವುರಾಗಿರುವುದಿಲ್ಲ. ಅವರು ರಫ್ತು ಮಾಡುವಂಥಾದ್ದರ ಬೆಲೆ ಒಂದು ಮಣಕ್ಕೆ ೧೫ ರಿಂದ ೫೦ ಮಹಮೂದಿಗಳಾಗಬಹುದು, ಅಷ್ಟೆ. ಅದನ್ನು ಮೋಂಬತ್ತಿಗಳ ಬತ್ತಿಗೂ, ಕಾಲುಚೀಲಗಳಿಗೂ, ರೇಷ್ಮೆಬಟ್ಟೆ ನೇಯುವಾಗ ಹಾಸಿಗೂ ಉಪಯೋಗಿಸುತ್ತಾರೆ. ಬಹು ನವುರಾದುದಕ್ಕೆ ಯೂರೋಪಿನಲ್ಲಿ ಗಿರಾಕಿ ಇಲ್ಲ.

ಮೊಗಲ್ ಸಾಮ್ರಾಜ್ಯದ ಹಲವಾರು ಕಡೆಗಳಲ್ಲಿ ನೀಲಿ ದೊರಕುತ್ತದೆ. ಒಂದೊಂದು ಕಡೆಯ ನೀಲಿ ಒಂದೊಂದು ತರಹ ಮತ್ತು ಬೇರೆ ಬೇರೆ ಬೆಲೆಯುಳ್ಳದ್ದು. ಆಗ್ರಾಕ್ಕೆ ಒಂದೆರಡು ದಿನದ ದಾರಿಯ ದೂರದಲ್ಲಿರುವ ಬಿಯಾನ, ಇಂದೋವ (Indoua= Indore : ಇಂದೂರ್ ?) ಮತ್ತು ಕೊರ್ಸಾ (ಖುರ್ಜಾ ?) ಕಡೆಗಳಿಂದ ಬರುವ ನೀಲಿ ಉತ್ಕೃಷ್ಟವಾದದ್ದು. ಸೂರತ್ತಿಗೆ ಎಂಟು ದಿನದ ದಾರಿಯ ದೂರದಲ್ಲಿರುವ ಷರ್ಕೆಜ್ ಎಂಬಲ್ಲಿಯೂ ಒಳ್ಳೆಯ ನೀಲಿ ದೊರೆಯುತ್ತದೆ. ಗೋಲ್ಕೊಂಡಾ ರಾಜ್ಯದಲ್ಲಿಯೂ ನೀಲಿ ಸಿಕ್ಕುತ್ತದೆ. ಸೂರತ್ತಿನಲ್ಲಿ ೪೨ ಸೇರಿನ ಒಂದು ಮಣ ನೀಲಿಗೆ ೧೫ ರಿಂದ ೨೦ ರೂಪಾಯಿಗಳಷ್ಟು ಬೆಲೆ. ಆಗ್ರಾ ಬಳಿಯ ನೀಲಿ ೬೦ ಸೇರಿನ ಮಣಕ್ಕೆ ೩೬ ರಿಂದ ೪೦ ರೂಪಾಯಿಗಳಷ್ಟಾಗುತ್ತದೆ. ಬಂಗಾಳದಲ್ಲಿ ಸಿಕ್ಕುವ ನೀಲಿಯನ್ನು ಡಚ್ ಕಂಪೆನಿ ಮಸುಲಿಪಟಂಗೆ ಸಾಗಿಸುತ್ತದೆ. ಆದರೆ ಅದೇ ನೀಲಿಯನ್ನು ಮತ್ತು ಬುರ್ಹಾನ್‌ಪುರ ಮತ್ತು ಅಹಮದಾಬಾದ್‌ಗಳ ನೀಲಿಯನ್ನು ಆಗ್ರಾ ನೀಲಿಗಿಂತ ಶೇಕಡ ೩೦ರಷ್ಟು ಕಡಿಮೆ ಬೆಲೆಯಲ್ಲಿ ಕೊಂಡುಕೊಳ್ಳಬಹುದು.

ನೀಲಿಯನ್ನು ಒಂದು ತರಹ ಗಿಡದಿಂದ ತಯಾರುಮಾಡುತ್ತಾರೆ. ನೀಲಿ ಬೀಜವನ್ನು ಮಳೆ ಬಿದ್ದ ಅನಂತರ ಬಿತ್ತುತ್ತಾರೆ. ವರ್ಷದಲ್ಲಿ ಮೂರು ಸಲ ಗಿಡವನ್ನು ಕಟಾವು ಮಾಡುತ್ತಾರೆ. ನೀಲಿಯ ಕಡ್ಡಿಗಳನ್ನು ಸುಣ್ಣದ ತಿಳಿ ಇರುವ ತೊಟ್ಟಿಗಳಲ್ಲಿ ನೆನೆಸಿ, ಆಮೇಲೆ ಆ ನೀರನ್ನು ಆವಿಯಾಗುವಂತೆ ಮಾಡಿ, ನೀಲಿ ತಯಾರಿಸುತ್ತಾರೆ. ನೀಲಿಯನ್ನು ತಯಾರಿಸುವವರು ಮೋಸಮಾಡದಂತೆ ನೋಡಿಕೊಳ್ಳಬೇಕು. ಯಾವುದೋ

ಒಂದು ವಸ್ತುವಿಗೆ ನೀಲಿಬಣ್ಣ ಕಟ್ಟಿ ಅದನ್ನು ನಿಜವಾದ ನೀಲಿಯೆಂಬುದಾಗಿ ಹೇಳಿ ಮಾರಬಹುದು. ಒಂದು ಕೋಳಿಮೊಟ್ಟೆಯನ್ನು ನೀಲಿಯ ಬಳಿ ಇಟ್ಟರೆ ಅದು ಒಂದು ಹಗಲಿನಲ್ಲಿ ನೀಲಿಯ ಬಣ್ಣಕ್ಕೆ ತಿರುಗಿಬಿಡುತ್ತದೆ. ಮೊಟ್ಟೆಯನ್ನು ಒಡೆದರೆ ಒಳ ಭಂಡಾರವೆಲ್ಲ ನೀಲಿಯ ಬಣ್ಣ ಆಗಿರುತ್ತದೆ. ಇಂಥ ಮೋಸಗಳು ಆಗದಂತೆ ನೋಡಿಕೊಳ್ಳಲು ಕಂಪೆನಿಯ ಗುಮಾಸ್ತರೂ (writers) ದಲ್ಲಾಳಿಗಳೂ ನೀಲಿಯನ್ನು ತಯಾರುಮಾಡುವ ಜಾಗದಲ್ಲಿ ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿರುತ್ತಾರೆ. ನೀಲಿಯನ್ನು ತಯಾರುಮಾಡುವ ಜನ ಕಣ್ಣುಗಳು ಮಾತ್ರ ಕಾಣುವಂತೆ ಮುಖವನ್ನು ಒತ್ತಾಗಿ ನೆಯ್ದ ಬಟ್ಟೆಯಿಂದ ಮುಚ್ಚಿಕೊಳ್ಳುತ್ತಾರೆ. ಪ್ರತಿ ಗಂಟೆಗೊಂದು ಸಲ ಹಾಲು ಕುಡಿಯುತ್ತಾರೆ. ಹೀಗೆ ಹಾಲು ಕುಡಿದರೆ ದೇಹಕ್ಕೆ ಒದಗುವ ನೀಲಿಯ ದೋಷವನ್ನು ಪರಿಹಾರಮಾಡಿಕೊಳ್ಳಬಹುದು.

ಪೆಟ್ಲುಪ್ಪು, ಆಗ್ರಾ ಮತ್ತು ಬಂಗಾಳದ ಒಂದು ಪಟ್ಟಣವಾದ ಪಟ್ನಾದಿಂದ ಹೇರಳವಾಗಿ ಬರುತ್ತದೆ. ಶೋಧಿಸಿದ ಪೆಟ್ಲುಪ್ಪಿನ ಬೆಲೆ ಶೋಧಿಸದ ಉಪ್ಪಿನ ಬೆಲೆಗಿಂತ ಮೂರರಷ್ಟು ಹೆಚ್ಚು. ಪಟ್ನಾಕ್ಕೆ ೧೪ ಹರಿದಾರಿ ದೂರದಲ್ಲಿರುವ ಚೂಪ್ರಾ (ಚಪ್ರಾ) ಎಂಬ ಊರಿನಲ್ಲಿ ಡಚ್ಚರು ಒಂದು ಕೋಠಿ ಇಟ್ಟಿದ್ದಾರೆ. ಅಲ್ಲಿ ಉಪ್ಪನ್ನು ಶೋಧಿಸಿ ನದಿಯ ಮೇಲೆ ಹುಗ್ಲಿಗೆ ಕಳುಹಿಸುತ್ತಾರೆ. ಡಚ್ಚರು ಹಾಲೆಂಡಿನಿಂದ ಉಗಿಹಂಡೆಗಳನ್ನು (boilers) ಆಮದುಮಾಡಿಕೊಂಡು ಶೋಧಿಸುವುದಕ್ಕೆ ಜನರನ್ನು ನೇಮಿಸಿ ಹಸನು ಉಪ್ಪನ್ನು ತಯಾರಿಸಲಾರಂಭಿಸಿದರು. ಆದರೆ ಆ ಕೆಲಸ ಯಶಸ್ವಿಯಾಗಲಿಲ್ಲ. ಏಕೆಂದರೆ, ಶೋಧಿಸಿದ ಉಪ್ಪಿನಿಂದ ಬರುವ ಹೆಚ್ಚಿಗೆ ಲಾಭವನ್ನು ತಮಗೆ ಕೊಡುತ್ತಿಲ್ಲವೆಂದು ಸ್ಥಳದ ಜನರು ಶೋಧಿಸುವುದಕ್ಕೆ ಅತ್ಯಾವಶ್ಯಕವಾಗಿ ಬೇಕಾದ ಹಾಲೊಡಕನ್ನು (whey) ಕೊಡಲು ಒಪ್ಪಲಿಲ್ಲ. ಹಾಲೊಡಕನ್ನು ಹಾಕದೆ ಉಪ್ಪು ಬೆಳ್ಳಗೂ ಸ್ವಚ್ಛವೂ ಆಗುವುದಿಲ್ಲ. ಒಂದು 'ಮಾಂಡ್' (ಮಣ) ಪೆಟ್ಲುಪ್ಪಿನ ಬೆಲೆ ಏಳು ಮಹಮೂದಿಗಳು.

ಏಲಕ್ಕಿ, ಶುಂಠಿ, ಮೆಣಸು, ಜಾಕಾಯಿ, ಜಾಪತ್ರೆ—ಇವು ನಮಗೆ ಗೊತ್ತಿರುವ ಸಂಬಾರವಸ್ತುಗಳು. ಮೊಟ್ಟಮೊದಲು ಏಲಕ್ಕಿ ಮತ್ತು ಶುಂಠಿಗಳ ಹೆಸರು ಹೇಳಿದ್ದೇಕೆಂದರೆ, ಏಲಕ್ಕಿಯನ್ನು ಬಿಜಾಪುರ ರಾಜ್ಯದಲ್ಲೂ, ಶುಂಠಿಯನ್ನು ಮೊಗಲ್ ರಾಜ್ಯದಲ್ಲೂ ಬೆಳೆಯುತ್ತಾರೆ. ಉಳಿದ ಸಂಬಾರ ವಸ್ತುಗಳನ್ನು ಸೂರತ್ ಬಂದರಿನ ಮೂಲಕ ಹೊರಗಡೆಯಿಂದ ಆಮದುಮಾಡುತ್ತಾರೆ.

ಏಲಕ್ಕಿ ಅತ್ಯುತ್ತಮವಾದ ಸಂಬಾರವಸ್ತು. ಆದರೆ ಇದು ಸಿಕ್ಕುವುದು ಅಪರೂಪ. ಮೇಲೆ ಹೇಳಿದ ಕಡೆ ಬೆಳೆಯುವ ಅಷ್ಟಿಷ್ಟು ಏಲಕ್ಕಿ ಏಷ್ಯಾದ ಶ್ರೀಮಂತರ ಊಟಕ್ಕಷ್ಟೆ ಸಾಕಾಗುವುದು. ೫೦೦ ಲೀವ್ರ್‌ಗಳಷ್ಟು ತೂಗುವ ಏಲಕ್ಕಿಯ ಬೆಲೆ ೧೦೦ ರಿಂದ ೧೧೦ ರಿಯಲ್‌ಗಳಷ್ಟು.[1]

---

[1]ರಿಯಲ್ : ಸ್ಪೈನ್ ದೇಶದಲ್ಲಿ ಹಿಂದೆ ಚಲಾವಣೆಯಲ್ಲಿದ್ದ ಬೆಳ್ಳಿಯ ನಾಣ್ಯ. ಪೀಸೋ (piso) ನಾಣ್ಯದ ೧/೮ ಭಾಗ,

ಶುಂಠಿಯನ್ನು ಅಹಮದಾಬಾದ್ ಸುತ್ತಮುತ್ತ ಹೇರಳವಾಗಿ ಬೆಳೆಯುತ್ತಾರೆ. ಸಿಹಿಮಾಡಿದ ಶುಂಠಿ ಪರದೇಶಗಳಿಗೆ ಎಷ್ಟು ರಫ್ತಾಗುತ್ತದೆ ಎಂದು ಹೇಳುವುದು ಕಷ್ಟ.

ಮೆಣಸಿನಲ್ಲಿ ಎರಡು ವಿಧ: ಒಂದು ಸಣ್ಣದು, ಇನ್ನೊಂದು ದೊಡ್ಡದು. ಇವನ್ನು ಸಣ್ಣ ಮೆಣಸು, ದೊಡ್ಡ ಮೆಣಸು ಎಂದು ಕರೆಯುತ್ತಾರೆ. ದೊಡ್ಡ ಮೆಣಸು ಮಲಬಾರಿನಿಂದ ಬರುತ್ತದೆ. ತುತ್ತುಕೋಡಿ ಮತ್ತು ಕ್ಯಾಲಿಕಟ್ ಪಟ್ಟಣಗಳಲ್ಲಿ ವ್ಯಾಪಾರವಾಗುತ್ತದೆ. ಸ್ವಲ್ಪ ಮೆಣಸು ಬಿಜಾಪುರ ರಾಜ್ಯದಿಂದಲೂ ಬರುತ್ತದೆ. ಇದನ್ನು ಆ ರಾಜ್ಯಕ್ಕೆ ಸೇರಿದ ರಾಜಾಪುರ ಎಂಬ ಸಣ್ಣ ಪಟ್ಟಣದಲ್ಲಿ ಮಾರಾಟಮಾಡುತ್ತಾರೆ. 'ಮಲಬಾರಿ'ಗಳಿಂದ ಮೆಣಸನ್ನು ಕೊಂಡು, ಅದಕ್ಕೆ ಹಣ ಕೊಡುವ ಬದಲು ಹತ್ತಿ, ಅಫೀಮು, ಸಿಂಧೂರ, ಪಾದರಸ—ಈ ಸರಕುಗಳನ್ನು ಕೊಟ್ಟು ಸಾಟಿಮಾಡಿಕೊಳ್ಳುತ್ತಾರೆ. ದೊಡ್ಡ ಮೆಣಸನ್ನೇ ಯುರೋಪಿಗೆ ರಫ್ತುಮಾಡುವುದು. ಬಂಟಾಂ,[1] ಅಚೀನ್[2] ಮತ್ತು ಪೂರ್ವದ ಇತರ ಕಡೆಗಳಿಂದ ಬರುವ ಸಣ್ಣ ಮೆಣಸನ್ನು ಏಷ್ಯಾದಿಂದ ಹೊರಗೆ ರವಾನಿಸುವುದಿಲ್ಲ. ಅದನ್ನು ಅಲ್ಲಿಯೇ ಹೆಚ್ಚಾಗಿ ಮಹಮ್ಮದೀಯರು ಉಪಯೋಗಿಸುತ್ತಾರೆ. ದೊಡ್ಡ ಮೆಣಸು ಸಣ್ಣ ಮೆಣಸಿಗಿಂತ ಹೆಚ್ಚು ಖಾರ. ಸೂರತ್ತಿಗೆ ಬರುವ ಸಣ್ಣಮೆಣಸಿನ ಬೆಲೆ ಒಂದು ಮೌಂಡ್‌ಗೆ (ಮಣಕ್ಕೆ) ೧೩ ಅಥವಾ ೧೪ ಮಹಮೂದಿಗಳು. ಇಷ್ಟು ಬೆಲೆ ಕೊಟ್ಟು ಕೊಂಡುಕೊಂಡು ಅದನ್ನು ಇಂಗ್ಲಿಷರು ಹೋರ್ಮಸ್, ಬಸ್ಸೋರ ಮತ್ತು ಕೆಂಪು ಸಮುದ್ರಗಳಿಗೆ ರವಾನಿಸುವುದನ್ನು ನಾನು ನೋಡಿದ್ದೇನೆ. ಡಚ್ಚರು ಮಲಬಾರಿನಿಂದ ಕೊಂಡುಕೊಳ್ಳುವ ದೊಡ್ಡ ಮೆಣಸಿನ ಬೆಲೆ ೫೦೦ ಲೀವ್ರ್‌ಗಳಿಗೆ ೩೮ ರಿಯಲ್‌ಗಳಷ್ಟು ಮಾತ್ರ. ಆದರೆ ಅದಕ್ಕೆ ಸಾಟಿಯಾಗಿ ಕೊಡುವ ಸರಕುಗಳ ಮೇಲೆ ನೂರಕ್ಕೆ ನೂರರಷ್ಟು ಲಾಭ ಸಂಪಾದಿಸುತ್ತಾರೆ.

ಜಾಕಾಯಿ, ಜಾಪತ್ರೆ, ಲವಂಗ ಮತ್ತು ದಾಲ್ಚಿನ್ನಿಗಳ ವ್ಯಾಪಾರ ಮಾತ್ರ ಡಚ್ಚರ ಕೈಯಲ್ಲಿ ಉಂಟು. ಜಾಕಾಯಿ, ಜಾಪತ್ರೆ ಮತ್ತು ಲವಂಗ ಮೊಲಕ್ಕಾ ದ್ವೀಪಗಳಿಂದಲೂ ದಾಲ್ಚಿನ್ನಿ ಸಿಲೋನ್ ದ್ವೀಪದಿಂದಲೂ ಬರುತ್ತದೆ.

ಜಾಕಾಯಿ ಗಿಡವನ್ನು ನೆಟ್ಟು ಬೆಳೆಸುವುದಿಲ್ಲವಂತೆ. ಹಣ್ಣಾದ ಜಾಕಾಯಿ ಬೀಜಗಳನ್ನು ಹಕ್ಕಿಗಳು ನುಂಗಿ ಜೀರ್ಣವಾಗದ ಬೀಜವನ್ನು ಪಿಚಕೆಯಲ್ಲಿ ಹೊರಗೆ ಹಾಕುತ್ತವೆಯಂತೆ. ಆ ಬೀಜ ಅದೇ ಆಗಿ ಹುಟ್ಟಿ ಮರವಾಗುತ್ತದೆಯಂತೆ. ದಿವ್ಯಪಕ್ಷಿ (Bird of Paradise) ಗಳಿಗೆ ಈ ಜಾಕಾಯಿ ಹಣ್ಣುಗಳು ಬಹಳ ಇಷ್ಟವಂತೆ.

---

[1]ಬಂಟಾಂ (Bantam)) : ಇಂಡೋನೇಷಿಯಾಕ್ಕೆ ಸೇರಿದ ಜಾವಾ ದ್ವೀಪದ ಒಂದು ಸಣ್ಣ ನಗರ.

[2]ಅಚೀನ್ (Achin/Achch/Atjeh) : ಇಂಡೋನೇಷಿಯಾಕ್ಕೆ ಸೇರಿದ ದಕ್ಷಿಣ ಸುಮಾತ್ರದ ಒಂದು ಪ್ರಾಂತ.

ಮತ್ತನ್ನುಂಟುಮಾಡುವ ಈ ಹಣ್ಣುಗಳನ್ನು ತಿಂದ ಆ ಪಕ್ಷಿಗಳು ಜ್ಞಾನತಪ್ಪಿ ಬಿದ್ದು ಬಿಡುತ್ತವೆಯೆಂತಲೂ, ಆಗ ಇರುವೆಗಳು ಆ ಹಕ್ಕಿಗಳ ಕಾಲುಗಳನ್ನು ತಿಂದುಬಿಡುತ್ತವೆ ಎಂತಲೂ, ಈ ಕಾರಣ ಕಾಲಿರುವ ದಿವ್ಯಪಕ್ಷಿಯನ್ನು ಯಾರು ನೋಡಿಲ್ಲವೆಂತಲೂ ಹೇಳುತ್ತಾರೆ. ಆದರೆ ಇದು ಅಷ್ಟು ಖಚಿತವಾದ ಸುದ್ದಿಯಲ್ಲ. ಕಾಲುಗಳಿದ್ದ ಮೂರು ನಾಲ್ಕು ಹಕ್ಕಿಗಳನ್ನು ನಾನೇ ನೋಡಿದ್ದೇನೆ. ಒಬ್ಬ ಫ್ರೆಂಚ್ ವರ್ತಕ ಅಲೆಪ್ಪೊದಿಂದ ಫ್ರಾನ್ಸಿನ ಹದಿಮೂರನೇ ಲೂಯಿ ದೊರೆಗೆ ಒಂದು ಹಕ್ಕಿಯನ್ನು ಕಳುಹಿಸಿದನೆಂದೂ ಆ ಸುಂದರ ಹಕ್ಕಿಯನ್ನು ನೋಡಿ ದೊರೆ ಬಹಳವಾಗಿ ಮೆಚ್ಚಿಕೊಂಡನೆಂದೂ ತಿಳಿದು ಬರುತ್ತದೆ.

ಸೂರತ್ತಿನಲ್ಲಿ ಡಚ್ಚರಿಗೆ ಮಾರಿದ ಲವಂಗ ಮತ್ತು ಜಾಕಾಯಿಗಳ ಬೆಲೆ ಎಷ್ಟೆಂದರೆ: ೪೦ ಸೇರಿನ ಮಾಂಡ್ (ಮಣ) ನನ್ನು ೩೪ ಲೀವ್ರ್‌ಗಳಿಗೆ ಸಮ. ಒಂದು ಲೀವ್ರ್ ೧೬ ಔನ್ಸ್ ತೂಕ. ಇಂಥ ಒಂದು ಮಾಂಡಿಗೆ ೧೦೩ ೧/೨ ಮಹಮೂದಿಗಳಷ್ಟು ಬೆಲೆ. ಒಂದು ಮಾಂಡ್ ಜಾಪತ್ರೆಗೆ ೧೫೭ ೧/೨ ಮಹಮೂದಿಗಳು. ಜಾಕಾಯಿಗೆ ೫೬ ೧/೨ ಮಹಮೂದಿಗಳು.

ದಾಲ್ಚಿನ್ನಿಯೆಲ್ಲಾ ಸಿಲೋನಿನಿಂದಲೇ ಬರುತ್ತದೆ. ದಾಲ್ಚಿನ್ನಿ ಮರದಲ್ಲಿ ಮೂರು ಪದರ ತೊಗಟೆಗಳಿರುತ್ತವೆ. ಮೇಲಿನ ಎರಡು ಪದರಗಳೇ ದಾಲ್ಚಿನ್ನಿ ಚಕ್ಕೆಯಾಗುವುದು. ಎರಡನೇ ಪದರದ ದಾಲ್ಚಿನ್ನಿ ಅತ್ಯುತ್ತಮವಾದುದ್ದು. ಡಚ್ಚರು ಸಿಲೋನಿನಲ್ಲಿ ದಾಲ್ಚಿನ್ನಿಯನ್ನು ಸುಲಭವಾಗಿ ಶೇಖರಿಸುವುದಕ್ಕೆ ಅಲ್ಲಿಯ ರಾಜ ಬಿಡುವುದಿಲ್ಲ. ಅವನ ಕಡೆಯ ಜನರು ತೊಗಟೆ ತೆಗೆಯುವವರಿಗೆ ತೊಂದರೆಕೊಡುತ್ತಾರೆ. ಇದನ್ನು ತಪ್ಪಿಸಲು ಡಚ್ಚರು ೧೫೦೦ ರಿಂದ ೧೬೦೦ ಜನ ಸಶಸ್ತ್ರ ಜನರನ್ನು ಕಾವಲಿಗೆ ನೇಮಿಸಿಕೊಂಡು, ಅವರನ್ನು ಸಾಕುವುದರ ಜೊತೆಗೆ ವರ್ಷವೆಲ್ಲ ಚಕ್ಕೆ ತೆಗೆಯುವ ಕೂಲಿಯವರನ್ನೂ ಸಾಕಬೇಕಾಗುತ್ತದೆ. ಈ ಕಾರಣಗಳಿಂದ ದಾಲ್ಚಿನ್ನಿಯ ಬೆಲೆ ದುಬಾರಿಯಾಗುತ್ತದೆ. ಆದರೆ ಪೋರ್ಚುಗೀಸರ ಕಾಲದಲ್ಲಿ ಈ ಖರ್ಚುವೆಚ್ಚಗಳು ಇರಲಿಲ್ಲ. ಅವರ ಕಾಲದಲ್ಲಿ ದಾಲ್ಚಿನ್ನಿ ತೊಗಟೆಯನ್ನೂ, ಮರದ ಕೊಂಬೆ-ರೆಂಬೆಗಳನ್ನೂ ದೊಡ್ಡ ದೊಡ್ಡ ಕಡಾಯಿಗಳಲ್ಲಿ ಹಾಕಿ ಕಾಯಿಸಿ, ಭಟ್ಟಿ ಇಳಿಸಿ ಗಟ್ಟಿಯಾದ ಭಟ್ಟಿಯನ್ನು ಧೂಪದಕಡ್ಡಿಗಳಾಗಿ ಮಾಡಿ ಅವನ್ನು ಹಬ್ಬಹರಿದಿನಗಳ ವೇಳೆ ಚರ್ಚುಗಳಲ್ಲಿ ಉಪಯೋಗಿಸುತ್ತಿದ್ದರು. ಅವನ್ನು ಹೊತ್ತಿಸಿದ ಕೂಡಲೇ ಚರ್ಚಿನಲ್ಲೆಲ್ಲಾ ದಾಲ್ಚಿನ್ನಿಯ ಪರಿಮಳ ಸೂಸುತಿತ್ತು. ಲಿಸ್ಬನ್‌ನಲ್ಲಿದ್ದ ರಾಜನ ಖಾಸಗಿ ಗುಡಿಯಲ್ಲಿ ಹಚ್ಚುವುದಕ್ಕೆ ಈ ಬತ್ತಿಗಳನ್ನು ಕಳುಹಿಸುತ್ತಿದ್ದರು. ದಾಲ್ಚಿನ್ನಿ ಪೋರ್ಚುಗೀಸರ ಕೈಯಲ್ಲಿದ್ದಾಗ ಇಂಗ್ಲಿಷರು ಮಾಂಡಿಗೆ (ಮಣಕ್ಕೆ) ೫೦ ಮಹಮೂದಿಗಳಂತೆ ಕೊಂಡುಕೊಳ್ಳುತ್ತಿದ್ದರು.

ಬಹುತೇಕ ಮೇಣದ ಅರಗು ಪೆಗುವಿನಿಂದ ಬರುತ್ತದೆ. ಬಂಗಾಳದಿಂದಲೂ ಬರುತ್ತದೆ. ಇದನ್ನು ಡಚ್ಚರು ಕೊಂಡು ಪರ್ಷಿಯಾಕ್ಕೆ ರವಾನಿಸುತ್ತಾರೆ, ಪರ್ಷಿಯಾದಲ್ಲಿ

ಈ ಮೇಣದ ಅರಗನ್ನು ಬಣ್ಣಗಳ ತಯಾರಿಕೆಗೆ ಉಪಯೋಗಿಸುತ್ತಾರೆ. ಬಣ್ಣ ಇಳಿಸಿದ ನಂತರ ಉಳಿಯುವ ಮೇಣದ ಅರಗನ್ನು ಕಡೆತದ ಯಂತ್ರ (lathe)ದಲ್ಲಿ ತಯಾರಾಗುವ ಆಟದ ಸಾಮಾನುಗಳಿಗೆ ಬಚ್ಚಣಿಗೆ ಹಾಕುವುದಕ್ಕೆ ಉಪಯೋಗಿಸುತ್ತಾರೆ. ಮುದ್ರೆ ಒತ್ತಲು ಬೇಕಾದ ಅರಗನ್ನು ತಯಾರಿಸುವುದಕ್ಕೂ ಇದನ್ನು ಉಪಯೋಗಿಸುತ್ತಾರೆ. ಬಣ್ಣ ಇಳಿಸಿದ ತರುವಾಯ ಉಳಿಯುವ ಮೇಣದ ಅರಗನ್ನು ತಯಾರಿಸುವ ಕಸಬಿನಿಂದ ಸೂರತ್ತಿನಲ್ಲಿ ಅನೇಕ ಹೆಂಗಸರು ಜೀವನ ಸಾಗಿಸುತ್ತಾರೆ. ಅದಕ್ಕೆ ಬೇಕಾದ ಬಣ್ಣ ಹಾಕಿ, ಕಡ್ಡಿಗಳ ಆಕಾರಕ್ಕೆ ಮಾಡುತ್ತಾರೆ. ಪ್ರತಿ ವರ್ಷ ಇಂಗ್ಲಿಷ್ ಮತ್ತು ಡಚ್ ಕಂಪನಿಗಳು ೧೫೦ ಪೆಟ್ಟಿಗೆಗಳಷ್ಟು ಅರಗನ್ನು ರವಾನಿಸುತ್ತಾರೆ. ಕಡ್ಡಿಅರಗಿನ ಬೆಲೆ ಒಂದು ಲೀವ್ರ್‌ಗೆ ೧೦ ಸೋಲ್‌ಗಳಿಗಿಂತ ಹೆಚ್ಚಿಲ್ಲ.

ಹಸಿ ಸಕ್ಕರೆ (ಬೆಲ್ಲ ?) ಬಂಗಾಳದಿಂದ ಹೇರಳವಾಗಿ ರಫ್ತಾಗುತ್ತದೆ. ಹುಗ್ಲಿ, ಪಟ್ನಾ, ಡಾಕ್ಕಾ ಮುಂತಾದ ಸ್ಥಳಗಳಲ್ಲಿ ಇದರ ವಹಿವಾಟು ಹೆಚ್ಚು. ನಾನು ಇಂಡಿಯಾಕ್ಕೆ ಕೊನೆಯ ಸಲ ಹೋದಾಗ ಬಂಗಾಳದ ತೀರಾ ಒಳಪ್ರದೇಶಗಳಿಗೆ ಹೋಗಿದ್ದೆ. ಅಲ್ಲಿ ಒಂದು ಸಂಗತಿ ಕೇಳಿದೆ. ಏನೆಂದರೆ, ಸಕ್ಕರೆ (ಬೆಲ್ಲ ?) ಯನ್ನು ಮೂವತ್ತು ವರ್ಷಗಳ ಕಾಲ ಇಟ್ಟರೆ ಅದು ಕಹಿ ಆಗುತ್ತದೆ ಎಂದು ; ಮತ್ತು ಅಷ್ಟು ಕಟುವಾದ ಕಹಿ ಬೇರೊಂದಿಲ್ಲ ಎಂದು.

ಸೂರತ್ತಿಗೂ ಆಗ್ರಾಕ್ಕೂ ಮಧ್ಯೆ ಇರುವ ದೊಡ್ಡ ವ್ಯಾಪಾರ ಸ್ಥಳವಾದ ಬುರ್ಹಾನ್‌ಪುರದಿಂದ ಅಫೀಮು ಬರುತ್ತದೆ. ಡಚ್ಚರು ಮೆಣಸನ್ನು ಕೊಟ್ಟು ಈ ಅಫೀಮನ್ನು ತೆಗೆದುಕೊಳ್ಳುತ್ತಾರೆ. ಆ ಊರಿನ ಸುತ್ತಮುತ್ತ ಹೇರಳವಾಗಿ ಹೊಗೆಸೊಪ್ಪು ಬೆಳೆಯುತ್ತಾರೆ. ಕೆಲವು ವರ್ಷಗಳಲ್ಲಿ ಇದು ಪೂರ್ತಾ ಕಟಾವು ಮಾಡಲು ಸಾಧ್ಯವಾಗದೆ ಹಾಗೆಯೇ ಬಿಟ್ಟುಬಿಡುವಷ್ಟರಮಟ್ಟಿಗೆ ಹೆಚ್ಚಾಗಿ ಬೆಳೆಯಾಗುತ್ತದೆ.

ಪರ್ಷಿಯಾದಲ್ಲಿಯಾಗಲಿ ಇಂಡಿಯಾದಲ್ಲಿಯಾಗಲಿ ಕಾಫಿ ಬೆಳೆಯುವುದಿಲ್ಲ. ಆದರೂ ಕೆಲವು ವೇಳೆ ಇಂಡಿಯಾದ ಹಡಗುಗಳು ಮೆಕ್ಕಾದಿಂದ ಬರುವಾಗ ಕಾಫಿಯನ್ನು ಭರ್ತಿಮಾಡಿಕೊಂಡು ಬರುವುದರಿಂದ ಅದರ ವಿಚಾರ ಇಲ್ಲಿ ಪ್ರಸ್ತಾಪಮಾಡಬೇಕಾಗಿದೆ. ಕಾಫಿಯ ವ್ಯಾಪಾರ ಹೆಚ್ಚಾಗಿ ಹೋರ್ಮಸ್ ಮತ್ತು ಬಸ್ಸೋರ(?)ಗಳಲ್ಲಿ ನಡೆಯುತ್ತದೆ. ಅಲ್ಲಿ ಅದನ್ನು ಡಚ್ಚರು ಮೋಖಾದಿಂದ ಹಿಂದಿರುಗುವ ಖಾಲಿ ಹಡಗುಗಳಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು ಭರ್ತಿಮಾಡಿಕೊಂಡು ಬರುತ್ತಾರೆ. ಏಕೆಂದರೆ ಇದಕ್ಕೆ ಒಳ್ಳೆ ಗಿರಾಕಿ ಉಂಟು. ಹೋರ್ಮಸ್‌ನಿಂದ ಕಾಫಿಯನ್ನು ಪರ್ಷಿಯಾಕ್ಕೂ ಮಹಾ ಟಾರ್ಟರಿಗೂ ರವಾನಿಸುತ್ತಾರೆ ; ಬಸ್ಸೋರದಿಂದ ಚಾಲ್ಡೀ (Chaldea)[1]

---

[1] ಚಾಲ್ಡೀ (Chaldea) ; ಪರ್ಷಿಯಾ ಖಾರಿ ಬಳಿಯ ಯೂಫ್ರೇಟೀಸ್ ಕಣಿವೆ ಭಾಗದಲ್ಲಿನ ಪ್ರಾಚೀನ ಪ್ರಾಂತ.

ಅರೇಬಿಯಾ, ಮೆಸಪಟೋಮಿಯಾ, ಮತ್ತು ತುರ್ಕಿ—ಈ ಕಡೆಗಳಿಗೆ ರವಾನಿಸಿ ಮಾರಾಟಮಾಡುತ್ತಾರೆ. ಇಂಡಿಯಾದಲ್ಲಿ ಮಾತ್ರ ಕಾಫಿಯು ಉಪಯೋಗ ಬಹಳ ಕಡಿಮೆ. ಅರೇಬಿಯಾ ಭಾಷೆಯಲ್ಲಿ 'ಕಾಫಿ' ಎಂದರೆ ಮದ್ಯ (wine) ಎಂದರ್ಥ. ಮೆಕ್ಕಾಕ್ಕೆ ಹೋಗುವ ದಾರಿಯಲ್ಲಿ ಎಂಟು ದಿನಗಳ ಪ್ರಯಾಣ ಮಾಡಿದರೆ ಸಿಕ್ಕುವ ಮೋಖಾ ಎಂಬ ಪ್ರದೇಶದಲ್ಲಿ ಈ ಕಾಫಿಯನ್ನು ಬೆಳೆಯುತ್ತಾರೆ. ಇದರ ಉಪಯೋಗ ಏನು ಎಂಬುದನ್ನು ಮೊದಲು ಅರಿತವನು ೧೨೦ ವರ್ಷಗಳ ಹಿಂದೆ ಇದ್ದ ಷೇಕ್ ಸ್ಸೈಯದ್ ಆಲಿ ಎಂಬುವನು. ಅವನಿಗಿಂತ ಹಿಂದಿನ ಯಾವ ಗ್ರಂಥಕರ್ತನೂ ಇದರ ವಿಚಾರ ಹೇಳಿಲ್ಲ[1].

ಆಗ್ರಾದಿಂದ ಸೂರತ್ತಿಗೆ ಬರುವ ಎಲ್ಲಾ ಸರಕುಗಳ ಮೇಲೆ ವಿಧಿಸುವ ಖರ್ಚು ವೆಚ್ಚಗಳು ಈ ರೀತಿ ಇವೆ : ಹುಂಡಿಗಳನ್ನು (bills of exchange) ರವಾನಿಸುವುದಕ್ಕೆ ಶೇ. ೫ ; ಸರಕುಗಳನ್ನು ಮೂಟೆ ಕಟ್ಟಿ ಮತ್ತು ನಿಗದಿಯಾದ ಸುಂಕ ತೆತ್ತು ಸಾಗಿಸಲು ಶೇ.೧೫ ರಿಂದ ೨೦ ; ಚಿನ್ನ ಮತ್ತು ಬೆಳ್ಳಿಗಳ ಮೇಲೆ, ಅದು ಪಾಳಿಯಾಗಿರಲಿ ಇಲ್ಲ ನಾಣ್ಯವಾಗಿರಲಿ, ಸೂರತ್ತಿಗೆ ಬರುವ ಮುನ್ನ ಶೇ ೨ ಕೊಡಬೇಕು. ಆದರೆ ಇದನ್ನು ತಪ್ಪಿಸಿಕೊಳ್ಳಲು ವರ್ತಕರು ಏನೇನೊ ಉಪಾಯಗಳನ್ನು ಅನುಸರಿಸುತ್ತಾರೆ. ಅಕಸ್ಮಾತ್ ಸಿಕ್ಕಿಬಿದ್ದರೂ ಕೊಡಬೇಕಾದ ದಂಡ ಒಂದಕ್ಕೆ ಎರಡರಷ್ಟು ಅಷ್ಟೆ. ಆಳರಸರೇನೊ ಕಳ್ಳತನದಲ್ಲಿ ಸಾಗಿಸುವ ಚಿನ್ನ ಬೆಳ್ಳಿಯನ್ನೆಲ್ಲಾ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಹೇಳುತ್ತಾರೆ. ಮಹಮ್ಮದೀಯ ಧರ್ಮದ ಪ್ರಕಾರ ಸುಂಕ ಸಾರಿಗೆ ಮತ್ತು ಬಡ್ಡಿ ವಸೂಲಿ ನಿಷೇಧವಾಗಿರುವುದರಿಂದ ಚಿನ್ನ ಬೆಳ್ಳಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವಿಲ್ಲವಾಗಿದೆ.

ವ್ಯಾಪಾರದಲ್ಲಿ ಆಗುವ ಮೋಸಗಳ ಬಗ್ಗೆ ಎರಡು ಮಾತು : ಸಾಮಾನ್ಯವಾಗಿ ರೇಷ್ಮೆ, ಹತ್ತಿಬಟ್ಟೆ, ಹತ್ತಿ ಮತ್ತು ನೀಲಿ—ಈ ಸರಕುಗಳಲ್ಲಿ ಮೋಸ ಆಗಬಹುದು. ಸಂಬಾರ ಮತ್ತು ಗಂದಿಗೆ ವಸ್ತುಗಳಲ್ಲಿ ಯಾವ ಮೋಸವೂ ಇಲ್ಲ. ಮೋಸವು ಸರಕುಗಳನ್ನು ತಯಾರಿಸಿದ ಕೆಲಸಗಾರರಿಂದ ಆಗಬಹುದು ; ಇಲ್ಲವೇ ದಲ್ಲಾಳಿಗಳಿಂದ ಅಥವಾ ಕೊಂಡುಕೊಳ್ಳುವವರಿಂದ ಆಗಬಹುದು. ಬಟ್ಟೆಗಳನ್ನು ಚೆಲುವೆಮಾಡುವಾಗಲೂ ಆಗಬಹುದು. ಹೆಚ್ಚು ನಿಂಬೆಹಣ್ಣುಗಳನ್ನು ಉಪಯೋಗಿಸಲಾರದೆ ಬಟ್ಟೆಗಳನ್ನು ಕಲ್ಲುಗಳ ಮೇಲೆ ಬಡಿದು ಚೆಲುವೆಮಾಡಲು ಪ್ರಯತ್ನಪಟ್ಟಾಗ ಬಟ್ಟೆಗಳು ಹಿಂಜಿ ಹಾಳಾಗಬಹುದು. ಅಂಥ ಬಟ್ಟೆಗಳನ್ನು ಬೇಲಿನಲ್ಲಿ (bale) ಸೇರಿಸದಂತೆ ನೋಡಿಕೊಳ್ಳಬೇಕು.

---

[1] ಕಾಫಿಯ ಬಗ್ಗೆ ಹೆಚ್ಚು ಮಾಹಿತಿ ಪಡೆಯಬೇಕೆನ್ನುವವರು, ಎಚ್. ಎಲ್. ನಾಗೇಗೌಡರ 'ಬೆಟ್ಟದಿಂದ ಬಟ್ಟಲಿಗೆ ಅಥವಾ ಕಾಫಿಯ ಕಥೆ' ಎಂಬ ಗ್ರಂಥ ನೋಡಿ.

ಈಸ್ಟ್ ಇಂಡೀಸ್‌ಗಳಲ್ಲಿ ವ್ಯಾಪಾರದ ಕಂಪೆನಿ (commercial company) ಸ್ಥಾಪಿಸಬೇಕೆನ್ನುವ ಯಾವ ರಾಷ್ಟ್ರವೇ ಆಗಲಿ, ಎಲ್ಲಕ್ಕಿಂತ ಮೊದಲು ಒಂದು ಸ್ಥಳ ಪಡೆಯಬೇಕು. ಕಂಪೆನಿಯ ಹಡಗುಗಳನ್ನು ದುರಸ್ತುಪಡಿಸಲು, ಮತ್ತು ಹಡಗುಗಳನ್ನು ಸಮುದ್ರದ ಮೇಲೆ ಕಳುಹಿಸಲು ಸಾಧ್ಯವಾಗದಾಗ ಸುರಕ್ಷಿತವಾಗಿ ಇಡಲು ಒಂದು ಸ್ಥಳ ಆವಶ್ಯಕ. ಇಂಥ ಬಂದರು ಇಲ್ಲದ ಕಾರಣವಾಗಿಯೇ ಇಂಗ್ಲಿಷ್ ಕಂಪನಿ ಸಾಕಷ್ಟು ಕೆಲಸ ಮಾಡಿಲ್ಲ. ಏಕೆಂದರೆ, ಒಂದು ಹಡಗನ್ನು ಎರಡು ವರ್ಷಗಳು ಉಪಯೋಗಿಸಿದ ಮೇಲೆ ದುರಸ್ತು ಮಾಡದೆ ಪುನಃ ಉಪಯೋಗಿಸಲು ಸಾಧ್ಯವಿಲ್ಲ. ಇದರ ಜೊತೆಗೆ ಯೂರೋಪಿನಿಂದ ಈಸ್ಟ್ ಇಂಡೀಸ್‌ಗೆ ಬಹಳ ದೂರ ಆಗುವುದರಿಂದ 'ಕೇಪ್ ಆಫ್ ಗುಡ್ ಹೋಪ್' ಭೂಶಿರವನ್ನು ಮುಟ್ಟಿದಾಗ ಅಲ್ಲಿ ನಾವಿಕರ ಉಪಯೋಗಕ್ಕೆ ಬೇಕಾದ ಸಿಹಿನೀರನ್ನೂ ಸಾಮಾನು ಸರಂಜಾಮುಗಳನ್ನೂ ಪಡೆಯಲು ಅಲ್ಲಿ ಒಂದು ಸ್ಥಳ ಪಡೆಯಬೇಕು. ಇಂಡೀಸಿನಿಂದ ಹಿಂದಿರುಗುವಾಗಲಂತೂ ಇದು ತುಂಬಾ ಆವಶ್ಯಕ. ಏಕೆಂದರೆ, ಭರ್ತಿಯಾದ ಹಡಗುಗಳಲ್ಲಿ ದೂರ ಪ್ರಯಾಣಕ್ಕೆ ಸಾಕಾಗುವಷ್ಟು ನೀರನ್ನು ದಾಸ್ತಾನುಮಾಡಿಕೊಳ್ಳಲು ಹಡಗಿನಲ್ಲಿ ಸ್ಥಳ ಇರುವುದಿಲ್ಲ. ಈ ಮಧ್ಯೆ ಡಚ್ಚರು ಕೇಪ್‌ನಲ್ಲೂ, ಇಂಗ್ಲಿಷರು ಸೆಂಟ್ ಹೆಲಿನಾದಲ್ಲೂ ಇಂಥ ಸ್ಥಳಗಳನ್ನು ಪಡೆದು ಅಲ್ಲಿ ಕೋಟೆ ಕಟ್ಟಿಕೊಂಡಿದ್ದಾರೆ.

ಇಂಡಿಯಾದಲ್ಲಿ ನೆಲೆಸಲು ಅನುಕೂಲವಾದ ಸ್ಥಳಗಳೆಂದರೆ ಸೂರತ್ ಮತ್ತು ದಿಯು. ದಿಯು ಪೋರ್ಚುಗೀಸರಿಗೆ ಸೇರಿದೆ. ಊರಿನಲ್ಲಿ ೪೦೦ ಮನೆಗಳಿವೆ. ವಾಸಕ್ಕೆ ಈ ಮನೆಗಳು ದೊರೆಯುತ್ತವೆ. ಇಲ್ಲಿಯ ನೆಲ ಅಷ್ಟು ಫಲವತ್ತಾಗಿಲ್ಲ; ಮತ್ತು ನಿವಾಸಿಗಳೆಲ್ಲ ಬಹಳ ಬಡವರು. ಆದರೆ ಒಳನಾಡಿನಲ್ಲಿ ದನಗಳು ಹೇರಳವಾಗಿ ಸಿಕುತ್ತವೆ. ಒಂದು ಎಮ್ಮೆ ಅಥವಾ ಹಸುವಿಗೆ ಕೇವಲ ಎರಡು ಪಿಯಸ್ಟರ್‌ಗಳು (Piaster : ಒಂದು ಪಿಯಸ್ಟರಿಗೆ ಆಗ ಸುಮಾರು ೯ ಶಿಲ್ಲಿಂಗ್‌ಗಳು) ಅಷ್ಟೆ. ಇಂಗ್ಲಿಷರೂ ಡಚ್ಚರೂ ಈ ದನಗಳನ್ನು ಊಟಕ್ಕೆ ಉಪಯೋಗಿಸಿಕೊಂಡು, ಹಡಗುಗಳಲ್ಲಿ ಹಾಕಿದ ಗ್ರಾಸವನ್ನು ಆಮೇಲೆ ಆವಶ್ಯಕ ಬಿದ್ದಾಗ ಉಪಯೋಗಿಸಿಕೊಳ್ಳುತ್ತಾರೆ. ಎಮ್ಮೆಯ ಮಾಂಸ ತಿಂದರೆ ರಕ್ತಭೇದಿ ಆಗುತ್ತದೆ ಎಂಬ ವಿಚಾರವನ್ನು ಅನುಭವದಿಂದ ಹೇಳಬೇಕಾಗಿದೆ. ಆದರೆ ಹಸುವಿನ ಮಾಂಸ ತಿಂದರೆ ಆ ತೊಂದರೆ ಇಲ್ಲ.

ದಿಯುವನ್ನು ಆಳುವ 'ರಾಜ' ತನ್ನ ಜೀವಮಾನ ಪರ್ಯಂತ ಅದನ್ನು ಆಳಿಕೊಂಡು ಹೋಗಬಹುದು. ಮೊಗಲ್ ಸಾಮ್ರಾಜ್ಯದಲ್ಲಿರುವ ಹೆಚ್ಚು ಕಡಿಮೆ ಎಲ್ಲಾ ರಾಜರುಗಳ ಸ್ಥಿತಿಯೇ ಹೀಗೆ. ದಿಯು ರಾಜ ಪೋರ್ಚುಗೀಸರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾನೆ. ಏಕೆಂದರೆ, ಅವರಿಗೆ ದವಸ ಧಾನ್ಯ, ಅಕ್ಕಿ, ತರಕಾರಿ ಮುಂತಾದ ಸಾಮಾನುಗಳನ್ನು ಮಾರಿ ಕೈತುಂಬ ಹಣ ಸಂಪಾದಿಸುತ್ತಾನೆ. ಇದೇ ಕಾರಣಕ್ಕಾಗಿ ಫ್ರೆಂಚರನ್ನು ಚೆನ್ನಾಗಿ ಕಾಣುತ್ತಾನೆ.

ಅನುಕೂಲವಾದ ಸ್ಥಳವನ್ನು ಆರಿಸಿಕೊಂಡ ಮೇಲೆ ಮಾಡಬೇಕಾದ ಕೆಲಸವೇ

ನೆಂದರೆ, ಎರಡು ಜನರನ್ನು ನೇಮಿಸಿಕೊಳ್ಳುವುದು. ಇವರು ಬುದ್ಧಿವಂತರೂ ನಂಬಿಕಸ್ತರೂ ಆಗಿರಬೇಕು. ದುಡ್ಡಿನ ಮುಖ ನೋಡಬಾರದು. ಈ ಇಬ್ಬರಲ್ಲಿ ಒಬ್ಬನನ್ನು ಡಚ್ಚರು ಕರೆಯುವಂತೆ 'ಕಮ್ಯಾಂಡರ್' ಆಗಿಯೂ, ಇನ್ನೊಬ್ಬನನ್ನು ದಲ್ಲಾಳಿ ಅಥವಾ ವರ್ತಕನನ್ನಾಗಿಯೂ ನೇಮಿಸಬೇಕು. ಕಮ್ಯಾಂಡರನಿಗೆ ಸಲಹೆ ಕೊಡಲು ಒಂದು ಸಲಹಾಮಂಡಲಿಯನ್ನು ನೇಮಿಸಬೇಕು. ದಲ್ಲಾಳಿ ಅಥವಾ ವರ್ತಕ ಸ್ಥಳದವನಾಗಿರಬೇಕು. ಅದರಲ್ಲಿಯೂ ಅವನು ವಿಗ್ರಹಾರಾಧಕ (ಹಿಂದೂ) ನಾಗಿರಬೇಕೇ ಹೊರತು ಮಹಮ್ಮದೀಯನಾಗಿರಬಾರದು. ಏಕೆಂದರೆ, ಯಾವ ಕೆಲಸದವರೊಡನೆ ವ್ಯವಹಾರ ನಡೆಸಬೇಕೋ ಅವರೆಲ್ಲ ವಿಗ್ರಹಾರಾಧಕರೇ ಆಗಿರುತ್ತಾರೆ. ಒಳ್ಳೆಯ ನಡತೆ ಮತ್ತು ಸಾಚಾತನ—ಇವು ಎಲ್ಲಕ್ಕಿಂತ ಹೆಚ್ಚಾಗಿರಬೇಕು. ಇವಿದ್ದರೆ ಜನರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಸಾಧ್ಯ. ಈ ಎರಡು ಹುದ್ದೆಗಳಿಗೆ ನೇಮಕವಾಗುವವರಿಗೆ ಬುದ್ಧಿವಂತಿಕೆ ಬಹಳ ಆವಶ್ಯಕ. ಇಲ್ಲದಿದ್ದರೆ ತಯಾರಾದ ಸರಕುಗಳಲ್ಲಿ ಆಗಿರಬಹುದಾದ ಮೋಸವನ್ನು ಕಂಡುಹಿಡಿಯಲು ಕಷ್ಟವಾಗುತ್ತದೆ. ಈ ಇಬ್ಬರು ಹುದ್ದೇದಾದರು ಒಟ್ಟಿಗೆ ಸೇರಿಕೊಂಡುಬಿಟ್ಟರಂತೂ ಕಂಪೆನಿಯನ್ನು ಮುಳುಗಿಸಿಬಿಡಬಹುದು. ಆದ್ದರಿಂದ ಇವರಿಬ್ಬರೂ ಒಟ್ಟಾಗದಂತೆ ಮತ್ತು ಇವರು ಒಟ್ಟಾಗಿಯೋ ಅಥವಾ ಬೇರೆ ಬೇರೆಯಾಗಿಯೋ ಸ್ಥಳದ ವರ್ತಕರೊಡನೆ ಮತ್ತು ದಲಾಳಿಗಳೊಡನೆ ಸೇರಿಕೊಳ್ಳದಂತೆ ನೋಡಿಕೊಳ್ಳಬೇಕು. ಇಂಗ್ಲಿಷರು ಹೀಗೆ ಮಾಡಿದ್ದಲ್ಲಿ ಅವರು ಇನ್ನೂ ಹೆಚ್ಚು ಲಾಭ ಸಂಪಾದಿಸಬಹುದಾಗಿತ್ತು. ಆದರೆ ಇಂಗ್ಲಿಷ್ ಅಧಿಕಾರಿಗಳಿಗೆ ಜಂಭ ಎಂದರೆ ಜಂಭ. ಲಂಡನ್‌ನಲ್ಲಿ ಉದ್ಯಮದಲ್ಲಿ ತರಪೇತಿ ಪಡೆದು, ಅಲ್ಲಿ ಯಾವ ಯಜಮಾನನ ಬಳಿ ತರಪೇತಿ ಪಡೆದನೋ ಆ ಯಜಮಾನ ನೀಡಿದ ಏಳು ವರ್ಷಗಳ ಕಾಲ ತರಪೇತಿ ಪಡೆದ ಅರ್ಹತಾಪತ್ರ ಕೈಯಲ್ಲಿದ್ದರೆ ಸಾಕು, ಯಾರೂ ತಮ್ಮನ್ನು ಅಲ್ಲಾಡಿಸಲು ಸಾಧ್ಯವಿಲ್ಲ ಎಂಬಂತೆ ಮೆರೆಯುತ್ತಾರೆ. ಹೇಗೇ ಮಾಡಲಿ, ಸ್ವಂತ ವ್ಯಾಪಾರ ಮಾಡುವುದನ್ನು ತಪ್ಪಿಸಲು ಸಾಧ್ಯವಾಗಿಲ್ಲ.

ಬಹಳ ಕಟ್ಟುನಿಟ್ಟಾದ ರೀತಿಯಲ್ಲಿ ವ್ಯಾಪಾರ-ಸಾಪಾರ ಮಾಡಬೇಕೆಂದು ಆಮ್‌ಸ್ಟರ್‌ಡಾಂನಲ್ಲಿ ಹಡಗು ಹೊರಡುವಾಗಲೇ ಹೇಳುತ್ತಾರೆ. ಹಡಗಿನ ಕ್ಯಾಪ್ಟನ್ ಮತ್ತು ಇತರರನ್ನೆಲ್ಲಾ ಸೇರಿಸಿ ಪಟ್ಟಣದ ಪೌರಾಧ್ಯಕ್ಷ [Burgomaster] ಎಲ್ಲರಿಂದ ಪ್ರಮಾಣಮಾಡಿಸುತ್ತಾನೆ, "ನಾನು ನನಗೆ ಬರುವ ಸಂಬಳದಲ್ಲಿಯೇ ಜೀವನ ಮಾಡುತ್ತೇನೆ ; ಸ್ವಂತ, ವ್ಯಾಪಾರ ಮಾಡುವುದಿಲ್ಲ" ಎಂದು. ಎರಡು ತಿಂಗಳ ಸಂಬಳ ಸಾಲದೆ ಮಾಡಿದ ಪ್ರಮಾಣವನ್ನು ಮರೆತು ಅವರು ಗುಟ್ಟಾಗಿ ಸ್ವಂತ ವ್ಯವಹಾರ ನಡೆಸಿ ತಮ್ಮ ಹೊಟ್ಟೆಪಾಡು ನೋಡಿಕೊಳ್ಳುತ್ತಾರೆ. ತಾವೇ ವ್ಯವಹಾರಮಾಡಿದರೆ ತಾನೆ ಪ್ರಮಾಣಮಾಡಿದ್ದು ತಪ್ಪಾಗುವುದು ! ತಾವು ಮಾಡದೆ, ತಮ್ಮ ಹೆಂಡತಿಯರ ಹೆಸರಿನಲ್ಲಿ ಮಾಡಿದರೆ ತಪ್ಪೇನು ? ಡಚ್ಚರು ಇಂಡಿಯಾಕ್ಕೆ ಬಂದಮೇಲೆ ಒಂದು ಒಳ್ಳೆ ನೌಕರಿ

ಹುಡುಕಿ ಅದನ್ನು ಪಡೆದಮೇಲೆ ಅದಷ್ಟು ಜಾಗ್ರತೆ ಮದುವೆಯಾಗಿಬಿಡುತ್ತಾರೆ. ಹೆಂಡತಿಯರ ಹೆಸರಿನಲ್ಲಿ ಗುಟ್ಟಾಗಿ ವ್ಯಾಪಾರ ನಡೆಸುತ್ತಾರೆ. ಹೆಂಡತಿಯರ ಹೆಸರಿನಲ್ಲಿ ನಡೆಸುವುದು ತಪ್ಪು, ನಿಜ. ಆದರೂ ನಡೆಯುತ್ತದೆ. ಒಮ್ಮೊಮ್ಮೆ ಸಿಕ್ಕಿಹಾಕಿಕೊಂಡು ತೊಂದರೆಯನ್ನೂ ಪಡಬೇಕಾಗುತ್ತದೆ. ನನಗೆ ತಿಳಿದ ಹಡಗೊಂದರ ಕ್ಯಾಪ್ಟನ್ ಕಂಪೆನಿಯ ಮುಖ್ಯಸ್ಥರ ಹೆಂಡತಿಯರೊಡನೆ ಆಟಆಡಲು ಹಿಂದು ಮುಂದೆ ನೋಡುತ್ತಿರಲಿಲ್ಲ. ಅಲ್ಲದೆ ಆತ ಶ್ರೀಮಂತನೂ ಆಗಿದ್ದ. ಇದನ್ನು ಸಹಿಲಾರದ ಕಂಪೆನಿ ಮುಖ್ಯಸ್ಥ ಒಮ್ಮೆ ಅವನ ಬಗ್ಗೆ ತಿರಸ್ಕಾರದ ಮಾತಾಡಿದ. ಇದರ ಸೇಡನ್ನು ತೀರಿಸಿಕೊಳ್ಳಬೇಕೆಂದು ಆತ ಪುಲಿಕಾಟ್‌ನಿಂದ ಬಟೇನಿಯಾಕ್ಕೆ ಹೊರಟ ತನ್ನ ಹಡಗಿನಲ್ಲಿ ಆತನ ಹೆಂಡತಿ ಗುಟ್ಟಾಗಿ ಇಟ್ಟ ಎಂಟು ಬೇಲು ಬಹು ಬೆಲೆಯಾದ ಬಟ್ಟೆಯನ್ನು ಬಟೇವಿಯಾಕ್ಕೆ ಹೋದಾಗ ಬಹಿರಂಗಪಡಿಸಿ ಆ ಬಟ್ಟೆಯನ್ನು ಮುಟ್ಟುಗೋಲು ಹಾಕಿಕೊಳ್ಳುವಂತೆ ಮಾಡಿದ.

ಇನ್ನೊಂದು ವಿಚಾರ ಗಮನದಲ್ಲಿಟ್ಟುಕೊಳ್ಳಬೇಕು. ಕಂಪೆನಿಯ ಕೆಳಗಿನ ಅಧಿಕಾರಿಗಳಿಗೆ ಹಂತಹಂತವಾಗಿ ಬಡ್ತಿ ಕೊಡಬೇಕು. ಸಬ್-ರೈಟರ್ ಆದವನು ಹಂತ ಹಂತವಾಗಿ ಬಡ್ತಿ ಪಡೆದು ಕಮ್ಯಾಂಡರ್ ಆಗಬೇಕು. ಹೀಗೆ ಮಾಡಿದರೆ ಅವರಿಗೆ ಚೆನ್ನಾಗಿ ಕೆಲಸಮಾಡಿ ಕೂಲಂಕಶವಾಗಿ ವಿಷಯಗಳನ್ನು ತಿಳಿದುಕೊಂಡು ಮುಂದೆ ಮುಂದೆ ಬಡ್ತಿ ಪಡೆಯಬೇಕು ಎಂಬ ಆಸೆಯಾಗುತ್ತದೆ. ಇತ್ತೀಚೆಗೆ ಹಾಲೆಂಡಿನ ಅನುಕೂಲಸ್ತರು ತಮ್ಮ ಮಕ್ಕಳನ್ನು ಇಂಡಿಯಾಕ್ಕೆ ಕಳುಹಿಸಿ ಒಳ್ಳೊಳ್ಳೆಯ ಹುದ್ದೆಗಳನ್ನು ಏತ್ತಿಕೊಳ್ಳುತ್ತಲೇ ಕೊಡಿಸಿ, ಗುಟ್ಟಾಗಿ ವ್ಯಾಪಾರಮಾಡಿ ಹೇರಳ ಲಾಭ ಸಂಪಾದಿಸುವಂತೆ ಮಾಡುತ್ತಿದ್ದಾರೆ. ಇವರು ಮುಖ್ಯ ಅಧಿಕಾರಿಗಳ ಸಂಪರ್ಕವನ್ನೋ ಅಥವಾ ದೇಶದಲ್ಲಿ ಬಹಳ ಪ್ರಭಾವ ಬೀರಬಲ್ಲ ಅವರ ಹೆಂಡತಿಯರ ಸಂಪರ್ಕವನ್ನೋ ಪಡೆದು ಮೇಲಿನ ಹುದ್ದೆಗಳಲ್ಲಿ ಕುಳಿತುಬಿಡುತ್ತಾರೆ. ಕೆಳಗಿನವ ಅಲ್ಲೇ ಇರುತ್ತಾನೆ. ಇದು ತಪ್ಪು.

ಮತ್ತೊಂದು ಮಾತು. ವ್ಯಾಪಾರದಲ್ಲಿ ತೊಡಗುವ ಕಂಪೆನಿಗಳು ಡಚ್ಚರು ಅನುಸರಿಸುವ ವಿಧಾನವನ್ನು ಅನುಸರಿಸಬೇಕು. ಡಚ್ಚರು ಏನು ಮಾಡುತ್ತಾರೆಂದರೆ, ಇಂಡಿಯಾದ ಹಡಗುಗಳಿಗೆ ಒಬ್ಬ ಕ್ಯಾಪ್ಟನನ್ನಾಗಲೀ ಅಥವಾ ಪೈಲಟನನ್ನಾಗಲೀ ನೇಮಿಸುವಾಗ ಹಂತಹಂತವಾಗಿ ಮೇಲೆ ಬಂದಿರುವವನನ್ನೇ ನೇಮಿಸುತ್ತಾರೆ. ಹಡಗಿನ ಹುಡುಗನಾದವನನ್ನು ಮೇಲೆ ಮೇಲೆ ತಂದು ಕ್ಯಾಪ್ಟನ್ ಮಾಡುತ್ತಾರೆ ಅವನಿಗೆ ಸಮುದ್ರಯಾನದ ವಿಚಾರಗಳೆಲ್ಲ ಚೆನ್ನಾಗಿ ಗೊತ್ತಿರುತ್ತವೆ. ಇಂಡಿಯಾದ ಸಮುದ್ರತೀರದ ಊರು ಕೇರಿಗಳ ವಿವರಗಳನ್ನೂ ತಿಳಿದುಕೊಂಡಿರುತ್ತಾನೆ. ಅಲ್ಲದೆ ಈ ಕ್ಯಾಪ್ಟನ್‌ಗಳು ಗಟ್ಟಿಮುಟ್ಟಾದವರಾಗುತ್ತಾರೆ. ಅವರು ಇಂಥದೇ ಊಟ ಬೇಕೆಂದು ಕೇಳುವುದಿಲ್ಲ ಉಪ್ಪಿನಕಾಯಿ ಹಾಕಿದ ಒಂದು ತುಣುಕು ಗಿಣ್ಣನ್ನೋ ಅಥವಾ ಒಂದು ಚೂರು ದನದ ಮಾಂಸವನ್ನೋ ತಿಂದು ನೀರು, ಕುಡಿದು ತೃಪ್ತರಾಗಿಬಿಡುತ್ತಾರೆ. ಇವರಿಂದ ಬೇರೆಯವರು ಕಲಿಯಬೇಕಾದ್ದು ಬೇಕಾದಷ್ಟಿದೆ.

ಆದರೆ ಬೇರೆ ರಾಷ್ಟ್ರಗಳು ಈ ರೀತಿ ಕ್ಯಾಪ್ಟರ್ಗಳನ್ನು ನೇಮಕಮಾಡುವುದಿಲ್ಲ. ಸಮುದ್ರವನ್ನೇ ನೋಡದವರನ್ನು ಹಡಗಿನ ಕ್ಯಾಪ್ಟರ್ಗಳನ್ನಾಗಿ ನೇಮಿಸಿ, ಅವರಿಗೆ ಮುಂದೆ ಮುಂದೆ ಬಡ್ತಿಗಳನ್ನು ಕೊಡುತ್ತಾ ಹೋಗುತ್ತಾರೆ. ಅವರು ಹಡಗಿನಲ್ಲಿ ಹೊರಟರೆಂದರೆ ಅವರಿಗೆ ಏನೇನೋ ಸಾಮಾನು ಸರಂಜಾಮುಗಳನ್ನು ಒದಗಿಸಬೇಕು. ಕುರಿ, ಕರು, ಕೋಳಿ, ಕೊಕ್ಕರೆ– ಇವನ್ನೆಲ್ಲಾ ಹಡಗಿನಲ್ಲಿ ಹಾಕಬೇಕು. ಈ ಪ್ರಾಣಿಗಳು ತುಂಬ ನೀರು ಕುಡಿಯುತ್ತವೆ., ಅಲ್ಲದೆ, ಹಿಕ್ಕೆ ಪಿಚಕೆ ಹಾಕಿ ಹಡಗನ್ನು ಗಲೀಜುಮಾಡುತ್ತವೆ. ವ್ಯಾಪಾರ ಮಾಡಲೇಬೇಕೆನ್ನುವ ಕಂಪೆನಿಗಳು ಖರ್ಚುವೆಚ್ಚಗಳ ಬಗ್ಗೆ ಬಿಗಿಯಾಗಿರಬೇಕು. ಇದರ ಬಗ್ಗೆ ಕಂಪೆನಿ ಡೆರೆಕ್ಟರ್ಗಳು ಮುಖ್ಯ ಗಮನಕೊಡಬೇಕು.

ಹರಳುಗಳಲ್ಲೆಲ್ಲಾ ವಜ್ರ ಬಹು ಪ್ರಶಸ್ತವಾದ ಹರಳು. ನನಗೆ ಅತ್ಯಾಸಕ್ತಿ ಇರುವ ವ್ಯಾಪಾರದ ಸರಕೆಂದರೆ ವಜ್ರವೇ. ಇದರ ಬಗ್ಗೆ ನಿಖರವಾದ ತಿಳುವಳಿಕೆ ಪಡೆಯಲು ನಾನು ಎಲ್ಲಾ ಗಣಿಗಳನ್ನೂ ಅದು ಸಿಕ್ಕುವ ಎರಡು ನದಿಗಳಲ್ಲಿ ಒಂದು ನದಿಯನ್ನೂ ನೋಡಬೇಕೆಂದು ತೀರ್ಮಾನಿಸಿದೆ. 'ಈ ಗಣಿಗಳಿಗೆ ಹೋಗುವುದು ಬಹಳ ಅಪಾಯ, ಹಾಗೆ ಹೀಗೆ' ಎಂದು ಏನೆಲ್ಲಾ ಹೆದರಿಸಿದರು. ಆ ಹೆದರಿಕೆಗಳಿಗೆ ಗಮನಕೊಡದೆ ಅವುಗಳನ್ನು ನೋಡಲು ತೀರ್ಮಾನಿಸಿದೆ. ನಾನು ನೋಡಿದ ನಾಲ್ಕು ಗಣಿಗಳಲ್ಲಿ ಮತ್ತು ಒಂದು ನದಿಯಲ್ಲಿ ಯಾವ ಹೆದರಿಕೆಯಾಗಲೀ ಅನಾಗರೀಕ ನಡತೆಗಳಾಗಲೀ ಇರಲಿಲ್ಲ. ಹೀಗಾಗಿ ಮೊಟ್ಟಮೊದಲು ಈ ಗಣಿಗಳಿಗೆ ದಾರಿ ತೋರಿಸಿದ ನಾನೇ ಫರಂಗಿಯವರಲ್ಲಿ ಮೊದಲಿಗನೆಂದು ಹೇಳಿಕೊಳ್ಳಬಹುದು.

ನಾನು ನೋಡಿದ ಮೊದಲ ಗಣಿ ಎಂದರೆ ರಾಮುಲ್ಕೋಟೆ. ಇದು ಬಿಜಾಪುರದ ರಾಜನ ರಾಜ್ಯದಲ್ಲಿ, ಕರ್ನಾಟಿಕ್ (Carnatic) ಪ್ರಾಂತ್ಯದಲ್ಲಿ ಇದೆ. ಗೋಲ್ಕೊಂಡಾದಿಂದ ಐದು ದಿನದ ದಾರಿ ; ಬಿಜಾಪುರದಿಂದ ಎಂಟೊಂಬತ್ತು ದಿನಗಳ ದಾರಿ. ಈ ಗಣಿಯನ್ನು ಪತ್ತೆಹಚ್ಚಿ ಇಲ್ಲಿಗೆ ೨೦೦ ವರ್ಷಗಳಾಗಿವೆಯೆಂದು ಇಲ್ಲಿಯ ಜನರಿಂದ ತಿಳಿದುಬಂತು. ವಜ್ರಗಳು ಇರುವ ಸ್ಥಳದ ಸುತ್ತಮುತ್ತ ಭೂಮಿ ಮರಳು ಮಣ್ಣಿನಿಂದಲೂ, ಬಂಡೆಗಳು ಹಾಗೂ ಕಾಡಿನಿಂದಲೂ ಕೂಡಿರುತ್ತದೆ. ಈ ಬಂಡೆಗಳಲ್ಲಿ ಅರ್ಧ ಬೆರಳಗಲದ, ಕೆಲವು ಕಡೆ ಒಂದು ಬೆರಳಗಲದ, ಎಳೆಗಳು (veins) ಇರುತ್ತವೆ. ತುದಿಯಲ್ಲಿ ಕೊಕ್ಕೆ ಇರುವ ಕಬ್ಬಿಣದ ಕಡ್ಡಿಯ ಸಹಾಯದಿಂದ ಎಳೆಗಳೊಳಗಿರುವ ಮರಳುಮಣ್ಣನ್ನು ಹೊರಗೆಳೆದು ಒಂದು ಪಾತ್ರೆಯಲ್ಲಿ ಹಾಕಿಕೊಂಡು ವಜ್ರಗಳಿವೆಯೆ ಎಂದು ನೋಡುತ್ತಾರೆ. ಮರಳುಮಣ್ಣಿನಲ್ಲೇ ವಜ್ರಗಳಿರುವುದು. ಈ ಎಳೆಗಳು ಯಾವಾಗಲೂ ನೇರವಾಗಿ ಇರುವುದಿಲ್ಲ. ಸೊಟ್ಟಸೊಟ್ಟನಾಗಿ ಇರಬಹುದು. ಆಗ ಬಂಡೆಯನ್ನೇ ಒಡೆಯಬೇಕಾಗುತ್ತದೆ. ಹೀಗೆ ತೆಗೆದ ಮರಳುಮಣ್ಣನ್ನು ಎರಡು ಮೂರು ಸಲ ತೊಳೆದು ವಜ್ರಗಳಿಗಾಗಿ ಹುಡುಕುತ್ತಾರೆ. ಈ ರಾಮುಲ್ಕೋಟೆ ಗಣಿಯಲ್ಲಿಯೇ ಬಹಳ ಶುದ್ಧವಾದ ಹಾಗೂ ಬಿಳುಪಾದ ವಜ್ರಗಳು ಸಿಕ್ಕುವುದು. ಆದರೆ ಬಂಡೆಗಳನ್ನು

ಸೀಳಲು ಬಲವಾದ ಪೆಟ್ಟುಗಳನ್ನು ಕೊಟ್ಟಾಗ ವಜ್ರಗಳು ಸೀಳಿಹೋಗುವ ಸಂಭವ ವುಂಟು.

ಈ ಗಣಿಯ ಬಳಿ ವಜ್ರಕ್ಕೆ ಸಾಣೆಹಿಡಿಯಲು ಬಹಳ ಜನರಿದ್ದಾರೆ. ಪ್ರತಿಯೊಬ್ಬನ ಬಳಿಯೂ ನಮ್ಮ ದೇಶದ ತಟ್ಟೆಗಳಷ್ಟು ದೊಡ್ಡದಾದ ಉಕ್ಕಿನ ಚಕ್ರ ಇರುತ್ತದೆ. ಒಂದೊಂದು ಕಲ್ಲನ್ನು ಈ ಚಕ್ರಕ್ಕೆ ಕೊಟ್ಟು, ಮೇಲೆ ಒಂದೇ ಸಮನೆ ನೀರು ಸುರಿಯುತ್ತಾ ಸಾಣೆಹಿಡಿಯುತ್ತಾರೆ. ಇವರು ನಮ್ಮಷ್ಟು ನಯವಾಗಿ ಸಾಣೆಹಿಡಿಯಲಾರರು. ಏಕೆಂದರೆ, ಇವರ ಚಕ್ರ ನಮ್ಮ ಚಕ್ರದಷ್ಟು ನಯವಾಗಿ ತಿರುಗುವುದಿಲ್ಲ.

ಗಣಿಗಳಲ್ಲಿಯ ವಹಿವಾಟು ನಂಬಿಕೆಯಿಂದಲೂ ಮುಚ್ಚುಮರೆ ಇಲ್ಲದೆಯೂ ನಡೆಯುತ್ತದೆ. ಕೊಂಡುಕೊಂಡ ವಜ್ರಗಳ ಮೇಲೆ ರಾಜನಿಗೆ ಶೇ. ೨ರಷ್ಟು ಸುಂಕ ಕೊಡಬೇಕು. ಇದರ ಜೊತೆಗೆ ರಾಜನಿಗೆ ಗಣಿಗಳನ್ನು ತೆಗೆಯುವ ವರ್ತಕರಿಂದ ರಾಜಾದಾಯವೂ ಬರುತ್ತದೆ. ಈ ವರ್ತಕರು ಅನುಭವವುಳ್ಳ ಗಣಿಕೆಲಸಗಾರರ ಸಹಾಯದಿಂದ ವಜ್ರಗಳು ಸಿಕ್ಕಬಹುದಾದ ಸ್ಥಳ ಯಾವುದೆಂದು ತಿಳಿದುಕೊಂಡು ಇನ್ನೂರು ದಾಪು ಸುತ್ತಳತೆಯಷ್ಟು ಜಾಗವನ್ನು ಪಡೆಯುತ್ತಾರೆ. ಐವತ್ತರಿಂದ ನೂರು ಜನ ಗಣಿ ಕೆಲಸಗಾರರನ್ನು ನೇಮಿಸಿಕೊಳ್ಳುತ್ತಾರೆ. ಅಗೆಯಲು ಪ್ರಾರಂಭಮಾಡಿದ ದಿನದಿಂದ ಆ ಕೆಲಸ ಮುಗಿಯುವವರೆಗೆ ಜನರನ್ನು ನೇಮಿಸಿಕೊಳ್ಳುತ್ತಾರೆ. ಐವತ್ತು ಜನರಿಗೆ ದಿನಕ್ಕೆ ಒಟ್ಟು ಎರಡು ಪಗೋಡಾ (ಆಗ್ಗೆ ಸುಮಾರು ೧೬ ಷಿಲ್ಲಿಂಗ್) ಕೂಲಿ ಕೊಡುತ್ತಾರೆ. ನೂರು ಜನರನ್ನು ನೇಮಿಸಿಕೊಂಡರೆ ಒಟ್ಟು ನಾಲ್ಕು ಪಗೋಡಾಗಳನ್ನು ಕೊಡುತ್ತಾರೆ. ಹೀಗೆ ಕೊಡುವ ಕಡಿಮೆ ಕೂಲಿಯಿಂದಾಗಿ ವರ್ಷಕ್ಕೆ ಒಬ್ಬ ಕೂಲಿಗೆ ಸಿಕ್ಕುವುದು ಮೂರು ಪಗೋಡಾಗಳು ಅಷ್ಟೆ. ಇಷ್ಟು ಕಡಿಮೆ ಕೂಲಿಯ ಕಾರಣ ಕೂಲಿಯವರು ಬೇರೆ ಉಪಾಯ ಹುಡುಕುತ್ತಾರೆ. ವಜ್ರಗಳನ್ನು ಹುಡುಕುವಾಗ ಆಗೊಂದು ಈಗೊಂದು ಸಣ್ಣಪುಟ್ಟ ವಜ್ರವನ್ನು ಕಾಣದಂತೆ ಬಚ್ಚಿಟ್ಟುಕೊಳ್ಳುತ್ತಾರೆ. ಬಚ್ಚಿಟ್ಟುಕೊಳ್ಳುವುದೂ ಅವರಿಗೆ ಕಷ್ಟ. ಏಕೆಂದರೆ, ಅವರ ಉಡುಪೆಂದರೆ ಕೇವಲ ಒಂದು ಲಂಗೋಟಿ. ಈ ಕಾರಣ ಹೇಗೋ ಮಾಡಿ ಬಾಯಿಗೆ ಹಾಕಿಕೊಂಡು ನುಂಗಿಬಿಡುತ್ತಾರೆ. ಒಬ್ಬ ಬಹಳ ಚತುರನಾದ ಕೆಲಸಗಾರ ಎರಡು ಕ್ಯಾರೆಟ್ ತೂಕದ ವಜ್ರವನ್ನು ತನ್ನ ಕಣ್ಣಿನ ಕುಣಿಕೆಯಲ್ಲಿಟ್ಟುಕೊಂಡಿದ್ದನಂತೆ. ಈ ಕಳ್ಳತನಗಳನ್ನು ತಡೆಯಲು ವರ್ತಕರು ಯಾವಾಗಲೂ ಹನ್ನೆರಡು ಹದಿಮೂರು ಜನ ಕಾವಲುಗಾರರನ್ನು ನೇಮಿಸಿಕೊಂಡಿರುತ್ತಾರೆ.

ವಜ್ರದ ವ್ಯಾಪಾರಮಾಡುವ ವರ್ತಕರು ತಮ್ಮ ತಮ್ಮ ಮನೆಗಳಲ್ಲಿಯೇ ಇರುತ್ತಾರೆ. ಗಣಿಮಾಲೀಕರಾದ ಬನಿಯರು ಪ್ರತಿ ದಿನ ಬೆಳಗ್ಗೆ ಹತ್ತು ಹನ್ನೊಂದು ಗಂಟೆ ಹೊತ್ತಿಗೆ ಸ್ನಾನ ಊಟಗಳನ್ನು ಮುಗಿಸಿಕೊಂಡು ಮನೆ ಬಿಟ್ಟು ತಮ್ಮ ಬಳಿ ಇರುವ ವಜ್ರಗಳನ್ನು ತಂದು ವರ್ತಕರಿಗೆ ತೋರಿಸುತ್ತಾರೆ. ವಜ್ರಗಳ ಗಂಟು ದೊಡ್ಡದಾಗಿದ್ದರೆ, ಅಂದರೆ ೨೦೦೦ ದಿಂದ ೧೫,೦೦೦ ಏಕಸ್‌ಗಳಷ್ಟು ಬೆಲೆಯುಳ್ಳ ಅನೇಕ ವಜ್ರಗಳಿದ್ದರೆ,

ಅವುಗಳನ್ನು ನಿಧಾನವಾಗಿ ಪರೀಕ್ಷೆಮಾಡಿಕೊಳ್ಳಲಿ ಎಂದು ವರ್ತಕರ ಬಳಿಯೇ ಬಿಟ್ಟು ಹೋಗುತ್ತಾರೆ. ಏಳೆಂಟು ದಿನಗಳ ತನಕ ಆ ವಜ್ರಗಳನ್ನು ಪರೀಕ್ಷೆಮಾಡಿ ಆ ಕೂಡಲೇ ಅವನ್ನು ವರ್ತಕನು ಹಿಂದಿರುಗಿಸುತ್ತಾನೆ. ಕೊಂಡುಕೊಳ್ಳುವುದಾದರೆ ಆ ಕೂಡಲೇ ಆ ಕೆಲಸ ಮುಗಿಸಿಬಿಡಬೇಕು. ಕೊಂಡುಕೊಳ್ಳದೇಹೋದರೆ ವಜ್ರಗಳ ಮಾಲೀಕ ಅವುಗಳನ್ನು ತನ್ನ ನಡುಪಟ್ಟಿಯಲ್ಲೋ ತಲೆಗೆ ಸುತ್ತಿದ ಬಟ್ಟೆಯಲ್ಲೋ ಕಟ್ಟಿಕೊಂಡು ಹೊರಟುಹೋಗುತ್ತಾನೆ. ಕೊಂಡುಕೊಂಡ ವರ್ತಕನು ನಂಬಿಕಸ್ಥನಾದರೆ, ವಜ್ರದ ಬೆಲೆಯನ್ನು ಸೂರತ್, ಆಗ್ರಾ, ಗೋಲ್ಕೊಂಡಾ ಅಥವಾ ಬಿಜಾಪುರಗಳಲ್ಲಿ ಹಣ ಪಾವತಿಮಾಡುವಂತೆ ಹುಂಡಿ ಪಡೆಯಬಹುದು.

ಈ ವರ್ತಕರ ಮತ್ತು ಬೇರೆಯವರ ಹತ್ತು ಹದಿನಾರು ವಯಸ್ಸಿನ ಚಿಕ್ಕ ಮಕ್ಕಳೂ ಊರಿನ ಮಧ್ಯೆ ಮೈದಾನದಲ್ಲಿ ಒಂದು ಮರದ ಕೆಳಗೆ ಸೇರಿ ವಜ್ರದ ವ್ಯಾಪಾರದಲ್ಲಿ ನಿರತ ರಾಗಿರುವುದನ್ನು ನೋಡಲು ಸಂತೋಷವಾಗುತ್ತದೆ. ಸೊಂಟದ ದಾರಕ್ಕೆ (ಉಡುದಾರಕ್ಕೆ) ಒಂದು ಕಡೆ ಪುಟ್ಟಚೀಲದಲ್ಲಿ ವಜ್ರಗಳನ್ನು ತೂಗುವ ಬಟ್ಟುಗಳನ್ನೂ ಇನ್ನೊಂದು ಕಡೆ ಐನೂರು ಆರುನೂರು ಪಗೋಡಾಗಳ ಹಣದಚೀಲವನ್ನೂ ತಗಲುಹಾಕಿ ಕೊಂಡು ವಜ್ರಗಳ ವ್ಯಾಪಾರಕ್ಕೆ ಸಿದ್ಧರಾಗಿ ಕುಳಿತುಕೊಳ್ಳುತ್ತಾರೆ. ಈ ಹುಡುಗರಿಗೆ ಒಬ್ಬ ಮುಖಂಡ ಇರುತ್ತಾನೆ. ವಜ್ರಗಳನ್ನು ಮಾರಾಟಮಾಡಲು ಬಂದವರು ತಾವು ತಂದ ವಜ್ರಗಳನ್ನು ಆ ಮುಖಂಡನ ಕಡೆಗೆ ಕೊಡುತ್ತಾರೆ. ವಜ್ರಗಳನ್ನು ಆತ ಪರೀಕ್ಷಿಸಿ ಪಕ್ಕದಲ್ಲಿ ಕುಳಿತಿರುವ ಇನ್ನೊಬ್ಬನ ಕೈಗೆ ಕೊಡುತ್ತಾನೆ. ಹೀಗೆ ವಜ್ರ ಕೈಯಿಂದ ಕೈಗೆ ಹೋಗಿ ಕೊನೆಗೆ ಮೊದಲು ಕುಳಿತವನ ಕೈಗೆ ಬರುತ್ತದೆ. ಯಾರೂ ತುಟಿಪಿಟಿಕ್ಕೆನ್ನು ವುದಿಲ್ಲ. ಮೊದಲನೆಯವ ವಜ್ರದ ಬೆಲೆ ಕೇಳುತ್ತಾನೆ. ಅಕಸ್ಮಾತ್ ದುಬಾರಿ ಬೆಲೆ ಕೊಟ್ಟರೆ ಆ ಹುಡುಗರ ಮುಖಂಡನೇ ಜವಾಬ್ದಾರ. ಹುಡುಗರು ಸಂಜೆಯಾಗುತ್ತಲೇ ಕೊಂಡುಕೊಂಡ ವಜ್ರಗಳನ್ನು ಲೆಕ್ಕಹಾಕಿ ಅವುಗಳ ಹೊಳಪು, ತೂಕ ಮತ್ತು ಶುದ್ಧತೆ ಗಳಿಗೆ ಅನುಸಾರವಾಗಿ ವಿಂಗಡಿಸುತ್ತಾರೆ. ಆಮೇಲೆ ಯಾವ ಬೆಲೆಯಲ್ಲಿ ಅವುಗಳನ್ನು ಮಾರಾಟಮಾಡಬೇಕೆಂಬುದನ್ನು ನಿರ್ಧರಿಸುತ್ತಾರೆ. ಒಟ್ಟನಲ್ಲಿ ಲಾಭ ಎಷ್ಟು ಬರಬಹು ದೆಂದು ಅಂದಾಜುಮಾಡುತ್ತಾರೆ. ಹೀಗೆ ಮಾಡಿದನಂತರ ಆ ವಜ್ರಗಳನ್ನು ದೊಡ್ಡ ವರ್ತಕರ ಬಳಿಗೆ ತೆಗೆದುಕೊಂಡುಹೋಗಿ ಅವರಿಗೆ ಕೊಡುತ್ತಾರೆ ಬಂದ ಲಾಭವನ್ನು ಹುಡುಗರೆಲ್ಲ ಸಮನಾಗಿ ಹಂಚಿಕೊಳ್ಳುತ್ತಾರೆ. ಮುಖಂಡನಿಗೆ ಮಾತ್ರ ಶೇಕಡ ೧/೪ ಭಾಗ ಹೆಚ್ಚು ಕೊಡುತ್ತಾರೆ.

ಚಿಕ್ಕ ಹುಡುಗರಾದರೂ ಇವರು ವ್ಯಾಪಾರದಲ್ಲಿ ಬಹಳ ಚಾಕಚಕ್ಯತೆಯುಳ್ಳ ವರು. ಹತ್ತು ಹನ್ನೆರಡು ವಜ್ರಗಳನ್ನು ಅವರ ಕೈಗೆ ಕೊಟ್ಟರೆ ನಾಲ್ಕೈದು ವಜ್ರಗಳ ಲ್ಲಾದರೂ ದೋಷ ತೋರಿಸದೆ ಬಿಡುವುದಿಲ್ಲ.

ಇಂಡಿಯನರು ಪರದೇಶೀಯರಿಗೆ, ಅದರಲ್ಲಿಯೂ ಫರಂಗಿಯವರಿಗೆ, ಬಹಳ

ಮರ್ಯಾದೆ ತೋರಿಸುತ್ತಾರೆ. ನಾನು ಗಣಿಗೆ ಹೋದಕೂಡಲೇ ಸ್ಥಳದ ಅಧಿಕಾರಿಯನ್ನು ನೋಡಲು ಹೋದೆ ಈ ಅಧಿಕಾರಿ ಬಿಜಾಪುರ ರಾಜನ ಪರವಾಗಿ ಈ ಪ್ರಾಂತದ ಆಡಳಿತವನ್ನು ನೋಡಿಕೊಳ್ಳುತ್ತಾನೆ. ಈ ಅಧಿಕಾರಿ ಮಹಮ್ಮದೀಯ. ಈತ ನನ್ನನ್ನು ಕಂಡಾಗ ಅಪ್ಪಿಕೊಂಡು ನನ್ನ ಆಗಮನಕ್ಕಾಗಿ ಸಂತೋಷವನ್ನು ಸೂಚಿಸಿದ. ನನ್ನ ಬಳಿ ಚಿನ್ನದ ಪಗೋಡಾಗಳಿದ್ದ ಬಗ್ಗೆ ಆತನಿಗೆ ಅನುಮಾನವೇ ಇರಲಿಲ್ಲ. ಹಣ ಮುಂತಾದುವುಗಳನ್ನು ನಾನು ಇಳಿದುಕೊಂಡಿದ್ದ ಮನೆಯಲ್ಲಿ ಇಡಬಹುದೆಂದೂ, ಯಾವುದಕ್ಕೂ ಲೋಪಬರುವುದಿಲ್ಲವೆಂದೂ, ಅದರ ರಕ್ಷಣೆ ತನ್ನ ಜವಾಬ್ದಾರಿ ಎಂದೂ ಹೇಳಿದ. ನಾನು ಹಲವು ಜನ ಸೇವಕರನ್ನು ಕರೆದುಕೊಂಡು ಹೋಗಿದ್ದೆ. ಇವರ ಜೊತೆಗೆ ಆವನು ಇನ್ನೂ ನಾಲ್ವರು ಸೇವಕರನ್ನು ಒದಗಿಸಿ, ಅವರು ನನ್ನ ಬಳಿ ಇದ್ದ ಚಿನ್ನವನ್ನು ಕಣ್ಣಿನಲ್ಲಿ ಕಣ್ಣಿಟ್ಟು ಕಾಯಬೇಕೆಂದೂ, ನಾನು ಹೇಳಿದ ಕೆಲಸ ಮಾಡಬೇಕೆಂದೂ ಆಜ್ಞಾಪಿಸಿದ. ಆತ ನನಗೆ ಇನ್ನೊಮ್ಮೆ ಹೇಳಿಕಳುಹಿಸಿ ಯಾವುದಕ್ಕೂ ಯೋಚನೆ ಮಾಡಬೇಕಾಗಿಲ್ಲವೆಂದೂ, ಸುಖವಾಗಿ ಕುಡಿದು ತಿಂದು ಹಾಯಾಗಿ ಮಲಗಿ ವಿಶ್ರಾಂತಿ ಪಡೆಯಬೇಕೆಂದೂ, ಆರೋಗ್ಯದ ಕಡೆ ಗಮನಕೊಡಬೇಕೆಂದೂ ಹೇಳಿದ. ಇಷ್ಟು ಹೇಳಿ, ಆ ತರುವಾಯ ರಾಜನಿಗೆ ಸಲ್ಲಬೇಕಾದ ಶೇಕಡ ೨ರ ರಾಜಾಯದ ಬಗ್ಗೆ ಮೋಸಗೀಸ ಮಾಡಕೂಡದೆಂದೂ, ಗಣಿಗೆ ಬಂದ ಕೆಲವು ಮಹಮ್ಮದೀಯರು ವರ್ತಕರೊಡನೆಯೂ ದಲ್ಲಾಳಿಗಳೊಡನೆಯೂ ಶಾಮೀಲಾಗಿ ರಾಜನಿಗೆ ಸಲ್ಲಬೇಕಾದ ರಾಜಾದಾಯಕ್ಕೆ ಮೋಸಮಾಡುತ್ತಿದ್ದಾರೆಂದೂ, ೫೦,೦೦೦ ಪಗೋಡಾಗಳಷ್ಟು ಬಂಡವಾಳ ಹಾಕಿ ಕೇವಲ ೧೦,೦೦೦ ಎಂದು ಸುಳ್ಳು ಹೇಳಿ ತಪ್ಪಿಸಿಕೊಳ್ಳುತ್ತಿದ್ದಾರೆಂದೂ, ನಾನು ಹಾಗೆ ಮಾಡಕೂಡದೆಂದೂ ಆತ ಹೇಳಿದ.

ನಾನು ನನ್ನ ವ್ಯಾಪಾರ ಶುರುಮಾಡಿದೆ. ಇಲ್ಲಿ ಗೋಲ್ಕೊಂಡಾಕ್ಕಿಂತ ಬೆಲೆ ಶೇಕಡ ೨೦ ಕಮ್ಮಿ. ಹೀಗಾಗಿ ಹೇರಳವಾದ ಲಾಭ ಬರುವಂತೆ ಕಂಡಿತು. ಜೊತೆಗೆ ಒಮ್ಮೊಮ್ಮೆ ದಪ್ಪ ದಪ್ಪ ಹರಳುಗಳು ಸಿಕ್ಕುವ ಸಂಭವವಿತ್ತು.

ಒಂದು ದಿನ ಸಂಜೆಯ ಹೊತ್ತು ಒಬ್ಬ ಬನಿಯ ಗೌರವದಿಂದ ಬಂದು ನನ್ನ ಬಳಿ ಕುಳಿತ. ಆತ ಸೊಂಟಕ್ಕೆ ಒಂದು ದಟ್ಟಿ ಕಟ್ಟಿಕೊಂಡಿದ್ದ ; ತಲೆಗೆ ಒಂದು ತುಂಡು ಬಟ್ಟೆ ಸುತ್ತಿಕೊಂಡಿದ್ದ. ಈ ದೇಶದಲ್ಲಿ ಬಟ್ಟೆಬರೆಗಳಿಗೆ ಅಷ್ಟೇನು ಗಮನಕೊಡುವುದಿಲ್ಲ. ಆದರೆ ಒಂದು ಚೂರು ಬಟ್ಟೆ ಉಟ್ಟು ದಟ್ಟದರಿದ್ರನಂತೆ ಕಾಣಿಸುವವನ ಬಳಿ ವಜ್ರಗಳ ಪೊಟ್ಟಣವೇ ಇರಬಹುದು. ನಾನು ಬನಿಯನನ್ನು ಮರ್ಯಾದೆಯಿಂದ ಕಂಡೆ. ಕೊಂಚ ಹೊತ್ತಿನ ತರುವಾಯ ಆತ ನನ್ನ ದುಭಾಷಿಯ ಮೂಲಕ ನನಗೆ ಮಾಣಿಕ್ಯಗಳೇನಾದರೂ ಬೇಕಾಗಿದೆಯೆ ಎಂದು ಕೇಳಿದ. ಹೀಗೆ ಕೇಳಿ ಆತ ಸೊಂಟದಿಂದ ಚಿಂದಿಬಟ್ಟೆಯಲ್ಲಿ ಸುತ್ತಿದ್ದ ಚಿಕ್ಕ ಚಿಕ್ಕ ಗಂಟುಗಳನ್ನು ಹೊರಗೆಳೆದ. ಅವುಗಳಲ್ಲಿ ಮಾಣಿಕ್ಯದ ಹರಳು ಹುದಿದಿದ್ದ ಉಂಗುರಗಳನ್ನು ಕಟ್ಟಿದ್ದ. ಆ ಉಂಗುರಗಳನ್ನು ನೋಡಿದ ಮೇಲೆ

ನನಗೆ ದೊಡ್ಡ ಹರಳಿನ ಉಂಗುರಗಳು ಬೇಕು ಎಂದು ಹೇಳಿದೆ. ಆಗ ನನಗೆ ಇಸ್ಪಹಾನಿನ (ಪರ್ಷಿಯಾದ ರಾಜಧಾನಿ) ಹೆಂಗಸೊಬ್ಬಳಿಗೆ ಮಾಣಿಕ್ಯದ ಹರಳಿನ ಉಂಗುರ ತಂದು ಕೊಡುತ್ತೇನೆಂದು ಹೇಳಿದ್ದು ಜ್ಞಾಪಕಕ್ಕೆ ಬಂದಿತು. ಬನಿಯ ತೋರಿಸಿದ ಉಂಗುರಗಳಲ್ಲಿ ಒಂದನ್ನು ೪೦೦ ಫ್ರಾಂಕುಗಳಷ್ಟು ಬೆಲೆಗೆ ಕೊಂಡುಕೊಂಡೆ. ವಾಸ್ತವವಾಗಿ ನೂರು ಫ್ರಾಂಕ್‌ಗಳನ್ನು ಹೆಚ್ಚಾಗಿಯೇ ಕೊಟ್ಟೆ. ಏಕೆಂದರೆ, ಆ ಬನಿಯ ಇನ್ನು ಏನೋ ನನಗೆ ತೋರಿಸುವುದಕ್ಕೆ ಸಮಯ ಕಾಯುತ್ತಿದ್ದಂತೆ ಕಂಡಿತು. ಆತನಿಗೆ ಆಸೆ ಹುಟ್ಟಿಸಲು ಹೋಗಲಿ ಎಂದು ಹೆಚ್ಚು ಹಣಕೊಟ್ಟೆ, ಆ ಉಂಗುರಕ್ಕೆ.

ಸಂಜೆ ಪ್ರಾರ್ಥನೆಮಾಡುವ ಹೊತ್ತು ಬಂದಾಗ ನನ್ನ ಬಳಿ ಇದ್ದ ಸ್ಥಳದ ಅಧಿಕಾರಿಯ ಕಡೆಯ ನಾಲ್ಕು ಜನ ಮಹಮ್ಮದೀಯ ಸೇವಕರಲ್ಲಿ ಮೂರು ಜನ ಪ್ರಾರ್ಥನೆಗೆ ಹೋದರು. ಉಳಿದ ಒಬ್ಬನನ್ನು ರೊಟ್ಟಿ (bread) ತರುವುದಕ್ಕೆ ಕಳುಹಿಸಿಕೊಟ್ಟೆ. ಇಲ್ಲಿಯ ವಿಗ್ರಹಾರಾಧಕರು ಬರೀ ಅನ್ನ ಊಟಮಾಡಿ ತೃಪ್ತರಾಗುತ್ತಾರೆ. ರೊಟ್ಟಿ ಬೇಕಾದವರು ಬಿಜಾಪುರದ ರಾಜನಿಗೆ ಸೇರಿದ ಕೋಟೆಯೊಳಕ್ಕೆ ಹೋಗಿ ಅಲ್ಲಿಂದ ತರಬೇಕು. ಹೋದ ಸೇವಕ ಬರುವುದು ಹೊತ್ತಾಯಿತು. ಅತ್ತ ಸೇವಕ ಹೋದನೊ ಇಲ್ಲವೊ, ಇತ್ತ ನಾನು ಮತ್ತು ನನ್ನ ದುಭಾಷಿ ಇಬ್ಬರೇ ಇರುವುದನ್ನು ನೋಡಿ ಬನಿಯ ಬಹಳ ಹುಷಾರಿನಿಂದ ತನ್ನ ತಲೆಗೆ ಸುತ್ತಿದ್ದ ಬಟ್ಟೆಯನ್ನು ಬಿಚ್ಚಿದ. ಕಟ್ಟಿದ್ದ ತಲೆಯ ಜುಟ್ಟನ್ನು ಮೆಲ್ಲನೆ ಸಡಲಿಸಿದ. ಅದರೊಳಗೆ ಬಟ್ಟೆಯ ಚೂರಿನಲ್ಲಿ ಇಟ್ಟಿದ್ದ ವಜ್ರವನ್ನು ಹೊರಕ್ಕೆ ತೆಗೆದು ತೋರಿಸಿದ. ಅದರ ತೂಕ ೪೮ ೧/೨ ಕ್ಯಾರೆಟ್‌ಗಳು. ಬಹು ಶುಭ್ರವಾಗಿತ್ತು ; ಒಂದು ಕಡೆ ಮಾತ್ರ ಒಂದಿಷ್ಟು ದೋಷವಿತ್ತು, ಅಷ್ಟೆ. ನಾನು ಅದನ್ನು ಚೆನ್ನಾಗಿ ಪರೀಕ್ಷೆಮಾಡಿ ಮುಗಿಸಿದ ಮೇಲೆ ಆತ "ಈಗ ಇದನ್ನು ಕೊಳ್ಳುವುದು ಬೇಡ, ನಾಳೆ ಬೆಳಗ್ಗೆ ನೀವು ಒಬ್ಬರೇ ಇರುವಾಗ ವ್ಯಾಪಾರಮಾಡಿಕೊಳ್ಳೋಣ. ನಾಳೆ ನಾಲ್ಕನೇ ಪಹರೆ[1] ಮುಗಿದಮೇಲೆ ಊರ ಹೊರಗೆ ನಾನು ನಿಮಗಾಗಿ ಕಾಯುತ್ತಿರುತ್ತೇನೆ. ನಿಮಗೆ ಈ ವಜ್ರ ಬೇಕಿದ್ದರೆ ಇದರ ಬೆಲೆ ತನ್ನಿ" ಎಂದು ಹೇಳಿ, ಅದರ ಬೆಲೆಯನ್ನು ತಿಳಿಸಿದ.

ನಾನು ಮಾರನೆ ದಿನ ಹೇಳಿದ ಹೊತ್ತಿಗೆ ತಿಳಿಸಿದಷ್ಟು ಹಣ ತೆಗೆದುಕೊಂಡು ಹೋದೆ. ಆ ಹಣದಲ್ಲಿ ಇನ್ನೂರು ಪಗೋಡಾಗಳನ್ನು ಅಲಾಹಿದ ಇಟ್ಟುಕೊಂಡೆ. ಬೆಲೆಯ ಬಗ್ಗೆ ಚೌಕಾಸಿ ನಡೆದು ಕೊನೆಗೆ ಅದರಲ್ಲಿ ನೂರು ಪಗೋಡಗಳನ್ನು ಕೊಟ್ಟೆ. ಸೂರತ್ತಿಗೆ ಹಿಂದಿರುಗಿದ ಮೇಲೆ ಈ ವಜ್ರವನ್ನು ಡಚ್ ಕ್ಯಾಪ್ಟನ್ ಒಬ್ಬನಿಗೆ ಮಾರಿ ಸಾಕಷ್ಟು ಲಾಭ ಸಂಪಾದಿಸಿದೆ.

---

[1] ಈ ಪಹರೆಗಳು ಕೊನೆಯಾಗುವುದು ಬೆಳಿಗ್ಗೆ ೯ ಗಂಟೆ, ಅಪರಾಹ್ನ ೧೨ ಗಂಟೆ, ಮಧ್ಯಾಹ್ನ ೩ ಗಂಟೆ ಮತ್ತು ಸಂಜೆ ೬ ಗಂಟೆಗಳಿಗೆ.

ಈ ವಜ್ರವನ್ನು ಕೊಂಡ ಮೂರು ದಿನಗಳ ತರುವಾಯ ಗೋಲೊಂಡಾದಿಂದ ಒಬ್ಬ ಓಲೆಕಾರ ಬಂದ. ಈತ ಬೊಯ್ತ್ತೇ (Boete) ಎಂಬ ಗಂದಿಗನಿಂದ (apathecary)ಒಂದು ಪತ್ರ ತೆಗೆದುಕೊಂಡು ಬಂದಿದ್ದ. ಈ ಗಂದಿಗನನ್ನು ನಾನು ಗೋಲ್ಕೊಂಡಾ ದಲ್ಲಿ ಬಿಟ್ಟು, ನನಗೆ ಬರಬೇಕಾಗಿದ್ದ ಹಣವನ್ನು ವಸೂಲಿಮಾಡಿಕೊಂಡು ಚಿನ್ನದ ಪಗೋಡಾಕ್ಕೆ ಪರಿವರ್ತಿಸಬೇಕೆಂದು ಹೇಳಿಬಂದಿದ್ದೆ. ಈತ ನಾನು ಹೇಳಿದಂತೆ ಮಾಡಿದ್ದ. ಆದರೆ, ಈತನಿಗೆ ಏನೋ ಕಾಯಿಲೆಯಾಗಿ ಸಾಯುವ ಸ್ಥಿತಿ ಬಂದಾಗ ಈ ಪತ್ರ ಬರೆದು ಕಳುಹಿಸಿ, ನನ್ನ ಹಣವನ್ನು ಭದ್ರವಾಗಿ ಇಟ್ಟಿರುವುದಾಗಿಯೂ, ಆದಷ್ಟು ಜಾಗ್ರತೆ ಬಂದು ಅದನ್ನು ಸೇವಕರ ಕಡೆಯಿಂದ ತೆಗೆದುಕೊಳ್ಳಬೇಕೆಂದೂ ತಿಳಿಸಿದ್ದ. ಈ ಪತ್ರ ಬಂದ ಕೂಡಲೇ ಆಲೋಚಿಸಿ ಸ್ಥಳದ ಅಧಿಕಾರಿಯನ್ನು ನೋಡಲುಹೋದೆ. ಆತನಿಗೆ ಆಶ್ಚರ್ಯ, ಇಷ್ಟು ಜಾಗ್ರತೆ ಹೊರಟುಬಿಟ್ಟನಲ್ಲಾ ಎಂದು. ತಂದ ಹಣವೆಲ್ಲ ಖರ್ಚಾಯಿತೆ ಎಂದು ಕೇಳಿದ. ಇನ್ನೂ ನನ್ನ ಬಳಿ ೨೦,೦೦೦ ಪಗೋಡಾಗಳು ಇವೆಯೆಂದು ಹೇಳಿದೆ. ಅದನ್ನು ವ್ಯಾಪಾರದ ಮೇಲೆ ಹಾಕುವುದು ಒಳ್ಳೆಯದೆಂದು ತಿಳಿಸಿ, ಆತ ನಾನು ಈಗಾಗಲೇ ಕೊಂಡುಕೊಂಡಿದ್ದ ವಜ್ರಗಳನ್ನು ನೋಡಲು ಅಪೇಕ್ಷೆಪಟ್ಟ. ತೋರಿಸಿದೆ. ನಾನು ಕೊಂಡು ಕೊಂಡಿದ್ದ ವಜ್ರಗಳ ಬೆಲೆ ಎಷ್ಟು ಎಂಬುದು ಅವನಿಗೆ ಗೊತ್ತಿಲ್ಲದ ವಿಚಾರವಾಗಿರಲಿಲ್ಲ. ಏಕೆಂದರೆ, ಶೇ. ೨ರಂತೆ ರಾಜಾದಾಯ ಕೊಡಬೇಕಾದ ಕಾರಣ ವಜ್ರಗಳ ಯಾದಿಯನ್ನು ಆತನಿಗೆ ಕಳುಹಿಸಿಕೊಡಲಾಗಿತ್ತು. ಆ ಯಾದಿಯನ್ನು ರಾಜಗಂದಾಯ ವಸೂಲು ಮಾಡುವ ಬನಿಯ ತಂದು ತೋರಿಸಿದ. ನನ್ನ ಬಳಿ ಇದ್ದ ವಜ್ರಗಳಿಗೂ ಆ ಯಾದಿಗೂ ತಾಳೆ ಸರಿಯಾಗಿತ್ತು. ನನ್ನ ನಂಬಿಕೆಯ ನಡವಳಿಕೆಯನ್ನು ಆತ ಹೊಗಳಿ, ಫರಂಗಿ ಜನ ನಂಬಿಕಸ್ತರು ಎಂದು ಬಾಯಿಬಿಟ್ಟು ಹೇಳಿದ. ನಾನು ಗುಟ್ಟಾಗಿ ಕೊಂಡ ೪೮ ೧/೨ ಕ್ಯಾರೆಟ್ ವಜ್ರದ ವಿಚಾರ ಯಾರಿಗೂ ಗೊತ್ತಿರಲಿಲ್ಲ. ಆದರೂ ನಾನು ಈ ವಿಚಾರ ವನ್ನು ಆತನಿಗೆ ಹೇಳಿ, ಅದರ ಮೇಲೆ ಕೊಡಬೇಕಾದ ತೆರಿಗೆಯನ್ನು ಕೊಟ್ಟೆ. ಅವನಿಗೆ ಇನ್ನೂ ಖುಷಿಯಾಯಿತು. ಯಾವ ಮುಹಮ್ಮದೀಯನಾಗಲೀ ಹಿಂದುವಾಗಲೀ ಇಷ್ಟು ಸತ್ಯವಾಗಿ ನಡೆದುಕೊಳ್ಳಲಾರನೆಂದು ನನ್ನನ್ನು ಹೊಗಳಿದ. ಊರಿನ ವರ್ತಕರಿಗೆಲ್ಲ ಹೇಳಿಕಳುಹಿಸಿ ಅವರ ಬಳಿ ಮಾರಾಟಕ್ಕೆ ಇರುವ ವಜ್ರಗಳನ್ನೆಲ್ಲಾ ತರುವಂತೆ ತಿಳಿಸಿದ. ಅವರು ಬಂದರು. ಅವರಲ್ಲಿ ಮೂರು ನಾಲ್ಕು ಜನರಿಂದ ನನ್ನ ಬಳಿ ಇದ್ದ ೨೦,೦೦೦ ಪಗೋಡಾಗಳಿಗೆ ಬರುವಷ್ಟು ವಜ್ರಗಳನ್ನು ಕೊಂಡುಕೊಂಡೆ. ನನ್ನಂಥ ಸತ್ಯಸಂಧ ನೊಡನೆ ವ್ಯವಹಾರಮಾಡಿದ್ದಕ್ಕಾಗಿ ವರ್ತಕರು ನನಗೇನಾದರೂ ಮರ್ಯಾದೆ ಮಾಡ ಬೇಕೆಂದು ಹೇಳಿದರು. ಅವರೆಲ್ಲ ಸೇರಿ ೧೦೦ ಏಕಸುಗಳ ಬೆಲೆಯ (ಆಗ ೨೨ ಪೌಂಡು ಗಳು) ವಜ್ರವನ್ನು ಕೊಟ್ಟು ನನ್ನನ್ನು ಗೌರವಿಸಿದರು. ಅಧಿಕಾರಿ ಒಂದು ತಲೆಯುಡಿಗೆ ಯನ್ನೂ ಕಮರ್‌ಬಂದನ್ನೂ ಕೊಟ್ಟು ಪುರಸ್ಕಾರಮಾಡಿದ.

ಈ ಸಂದರ್ಭದಲ್ಲಿ ಇಂಡಿಯನರು, ಅವರು ಹಿಂದುಗಳಾಗಲೀ ಮುಹಮ್ಮದೀಯ

ರಾಗಲೀ ವ್ಯಾಪಾರಮಾಡುವಾಗ ಅನುಸರಿಸುವ ವಿಚಿತ್ರ ಪದ್ಧತಿಯನ್ನು ಹೇಳಬೇಕೆನಿಸು ತ್ತದೆ. ವ್ಯಾಪಾರ ಮಾಡುವಾಗ ಯಾರೂ ಮಾತಾಡುವುದಿಲ್ಲ ; ಎಲ್ಲಾ ಮೌನವಾಗಿ ನಡೆದುಹೋಗುತ್ತದೆ. ಕೊಂಡುಕೊಳ್ಳುವವನೂ ಮಾರಾಟಮಾಡುವವನೂ ಎದರು ಬದರಾಗಿ ದರ್ಜಿಗಳು ಕುಳಿತುಕೊಳ್ಳುವಂತೆ (ಚಕ್ಕಲುಬೊಕ್ಕಲು ಹಾಕಿಕೊಂಡು) ಕುಳಿತು ಕೊಳ್ಳುತ್ತಾರೆ. ಇಬ್ಬರಲ್ಲಿ ಒಬ್ಬ ತನ್ನ ನಡುವಿಗೆ ಸುತ್ತಿರುವ ಬಟ್ಟೆಯನ್ನು ಬಿಚ್ಚಿಕೊಳ್ಳು ತ್ತಾನೆ. ಮಾರಾಟಮಾಡುವವನು ಕೊಂಡುಕೊಳ್ಳುವವನ ಬಲಗೈಯನ್ನು ಹಿಡಿದು ಕೊಂಡು ಬಟ್ಟೆಯಿಂದ ಮುಚ್ಚಿಕೊಳ್ಳುತ್ತಾನೆ. ಮುಚ್ಚಿದ ಬಟ್ಟೆಯೊಳಗೆ ಸುತ್ತಮುತ್ತ ನಿಂತ ವರ್ತಕರು ನೋಡುತ್ತಿರುವಂತೆಯೇ ಗುಟ್ಟಾಗಿ ವ್ಯಾಪಾರ ನಡೆದುಹೋಗುತ್ತದೆ. ಯಾವ ಸರಕಿಗೆ ಏನು ಧಾರಣೆ ಎಂಬುದು ಅವರಿಬ್ಬರಿಗೆ ಮಾತ್ರ ಗೊತ್ತು. ಬಟ್ಟೆಯೊಳಗೆ ನಡೆಯುವ ಗುಟ್ಟಿನ ವ್ಯವಹಾರದ ರೀತಿ ಹೀಗಿರುತ್ತದೆ : ಮಾರಾಟಮಾಡುವವನು ಕೊಂಡುಕೊಳ್ಳುವವನ ಇಡೀ ಕೈಯನ್ನು ಹಿಡಿದುಕೊಂಡರೆ ೧,೦೦೦ ರೂಪಾಯಿಯೋ ಅಥವಾ ಪಗೋಡವೋ ಎಂದು ಸೂಚನೆ. ಕೈಯನ್ನು ಎಷ್ಟು ಸಲ ಅದು ಮುತ್ತಾನೆಯೋ ಅಷ್ಟು ಸಾವಿರ ಎಂದು ಅರ್ಥ. ಐದು ಬೆರಳನ್ನು ಹಿಡಿದರೆ ೫೦೦. ಒಂದೇ ಬೆರಳನ್ನು ಹಿಡಿದರೆ ೧೦೦. ಬೆರಳನ್ನು ಮಧ್ಯದ ಗಿಣ್ಣಿನವರೆಗೆ ಹಿಡಿದರೆ ೫೦. ತುದಿಯನ್ನು ಮುಟ್ಟಿದರೆ ೧೦. ಈ ರಹಸ್ಯವ್ಯಾಪಾರದಲ್ಲಿ ಒಂದು ಸರಕು ನಾಲ್ಕಾರು ಕೈಗಳನ್ನು ತಟಾಯಿಸು ತ್ತದೆ. ಆದರೂ ಬೇರೆ ಯಾರೊಬ್ಬರಿಗೂ ಗೊತ್ತಾಗುವುದಿಲ್ಲ ಬೆಲೆ ಏನು ಎಂದು.

ವಜ್ರಗಳ ತೂಕದ ಬಗ್ಗೆ ಒಂದು ಮಾತು. ಗುಟ್ಟಾಗಿ ಕೊಂಡುಕೊಳ್ಳದಿದ್ದಲ್ಲಿ, ಅಂದರೆ ಬಹಿರಂಗವಾಗಿ ಕೊಂಡುಕೊಂಡರೆ, ಯಾವ ಮೋಸವೂ ಇಲ್ಲ. ಬಹಿರಂಗವಾಗಿ ಕೊಂಡುಕೊಳ್ಳುವಾಗ ರಾಜನ ಕಡೆಯವನೊಬ್ಬ ಇದ್ದೇ ಇರುತ್ತಾನೆ. ಅವನು ಖಾಸಗಿ ಜನರಿಂದ ಯಾವ ಶುಲ್ಕವನ್ನೂ ಪಡೆಯುವುದಿಲ್ಲ. ತೂಕ ಎಷ್ಟೆಂದು ಹೇಳಿಬಿಟ್ಟರೆ ಸಾಕು, ಕೊಂಡುಕೊಂಡವನೂ ಮಾರಾಟಮಾಡಿದವನೂ ಅದನ್ನು ಒಪ್ಪಿಕೊಳ್ಳು ತ್ತಾರೆ. ಏಕೆಂದರೆ, ಅವನು ಯಾರ ಕಡೆಯೂ ವಾಲಿರುವುದಿಲ್ಲ.

ಗಣಿಯಲ್ಲಿ ನನ್ನ ಕೆಲಸ ಮುಗಿಸಿಕೊಂಡು, ಗೌರ್ನರನು ನನ್ನ ಪ್ರಯಾಣಕ್ಕಾಗಿ ಒದಗಿಸಿದ ಆರು ಕುದುರೆಸವಾರರೊಡನೆ ಬಿಜಾಪುರದ ಗಡಿಯವರೆಗೆ ಪ್ರಯಾಣಮಾಡಿದೆ. ಬಿಜಾಪುರ ಮತ್ತು ಗೋಲ್ಕೊಂಡಾ ರಾಜ್ಯಗಳ ಗಡಿಯನ್ನು ಒಂದು ನದಿ (ಕೃಷ್ಣಾನದಿ) ಬೇರ್ಪಡಿಸುತ್ತದೆ. ಈ ನದಿಯನ್ನು ದಾಟುವುದು ತುಂಬಾ ಕಷ್ಟ. ಏಕೆಂದರೆ ಈ ನದಿ ಅಗಲವಾಗಿರುವುದಲ್ಲದೆ ಆಳವೂ ಆಗಿದ್ದು ಬಹಳ ರಭಸದಿಂದ ಹರಿಯುತ್ತದೆ. ದಾಟಲು ಸೇತುವೆಯಾಗಲಿ ಅಥವಾ ದೋಣಿಯಾಗಲಿ ಇಲ್ಲ. ಈ ಹಿಂದೆಯೇ ಹೇಳಿದ ರೀತಿ ಯಲ್ಲಿಯೇ, ಅಂದರೆ ಹರಿಗೋಲುಗಳಲ್ಲಿಯೇ, ಈ ನದಿಯನ್ನು ದಾಟಬೇಕು. ಒಳ್ಳೆಯ ದೋಣಿಗಳ ಅಥವಾ ಸೇತುವೆಯ ವ್ಯವಸ್ಥೆ ಮಾಡಬಹುದು. ಆದರೆ ಬಿಜಾಪುರ ಗೋಲ್ಕೊಂಡಾ ರಾಜರುಗಳು ಇದಕ್ಕೆ ಅವಕಾಶಕೊಡುವುದಿಲ್ಲ.

ನದಿಯ ಆ ಕಡೆ ಈ ಕಡೆ ಇರುವ ನಾವಿಕರು (ಅಂದರೆ ಹರಿಗೋಲಿನವರು) ಕಾಲು ಹರಿದಾರಿ ದೂರದಲ್ಲಿ ಇರುವ ಕಡವಿನ ಅಧಿಕಾರಿಗಳಿಗೆ ಪ್ರತಿ ದಿನ ಸಂಜೆ ನದಿ ದಾಟಿದ ಜನರ, ದನಕರುಗಳ ಮತ್ತು ಸರಕುಗಳ ಕರಾರುವಾಕು ಪಟ್ಟಿ ಕೊಡಬೇಕು.

ನಾನು ಗೋಲ್ಕೊಂಡಾಕ್ಕೆ ಬರುವುದರೊಳಗೆ ಬೊಯ್ತೆ ಸತ್ತು ಮೂರು ದಿನಗಳಾಗಿದ್ದುವು. ನಾನು ಯಾವ ಕೋಣೆಯಲ್ಲಿ ಆತನನ್ನು ಬಿಟ್ಟುಬಂದಿದ್ದೆನೋ ಆ ಕೋಣೆಗೆ ಎರಡು ಬೀಗಮುದ್ರೆಗಳನ್ನು ಹಾಕಿದ್ದರು. ಒಂದು ಖಾಜಿ (Kazi)ಯದು, ಇನ್ನೊಂದು ಷಾ ಬಂದರನದು. ಖಾಜಿಯೆಂದರೆ ನಮ್ಮ ಕಡೆಯ ಮುಖ್ಯ ನ್ಯಾಯಾಧೀಶ ಇದ್ದಂತೆ. ಷಾ ಬಂದರ್ ವರ್ತಕರ ಮುಖ್ಯಸ್ಥ. ಖಾಜಿ ಕಡೆಯ ಅಧಿಕಾರಿಯೊಬ್ಬ ನನ್ನ ಸೇವಕರೊಡಗೂಡಿ ಅದರ ಕಾವಲು ಕಾಯುತ್ತಿದ್ದ. ನಾನು ಬಂದ ಸುದ್ದಿಯನ್ನು ಆ ಕೂಡಲೆ ಖಾಜಿಗೂ ಷಾ ಬಂದರನಿಗೂ ತಿಳಿಸಿದರು. ಆಗ ಅವರು ನನಗೆ ಹೇಳಿಕಳುಹಿಸಿದರು. ಕೋಣೆಯಲ್ಲಿರುವ ಹಣ ನನ್ನದು ಎಂಬುದಕ್ಕೆ ಏನು ರುಜವಾತಿದೆ ಎಂದು ಖಾಜಿ ಕೇಳಿದ. ನಾನು ಷರಾಫನ ಹೆಸರು ಹೇಳಿದೆ. ಷರಾಫನಿಗೆ ಹೇಳಿಕಳುಹಿಸಿ, ಅವನನ್ನು ವಿಚಾರಿಸಿದ. ಅವನು ಹಣ ನನ್ನದೆಂದು ಹೇಳಿದ ಕೂಡಲೇ ಖಾಜಿ ಕೋಣೆಯ ಬಾಗಿಲು ತೆಗೆಯಬೇಕೆಂದೂ, ಹಾಗೆ ತೆಗೆಯುವುದಕ್ಕೆ ಮುಂಚೆ ಬೀಗಮುದ್ರೆಗಳು ಸರಿಯಾಗಿವೆಯೋ ಇಲ್ಲವೇ ಎಂದು ನೋಡಬೇಕೆಂದೂ ಅವನ ಕಡೆಯವರಿಗೆ ಆಜ್ಞಾಪಿಸಿದ. ಎಲ್ಲಾ ಸರಿಯಾಗಿತ್ತು. ಬಾಗಿಲು ತೆಗೆದರು. ನಾನು ನನ್ನ ಹಣವೆಲ್ಲ ಸರಿಯಾಗಿದೆ ಎಂದು ಎಣಿಸಿ ಹೇಳುವವರೆಗೆ ಆತ ಅಲ್ಲೇ ಇದ್ದ. ಆಮೇಲೆ ನಾನು ಆತನೊಡನೆ ಖಾಜಿ ಮತ್ತು ಷಾ ಬಂದರನ ಬಳಿಗೆ ಹೋದೆ. ಅವರಿಬ್ಬರಿಗೂ ನನ್ನ ವಂದನೆಗಳನ್ನು ಹೇಳಿದೆ. ಪರ್ಷಿಯನ್ ಭಾಷೆಯಲ್ಲಿ ಬರೆದ ಪತ್ರಕ್ಕೆ ರುಜುಹಾಕಿಸಿಕೊಂಡು ನನ್ನನ್ನು ಕಳುಹಿಸಿಕೊಟ್ಟರು.

ಬೊಯ್ತೆಯನ್ನು ಹೂಳಿದ್ದಕ್ಕೆ, ಕೋಣೆಯನ್ನು ಕಾಯ್ದಿದ್ದಕ್ಕೆ ಮತ್ತು ಬೀಗಮುದ್ರೆ ಹಾಕಿದ್ದಕ್ಕೆ ಆದ ಖರ್ಚುಗಳನ್ನು ಕೊಡಬೇಕೆಂದು ಖಾಜಿ ಕಡೆಯ ಮನುಷ್ಯ ಹೇಳಿದ. ಇವೆಲ್ಲಕ್ಕೂ ಒಟ್ಟು ಒಂಬತ್ತು ರೂಪಾಯಿಗಳು, ಅಷ್ಟೆ. ಯೂರೋಪಿನಲ್ಲಿ ಅಷ್ಟೆಲ್ಲವನ್ನು ಇಷ್ಟು ಕಡಿಮೆ ವೆಚ್ಚದಲ್ಲಿ ಮಾಡಲು ಸಾಧ್ಯವೇ ಇಲ್ಲ.

ಗೋಲ್ಕೊಂಡಾದಿಂದ ಪೂರ್ವಕ್ಕೆ ಏಳು ದಿನದ ಪ್ರಯಾಣದಷ್ಟು ದೂರದಲ್ಲಿ ಇನ್ನೊಂದು ವಜ್ರದ ಗಣಿ ಇದೆ. ಅಲ್ಲಿಯ ಭಾಷೆಯಲ್ಲಿ ಅದನ್ನು 'ಗಣಿ' ಎಂದೂ, ಪರ್ಷಿಯನ್ ಭಾಷೆಯಲ್ಲಿ 'ಕೊಲೂರ್' (Coulour=Kollur : ಕೊಲ್ಲೂರು) ಎಂದೂ ಕರೆಯುತ್ತಾರೆ. ಈ ಸ್ಥಳವು ನಾನು ಹಿಂದೆ ಇನ್ನೊಂದು ಗಣಿಯಿಂದ ಬರುವಾಗ ಯಾವ ನದಿಯನ್ನು ದಾಟಿದೆನೋ ಅದೇ ನದಿಯ (ಕೃಷ್ಣಾನದಿಯ) ದಂಡೆಯ ಮೇಲಿರುವ, ಒಂದು ದೊಡ್ಡ ಪಟ್ಟಣಕ್ಕೆ ಸಮೀಪದಲ್ಲಿದೆ. ಈ ದೊಡ್ಡ ಪಟ್ಟಣಕ್ಕೆ ಒಂದೂವರೆ ಹರಿದಾರಿ ದೂರದಲ್ಲಿ ಶಿಲುಬೆಯ ವಿನ್ಯಾಸದ ದೊಡ್ಡ ದೊಡ್ಡ ಗುಡ್ಡಗಳಿವೆ. ಪಟ್ಟಣಕ್ಕೂ ಈ ಗುಡ್ಡಗಳಿಗೂ ಮಧ್ಯೆ ಇರುವ ಮೈದಾನವೇ ಗಣಿ. ಇಲ್ಲಿಯೇ ವಜ್ರಗಳು

ಸಿಕ್ಕುವುದು. ಗುಡ್ಡದ ಹತ್ತಿರ ಹತ್ತಿರ ಹೋದಂತೆ ದಪ್ಪನಾದ ವಜ್ರಗಳು ದೊರೆಯು ತ್ತವೆ. ಬೆಟ್ಟದ ಮೇಲೆ ಹತ್ತಿಹೋದರೆ ವಜ್ರಗಳೇ ಇಲ್ಲ.

ಈ ಗಣಿಯನ್ನು ಪತ್ತೆಹಚ್ಚಿ ಸುಮಾರು ೧೦೦ ವರ್ಷಗಳಾದುವು. ರೈತನೊಬ್ಬ ಭೂಮಿ ಉತ್ತು ಕಾಳು ಬಿತ್ತುವಾಗ ಅವನಿಗೆ ೨೫ ಕ್ಯಾರೆಟ್ ತೂಕದ ಒಂದು ಹೊಳಪು ಕಲ್ಲು ಸಿಕ್ಕಿತಂತೆ. ಅದನ್ನು ತೆಗೆದುಕೊಂಡು ಆತ ಗೋಲ್ಕೊಂಡಾಕ್ಕೆ ಹೋಗಿ ಅಲ್ಲಿ ಒಬ್ಬ ರತ್ನಪಡಿ ವ್ಯಾಪಾರಿಗೆ ತೋರಿಸಿದ. ಅಷ್ಟು ದೊಡ್ಡ ವಜ್ರ ಸಿಕ್ಕಿದ್ದನ್ನು ಆತ ಗುಟ್ಟಾಗಿ ಇಡಲು ಸಾಧ್ಯವಾಗಲಿಲ್ಲ. ಸರಿ, ಶ್ರೀಮಂತರಾದ ಜನರು ವಜ್ರ ಸಿಕ್ಕಿದ ಕಡೆ ಅಗೆಯಲಾರಂಭಿಸಿದರು. ಅವರಿಗೆ ೧೦ ರಿಂದ ೪೦ ಕ್ಯಾರೆಟ್‌ವರೆಗಿನ ತೂಕದ ವಜ್ರಗಳು ಸಿಕ್ಕಿದುವು. ಸಾಣೆ ಹಿಡಿಯುವುದಕ್ಕೆ ಮುಂಚೆ ೯೦೦ ಕ್ಯಾರೆಟ್ ತೂಕವಿದ್ದ ವಜ್ರ, ಅಂದರೆ ಮೀರ್ ಜುಮ್ಲಾ ಔರಂಗಜೇಬನಿಗೆ ಒಪ್ಪಿಸಿದ ಆ ಭಾರಿ ವಜ್ರ (ಕೊಹಿನೂರ್ ವಜ್ರ), ಸಿಕ್ಕಿದ್ದು ಇಲ್ಲಿಯೇ.

ಇಲ್ಲಿ ದೊಡ್ಡ ದೊಡ್ಡ ವಜ್ರಗಳು ಸಿಕ್ಕಿದರೂ ಅವು ಅಷ್ಟು ಪ್ರಕಾಶಮಾನವಾಗಿ ರುವುದಿಲ್ಲ. ವಜ್ರದ ಹೊಳಪು ಹಾಗೂ ಪ್ರಕಾಶಗಳಿಗೆ ಅದು ಸಿಕ್ಕುವ ಭೂಮಿಯ ಗುಣ ಮುಖ್ಯ.

ವಜ್ರಗಳನ್ನು ಯೂರೋಪಿನಲ್ಲಿ ಹಗಲು ಹೊತ್ತು ಪರೀಕ್ಷೆಮಾಡಿದರೆ, ಇಂಡಿಯಾ ದಲ್ಲಿ ರಾತ್ರಿ ಹೊತ್ತು ಪರೀಕ್ಷೆಮಾಡುತ್ತಾರೆ. ಗೋಡೆಯಲ್ಲಿ ಒಂದು ಅಡಿ ಚಚ್ಚೌಕವಾದ ಗೂಡುಮಾಡಿ, ಅದರಲ್ಲಿ ದಪ್ಪ ಬತ್ತಿಯ ಒಂದು ಹಣತೆ ಇಡುತ್ತಾರೆ. ಈ ಹಣತೆಯ ಬೆಳಕಿನಲ್ಲಿ ವಜ್ರನನ್ನು ಎರಡು ಬೆರಳುಗಳ ಮಧ್ಯೆ ಹಿಡಿದುಕೊಂಡು ಪರೀಕ್ಷೆಮಾಡು ತ್ತಾರೆ.

ನಾನು ಮೊಟ್ಟಮೊದಲು ಈ ಗಣಿಗೆ ಬಂದಿದ್ದಾಗ ಗಂಡಸರು, ಹೆಂಗಸರು ಮತ್ತು ಮಕ್ಕಳೆಲ್ಲ ಸೇರಿ ೬೦,೦೦೦ ಜನರು ಕೆಲಸಮಾಡುತ್ತಿದ್ದರು. ಗಂಡಸರು ಅಗೆಯುತ್ತಿ ದ್ದರು. ಹೆಂಗಸರು ಮತ್ತು ಮಕ್ಕಳು ಮಣ್ಣು ಹೊರುತ್ತಿದ್ದರು. ರಾಮುಲ್‌ಕೋಟಾ ದಲ್ಲಿ ವಜ್ರಗಳನ್ನು ಶೋಧಿಸುವ ವಿಧಾನಕ್ಕೂ ಇಲ್ಲಿಯ ವಿಧಾನಕ್ಕೂ ತುಂಬ ವ್ಯತ್ಯಾಸ ವುಂಟು. ಇಲ್ಲಿ, ಅಗೆಯುವ ಸ್ಥಳದಿಂದ ಸ್ವಲ್ಪ ದೂರದಲ್ಲಿ ಒಂದು ಜಾಗವನ್ನು ಆರಿಸಿ, ಅದನ್ನು ಮಟ್ಟಮಾಡಿ, ಸುತ್ತ ಎರಡು ಅಡಿ ಗೋಡೆ ಕಟ್ಟುತ್ತಾರೆ. ಈ ಗೋಡೆಯ ಬುಡದಲ್ಲಿ ಎರಡೆರಡು ಅಡಿ ಅಂತರದಲ್ಲಿ ಕಂಡಿಗಳನ್ನು ಕೊರೆದು, ಬೇಕಾದಾಗ ತೆರೆಯಲು ಅನುಕೂಲವಾಗುವ ರೀತಿಯಲ್ಲಿ ಅವುಗಳನ್ನು ಮುಚ್ಚಿರುತ್ತಾರೆ. ಹೀಗೆ ಮಾಡಿದ ತರು ವಾಯ ಗಣಿಯನ್ನು ಅಗೆಸುವವನೂ ಮತ್ತು ಕೆಲಸಮಾಡಲು ಬಂದ ಆಳುಗಳೂ ಸೇರಿ ಒಂದು ವಿಗ್ರಹವನ್ನು ತಂದಿಟ್ಟು ಅದಕ್ಕೆ ಪೂಜೆಪುರಸ್ಕಾರಗಳನ್ನು ಸಲ್ಲಿಸುತ್ತಾರೆ. ಎಲ್ಲರ ಹಣೆಗೂ ಗಂಧ ಹಚ್ಚಿ ಅಕ್ಷತೆ ಇಡುತ್ತಾರೆ. ಬ್ರಾಹ್ಮಣ ಅರ್ಚಕನು ತಯಾರಿಸಿದ

ಅನ್ನದ ಪ್ರಸಾದವನ್ನು ಒಂದು ತರಹ ಮರದ ಅಗಲವಾದ ಎಲೆಗಳನ್ನು (ಮುತ್ತುಗದ ಎಲೆ ?) ಹಚ್ಚಿ ಮಾಡಿದ ದೊಡ್ಡ ಎಲೆಯ ಮೇಲೆ ಬಡಿಸುತ್ತಾರೆ.

ದೇವರ ಪೂಜೆಯೂ ಪ್ರಸಾದ- ವಿನಿಯೋಗವೂ ಅದ ಮೇಲೆ ಅಗೆಯುವ ಕೆಲಸ ಆರಂಭಿಸುತ್ತಾರೆ. ಗಂಡಸರು ನೆಲ ಅಗೆದು ಮಣ್ಣನ್ನು ಮಕ್ಕರಿಗಳಿಗೆ ತುಂಬಿ ಹೆಂಗಸರು ಮತ್ತು ಹುಡುಗರ ತಲೆಯ ಮೇಲೆ ಹೊರಿಸುತ್ತಾರೆ. ಹೊತ್ತ ಮಣ್ಣನ್ನು ತೆಗೆದು ಕೊಂಡುಹೋಗಿ ಸುತ್ತ ಗೋಡೆ ಕಟ್ಟಿ ಮಾಡಿರುವ ಕಟ್ಟೆಯೊಳಕ್ಕೆ ಹಾಕುತ್ತಾರೆ. ಆ ಕಟ್ಟೆ ಹಿಡಿಯುವಷ್ಟು ಮಣ್ಣನ್ನು ಹಾಕಿದನಂತರ ಎಲ್ಲರೂ ಸೇರಿ ಆ ಮಣ್ಣಿನ ಮೇಲೆ ನೀರು ಹೊಯ್ಯುತ್ತಾರೆ. ಮಣ್ಣು ನೀರಿನಲ್ಲಿ ಎರಡು ದಿವಸಗಳ ಕಾಲ ನೆನೆದು ಅಂಬಲಿ ಯಂತೆ ಆಗುತ್ತದೆ. ಆಗ ಗೋಡೆಯ ಬುಡದಲ್ಲಿ ಮಾಡಿರುವ ತೂತುಗಳ ಮೂಲಕ ನೀರನ್ನು ಹೊರಕ್ಕೆ ಬಿಡುತ್ತಾರೆ. ಮೇಲಿಂದ ನೀರನ್ನು ಹಾಕುತ್ತಲೇ ಇರುತ್ತಾರೆ. ನೀರಾದ ಮಣ್ಣು ಹರಿದು ಹರಿದು ತೂತುಗಳ ಮೂಲಕ ಹೊರಗೆ ಹೋಗುತ್ತದೆ. ಕೊನೆಗೆ ಉಳಿಯುವುದು ಮರಳು ಮಾತ್ರ. ಈ ಮರಳನ್ನು ಎರಡು ಮೂರು ಸಲ ತೊಳೆಯು ತ್ತಾರೆ. ಹೀಗೆ ತೊಳೆದ ಮರಳನ್ನು ಒಣಗಲು ಬಿಡುತ್ತಾರೆ. ಆ ಉರಿಬಿಸಲಿನಲ್ಲಿ ಮರಳು ಒಣಗುವುದಕ್ಕೆ ಹೆಚ್ಚು ಹೊತ್ತು ಬೇಕಾಗುವುದಿಲ್ಲ. ಒಣಗಿದ ಮರಳನ್ನು ಒಂದರಿಹಿಡಿಯುತ್ತಾರೆ. ಸಣ್ಣ ಮರಳು ಹೋಗಿ ದಪ್ಪ ದಪ್ಪ ಮರಳು ಮಾತ್ರ ಒಂದರಿ ಯಲ್ಲಿ ಉಳಿಯುತ್ತದೆ. ಈ ದಪ್ಪ ಮರಳನ್ನು ಒಂದು ಕಡೆ ಸಮನಾಗಿ ಹರಡಿ ಅದರ ಸುತ್ತ ಜನ ನಿಂತುಕೊಂಡು ಮರದ ಕೊಡತಿಗಳಿಂದ ಎರಡು ಮೂರು ಸಲ ಬಡಿಯುತ್ತಾರೆ. ಪುನಃ ಅದನ್ನು ಒಂದರಿಯಲ್ಲಿ ಹಾಕಿ ಆಡಿಸುತ್ತಾರೆ. ಒಂದರಿಯಲ್ಲಿ ಉಳಿದ ಹರಳು ಮರಳನ್ನು ಒಂದು ಕಡೆ ಹಾಕಿಕೊಂಡು ಅದರಲ್ಲಿ ವಜ್ರಗಳನ್ನು ಹುಡುಕುತ್ತಾರೆ. ಹಿಂದೆ ಕಲ್ಲಿನಿಂದ ಪುಡಿಮಾಡುತ್ತಿದ್ದರಂತೆ. ಆದರಿಂದ ವಜ್ರಗಳು ಬಿರುಕುಬಿಡುವ ಸಂಭವ ವಿತ್ತು. ಆದ್ದರಿಂದ ಈಗ ಮರದ ಕೊಡತಿಗಳನ್ನು ಉಪಯೋಗಿಸುತ್ತಾರೆ.

ಇಲ್ಲಿ ಕೊಡುವ ಕೂಲಿ ನಾಲಿ, ಕಂದಾಯ ಕವಳಿಗೆಗಳೆಲ್ಲಾ ರಾಮುಲ್‌ಕೋಟಾ ದಲ್ಲಿ ಇರುವಂತೆಯೇ ಇವೆ.

ಇಲ್ಲಿಗೆ ಮುವತ್ತು ನಲವತ್ತು ವರ್ಷಗಳ ಹಿಂದೆ ಕೊಲ್ಲೂರಿಗೂ ರಾಮುಲ್ ಕೋಟೆಗೂ ಮಧ್ಯೆ ಇನ್ನೊಂದು ಗಣಿ ಇತ್ತಂತೆ. ಆದರೆ ಅಲ್ಲಿ ಸಿಕ್ಕಿದ ವಜ್ರಗಳು ಸಾಣೆ ಹಿಡಿಯುವಾಗ ಪುಡಿಪುಡಿಯಾಗಿ ಜನ ಮೋಸಹೋಗುವ ಸಂಭವಗಳು ಕಂಡ ಕಾರಣ, ಅದನ್ನು ಮುಚ್ಚಿಬಿಡಬೇಕೆಂದು ರಾಜ ಆಜ್ಞೆಮಾಡಿದ. ಸೂರತ್ತಿನ ಇಂಗ್ಲಿಷ್ ಕಂಪೆನಿ ಯಲ್ಲಿ ಪ್ರೆಮ್ಲಿನ್ ಮತ್ತು ಫ್ರಾನ್ಸಿಸ್ ಬ್ರೆಟನ್ ಎಂಬುವರು ಅಧ್ಯಕ್ಷರಾಗಿದ್ದಾಗ ಎಡ್ವರ್ಡ್ ಫೆರ್ಡಿನಾಂಡ್ ಎಂಬ ಯಹೂದಿ ವರ್ತಕ ಅವರಿಬ್ಬರೊಡನೆ ಸೇರಿ ಈ ಗಣಿ ಯಲ್ಲಿ ಸಿಕ್ಕಿದ ೪೨ ಕ್ಯಾರೆಟ್ ತೂಕದ ಒಂದು ವಜ್ರವನ್ನು ಕೊಂಡುಕೊಂಡ. ನೋಡ ಲಿಕ್ಕೆ ಚೆನ್ನಾಗಿತ್ತು ಆ ವಜ್ರ. ಎಡ್ವರ್ಡ್ ಯುರೋಪಿಗೆ ಹಿಂದಿರುಗಿದಾಗ ಕಂಪೆನಿಯ ಆ

ಇಬ್ಬರು ಅಧ್ಯಕ್ಷರು ವಜ್ರವನ್ನು ಅವನ ಕೈಗಿತ್ತು ಮಾರಾಟಮಾಡಿ ಬಂದ ಲಾಭವನ್ನು ತಮಗೆ ಕೊಡಬೇಕೆಂದು ಹೇಳಿಕಳುಹಿಸಿದರು. ಯುರೋಪಿಗೆ ಹೋಗುವ ಹಾದಿಯಲ್ಲಿ ಲೆಗ್‌ಹಾರ್ನ್ ಎಂಬ ಸ್ಥಳದಲ್ಲಿ ಆ ವಜ್ರವನ್ನು ಎಡ್ವರ್ಡ್ ಕೆಲವು ಯಹೂದಿ ಸ್ನೇಹಿತರಿಗೆ ತೋರಿಸಿದ. ಅವರು ಅದಕ್ಕೆ ೨೫,೦೦೦ ಪಿಯಸ್ತ್ರೀ (Piastre)[1] ಬೆಲೆ ಕೊಡುವುದಾಗಿ ಹೇಳಿದರು. ಆದರೆ ಎಡ್ವರ್ಡ್ ೩೦,೦೦೦ ಸಾವಿರ ಹೇಳಿದ. ವ್ಯಾಪಾರ ಆಗಲಿಲ್ಲ. ವೆನ್ನಿಸ್ ನಗರಕ್ಕೆ ಹೋದಾಗ ಅಲ್ಲಿ ಅದನ್ನು ಕತ್ತರಿಸಿ ಸಾಣೆಹಿಡಿಸಲುಹೋದಾಗ ಅದು ಒಂಬತ್ತು ಚೂರಾಗಿಬಿಟ್ಟಿತು!

ಈಗ ಮೇಲೆ ಹೇಳಿದ ಗಣಿಗಳಿಗಿಂತ ಹಳೆಯದಾದ ಒಂದು ಗಣಿಯ ವಿಚಾರ ಹೇಳುತ್ತೇನೆ. ಈ ಗಣಿ ಬಂಗಾಳ ರಾಜ್ಯದಲ್ಲಿದೆ. ಇದನ್ನು ಸೋಮಲ್‌ಪೂರ್ (ಸಂಬಲ ಪುರ) ಎಂದು ಕರೆಯುತ್ತಾರೆ. ಸೋಮಲ್‌ಪೂರ್ ದೊಡ್ಡ ಪಟ್ಟಣ. ಈ ಪಟ್ಟಣದ ಬಳಿ ಹರಿಯುವ ಕೋಯಲ್ (ಗೋಯಲ್) ಎಂಬ ನದಿಯ ಮರಳಿನಲ್ಲಿ ವಜ್ರಗಳು ಸಿಕ್ಕು ತ್ತವೆ. ಈ ನದಿ ಹರಿಯುವ ಪ್ರದೇಶ ಒಬ್ಬ ರಾಜನಿಗೆ ಸೇರಿದೆ. ಈತ ಹಿಂದೆ ಮೊಗಲ್ ಚಕ್ರವರ್ತಿಯ ಸಾಮಂತನಾಗಿದ್ದ. ಆಮೇಲೆ ಷಾಜಹಾನನಿಗೂ ಜಹಾಂಗೀರನಿಗೂ ಆದ ಯುದ್ಧಗಳ ಸಂದರ್ಭದಲ್ಲಿ ಆತ ತಾನು ಸ್ವತಂತ್ರರಾಜನೆಂದು ಘೋಷಿಸಿಕೊಂಡ. ಆಮೇಲೆ ಷಾಜಹಾನ ಪಟ್ಟಕ್ಕೆ ಬಂದಾಗ ಆ ರಾಜನಿಂದ ಕಪ್ಪ ಕಾಣಿಕೆಗಳನ್ನು ಕೇಳಿದ. ಆತನ ಬಳಿ ಅಷ್ಟೊಂದು ಹಣ ಇಲ್ಲದ ಕಾರಣ ಆತ ಗುಡ್ಡಗಾಡಿಗೆ ಹೋಗಿ ತಲೆಮರೆಸಿಕೊಂಡ. ಅವನ ಮೇಲೆ ದಂಡೆತ್ತಿಹೋದ ಷಾಜಹಾನನ ಸೈನ್ಯವು ಆತನು ಮಾಡಿದ ಉಪಾಯ ದಿಂದ ಹೊಟ್ಟೆಗಿಲ್ಲದೆ ಬಹಳ ಸಂಕಟಕ್ಕೀಡಾಯಿತು. ರಾಜ ಮತ್ತೆ ತನ್ನ ರಾಜ್ಯಕ್ಕೆ ಹಿಂದಿರುಗಿದ. ಆಮೇಲೆ ಮೊಗಲ್ ಚಕ್ರವರ್ತಿಗೆ ಸಾಲಿಯಾನ ಸಲ್ಲಬೇಕಾದ ಪೊಗದಿ ಯನ್ನು ಸಲ್ಲಿಸುತ್ತಾ ಬಂದ.

ಮೇಲೆ ಹೇಳಿದ ಗಣಿಗೆ ಆಗ್ರಾದಿಂದ ಹೋಗಬೇಕಾದರೆ ಅಲಹಾಬಾದ್, ಬನಾರಸ್, ಮತ್ತು ಸಸ್ಸೆರಾಂ—ಇವುಗಳ ಮೂಲಕ ಪ್ರಯಾಣಮಾಡಬೇಕು. ಸಸ್ಸೆರಾಂನಿಂದ ಮುಂದೆ ದಕ್ಷಿಣಕ್ಕೆ ತಿರುಗಿ ಹೋದರೆ ೨೧ ಕೋಶಗಳ ದೂರದಲ್ಲಿ ಮೇಲೆ ಹೇಳಿದ ರಾಜನ ಪಟ್ಟಣ ಸಿಕ್ಕುತ್ತದೆ. ಈ ಪಟ್ಟಣದಿಂದ ನಾಲ್ಕು ಕೋಶಗಳ ದೂರದಲ್ಲಿ ರೊಹ್ವಾಸ್ ಎಂಬ ಕೋಟೆ ಸಿಕ್ಕುತ್ತದೆ. ಇದು ಏಷ್ಯಾದಲ್ಲಿಯೇ ಬಹು ಭದ್ರವಾದ ಕೋಟೆಗಳಲ್ಲಿ ಒಂದು. ಹಿಂದೆ ಈ ಕೋಟೆ ರಾಜನಿಗೆ ಸೇರಿತ್ತು. ಈಗ ಮೊಗಲನಿಗೆ ಸೇರಿದೆ. ಇಂಡಿಯಾ ದೇಶವನ್ನು ಆಳಿದ ರಾಜರುಗಳೆಲ್ಲಾ ಈ ಕೋಟೆಯನ್ನು ವಶಪಡಿಸಿಕೊಳ್ಳಲು ಒಂದೇ ಸಮನೆ ಮುತ್ತಿಗೆಹಾಕಿ ನಿರಾಶರಾದರು.

---

[1] ಆಗ ಇದರ ಬೆಲೆ ಸುಮಾರು ೫೬೨೫ ಪೌಂಡುಗಳು.

ಮೇಲೆ ಹೇಳಿದ ಸೊಮಲ್‌ಪುರ ದೊಡ್ಡ ಪಟ್ಟಣ. ಮನೆಗಳನ್ನು ಮಣ್ಣಿನ ಗೋಡೆಯಿಂದ ಕಟ್ಟಿ, ಸೂರಿಗೆ ಮೇಲೆ ತೆಂಗಿನಸೋಗೆ ಹೊದಿಸಿದ್ದಾರೆ.

ನದಿಯಲ್ಲಿ ವಜ್ರಗಳನ್ನು ಪಡೆಯುವ ರೀತಿ ಹೀಗಿದೆ : ಮಳೆಗಾಲ ಮುಗಿದನಂತರ, ಅಂದರೆ ಸುಮಾರು ಜನವರಿ ತಿಂಗಳ ಕೊನೆಯಲ್ಲಿ, ನದಿಯಲ್ಲಿ ನೀರು ಕಡಿಮೆಯಾದಾಗ ನದಿಯ ಪಾತ್ರವೆಲ್ಲ ಕಾಣುತ್ತದೆ. ಆಗ ಸುಮಾರು ಏಳೆಂಟು ಸಾವಿರ ಜನ ನದಿಯ ಬಳಿ ಸೇರಿ ಮರಳಿನಲ್ಲಿ ಸಿಕ್ಕಬಹುದಾದ ವಜ್ರಗಳಿಗಾಗಿ ಹುಡುಕುತ್ತಾರೆ. ಹೀಗೆ ಹುಡುಕುತ್ತ ಸುಮಾರು ಐವತ್ತು ಕೋಶಗಳಷ್ಟು ದೂರ ಬೆಟ್ಟಗುಡ್ಡಗಳ ಕಡೆಗೆ ಸಾಗುತ್ತಾರೆ. ಯಾವ ಕಡೆ ಮರಳಿನಲ್ಲಿ ವಜ್ರಗಳಿವೆ ಎಂದು ಅನ್ನಿಸುವುದೋ ಅಂಥ ಕಡೆ ಎರಡು ಅಡಿ ಆಳದವರೆಗೆ ಮರಳನ್ನು ಬಗೆದು, ಅದನ್ನು ದಡಕ್ಕೆ ಸಾಗಿಸಿ, ತೊಳೆದು ಆರಿಸಿ'ವಜ್ರಗಳನ್ನು ಪಡೆಯುತ್ತಾರೆ. ಈ ನದಿಯಲ್ಲಿ ಪಡೆದ ವಜ್ರಗಳು ಬಹು ಸಣ್ಣಗಿರುತ್ತವೆ. ದಪ್ಪ ವಜ್ರಗಳು ಸಿಕ್ಕುವುದು ಅಪರೂಪ.

ಬೋರ್ನಿಯೋ ದ್ವೀಪದಲ್ಲಿ ಸಹ ಮೇಲೆ ಹೇಳಿದಂತಹ ವಜ್ರಗಳು ಸಿಕ್ಕುತ್ತವೆ. ಆದರೆ ಬೆಲೆ ಬಹಳ ದುಬಾರಿ. ಏಕೆಂದರೆ, ಅಲ್ಲಿಯ ರಾಣಿ ಪರದೇಶದವರಾರಿಗೂ ವಜ್ರಗಳನ್ನು ತೆಗೆದುಕೊಂಡುಹೋಗಲು ಅವಕಾಶಕೊಡುವುದಿಲ್ಲ. ಆ ದ್ವೀಪದ ರಾಣಿಯ ವಿಚಾರ ಏಕೆ ಹೇಳಿದೆ ಎಂದರೆ, ಅಲ್ಲಿ ರಾಣಿಯೇ ರಾಜ್ಯ ಆಳುವುದು. ರಾಣಿಯ ಗಂಡ ರಾಜ್ಯ ಆಳುವುದಿಲ್ಲ. ಅವನು ಎಲ್ಲರಂತೆ ಒಬ್ಬ ಪ್ರಜೆ, ಅಷ್ಟೆ.

ವಜ್ರಗಳನ್ನು ತೂಕಮಾಡಲು ಹಲವು ಕಡೆ ಹಲವು ತರಹ ತೂಕಗಳನ್ನು ಉಪಯೋಗಿಸುತ್ತಾರೆ. ರಾಮುಲ್‌ಕೋಟೆ ಮತ್ತು ಕೊಲ್ಲೂರು ಗಣಿಗಳಲ್ಲಿ 'ಮಾಂಜೆಲಿನ್' ತೂಕ ಇದ್ದರೆ, ಸೊಮಲ್‌ಪುರದಲ್ಲಿ 'ರತಿ' ತೂಕ ಇದೆ. ಈ ರೀತಿಯ ತೂಕ ಇಡೀ ಮೊಗಲ್ ಸಾಮ್ರಾಜ್ಯದಲ್ಲಿ ಚಾಲ್ತಿಯಲ್ಲಿದೆ. ಒಂದು ಮಾಂಜೆಲ್ ಎಂದರೆ ೧ ೩/೪ ಕ್ಯಾರೆಟ್; ರತಿ ಎಂದರೆ ೭/೮ ಕ್ಯಾರೆಟ್.

ವಜ್ರಗಳನ್ನು ಕೊಂಡುಕೊಳ್ಳಲು ಕೊಡಬೇಕಾದ ಹಣದ ಬಗ್ಗೆ ಎರಡು ಮಾತು. ಬಂಗಾಳದ ರಾಜ್ಯದಲ್ಲಿ ರೂಪಾಯಿ ಕೊಡಬೇಕು. ರಾಮುಲ್‌ಕೋಟೆಯಲ್ಲಿ ಚಿನ್ನದ ಪಗೋಡಾ ಕೊಡಬೇಕು. ಈ ಪಗೋಡಾಗಳನ್ನು ರಾಜನೇ ಟಂಕಿಸುತ್ತಾನೆ. ಬೆಲೆ ಸುಮಾರು ೩ ೧/೨ ರೂಪಾಯಿಗಳು. ಕೊಲ್ಲೂರು ಗಣಿಗಳಲ್ಲಿಯೂ ಪಗೋಡಾದಲ್ಲಿಯೇ ಕೊಡಬೇಕು. ಆದರೆ ಅಲ್ಲಿಯ ಪಗೋಡಾಗಳ ಚಿನ್ನ ಶ್ರೇಷ್ಠ. ಕಾರಣ ಬೆಲೆ ಮೂರೂವರೆ ರೂಪಾಯಿಗಳಿಗಿಂತ ಸ್ವಲ್ಪ ಹೆಚ್ಚು.

ಪಗೋಡಾಗಳನ್ನು ಇಂಗ್ಲಿಷರೂ ಡಚ್ಚರೂ ಟಂಕಒತ್ತುತ್ತಾರೆ. ಹೀಗೆ ಟಂಕ ಒತ್ತಲು ರಾಜನಿಂದ ಅನುಮತಿ ಪಡೆದಿದ್ದಾರೆ. ಆದರೆ ಜನರು ಈ ಪಗೋಡಾಗಳನ್ನು ತೆಗೆದುಕೊಳ್ಳದೆ ತಮಗೆ ಹಳೆಯ ಪಗೋಡಾಗಳೇ ಬೇಕೆನ್ನುತ್ತಾರೆ. ನೂರಾರು ವರ್ಷಗಳ ಹಿಂದೆ ಟಂಕಿಸಿದ ಈ ಪಗೋಡಾಗಳು ಈಗ ಸವೆದುಹೋಗಿದ್ದರೂ ಬೆಲೆ ೪ ೧/೨

ರೂಪಾಯಿಗಳು. ಅವುಗಳಲ್ಲಿ ಚಿನ್ನ ಹೆಚ್ಚಿದೆಯೇ ಎಂದರೆ, ಇಲ್ಲ. ಆದರೂ ಹಳೆಯ ನಾಣ್ಯವೇ ಬೇಕೆಂದು ಕೇಳುವಾಗ ಆಶ್ಚರ್ಯವಾಗುತ್ತದೆ. ಈ ನಾಣ್ಯಗಳ ಚಲಾವಣೆಯಲ್ಲಿ 'ಷರಾಫರು' ಭಾರಿ ಲಾಭ ಸಂಪಾದಿಸುತ್ತಾರೆ. ಇವನ್ನು ವರ್ತಕರು ಪಡೆಯುವ ಮುನ್ನ ಷರಾಫರಿಂದ ಪರೀಕ್ಷೆಮಾಡಿಸದೆ ತೆಗೆದುಕೊಳ್ಳುವುದಿಲ್ಲ. ಈ ಪರೀಕ್ಷೆಗೆ ಶೇ ೧/೪ ಶುಲ್ಕ ಕೊಡಬೇಕು.

ವಜ್ರದ ಗಣಿಯಲ್ಲಿ ಕೆಲಸಮಾಡುವ ಜನ ವಜ್ರವನ್ನು 'ಇರಿ' (iri ಹೀರಾ) ಎಂದೂ ತುರ್ಕಿ, ಪರ್ಷಿಯಾ ಮತ್ತು ಅರಬ್ಬಿ ಭಾಷೆಗಳಲ್ಲಿ 'ಅಲ್ಮಸ್' (almas) ಎಂದೂ ಕರೆಯುತ್ತಾರೆ. ಯುರೋಪಿಯನ್ ಭಾಷೆಗಳಲ್ಲಿ 'ಡೈಮಂಡ್' (diamond) ಎಂದೇ ಕರೆಯುತ್ತಾರೆ.

ಇದಿಷ್ಟು ನಾನು ನನ್ನ ಕಣ್ಣಿನಿಂದ ಕಂಡ ವಿಚಾರ. ಹಲವಾರು ಸಲ ಗಣಿಗಳಿಗೆ ಹೋದಾಗ ಕಂಡ ವಿಷಯಗಳನ್ನು ತಿಳಿಸಿದ್ದೇನೆ. ನನಗಿಂತ ಮುಂಚೆ ಯಾರಾದರೂ ಬರೆದಿದ್ದರೆ ಅಥವಾ ಹೇಳಿದ್ದರೆ ಅದೆಲ್ಲ ನಾನು ಮಾಡಿದ ವರದಿಗಳಿಂದ ಪಡೆದದ್ದು ಎಂದು ಭಾವಿಸಬೇಕು.

ಬಣ್ಣದ ಹರಳುಗಳು ದೊರೆಯುವುದು ಪೂರ್ವದೇಶದಲ್ಲಿ ಎರಡೇ ಕಡೆ. ಒಂದು ಪೆಗೂ ರಾಜ್ಯದಲ್ಲಿ ; ಇನ್ನೊಂದು ಸಿಲೋನ್ ದ್ವೀಪದಲ್ಲಿ. ಪೆಗೂ ರಾಜ್ಯದಲ್ಲಿ ಮಾಣಿಕ್ಯ (rubies), ಹಳದಿ ಗೋಮೇದಿಕ (yellow topaz), ನೀಲ ಮತ್ತು ಬಿಳಿಯಮಣಿ (blue and white sapphires), 'ಸರ್ಕಾನ್' ಮಣಿ (hyacinth), ಪದ್ಮರಾಗ (amethyst) ಮುಂತಾದ ಹರಳುಗಳು ದೊರೆಯುತ್ತವೆ. ಆದರೆ ಇವು ಅಷ್ಟು ಒಳ್ಳೆಯವಲ್ಲ. ಒಳ್ಳೆಯವು ಸಿಕ್ಕಿದರೂ ಅವನ್ನು ಪೆಗೂ ರಾಜ ತನಗಿಟ್ಟುಕೊಂಡು ಸಾಧಾರಣವಾದವುಗಳನ್ನು ಮಾತ್ರ ಮಾರಲು ಅವಕಾಶಕೊಡುತ್ತಾನೆ. ಈ ಕಾರಣ ನಾನು ನನ್ನ ಪ್ರವಾಸಗಳಲ್ಲಿ ಯುರೋಪಿನಿಂದ ಏಷ್ಯಾಕ್ಕೆ ಬಂದಾಗಲೆಲ್ಲಾ ಮಾಣಿಕ್ಯಗಳನ್ನು (rubies) ಕೊಂಡುತಂದು ಹೇರಳವಾದ ಲಾಭ ಸಂಪಾದಿಸಿದೆ. ಪೆಗೂ ರಾಜನ ಅರಮನೆಯಲ್ಲಿ ಮೊಟ್ಟೆಯ ಗಾತ್ರದಷ್ಟು ಮಾಣಿಕ್ಯಗಳನ್ನು ನೋಡಿದೆ ಎಂದು ವಿನ್‌ಸೆಂಟ್ ಲೆಬ್ಲಾಂಕ್ (Vincent Le Blank) ಎಂಬುವನು ಹೇಳಿದ ಕಥೆಯನ್ನು ನಾನು ನಂಬಲಾರೆ.

ನಾನು ಮಸುಲಿಪಟ್ಣಂ ಮತ್ತು ಗೋಲ್ಕೊಂಡಾಗಳಲ್ಲಿ ಇದ್ದಾಗ ಪೆಗೂವಿನಿಂದ ಬಂದ ವರ್ತಕರು ಮಾಣಿಕ್ಯಗಳನ್ನು ತಂದು ಮಾರುತ್ತಿದ್ದುದನ್ನು ನೋಡಿದೆ. ಮಾಣಿಕ್ಯಗಳನ್ನು ರತಿ ತೂಕದಲ್ಲಿ ಮಾರುತ್ತಾರೆ. ಒಂದು ರತಿ ತೂಕದ ಮಾಣಿಕ್ಯಕ್ಕೆ ೨೦ ಪಗೋಡಾ ಬೆಲೆ. ಪೆಗೂನಲ್ಲಿ ಬಣ್ಣದ ಹರಳುಗಳನ್ನೆಲ್ಲಾ ಮಾಣಿಕ್ಯ (ruby) ಎಂದೇ ಕರೆಯುತ್ತಾರೆ. ಉದಾಹರಣೆಗೆ, ನೀಲಮಣಿಯನ್ನು 'ನೀಲಿ ಮಾಣಿಕ್ಯ' ಎಂದೂ, ಪದ್ಮರಾಗವನ್ನು (amethyst) 'ನೇರಿಳೆಬಣ್ಣದ ಮಾಣಿಕ್ಯ' ಎಂದೂ ಕರೆಯುತ್ತಾರೆ.

ಸಿಲೋನಿನಲ್ಲಿ ಮಾಣಿಕ್ಯಗಳು ನದಿಯಲ್ಲಿ ಸಿಕ್ಕುತ್ತವೆ.

ಇನ್ನೊಬ್ಬರ ಜೊತೆ ಜಗಳ ಗುದ್ದಾಟ ಇಲ್ಲ. ರಜಪೂತರು ಗೋಮಾಂಸವೊಂದನ್ನು ಬಿಟ್ಟು ಬೇರೆಲ್ಲ ಮಾಂಸಗಳನ್ನು ತಿನ್ನುತ್ತಾರೆ. ಇವರ ಮನೆಗಳಲ್ಲಿ ಬನಿಯರು ತಿಂಡಿ ತೀರ್ಥಗಳನ್ನು ತೆಗೆದುಕೊಳ್ಳುವುದಿಲ್ಲ.

ನಾಲ್ಕನೇ ಜಾತಿಯವರನ್ನು 'ಚರದೋಸ್' (Charados) ಅಥವಾ 'ಸೂದ್ರ' (Soudra–ಶೂದ್ರ) ಎಂದು ಕರೆಯುತ್ತಾರೆ. ರಜಪೂತರಂತೆ ಇವರೂ ಯುದ್ಧಗಳಲ್ಲಿ ಸೇವೆ ಸಲ್ಲಿಸುತ್ತಾರೆ. ಆದರೆ ಇವರಿಗೂ ಅವರಿಗೂ ವ್ಯತ್ಯಾಸವೇನೆಂದರೆ, ರಜಪೂತರು ಕುದುರೆಯ ಮೇಲೆ ಕುಳಿತು ಯುದ್ಧಮಾಡಿದರೆ, ಇವರು ನೆಲದ ಮೇಲೆ ನಿಂತು ಯುದ್ಧಮಾಡುತ್ತಾರೆ. ಇಬ್ಬರೂ ಭಾವಿಸುತ್ತಾರೆ, ಯುದ್ಧದಲ್ಲಿ ಸತ್ತರೆ ಸ್ವರ್ಗ ಸಿಕ್ಕುತ್ತದೆ ಎಂದು. ಹೇಡಿಯಂತೆ ಓಡಿಹೋಗುವುದಕ್ಕಿಂತ ಹೇಯವಾದುದು ಬೇರೊಂದಿಲ್ಲ ; ಅಂಥ ಕೆಲಸ ಮನೆತನಕ್ಕೇ ಅವಮರ್ಯಾದೆ ಮಾಡಿದಂತೆ. ನಾನು ಕೇಳಿದ ಒಂದು ಕಥೆ ಹೀಗಿದೆ : ಒಬ್ಬ ಯೋಧ ಇದ್ದ. ಅವನಿಗೊಬ್ಬಳು ಹೆಂಡತಿ. ಇಬ್ಬರೂ ಅಚ್ಚುಮೆಚ್ಚಾಗಿದ್ದರು. ಗಂಡ ದಂಡಿಗೆ ಹೋದ. ಹೆಂಡತಿಯನ್ನು ನೆನೆದುಕೊಂಡು ಆತ ದಂಡಿನಲ್ಲಿ ಕಡಿದಾಡದೆ ಮನೆಗೆ ಹಿಂದಿರುಗಿದ. ಹೇಡಿಯಂತೆ ಹಿಂದಿರುಗಿದ ಗಂಡನನ್ನು ನೋಡಿ ಹೆಂಡತಿ ಮನೆಯ ಬಾಗಿಲು ಹಾಕಿ ಅವನನ್ನು ಒಳಕ್ಕೆ ಸೇರಿಸಲೇ ಇಲ್ಲ. ಇಂಥ ಹೇಡಿ ಗಂಡನಿಗೆ ತಾನು ಹೆಂಡತಿ ಎನಿಸಿಕೊಳ್ಳಲಾರೆ ಎಂದು ಆಕೆ ಹೇಳಿಬಿಟ್ಟಳು. ಗಂಡ ದಂಡಿಗೆ ಹಿಂದಿರುಗಿದ ವೀರಾವೇಶದಿಂದ ಹೋರಾಡಿ ಹೆಸರು ಗಳಿಸಿ ಮನೆಗೆ ಹಿಂದಿರುಗಿದ. ಹೆಂಡತಿ ಗಂಡನನ್ನು ಎದುರುಗೊಂಡು ಅವನ ಶೌರ್ಯವನ್ನು ಮೆಚ್ಚಿ ಕೊಂಡಾಡಿದಳು.

ಈ ನಾಲ್ಕು ಜಾತಿಗಳಿಗೂ ಸೇರದ ಜನರನ್ನು 'ಪೌಜೆಕೂರರು' (Pauzecour : ಪರಿಯರು ?) ಎಂದು ಕರೆಯುತ್ತಾರೆ. ಇವರು ವಿವಿಧ ಯಾಂತ್ರಿಕ ಕುಶಲ ಕಲೆಗಳಲ್ಲಿ ನಿರತರಾಗಿರುತ್ತಾರೆ. ಇವರ ವೃತ್ತಿಗಳು ಬೇರೆಬೇರೆ ಇದ್ದರೂ ಉಳಿದ ವಿಚಾರಗಳಲ್ಲಿ ಪರಸ್ಪರ ಯಾವ ಭೇದವೂ ಇಲ್ಲ. ವೃತ್ತಿಯು ತಂದೆಯಿಂದ ಮಗನಿಗೆ ವಂಶಪಾರಂಪರ್ಯವಾಗಿ ಬರುತ್ತದೆ. ಉದಾಹರಣೆಗೆ, ಒಬ್ಬ ದರ್ಜಿ ತನ್ನ ಮಕ್ಕಳಿಗೆ ದರ್ಜಿ ಕೆಲಸವನ್ನೇ ಕಲಿಸಬೇಕು. ಅಷ್ಟೇ ಅಲ್ಲ, ದರ್ಜಿಯವರನ್ನು ಬಿಟ್ಟರೆ ಬೇರೆಯವರಿಗೆ ಹೆಣ್ಣುಕೊಡುವುದು ಅವರಿಂದ ತರುವುದು ಸಾಧ್ಯವಿಲ್ಲ. ಅವರು ಸತ್ತಾಗಲೂ ದರ್ಜಿಗಳು ಮಾತ್ರ ಶವಸಂಸ್ಕಾರಕ್ಕೆ ಹೋಗುತ್ತಾರೆ. ಬೇರೆ ಕಸುಬುದಾರರಲ್ಲಿಯೂ ಹೀಗೆಯೇ.

'ಹಲಾಲ್‌ಖೋರರು' (Halalkhors) ಎಂಬ ಒಂದು ಜಾತಿಯುಂಟು. ಇವರ ಕೆಲಸ, ಮನೆಮಠಗಳನ್ನು ಸ್ವಚ್ಛಮಾಡುವುದು. ಈ ಕೆಲಸಕ್ಕೆ ಮನೆಗಳ ಸಂಖ್ಯೆ ಇದ್ದಂತೆ ತಿಂಗಳಿಗೆ ಇಷ್ಟು ಎಂದು ಕೂಲಿ ಪಡೆಯುತ್ತಾರೆ.

ಇಂಡಿಯಾದಲ್ಲಿ ಯಾರ ಮನೆಯಲ್ಲಾದರೂ ಸರಿ, ಅದು ಮುಹಮ್ಮದೀಯನದಾಗಿರಬಹುದು ಅಥವಾ ವಿಗ್ರಹಾರಾಧಕನದಾಗಿರಬಹುದು, ಅವನ ಮನೆಯಲ್ಲಿ ಐವತ್ತು ಜನ ಆಳುಗಳಿದ್ದರೂ ಒಬ್ಬನಾದರೂ ಪೊರಕೆ ಹಿಡಿಯುವುದಿಲ್ಲ. ಹಾಗೆ ಮಾಡಿದರೆ ತನ್ನ

ಮರ್ಯಾದೆಗೆ ಕಡಿಮೆ ಎಂದು ಭಾವಿಸುತ್ತಾನೆ. ಹಲಾಲ್‌ಖೋರನೇ ಆ ಕೆಲಸ ಮಾಡ ಬೇಕು. ಐವತ್ತು ಜನ ಆಳುಗಳಿಗೆ ಐವತ್ತು ಕೆಲಸ. ಒಬ್ಬನಿಗೆ ನೀರು ತರುವ ಕೆಲಸ ವಾದರೆ, ಇನ್ನೊಬ್ಬನಿಗೆ ಗುಡಿಗುಡಿ ಹೊತ್ತಿಸಿಕೊಡುವ ಕೆಲಸ. ಒಬ್ಬನ ಕೆಲಸವನ್ನು ಇನ್ನೊಬ್ಬ ಮಾಡುವುದಿಲ್ಲ. ಸುಮ್ಮನೆ ಕಲ್ಲು ಕಂಬ ನಿಂತ ಹಾಗೆ ನಿಂತಿರುತ್ತಾರೆ. ಗುಲಾಮರಾದವರು ಮಾತ್ರ ಯಜಮಾನ ಹೇಳಿದ್ದನ್ನೆಲ್ಲಾ ಮಾಡಬೇಕು. ಹಲಾಲ್ ಖೋರರು ಮನೆಗಳ ಪಾಯಿಖಾನೆ ಮತ್ತು ಕಸಕಡ್ಡಿ ಸಾಗಿಸುವ ಕೆಲಸ ಮಾಡುತ್ತಾರಾದ ಕಾರಣ ಬೇರೆಯವರು ತಿಂದುಬಿಟ್ಟದ್ದನ್ನು ಇವರು ತಿನ್ನುತ್ತಾರೆ. ಯಾವ ಜಾತಿಯವರ ಎಂಜಲನ್ನಾದರೂ ಸರಿ, ಇವರು ತಿನ್ನುತ್ತಾರೆ ; ಯಾವುದನ್ನಾದರೂ ತಿನ್ನುತ್ತಾರೆ. ಇವರು ಊರಿನ ಕಸವನ್ನು ಕತ್ತೆಗಳ ಮೇಲೆ ಹೇರಿಕೊಂಡು ಊರ ಹೊರಕ್ಕೆ ಸಾಗಿಸುತ್ತಾರೆ. ಬೇರೆಯವರು ಕತ್ತೆಯನ್ನು ಮುಟ್ಟುವುದೂ ಇಲ್ಲ. ಪರ್ಷಿಯಾದಲ್ಲಿರುವ ಪರಿಸ್ಥಿತಿಯೇ ಬೇರೆ. ಅಲ್ಲಿ ಕತ್ತೆಯೇ ಹೊರಲೂ ಸವಾರಿಗೂ ಬೇಕಾದ ವಾಹನ. ಇಂಡಿಯಾದಲ್ಲಿ ಹಲಾಲ್‌ಖೋರರು ಮಾತ್ರ ಹಂದಿಗಳನ್ನು ಸಾಕಿ ತಿನ್ನುವವರು.

ಏಷ್ಯಾದ ರಾಜರುಗಳಲ್ಲಿ, ವಿಗ್ರಹಾರಾಧಕರಾದ (ಹಿಂದೂಗಳಾದ) ರಾಜರುಗಳು ಯಾರೆಂದರೆ : ಅರಕಾನ್ ರಾಜ, ಪೆಗೂ ರಾಜ, ಸಯಾಂ ರಾಜ, ಕೊಚಿನ್‌ಚೀನಾ ರಾಜ ಮತ್ತು ಟೋನ್‌ಕಿನ್ (Tonkin?) ರಾಜ ಚೀನಾ ರಾಜನ ವಿಚಾರ ಹೇಳ ಬೇಕೆಂದರೆ, ಟಾರ್ಟರರು ಅವನ ದೇಶಕ್ಕೆ ಬರುವ ಮುನ್ನ ಆತ ವಿಗ್ರಹಾರಾಧಕನಾಗಿದ್ದ. ಅವರು ಬಂದ ಮೇಲೆ ಅವನು ಎಂಥವನು ಎಂದು ಹೇಳಲು ಸಾಧ್ಯವಾಗಲಿಲ್ಲ. ಏಕೆಂದರೆ, ಟಾರ್ಟರರು ವಿಗ್ರಹಾರಾಧಕರೂ ಅಲ್ಲ, ಮಹಮ್ಮದೀಯರೂ ಅಲ್ಲ ; ಎರಡೂ ಕೂಡಿ ದಂಥವರು.

ಮುಖ್ಯ ದ್ವೀಪಗಳ ರಾಜರುಗಳ ವಿಚಾರ. ಜಪಾನ್ ರಾಜ, ಸಿಲೋನ್ ರಾಜ, ಮೊಲುಕ್ಕಾ ದ್ವೀಪಗಳ ಕೆಲವು ಸಣ್ಣ ಪುಟ್ಟ ರಾಜರುಗಳು, ಮೊಗಲ್ ಸಾಮ್ರಾಜ್ಯ ದಲ್ಲಿರುವ ಎಲ್ಲಾ 'ರಾಜರು'ಗಳು, ಬಿಜಾಪುರ ಗೋಲ್ಕೊಂಡಾ ರಾಜ್ಯಗಳ ಅಕ್ಕಪಕ್ಕದ ರಾಜರುಗಳು–ಇವರೆಲ್ಲಾ ವಿಗ್ರಹಾರಾಧಕರು. ಒಟ್ಟಿನಲ್ಲಿ ಜನಸಾಮಾನ್ಯರೆಲ್ಲ, ಅವರು ಮೊಗಲನ ಪ್ರಜೆಗಳಾಗಿರಲಿ ಅಥವಾ ಬಿಜಾಪುರ ಹಾಗೂ ಗೋಲ್ಕೊಂಡಾ ರಾಜರ ಪ್ರಜೆ ಗಳಾಗಿರಲಿ—ಅವರೆಲ್ಲ ವಿಗ್ರಹಾರಾಧಕರು. ಅಚೀನ, ಜಾವಾ ಮತ್ತು ಮಕಸ್ಸಾರ್ ದ್ವೀಪಗಳ ರಾಜರುಗಳು ಮಹಮ್ಮದೀಯರಾದರೂ ಅಲ್ಲಿಯ ಪ್ರಜೆಗಳು ವಿಗ್ರಹಾರಾಧಕರು.

ಸಿಲೋನ್ ರಾಜ . ವಿಗ್ರಹಾರಾಧಕನೆಂದು ಹೇಳಿದೆನಷ್ಟೆ. ಇದು ಸತ್ಯ ಸಂಗತಿ ಯಾದರೂ ಐವತ್ತು ವರ್ಷಗಳ ಹಿಂದೆ ಒಬ್ಬ ಸಿಲೋನ್‌ರಾಜ ಕ್ರೈಸ್ತನಾದುದೂ ಸತ್ಯ. 'ಪ್ರಿಯಾ ಪೆಂಡರ್ಸ್' ಎಂಬ ಹೆಸರಿನ ಆತ ಕ್ರೈಸ್ತನಾದ ಮೇಲೆ ಜೀನ್ (Jean-John)

ಎಂಬ ಹೆಸರಿನವನಾದ.[1] ಈತನು ಕ್ರೈಸ್ತನಾದನೊ ಇಲ್ಲವೊ, ಅವನ ರಾಜ್ಯದ ರಾಜ ಕುಮಾರರೂ ಪುರೋಹಿತರುಗಳೂ ಸೇರಿ ಬೇರೊಬ್ಬನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಆದರೂ ಆತ ತಾನು ಮಾಡುವುದನ್ನು ಮಾತ್ರ ಬಿಡಲಿಲ್ಲ. ತನ್ನ ಪ್ರಜೆಗಳನ್ನು ಕ್ರೈಸ್ತರನ್ನಾಗಿ ಮಾಡಲು ಪ್ರಯತ್ನಪಟ್ಟ. ಜೆಸ್ಯೂಯಿಟ್ ಪಾದ್ರಿಗಳಿಗೆ ಕೊಲಂಬೋ ಸುತ್ತಮುತ್ತ ಹನ್ನೆರಡು ಭಾರಿ ಗ್ರಾಮಗಳನ್ನು ಬಳುವಳಿಯಾಗಿ ಕೊಟ್ಟ. ಈ ಗ್ರಾಮಗಳ ಆದಾಯದಿಂದ ಒಂದು ಕಾಲೇಜು ನಡೆಸಿ, ಅಲ್ಲಿ ಹುಡುಗರಿಗೆ ಪಾಠಹೇಳಬೇಕೆಂದು ತಿಳಿಸಿದ. ಪಾದ್ರಿಗಳು ಪಾಠಹೇಳಲು ಆರಂಭಿಸಿದರು. ಲ್ಯಾಟಿನ್ ಭಾಷೆಯಂಥ ಪರ ಭಾಷೆ ಕಲಿಯುವುದು ಹುಡುಗರಿಗೆ ಕಷ್ಟವಾಗುವುದೆಂದು ಭಾವಿಸಲಾಗಿತ್ತು. ಆದರೆ ಅವರು ಒಂದು ವರ್ಷದಲ್ಲಿ ಕಲಿಯಬೇಕಾದುದನ್ನು ಆರು ತಿಂಗಳಲ್ಲಿ ಕಲಿತರು. ಕಲಿತದ್ದು ಅಷ್ಟೇ ಅಲ್ಲ, ಎಷ್ಟೋ ಗಹನವಾದ ವಿಷಯಗಳ ಬಗ್ಗೆ ಗುರುಗಳನ್ನೇ ಪ್ರಶ್ನೆಮಾಡಲಾರಂಭಿಸಿದರು.

ರಾಜನು ಕ್ರೈಸ್ತನಾದ ಹಲವು ವರ್ಷಗಳ ಮೇಲೆ ಅಲೆಗಮ್ಮ ಮೋತಿಯರ್ (Alegamma Motiar : ಅಳಗಪ್ಪ ಮೊದಲಿಯಾರ್ ?) ಎಂಬ ಹೆಸರಾಂತ ಪಂಡಿತನೊಬ್ಬ ಜೆಸ್ಯೂಯಿಟ್ ಪಾದರುಗಳೊಡನೆಯೂ ಇತರ ಪಾದ್ರಿಗಳೊಡನೆಯೂ ಚರ್ಚೆ ನಡೆಸಿ, ಅವರಿಂದ ಪ್ರೇರಿತನಾಗಿ ಕ್ರೈಸ್ತನಾದ. ಹುಟ್ಟುಕ್ರೈಸ್ತರಿಗಿಂತ ಹೆಚ್ಚಿನ ನಿಷ್ಠೆಯಿಂದ ಈತ ಸ್ಥಳದ ಜನರನ್ನು ಕ್ರೈಸ್ತರನ್ನಾಗಿ ಮಾಡುವ ಕೆಲಸವನ್ನು ಆರಂಭಿಸಿದ.

ಇಂಡಿಯಾದ ವಿಗ್ರಹಾರಾಧಕರು ಹಸು, ಕೋತಿ ಮುಂತಾದ ಪ್ರಾಣಿಗಳನ್ನು ಪೂಜಿಸಿದರೂ ಸರ್ವಶಕ್ತನಾದ ದೇವರು ಒಬ್ಬನೇ ಎಂದು ಭಾವಿಸುತ್ತಾರೆ. ಈ ದೇವರನ್ನು ಒಂದೊಂದು ಕಡೆ ಒಂದೊಂದು ಹೆಸರಿನಲ್ಲಿ ಕರೆಯುತ್ತಾರೆ. 'ಪೆರ್ಮೆಸ್ಸೆರ್' (ಪರಮೇಶ್ವರ), 'ಪೆರಮಯಲ್' (ಪೆರುಮಾಳ್), 'ವ್ವಿಷ್ಣೌ' (ವಿಷ್ಣು) ಮುಂತಾಗಿ ಕರೆಯುತ್ತಾರೆ. ಈ ವಿಗ್ರಹಾರಾಧಕರು ಸಂಖ್ಯೆಗಳಲ್ಲಿ ವೃತ್ತ (Circle–ಸೊನ್ನೆ ಶೂನ್ಯ) ಅತಿಸಂಪೂರ್ಣವಾದುದು ಎಂಬುದನ್ನು ಕೇಳಿರಬೇಕೆಂದು ಕಾಣುತ್ತದೆ. ಈ ಕಾರಣ ಅದನ್ನು ಮತ್ತಷ್ಟು ಸಂಪೂರ್ಣಮಾಡಬೇಕೆಂಬ ಉದ್ದೇಶದಿಂದ ದೇವರು ಅಂಡಾಕಾರಕ್ಕಿದ್ದಾನೆಂದು ಹೇಳಿ, ಆ ಆಕಾರದ ಕಲ್ಲನ್ನು (ಸಾಲಿಗ್ರಾಮ ಶಿಲೆ) ಗಂಗಾನದಿಯಿಂದ ತಂದು, ತಮ್ಮ ದೇವಸ್ಥಾನಗಳಲ್ಲಿಟ್ಟು ದೇವರಂತೆ ಪೂಜಿಸುತ್ತಾರೆ ಈ ದಡ್ಡತನ ಇವರಲ್ಲಿ ಎಷ್ಟು ಆಳವಾಗಿ ಬೇರೂರಿದೆಯೆಂದರೆ, ಮಹಾ ಪಂಡಿತನಾದ ಬ್ರಾಹ್ಮಣನು ಸಹ ಈ ಭಾವನೆಯಿಂದ ಬೇರೆ

---

[1] ಕ್ರೈಸ್ತನಾದ ಪ್ರಿಯ ಪೆಂಡರ್ ಎಂಬ ರಾಜನ ಹೆಸರು ಡೊನ್-ಜುಆನ್ ಧರ್ಮಪಾಲಾ ಎಂದು ಗೊತ್ತಾಗುತ್ತದೆ. ಈತ ಪೋರ್ಚುಗೀಸರ ಸಹಾಯದಿಂದ ೧೫೪೨ರಲ್ಲಿ ಪಟ್ಟಕ್ಕೆ ಬಂದು, ೩೯ ವರ್ಷಗಳ ಕಾಲ ಆಳಿದ. ಇವನು ರಾಜ್ಯಭಾರಮಾಡುವಾಗ ರಾಜ ಸಿಂಘಾ ಎಂಬುವನೊಡನೆ ಹೋರಾಟ ತಪ್ಪಲಿಲ್ಲ. ಕೊನೆಗೆ ಸಿಂಘಾನೆ ರಾಜನಾದ.

ಯಾಗಲಾರ. ಇಂಥನರನ್ನು ನಂಬಿಯೇ ವಿಗ್ರಹಾರಾಧಕರು ಅಮಾನುಷವೂ ಹೇಯವೂ ಆದ ವಿಗ್ರಹಾರಾಧನೆಯಲ್ಲಿ ಬಿದ್ದು ತೊಳಲಾಡುತ್ತಿರುವುದು. ಈ ಬಗ್ಗೆ ಅತಿ ಮೂಢ ನಂಬಿಕೆಗಳನ್ನು ಹೊಂದಿರುವ ಒಂದು ಜಾತಿ ಇದೆ. ಈ ಜಾತಿಯವರು ಮೊಟ್ಟೆ ಯಾಕಾರದ ಕಲ್ಲನ್ನು ಕೊರಳಿನಲ್ಲಿ ತೂಗುಹಾಕಿಕೊಂಡು ಪ್ರಾರ್ಥನೆಮಾಡುವಾಗ ಅದನ್ನು ತಮ್ಮ ದೇಹಕ್ಕೆ ಒತ್ತಿಕೊಳ್ಳುತ್ತಾರೆ[1].

ಈ ರೀತಿಯ ಕೀಳಾದ ಹಾಗೂ ಪಶ್ಚಾತ್ತಾಪ ಪಡಬೇಕಾದ ಮೂಢನಂಬಿಕೆಯ ಕಾರಣ ವಿಗ್ರಹಾರಾಧಕರು ಪುರಾತನ ಪೇಗನರಂತೆ (ಅನಾಗರಿಕರಂತೆ) ತಮ್ಮ ದೇವರು ಗಳನ್ನು ಮನುಷ್ಯರಂತೆಯೇ ಭಾವಿಸುತ್ತಾರೆ. ಅವುಗಳಿಗೆ ಮದುವೆ–ಮುಂಜಿ ಮಾಡು ತ್ತಾರೆ; ಊಟೋಪಚಾರ ಮುಂತಾದ ಷೋಡಸೋಪಚಾರಗಳನ್ನು ಮಾಡುತ್ತಾರೆ. ಹೀಗಾಗಿ ಇವರು ರಾಮನನ್ನು ದೊಡ್ಡದೇವರೆಂದು ಭಾವಿಸುತ್ತಾರೆ. ಅವನನ್ನು ಕುರಿತ ಕಟ್ಟುಕತೆಗಳನ್ನು ಬ್ರಾಹ್ಮಣರು ಹೇಳುವುದನ್ನು ಕೇಳಬೇಕು! ರಾಮನು ಮೃಗದ ಹಿಂದೆ ಹೋಗಿ ಹಿಂದಿರುಗಿ ಬಂದಾಗ ಸೀತೆಯನ್ನು ಕಾಣದೆ ದುಃಖ ಪಟ್ಟ ವಿಚಾರವನ್ನು ಬ್ರಾಹ್ಮಣರು ಹೇಳುವಾಗ ಕಣ್ಣಲ್ಲಿ ನೀರು ತರುತ್ತಾರೆ. ಸೀತೆಯನ್ನು ಕದ್ದ ರಾವಣನ ಮೇಲೆ ರಾಮ ಕಪಿ ಸೈನ್ಯವನ್ನು ಕಟ್ಟಿಕೊಂಡು ಯುದ್ಧಕ್ಕೆ ಹೋರಟ. ಹನುಮಾನ್ ಎಂಬ ಕೋತಿ ತೋರಿದ ದಾರಿಯಲ್ಲಿ ರಾಮ ರಾವಣನ ಅರಮನೆಯ ಬಳಿಗೆ ಹೋದ. ಇದಕ್ಕೆ ಮೊದಲು ಹನುಮಾನ್ ತನ್ನ ಬಾಲಕ್ಕೆ ಬೆಂಕಿ ಹೊತ್ತಿಸಿಕೊಂಡು ಅರಮನೆಗೆ ತಾಗಿಸಿ ಅದನ್ನು ಸುಟ್ಟುಹಾಕಿದ್ದ. ಆ ಬೆಂಕಿ ಇನ್ನೂ ಆರಿರಲಿಲ್ಲ. ರಾವಣ ಸೀತೆಯನ್ನು ತ್ಯಜಿಸಿ ಬೆಟ್ಟಗುಡ್ಡಗಳಿಗೆ ಓಡಿಹೋಗಿಬಿಟ್ಟ. ರಾಮ ಸೀತೆಗಾಗಿ ಹುಡುಕಿದ. ಆಕೆಯನ್ನು ಕಂಡಾಗ ಅವರಿಬ್ಬರಿಗೂ ಆದ ಸಂತೋಷ ಅಷ್ಟಿಷ್ಟಲ್ಲ. ಇದನ್ನು ಆಗಮಾಡಿಕೊಟ್ಟ ಹನುಮಾನನನ್ನು ರಾಮ ಹೊಗಳಿದ್ದೂ ಹೊಗಳಿದ್ದೆ.

ರಾವಣ ಇನ್ನುಳಿದ ತನ್ನ ಜೀವಮಾನವನ್ನು ಒಬ್ಬ 'ಫಕೀರ' (ಸಂನ್ಯಾಸಿ)ನಂತೆ ಕಳೆದನು. ರಾವಣ ಸಂನ್ಯಾಸಿಯು ಬೆತ್ತಲೆಯಾಗಿ ಭಿಕ್ಷುಕನಂತೆ ಪ್ರಪಂಚದಲ್ಲೆಲ್ಲಾ ಅಲೆಯಲಾರಂಭಿಸಿದ. ಆಗ ಅವನನ್ನು ಎಷ್ಟೋ ಜನ ಅನುಸರಿಸಿದರು. ಸಂನ್ಯಾಸಿಗಳಂತೆ ಇದ್ದ ಅವರಿಗೆ ಜನ ಬೇಕಾದ್ದನ್ನು ಕೊಟ್ಟು ಮರ್ಯಾದೆಮಾಡುತ್ತಾ ಬಂದರು. ಹೀಗೆ ಇಂಡಿಯಾದ ಅಸಂಖ್ಯಾತ ಫಕೀರರುಗಳಿಗೆ ರಾವಣನೇ ಮೂಲ ಪುರುಷ.[2]

---

[1] ಇವರು ವೀರಶೈವರಿರಬೇಕು.

[2] ಪ್ರವಾಸಿಗರು ತಾವು ಕೇಳಿದ ಕಥೆಗಳಿಗೆ ರಂಗುಕೊಟ್ಟು ತಮ್ಮ ದೇಶದವರಿಗೆ ತಿಳಿಸುವುದು ಸಾಮಾನ್ಯವೆಂಬುದಕ್ಕೆ ರಾವಣನ ಸಂಬಂಧವಾದ ಈ ವಿಷಯವೇ ಒಂದು ನಿದರ್ಶನ. ವಿನೋದ ವಾಗಿ ಹೇಳಬಹುದಾದರೆ, ಈಗ ಇರುವ ಎಷ್ಟೋ ರಾಮಾಯಣಗಳ ಜೊತೆಗೆ "ಟಾವರ್‌ನ್ಯೇ ರಾಮಾಯಣ" ಎಂಬ ಹೊಸ ರಾಮಾಯಣವನ್ನು ಸೇರಿಸಬಹುದೆಂದು ಕಾಣುತ್ತೆ!

ಈ ಫಕೀರರು ಗುಂಪು ಗುಂಪಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುತ್ತಾರೆ. ಮೈಮೇಲೆ ಬಟ್ಟೆಬರೆಗಳಿಲ್ಲದೆ ಹುಟ್ಟುನಿರ್ವಾಣದಲ್ಲಿರುತ್ತಾರೆ. ಇವರಿಗೆ ನೆಲವೇ ಹಾಸಿಗೆ, ಆಕಾಶವೇ ಹೊದಿಕೆ. ಈ ಫಕೀರರು ತಮ್ಮ ಮನೆಗೆ ಬಂದರೆ ತಮ್ಮ ಮನೆ ಪವಿತ್ರವಾಯಿತೆಂದು ಶ್ರೀಮಂತರು ಭಾವಿಸುತ್ತಾರೆ.

ಈ ಫಕೀರರುಗಳೆಲ್ಲಾ ಒಟ್ಟಿಗೆ ಕೂಡಿಕೊಂಡು ದೊಡ್ಡ ದೊಡ್ಡ ದೇವಸ್ಥಾನಗಳಿಗೂ ಗಂಗಾ (ಕಾಶಿ) ಮುಂತಾದ ಪುಣ್ಯತೀರ್ಥಗಳಿಗೂ ಕೆಲವು ಪುಣ್ಯಕಾಲಗಳಲ್ಲಿ ಯಾತ್ರೆ ಹೋಗುತ್ತಾರೆ.

ನಾನು ಸೂರತ್ತಿನಲ್ಲಿದ್ದಾಗ ಒಬ್ಬ ಫಕೀರ ಗುಹೆಯೊಂದರೊಳಕ್ಕೆ ಹೋಗಿಬರುತ್ತಿದ್ದುದನ್ನು ನೋಡಿದೆ. ಒಂದು ಸಣ್ಣ ಕಿಂಡಿಯಲ್ಲದೆ ಗುಹೆಯೊಳಗೆ ಬೆಳಕೇ ಇರಲಿಲ್ಲ. ಇಂಥ ಗುಹೆಯನ್ನು ಹೊಕ್ಕ ಫಕೀರರು ಕೆಲವು ವೇಳೆ ಒಂಬತ್ತು ಹತ್ತು ದಿನಗಳ ತನಕ ಅನ್ನಪಾನಗಳಿಲ್ಲದೆ ಇದ್ದುಬಿಡುತ್ತಾರೆ. ಇದನ್ನು ನಾನು ಸ್ವತಃ ನೋಡದೆ ಇದ್ದರೆ ನಂಬುತ್ತಿರಲೇ ಇಲ್ಲ. ಒಂದು ದಿನ ನಾನೂ ಸೂರತ್ತಿನ ಡಚ್ ಕಮ್ಯಾಂಡರನೂ ಸೇರಿ ಒಬ್ಬ ಕಾವಲುಗಾರನನ್ನು ನೇಮಿಸಿದೆವು, ನಾನು ನೋಡಿದ ಫಕೀರನ ಗುಹೆಯೊಳಕ್ಕೆ ಯಾರಾದರೂ ಅನ್ನಪಾನಗಳನ್ನು ತೆಗೆದುಕೊಂಡುಹೋಗುತ್ತಾರೊ ಏನೊ ನೋಡು ಎಂದು. ಹಗಲೂ ರಾತ್ರಿ ಕಾದು ನೋಡಿದ ಕಾವಲುಗಾರ. ಯಾರೇ ಆಗಲಿ ಹೋದದ್ದು ಬಂದದ್ದು ಅವನಿಗೆ ಕಾಣಲಿಲ್ಲ. ಫಕೀರ ನಮ್ಮ ದರ್ಜಿಗಳು ಕುಳಿತುಕೊಳ್ಳುವಂತೆ (ಪದ್ಮಾಸನದಲ್ಲಿ) ಒಂದೇ ಸಮನೆ ಹಗಲೂ ರಾತ್ರಿ ಕುಳಿತುಕೊಂಡಿದ್ದುದನ್ನು ನಾನು ಕಂಡೆ. ಈತ ಹತ್ತುದಿನಗಳ ತಪಸ್ಸುಮಾಡುವುದಾಗಿ ನಿರ್ಧರಿಸಿಕೊಂಡಿದ್ದ. ಆದರೆ ಗುಹೆಯೊಳಗೆ ಇಟ್ಟ ದೀಪದ ಕಾವಿನಿಂದ ಶಾಖವು ಹೆಚ್ಚಾದ ಕಾರಣ ಏಳೇ ದಿವಸಕ್ಕೆ ತನ್ನ ತಪಸ್ಸನ್ನು ಮುಗಿಸಿ ಹೊರಗೆ ಬಂದ.

ಇನ್ನೊಬ್ಬ ಫಕೀರ ಹಲವಾರು ವರ್ಷಗಳ ಕಾಲ ನಿಂತೇ ತಪಸ್ಸು ಮಾಡುವುದನ್ನು ಕಂಡೆ. ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ ಮಲಗುವುದೆಂಬುದು ಇಲ್ಲವೇ ಇಲ್ಲ. ನಿದ್ದೆ ಮಾಡಬೇಕೆಂದಾಗ ಹಗ್ಗ ಹಿಡಿದು ನಿಂತುಕೊಂಡೇ ನಿದ್ದೆಮಾಡುತ್ತಿದ್ದ. ನಿಂತು ನಿಂತು ಕಾಲುಗಳಿಗೆ ನೀರು ಇಳಿದು ಅವು ಊದಿಕೊಂಡಿದ್ದುವು.

ಮತ್ತಿಬ್ಬರು ಫಕೀರರು, ಸಾಯುವವರೆಗೆ ಮೇಲೆತ್ತಿದ ಕೈಗಳನ್ನು ಕೆಳಗೆ ಬಿಡದೆ ಹಾಗೆಯೇ ಎತ್ತಿಕೊಂಡಿರುತ್ತೇನೆಂದು ವ್ರತ ಹಿಡಿದಿದ್ದರು. ಒಂದೇ ಸಮನೆ ಕೈಗಳನ್ನು ಎತ್ತಿಕೊಂಡಿದ್ದ ಕಾರಣ ಕೀಲುಗಳು ಹಿಡಿದುಕೊಂಡು ಅವುಗಳನ್ನು ಕೆಳಕ್ಕೆ ಇಳಿಸುವುದಕ್ಕಾಗಲಿಲ್ಲ. ಇವರ ತಲೆಯ ಕೂದಲು ಬೆಳೆದು ಸೊಂಟದ ಕೆಳಕ್ಕೂ ಇಳಿಯಬಿದ್ದಿತ್ತು. ಉಗುರುಗಳು ಬೆರಳಿನಷ್ಟು ಉದ್ದವಾಗಿ ಬೆಳೆದು ಚಾಚಿಕೊಂಡಿದ್ದುವು. ಹಗಲೂ ರಾತ್ರಿ —ಬೇಸಿಗೆ ಕಾಲವಾಗಲಿ ಚಳಿಗಾಲವಾಗಲಿ—ಬೆತ್ತಲೆಯಲ್ಲಿ ಒಂದೇ ಸಮನೆ ಅಲ್ಲಾಡದೆ ನಿಂತಿದ್ದರು. ಅನ್ನಪಾನಾದಿಗಳನ್ನು ಅವರ ಬಳಿ ಇರುವ ಶಿಷ್ಯರು ಒದಗಿಸುತ್ತಿದ್ದರು,

ಇನ್ನೊಬ್ಬ ಫಕೀರ ದಿನಕ್ಕೆ ಹಲವಾರು ಗಂಟೆಗಳ ಕಾಲ ಒಂಟಿಕಾಲಿನಲ್ಲಿ ನಿಂತುಕೊಂಡಿರುತ್ತಿದ್ದುದನ್ನು ಕಂಡೆ. ಕೈಯಲ್ಲಿ ಅಗ್ಗಿಷ್ಟಿಕೆಯನ್ನು ಹಿಡಿದುಕೊಂಡಿದ್ದು, ಅದಕ್ಕೆ ಆಗಾಗ್ಗೆ ಧೂಪ ಹಾಕಿ ದೇವರಿಗೆ ಬೆಳಗುತ್ತಿದ್ದ.

ಕೆಲವು ಫಕೀರರು ಮಲಗಿರುವಾಗ ಎತ್ತಿದ ಕೈಗಳನ್ನು ಕೆಳಕ್ಕೆ ಇಳಿಸದೆಯೇ ಇರುವುದನ್ನು ಕಂಡೆ. ಇದು ಬಹು ಕಠಿಣವಾದ ತಪಸ್ಸೆಂದೇ ಹೇಳಬೇಕು.

ಕೆಲವರು ಎವೆಯಿಕ್ಕದೆ ಸೂರ್ಯನನ್ನೇ ನೋಡುತ್ತಿರುತ್ತಾರೆ. ಮತ್ತೆ ಕೆಲವರು ನೆಲಕ್ಕೆ ಬಿಟ್ಟ ದಿಟ್ಟಿಯನ್ನು ಮೇಲೆತ್ತುವುದೇ ಇಲ್ಲ ; ಮಾತಾಡುವುದೂ ಇಲ್ಲ. ಇವರೆಲ್ಲ ಹುಟ್ಟಿದನಿರ್ವಾಣಕ್ಕಿರುವುದನ್ನು ನೋಡಿದಾಗ ನನಗೇ ನಾಚಿಕೆಯಾಗುತ್ತದೆ. ತಮ್ಮನ್ನು ಪೂಜಿಸಲು ಬಂದ ಹೆಂಗಸರನ್ನು ನೋಡಿ ಇವರಿಗೆ ಯಾವ ಮನೋವಿಕಾರವೂ ಆಗುವುದಿಲ್ಲ. ಅದರ ಬದಲು ನಿರ್ವಿಕಾರಿಗಳಂತೆ ನೋಡುತ್ತಿರುತ್ತಾರೆ.

ವಿಗ್ರಹಾರಾಧಕರ ನಂಬಿಕೆಗಳಲ್ಲಿ ಪುನರ್ಜನ್ಮವೂ ಒಂದು. ಈ ಜನ್ಮದಲ್ಲಿ ಮಾಡಿದ ಪಾಪ–ಪುಣ್ಯಗಳಿಗನುಸಾರವಾಗಿ ಮನುಷ್ಯ ಮುಂದಿನ ಜನ್ಮದಲ್ಲಿ ನೀಚ ಜನ್ಮವನ್ನೋ ಒಳ್ಳೆಯ ಜನ್ಮವನ್ನೋ ಪಡೆಯುತ್ತಾನೆ ಹಸುವಿನ ಜನ್ಮ ಬಹಳ ಒಳ್ಳೆಯ ಜನ್ಮ ಎಂಬ ನಂಬಿಕೆಯಿದೆ. ಏಕೆಂದರೆ, ಹಸುಗಳನ್ನು ಪೂಜಿಸುತ್ತಾರೆ. ಸಾಯುವಾಗ ಹಸುವಿನ ಬಾಲವನ್ನು ಕೈಯಲ್ಲಿ ಹಿಡಿದುಕೊಂಡು ಸತ್ತರೆ ಸಾಕು, ಮುಂದಿನ ಜನ್ಮದಲ್ಲಿ ಎಲ್ಲ ಒಳ್ಳೆಯದೆ.

ಪಾಪ–ಪುಣ್ಯಗಳ ಕಾರಣವಾಗಿ ಮನುಷ್ಯನು ಪ್ರಾಣಿಯಾಗಿ ಹುಟ್ಟುತ್ತಾನೆಂದು ನಂಬಿಕೆ ಇರುವ ಕಾರಣ, ಯಾವ ಪ್ರಾಣಿಯನ್ನೂ ಇವರು ಕೊಲ್ಲುವುದಕ್ಕೆ ಹೋಗುವುದಿಲ್ಲ. ಈ ಜನ್ಮದಲ್ಲಿ ಪುಣ್ಯಸ್ಥಳಗಳ ದರ್ಶನವನ್ನೂ ದಾನಧರ್ಮಗಳನ್ನೂ ಮಾಡಿದರೆ ಮುಂದಿನ ಜನ್ಮದಲ್ಲಿ ರಾಜನಾಗಿಯೊ ಶ್ರೀಮಂತನಾಗಿಯೊ ಹುಟ್ಟುತ್ತಾನೆಂಬ ನಂಬಿಕೆ ಉಂಟು. ಈ ಕಾರಣವೇ ಫಕೀರರೂ ಗೋಸಾಯಿಗಳೂ ಅಷ್ಟೊಂದು ರೀತಿಯಲ್ಲಿ ದೇಹವನ್ನು ದಂಡಿಸಿ ತಪಸ್ಸುಗಳನ್ನಾಚರಿಸುವುದು. ಹಾಗೆ ಮಾಡಲಾಗದವರು ಬ್ರಾಹ್ಮಣರಿಗೆ ದಾನಧರ್ಮಗಳನ್ನು ಮಾಡಿ ಪುಣ್ಯಕಾರ್ಯಗಳನ್ನು ಎಸಗಿ ಒಳ್ಳೆಯ ಜನ್ಮ ಪಡೆಯುತ್ತಾರೆ.

೧೬೭೧ರ ಜನವರಿ ತಿಂಗಳಿನಲ್ಲಿ ಡಚ್ ಕಂಪನಿಯ ಷ್ರಾಫ್ ಮೋಹನ್‌ದಾಸ್ ಫರೇಕ್ ಸೂರತ್ತಿನಲ್ಲಿ ಸತ್ತುಹೋದ. ಅವನು ತುಂಬ ಅನುಕೂಲಸ್ಥನಾಗಿದ್ದ. ದಾನಧರ್ಮಗಳನ್ನು ಮಾಡಿದ್ದ. ನಾಲ್ಕೈದು ದಿನ ಕಾಯಿಲೆ ಬಿದ್ದು ಈ ಬನಿಯ ಸತ್ತುಹೋದ. ಅವನು ಕಾಯಿಲೆ ಬಿದ್ದ ಕಾಲದಲ್ಲಿ ಮತ್ತು ಸತ್ತ ಎಂಟು ಹತ್ತು ದಿನಗಳೊಳಗೆ ಅವನ ಸಹೋದರರು ಸುಮಾರು ೧೦,೦೦೦ ರೂಪಾಯಿಗಳನ್ನು ದಾನಧರ್ಮ ಮಾಡಿದರು. ಶವವನ್ನು ಗಂಧದ ಮರದ ಚಿತೆಯಲ್ಲಿ ಸುಟ್ಟರು. ಇವರಲ್ಲಿ ಬಹು ಮೂಢರಾದ ಜನರು ಸತ್ತವನು ಸಂಪಾದಿಸಿದ ಹಣವನ್ನೆಲ್ಲಾ ಶವದ ಜೊತೆಯೇ ಹೂಳಿಬಿಡುತ್ತಾರೆ!

ಅಸ್ಸಾಂ ರಾಜ್ಯದಲ್ಲಿ ಸಹ ಹೀಗೆ ಮಾಡುವುದುಂಟು. ಈ ಕಾರಣವೇ ಇಂಡಿಯಾದಲ್ಲಿ ಅಷ್ಟೊಂದು ಚಿನ್ನ ಬೆಳ್ಳಿ ಮುತ್ತು ರತ್ನಗಳು ಭೂಮಿಯಲ್ಲಿ ಸೇರಿಹೋಗುವುವು.

ಹೀಗೆ ಹೂತಿಟ್ಟ ಭಂಡಾರ ರಾಜ ಶಿವಾಜಿಗೆ ಅನುಕೂಲವಾಯಿತು. ಮೊಗಲರ ಮೇಲೂ ಬಿಜಾಪುರದ ರಾಜನ ಮೇಲೂ ಕತ್ತಿಕಟ್ಟಿದ ಆತನಿಗೆ ಸಮಾಧಿಗಳಲ್ಲಿ ಹೂತಿಟ್ಟ ಹಣಕಾಸು, ಚಿನ್ನ ಬೆಳ್ಳಿ ಮತ್ತು ಮುತ್ತುರತ್ನಗಳು ದೊರಕಿದುವು. ಯುದ್ಧದ ಖರ್ಚು ವೆಚ್ಚಕ್ಕೆ ಅವು ತುಂಬಾ ಸಹಾಯಕವಾದುವು. ಬಿಜಾಪುರ ರಾಜ್ಯದಲ್ಲಿರುವ ಒಂದು ಸಣ್ಣ ಪಟ್ಟಣವಾದ ಕಲ್ಲಿಯನ್ ಬೊಂದಿ ಎಂಬ ಊರನ್ನು ಆಕ್ರಮಿಸಿಕೊಂಡರೆ ಅಲ್ಲಿ ಹೂತಿಟ್ಟ ಭಂಡಾರ ಸಿಕ್ಕುವುದೆಂದು ಬ್ರಾಹ್ಮಣರು ಶಿವಾಜಿಗೆ ಸಲಹೆಮಾಡಿದರು. ಶಿವಾಜಿ ಆ ಪಟ್ಟಣವನ್ನು ಆಕ್ರಮಿಸಿಕೊಂಡು ಕೊಳ್ಳೆಹೊಡೆದಾಗ ಹೇರಳವಾದ ಐಶ್ವರ್ಯ ದೊರೆಯಿತು. ಆದರಿಂದ ಅವನು ತನ್ನ ೩೦,೦೦೦ ಸೈನ್ಯವನ್ನು ಸಾಕುವುದು ಸಾಧ್ಯವಾಯಿತು.

ವಿಗ್ರಹಾರಾಧಕರ ಈ ತಪ್ಪುಗಳನ್ನು ಸರಿಪಡಿಸಲು ಸಾಧ್ಯವೇ ಇಲ್ಲ. ಏಕೆಂದರೆ, ತಾವು ಮಾಡುವುದು ತಪ್ಪೆಂದು ಅವರು ಒಪ್ಪುವುದೇ ಇಲ್ಲ. ತಾತ ಮುತ್ತಾತನ ಕಾಲ ದಿಂದ ಬಂದ ಮೂಢನಂಬಿಕೆಗಳನ್ನು ಬಿಟ್ಟುಬಿಡುವುದು ಅವರಿಂದ ಆಗದ ಕೆಲಸ.

ಜೆಂಟೈಲರು (ಹಿಂದೂಗಳು) ಶವಗಳನ್ನು ದಹನಮಾಡುವುದು ಹಳೆಯ ಕಾಲ ದಿಂದ ಬಂದ ಪದ್ಧತಿ. ಸಾಮಾನ್ಯವಾಗಿ ಶವಗಳನ್ನು ನದಿಯ ದಡಗಳಲ್ಲಿ ಸುಡುವುದುಂಟು. ಸುಡುವ ಮುಂಚೆ ಶವವನ್ನು ನದಿಯ ನೀರಿನಲ್ಲಿ ತೊಳೆದು, ಅಳಿದುಳಿದ ಪಾಪವನು ತೊಡೆದು ಹಾಕಿ, ಅನಂತರ ಸುಡುತ್ತಾರೆ. ಈ ಮೂಢನಂಬಿಕೆ ಯಾವ ಮಟ್ಟಕ್ಕೆ ಹೋಗಿದೆಯೆಂದರೆ, ಯಾವನಾದರೂ ಸಾಯುತ್ತಾನೆ ಎಂದಾಗ ಅವನನ್ನು ನದಿಯ ಬಳಿಗೆ ಕೊಂಡುಹೋಗಿ ಅವನ ಕಾಲನ್ನು ನೀರಿನಲ್ಲಿ ಇಡುತ್ತಾರೆ. ಪ್ರಾಣ ಹೋಗುತ್ತಾ ಬಂದಂತೆ ಶರೀರವನ್ನು ನೀರಿಗೆ ನೂಕುತ್ತಾ ಹೋಗುತ್ತಾರೆ. ಕೊನೆಗೆ ಪ್ರಾಣಹೋಯಿತು ಎಂದಾಗ, ಇಡೀ ಶರೀರವನ್ನೇ ನೀರಿಗೆ ನೂಕಿ, ತೊಳೆದು, ಬೆಂಕಿಯಲ್ಲಿ ದಹನಮಾಡುತ್ತಾರೆ. ವಿಗ್ರಹಾರಾಧಕ ಸತ್ತರೆ ಅವನ ಜಾತಿಯವರೆಲ್ಲ ಸತ್ತವನ ಮನೆಯ ಬಳಿ ಸೇರಿ, ಚಟ್ಟದ ಮೇಲೆ ಹೆಣ ಇಟ್ಟು, ಅದನ್ನು ನವುರಾದ ಬಟ್ಟೆಯಲ್ಲಿ ಮುಚ್ಚಿಕೊಂಡು ಸ್ಮಶಾನಕ್ಕೆ ಸಾಗಿಸುತ್ತಾರೆ ಹೋಗುವಾಗ "ರಾಮ, ರಾಮ" ಎಂದು ಭಜನೆಮಾಡುತ್ತಾರೆ.

ವಿಗ್ರಹಾರಾಧಕರು ಸತ್ತವರನ್ನು ಸುಡುವುದರ ಜೊತೆಗೆ ಬದುಕಿರುವವರನ್ನೂ ಸುಡುತ್ತಾರೆ. ಒಂದು ಹಾವನ್ನು ಕೊಲ್ಲಲು, ಕೊನೆಗೆ ಒಂದು ತಗಣೆಯನ್ನು ಹಿಸುಕಲು, ಹಿಂದುಮುಂದು ನೋಡುವ ಈ ಜನ, ಸತ್ತ ಗಂಡನ ಶವದೊಡನೆ ಆತನ ಹೆಂಡತಿಯನ್ನು ಜೀವಂತವಾಗಿ ಸುಟ್ಟು ಒಂದು ಮಹಾಕೆಲಸಮಾಡಿದೆವೆಂದು ತಿಳಿದುಕೊಳ್ಳುತ್ತಾರೆ !

ಇಂಡಿಯಾದ ವಿಗ್ರಹಾರಾಧಕರಲ್ಲಿ ಗಂಡ ಸತ್ತರೆ ಹೆಂಡತಿ ಮತ್ತೆ ಮದುವೆಯಾಗು ವಂತಿಲ್ಲ. ಈ ಕಾರಣ ಗಂಡ ಸತ್ತ ಕೆಲವು ದಿನಗಳ ತರುವಾಯ ಆತನ ಹೆಂಡತಿ ತಲೆ

ಬೋಳಿಸಿಕೊಂಡು, ವಡವೆ ವಸ್ತ್ರಗಳನ್ನೆಲ್ಲ ತೆಗೆದುಹಾಕಿ, ಎಲ್ಲಾ ಸುಖ ಸಂತೋಷಗಳಿಂದ ದೂರವಾಗಿ ಇದ್ದುಬಿಡುತ್ತಾಳೆ. ಮನೆಯಲ್ಲಿ ಜೀತದ ಆಳಿಗಿಂತ ಕಡೆಯಾಗಿ ದುಡಿದು ಕೊಂಡು ಕಾಲಹಾಕುತ್ತಾಳೆ ಇಂಥ ಬಾಳಿಗಿಂತ ಸತ್ತ ಗಂಡನ ಚಿತೆಯೇರುವುದೇ ಮೇಲು ಎಂದು ಭಾವಿಸುತ್ತಾಳೆ. ಇದರ ಮೇಲೆ ಬ್ರಾಹ್ಮಣರ ಚಿತಾವಣೆ ಬೇರೆ. ಸತ್ತ ಗಂಡನೊಡನೆ ಚಿತೆಯೇರಿದರೆ ಇಬ್ಬರೂ ಮತ್ತೊಮ್ಮೆ ಗಂಡ ಹೆಂಡಿರಾಗಿಯೇ ಹುಟ್ಟಿ ಈಗಿಗಿಂತ ಇನ್ನೂ ಹೆಚ್ಚು ಸುಖವಾಗಿ ಬಾಳುವೆ ಮಾಡಬಹುದೆಂದು ಬ್ರಾಹ್ಮಣರು ಪುಸಲಾಯಿಸುತ್ತಾರೆ. ಆದರೆ ಸ್ಥಳದ ಅಧಿಪತಿಯ ಅನುಮತಿ ಪಡೆಯದೆ ಯಾವ ಹೆಂಗಸೂ ಚಿತೆಯನ್ನೇರು ವಂತಿಲ್ಲ. ಆದರೆ ಮಹಮ್ಮದೀಯ ಅಧಿಪತಿ ಇದಕ್ಕೆ ಸುಲಭವಾಗಿ ಅನುಮತಿಕೊಡುವುದಿಲ್ಲ. ಮಕ್ಕಳಿಲ್ಲದವರಿಗೆ ಸಾಮಾನ್ಯವಾಗಿ ಅನುಮತಿ ಸಿಕ್ಕುತ್ತದೆ. ಮಕ್ಕಳಿರುವವರಿಗೆ ಏನೇ ಆದರೂ ಅನುಮತಿ ಸಿಕ್ಕುವುದಿಲ್ಲ. ಅನುಮತಿ ಸಿಕ್ಕದ ವಿಧವೆಯರು ದಾನಧರ್ಮ ಕಾರ್ಯಗಳಲ್ಲಿ ನಿರತರಾಗಿ ತಮ್ಮ ಬಾಳನ್ನು ಸಾಗಿಸುತ್ತಾರೆ. ಕೆಲವರು ಹೆದ್ದಾರಿಗಳ ಬಳಿ ಅರವಟ್ಟಿಗೆಗಳನ್ನು ಇಟ್ಟುಕೊಂಡು ಪ್ರಯಾಣಿಕರಿಗೆ ನೀರು ಪಾನಕ ಮುಂತಾದವು ಗಳನ್ನು ನೀಡಿ ಅವರ ದಾಹ ಪರಿಹಾರ ಮಾಡುತ್ತಾರೆ. ಮತ್ತೆ ಕೆಲವರು ಹೊಗೆ ಬತ್ತಿ ಸೇದುವ ಅಭ್ಯಾಸವುಳ್ಳವರಿಗೆ ಬೆಂಕಿ ಕೊಡುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಇನ್ನೂ ಕೆಲವರು ದನಗಳು ಹಾಕಿದ ಸಗಣಿಯಲ್ಲಿ ಸಿಕ್ಕುವ ಕಾಳುಗಳನ್ನು ಬಿಟ್ಟು ಬೇರೆ ತಿನ್ನುವುದಿಲ್ಲವೆಂದು ವ್ರತ ಹಿಡಿಯುತ್ತಾರೆ.

ಸುಬೇದಾರನು ಬಡಪಟ್ಟಿಗೆ ವಿಧವೆ ಚಿತೆಗೆ ಬೀಳಲು ಅನುಮತಿಕೊಡುವುದಿಲ್ಲ. ಚಿತೆಯೇರಬೇಕೆಂದು ಸಂಬಂಧಿಗಳೂ ಬ್ರಾಹ್ಮಣರೂ ಬಹಳ ಹೇಳಿಕೊಂಡ ಮೇಲೆ ಅವನ ಭಕ್ಷೀಸ್ ಬರಬೇಕಾದ ಲಂಚ ಬಂದಿದೆಯೆಂದು ಸನ್ನೆಮಾಡಿದಮೇಲೆ ಬಹಳ ಸಿಟ್ಟಾದವನಂತೆ "ಹಾಳಾಗಿ ಹೋಗಿರಿ" ಎಂದು ಹೇಳಿಬಿಡುತ್ತಾನೆ. ಹೀಗೆ ಹೇಳಿದರೆ ಸಾಕು, ಎಲ್ಲರೂ ವಾದ್ಯಸಮೇತ ಹೆಣದೊಡನೆ ನದಿಯ ದಡಕ್ಕೆ ಹೋಗಿ ದಹನಮಾಡುವ ಕೆಲಸ ಮಾಡುತ್ತಾರೆ. ಸತಿಯಾಗುವವಳು ಮದುವೆಯ ಹೆಣ್ಣಿನಂತೆ ಅಲಂಕಾರಮಾಡಿಕೊಂಡು ದಹನವಾಗುವ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೋಗುತ್ತಾಳೆ. ಬ್ರಾಹ್ಮಣರು ಕೂಗಿ ಹೇಳುತ್ತಲೇ ಇರುತ್ತಾರೆ, 'ಧೈರ್ಯವಾಗಿರಬೇಕು, ಮನಸ್ಸು ಬದಲಿಸಬಾರದು' ಎಂದು. ಅವಳು ಸತ್ತರೆ ಬ್ರಾಹ್ಮಣರಿಗೇ ಅನುಕೂಲ ಏಕೆಂದರೆ, ಆಕೆಯ ಮೈಮೇಲಿನ ಆಭರಣ ಗಳೆಲ್ಲಾ ಅವರಿಗೆ ಸೇರುತ್ತವೆ. ಇದು ಅವರ ಹಕ್ಕು. ವಿಧವೆಯನ್ನು ಸುಟ್ಟನಂತರ ಬೂದಿಯನ್ನು ಹುಡುಕಿ ತಡಕಿ ಸಿಕ್ಕ ಚೂರುಪಾರುಗಳನ್ನು ಆಯ್ದುಕೊಳ್ಳುತ್ತಾರೆ.

ಸ್ತ್ರೀಯರು ಮೂರು ಬಗೆಯಲ್ಲಿ ಚಿತೆ ಏರುವುದನ್ನು ನಾನು ನೋಡಿದ್ದೇನೆ. ಗುಜರಾತ್, ಆಗ್ರಾ, ದಿಲ್ಲಿ—ಈ ಕಡೆಗಳಲ್ಲಿ ಒಟ್ಟಿದ ಕಟ್ಟಿಗೆಗಳ ಮೇಲೆ ವಿಧವೆ ಗಂಡನ ಶವದೊಡನೆ ಮಲಗಿರುವಾಗ "ಬೆಂಕಿ ಹಚ್ಚಿ" ಎಂದು ಹೇಳಿ, ಬೆಂಕಿ ಹೊತ್ತಿಸಿಕೊಳ್ಳುವುದು ಒಂದು ಬಗೆ.

ಬಂಗಾಳ ರಾಜ್ಯದಲ್ಲಿ ಗಂಗಾನದಿಯ ದಡದಲ್ಲಿ ಶವಸಂಸ್ಕಾರಮಾಡುತ್ತಾರೆ. ಹಾಗೆ ಮಾಡಲಾಗದವರು ತೀರ ಬಡವರೆಂದೇ ಹೇಳಬೇಕು. ನದಿಯಿಂದ ಬಹಳ ದೂರದಲ್ಲಿರುವವರು ಹತ್ತು ಇಪ್ಪತ್ತು ದಿವಸಗಳ ತನಕ ಶವದೊಡನೆ ಪ್ರಯಾಣಮಾಡಿ ಗಂಗಾತಟವನ್ನು ತಲುಪುತ್ತಾರೆ. ಅಷ್ಟುಹೊತ್ತಿಗೆ ಹೆಣ ಕೊಳೆತು ನಾರುತ್ತಿರುತ್ತದೆ. ಹೀಗೆ ನಾರುವ ಒಂದು ಹೆಣದ ಜೊತೆ ಹೆಂಗಸೊಬ್ಬಳು ಚಿತೆಯಲ್ಲಿ ಬಿದ್ದು ಸತ್ತದ್ದನ್ನು ನಾನು ಕಣ್ಣಾರಕಂಡೆ. ಇಲ್ಲಿ ಸೌದೆಗೆ ಬಹಳ ಅಭಾವ. ಅವರಿವರಿಂದ ಬೇಡಿತಂದು ಹೆಣ ಸುಡುವುದನ್ನು ನೋಡಬಹುದು. ಸಾಕಷ್ಟು ಸೌದೆ ಸಿಕ್ಕದೆ ಅರ್ಧಂಬರ್ಧ ಸುಟ್ಟ ಗಂಡ ಹೆಂಡಿರ ಶವಗಳನ್ನು ಮೀನು ಮೊಸಳೆಗಳು ತಿನ್ನಲೆಂದು ನದಿಗೆ ಬಿಸಾಡುತ್ತಾರೆ. ಸೌದೆಯ ಮೇಲೆ ಮಲಗಿಕೊಂಡವಳಿಗೆ, ಈ ಹಿಂದೆಯೇ ಸತ್ತುಹೋಗಿರುವವರಿಗೆ ಒಂದು ಕ್ಷೇಮ ಸಮಾಚಾರದ ಪತ್ರವನ್ನೋ, ಬಟ್ಟೆಯನ್ನೋ, ಹಣ್ಣುಹೂಗಳನ್ನೋ, ಪಾತ್ರೆ-ಪರಟೆಗಳನ್ನೋ ತಾಯಿ ಕೊಟ್ಟಿದ್ದಾಳೆ, ಅಣ್ಣ ಕೊಟ್ಟಿದ್ದಾನೆ ಸ್ನೇಹಿತ ಕೊಟ್ಟಿದ್ದಾನೆ, ಅವರಿಗೆ ಕೊಡಿ—ಎಂದು ಹೇಳಿ ಕೊಡುತ್ತಾರೆ. ಕೊಡುವುದನ್ನೆಲ್ಲಾ ಈಸಿಕೊಂಡ ಮೇಲೆ ಆಕೆ ಅವನ್ನು ಟಫೆಟಾ ಬಟ್ಟೆಯಲ್ಲಿ ಸುತ್ತಿಕೊಂಡು ತನ್ನ ಬಳಿ ಇಟ್ಟುಕೊಂಡು ಚಿತೆಗೆ ಬೆಂಕಿ ಹೊತ್ತಿಸುವಂತೆ ಹೇಳುತ್ತಾಳೆ. ಕೂಡಲೇ ಬ್ರಾಹ್ಮಣರೂ ಆಕೆಯ ಸಂಬಂಧಿಗಳೂ ಚಿತೆಗೆ ಬೆಂಕಿ ತೋರಿಸುತ್ತಾರೆ.

ಕೋರಮಂಡಲ ತೀರದಲ್ಲಿ ಸಹಗಮನ ರೀತಿ ಹೇಗೆಂದರೆ, ಒಂಬತ್ತು ಹತ್ತು ಅಡಿ ಆಳದ ಗುಂಡಿ ತೋಡುತ್ತಾರೆ. ಅದರಲ್ಲಿ ಸೌದೆ ತುಂಬಿದ ಮೇಲೆ ಗಂಡನ ಹೆಣವನ್ನು ಗುಂಡಿಯ ಅಂಚಿನಲ್ಲಿ ಇಡುತ್ತಾರೆ. ಕೊಂಡ ಉರಿಯುತ್ತಿರುತ್ತದೆ. ಆಗ ಹೆಂಡತಿ ವಾದ್ಯದ ಗತ್ತಿಗೆ ಕುಣಿಯುತ್ತಾ, ಎಲೆ ಅಡಿಕೆ ತಾಂಬೂಲವನ್ನು ಮೆಲ್ಲುತ್ತಾ ನೆಂಟರಿಷ್ಟರೊಡಗೂಡಿ ಕೊಂಡದ ಬಳಿಗೆ ಹೋಗಿ ಅದನ್ನು ಮೂರು ಸುತ್ತು ಬಳಸುತ್ತಾಳೆ. ಒಂದೊಂದು ಸುತ್ತು ಬಂದನಂತರ ಹಿರಿಯರಿಗೆ ನಮಸ್ಕಾರಮಾಡುತ್ತಾಳೆ. ಮೂರು ಸುತ್ತು ಬಳಸಿದ ಮೇಲೆ ಬ್ರಾಹ್ಮಣರು ಗಂಡನ ಶವವನ್ನು ಕೊಂಡಕ್ಕೆ ಹಾಕುತ್ತಾರೆ. ಕೊಂಡಕ್ಕೆ ಬೆನ್ನುಮಾಡಿ ನಿಂತ ಹೆಂಡತಿಯನ್ನು ಹಿಮ್ಮುಖವಾಗಿ ಕೊಂಡಕ್ಕೆ ನೂಕಿಬಿಡುತ್ತಾರೆ. ಮೇಲೆ ಗಡಿಗೆಗಟ್ಟಲೆ ಎಣ್ಣೆ ಮುಂತಾದುವುಗಳನ್ನು ಸುರಿಯುತ್ತಾರೆ. ಬೆಂಕಿ ಬುಗ್ಗೆಂದು ಉರಿಯುತ್ತದೆ.

ಇದೇ ಕೋರಮಂಡಲ ತೀರದ ಬಹು ಕಡೆಗಳಲ್ಲಿ, ದಹನಮಾಡುವ ಬದಲು ಗಂಡನ ಶವವನ್ನು ಸಜೀವ ಹೆಂಡತಿಯೊಡನೆ ಹೂಳುವ ಪದ್ಧತಿಯುಂಟು. ಒಬ್ಬ ಮನುಷ್ಯನು ಕುಳಿತುಕೊಳ್ಳುವಷ್ಟು ಆಳದ ಗುಂಡಿ ತೋಡಿ, ಅದರಲ್ಲಿ ಶವದೊಡನೆ ಹೆಂಡತಿಯನ್ನೂ ಕುಳ್ಳಿರಿಸಿ ಮಣ್ಣು ಮುಚ್ಚುತ್ತಾರೆ. ಬಂದ ಜನರೆಲ್ಲಾ ಮೇಲೆ ನಿಂತು ಕುಣಿಯುತ್ತಾರೆ, ಒಳಗಿರುವವಳು ಆದಷ್ಟು ಜಾಗ್ರತೆ ಉಸಿರುಕಟ್ಟಿ ಸಾಯಲಿ ಎಂದು.

ಬಂಗಾಳ ರಾಜ್ಯದ ವಿಗ್ರಹಾರಾಧಕರಲ್ಲಿರುವ ಒಂದು ಕ್ರೂರ ಪದ್ಧತಿಯನ್ನು

ಹೇಳದೆ ಇರಲಾರೆ. ಅದೇನೆಂದರೆ. ಹುಟ್ಟಿದ ಮಗು ಹಾಲು ಕುಡಿಯದೆಹೋದರೆ ಅದನ್ನು ಊರ ಹೊರಕ್ಕೆ ತೆಗೆದುಕೊಂಡುಹೋಗಿ, ಬುಟ್ಟಿಯಲ್ಲಿ ಕಟ್ಟಿ ಒಂದು ಮರಕ್ಕೆ ತೂಗುಹಾಕಿ ಬರುತ್ತಾರೆ. ಕಾಗೆಗಳು ಬಂದು ಆ ಮಗುವನ್ನು ಕುಕ್ಕಿ ಚಿತ್ರಹಿಂಸೆ ಮಾಡಿಬಿಡುತ್ತವೆ. ಮಗು ಕಿರ್ರೋ ಎಂದು ಕಿರಚಿಕೊಳ್ಳುತ್ತದೆ. ಒಮ್ಮೊಮ್ಮೆ ಕಾಗೆಗಳು ಕಣ್ಣುಗಳನ್ನು ಕಿತ್ತುಹಾಕುವುದೂ ಉಂಟು. ಈ ಕಾರಣವೇ ಬಂಗಾಳದಲ್ಲಿ ಒಂದೇ ಕಣ್ಣಿರುವ ಅಥವಾ ಕಣ್ಣುಗಳೇ ಇಲ್ಲದ ಜನರು ಕಾಣಲು ಸಿಗುವುದು. ಒಂದು ಹಗಲು ಮಗು ವನ್ನು ಹೀಗೆ ಇಟ್ಟಮೇಲೆ, ಸಾಯಂಕಾಲ ಅದನ್ನು ಮನೆಗೆ ತಂದು ಅದು ಹಾಲು ಕುಡಿಯುವುದೇ ಇಲ್ಲವೇ ಎಂದು ನೋಡುತ್ತಾರೆ. ಕುಡಿಯದೇಹೋದರೆ ಮಾರನೆಯ ದಿನ ಅದೇ ಗತಿ ಆ ಮಗುವಿಗೆ. ಹೀಗೆ ಮೂರು ದಿನ ಮಾಡುತ್ತಾರೆ. ಆಮೇಲೂ ಹಾಲು ಕುಡಿಯದೆಹೋದರೆ ಆ ಮಗುವನ್ನು ತೆಗೆದುಕೊಂಡುಹೋಗಿ ಗಂಗಾ ನದಿಗೋ ಮತ್ತಾವುದಾದರು ನದಿ ಅಥವಾ ಕೆರೆ ಕುಂಟೆಗೋ ಬಿಸಾಡಿಬರುತ್ತಾರೆ. ಇಂಥ ಮಕ್ಕಳನ್ನು ಕಂಡು ಕನಿಕರದಿಂದ ಕೆಲವು ಇಂಗ್ಲಿಷರು, ಡಚ್ಚರು ಮತ್ತು ಪೋರ್ಚುಗೀಸರು ಅವನ್ನು ಎತ್ತಿಕೊಂಡುಹೋಗಿ ಸಾಕುವುದುಂಟು. ಹೀಗೆ ಮಾಡಿದ್ದನ್ನು ಹುಗ್ಲಿಯ ಬಳಿ ನಾನೇ ಕಂಡೆ.

ಈ ಸಹಗಮನ ಪದ್ಧತಿಯ ಮೂರು ಅಸಾಧಾರಣವಾದ ನಿದರ್ಶನಗಳನ್ನು ಹೇಳ ಬಯಸುತ್ತೇನೆ. ಮೂರರಲ್ಲಿ ಎರಡನ್ನು ನಾನೇ ಕಂಡೆ.

ಬಿಜಾಪುರದ ರಾಜನ ದಂಡನಾಯಕನಿಗೂ ವೆಲ್ಲೂರು ರಾಜನಿಗೂ ಆದ ಯುದ್ಧ ದಲ್ಲಿ ವೆಲ್ಲೂರು ರಾಜ ತನ್ನ ಪಟ್ಟಣದ ಜೊತೆಗೆ ಪ್ರಾಣವನ್ನೂ ಕಳೆದುಕೊಂಡ. ಅವನಿಗೆ ಹನ್ನೊಂದು ಜನ ಹೆಂಡತಿಯರು. ಅವರೆಲ್ಲಾ ಸಹಗಮನಮಾಡಲು ತೀರ್ಮಾನಮಾಡಿ ಕೊಂಡರು. ಇದನ್ನು ಕೇಳಿದ ದಂಡನಾಯಕ ಅವರ ಮನಸ್ಸು ಬದಲಿಸಲು ಎಷ್ಟೋ ಪ್ರಯತ್ನಪಟ್ಟ; ಏನೇನೋ ಆಸೆಗಳನ್ನು ತೋರಿಸಿದ. ಆದರೂ ಅವರು ತಮ್ಮ ಮನಸ್ಸನ್ನು ಬದಲಿಸಲಿಲ್ಲ. ಆಗ ದಂಡನಾಯಕ ಅವರನ್ನು ಒಂದು ಕೋಣೆಯಲ್ಲಿ ಕೂಡಿಹಾಕಿ ಅವರು ಮಾಡಬೇಕೆಂದಿದ್ದ ಸಹಗಮನವನ್ನು ತಡೆಯಲೆತ್ನಿಸಿದ. ಆಗ ಆ ಹೆಂಗಸರು ಹೇಳಿದರು, "ಇನ್ನು ಮೂರು ಗಂಟೆಯೊಳಗೆ ನಾವು ಪ್ರಾಣಸಹಿತ ಇರಲಾರೆವು" ಎಂದು. ಇದನ್ನು ನಂಬಲಿಲ್ಲ ಆ ದಂಡನಾಯಕ. ಆದರೆ ಮೂರು ಗಂಟೆಗಳನಂತರ ಕೋಣೆಯ ಬಾಗಿಲು ತೆಗೆದು ನೋಡಿದಾಗ ಅವರೆಲ್ಲ ಸತ್ತುಬಿದ್ದಿದ್ದರು. ಹಗ್ಗ ಹಾಕಿ ಕೊಂಡಿರಲಿಲ್ಲ, ವಿಷ ತೆಗೆದುಕೊಂಡಿರಲಿಲ್ಲ; ಯಾವ ಏಟುಗೀಟಿನ ಗುರುತೂ ಇರಲಿಲ್ಲ. ಅವರು ಹೇಗೆ ಸತ್ತರೆಂಬುದು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ಇದು ಯಾವುದೋ ಪಿಶಾಚಿಯ ಆಟ ಎಂಬುದರಲ್ಲಿ ನನಗೆ ಸಂದೇಹವಿಲ್ಲ.

ಇನ್ನೊಂದು ಪ್ರಸಂಗ. ೧೬೪೩ರಲ್ಲಿ, ಆಗ್ರಾದಲ್ಲಿದ್ದ ಷಾಜಹಾನನ ಆಸ್ಥಾನಕ್ಕೆ ಇಬ್ಬರು ಬಲಾಢ್ಯ ರಾಜರು ತಮ್ಮ ಪರಿವಾರ ಸಮೇತ ಬಂದರು. ಅವರಿಬ್ಬರು ಅಣ್ಣ

ತನ್ನಿಂದಿರು. ಅವರ ಬಳಿ ೧೫,೦೦೦ ಕುದುರೆಗಳಿದ್ದುವು ಊರ ಹೊರಗೆ ಅವರು ಬಿಡಾರಬಿಟ್ಟು ಚಕ್ರವರ್ತಿಯ ಆಸ್ಥಾನಕ್ಕೆ ಹೋದರು. ಅಲ್ಲಿ ಒಬ್ಬ ಹಿರಿಯ ಆಸ್ಥಾನಿಕ ಆ ಇಬ್ಬರು ರಾಜರಿಗೆ ಅವಮಾನವಾಗುವ ರೀತಿಯಲ್ಲಿ ಮಾತಾಡಿದ. ಸಿಟ್ಟಾದ ಆ ರಾಜರು ಆ ಆಸ್ಥಾನಿಕನನ್ನೂ ಅವನ ಸಹೋದರನನ್ನೂ ಎತ್ತರವಾದ ಸಿಂಹಾಸನದಲ್ಲಿ ಕುಳಿತ ಷಾಜಹಾನ್ ಚಕ್ರವರ್ತಿಯ ಮುಂದೆಯೇ ಸಾಯಿಸಿಬಿಟ್ಟರು. ಆಗ ಆಸ್ಥಾನದ ಉಳಿದ ಅಮೀರರು ರಾಜರ ಮೇಲೆ ಬಿದ್ದು ಅವರನ್ನು ತುಂಡುತುಂಡಾಗಿ ಕತ್ತರಿಸಿಬಿಟ್ಟರು. ರಾಜರುಗಳ ಶವವನ್ನು ಅವರ ಬೀಡಿಗೆ ಕಳುಹಿಸಲಾಯಿತು. ಶವವನ್ನು ದಹನಮಾಡುವ ಏರ್ಪಾಡಾಯಿತು. ಆಗ ರಾಜರುಗಳ ಕಡೆಯ ಹದಿಮೂರು ಜನ ಹೆಂಗಸರು ಕುಣಿಯುತ್ತಾ ಕುಪ್ಪಳಿಸುತ್ತಾ ಬಂದು ಚಿತೆಯಲ್ಲಿ ಧುಮುಕಿ ಭಸ್ಮವಾದರು.

ಬಂಗಾಳದ ಪಟ್ಟಣವಾದ ಪಟ್ಣದಲ್ಲಿ ನನ್ನ ಕಣ್ಣಮುಂದೆ ನಡೆದ ಇನ್ನೊಂದು ಸಂಗತಿ ಹೇಳುತ್ತೇನೆ. ನಾನೂ ಇನ್ನೊಬ್ಬ ಡಚ್ಚನೂ ಸ್ಥಳದ ಅಧಿಪತಿಯ ಮನೆಯಲ್ಲಿ ಕುಳಿತಿದ್ದೆವು. ಅಧಿಪತಿ ಸುಮಾರು ಎಂಬತ್ತು ವರ್ಷದ ಮುದುಕ. ಐದಾರು ಸಾವಿರ ಕುದುರೆ ಸರದಾರ. ನಾವು ಕುಳಿತಿರುವಾಗ ಕೇವಲ ಇಪ್ಪತ್ತು ಇಪ್ಪತ್ತೆರಡು ವರ್ಷದ ಹೆಂಗಸೊಬ್ಬಳು ಬಂದು ಸತ್ತ ಗಂಡನ ಚಿತೆಯನ್ನೇರುವುದಕ್ಕೆ ಅನುಮತಿ ಕೇಳಿದಳು. ಆ ಚಿಕ್ಕ ಪ್ರಾಯದ ಹೆಂಗಸನ್ನು ಕಂಡು ಕನಿಕರಪಟ್ಟ ಆತ ಆಕೆಯ ಮನಸ್ಸನ್ನು ತಿರುಗಿಸಲು ಪ್ರಯತ್ನಪಟ್ಟ. ಆದರೆ ಅವನು ಹೇಳಿದಷ್ಟೂ ಆಕೆಯ ನಿರ್ಧಾರ ಇನ್ನೂ ಹೆಚ್ಚು ಧೃಡವಾಯಿತು. ಆಕೆ ಬಲು ಬಿರುಸಿನಿಂದ ಹೇಳಿದಳು, "ನಾನು ಬೆಂಕಿಗೆ ಭಯ ಪಡುವುದಿಲ್ಲ ; ನನ್ನ ತೀರ್ಮಾನವನ್ನು ಬದಲಿಸಲಾರೆ" ಎಂದು ಆಗ ಅಧಿಪತಿ "ಹಾಳಾಗಿ ಹೋಗು !" ಎಂದು ಸಿಟ್ಟಿನಿಂದ ನುಡಿದ ಆದರೆ ಅವನ ಕಡೆಯವರಿಗೆ ಆಕೆಯ ನಿರ್ಧಾರವನ್ನು ಪರೀಕ್ಷೆಮಾಡಬೇಕೆನಿಸಿತು. ಹೊತ್ತಿಸಿದ ಒಂದು ಪಂಜನ್ನು ಅವಳ ಕೈಗೆ ಕೊಟ್ಟರು. ಆಕೆ ಅದನ್ನು ಒಂದು ಕೈಯಲ್ಲಿ ಹಿಡಿದು ಇನ್ನೊಂದು ಕೈಯನ್ನು ಬೆಂಕಿಗೆ ಹಿಡಿದಳು. ಮುಖವನ್ನು ಒಂದಿಷ್ಟೂ ಸಿಂಡರಿಸಲಿಲ್ಲ. ನೋಡಿದವರಿಗೆಲ್ಲಾ ಭೀತಿಯಾಗಿ ಬಿಟ್ಟಿತು. ಇದನ್ನು ನೋಡಲಾರದ ಅಧಿಪತಿ ಆಕೆಯನ್ನು ಅಲ್ಲಿಂದ ಕರೆದುಕೊಂಡು ಹೋಗುವಂತೆ ಆಜ್ಞಾಪಿಸಿದ.

ಇನ್ನೊಂದು ಪ್ರಸಂಗ ನನ್ನ ಕಣ್ಣು ಮುಂದೆಯೇ ನಡೆಯಿತು : ಅದು ಸಹ ಪಟ್ಣನಗರದಲ್ಲಿ, ಹೊರಗಡೆಯಿಂದ ಬಂದ ಬ್ರಾಹ್ಮಣನೊಬ್ಬ ತನಗೆ ೨೦,೦೦೦ರೂಪಾಯಿ ಹಣವೂ ೨೭ ಮೊಳ ಬಟ್ಟೆಯೂ ಬೇಕೆಂದು ತನ್ನ ಕುಲಸ್ಥರನ್ನು ಕೇಳಿಕೊಂಡ. ಜನರು ತಾವು ಬಡವರೆಂದೂ. ಅಷ್ಟು ಹಣಕೊಡಲು ಸಾಧ್ಯವಿಲ್ಲವೆಂದೂ ಹೇಳಿದರು. ಆದರೆ ಆ ಬ್ರಾಹ್ಮಣ ಹಠ ಹಿಡಿದ. ಒಂದು ಮರವನ್ನು ಹತ್ತಿ ಕೊಂಬೆಯ ಮೇಲೆ ಕುಳಿತುಕೊಂಡ. ಅನ್ನಪಾನಾದಿಗಳನ್ನು ತೊರೆದ. ಈ ಸುದ್ದಿ ನನಗೂ ನನ್ನೊಡನಿದ್ದ ಡಚ್ಚನಿಗೂ ಮುಟ್ಟಿತು. ನಾವೆಲ್ಲ ಸೇರಿ ಒಬ್ಬನಿಗೆ ದುಡ್ಡು ಕೊಟ್ಟು ಕಾವಲುಹಾಕಿದೆವು.

ಕಾವಲುಗಾರ ಹಗಲೂ ರಾತ್ರಿ ಒಂದೇ ಸಮನೆ ಕಾದ ಮೂವತ್ತೊಂದು ದಿನಗಳ ಕಾಲ ಆ ಬ್ರಾಹ್ಮಣ ಮರದ ಮೇಲೆ ಅನ್ನನೀರಿಲ್ಲದೆ ಕುಳಿತಿದ್ದ. ಈ ಅಸಾಧಾರಣವೂ ಆಶ್ಚರ್ಯವೂ ಆದ ಉಪವಾಸ ವ್ರತವನ್ನು ನೋಡಿ, ಅವನೆಲ್ಲಿ ಸತ್ತುಹೋದಾನೊ ಎಂದು ಹೆದರಿದ ಜನ, ಎಲ್ಲರೂ ಸೇರಿ ಚಂದಾ ಎತ್ತಿ ೩,೦೦೦ರೂಗಳನ್ನೂ ೨೭ ಮೊಳ ಬಟ್ಟೆಯನ್ನೂ ಶೇಖರಿಸಿದರು ಅದನ್ನು ನೋಡಿದ ಕೂಡಲೇ ಆ ಬ್ರಾಹ್ಮಣ ಮರದಿಂದ ಇಳಿದು ಬಂದು, ಅಲ್ಲಿ ನೆರೆದ ತನ್ನ ಕುಲದವರನ್ನೆಲ್ಲಾ "ನಿಮಗೆ ಬಡವರ ಮೇಲೆ ಕನಿಕರವಿಲ್ಲ" ಎಂದು ಬೈದು, ತನಗೆ ಕೊಟ್ಟ ಹಣವನ್ನು ಬಡವರಿಗೆ ತಲಾ ಐದು ರೂಪಾಯಿನಂತೆ ಹಂಚಿಬಿಟ್ಟ. ಬಟ್ಟೆಯನ್ನು ತುಂಡುತುಂಡುಗಳಾಗಿ ಹರಿದು, ತನ್ನ ಲಂಗೋಟಿಗೆ ಎಷ್ಟು ಬೇಕೋ ಅಷ್ಟು ಇಟ್ಟುಕೊಂಡು ಉಳಿದುದನ್ನು ಬಡವರಿಗೆ ಕೊಟ್ಟುಬಿಟ್ಟ. ಇಷ್ಟು ಮಾಡಿದವನು ನೆರೆದ ಜನಸಮೂಹದ ಮುಂದೆ ಅದೃಶ್ಯನಾದ. ಅವನೇನಾದ ? ಎಲ್ಲಿ ಹೋದ ? ಎಂಬುದು ಯಾರಿಗೂ ಗೊತ್ತಾಗಲಿಲ್ಲ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಇಂಥ ವಿಷಯಗಳಲ್ಲಿ ದೆವ್ವ ತನ್ನ ಆಟ ಆಡುತ್ತದೆ ಎಂಬುದು.

ಇಂಡಿಯಾದೇಶದ ವಿಗ್ರಹಾರಾಧಕರ ಅನೇಕ ಗುಡಿಗೋಪುರಗಳನ್ನು ಹಳ್ಳಿಗಳಲ್ಲೂ ಪಟ್ಟಣಗಳಲ್ಲೂ, ನೋಡಬಹುದು. ಅವುಗಳಲ್ಲಿ ದೊಡ್ಡವೂ ಉಂಟು ; ಚಿಕ್ಕವೂ ಉಂಟು. ಇವನ್ನು 'ಪಗೋಡಾ' ಎಂದು ಕರೆಯುತ್ತಾರೆ. ಬೆಟ್ಟಗುಡ್ಡಗಳಲ್ಲಿ ವಾಸ ಮಾಡುವ ಜನರಿಗೆ ಗುಡಿ ಗುಂಡಾರಗಳಿಲ್ಲ. ಒಂದು ಕಲ್ಲಿಗೆ ಮುಖ ಬಳಿದು ಅದನ್ನೇ ಪೂಜಿಸುತ್ತಾರೆ.

ಹೆಸರಾಂತ ನಾಲ್ಕು ದೇವಸ್ಥಾನಗಳು ಯಾವುವೆಂದರೆ : ಜಗನ್ನಾತ್,[1] ಬನಾರಸ್, ('ಕಾಶಿ'), ಮಥುರಾ ಮತ್ತು ತಿರುಪತಿ. ಜಗನ್ನಾಥದೇವರ ಕಣ್ಣಿನಲ್ಲಿ ಎರಡು ವಜ್ರಗಳಿವೆ; ಮತ್ತು ನಡುವಿನವರೆಗೆ ಬರುವ ಕೊರಳಹಾರದಲ್ಲಿ ಒಂದು ವಜ್ರವಿದೆ. ಈ ವಜ್ರಗಳಲ್ಲಿ ಬಹಳ ಸಣ್ಣದರ ತೂಕ ೪೩ ಕ್ಯಾರೆಟ್‌ಗಳು. ಅಲ್ಲದೆ, ಅನೇಕ ವೈಢೂರ್ಯಗಳಿಂದಲೂ ಆಭರಣಗಳಿಂದಲೂ ದೇವರನ್ನು ಅಲಂಕಾರಮಾಡುತ್ತಾರೆ. ದೇವರ ಹೆಸರು 'ಕೆಸೊರ' (Kesora=ಕೃಷ್ಣ). ಈ ದೇವಸ್ಥಾನಕ್ಕೆ ಬರುವ ಆದಾಯದಿಂದ ನಿತ್ಯ ಬರುವ ೧೫,೦೦೦ ಧಿಂದ ೨೦,೦೦೦ ಯಾತ್ರಾರ್ಥಿಗಳಿಗೆ ಉಟೋಪಚಾರ ನಡೆಯುತ್ತದೆ. ಈ ದೇವಸ್ಥಾನಕ್ಕೆ ಇಂಡಿಯಾದ ನಾನಾ ಕಡೆಗಳಿಂದ ಭಕ್ತರು ಬರುತ್ತಾರೆ. ೨೦,೦೦೦ ಹಸುಗಳನ್ನು ದೇವಸ್ಥಾನದ ನಿತ್ಯಕಟ್ಟಲೆ ಹೆಚ್ಚುಕಟ್ಟಲೆಗಳ ಸೇವೆಗಾಗಿ ಸಾಕಿದ್ದಾರೆ. ಬರುವ ಅಸಂಖ್ಯಾತ ಜನ ಕೊಡುವ ಕಾಣಿಕೆ ಹಣ್ಣುಕಾಯಿ ಬೇಕಾದಷ್ಟು. ದೇವಸ್ಥಾನದ ಮುಖ್ಯ ಅರ್ಚಕ ಎಲ್ಲದಕ್ಕೂ ಕಾಣಿಕೆ ಎಷ್ಟೆಂದು ನಿಗದಿಮಾಡಿದ್ದಾನೆ. ತಲೆ

---

[1]ಜಗನ್ನಾಥ್ : ಒರಿಸ್ಸಾ ರಾಜ್ಯದ ಪುರಿಪಟ್ಟಣ. ಇದನ್ನು ಜಗನ್ನಾಥ್ ಅಥವಾ ಜಗನ್ನಾಥ ಪಟ್ಟಣವೆಂದೂ ಕರೆಯುತ್ತಾರೆ.

ಬೋಳಿಸಿಕೊಳ್ಳುವುದಕ್ಕೂ ನದಿಯಲ್ಲಿ ಸ್ನಾನಮಾಡುವುದಕ್ಕೂ ಮತ್ತು ಇತರ ಪೂಜೆ ಪುರಸ್ಕಾರಗಳಿಗೂ ಇಂತಿಷ್ಟು ಎಂದು ಕಾಣಿಕೆ ಕೊಡಬೇಕು. ಈ ಕಾಣಿಕೆಗಳಿಂದ ಹೇರಳವಾದ ಆದಾಯ ಬರುತ್ತದೆ. ಇದನ್ನೆಲ್ಲಾ ದೇವಸ್ಥಾನದ ಖರ್ಚಿಗೂ ಬಡಬಗ್ಗರಿಗೆ ಅನ್ನದಾನಮಾಡುವುದಕ್ಕೂ ಉಪಯೋಗಿಸುತ್ತಾರೆ. ಬಡಬಗ್ಗರಿಗೆ ಅಡುಗೆಮಾಡಿದ ಅನ್ನಹಾಕಿದರೆ, ಉಳಿದ ಕೆಲವರಿಗೆ ಅವರೇ ಅಡುಗೆಮಾಡಿಕೊಳ್ಳಲು ಅಕ್ಕಿ, ಹಿಟ್ಟು, ಹಾಲು, ಬೆಣ್ಣೆ, ಮೊಸರು ಕೊಡುತ್ತಾರೆ.

ಆದ ಅನ್ನವನ್ನು ಬಡಿಸುವ ರೀತಿ ವಿಚಿತ್ರವಾದುದು. ಬಡಬಗ್ಗರು ಬಂದು ಅನ್ನ ಕೇಳಿದಾಗ ಮುಖ್ಯ ಅರ್ಚಕ ಇನ್ನೊಬ್ಬ ಬ್ರಾಹ್ಮಣನಿಗೆ ಹೇಳುತ್ತಾನೆ, "ಅವರಿಗೆ ಅನ್ನ ನೀಡು" ಎಂದು. ಆ ಬ್ರಾಹ್ಮಣ ಒಂದು ಮಣ್ಣಿನ ಮಡಕೆಯಲ್ಲಿ ಅನ್ನ ತುಂಬಿ ಅದನ್ನು ನೆಲದ ಮೇಲೆ ಎತ್ತಿಹಾಕುತ್ತಾನೆ. ಆ ಮಡಕೆ ಎಷ್ಟು ಜನ ಅನ್ನ ಕೇಳಲು ಬಂದಿರುತ್ತಾರೊ ಅಷ್ಟು ಹೋಳಾಗುತ್ತದೆ. ಉದಾಹರಣೆಗೆ, ಐದು ಜನ ಬಂದು ಅನ್ನ ಕೇಳಿದರೆ ಆ ಮಡಕೆ ಸರಿಯಾಗಿ ಐದು ಹೋಳಾಗುತ್ತದೆ. ಒಬ್ಬೊಬ್ಬರು ಒಂದೊಂದು ಹೋಳನ್ನು ತೆಗೆದುಕೊಂಡು ಊಟಮಾಡುತ್ತಾರೆ.

ಬ್ರಾಹ್ಮಣರು ಒಂದು ಸಲ ಅನ್ನಮಾಡಿದ ಮಣ್ಣಿನ ಮಡಕೆಯಲ್ಲಿಮತ್ತೊಂದು ಸಲ ಅನ್ನಮಾಡುವುದಿಲ್ಲ. ಆದರೆ ತಾಮ್ರದ ಪಾತ್ರೆಯಲ್ಲಿ ಎಷ್ಟು ಸಲ ಬೇಕಾದರೂ ಮಾಡಬಹುದು. ಊಟಮಾಡುವುದಕ್ಕೆ ನಮ್ಮವಾಲ್‌ನಟ್ ಎಲೆಗಳಿಗಿಂತ ದೊಡ್ಡದಾದ ಎಲೆಗಳನ್ನು ಹೊಲೆದು ಮಾಡಿದ ದೊಡ್ಡ ಎಲೆಯನ್ನು (ಊಟದೆಲೆಯನ್ನು) ಉಪಯೋಗಿಸುತ್ತಾರೆ.

ಜಗನ್ನಾಥ್ ದೇವಸ್ಥಾನದಲ್ಲಿರುವ ವಿಗ್ರಹವನ್ನು ಗಂಧದ ಮರದಿಂದ ಮಾಡಿದ್ದಾರೆ. ಮುಖ ಮತ್ತು ಕೈಗಳನ್ನು ಬಿಟ್ಟರೆ ಉಳಿದ ಭಾಗವನ್ನು ಜರತಾರಿ ವಸ್ತ್ರದಿಂದ ಮುಚ್ಚಿರುತ್ತಾರೆ. ಪ್ರತಿ ದಿನ ಸುಗಂಧ ತೈಲಗಳಿಂದ ವಿಗ್ರಹಕ್ಕೆ ಮಜ್ಜನ ಆಗುತ್ತದೆ. ಈ ಕಾರಣ ವಿಗ್ರಹ ಬಹು ಕಪ್ಪಾಗಿ ಕಾಣುತ್ತದೆ. ವಿಗ್ರಹದ ಬಲಗಡೆ'ಕೆಸೋರನ'(ಕಿಶೋರನ=ಕೃಷ್ಣನ) ತಂಗಿ 'ಸೊತೊರ' (Sothora=ಸುಭದ್ರೆಯ)ವಿಗ್ರಹವಿದೆ. ಎಡಗಡೆ ಅವನ ಅಣ್ಣ 'ಬಲಬದೆರ್' (Balabeder : ಬಲಭದ್ರ=ಬಲರಾಮ)ನ ವಿಗ್ರಹವಿದೆ. ವಿಗ್ರಹದ ಎದುರಿನಲ್ಲಿ ಸ್ವಲ್ಪ ಎಡಗಡೆಗೆ ಕೆಸೋರನ ಹೆಂಡತಿ 'ಕೆಮುಯಿ' (Kemui=ರುಕ್ಮಿಣಿ ?)ಯ ವಿಗ್ರಹವಿದೆ. ಈ ವಿಗ್ರಹ ಗಟ್ಟಿ ಚಿನ್ನದಿಂದ ಮಾಡಲ್ಪಟ್ಟಿದೆ. ಉಳಿದ ಮೂರು ವಿಗ್ರಹಗಳು ಗಂಧದ ಮರದವುಗಳು.

ಜಗನ್ನಾಥ ದೇವಸ್ಥಾನಕ್ಕೆ ನಾನಾ ಕಡೆಗಳಿಂದ ಭಕ್ತರು ಬರುತ್ತಾರೆ. ಆದರೆ ಹೊರಗಿನಿಂದ ಬಂದ ರತ್ನಪಡಿ ವ್ಯಾಪಾರಿಗಳಿಗೆ ಪ್ರವೇಶವಿಲ್ಲ. ಏಕೆಂದರೆ, ಹಿಂದೆ ಒಬ್ಬಾತ ದೇವರ ದರ್ಶನ ಮಾಡುವುದಕ್ಕೆಂದು ಬಂದು, ಒಳಗೆ ಗರ್ಭಗುಡಿಯಲ್ಲಿ ಅವಿತುಕೊಂಡಿದ್ದು, ರಾತ್ರಾರಾತ್ರಿ ದೇವರ ಕಣ್ಣಿಗೆ ಇಟ್ಟಿರುವ ವಜ್ರವನ್ನು ಕದಿಯಲು ಪ್ರಯತ್ನಿಸಿದನಂತೆ. ಆದರೆ ದೇವರ ಶಾಪವೋ ಏನೊ, ಬೆಳಗ್ಗೆ ಬಾಗಿಲು ತೆಗೆದಾಗ ಆತ ಸತ್ತುಬಿದ್ದಿದ್ದನಂತೆ !

ಜಗನ್ನಾಥ ದೇವಸ್ಥಾನದ ಬಳಿ ಕಬೀರನ ಸಮಾಧಿ ಇದೆ. ಈ ಸಮಾಧಿಯನ್ನು ಭಕ್ತರು ಬಹಳ ಭಕ್ತಿಯಿಂದ ಪೂಜಿಸುತ್ತಾರೆ.

ಬನಾರಸ್ ದೇವಸ್ಥಾನವೂ ಜಗನ್ನಾಥ ದೇವಸ್ಥಾನದಂತೆ ಗಂಗಾನದಿಯ ದಂಡೆಯ ಮೇಲಿದೆ. ಇಲ್ಲಿಗೆ ಬರುವ ಯಾತ್ರಾರ್ಥಿಗಳು ಗಂಗಾನದಿಯಲ್ಲಿ ಸ್ನಾನಮಾಡಿ, ಮಹಾ ದ್ವಾರದಲ್ಲಿ ಕುಳಿತ ಹಿರಿಯ ಅರ್ಚಕನಿಂದ ಪಡೆದ ಹಳದಿ ಬಣ್ಣದ ಗಂಧವನ್ನು ಹಣೆ, ಮೂಗು, ಎರಡು ತೋಳುಗಳು ಮತ್ತು ಎದೆಗೂ ಹಚ್ಚಿಸಿಕೊಂಡು, ಒಳಗೆ ಹೋಗಿ ದೇವರ ಪೂಜೆಮಾಡುತ್ತಾರೆ. ಭಕ್ತರು ದೇವರಿಗೆ ಬಟ್ಟೆಬರೆಗಳನ್ನೂ, ಜಪಮಣಿಗಳನ್ನೂ, ಹಣ್ಣು ಹಂಪಲುಗಳನ್ನೂ ಅರ್ಚಕನ ಮೂಲಕ ಅರ್ಪಿಸಿ, ಹಿಂದಕ್ಕೆ ಪಡೆಯುತ್ತಿದ್ದುದನ್ನು ಕಂಡೆ. ಹೊರಗಿನಿಂದ ಬನಾರಸ್‌ಗೆ (ಕಾಶಿಗೆ) ಬಂದವರು ಗಂಗಾಜಲವನ್ನು ತೆಗೆದುಕೊಳ್ಳದೆ ಹೋಗುವುದಿಲ್ಲ. ಅನೇಕ ಬ್ರಾಹ್ಮಣರು ಗಂಗಾಜಲವನ್ನು ತುಂಬಿಕೊಂಡುಹೋಗಿ ಬಹಳ ದೂರದ ಊರುಗಳಲ್ಲಿ ಅದನ್ನು ಮಾರಾಟಮಾಡುತ್ತಾರೆ. ಅವರು ಜಲವನ್ನು ಮಣ್ಣಿನ ಗಡಿಗೆಗಳಲ್ಲಿ ತುಂಬಿಕೊಂಡು ದೇವಸ್ಥಾನಕ್ಕೆ ಬರುವ ಹಾದಿಯಲ್ಲಿ ಕುಳಿತಿರುವ ಮುಖ್ಯ ಪುರೋಹಿತನ ಬಳಿಗೆ ಹೋಗುತ್ತಾರೆ. ಅವನು ಗಡಿಗೆಗಳ ಬಾಯಿಗೆ ನಾಲ್ಕೈದು ಮಡಿಕೆಗಳಾಗಿ ಮಡಿಸಿದ ಕೆಂಪು ವಸ್ತ್ರದ ಕಟ್ಟುಹಾಕಿ ಮೊಹರುಮಾಡುತ್ತಾನೆ. ಹೀಗೆ ಮೊಹರುಮಾಡಿಕೊಟ್ಟ ಗಡಿಗೆಗಳನ್ನು ಬ್ರಾಹ್ಮಣರು ಹೊತ್ತುಕೊಂಡು ನೂರಾರು ಹರಿದಾರಿಗಳ ಪ್ರಯಾಣಮಾಡಿ, ಶ್ರೀಮಂತರಿಗೆ ಕೊಟ್ಟು, ಅದಕ್ಕೆ ಸೂಕ್ತ ಸಂಭಾವನೆ ಪಡೆಯುತ್ತಾರೆ. ಮದುವೆಮುಂಜಿಗಳಲ್ಲಿ ಈ ನೀರನ್ನು ಒಂದೊಂದು ಲೋಟ ಕುಡಿಯಲು ಕೊಡುವುದನ್ನು ನೋಡಬಹುದು. ಗಂಗಾನದಿಯ ನೀರನ್ನು ಇಷ್ಟು ಪವಿತ್ರವೆಂದು ಭಾವಿಸಲು ಏನು ಕಾರಣ ಎಂದು ಕೇಳಿದಾಗ ಹೇಳಿದರು, ಅದನ್ನು ಎಷ್ಟು ದಿವಸಗಳು ಇಟ್ಟರೂ ಅದು ಬೇರೆ ನೀರಿನಂತೆ ಹುಳಿತು,ಕೆಡುವುದಿಲ್ಲ ಎಂದು. ಆದರೆ ಗಂಗಾನದಿಗೆ ಎಸೆಯುವ ಅಸಂಖ್ಯಾತ ಹೆಣಗಳನ್ನು ನೋಡಿದರೆ ಇದು ನಿಜ ಎಂದು ನಂಬುವುದು ಕಷ್ಟ.

ದೇವಸ್ಥಾನದ ಸಮೀಪದಲ್ಲಿ ರಾಜಾ ಜಯಸಿಂಹನು ತನ್ನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಕಟ್ಟಿಸಿದ ಭವನವಿದೆ. ಜಯಸಿಂಹನ ಇಬ್ಬರು ಮಕ್ಕಳೂ, ಮತ್ತಿತರ ಗೌರವ ಮನೆತನದ ಮಕ್ಕಳೂ ಇಲ್ಲಿ ಓದುತಿದ್ದುದನ್ನು ನಾನು ಕಂಡೆ. ಬ್ರಾಹ್ಮಣರು ಸಂಸ್ಕೃತ ಭಾಷೆಯಲ್ಲಿ ಪಾಠಹೇಳುತ್ತಿದ್ದರು. ನನ್ನನ್ನು ನೋಡಿದ ಹುಡುಗರು ನನ್ನ ಕುಲಗೋತ್ರಗಳನ್ನು ಬೇರೆಯವರಿಂದ ಕೇಳಿ ತಿಳಿದುಕೊಂಡರು. ನಾನು ಫ್ರೆಂಚ್ ದೇಶದವನೆಂದು ಗೊತ್ತಾದಾಗ ರಾಜಕುಮಾರರು ನನ್ನನ್ನು ಮೊಗಸಾಲೆಯ (gallery) ಮೇಲಕ್ಕೆ ಕರೆಸಿಕೊಂಡು, ಯೂರೋಪಿನ, ಅದರಲ್ಲಿಯೂ ಫ್ರಾನ್ಸ್ ದೇಶದ ಬಗ್ಗೆ ನಾನಾ ವಿಷಯಗಳನ್ನು ಕೇಳಿ ತಿಳಿದುಕೊಂಡರು. ಉಪಾಧ್ಯಾಯರ ಬಳಿ ಡಚ್ಚರು ಕೊಟ್ಟಿದ್ದ ಎರಡು ಭೂಮಂಡಲಗಳಿದ್ದುವು. ಆ ಭೂಮಂಡಲಗಳಲ್ಲಿ ಫ್ರಾನ್ಸ್ ದೇಶ ಎಲ್ಲಿದೆ ಎಂದು ತೋರಿಸಿದೆ. ಸ್ವಲ್ಪ

ಹೊತ್ತು ಹೀಗೆ ಮಾತುಕತೆಯಾದಮೇಲೆ ಅವರು ನನಗೆ ವಿಳಯದೆಲೆ ಮರ್ಯಾದೆಮಾಡಿ ಕಳುಹಿಸಿಕೊಟ್ಟರು.

ಮೇಲೆ ಹೇಳಿದ ಭವನದ ಒಂದು ಕಡೆ ರಾಜಾ ಜಯಸಿಂಹನು ಕಟ್ಟಿಸಿದ ದೇವಸ್ಥಾನ ವಿದೆ. ಇದನ್ನು ಕಟ್ಟಿಸಲೂ ಬೇರೆ ಕಡೆ ಇದ್ದ ರಾಮದೇವರ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪನೆಮಾಡಲೂ ಬ್ರಾಹ್ಮಣರಿಗೆ ದಾನಧರ್ಮ, ಭೋಜನ ಮತ್ತು ಬಡಬಗ್ಗರಿಗೆ ಅನ್ನದಾನ ಇತ್ಯಾದಿ ಬಾಬುಗಳಿಗೆ ಅವನು ಐದು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದನಂತೆ.

ಜಗನ್ನಾಥ ಮತ್ತು ಬನಾರಸ್ ದೇವಸ್ಥಾನಗಳನ್ನು ಬಿಟ್ಟರೆ ಮತ್ತೊಂದು ದೊಡ್ಡ ದೇವಸ್ಥಾನವೆಂದರೆ ಮಥುರಾ ದೇವಸ್ಥಾನ. ಇದು ಆಗ್ರಾಕ್ಕೆ ೧೮ ಕೋಶ (kos) ದೂರದಲ್ಲಿದೆ. ಇಡೀ ಇಂಡಿಯಾದಲ್ಲಿ ಈ ದೇವಸ್ಥಾನದಷ್ಟು ಭಾರಿ ಮಂದಿರ ಬೇರೆ ಇಲ್ಲ. ಹಿಂದೆ ಇಲ್ಲಿಗೆ ಅಸಂಖ್ಯಾತ ಯಾತ್ರಾರ್ಥಿಗಳು ಬರುತ್ತಿದ್ದರಂತೆ. ಆದರೆ ಈಗ ಯಾರೂ ಕಾಣುವುದಿಲ್ಲ. ಏಕೆಂದರೆ, ಹಿಂದೆ ದೇವಸ್ಥಾನಕ್ಕೆ ತಾಗಿ ಹರಿಯುತ್ತಿದ್ದ ಜಮುನಾ ನದಿ ತನ್ನ ಪಾತ್ರವನ್ನು ಬದಲಾಯಿಸಿಬಿಟ್ಟು, ಈಗ ಅರ್ಧ ಹರಿದಾರಿ ದೂರದಲ್ಲಿ ಹರಿಯುತ್ತಿದೆ. ಸ್ನಾನಮಾಡಿದ ಭಕ್ತರು ದೇವಸ್ಥಾನಕ್ಕೆ ಬರಬೇಕಾದರೆ ಬಹಳ ಹೊತ್ತಾಗುತ್ತದೆ. ಅಷ್ಟರೊಳಗೆ ಮೈಲಿಗೆ ಆದರೆ ಸರಿಯಲ್ಲ ಎಂದು ಇಲ್ಲಿಗೆ ಬರುವುದನ್ನೇ ಬಿಟ್ಟಿದ್ದಾರೆ. ದೇವಸ್ಥಾನವನ್ನು ತಗ್ಗಾದ ಸ್ಥಳದಲ್ಲಿ ಕಟ್ಟಿದ್ದರೂ ಅದು ಐದಾರು ಕೋಶಗಳ ದೂರದಿಂದಲೇ ಕಾಣುವಷ್ಟು ಎತ್ತರವಾಗಿದೆ. ಇದಕ್ಕೆ ಉಪಯೋಗಿಸಿರುವ ಕೆಂಪುಶಿಲೆಯನ್ನು ಆಗ್ರಾದ ಬಳಿ ಇರುವ ಕಲ್ಲುಗಣಿಯಿಂದ ತಂದಿದ್ದಾರೆ. ಈ ಕಲ್ಲನ್ನು ಸ್ಲೇಟಿನ ಕಲ್ಲಿನಂತೆ ಎಷ್ಟು ಮಂದಕ್ಕೆ ಬೇಕಾದರೆ ಅಷ್ಟು ಮಂದಕ್ಕೆ ಸೀಳಬಹುದು. ಒಂದೊಂದು ಚಪ್ಪಡಿ ೧೫ ಅಡಿ ಉದ್ದವಾಗಿದ್ದು ೧೦ ಅಡಿ ಅಗಲವಾಗಿದೆ.

ನಾನು ಈ ದೇವಸ್ಥಾನವನ್ನು ಸಮೀಪಿಸಿ ಅಲ್ಲಿದ್ದ ಬ್ರಾಹ್ಮಣರನ್ನು ಕೇಳಿದೆ, "ಒಳಗೆ ಹೋಗಿ ರಾಮ್ (ದೇವರನ್ನು) ನೋಡಬಹುದೇ?" ಎಂದು. ತನಗೇನಾದರು ಕೊಟ್ಟರೆ ದೊಡ್ಡವರಿಂದ ಅಪ್ಪಣೆ ಪಡೆದು ಬರುವುದಾಗಿ ಹೇಳಿದರು. ನಾನು ಎರಡು ರೂಪಾಯಿ ಅವರ ಕೈಗೆ ಹಚ್ಚಿದ ಅರ್ಧ ಗಂಟೆಯೊಳಗೆ ದೇವಸ್ಥಾನದ ಬಾಗಿಲು ತೆರೆಯಿತು. ಒಳಗೆ ಹೋದೆ. ಚಿನ್ನ ಬೆಳ್ಳಿಯ ಹಳೇ ಜರತಾರಿ ಬಟ್ಟೆಯನ್ನು ಹೊದಿಸಿದ್ದ ರಾಮ್ ರಾಮ್ ವಿಗ್ರಹ ಕಾಣಿಸಿತು. ಕರಿಯ ಅಮೃತಶಿಲೆಯಿಂದ ಮಾಡಿದ ವಿಗ್ರಹ ಅದು. ತಲೆಗೆ ಮಾತ್ರ ಬಟ್ಟೆ ಹೊದಿಸಿರಲಿಲ್ಲ. ಎರಡು ಕಣ್ಣುಗಳಿಗೂ ಎರಡು ಮಾಣಿಕ್ಯಗಳನ್ನು (rubies) ಇಟ್ಟಂತೆ ಕಂಡಿತು. ದೇವಸ್ಥಾನದಲ್ಲಿ ೧೫-೧೬ ಅಡಿ ಚಚ್ಚೌಕವೂ, ೧೨ ರಿಂದ ೧೫ ಅಡಿ ಎತ್ತರವೂ ಇದ್ದ ಒಂದು ಯಂತ್ರವನ್ನು (machine =ತೇರು) ಕಂಡೆ. ಇದನ್ನು ನಾಲು ಚಕ್ರಗಳ ಮೇಲೆ ಇಟ್ಟಿದ್ದರು. ಇಡೀ ಯಂತ್ರವನ್ನು ನಾನಾ ತರಹ ರಾಕ್ಷಸರ (demons) ಚಿತ್ರಗಳನ್ನು ಬರೆದ ಒಟ್ಟೆಯಿಂದ ಹೊದಿಸಿದ್ದರು. ಕೆಲವು ಹಬ್ಬಗಳ ವೇಳೆ

ಈ ರಥದ ಮೇಲೆ ರಾಮ್‌ರಾಮನನ್ನು ಇಟ್ಟುಕೊಂಡು ಉತ್ಸವಮಾಡುತ್ತಾರೆಂದು ಗೊತ್ತಾಯಿತು.

ನಾಲ್ಕನೆ ದೇವಸ್ಥಾನ ಯಾವುದೆಂದರೆ ತಿರುಪತಿ. ಇದು ಕರ್ನಾಟಿಕ್ ಪ್ರಾಂತದಲ್ಲಿ ಕೋರಮಂಡಲ ಸಮುದ್ರತೀರ ಹಾಗೂ ಕೇಪ್ ಕಾಮೋರಿನ್ ಕಡೆಗೆ ಇದೆ. ನವಾಬ್ ಮೀರ್ ಜುಮ್ಲಾನನ್ನು ಕಾಣಲು ಮಸೂಲಿಪಟಂನಿಂದ ಗಂಡೀಕೋಟೆಗೆ ಹೋಗುವಾಗ ಈ ದೇವಸ್ಥಾನವನ್ನು ನೋಡಿದೆ. ಇದು ದೊಡ್ಡ ದೇವಸ್ಥಾನ. ಸುತ್ತಮುತ್ತ ಅನೇಕ ಕೊಳಗಳಿವೆ. ಜನರ ಮೂಢನಂಬಿಕೆ ಎಷ್ಟೆಂದರೆ, ಬ್ರಾಹ್ಮಣನು ತೆಗೆದುಕೊಟ್ಟ ಹೊರತು ಯಾರೂ ಈ ಕೊಳಗಳ ನೀರು ಮುಟ್ಟುವುದಿಲ್ಲ.

ಮೊಗಲ್ ಸಾಮ್ರಾಜ್ಯದ ಮತ್ತು ಇತರ ರಾಜ್ಯಗಳ ವಿಗ್ರಹಾರಾಧಕರಾರೂ ಮೇಲೆ ಹೇಳಿದ ನಾಲ್ಕು ಸ್ಥಳಗಳಲ್ಲಿ ಒಂದಕ್ಕಾದರು ತಮ್ಮ ಜೀವಮಾನದಲ್ಲಿ ಒಂದು ಸಲವಾದರೂ ಯಾತ್ರೆ ಹೋಗಿಬರದೆ ಇರುವುದಿಲ್ಲ. ಹೆಚ್ಚು ಜನ ಹೋಗುವುದು ಜಗನ್ನಾಥಕ್ಕೆ. ಏಕೆಂದರೆ, ಅದೇ ಎಲ್ಲಕಿಂತ ದೊಡ್ಡದು. ಬ್ರಾಹ್ಮಣರೂ ಶ್ರೀಮಂತರೂ ಒಂದು ಸಲಕ್ಕಿಂತ ಹೆಚ್ಚು ಸಲ ಹೋಗಿಬರುತ್ತಾರೆ. ಏಳೆಂಟು ಸಲ ಯಾತ್ರೆಮಾಡಿ ಬಂದವರೂ ಉಂಟು.

ಇಲ್ಲಿಯ ಜನ ಯೂರೋಪಿನವರಂತೆ ಒಬ್ಬಿಬ್ಬರು ಯಾತ್ರೆಹೋಗುವುದಿಲ್ಲ. ಹಳ್ಳಿ ಮತ್ತು ಪಟ್ಟಣಗಳ ಜನರೆಲ್ಲ ಸೇರಿಕೊಂಡು ಯಾತ್ರೆ ಹೊರಡುತ್ತಾರೆ. ಮುನ್ನೂರ ನಾನೂರು ಹರಿದಾರಿಗಳ ದೂರ ಪ್ರಯಾಣಮಾಡಿದ ಬಡವರು ಯಾತ್ರೆಗೆಂದು ಗಂಟು ಕಟ್ಟಿಕೊಂಡುಬಂದುದನ್ನೆಲ್ಲಾ ಖರ್ಚುಮಾಡಿ ದುಡ್ಡಿಗೆ ಒದ್ದಾಡುವಾಗ ಶ್ರೀಮಂತರು ಅವರಿಗೆ ದಾನಧರ್ಮಮಾಡುತ್ತಾರೆ. ಯಾತ್ರಿಕರ ಸ್ಥಾನಮಾನ ಹಾಗೂ ಶಕ್ತ್ಯಾನುಸಾರ ಪಲ್ಲಕ್ಕಿಗಳಲ್ಲಿಯೋ, ಡೋಲಿಗಳಲ್ಲಿಯೋ ಅಥವಾ ಗಾಡಿಗಳಲ್ಲಿಯೊ ದಾರಿ ಸಾಗಿಸುತ್ತಾರೆ. ಇವಾವ ಅನುಕೂಲಗಳಿಲ್ಲದ ಬಡವರು ನಡೆದುಕೊಂಡೇ ಹೋಗುತ್ತಾರೆ. ನಡೆಯಲಾರದ ಮುದುಕರು ಎತ್ತುಗಳ ಮೇಲೆ ಕುಳಿತರೆ, ಹೆಂಗರು ಮಕ್ಕಳನ್ನು ಕಂಕುಳಲ್ಲಿ ಇರುಕಿ ಕೊಂಡೋ ಗಂಡಸರು ಅಡುಗೆ ಪಾತ್ರೆ ಪರಟೆಗಳನ್ನು ಹೊತ್ತುಕೊಂಡೋ ದಾರಿ ಸಾಗಿಸುತ್ತಾರೆ.

ಯಾತ್ರಿಕರು ತಮ್ಮ ಜೊತೆ ಅವರವರ ಊರಿನ ದೇವರುಗಳನ್ನು ಹೊತ್ತು ಕೊಂಡು ಬರುತ್ತಾರೆ. ಪಲ್ಲಕ್ಕಿಯಲ್ಲಿ ದೇವರನ್ನು ಇಟ್ಟುಕೊಂಡು, ದೇವರ ನಿಶಾನೆ ಗಳನ್ನು ಮೆರೆಯುತ್ತಾ, ಚವಲ ಚಾಮರ ಬೀಸಿಕೊಂಡು ಹೋಗುತ್ತಿರುತ್ತಾರೆ.

೧೬೫೩ರಲ್ಲಿ ನಾನು ಗೋಲ್ಕೊಂಡಾದಿಂದ ಸೂರತ್ತಿಗೆ ಹೋಗುತ್ತಿರುವಾಗ ದೌಲತಾಬಾದ್ ಬಳಿ ೨,೦೦೦ ಜನ ಇದ್ದ ಇಂಥ ಯಾತ್ರಾರ್ಥಿಗಳ ತಂಡವೊಂದನ್ನು ನೋಡಿದೆ. ತಂಡದಲ್ಲಿ ಗಂಡಸರು, ಹೆಂಗಸರು ಮತ್ತು ಮಕ್ಕಳು ಎಲ್ಲಾ ಇದ್ದರು. ಅವರು ತಮ್ಮ ದೇವರನ್ನು ಇಟ್ಟ ಪಲ್ಲಕ್ಕಿಯನ್ನು ಹೊತ್ತು ತಿರುಪತಿಗೆ ಹೋಗುತ್ತಿದ್ದರು. ಅವರ ದೇವರನ್ನು ಕೆಂಪು ಮಕಮಲ್ ಬಟ್ಟೆಯ ಮೇಲಿಟ್ಟು, ಅಕ್ಕಪಕ್ಕದಲ್ಲಿ ಅದೇ

ಬಟ್ಟೆಯ ಮೆತ್ತೆಗಳನ್ನು ಇಟ್ಟಿದ್ದರು. ಪಲ್ಲಕ್ಕಿಯ ಬಿದಿರಿಗೆ ಚಿನ್ನ ಬೆಳ್ಳಿಯ ಜರತಾರಿ ಬಟ್ಟೆ ಸುತ್ತಿದ್ದರು. ಬ್ರಾಹ್ಮಣರನ್ನು ಬಿಟ್ಟರೆ ಬೇರೆಯವರು ವಿಗ್ರಹವನ್ನು ಮುಟ್ಟುವಂತಿರಲಿಲ್ಲ.

ಈ ಭಾರೀ ಉತ್ಸವ ಸಾಗಿ ಮುಂದೆ ಹೋದಮೇಲೆ ನಾನು ಈ ಜನರ ಮೂಢನಂಬಿಕೆ ಕನಿಕರಪಟ್ಟೆ.

ಜ್ಯೋತಿಶ್ಶಾಸ್ತ್ರವನ್ನು ಬ್ರಾಹ್ಮಣರು ಚೆನ್ನಾಗಿ ಅಭ್ಯಾಸಮಾಡಿದ್ದಾರೆ. ಸೂರ್ಯಗ್ರಹಣ ಚಂದ್ರಗ್ರಹಣಗಳು ಯಾವಾಗ ಆಗುತ್ತವೆ ಎಂದು ನಿಖರವಾಗಿ ಹೇಳಬಲ್ಲರು. ೧೬೬೬ರ ಜುಲೈ ೨ನೇ ತಾರೀಖು ಮಧ್ಯಾಹ್ನ ಒಂದು ಗಂಟೆಗೆ ಪಟ್ನಾದಲ್ಲಿ ಸೂರ್ಯಗ್ರಹಣ ಆಯಿತು. ಆಗ ಅಸಂಖ್ಯಾತ ಜನರು, ಮಕ್ಕಳು ಮರಿಗಳು ಸಹ, ಗಂಗಾನದಿಯಲ್ಲಿ ಸ್ನಾನಮಾಡಲು ಬರುತ್ತಿದ್ದುದನ್ನು ನೋಡಿ ಅಚ್ಚರಿಪಟ್ಟೆ. ನದಿಯ ಸ್ನಾನವನ್ನು ಗ್ರಹಣಕ್ಕೆ ಮುಂಚೆ ಮೂರು ದಿನಗಳ ತನಕ ಮಾಡಿಕೊಂಡು, ನದಿಯ ಬಳಿಯೇ ಹಗಲೂ ರಾತ್ರಿ ವಾಸಮಾಡಬೇಕು. ಆ ಕಾಲದಲ್ಲಿ ಅನ್ನ ಮುಂತಾದುವನ್ನು ಅಡುಗೆಮಾಡಿ ನದಿಯ ಮೀನು ಮೊಸಳೆಗಳಿಗೆ ಹಾಕುತ್ತಿರಬೇಕು. ಒಳ್ಳೆಯ ಗಳಿಗೆ ಬಂದಿತು ಎಂದು ಬ್ರಾಹ್ಮಣರು ಹೇಳಿದಕೂಡಲೇ, ಅದು ಸೂರ್ಯಗ್ರಹಣವಾಗಿರಲಿ ಅಥವಾ ಚಂದ್ರಗ್ರಹಣವಾಗಿರಲಿ, ಎಲ್ಲರೂ ಮನೆಯಲ್ಲಿರುವ ಮಡಕೆಕುಡಿಕೆಗಳನ್ನು ಒಂದೂ ಬಿಡದಂತೆ ಒಡೆದುಹಾಕಬೇಕು. ಆಗ ಇಡೀ ಊರಿನಲ್ಲೆಲ್ಲ ಮಡಕೆ ಒಡೆಯುವ ಲಟಪಟ ಶಬ್ದ!

ಗ್ರಹಣಕಾಲದಲ್ಲಿ ಅನುಕೂಲಸ್ಥರು ಬ್ರಾಹ್ಮಣರಿಗೆ ನವಗ್ರಹ ದಾನಮಾಡಿ ತರ್ಪಣ ಮುಂತಾದುವುಗಳನ್ನು ಕೊಡುತ್ತಾರೆ.

ಮಾರ್ಚಿ ತಿಂಗಳಲ್ಲಿ ಹುಣ್ಣಿಮೆಯ ದಿನ ನಾಗರಹಾವಿನ ಆಕಾರಕ್ಕೆ ಇರುವ ಒಂದು ವಿಗ್ರಹದ ದೊಡ್ಡ ಹಬ್ಬ ಆಚರಿಸುತ್ತಾರೆ. ಒಂಬತ್ತು ದಿನಗಳ ಈ ಹಬ್ಬದ ವೇಳೆ ಜನಗಳಿಗೂ ದನಗಳಿಗೂ ಬಿಡುವು. ದನಗಳನ್ನು ಅಲಂಕಾರಮಾಡಿ ಸಂತೋಷಪಡುತ್ತಾರೆ. ಪ್ರತಿ ದಿನ ಬೆಳಗ್ಗೆ ವಿಗ್ರಹದ ಪೂಜೆ ಆಗುತ್ತದೆ. ಆಗ ಹುಡುಗಿಯರು ವಾದ್ಯ ಸಮೇತ ಅದರ ಸುತ್ತ ಕುಣಿಯುತ್ತಾರೆ. ಆಮೇಲೆ ಸಂಜೆಯವರೆಗೆ ಊಟತಿಂಡಿಗಳನ್ನು ಮಾಡಿ ಖುಷಿಯಾಗಿ ಕಾಲಕಳೆಯುತ್ತಾರೆ. ಮತ್ತೆ ವಿಗ್ರಹಕ್ಕೆ ಎರಡನೇ ಪೂಜೆ.

ವಿಗ್ರಹಾರಾಧಕರಲ್ಲಿ ಮದ್ಯಪಾನ ಮಾಡುವ ಪದ್ಧತಿ ಸಾಮಾನ್ಯವಾಗಿ ಇಲ್ಲದಿದ್ದರೂ, ಈ ಹಬ್ಬದ ವೇಳೆ ಹೆಂಡವನ್ನೂ ಹೆದ್ದಾರಿಗಳಿಂದ ಬಹುದೂರ ಒಳಭಾಗದಲ್ಲಿರುವ ಊರುಗಳಲ್ಲಿ ಅದೇ ಹೆಂಡದಿಂದ ಭಟ್ಟಿ ಇಳಿಸಿ ಮಾಡಿದ ಮದ್ಯವನ್ನೂ ಕುಡಿಯುತ್ತಾರೆ. ಮದ್ಯದ ತಯಾರಿಕೆಯನ್ನು ಮಹಮ್ಮದೀಯ ಅಧಿಪತಿಗಳಿಗೆ ತಿಳಿಯದಂತೆ ಕಳ್ಳತನದಲ್ಲಿ ಮಾಡುತ್ತಾರೆ. ಮದ್ಯ ತಯಾರಿಕೆ ಮತ್ತು ಅದರ ಮಾರಾಟ ನಿಷೇಧ.

ಮದ್ಯವನ್ನು ತಯಾರಿಸುವ ವಿಧಾನ ಹೀಗಿದೆ : 'ಮರ್ತಬನ್' (Marthaban : ಮರ್ತಬನ್ ಎಂಬ ಊರಿನಲ್ಲಾದ ಮಡಕೆ) ಎಂದು ಕರೆಯಲ್ಪಡುವ ಮಡಕೆಗಳನ್ನು

ಭಟ್ಟಿ ಇಳಿಸುವುದಕ್ಕೆ ಉಪಯೋಗಿಸುತ್ತಾರೆ. ಈ ಮಡಕೆಗಳ ಒಳಭಾಗಕ್ಕೆ ಮೆರುಗು ಕೊಟ್ಟು ಹೊಳಪುಮಾಡಿರುತ್ತಾರೆ. ಇಂಥ ದೊಡ್ಡ ಮಡಕೆಗಳಲ್ಲಿ ಹೆಂಡ ತುಂಬಿ ಅದ ರೊಳಕ್ಕೆ ಐವತ್ತು ಅರವತ್ತು ಪೌಂಡುಗಳಷ್ಟು ಜೋನಿ ಬೆಲ್ಲವನ್ನೂ ಒಂದು ತರಹ ಮುಳ್ಳು ಮರದ (ಜಾಲಿಮರ ?) ೨೦ ಪೌಂಡುಗಳಷ್ಟು ತೊಗಟೆಯನ್ನೂ ಹಾಕುತ್ತಾರೆ. ತೊಗಟೆಯ ಕಾರಣ ಹೆಂಡ ಹುಳಿಯಾಗಿ ಕೊಳೆಯುತ್ತದೆ. ನಾಲ್ಕೈದು ದಿವಸಗಳ ಅನಂತರ ಮದ್ಯವನ್ನು ಬಸಿದುಕೊಳ್ಳುತ್ತಾರೆ. ವಾಸನೆ ಬೇಕೆನ್ನುವವರು ಅದಕ್ಕೆ ಮೆಣಸು ಲವಂಗವನ್ನೋ ಜಾಕಾಯಿಯನ್ನೋ ಹಾಕುತ್ತಾರೆ. ಒಂದು ದಿನ ಮದ್ಯ ತಯಾರಿಸ ಬೇಕೆಂದು ನನಗೆ ಖಯಾಲಿ ಹತ್ತಿತು. ಭಟ್ಟಿ ಇಳಿಸಿದ ಮೇಲೆ ಮದ್ಯವನ್ನು ಇಂಗ್ಲೆಂಡಿ ನಿಂದ ಬರುವ ಶೀಶೆಗಳಲ್ಲಿ ತುಂಬಿ ಇಟ್ಟೆ. ಶೀಶೆಗಳು ಕ್ರೌನ್ ನಾಣ್ಯದ ಮಂದದಷ್ಟು ಮಂದವಾಗಿದ್ದುವು. ಒಂದೊಂದರಲ್ಲಿ ನಾಲ್ಕು ಪೈಂಟ್‌ಗಳಷ್ಟು ಮದ್ಯ ಹಿಡಿಯುತ್ತಿತ್ತು. ಈ ಶೀಶೆಗಳಲ್ಲಿ ಮದ್ಯ ತುಂಬಿ ಬೆಳಗ್ಗೆ ಎದ್ದು ನೋಡಿದಾಗ ಮದ್ಯ ಉಕ್ಕಿ ಶೀಶೆಗಳೆಲ್ಲಾ ಒಡೆದುಹೋಗಿದ್ದುವು !

ಇಂಡಿಯಾದ ವಿಗ್ರಹಾರಾಧಕರು ಆಕಳಿಸುವಾಗ 'ನರಾಮಿ' (ನಾರಾಯಣ) ಎಂದು ಹೇಳಿ ಚಿಟಿಕೆ ಹೊಡೆಯುತ್ತಾರೆ. ಆಕಳಿಸಲು ಬಾಯಿ ತೆರೆದಾಗ ಕೆಟ್ಟ ಗ್ರಹ ಬಾಯೊಳಗೆ ಬರದಿರಲೆಂದು ಹೀಗೆ ಚಿಟಿಕೆಹೊಡೆಯುತ್ತಾರಂತೆ.

ನಿಜವಾದ ದೇವರ ಬಗ್ಗೆ ಈ ವಿಗ್ರಹಾರಾಧಕರ ತಿಳುವಳಿಕೆ ಅಂಧಕಾರದಲ್ಲಿ ತೊಳ ಲಾಡುವ ಮನುಷ್ಯನಂತಿದ್ದರೂ, ತಮ್ಮ ಜೀವನವನ್ನು ಮಾತ್ರ ಬಹಳ ಶುದ್ಧವಾಗಿ ನಡೆಸು ತ್ತಾರೆ ಮದುವೆಯಾದ ಮೇಲೆ ಪರಸ್ತ್ರೀಯರ ಕಡೆ ಕಣ್ಣಿಡುವುದಿಲ್ಲ. ಹಾದರ ಇವರಲ್ಲಿ ಇಲ್ಲವೇ ಇಲ್ಲ ಎನ್ನಬಹುದು. ಮತ್ಯಾವ ಅನೀತಿಯ ವ್ಯವಹಾರಗಳೂ ಇವರಲ್ಲಿ ಇಲ್ಲ. ಪ್ರಾಪ್ತ ವಯಸ್ಸಾದ ಮೇಲೆ ಮಕ್ಕಳು ತಪ್ಪುದಾರಿ ಹಿಡಿಯಬಹುದೆಂದು ಏಳೆಂಟು ವರ್ಷ ವಯಸ್ಸಿನಲ್ಲಿಯೇ ಅವರಿಗೆ ಮದುವೆಮಾಡುತ್ತಾರೆ. ಹೆಣ್ಣಿನ ಮನೆಗೆ ಗಂಡು ತನ್ನ ಬಳಗದೊಂದಿಗೆ ಹೋಗಿ, ಅಲ್ಲಿ ಹೆಣ್ಣಿನ ಕಾಲಿಗೆ ಎರಡು ಕಾಲಂದಿಗೆಗಳನ್ನು ತೊಡಿಸುತ್ತಾನೆ. ಇದರ ಅರ್ಥ, ಅಂದಿನಿಂದ ಆ ಹೆಣ್ಣು ತನ್ನವಳು, ಅವಳನ್ನು ಬಂಧಿಸಿದ್ದೇನೆ ಎಂದು. ಮಾರನೆಯ ದಿನ ಹೆಣ್ಣಿನ ಮನೆಯಲ್ಲಿ ಮದುವೆಯ ಊಟ. ಹೆಣ್ಣು ಗಂಡುಗಳನ್ನು ಒಟ್ಟಿಗೆ ನಿಲ್ಲಿಸಿ ಬ್ರಾಹ್ಮಣರು ಏನೇನೋ ಮಂತ್ರ ಹೇಳುತ್ತಾರೆ. ತಲೆಯ ಮೇಲೆ ನೀರನ್ನು ಪ್ರೋಕ್ಷಣೆಮಾಡುತ್ತಾರೆ. ಆಮೇಲೆ ಹೆಣ್ಣು ಗಂಡುಗಳಿಗೆ ಬಾಳೆ ಎಲೆಯ ಮೇಲೆ ಭಕ್ಷ ಭೋಜ್ಯಗಳನ್ನು ಬಡಿಸುತ್ತಾರೆ. ಆಗ ಗಂಡು ಹೇಳಬೇಕು "ದೇವರು ಕೊಟ್ಟದ್ದನ್ನು ನಾನು ನನ್ನ ಹೆಂಡತಿಯೊಡನೆ ಕೂಡಿ ಊಟಮಾಡುತ್ತೇನೆ ; ದುಡಿದು ನನ್ನ ಹೆಂಡತಿ ಯನ್ನು ಸಾಕುತ್ತೇನೆ" ಎಂಬುದಾಗಿ. ಇಷ್ಟು ಹೇಳಿದ ಮೇಲೆ ನೆಂಟರಿಷ್ಟರೆಲ್ಲಾ ಊಟಕ್ಕೆ ಕುಳಿತುಕೊಳ್ಳುತ್ತಾರೆ. ಒಟ್ಟೊಟ್ಟಿಗೆ ಒಂದೇ ಎಲೆಯಲ್ಲಿ ಊಟಮಾಡದೆ ಒಬ್ಬೊಬ್ಬರು ಬೇರೆ ಬೇರೆ ಎಲೆಯಲ್ಲಿ ಊಟಮಾಡುತ್ತಾರೆ. ಊಟವಾದ ಮೇಲೆ ಎಲ್ಲ

ರಿಗೂ ಗಂಗಾಜಲವನ್ನು ಕುಡಿಯಲು ಕೊಡಲೇಬೇಕು. ಗಂಗಾನದಿ ಎಷ್ಟೇ ದೂರದಲ್ಲಿ ದ್ದರೂ ಸರಿ, ಅದನ್ನು ತರಿಸಿ ಎಲ್ಲರಿಗೂ ಕುಡಿಸಬೇಕು. ಒಂದು ಮದುವೆಯಲ್ಲಿ ಎರಡು ಮೂರು ಸಾವಿರ ರೂಪಾಯಿಗಳಷ್ಟು ಹಣ ಗಂಗಾಜಲಕ್ಕಾಗಿ ಖರ್ಚಾಗಲೇಬೇಕು.

ನನ್ನ ಪ್ರವಾಸ ಕಾಲದಲ್ಲಿ ನಾನು ಕಂಡ ಒಂದೆರಡು ವಿಚಿತ್ರ ವಿಷಯಗಳನ್ನು ಇಲ್ಲಿ ಹೇಳಬಯಸುತ್ತೇನೆ : ಏಪ್ರಿಲ್ ಲನೇ ತಾರೀಖು ನಾನು ಬಂಗಾಳದ ಮಾಲ್ಡಾಹ್ ಎಂಬ ಪಟ್ಟಣದಲ್ಲಿದ್ದಾಗ ಜನರು ಒಂದು ದೊಡ್ಡ ಹಬ್ಬ ಆಚರಿಸಿದರು. ಎಲ್ಲರೂ ಊರು ಬಿಟ್ಟು ಹೊರಗೆ ಹೋದರು. ಹಲವಾರು ಜನ ಅಲ್ಲಿದ್ದ ಮರಗಳ ಕೊಂಬೆಗಳಿಗೆ ನೇತು ಹಾಕಿದ್ದ ಕಬ್ಬಿಣದ ಕೊಕ್ಕೆಗಳಿಗೆ ತಮ್ಮ ಶರೀರವನ್ನು ಸಿಕ್ಕಿಸಿಕೊಂಡು ನೇತಾಡಲಾರಂಭಿಸಿದರು. ಕೆಲವರು ಕೊಕ್ಕೆಗಳನ್ನು ಶರೀರದ ಪಕ್ಕೆಗೆ ಸಿಕ್ಕಿಸಿಕೊಂಡರೆ, ಮತ್ತೆ ಕೆಲವರು ಬೆನ್ನಿಗೆ ಸಿಕ್ಕಿಸಿಕೊಂಡರು. ಮಾಂಸ ಕಿತ್ತುಬರುವವರೆಗೂ ಹಾಗೆಯೇ ತೂಗಾಡುತ್ತಿದ್ದರು. ಆದರೂ ಅವರ ಮೈಯಿಂದ ಒಂದು ತೊಟ್ಟು ರಕ್ತ ಹನಿಯದಿದ್ದುದು ಆಶ್ಚರ್ಯದ ಸಂಗತಿ. ಕಿತ್ತು ಗಾಯವಾದ ಸ್ಥಳಕ್ಕೆ ಬ್ರಾಹ್ಮಣರು ಔಷಧಿ ಹಾಕಿದರು. ಎರಡು ದಿನಗಳಲ್ಲಿ ಗಾಯ ವಾಸಿಯಾಯಿತು.[1]

ಈ ಹಬ್ಬದಲ್ಲಿ ಕೆಲವರು ಕಬ್ಬಿಣದ ಮುಳ್ಳುಹಾಸಿಗೆಯ ಮೇಲೆ ಮಲಗಿಕೊಳ್ಳುತ್ತಾರೆ. ನೆರೆದವರು ವೀಳೆಯದೆಲೆ, ದುಡ್ಡುದುಗ್ಗಾಣಿಗಳನ್ನು ಕೊಡುತ್ತಾರೆ. ಇವನ್ನು ಆಮೇಲೆ ಬಡಬಗ್ಗರಿಗೆ ಹಂಚಿಬಿಡುತ್ತಾರೆ. ಹೀಗೆಲ್ಲಾ ಏಕೆ ಮಾಡುವಿರೆಂದು ನಾನು ಕೇಳಿದೆ. 'ಎಲ್ಲಾ ಆ ಭಗವಂತನಿಗೆ ಅರ್ಪಿತವಾಗಲಿ ಎಂಬುದಾಗಿ ಮಾಡುತ್ತೇವೆ' ಎಂದು ಅವರು ಹೇಳಿದರು.

ಒಮ್ಮೆ ನಾನು ೧೬೬೬ರ ಮೇ ತಿಂಗಳು ೧೨ನೇ ತಾರೀಖು ಗಂಗಾನದಿಯ ಮೇಲೆ ಸಾಗುತ್ತಿರುವಾಗ, ಯಾರೋ ಒಬ್ಬ ಸಾಯುತ್ತಿರುವ ಹಸುವನ್ನು ನೀರಿನ ಬಳಿಗೆ ಕೊಂಡೊಯ್ಯದೆಹೋದ ಪಾಪಕ್ಕಾಗಿ ನದಿಯ ದಂಡೆಯಲ್ಲಿ ಬಹು ಕಷ್ಟಕರವಾದ ಭಂಗಿಗಳಲ್ಲಿ ಕುಳಿತುಕೊಳ್ಳಬೇಕಾದ ಪ್ರಾಯಶ್ಚಿತ್ತಕ್ಕೆ ಗುರಿಯಾಗಿದ್ದ. ಆತ ಬ್ರಾಹ್ಮಣರು ಹೇಳಿದಂತೆ ಏನೇನೋ ಮಾಡುತ್ತಿದ್ದುದನ್ನು ಕಂಡೆ.

ಭೂತಾನ ಬಹು ವಿಶಾಲವಾದ ದೇಶ. ನಾನು ಅಲ್ಲಿಗೆ ಹೋಗಿ ಅದರ ಬಗ್ಗೆ ಖಚಿತವಾದ ವಿಷಯಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಅಲ್ಲಿಂದ ಪಟ್ನಾಕ್ಕೆ

---

[1] ಇದನ್ನು 'ಸಿಡಿ' ಆಟವೆಂದು ಕರೆಯುತ್ತಾರೆ. ಈ ಆಟ ಹತ್ತೊಂಬತ್ತನೆ ಶತಮಾನದ ಕೊನೆಯವರೆಗೂ ರೂಢಿಯಲ್ಲಿತ್ತು. ಈಗಲೂ ಕೆಲವು ಗ್ರಾಮ ಮತ್ತು ಹಳೆಯ ಪಟ್ಟಣಗಳಲ್ಲಿ ಸಿಡಿಗಂಬಗಳನ್ನು ಮತ್ತು 'ಉಯ್ಯಾಲೆ' ಕಂಬಗಳನ್ನು ನೋಡಬಹುದು. ಕಬ್ಬಿಣದಕೊಂಡಿಯನ್ನು ಬೆನ್ನಿಗೆ ಸಿಗಿಸಿಕೊಂಡು ನೇತಾಡುತ್ತಿದ್ದವನನ್ನು "ಸಿಡೀರಣ್ಣ" (ಸಿಡಿಯ ಈರಣ್ಣ) ಎಂದು ಕರೆಯುತ್ತಿದ್ದರು.

ಹೋಗಿ ವ್ಯಾಪಾರಕ್ಕಾಗಿ ಬರುವವರಿಂದ ಕೆಲವು ವಿಷಯಗಳನ್ನು ಸಂಗ್ರಹಿಸಿಕೊಂಡೆ. ನಾನು ಪಟ್ಣಾದಲ್ಲಿದ್ದ ವೇಳೆ ೨೬,೦೦೦ ರೂಪಾಯಿ ಬೆಲೆಯ ಕಸ್ತೂರಿ ಕೊಂಡುಕೊಂಡೆ. ಇಂಡಿಯಾದಲ್ಲಿಯೂ ಯೂರೋಪಿನಲ್ಲಿಯೂ ಕೊಡಬೇಕಾದ ಸುಂಕಗಳನ್ನು ಕೊಡದೆ ಹೋಗಿದ್ದರೆ ನನಗೆ ಭಾರಿ ಲಾಭ ಬರುತ್ತಿತ್ತು. ಅತ್ಯುತ್ತಮವಾದ ರೇವಲ್ಚಿನ್ನಿ (rhubarb) ಬರುವುದು ಭೂತಾನದಿಂದಲೇ.

ನಾನು ಪಟ್ಣಾದಲ್ಲಿರುವಾಗ ಅಲ್ಲಿಗೆ ನಾಲ್ಕು ಜನ ಆರ್ಮೀಯನರು ಬಂದರು. ಇವರು ಹಿಂದೊಮ್ಮೆ ಭೂತಾನಕ್ಕೆ ಹೋಗಿಬಂದಿದ್ದರು. ಡಾಂಜಿಕ್‌ನಲ್ಲಿ (Dantzic ಡಾಂಜಿಗ್) ಸಿಕ್ಕುವ ಹಳದಿ ಕಾರೂಬಾಮಣಿ (amber) ಯಿಂದ ಮಾಡಿದ ಅನೇಕ ವಿಗ್ರಹಗಳನ್ನು ತೆಗೆದುಕೊಂಡು ಬಂದಿದ್ದರು. ಇವನ್ನು ಭೂತಾನ ರಾಜನಿಗೆ ಕೊಡಲು ಹೋಗುತ್ತಿದ್ದರು. ಆ ರಾಜನೂ ಅವನ ಪ್ರಜೆಗಳೂ ಕಟ್ಟಾ ವಿಗ್ರಹಾರಾಧಕರು. ದುಡ್ಡು ಸಂಪಾದನೆಯಾಗುತ್ತದೆ ಎಂದರೆ ಆರ್ಮೀಯನರು ವಿಗ್ರಹಗಳನ್ನು ಮಾರಿಯಾದರೂ ಹಣ ಸಂಪಾದಿಸುವುದಕ್ಕೆ ಹಿಂದುಮುಂದು ನೋಡುವುದಿಲ್ಲ.

ಪಟ್ಣಾದಿಂದ ಭೂತಾನಿಗೆ ಹೋಗುವುದಕ್ಕೆ ಕಾರವಾನಿಗೆ ಮೂರು ತಿಂಗಳು ಹಿಡಿಯುತ್ತದೆ. ಪಟ್ಣಾದಿಂದ ಡಿಸೆಂಬರ್ ತಿಂಗಳ ಕೊನೆಯಲ್ಲಿ ಕಾರವಾನ್ ಹೊರಡುತ್ತದೆ. ಎಂಟು ದಿನಗಳು ಪ್ರಯಾಣಮಾಡಿದರೆ ಮೊಗಲ್ ರಾಜ್ಯದ ಗಡಿ ಊರಾದ ಗೊರಖ್‌ಪುರ ಸಿಕ್ಕುತ್ತದೆ. ಅಲ್ಲಿಂದ ಪರ್ವತಗಳ ಬುಡವನ್ನು ಮುಟ್ಟಬೇಕಾದರೆ ಮತ್ತೆ ಎಂಟು ದಿನಗಳು ಪ್ರಯಾಣಮಾಡಬೇಕು. ಉದ್ದಕ್ಕೂ ಕಾಡು ಆನೆಗಳ ಕಾಟ. ರಾತ್ರಿ ಹೊತ್ತು ಬೆಂಕಿ ಹಾಕಿಕೊಂಡು ಎಚ್ಚರವಾಗಿರಬೇಕು. ಎತ್ತುಗಳನ್ನೋ, ಒಂಟೆಗಳನ್ನೋ ಅಥವಾ ಕುದುರೆಗಳನ್ನೋ ಕಾರವಾನಿನಲ್ಲಿ ಉಪಯೋಗಿಸಬೇಕು. ಕುದುರೆಗಳು ಎಂದರೆ ಬಹಳ ಸಣ್ಣ ಕುದುರೆಗಳು. ಕುಳಿತರೆ ಕಾಲುಗಳು ನೆಲಕ್ಕೆ ತಗಲುತ್ತವೆ.

ಗೋರಖ್‌ಪುರ ದಾಟಿದರೆ ನೇಪಾಳ ರಾಜನ ರಾಜ್ಯ ಸಿಕ್ಕುತ್ತದೆ. ಈ ರಾಜ್ಯ ಭೂತಾನ್ ರಾಜ್ಯದವರೆಗೆ ಹಬ್ಬಿದೆ. ನೇಪಾಳ ರಾಜ ಮೊಗಲ್ ಚಕ್ರವರ್ತಿಗೆ ಅಧೀನ. ಪೊಗದಿಯಾಗಿ ವರ್ಷಕ್ಕೊಂದು ಆನೆಯನ್ನು ಮೊಗಲ್ ಚಕ್ರವರ್ತಿಗೆ ಕಳುಹಿಸುತ್ತಾನೆ. ಇಡೀ ರಾಜ್ಯವೆಲ್ಲ ಬೆಟ್ಟ ಗುಡ್ಡ ಕಾಡುಗಳಿಂದ ಕೂಡಿರುವ ಕಾರಣ ವ್ಯಾಪಾರದ ವಹಿವಾಟು ಕಡಿಮೆ.

ಕಾರವಾನು ಪರ್ವತದ ಬುಡ ತಲುಪಿದ ಮೇಲೆ ಅಲ್ಲಿಂದ ಸಾಮಾನುಗಳನ್ನು ಮನುಷ್ಯರ ಮೇಲೋ ಆಡುಗಳ ಮೇಲೋ ಹೊರಿಸಿಕೊಂಡು ದಾರಿ ಹತ್ತಬೇಕು. ಕುದುರೆಗಳು ಆ ಕಡಿದಾದ ದಾರಿಯನ್ನು ಹತ್ತಲಾರವು. ಹತ್ತಿದರೂ ನಾವು ಮುಂದೆ ನಡೆದುಕೊಂಡು ಅವುಗಳನ್ನು ಎಳೆದುಕೊಂಡು ಹೋಗಬೇಕು. ಬೆಟ್ಟದ ತಪ್ಪಲಿನಲ್ಲಿ ಸಿಕ್ಕುವ ಊರಿನ ಹೆಸರು ನಗರ್‌ಕೋಟ್ ಎಂದು. ಇಲ್ಲಿಂದ ಸಾಮಾನುಗಳನ್ನು ಹೆಂಗಸರ ಮೇಲೂ ಹುಡುಗಿಯರ ಮೇಲೂ ಹೊರಿಸಿಕೊಂಡು ಬೆಟ್ಟ ಹತ್ತುತ್ತಾರೆ, ಹೆಂಗಸರು

ಸಾಮಾನುಗಳನ್ನಷ್ಟೇ ಅಲ್ಲದೆ ಮನುಷ್ಯರನ್ನೂ ಹೊರುತ್ತಾರೆ. ಹೆಗಲಿಗೆ ಹಾಕಿಕೊಂಡು ಬೆನ್ನ ಮೇಲೆ ಬಿಟ್ಟುಕೊಂಡ ಹಸಬೆಯಂಥ ಚೀಲದಲ್ಲಿ ಮನುಷ್ಯರನ್ನು ಕುಳ್ಳಿರಿಸಿಕೊಂಡು ದಾರಿ ಹತ್ತುತ್ತಾರೆ. ಒಬ್ಬ ಮನುಷ್ಯನನ್ನು ಸರದಿಯ ಮೇಲೆ ಮೂವರು ಹೆಂಗಸರು ಹೊರುತ್ತಾರೆ. ಸಾಮಾನು ಸರಂಜಾಮುಗಳನ್ನು ಆಡುಗಳ ಮೇಲೆ ಹೇರುತ್ತಾರೆ. ಆಡುಗಳು ೧೫೦ ಲೀವ್ರ್‌ಗಳಷ್ಟು ಭಾರದ ಸಾಮಾನುಗಳನ್ನು ಹೊರಬಲ್ಲವು. ಮನುಷ್ಯರನ್ನು ಹೊರುವ ಪ್ರತಿಯೊಬ್ಬ ಹೆಂಗಸಿಗೆ ಇಡೀ ಹತ್ತು ದಿನಗಳ ಪ್ರಯಾಣಕ್ಕೆ ಎರಡು ರೂಪಾಯಿ ಕೂಲಿ. ಒಂದು ಕ್ವಿಂಟಾಲ್‌ನಷ್ಟು ತೂಕ ಸಾಗಿಸಿದ ಆಡು ಕುರಿಗಳಿಗೂ ಅಷ್ಟೇ ಕೂಲಿ.

ಈ ರೀತಿ ಬೆಟ್ಟಗಳನ್ನು ದಾಟಿದ ಮೇಲೆ ಅಲ್ಲಿಂದ ಭೂತಾನಕ್ಕೆ ಎತ್ತು, ಒಂಟೆ ಅಥವಾ ಕುದುರೆಗಳ ಮೇಲೆ ಹೋಗಬಹುದು. ಕೊನೆಗೆ ಪಲ್ಲಕ್ಕಿಗಳಾದರೂ ಸಾಕು, ಹಾಯಾಗಿ ಪ್ರಯಾಣಮಾಡಬೇಕನ್ನುವವರಿಗೆ.

ಭೂತಾನದ ರಾಜನನ್ನು ಪ್ರಜೆಗಳು ದೇವರಂತೆ ಕಾಣುತ್ತಾರೆ ಈ ನಂಬಿಕೆ ಬರುವಂತೆ ಮಾಡಿರುವವರು ಬ್ರಾಹ್ಮಣರು.

ನಾನು ಪಟ್ನಾದಲ್ಲಿದ್ದಾಗ ಮೂರು ಜನ ವರ್ತಕರು ತಿಪ್ಪೆರಾ (Tipperah= ತ್ರಿಪುರ)ದಿಂದ ಬಂದರು. ಅವರು ತಾವು ಬ್ರಾಹ್ಮಣರೆಂದು ಹೇಳಿಕೊಂಡು ಡಾಕ್ಕಾ ಮೂಲಕ ಬಂದರಂತೆ. ಬ್ರಾಹ್ಮಣರೆಂದು ಹೇಳಿಕೊಂಡರೆ ವಿಶೇಷ ಮರ್ಯಾದೆ ದೊರೆಯುವುದೆಂದು ಹಾಗೆ ಹೇಳಿಕೊಂಡು ಬಂದಿದ್ದರು. ಅವರು ಅಲ್ಲಿಂದ ವಿಧ ವಿಧ ಸರಕುಗಳನ್ನು ತಂದಿದ್ದರು. ಆ ವರ್ತಕರು ಮದ್ಯಪಾನದಲ್ಲಿ ನಿಸ್ಸೀಮರು. ಮಾತು ಮಾತ್ರ ಕಡಿಮೆ ; ಜಪ್ಪೆಂದರೂ ಬಾಯಿಬಿಡುತ್ತಿರಲಿಲ್ಲ.

ಪರದೇಶದವರಿಗೆ ಉಪಯುಕ್ತವಾದ ಸಾಮಾನುಗಳಾವುವೂ ತಿಪ್ಪೆರಾದಲ್ಲಿ ಉತ್ಪನ್ನವಾಗುವುದಿಲ್ಲ. ಒಂದು ಚಿನ್ನದ ಗಣಿ ಇದೆ. ಆದರೆ ಅಲ್ಲಿ ಸಿಕ್ಕುವ ಚಿನ್ನ ಸಾಧಾರಣ. ರೇಷ್ಮೆ ದೊರೆಯುತ್ತದೆ. ಆದರೆ ಬಹಳ ಒರಟು. ಇವೆರಡೇ ತಿಪ್ಪೆರಾ ರಾಜನಿಗೆ ಆದಾಯದ ಬಾಬುಗಳು.

ಅಸ್ಸಾಂ ರಾಜ್ಯ ಎಂಥದು ಎಂಬುದು ಮೀರ್ ಜುಮ್ಲಾ ಅದನ್ನು ಗೆದ್ದು ಔರಂಗಜೇಬನಿಗೆ ಒಪ್ಪಿಸುವವರೆಗೆ ಗೊತ್ತೇ ಇರಲಿಲ್ಲ. ಅಸ್ಸಾಂ ಮೇಲೆ ಮೀರ್ ಜುಮ್ಲಾ ಯುದ್ಧ ಮಾಡಲು ಹೋಗುವುದಕ್ಕೆ ಮುಂಚೆ ಐನೂರು ಆರುನೂರು ವರ್ಷಗಳವರೆಗೆ ಆ ದೇಶ ಯುದ್ಧ ಅನ್ನುವುದನ್ನೇ ಕಂಡಿರಲಿಲ್ಲವಂತೆ. ಆದರೂ ಆ ದೇಶದ ಜನರೇ ಅಂತೆ, ಪುರಾತನ ಕಾಲದಲ್ಲಿ ಮೊಟ್ಟಮೊದಲಿಗೆ ಬಂದೂಕುಗಳನ್ನೂ ಮದ್ದನ್ನೂ ಕಂಡುಹಿಡಿದವರು. ಅವು ಅಸ್ಸಾಂನಿಂದ ಪೆಗೂ ದೇಶಕ್ಕೂ, ಅಲ್ಲಿಂದ ಚೀನಾಕ್ಕೂ ಹೋದುವಂತೆ. ಈ ಕಾರಣವೇ ಬಂದೂಕ ಮತ್ತು ಮದ್ದುಗಳನ್ನು ಕಂಡುಹಿಡಿದವರು ಚೀನಿಯರೆಂದು ಪ್ರತೀತಿಯಾಗಿರುವುದು. ಮೀರ್ ಜುಮ್ಲಾ ಅಸ್ಸಾಂ ಗೆದ್ದು ಹಿಂದಿರುಗುವಾಗ ಕಬ್ಬಿಣದಿಂದ

ಮಾಡಿದ ಅನೇಕ ಬಂದೂಕಗಳನ್ನು ತಂದನಂತೆ. ಅಲ್ಲಿ ತಯಾರಿಸಿದ ಮದ್ದಂತೂ ಬಹು ಉತ್ಕೃಷ್ಟವಾಗಿತ್ತಂತೆ.

ಅಸ್ಸಾಂ ರಾಜ್ಯ ಇಡೀ ಏಷ್ಯಾದಲ್ಲೇ ಉತ್ತಮವಾದ ದೇಶ. ಅಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಚಿನ್ನ, ಬೆಳ್ಳಿ, ಕಬ್ಬಿಣ, ಉಕ್ಕು, ಸೀಸ—ಇವುಗಳ ಗಣಿಗಳಿವೆ. ಬೇಕಾದಷ್ಟು ರೇಷ್ಮೆ ತಯಾರಾಗುತ್ತದೆ. ಇಂಥ ಸಮೃದ್ಧಿಯಾದ ದೇಶದಲ್ಲಿ ನಾಯಿಯನ್ನು ತಿನ್ನುತ್ತಾರೆ ! ಹಬ್ಬ ಹರಿದಿನಗಳಲ್ಲಿ ನಾಯಿಯ ಮಾಂಸ ಬೇಕೇಬೇಕು. ರಾಜ್ಯದ ಪ್ರತಿ ಪಟ್ಟಣದಲ್ಲಿ ತಿಂಗಳಿಗೊಂದು ಸಲ ನಾಯಿಗಳನ್ನು ಮಾರುವ ಸಂತೆಯೇ ಸೇರುತ್ತದೆಯಂತೆ.[1]

ಅಸ್ಸಾಂ ರಾಜಧಾನಿಯ ಹೆಸರು ಕೆಮ್ಮೆರೂಫ್ (Kemmerouf=ಕಾಮರೂಪ). ಅಲ್ಲಿ ಪ್ರಜೆಗಳು ಕಂದಾಯ ಕವಳಿಗೆಗಳನ್ನು ಕೊಡಬೇಕಾಗಿಲ್ಲ. ಗಣಿಗಳಲ್ಲಿಯೂ ಪ್ರಜೆಗಳು ಕೆಲಸ ಮಾಡುವುದಿಲ್ಲ. ಅಲ್ಲಿ ಕೆಲಸಮಾಡುವವರು ಅಕ್ಕಪಕ್ಕದ ದೇಶಗಳಿಂದ ಬಂದ ಗುಲಾಮರು. ಹೀಗಾಗಿ ರೈತರೆಲ್ಲ ಬಹು ಸುಖವಾಗಿದ್ದಾರೆ. ಜಮೀನಿನ ಮಧ್ಯೆ ಮನೆ ; ಮನೆಯ ಸುತ್ತ ಮರಗಿಡಗಳು ಮತ್ತು ಕೊಳಕುಂಟೆಗಳು. ಅನುಕೂಲಸ್ಥರು ತಮ್ಮ ಹೆಂಗಸರು ಅಡ್ಡಾಡಲು ಆನೆಗಳನ್ನು ಸಾಕಿದ್ದಾರೆ. ಇವರೂ ವಿಗ್ರಹಾರಾಧಕರು. ಆದರೆ ಇಂಡಿಯಾದ ವಿಗ್ರಹಾರಾಧಕರಂತೆ ಇವರಿಗೆ ಒಬ್ಬಳಲ್ಲ ಹೆಂಡತಿ, ನಾಲ್ಕು ಜನ.

ಸಯಾಂ ದೇಶ ಭತ್ತ ಮುಂತಾದ ಧಾನ್ಯಗಳಿಂದಲೂ ಹಣ್ಣುಹಂಪಲುಗಳಿಂದಲೂ ಸಮೃದ್ಧಿಯಾಗಿದೆ. ಕಾಡುಗಳಲ್ಲಿ ಹುಲಿ, ಆನೆ, ಜಿಂಕೆ, ಘೇಂಡಾಮೃಗ ಮುಂತಾದ ಪ್ರಾಣಿಗಳು ತುಂಬಿವೆ. ಎಲ್ಲೆಲ್ಲಿಯೂ ಎತ್ತರವಾಗಿ ಬೆಳೆದ ದಪ್ಪಬಿದಿರನ್ನು ನೋಡಬಹುದು.

---

[1]ಏಷ್ಯಾ ಖಂಡದಲ್ಲಿ ತಿರುಗಿದ ಪ್ರವಾಸಿಗರು ನರಮಾಂಸ ತಿನ್ನುವ ಬಣಗಳನ್ನು ವರ್ಣಿಸಿದ್ದಾರೆ. ಟಾವರ್‌ನ್ಯೇ ಇಲ್ಲಿ ತಿಳಿಸಿರುವ ವಿಷಯ ಅಬದ್ಧವೇನೂ ಆಗಿರದು. ಅಸ್ಸಾಂನಲ್ಲಿ ಜನರು ನಾಯಿಮಾಂಸ ತಿನ್ನುತಿದ್ದಂತೆ, ಅದರ ನೆರೆ ರಾಜ್ಯವಾದ ನಾಗಾಲ್ಯಾಂಡ್‌ನಲ್ಲಿ ಈಗಲೂ ನಾಯಿಗಳನ್ನು ತಿನ್ನುತ್ತಾರೆ. ನಾಗಾ ಕುಟುಂಬಕ್ಕೆ ನಾಯಿ ಒಬ್ಬ ಮಗನಂತೆ ಅಥವಾ ಮಗಳಂತೆ. ನಾಗಾಗಳು ಅತಿಥಿ ಸತ್ಕಾರಪ್ರಿಯರು. ಅಂಥವರು ಒಮ್ಮೆ ಒಬ್ಬ ಆಂಗ್ಲ ಅಧಿಕಾರಿಗೆ ಕುಡಿಯುವ ನೀರು ಕೊಡಲು ನಿರಾಕರಿಸಿದರಂತೆ. ಕೇಳಿದಾಗ ಅವರ ಉತ್ತರ ಹೀಗಿತ್ತು : "ಅಯ್ಯೋ, ಎಲ್ಲಿಯಾದರೂ ಉಂಟೆ ! ನಮ್ಮ ಮನೆಯ ನಾಯಿ ಈಗ ತಾನೆ ಮರಿಹಾಕಿದೆ. ಇನ್ನು ಹನ್ನೊಂದು ದಿವಸ ನಮ್ಮ ಮನೆಯಲ್ಲಿ 'ಪುರುಡು' (ಸೂತಕ). ಅದು ಕಳೆಯುವವರೆಗೆ ಯಾರಿಗೂ ನೀರು ಸಹ ಕೊಡುವುದಿಲ್ಲ!" ನಾಗಾ ಜನರು ಬೇಟೆಗಾಗಿ ನಾಯಿಗಳನ್ನು ಉಪಯೋಗಿಸುವಂತೆ ತಿನ್ನುವುದಕ್ಕೂ ಉಪಯೋಗಿಸುತ್ತಾರೆ. ಭೂತಗಣಗಳಿಗೆ ನಾಯಿಯ ಬಲಿ ಬಹಳ ಒಪ್ಪಿಗೆಯಂತೆ. ಬಲಿಕೊಟ್ಟ ಮೇಲೆ ಅದನ್ನು ತಿನ್ನುತ್ತಾರೆಂದು ಹೇಳಬೇಕಾಗಿಲ್ಲ.

ಸಯಾಂ ದೊರೆ ಇಡೀ ಪೂರ್ವದೇಶಗಳಲ್ಲಿರುವ ಬಹು ಶ್ರೀಮಂತ ದೊರೆಗಳಲ್ಲಿ ಒಬ್ಬ. ಈತ ಸಾಮಾನ್ಯವಾಗಿ ಜನಗಳಿಗೆ ಕಾಣಿಸಿಕೊಳ್ಳುವುದಿಲ್ಲ. ವರ್ಷಕ್ಕೆ ಎರಡು ಸಲ ಮಾತ್ರ ಅರಮನೆಯಿಂದ ಹೊರಗೆ ಬರುತ್ತಾನೆ: ಒಂದು ಸಲ ದೇವಸ್ಥಾನಕ್ಕೆ ಹೋಗುವುದಕ್ಕೆ ; ಇನ್ನೊಂದು ಸಲ ಊರಿನ ಹೊರಗಿರುವ ಇನ್ನೊಂದು ಸಣ್ಣ ದೇವಸ್ಥಾನಕ್ಕೆ ಹೋಗುವುದಕ್ಕೆ. ಅವನು ಬೀದಿಯಲ್ಲಿ ಹೊರಟಾಗ ಜನಗಳೆಲ್ಲ ತಮ್ಮ ಮನೆಯ ಬಾಗಿಲು ಕಿಟಕಿಗಳನ್ನು ಮುಚ್ಚಿ ನೆಲದ ಮೇಲೆ ಮಲಗಿಕೊಂಡುಬಿಡುತ್ತಾರೆ. ಒಬ್ಬರೂ ಕಣ್ಣೆತ್ತಿ ರಾಜನನ್ನು ನೋಡಕೂಡದು. ಮಹಡಿ ಮನೆಗಳಲ್ಲಿ ವಾಸಮಾಡು ವವರು ಕೆಳಗಿಳಿದು ಬೀದಿಗೆ ಬರಬೇಕು.

ರಾಜನಿಗೆ ಕ್ಷೌರಮಾಡುವವನು ಹಜಾಮನಲ್ಲ ; ಅವನ ಹೆಂಡತಿಯರಲ್ಲಿ ಒಬ್ಬಳು.

ಸಯಾಂ ದೇಶದಲ್ಲಿ ಎರಡು ಲಕ್ಷಕ್ಕೂ ಹೆಚ್ಚು ಮಂದಿ ಬೊನ್ಜೇ' (Bonze) ಎಂಬ ಪುರೋಹಿತರು (priests) ಇದ್ದಾರೆ. ಇವರ ಬಗ್ಗೆ ಜನರು ಬಹಳ ಮರ್ಯಾದೆ ತೋರಿಸುತ್ತಾರೆ. ರಾಜನೇ ಇವರಲ್ಲಿ ಕೆಲವರಿಗೆ ಅಡ್ಡಬಿದ್ದು ನಮಸ್ಕಾರಮಾಡುತ್ತಾನೆ. ಈ ಬೊನ್ಜೇ ಸಂನ್ಯಾಸಿಗಳು ಹಳದಿ ಉಡುಪು ಧರಿಸಿ ಸೊಂಟಕ್ಕೆ ಕೆಂಪು ಬಟ್ಟೆ ಸುತ್ತಿ ಕೊಂಡಿರುತ್ತಾರೆ. ಇವರು ಹೇಳುವ ಪ್ರಕಾರ ಕ್ರೈಸ್ತರ ದೇವರೂ ಇವರ ದೇವರೂ ಸಹೋದರರು. ಅವರಲ್ಲಿ ಇವರ ದೇವರೇ ಹಿರಿಯವನು.

ಮಕಸ್ಸರ್ ದ್ವೀಪವನ್ನು ಸೆಲಿಬೆಸ್ ದ್ವೀಪವೆಂದೂ ಕರೆಯುತ್ತಾರೆ. ಹಗಲು ಹೊತ್ತು ಸಹಿಸಲಸಾಧ್ಯವಾದ ಧಗೆ ; ರಾತ್ರಿ ಹೊತ್ತು ಸ್ವಲ್ಪ ತಂಪು. ಭೂಮಿ ಫಲ ವತ್ತಾಗಿದೆ. ಇಲ್ಲಿ ಬರುವ ಸರಕುಗಳ ಮೇಲೆ ಯಾವ ಸುಂಕ ಸಾರಿಗೆಗಳಿಲ್ಲ. ಇಲ್ಲಿಯ ಜನ ತಯಾರಿಸಿದ ಬಾಣಗಳು ವಿಷಪೂರಿತವಾದವುಗಳು. ಅತಿ ಗಂಡಾಂತರಕಾರಿಯಾದ ವಿಷವೆಂದರೆ, ಬೋರ್ನಿಯೋ ದ್ವೀಪದಲ್ಲಿ ಒಂದು ತರಹ ಮರಗಳ ರಸದಿಂದ ತಯಾರಿಸಿದ ವಿಷ. ಮಕಸ್ಸರ್ ರಾಜ್ಯದ ರಾಜನಿಗೆ ಮಾತ್ರ ಈ ವಿಷವನ್ನು ನಿವಾರಿಸುವ ಗುಟ್ಟು ಗೊತ್ತಿದೆಯಂತೆ. ನನ್ನ ಸಹೋದರರಲ್ಲಿ ಒಬ್ಬನನ್ನು ಇಂಡಿಯಾಕ್ಕೆ ಕರೆದುಕೊಂಡು ಹೋಗಿದ್ದುದು ಸರಿಯಷ್ಟೆ. ಆತ ಅಲ್ಲಿಯೇ ತೀರಿಹೋದ. ಆತ ಈ ವಿಷ ಎಷ್ಟು ಜಾಗ್ರತೆ ಏರುತ್ತೆ ಎಂಬುದನ್ನು ಕಣ್ಣಿಂದ ಕಂಡನಂತೆ. ಒಬ್ಬ ಇಂಗ್ಲಿಷಿನವ ಏತಕ್ಕೊ ಸಿಟ್ಟಾಗಿ ಮಕಸ್ಸರ್ ರಾಜನ ಪ್ರಜೆಯೊಬ್ಬನನ್ನು ಕೊಂದುಹಾಕಿದನಂತೆ. ರಾಜ ಆತನಿಗೆ ಶಿಕ್ಷೆ ವಿಧಿಸುವ ಬದಲು ಕ್ಷಮಿಸಿದನಂತೆ. ಆದರೆ ಫ್ರಾಂಕರಿಗೆ (ಫರಂಗೀಯವರಿಗೆ)— ಅಂದರೆ ಇಂಗ್ಲಿಷರು, ಡಚ್ಚರು, ಪೋರ್ಚುಗೀಸರು—ಇವರೆಲ್ಲರಿಗೆ ಹೆದರಿಕೆಯಾಯಿತಂತೆ, ಸ್ಥಳದ ಜನ ಫರಂಗಿಯವರ ಮೇಲೆ ಸೇಡುತೀರಿಸಿಕೊಳ್ಳದೆ ಬಿಡುವುದಿಲ್ಲ ಎಂದು. ಅವರೆಲ್ಲ ರಾಜನ ಬಳಿಗೆ ಹೋಗಿ ಹೇಳಿದರು, "ಕೊಲೆಮಾಡಿದ ಇಂಗ್ಲಿಷ್‌ನವನಿಗೆ ಶಿಕ್ಷೆ ವಿಧಿಸ ಬೇಕು" ಎಂದು. ರಾಜ ಒಪ್ಪಬೇಕಾಯಿತು. ನನ್ನ ಸಹೋದರ ರಾಜನಿಗೆ ಬಹಳ ಬೇಕಾದವನಾಗಿದ್ದ. ಅವನನ್ನು ರಾಜ ಕೇಳಿದನು, ಇಂಗ್ಲಿಷಿನವನ ದೇಹದ ಯಾವ

ಭಾಗಕ್ಕೆ ಬಾಣ ಬಿಡಲಿ ಎಂದು. ರಾಜನ ವಿಷಪೂರಿತ ಬಾಣದ ಪರೀಕ್ಷೆ ಮಾಡಬೇಕೆಂದು ನನ್ನ ಸಹೋದರ, "ಇಂಗ್ಲಿಷಿನವನ ಬಲಗಾಲಿನ ಹೆಬ್ಬೆಟ್ಟಿಗೆ ಹೊಡೆಯಿರಿ" ಎಂದು ಹೇಳಿದ. "ಆಗಲಿ" ಎಂದ ರಾಜ. ಇಬ್ಬರು ಶಸ್ತ್ರವೈದ್ಯರು, ಒಬ್ಬ ಇಂಗ್ಲಿಷಿನವ, ಮತ್ತೊಬ್ಬ ಡಚ್ಚರವ—ಹೀಗೆ ನಾಲ್ವರು ಸಿದ್ಧರಾಗಿದ್ದರು, ಬಾಣ ತಾಗಿದ ಕೂಡಲೇ ವಿಷ ಏರುವ ಮುನ್ನ ಆ ಹೆಬ್ಬೆಟ್ಟನ್ನು ಕತ್ತರಿಸಿಹಾಕಲು. ರಾಜ ಸರಿಯಾಗಿ ಬಾಣ ಬಿಟ್ಟ. ಬಿಟ್ಟನೋ ಇಲ್ಲವೋ ಏರಿದ ವಿಷ ಎದೆ ಮುಟ್ಟಿ ಒಂದೇ ಕ್ಷಣದಲ್ಲಿ ಸತ್ತುಹೋದ. ಶಸ್ತ್ರವೈದ್ಯರು ಬೆರಳನ್ನು ಕತ್ತರಿಸುವ ಮುನ್ನವೇ ಇಂಗ್ಲಿಷಿನವ ಸಾವನ್ನಪ್ಪಿದ.

ಮಕಸ್ಸರ್ ರಾಜ ಮಹಮ್ಮದೀಯ. ತನ್ನ ಪ್ರಜೆಗಳು ಯಾರೂ ಕ್ರೈಸ್ತರಾಗಲು ಬಿಡುವುದಿಲ್ಲ. ಮಹಮ್ಮದೀಯನಾಗುವ ಮುನ್ನ ಈ ರಾಜ ವಿಗ್ರಹಾರಾಧಕನಾಗಿದ್ದ. ಒಂದು ಕಡೆ ಮಹಮ್ಮದೀಯರೂ ಇನ್ನೊಂದು ಕಡೆ ಜೆಸ್ಸೂಯಿಟ್ ಪಾದ್ರಿಗಳೂ ಇವನನ್ನು ಮತಾಂತರ ಮಾಡಲು ಹವಣಿಸಿದರು. ಆಗ ರಾಜ ಹೇಳಿದ: "ಮಹಮ್ಮದೀಯರು ಇಬ್ಬರು ಮೂವರು ಮುಲ್ಲಾಗಳನ್ನು ಮೆಕ್ಕಾದಿಂದ ಕರೆಸಲಿ ; ಜೆಸ್ಸೂಯಿಟರೂ ಅವರ ಕಡೆಯಿಂದ ಇಬ್ಬರು ಮೂವರನ್ನು ಕರೆಸಲಿ. ಎರಡು ಕಡೆಯವರೂ ಅವರವರ ಮತದ ಬೋಧನೆ ಮಾಡಲಿ" ಎಂದು. ಇಬ್ಬರೂ "ಆಗಲಿ" ಎಂದರು. ಮಹಮ್ಮದೀಯರು ನಿಧಾನಮಾಡಲಿಲ್ಲ. ಕೂಡಲೇ ಮೆಕ್ಕಾಕ್ಕೆ ಜನರನ್ನು ಕಳುಹಿಸಿ, ಎಂಟು ತಿಂಗಳೊಳಗೆ ಅಲ್ಲಿಂದ ಇಬ್ಬರು ಮುಲ್ಲಾಗಳನ್ನು ಕರೆಸಿದರು. ಅವರು ರಾಜನಿಗೆ ಬೋಧನೆಮಾಡುವ ಕೆಲಸ ಆರಂಭಿಸಿದರು. ಜೆಸ್ಸೂಯಿಟರ ಕಡೆಯ ಪಾದ್ರಿಗಳು ಬರುವುದರೊಳಗೆ ರಾಜ ಮಹಮ್ಮದೀಯನಾಗಿಬಿಟ್ಟಿದ್ದ. ಕ್ರೈಸ್ತ ಪಾದ್ರಿಗಳು ಬರುವುದಕ್ಕೆ ಎರಡು ವರ್ಷಗಳಾದುವು.

ರಾಜ ಮಹಮ್ಮದೀಯನಾದರೂ ಅವನ ಸಹೋದರ ಮಹಮ್ಮದೀಯನಾಗಲಿಲ್ಲ. ಆತ ತನ್ನ ಸೇಡು ತೀರಿಸಿಕೊಳ್ಳಬೇಕೆಂದು ರಾಜ ಹೊಸದಾಗಿ ಕಟ್ಟಿಸಿದ ಮಸೀದಿಯಲ್ಲಿ ಮಹಮ್ಮದೀಯರು ಹೇಯವೆಂದು ಭಾವಿಸುವ ಹಂದಿಗಳನ್ನು ಕೊಯ್ಯುವ ಕೆಲಸ ಮಾಡಿಸಿದ. ಒಂದು ರಾತ್ರಿ ಹತ್ತು ಹನ್ನೆರಡು ಹಂದಿಗಳನ್ನು ತಾನೇ ನಿಂತು ಕಡಿಸಿ ರಕ್ತವನ್ನು ಮಸೀದಿಯ ಒಳಗೆಲ್ಲಾ ಚೆಲ್ಲಿಸಿದ. ಇಂಥ ಮಸೀದಿಯನ್ನು ಉಪಯೋಗಿಸಬಾರದೆಂದು ರಾಜ ಅದನ್ನು ಕೆಡವಿಸಿ ಬೇರೊಂದು ಮಸೀದಿ ಕಟ್ಟಿಸಿದ. ಅವನ ಸಹೋದರ ಹಲವು ಹಿರಿಯರೊಡಗೂಡಿ ಎಲ್ಲೋ ಹೊರಟುಹೋದ.

ಇದಿಷ್ಟು ನಾನು ಪೂರ್ವ ರಾಜ್ಯಗಳ ಬಗ್ಗೆ, ಅದರಲ್ಲಿಯೂ ಮೊಗಲ್ ಸಾಮ್ರಾಜ್ಯದ ಬಗ್ಗೆ, ಸಂಗ್ರಹಿಸಿದ ವಿಷಯ. ಬೇರೆ ಕೆಲವರು ಇವುಗಳ ಬಗ್ಗೆ ಹೆಚ್ಚು ವಿವರವಾಗಿ ಬರೆದಿರುವುದು ಗೊತ್ತು. ಆದರೂ ನಾನು ನನ್ನ ಪ್ರವಾಸಗಳಲ್ಲಿ ಕಂಡುದೇನೆಂದು ಕೇಳಲು

ಹಲವರು ಕುತೂಹಲರಾಗಿರುವುದರಿಂದ ಅವರ ಕುತೂಹಲದ ಪರಿಹಾರಕ್ಕಾಗಿ ಇದನ್ನೆಲ್ಲಾ ಹೇಳಿದ್ದೇನೆ.

ಬಿಜಾಪುರ ರಾಜ್ಯಕ್ಕೆ ಸೇರಿದ ದೊಡ್ಡ ಪಟ್ಟಣವಾದ ವೆಂಗೂರ್ಲಾ (Vengurla) ದಿಂದ ೧೬೪೮ನೇ ಏಪ್ರಿಲ್ ೧೪ನೇ ತಾರೀಖು ಬಟೇವಿಯಾಕ್ಕೆ ಹೊರಟದ್ದ ಚ್‌ಡ ಹಡಗೊಂದರಲ್ಲಿ ಹೊರಟೆವು ಈ ಹಡಗು ಪರ್ಷಿಯಾದಿಂದ ರೇಷ್ಮೆಯನ್ನು ತೆಗೆದುಕೊಂಡು ಬಂದಿತ್ತು. ದಾರಿಯಲ್ಲಿ ಬಕನೊರ್ (ದಕ್ಷಿಣ ಕನ್ನಡ ಜಿಲ್ಲೆಯ ಬಾರಕೂರು)ನಲ್ಲಿ ನಿಂತು, ಅಕ್ಕಿ ತೆಗೆದುಕೊಳ್ಳಬೇಕೆಂದು ಈ ಹಡಗಿಗೆ ಆಜ್ಞೆಯಾಗಿತ್ತು. ೧೮ನೇ ತಾರೀಖು ಬಕನೊರ್ ಮುಟ್ಟಿದೆವು. ಕ್ಯಾಪ್ಟನ್ ಹಡಗು ಇಳಿದು ರಾಜನನ್ನು ನೋಡಲು ಹೊರಟ. ಅಕ್ಕಿ ತುಂಬಿಕೊಳ್ಳಲು ಆತನ ಅಪ್ಪಣೆ ಬೇಕಾಗಿತ್ತು. ನಾನೂ ಆತನೊಡನೆ ಹೋದೆ. ಹಡಗಿನಿಂದ ಇಳಿದು ಮೂರು ಹರಿದಾರಿ (league)ಗಳ ದೂರ ದೋಣಿಯನ್ನೇರಿ ನದಿಯ ಮೇಲೆ ಹೋಗಬೇಕಾಯಿತು. ರಾಜನು ನದಿಯ ಬಳಿ ಬಿಡಾರಮಾಡಿದ್ದ. ತೆಂಗಿನಗರಿ ಹೊದಿಸಿದ್ದ ಹತ್ತು ಹನ್ನೆರಡು ಗುಡಿಸಲುಗಳಿದ್ದುವು. ರಾಜನಿದ್ದ ಗುಡಿಸಲಿನಲ್ಲಿ ನೆಲಕ್ಕೆ ಪರ್ಷಿಯನ್ ಜಮಖಾನ ಹಾಸಿದ್ದರು. ಐದಾರು ಜನ ಹೆಂಗಸರು ನವಿಲುಗರಿಯ ಬೀಸಣಿಗೆ ಯಿಂದ ಗಾಳಿ ಬೀಸುತ್ತಲೋ, ತಾಂಬೂಲವನ್ನು ಸಿದ್ಧಮಾಡಿಕೊಡುತ್ತಲೋ ಅಥವಾ ಅವನ ಚಿಲುಮೆಗೆ ಹೊಗೆ ಸೊಪ್ಪನ್ನು ತುಂಬುತ್ತಲೋ ಇದ್ದರು. ರಾಜನ ಪರಿವಾರದ ದೊಡ್ಡಮನುಷ್ಯರು ಸುಮಾರು ಇನ್ನೂರು ಜನ ಬೇರೆ ಬೇರೆ ಗುಡಿಸಲುಗಳಲ್ಲಿ ಇದ್ದರು. ಅವರಲ್ಲಿ ಬಹು ಮಂದಿ ಬಿಲ್ಲುಬಾಣಗಳನ್ನು ಹಿಡಿದಿದ್ದರು. ಎರಡು ಆನೆಗಳೂ ಇದ್ದುವು. ಇದನ್ನೆಲ್ಲಾ ನೋಡಿದಾಗ ರಾಜನು ಖಾಯಂ ಆಗಿ ಇರುವ ಸ್ಥಳ ಒಳನಾಡಿನಲ್ಲಿ ಇರುವುದೆಂದೂ ಆತ ಹವ ಬದಲಾವಣೆಗಾಗಿ ಇಲ್ಲಿಗೆ ಬಂದಿರಬೇಕೆಂದೂ ಕಂಡಿತು.

ನಾವು ರಾಜನನ್ನು ಕಂಡು ಅಕ್ಕಿ ತುಂಬಿಕೊಳ್ಳಲು ಅನುಮತಿ ಕೇಳಿದೆವು. ಕೂಡಲೇ ಅನುಮತಿ ಸಿಕ್ಕಿತು. ನಾವು ಪುನಃ ದೋಣಿಗಳಲ್ಲಿ ಕುಳಿತೆವು. ರಾಜ ಬಹುಮಾನವಾಗಿ ಹತ್ತು ಹನ್ನೆರಡು ಕೋಳಿಗಳನ್ನೂ, ಐದಾರು ಗಡಿಗೆ ಹೆಂಡವನ್ನೂ ಕಳುಹಿಸಿದ. ನಾವು ಒಂದು ಹರಿದಾರಿ ದೂರ ದೋಣಿ ಸಾಗಿಸಿ ಆ ರಾತ್ರಿ ಒಂದು ಹಳ್ಳಿಯಲ್ಲಿ ಮಲಗಿದೆವು ಆ ಹಳ್ಳಿಯಲ್ಲಿ ಮೂರು ನಾಲ್ಕು ಮನೆಗಳು ಮಾತ್ರ ಇದ್ದುವು. ಆದರೆ ನಮ್ಮ ಬಳಿ ಹಡಗಿನಿಂದ ತಂದ ಊಟೋಪಚಾರದ ಸಾಮಾನುಗಳು ಸಾಕಷ್ಟು ಇದ್ದುವು.

ಬೆಳಿಗ್ಗೆ ಎದ್ದು ಇನ್ನೇನು ಹೊರಡಬೇಕು, ಆಗ ನಮ್ಮ ಪೈಲಟ್‌ಗಳಲ್ಲಿ ಒಬ್ಬ ಮೂರು ನಾಲ್ಕು ಜನ ಯುವಕರೊಡಗೂಡಿ ದೋಣಿಯಲ್ಲಿ ನಮ್ಮ ಬಳಿಗೆ ಬಂದ. ಆತ ನಮ್ಮ ಬೆಳಗಿನ ಉಪಹಾರ ತಂದಿದ್ದ. ಎಲ್ಲರೂ ದಡಕ್ಕೆ ಹೋಗಿ ನೆಲದ ಮೇಲೆ ಕುಳಿತು ಉಪಹಾರ ಮುಗಿಸಿದೆವು. ಆಗ ನಮ್ಮವರು ಕುಡಿಯಲು 'ತಾರಿ' (tari = toddy : ಹೆಂಡ) ಬೇಕೆಂದು ಕೇಳಿದರು. ರಾತ್ರಿ ನಾವು ಯಾವ ಗುಡಿಸಲಿನಲ್ಲಿ ಮಲಗಿದ್ದೆವೋ

ಆ ಗುಡಿಸಲಿನವ ತಾನು ಅದನ್ನು ತರುವೆನೆಂದು ಹೇಳಿ ಹೋಗಿ ತಂದುಕೊಟ್ಟ. ಕುಡಿದೆವು. ಬಹಳ ರುಚಿಯಾಗಿತ್ತು. ಅದನ್ನು ಹೆಚ್ಚು ಕುಡಿಯಬೇಡಿರೆಂದು ಆತ ಹೇಳಿದ ಕುಡಿದರೆ ನೆತ್ತಿಗೇರಿಬಿಡುವುದು ಎಂದು ಎಚ್ಚರಿಸಿದ. ನಮ್ಮ ನಾವಿಕರು ಆ ಮಾತು ಕೇಳಿ ನಕ್ಕು ಗೇಲಿಮಾಡಿದರು. ಅವರು ಎಷ್ಟೋ ಸಲ ಅದನ್ನು ಗಡಿಗೆಗಟ್ಟಲೆ ಕುಡಿದು ದಕ್ಕಿಸಿಕೊಂಡಿದ್ದರು. ಗುಡಿಸಲಿನವ ಒಂದು ಗಡಿಗೆ ತಂದಿಟ್ಟಿದ್ದ. ಒಬ್ಬೊಬ್ಬರೂ ತಮಗೆ ಬೇಕಾದಷ್ಟು ಕುಡಿದರು. ಒಬ್ಬರು ಮೂರು 'ಗ್ಲಾಸು' ಕುಡಿದರೆ ಇನ್ನೊಬ್ಬರು ನಾಲ್ಕು, ಐದು ಕುಡಿದರು. ನಾನಾದರೋ ಒಂದೇ ಗ್ಲಾಸು ಕುಡಿದೆ. ಒಂದು ಗ್ಲಾಸು ಎಂದರೆ ಸುಮಾರು ಅರ್ಧ ಪೈಂಟ್. ಆದರೆ ನಿಜ ಹೇಳಬೇಕಾದರೆ ನಮಗೆಲ್ಲಾ ಬಹಳ ತಲೆನೋವು ಬಂದು ಬಿಟ್ಟಿತು. ಆ ತಲೆನೋವು ಬಿಡಲು ಎರಡು ದಿನಗಳೇ ಬೇಕಾದುವು. ಏಕೆ ಹೀಗೆ ಎಂದು ಸ್ಥಳದ ಜನರನ್ನು ಕೇಳಿದೆವು. ಅವರು ಹೇಳಿದರು, ಹೆಂಡ ತೆಗೆಯುವ ತೆಂಗಿನ ಮರಗಳಿಗೆ ಮೆಣಸಿನ ಬಳ್ಳಿ ಹಬ್ಬಿಸುತ್ತಾರೆ. ಆದ್ದರಿಂದ ಹೆಂಡ ಅಷ್ಟೊಂದು ಘಾಟು ಎಂದು.

ನಾವು ಹಡಗಿಗೆ ಹಿಂದಿರುಗಿದಾಗ ಇನ್ನೂ ನಮ್ಮ ತಲೆ ಸುತ್ತುತ್ತಿತ್ತು. ಹಡಗಿಗೆ ನಾಡಿನ ಅಧಿಪತಿಯೊಬ್ಬ ಬಂದು ನಮ್ಮನ್ನು ಕಂಡು ಅಕ್ಕಿ ಎಷ್ಟು ಬೇಕು, ಧಾರಣೆ ಎಷ್ಟು ಎಂದು ಕೇಳಿದ. ಅಕ್ಕಿಯನ್ನು ಸ್ವಲ್ಪ ದೂರದಿಂದ ತರಬೇಕಾಗಿತ್ತು. ಇದನ್ನು ಕೇಳಿ ನಮಗೆ ಬಹಳ ಯೋಚನೆ ಬಂದಿತು. ಏಕೆಂದರೆ, ಗಾಳಿಯ ದಿಕ್ಕು ಬದಲಾವಣೆಯಾಗ ಲಾರಂಭಿಸಿತ್ತು. ಹಡಗಿನ ಕ್ಯಾಪ್ಟನ್ ಬೇಕಾದ ಸರಕುಗಳನ್ನು ಪಡೆಯದೆ ಹೊರಡಲು ಸಿದ್ಧನಾಗಿರಲಿಲ್ಲ.

೨೮ ಮತ್ತು ೨೯ರ ರಾತ್ರಿ ಗಾಳಿ ತನ್ನ ದಿಕ್ಕು ಬದಲಾಯಿಸಲಾರಂಭಿಸಿತು. ಇಂಡಿಯಾ ತೀರದಲ್ಲಿ ಈ ಹಿಂದೆ ಪೈಲೆಟುಗಳು ಸಮುದ್ರಯಾನಮಾಡಿರಲಿಲ್ಲ. ಆದ್ದರಿಂದ ಲಂಗರು ಎತ್ತಿ ಹೊರಟುಹೋಗುವುದೊಳ್ಳೆಯದೆಂದು ಅವರು ಹೇಳಿದರು. ಬರಬೇಕಾದ ಹಡಗಿನ ಸರಕು ಪೂರ್ತಿ ಬಂದಿರಲಿಲ್ಲ. ಆದರೆ ಹೊರಡಲು ಕ್ಯಾಪ್ಟನ್ ಒಪ್ಪಲೊಲ್ಲ. ಹಡಗಿನಲ್ಲಿ ದಾಸ್ತಾನಿಡಲು ಸಿಹಿನೀರು ಬೇಕೆಂದು ಹೇಳಿದ. ಗಾಳಿ ಸ್ವಲ್ಪ ಶಾಂತವಾಯಿತು. ಅಕ್ಕಿ ತುಂಬುವ ಕೆಲಸ ಮುಂದುವರಿಯಿತು. ಇದಾದ ಮಾರನೇ ದಿನ ಕ್ಯಾಪ್ಟನ್ನಿಗೆ ಎಷ್ಟೋ ಹೇಳಿದೆವು, ಹೊರಟುಹೋಗೋಣ ಎಂದು. ಎಲ್ಲರೂ ಗೊಣಗಾಡುವುದನ್ನು ನೋಡಿ ಆತ ಎರಡು ದೋಣಿಗಳನ್ನು ಕಳುಹಿಸಿದ, ನೀರು ತೆಗೆದುಕೊಂಡುಬರಲು. ಆ ದೋಣಿಗಳು ನದಿಯ ಮುಖವನ್ನು ಮುಟ್ಟುವುದಕ್ಕಿಲ್ಲ, ಗಾಳಿ ಎದ್ದುಬಿಟ್ಟಿತು. ನೀರಿಲ್ಲದೆ ದೋಣಿಗಳು ಹಿಂದಿರುಗಿದುವು. ಸಧ್ಯ ಬದುಕಿಬಂದದ್ದೇ ಹೆಚ್ಚಾಯಿತು ಆ ದೋಣಿಗಳವರಿಗೆ. ಹಡಗಿಗೆ ಹಿಂದಿರುಗಿದ ಮೇಲೆ ಆ ಎರಡು ದೋಣಿಗಳನ್ನು ಮಾಮೂಲಿನಂತೆ ಹಡಗಿನ ಹಿಂದುಗಡೆ ಕಟ್ಟಿದೆವು, ಅಲೆಗಳು ಹಡಗಿಗೆ ಅಪ್ಪಳಿಸುವುದನ್ನು ತಪ್ಪಿಸಲು.

ಇಷ್ಟು ಮಾಡಿ ಲಂಗರು ಎತ್ತಿ ಹೊರಡಬೇಕೆನ್ನುವಾಗ ಗಾಳಿ ಮತ್ತಷ್ಟು ಜೋರಾಯಿತು. ಎತ್ತುಯಂತ್ರದ ಬಳಿ ಇದ್ದ ಮೂವತ್ತು ನಲವತ್ತು ಜನರಲ್ಲಿ ಹನ್ನೆರಡು ಜನ

ರಿಗೆ ಕಂಬಿಗಳ ಏಟು ತಗಲಿತು. ಗಾಳಿ ಬೀಸಿದ ರಭಸಕ್ಕೆ ಕಂಬಿಗಳು ಹಿಂದಕ್ಕೆ ಜಿಗಿದು ಪೆಟ್ಟುಕೊಟ್ಟವು. ಹೊರಜಿಯನ್ನು (ಹಗ್ಗವನ್ನು) ಸಡಿಲಮಾಡಲುಹೋದ ಕ್ಯಾಪ್ಟನ್‌ನ ಕೈ ಜಜ್ಜಿಹೋಯಿತು. ಲಂಗರು ಎತ್ತುವುದು ಹೋಗಲಿ, ಆ ಬಿರುಗಾಳಿಯಿಂದ ಪಾರಾಗಲು ಇದ್ದ ಲಂಗರುಗಳನ್ನೆಲ್ಲಾ ಕೆಳಕ್ಕೆ ಇಳಿಸಬೇಕಾಯಿತು. ಬಿರುಗಾಳಿ ಹಡಗನ್ನು ನೆಲದ ಕಡೆ ನೂಕುತ್ತಿತ್ತು. ಎಲ್ಲರಿಗೂ ಭೀತಿ ದೇವರೇ ಕಾಪಾಡು ಎಂದು ಪರಿತಪಿಸಿದರು. ಎರಡು ಗಂಟೆಗಳ ಅವಧಿಯಲ್ಲಿ ಎರಡು ಸಲ ಪ್ರಾರ್ಥನೆ ಸಲ್ಲಿಸಿದರು.

ಮಧ್ಯರಾತ್ರಿ ಹೊತ್ತಿಗೆ ನಮ್ಮಲ್ಲಿದ್ದ ಏಳು ಲಂಗರುಗಳೂ ಕಳೆದುಹೋದುವು. ಮುಂದೇನು ಮಾಡಬೇಕೆಂದು ಗೊತ್ತಾಗದೇಹೋಯಿತು. ನಮ್ಮ ಪೈಲಟ್‌ಗಳು ಕೂಗಿ ಹೇಳಿದರು, ಹಡಗು ನೆಲಕ್ಕೆ ತಾಗಿದಾಗ ಯಾರು ಏನು ಬೇಕಾದರೂ ಮಾಡಿ ಪ್ರಾಣ ಉಳಿಸಿಕೊಳ್ಳಬಹುದೆಂದು. ಇಷ್ಟು ಹೇಳಿ ಸುಸ್ತಾಗಿ ಅವರು ಮಲಗಲುಹೋದರು. ಇದಕ್ಕೆ ಎಷ್ಟೋ ಹೊತ್ತಿಗೆ ಮೊದಲೆ ಕ್ಯಾಪ್ಟನ್ ಮಲಗಿಕೊಂಡುಬಿಟ್ಟಿದ್ದ. ಅವನ ಕೈಗೆ ಆದ ಪೆಟ್ಟಿನಿಂದ ನೋವು ಬಹಳ ಹೆಚ್ಚಾಗಿತ್ತು.

ಚಂದ್ರ ಆಕಾಶದಲ್ಲಿ ಬೆಳಗುತ್ತಿದ್ದ. ನಾನು ಹಡಗಿನ ಕಟಕಟೆಗೆ ಒರಗಿ ಅಲೆಗಳು ಹಡಗನ್ನು ತೀರದ ಕಡೆಗೆ ಒತ್ತುತ್ತಿದ್ದುದನ್ನು ನೋಡುತ್ತಾ ನಿಂತೆ. ಹೀಗೆ ನಿಂತು ನೋಡುತ್ತಿರಬೇಕಾದರೆ ಹಡಗು ನೆಲಕ್ಕೆ ತಾಗಿತು. ಎಲ್ಲರಿಗೂ ಅನ್ನಿಸಿತು, ಅದು ನುಚ್ಚು ನೂರಾಗುವುದು ಎಂದು. ಆಗ ಇಬ್ಬರು ನಾವಿಕರು ನನ್ನ ಬಳಿಗೆ ಬಂದು, ನಾವು ಹೆದರಬೇಕಾಗಿಲ್ಲವೆಂದೂ, ಪ್ರಾಣರಕ್ಷಣೆಗೆ ತಕ್ಕ ಏರ್ಪಾಡುಮಾಡುವುದಾಗಿಯೂ, ದೇವರ ದಯೆಯಿಂದ ಭೂಮಿಯನ್ನು ಸುಖವಾಗಿ ಮುಟ್ಟಿದರೆ ನಾವು ಅವರಿಗೆ ಸೂಕ್ತ ಮರ್ಯಾದೆ ಮಾಡಬೇಕೆಂದೂ ಹೇಳಿದರು. ಅವರ ಕೈಲಾದ್ದು ಮಾಡಬೇಕೆಂದು ನಾನು ಅವರನ್ನು ಹುರಿದುಂಬಿಸಿದೆ—ಭೂಮಿ ಮುಟ್ಟಿದ ಕೂಡಲೇ ೫೦೦ ಏಕಸ್ ಹಣ ಅವರದಾಗುವುದೆಂದು. ಆ ಇಬ್ಬರು ಯಾರೆಂದರೆ, ನನ್ನನ್ನು ಈ ಹಿಂದೆ ಬಂದರ್-ಅಬ್ಬಾಸ್ ಮತ್ತು ಸೂರತ್ತಿನಲ್ಲಿ ಕಂಡಿದ್ದ ಹ್ಯಾಂಬುರ್ಗರು (Hamburghers—ಜರ್ಮನರು) ನಾನು ನನ್ನ ಸಾಮಾನು-ಸರಂಜಾಮುಗಳನ್ನು ಎತ್ತು ಕತ್ತೆಗಳ ಮೇಲೆ ಸಾಗಿಸದೆ, ನಾನೇ ಹೊತ್ತುಕೊಂಡು ಸಾಗಿಸುವೆನೆಂದು ಅವರಿಗೆ ಗೊತ್ತಿತ್ತು.

ನಾನು ಅವರಿಗೆ ಭರವಸೆ ಕೊಟ್ಟದ್ದೇ ತಡ, ಅವರು ಒಂದು ತೊಡೆಗಾತ್ರದ ಮತ್ತು ಎಂಟು ಹತ್ತು ಅಡಿ ಉದ್ದದ ಮರದ ತೊಲೆ ತೆಗೆದುಕೊಂಡು, ಅದಕ್ಕೆ ಐದಾರು ಕಡೆಗಳಲ್ಲಿ ದಪ್ಪನಾದ ಹಗ್ಗ ಕಟ್ಟಿದರು. ಹಡಗು ಮೊದಲಿನಂತೆ ನೇರವಾಗಿ ತೀರದ ಕಡೆಗೆ ಹೋಗುತ್ತಿರಲಿಲ್ಲ. ಚಂದ್ರ ಮುಳುಗುತಿದ್ದುದರಿಂದ ಕತ್ತಲೆಯಲ್ಲಿ ನನಗೆ ಹಾಗೆ ತೋರುತ್ತಿದೆಯೋ ಏನೋ ಎಂಬ ಭಾವನೆಯಿಂದ ದಿಕ್ಸೂಚಿ ತೆಗೆದು ದಿಕ್ಕು ನೋಡಿದೆ. ಗಾಳಿ ನೆಲದ ಕಡೆಯಿಂದ ಸಮುದ್ರದ ಕಡೆಗೆ ಬೀಸುತಿತ್ತು. ನಾನು ಸಂತೋಷದಲ್ಲಿ ಕೂಗಿಹೇಳಿದೆ, ಗಾಳಿಯ ದಿಕ್ಕು ಬದಲಾಗಿದೆ ಎಂದು. ಆಗ ಹಡಗಿನ ಮೇಸ್ತ್ರಿ 'ಹಲೋ' (halo) ಎಂದು

ಕೂಗಿ ಎಲ್ಲಾ ನಾವಿಕರನ್ನು ಕರೆದ. ದೊಡ್ಡ ದೋಣಿಯಲ್ಲಿ ಹಾಕಿದ್ದ ಹದಿನಾಲ್ಕು ಜನ ಇನ್ನೂ ಅಲ್ಲೇ ಇದ್ದಾರೆಂದು ಭಾವಿಸಿ ಅವರನ್ನೂ ಕೂಗಿ ಕರೆದ. ಯಾರು ಓಗೊಡಲಿಲ್ಲ. ಮೂರನೇ ದಿನ ಬೆಳಕು ಹರಿದಾಗ ಕಂಡೆವು, ದೋಣಿಗೆ ಕಟ್ಟಿದ್ದ ಹಗ್ಗ ಕಿತ್ತುಹೋಗಿದ್ದುದನ್ನು! ಅವರೇನಾದರು ಎಂಬುದು ತಿಳಿಯಲೇ ಇಲ್ಲ. ಹಡಗಿನ ಕ್ಯಾಪ್ಟನ್ ಕೈನೋವಿನ ಕಾರಣ ಬಂದ ಜ್ವರದಿಂದ ನರಳುತ್ತಾ ಮಲಗಿಯೇಬಿಟ್ಟ. ಹಡಗಿನ ಚುಕ್ಕಾಣಿಹಲಗೆಯ ಮೇಲ್ಭಾಗ ಮುರಿದುಹೋಗಿತ್ತು. ಆದರೂ ಪ್ರತಿಯೊಬ್ಬರೂ ಧೈರ್ಯಮಾಡಿದರು. ಹೇಗೋಮಾಡಿ ಚುಕ್ಕಾಣಿಯು ಕೆಲಸಮಾಡುವಂತೆ ಮಾಡಿದೆವು.

ತಂಗಾಳಿ ಈಶಾನ್ಯ ದಿಕ್ಕಿನಿಂದ ಬೀಸುತ್ತಿತ್ತು. ಚಂದ್ರ ಮುಳುಗಿದ್ದ ಕಾರಣ ಕಗ್ಗತ್ತಲು ಕವಿದಿತ್ತು. ನಮ್ಮ ಧ್ಯಾನವೆಲ್ಲ ದೇವರ ಕಡೆಗಿತ್ತು. ನಾವು ಅಪಾಯದಿಂದ ಪೂರ್ಣ ಪಾರಾಗಿರಲಿಲ್ಲ. ಏಕೆಂದರೆ, ನಾವು ನೀರಿನ ಮೇಲೆ ಎದ್ದು ಕಾಣುತ್ತಿದ್ದ ಮೂರು ಬಂಡೆಗಳಿಂದ ತಪ್ಪಿಸಿಕೊಳ್ಳಬೇಕಾಗಿತ್ತು. ಆದರೆ ಕತ್ತಲೆಯಲ್ಲಿ ಅವು ಕಾಣುತ್ತಲೇ ಇರಲಿಲ್ಲ. ಈ ಬಂದರಿಗೆ ಬರುವ ಹಡಗುಗಳು ನಮ್ಮ ಹಡಗಿನಂತೆ ಅಕ್ಕಿಗಾಗಿ ಈ ಬಂಡೆಗಳ ಒಳಗೆ ಬರುವುದೇ ಇಲ್ಲ. ಆದರೆ ನಮ್ಮ ಕ್ಯಾಪ್ಟನ್ ಅಕ್ಕಿ ಹೇರಿಕೊಳ್ಳಲು ಕಾಲಾವಕಾಶ ಸಾಲದೆಂದು ನದಿಯ ಮುಖದ ಬಳಿಗೇ ಹಡಗನ್ನು ಕೊಂಡೊಯ್ದಿದ್ದ. ಅಂತೂ ದೇವರ ದಯ. ಬೆಳಕು ಹರಿದಾಗ ನಾವು ಭೂಮಿಯಿಂದ ಮೂರು ನಾಲ್ಕು ಹರಿದಾರಿ ದೂರದಲ್ಲಿ ಇದ್ದೆವು. ನಾವೆಲ್ಲ ಒಂದು ಕಡೆ ಕೂಡಿದೆವು, ಮುಂದೇನು ಮಾಡಬೇಕೆಂದು ಆಲೋಚಿಸಲು. ನಮ್ಮ ಲಂಗರುಗಳು ಒಂದೂ ಇರಲಿಲ್ಲ. ಎಲ್ಲಾ ಸಮುದ್ರದ ಪಾಲಾಗಿದ್ದುವು.

ಯಾವ ಕಡೆ ನಮ್ಮ ಮುಂದಿನ ಪ್ರಯಾಣ ಸಾಗಬೇಕೆಂದು ಆಲೋಚಿಸಿದೆವು. ಕೆಲವರು ಗೋವಾ ಕಡೆ ಹೋಗೋಣವೆಂದರೆ, ಮತ್ತೆ ಕೆಲವರು ಪಾಯಿಂಟ್ (ದ ಗಲ್ಲೆ) (ಸಿಲೋನ್ ದ್ವೀಪದ) ಕಡೆ ಹೋಗೋಣವೆಂದರು ಎರಡು ಕಡೆ ಹೋಗುವುದಕ್ಕೂ ಗಾಳಿ ಅನುಕೂಲವಾಗಿತ್ತು. ಗೋವಾಕ್ಕೆ ಹೋಗುವ ಬದಲು ಗಲ್ಲೆಗೆ ಹೋಗುವುದೊಳ್ಳೆಯದೆಂದು ನನ್ನ ಅಭಿಪ್ರಾಯವಾಗಿತ್ತು. ಏಕೆಂದರೆ, ಗೋವೆಗೆ ಹೋದರೆ ಕುಡಿಯುವ ಚಟವುಳ್ಳ ನಮ್ಮ ನಾವಿಕರು ಕುಡಿದು ಏನಾದರೂ ಅಚಾತುರ್ಯ ನಡೆಸಿಬಿಡುತ್ತಾರೆ. ಆಗ ಅವರನ್ನು ಗೋವೆಯಲ್ಲಿ ಮತೀಯ ನ್ಯಾಯಾಸ್ಥಾನ (Inquisition)ವು ಬಂಧಿಸಿ ವಿಚಾರಣೆಗೆ ಗುರಿಪಡಿಸುತ್ತದೆ. ಅಷ್ಟೇ ಅಲ್ಲದೆ, ಗೋವೆಯಲ್ಲಿ ದುರ್ವ್ಯಸನಗಳಿಗೆ ಬೇಕಾದಷ್ಟು ಅವಕಾಶವುಂಟು. ಈ ಕಾರಣ, ಮತ್ತೆ ಹಡಗು ಹೊರಡುವಾಗ ಒಬ್ಬರೂ ಕೈಗೆ ಸಿಕ್ಕದೆಹೋಗಬಹುದು. ಹೀಗೆಲ್ಲ ಯೋಚಿಸಿ, ಪಾಯಿಂಟ್ ದ ಗಲ್ಲೆಗೆ ಹೋಗುವುದೆಂದೇ ತೀರ್ಮಾನಿಸಿದೆವು.

ಆದರೆ ಒಂದಾದರೂ ಲಂಗರು ಇಲ್ಲದೆ ಇದ್ದರೆ ಹೇಗೆ ? ಹಡಗಿನಲ್ಲಿ ಬಹಳ ಕಾಲದಿಂದ ಕೆಲಸಮಾಡುತ್ತಿದ್ದ ಒಬ್ಬಿಬ್ಬರು ಹೇಳಿದರು, ಹಡಗಿನ ತಳಅಟ್ಟದಲ್ಲಿ ಒಂದೇ ಕೈಯುಳ್ಳ

ಲಂಗರು ಇದ್ದುದು ತನಗೆ ಜ್ಞಾಪಕ ಎಂದು. ಅದರ ಮೇಲೆ ಬೇಕಾದಷ್ಟು ಸಾಮಾನು ಅಡಕಿದ್ದರು. ನೋಡೋಣವೆಂದು ಸಾಮಾನುಗಳನ್ನು ತೆಗೆದು ಬೇರೆ ಕಡೆ ಹಾಕಿ ಲಂಗರಿಗಾಗಿ ಹುಡುಕಿದೆವು. ಅದು ಸಿಕ್ಕಿತು. ಬಟೇವಿಯಾಕ್ಕೆ ಹೊರಟಿದ್ದ ನಾಲ್ಕೈದು ಜನ ಅನುಭವಸ್ಥ ಬಡಗಿಗಳು ನಮ್ಮ ಹಡಗಿನಲ್ಲಿದ್ದರು. ಅವರು ಒಂದೇ ಕೈ ಲಂಗರು ಎರಡು ಕೈಗಳ ಲಂಗರಿನೋಪಾದಿಯಲ್ಲಿ ಕೆಲಸಮಾಡುವಂತೆ ಮಾಡಿಕೊಡುವುದಾಗಿ ಹೇಳಿದರು. ಲಂಗರನ್ನಷ್ಟೆ ಅಲ್ಲದೆ, ಚುಕ್ಕಾಣಿಯನ್ನೂ ಸರಿಮಾಡಿದರು. ಲಂಗರಿನ ಮೇಲೆ ಅಡಕಿದ್ದ ಸಾಮಾನುಗಳನ್ನು ಹೊರತೆಗೆಯಲು ಮತ್ತು ಬಡಗಿಗಳಿಂದ ಕೆಲಸಮಾಡಿಸಲು ಮೂರು ನಾಲ್ಕು ಪೆಟ್ಟಿಗೆ ಷಿರಾಜ್ ಮದ್ಯ ಖರ್ಚಾಯಿತು, ಅಷ್ಟೆ.

ಎಂಟು ದಿನಗಳ ಅನಂತರ ನಾವು ಪಾಯಿಂಟ್ ದ ಗಲ್ಲಿಗೆ ಹೊರಟೆವು. ಮೇ ೧೨ ರಂದು ಆ ಬಂದರಿನಲ್ಲಿ ಲಂಗರುಹಾಕಿದೆವು. ನಾನು ಅಲ್ಲಿದ್ದ ಗೌರ್ನರ್ ಮತ್ಸೂರೆ (Governer Madsuere) ಯನ್ನು ನೋಡಲು ಹೋದೆ. ಇಲ್ಲಿಗೆ ಬಂದಾಗಲೆಲ್ಲ ಈತ ನನ್ನನ್ನು ಊಟಕ್ಕೆ ಕರೆಯುತ್ತಿದ್ದ.

ಜುಲೈ (ಬಹುಶಃ ಮೇ ತಿಂಗಳು) ೨೫ ರಂದು ನಾವು ಗಲ್ಲಿಯಿಂದ ಬೇರೊಂದು ಹಡಗಿನಲ್ಲಿ ಹೊರಟೆವು. ನಾವು ಬಂದ ಹಡಗು ಮುಂದಿನ ಪ್ರಯಾಣಕ್ಕೆ ಯೋಗ್ಯವಾಗಿರಲಿಲ್ಲ. ಆ ಹಡಗಿನಲ್ಲಿದ್ದ ಸಾಮಾನು ಸರಂಜಾಮುಗಳನ್ನೆಲ್ಲ ಇನ್ನೊಂದು ಹಡಗಿಗೆ ಸಾಗಿಸಿದ ತರುವಾಯ ಬಟೇವಿಯಾಕ್ಕೆ ನಮ್ಮ ಯಾನ ಆರಂಭವಾಯಿತು. ಜೂನ್ ೨೨ ರಂದು ಬಟೇವಿಯಾ ತಲುಪಿದೆವು.

ಎರಡು ಮೂರು ದಿನಗಳ ಅನಂತರ ಇಲ್ಲಿಯ ಜನರಲ್ ನನ್ನನ್ನು ಊಟಕ್ಕೆ ಕರೆದ. ನಾನು ಹೋದೆ. ಬಟೇವಿಯಾಕ್ಕೆ[1] ನಾನು ಬಂದ ಕಾರಣವೇನು ಎಂದು ಆತ ಕೇಳಿದ. ದೇಶ ನೋಡಲು ಹೊರಟಿದ್ದೇನೆ ಎಂದೆ ನಾನು. ಇಷ್ಟೇ ಮಾತು ಮುಗಿಸಿಕೊಂಡು ನಾನು ನನ್ನ ಬಿಡಾರಕ್ಕೆಬಂದೆ. ಮೂರು ನಾಲ್ಕು ದಿನಗಳು ಜನರು ನನ್ನನ್ನು ನೋಡಲು ಬಂದದ್ದೂ ಬಂದದ್ದೆ. ಬಂದವರಿಗೆ ಕುಡಿಯಲು ಮದ್ಯ ಕೊಡದೆ ಕಳುಹಿಸುವಂತಿರಲಿಲ್ಲ. ನೂರು ಏಕಸ್‌ಗಳು ಒಂದೇ ಗಳಿಗೆಯಲ್ಲಿ ಖರ್ಚಾಗಿಹೋದುವು. ಏಕೆಂದರೆ, ಒಂದು ಪೈಂಟ್ ವೈನ್ ಎಂದರೆ ನಾಲ್ಕು ಗ್ಲಾಸು ಅಷ್ಟೆ. ಸ್ಪಾನಿಷ್ ವೈನ್ ಅಗ್ಗವಾಗಿದ್ದಾಗ ಬಟೇವಿಯಾದಲ್ಲಿ ಒಂದು ಪೈಂಟ್ ಬೆಲೆ ಒಂದು ಏಕಸ್; ರೈನ್ ಮತ್ತು ಫ್ರೆಂಚ್ ವೈನ್ ಎರಡು ಏಕಸ್‌ಗಳು; ಇಂಗ್ಲಿಷ್ ಅಥವಾ ಬೇರೆ ಬೀರು ಒಂದು ಪೈಂಟಿಗೆ ೪೦ ಸೋಲ್‌ಗಳು.

ಬಟೇವಿಯಾ ಜನರಿಗೆ ಅತ್ಯಂತ ಹರ್ಷವಾದುದೆಂದರೆ, ಹಾಲೆಂಡಿನಿಂದ ಹಡಗುಗಳು ಬರುವುದು. ಈ ಹಡಗುಗಳಲ್ಲಿ ನಾನಾ ತರಹ ಮದ್ಯಗಳು ಬರುತ್ತವೆ. ಈ ಮದ್ಯ

---

[1] ಇಂಡೋನೇಷಿಯಾದ ಜಕರ್ತಾ ನಗರ

ಗಳು ಬಂದಾಗ ಊರೆಲ್ಲಾ ಹಬ್ಬದೋಪಾದಿ ಸಂತೋಷದಲ್ಲಿರುತ್ತದೆ. ಬೀದಿಯಲ್ಲಿ ಹೆಂಗಸರೂ ಹುಡುಗಿಯರೂ ಒಂದೆರಡು ಪೈಂಟ್ ವೈನಿಗೋ ಅಥವಾ ಬೀರಿಗೋ ನಿಮ್ಮ ಮೇಲೆ ಪಣ ಕಟ್ಟುತ್ತಾರೆ. ಗೆಲ್ಲಲಿ ಸೋಲಲಿ, ಮರ್ಯಾದೆಗೋಸ್ಕರ ಹೆಂಗಸರು ಪಣದ ಹಣ ಕೊಡುವುದಕ್ಕೆ ಯಾರೂ ಅವಕಾಶಕೊಡುವುದಿಲ್ಲ. ಇದರ ಜೊತೆಗೆ ಕೆಲವರನ್ನು ಕಂಡಾಗ ಅವರಿಗೆ ಶುಭಾಶಯ ಕೋರಿ ಕುಡಿಯಬೇಕಾಗುತ್ತದೆ. ಇವೆಲ್ಲಾ ಯುವಕರ ಜೇಬನ್ನು ಜಾಗ್ರತೆ ಖಾಲಿಮಾಡಿಬಿಡುತ್ತವೆ.

ನಾನು ಬಟೇವಿಯಾದಲ್ಲಿರುವಾಗ ಅಲ್ಲಿನ ಆಡಳಿತ ಮಂಡಳಿಯೊಡನೆ ಒಂದು ವ್ಯವಹಾರದಲ್ಲಿ ವಿನಾಕಾರಣ ಸಿಕ್ಕಿಕೊಂಡುಬಿಟ್ಟೆ. ಕೊನೆಗೆ ಅದರಿಂದ ಮುಕ್ತನಾಗಿ ಬಂದು ರಾಜನನ್ನು ನೋಡುವ ಮನಸ್ಸು ಮಾಡಿದೆ.

ಮೊಗಲ್ ಸಾಮ್ರಾಜ್ಯದ ಗಡಿಯನ್ನು ದಾಟಿದ ಮೇಲೆ ಪೂರ್ವದೇಶದ ಜನರು ಮಾತಾಡುವ ಭಾಷೆ ಯಾವುದೆಂದರೆ 'ಮಲೆ' (Malay) ಭಾಷೆ. ಇದು ಯೂರೋಪಿಯನರಿಗೆ ಲ್ಯಾಟಿನ್ ಭಾಷೆ ಇದ್ದಂತೆ. ನಾನು ೧೬೩೮ರಲ್ಲಿ ಇಂಡಿಯಾಕ್ಕೆ ಹೋದಾಗ ಪರದೇಶದ ಭಾಷೆಗಳಲ್ಲಿ ಬಹಳ ಚಾಲಾಕಾಗಿದ್ದ ನನ್ನ ಸಹೋದರನೊಬ್ಬನನ್ನು ಕರೆದುಕೊಂಡು ಹೋಗಿದ್ದೆ. ಅವನು ಐದಾರು ತಿಂಗಳುಗಳಲ್ಲಿ ಒಂದು ಭಾಷೆಯನ್ನು ಕಲಿತುಬಿಡುತ್ತಿದ್ದ. ಹೀಗಾಗಿ ಅವನಿಗೆ ಎಂಟು ಭಾಷೆಗಳು ಬರುತ್ತಿದ್ದುವು. ಅವನು ಬಹುಭಾಷಾ ಪ್ರವೀಣನಷ್ಟೇ ಅಲ್ಲದೆ, ಬಹಳ ಧೈರ್ಯಶಾಲಿಯೂ ಆಗಿದ್ದ. ಈ ಗುಣಗಳನ್ನು ಮೆಚ್ಚಿ ಬಟೇವಿಯಾದ ಕೌನ್ಸಿಲ್ ಅವನಿಗೆ ತನ್ನ ಸ್ವಂತ ಹಡಗು ಇಟ್ಟುಕೊಳ್ಳಲು ಅವಕಾಶಕೊಟ್ಟಿತ್ತು. ಹೀಗೆ ನನ್ನ ಸಹೋದರ ಹದಿನಾಲ್ಕು ಬಂದೂಕಗಳ ಹಡಗೊಂದನ್ನು ಪಡೆದು, ಅದರಲ್ಲಿ ಅನೇಕ ಸಮುದ್ರಯಾನಗಳನ್ನು ಮಾಡಿದ್ದ. ವ್ಯಾಪಾರಮಾಡಿ ಸಾಕಷ್ಟು ಹಣವನ್ನೂ ಸಂಪಾದಿಸಿದ್ದ. ನಾನು ಬಟೇವಿಯಾಕ್ಕೆ ಹೋದಾಗ ನನ್ನ ಸಹೋದರನು ಅಲ್ಲಿದ್ದ. ಅವನಿಗೆ ಮಲೆ ಭಾಷೆ ಬರುತ್ತಿದ್ದ ಕಾರಣ ಅವನನ್ನು ಕರೆದುಕೊಂಡು ನಾನು ಪಶ್ಚಿಮ ಜಾವಾದ ಸಣ್ಣ ಊರಾದ ಬಂಟಾಮಿಗೆ ಹೊರಟೆ.

ಬಂಟಾಂ ತಲುಪಿದಾಗ ಅಲ್ಲಿದ್ದ ಇಂಗ್ಲಿಷ್ ಪ್ರೆಸಿಡೆಂಟ್ ನಮ್ಮನ್ನು ಕರೆದು ವಿಧವಿಧವಾದ ಸತ್ಕಾರಗಳನ್ನು ಮಾಡಿದ. ಐವತ್ತು ಮಡಕೆ 'ಮಂಟುವಾ' (Mantua) ವೈನನ್ನು ನನ್ನ ಕಡೆಗೆ ಕೊಟ್ಟು, ಕುಡಿದು ಮಜಮಾಡಿ ಎಂದ. ಈ ವೈನನ್ನು ಸೀಸೆಗಳಲ್ಲಿ ಹಾಕಿದರೆ ಕೆಟ್ಟುಹೋಗುತ್ತದೆಯಂತೆ. ಈ ಕಾರಣ ಅದನ್ನು ಮಣ್ಣಿನ ಮಡಕೆಗಳಲ್ಲಿಯೇ ಹಾಕಿ ಇಡುತ್ತಾರೆ.

ಮಾರನೇ ದಿನ ಬೆಳಿಗ್ಗೆ ನನ್ನ ಸಹೋದರ ರಾಜನ ಅರಮನೆಗೆ ಹೋದ. ರಾಜನನ್ನು ನೋಡುವುದಕ್ಕೆ ಸರಿಯಾದ ಸಮಯ ಯಾವುದು ಎಂದು ತಿಳಿದುಕೊಂಡು ಬರಲು ನನ್ನ ಸಹೋದರ ಹೋದದ್ದು. ಆದರೆ ರಾಜನು ನನ್ನ ಸಹೋದರನನ್ನು ಕಂಡಕೂಡಲೇ ಹಿಂದಿನ ಗೆಳತನದ ಕಾರಣ ಅವನನ್ನು ಹೋಗಲು ಬಿಡದೆ, ನನ್ನನ್ನು ಕರೆದುಕೊಂಡು

ಬರಲು ಜನರನ್ನು ಕಳುಹಿಸಿದ. ನನಗೆ ಅನುಮಾನ, ಒಬ್ಬನೇ ಅರಮನೆಯನ್ನು ಪ್ರವೇಶಿಸಿ ರಾಜನನ್ನು ಕಾಣುವುದು ಸೂಕ್ತವಲ್ಲ ಎಂದು. ಏಕೆಂದರೆ, ಹಿಂದೆ ಒಂಟಿಯಾಗಿ ಹೋದ ಮೆಸ್ಯ ರೇನೋ(M Renaud) ಎಂಬ ಫ್ರೆಂಚನಿಗೆ ಅಚೀನ್ ದೊರೆ ಮೋಸಮಾಡಿದ ವಿಚಾರ ನನಗೆ ಗೊತ್ತಿತ್ತು. ಆದರೂ ಧೈರ್ಯಮಾಡಿ ರಾಜನನ್ನು ನೋಡಲು ಹೋದೆ. ಹೋಗುವಾಗ ಹನ್ನೆರಡು ಹದಿಮೂರು ಸಾವಿರ ರೂಪಾಯಿ ಬೆಲೆಯ ಆಭರಣಗಳನ್ನು ತೆಗೆದುಕೊಂಡು ಹೋದೆ. ಈ ಒಡವೆಗಳಲ್ಲಿ ವಜ್ರದ ಉಂಗುರಗಳೇ ಹೆಚ್ಚಾಗಿದ್ದುವು. ವಜ್ರಗಳನ್ನು ಗುಲಾಬಿ ಹೂವಿನ ಆಕಾರದಲ್ಲಿ ಬಿಗಿಯಲಾಗಿತ್ತು. ರಾಜ ಮೂರು ಜನ ಸರದಾರರು ಮತ್ತು ನನ್ನ ಸಹೋದರನೊಡನೆ ಪೂರ್ವದೇಶದ ಜನ ಕುಳಿತುಕೊಳ್ಳುವ ರೀತಿಯಲ್ಲಿ ಕತ್ತರಿಕಾಲು ಹಾಕಿಕೊಂಡು ಕುಳಿತಿದ್ದ. ಅವನ ಮುಂದೆ ಐದು ದೊಡ್ಡ ತಟ್ಟೆಗಳಲ್ಲಿ ಬಣ್ಣಬಣ್ಣದ ಅನ್ನ ತುಂಬಿ ಇಟ್ಟಿದ್ದರು. ಕುಡಿಯಲು ಸ್ಪಾನಿಷ್ ವೈನು ಮತ್ತು ಬ್ರಾಂದಿಗಳನ್ನೂ ಶರಬತ್ತುಗಳನ್ನೂ ಒದಗಿಸಿದ್ದರು. ನಾನು ರಾಜನಿಗೆ ಒಂದು ವಜ್ರದ ಉಂಗುರವನ್ನೂ ವಜ್ರದ ಚಿಕ್ಕ ಬಳೆಯನ್ನೂ ಒಪ್ಪಿಸಿದೆ. ಅನಂತರ ಆತ ನನ್ನನ್ನು ಕುಳಿತುಕೊಳ್ಳುವಂತೆ ತಿಳಿಸಿ, ಕುಡಿಯಲು ಒಂದು ಲೋಟ ಬ್ರಾಂದಿ ಕೊಡುವಂತೆ ಹೇಳಿದ. ನಾನು ಬ್ರಾಂದಿ ಕುಡಿಯುವುದಿಲ್ಲವೆಂದು ಹೇಳಿದಾಗ ಆತ ಸ್ಪಾನಿಷ್ ವೈನು ಕೊಡಿಸಿದ.

ನಾನು ತಂದಿದ್ದ ಒಡವೆಗಳನ್ನು ನೋಡುವ ಕುತೂಹಲದಿಂದಲೊ ಏನೊ ರಾಜ ಭೋಜನವನ್ನು ಜಾಗ್ರತೆ ಮುಗಿಸಿ, ಒಂದು ತರಹ ಆರಾಮದ ಕುರ್ಚಿಯಲ್ಲಿ ಕುಳಿತುಕೊಂಡ. ಕೈಕಾಲುಗಳಿಗೆ ಏನನ್ನೂ ಹಾಕಿಕೊಂಡಿರಲಿಲ್ಲ. ಸೊಂಟದಿಂದ ಕೆಳಕ್ಕೆ ಒಂದು ಬಟ್ಟೆ ಸುತ್ತಿಕೊಂಡಿದ್ದ. ಹೆಗಲ ಮೇಲೆ ಒಂದು ವಸ್ತ್ರ ಎಸೆದುಕೊಂಡಿದ್ದ. ತಲೆಗೆ ಮೂರು ಮೂಲೆಯ ಚೌಕವನ್ನು ಕಟ್ಟಿಕೊಂಡಿದ್ದ. ಇಷ್ಟೇ ಅವನ ಉಡುಪು. ಅವನು ತನ್ನ ಉದ್ದನೆಯ ಕೂದಲನ್ನು ತಲೆಯ ಮೇಲೆ ಗಂಟುಹಾಕಿಕೊಂಡಿದ್ದ. ಕಾಲಿಗೆ ಹಾಕಿಕೊಳ್ಳಲು ಚಿನ್ನ ಮತ್ತು ಸಣ್ಣ ಮುತ್ತುಗಳಿಂದ ಅಲಂಕರಿಸಲ್ಪಟ್ಟ ಚರ್ಮದ ಪಟ್ಟಿಯ ಮೆಟ್ಟುಗಳನ್ನು ಆರಾಮುಕುರ್ಚಿಯ ಒಂದು ಪಕ್ಕದಲ್ಲಿ ಇಟ್ಟಿದ್ದರು. ಸೇವಕರಿಬ್ಬರು ಅವನ ಹಿಂದೆ ನಿಂತು ಐದಾರು ಅಡಿ ಉದ್ದದ ಹಿಡಿಯುಳ್ಳ ನವಿಲುಗರಿಯ ದೊಡ್ಡ ಬೀಸಣಿಗೆಗಳನ್ನು ಬೀಸುತ್ತಿದ್ದರು. ರಾಜನ ಬಲಗಡೆ ಕರಿಯ ಮುದುಕಿಯೊಬ್ಬಳು ಚಿನ್ನದ ಒರಳು ಮತ್ತು ಕುಟ್ಟಣಗಳನ್ನು ಕೈಯಲ್ಲಿ ಹಿಡಿದುಕೊಂಡು ಅದರಲ್ಲಿ ವೀಳೆಯ ದೆಲೆ, ಅಡಕೆ ಮತ್ತು ಮುತ್ತಿನ ಸುಣ್ಣ—ಇವುಗಳನ್ನೆಲ್ಲಾ ಸೇರಿಸಿ ಕುಟ್ಟಿ, ಅದನ್ನು ರಾಜನ ಬಾಯಲ್ಲಿ ಇಡುತ್ತಿದ್ದಳು, ಎಳೆಯ ಮಕ್ಕಳಿಗೆ ಬಾಯಲ್ಲಿ ತುತ್ತು ಇಡುವಂತೆ. ಮಕ್ಕಳು ತುತ್ತಿಗೆ ಬಾಯಿ ತೆರೆಯುವಂತೆ ರಾಜ ತನ್ನ ಬಾಯನ್ನು ತೆರೆಯುತ್ತಿದ್ದ. ಆತನ ಬಾಯಿ ಹಲ್ಲಿಲ್ಲದ ಬಚ್ಚಬಾಯಿ. ಎಲೆ ಅಡಿಕೆ ಹಾಕಿ, ತಂಬಾಕು ಸೇದಿ, ಆತನ ಹಲ್ಲುಗಳೆಲ್ಲ ಉದುರಿಹೋಗಿದ್ದುವು.

ಗಳು ಬಂದಾಗ ಊರೆಲ್ಲಾ ಹಬ್ಬದೋಪಾದಿ ಸಂತೋಷದಲ್ಲಿರುತ್ತದೆ. ಬೀದಿಯಲ್ಲಿ ಹೆಂಗಸರೂ ಹುಡುಗಿಯರೂ ಒಂದೆರಡು ಪೈಂಟ್ ವೈನಿಗೋ ಅಥವಾ ಬೀರಿಗೋ ನಿಮ್ಮ ಮೇಲೆ ಪಣ ಕಟ್ಟುತ್ತಾರೆ. ಗೆಲ್ಲಲಿ ಸೋಲಲಿ, ಮರ್ಯಾದೆಗೋಸುಗ ಹೆಂಗಸರು ಪಣದ ಹಣ ಕೊಡುವುದಕ್ಕೆ ಯಾರೂ ಅವಕಾಶಕೊಡುವುದಿಲ್ಲ. ಇದರ ಜೊತೆಗೆ ಕೆಲವರನ್ನು ಕಂಡಾಗ ಅವರಿಗೆ ಶುಭಾಶಯ ಕೋರಿ ಕುಡಿಯಬೇಕಾಗುತ್ತದೆ. ಇವೆಲ್ಲಾ ಯುವಕರ ಜೇಬನ್ನು ಜಾಗ್ರತೆ ಖಾಲಿಮಾಡಿಬಿಡುತ್ತವೆ.

ನಾನು ಬಟೇವಿಯಾದಲ್ಲಿರುವಾಗ ಅಲ್ಲಿನ ಆಡಳಿತ ಮಂಡಳಿಯೊಡನೆ ಒಂದು ವ್ಯವಹಾರದಲ್ಲಿ ವಿನಾಕಾರಣ ಸಿಕ್ಕಿಕೊಂಡುಬಿಟ್ಟೆ. ಕೊನೆಗೆ ಅದರಿಂದ ಮುಕ್ತನಾಗಿ ಬಂದು ರಾಜನನ್ನು ನೋಡುವ ಮನಸ್ಸು ಮಾಡಿದೆ.

ಮೊಗಲ್ ಸಾಮ್ರಾಜ್ಯದ ಗಡಿಯನ್ನು ದಾಟಿದ ಮೇಲೆ ಪೂರ್ವದೇಶದ ಜನರು ಮಾತಾಡುವ ಭಾಷೆ ಯಾವುದೆಂದರೆ 'ಮಲೆ' (Malay) ಭಾಷೆ. ಇದು ಯೂರೋಪಿಯನರಿಗೆ ಲ್ಯಾಟಿನ್ ಭಾಷೆ ಇದ್ದಂತೆ. ನಾನು ೧೬೪೮ರಲ್ಲಿ ಇಂಡಿಯಾಕ್ಕೆ ಹೋದಾಗ ಪರದೇಶದ ಭಾಷೆಗಳಲ್ಲಿ ಬಹಳ ಚಾಲಾಕಾಗಿದ್ದ ನನ್ನ ಸಹೋದರನೊಬ್ಬನನ್ನು ಕರೆದುಕೊಂಡು ಹೋಗಿದ್ದೆ. ಅವನು ಐದಾರು ತಿಂಗಳುಗಳಲ್ಲಿ ಒಂದು ಭಾಷೆಯನ್ನು ಕಲಿತುಬಿಡುತ್ತಿದ್ದ. ಹೀಗಾಗಿ ಅವನಿಗೆ ಎಂಟು ಭಾಷೆಗಳು ಬರುತ್ತಿದ್ದುವು. ಅವನು ಬಹುಭಾಷಾ ಪ್ರವೀಣನಷ್ಟೇ ಅಲ್ಲದೆ, ಬಹಳ ಧೈರ್ಯಶಾಲಿಯೂ ಆಗಿದ್ದ. ಈ ಗುಣಗಳನ್ನು ಮೆಚ್ಚಿ ಬಟೇವಿಯಾದ ಕೌನ್ಸಿಲ್ ಅವನಿಗೆ ತನ್ನ ಸ್ವಂತ ಹಡಗು ಇಟ್ಟುಕೊಳ್ಳಲು ಅವಕಾಶಕೊಟ್ಟಿತ್ತು. ಹೀಗೆ ನನ್ನ ಸಹೋದರ ಹದಿನಾಲ್ಕು ಬಂದೂಕಗಳ ಹಡಗೊಂದನ್ನು ಪಡೆದು, ಅದರಲ್ಲಿ ಅನೇಕ ಸಮುದ್ರಯಾನಗಳನ್ನು ಮಾಡಿದ್ದ. ವ್ಯಾಪಾರಮಾಡಿ ಸಾಕಷ್ಟು ಹಣವನ್ನೂ ಸಂಪಾದಿಸಿದ್ದ. ನಾನು ಬಟೇವಿಯಾಕ್ಕೆ ಹೋದಾಗ ನನ್ನ ಸಹೋದರನು ಅಲ್ಲಿದ್ದ. ಅವನಿಗೆ ಮಲೆ ಭಾಷೆ ಬರುತ್ತಿದ್ದ ಕಾರಣ ಅವನನ್ನು ಕರೆದುಕೊಂಡು ನಾನು ಪಶ್ಚಿಮ ಜಾವಾದ ಸಣ್ಣ ಊರಾದ ಬಂಟಾಮಿಗೆ ಹೊರಟೆ.

ಬಂಟಾಂ ತಲುಪಿದಾಗ ಅಲ್ಲಿದ್ದ ಇಂಗ್ಲಿಷ್ ಪ್ರೆಸಿಡೆಂಟ್ ನಮ್ಮನ್ನು ಕರೆದು ವಿಧವಿಧವಾದ ಸತ್ಕಾರಗಳನ್ನು ಮಾಡಿದ. ಐವತ್ತು ಮಡಕೆ 'ಮಂಟುವಾ' (Mantua) ವೈನನ್ನು ನನ್ನ ಕಡೆಗೆ ಕೊಟ್ಟು, ಕುಡಿದು ಮಜಮಾಡಿ ಎಂದ. ಈ ವೈನನ್ನು ಸೀಸೆಗಳಲ್ಲಿ ಹಾಕಿದರೆ ಕೆಟ್ಟುಹೋಗುತ್ತದೆಯಂತೆ. ಈ ಕಾರಣ ಅದನ್ನು ಮಣ್ಣಿನ ಮಡಕೆಗಳಲ್ಲಿಯೇ ಹಾಕಿ ಇಡುತ್ತಾರೆ.

ಮಾರನೇ ದಿನ ಬೆಳಿಗ್ಗೆ ನನ್ನ ಸಹೋದರ ರಾಜನ ಅರಮನೆಗೆ ಹೋದ. ರಾಜನನ್ನು ನೋಡುವುದಕ್ಕೆ ಸರಿಯಾದ ಸಮಯ ಯಾವುದು ಎಂದು ತಿಳಿದುಕೊಂಡು ಬರಲು ನನ್ನ ಸಹೋದರ ಹೋದದ್ದು. ಆದರೆ ರಾಜನು ನನ್ನ ಸಹೋದರನನ್ನು ಕಂಡಕೂಡಲೇ ಹಿಂದಿನ ಗೆಳೆತನದ ಕಾರಣ ಅವನನ್ನು ಹೋಗಲು ಬಿಡದೆ, ನನ್ನನ್ನು ಕರೆದುಕೊಂಡು

ಬರಲು ಜನರನ್ನು ಕಳುಹಿಸಿದ. ನನಗೆ ಅನುಮಾನ, ಒಬ್ಬನೇ ಅರಮನೆಯನ್ನು ಪ್ರವೇಶಿಸಿ ರಾಜನನ್ನು ಕಾಣುವುದು ಸೂಕ್ತವಲ್ಲ ಎಂದು. ಏಕೆಂದರೆ, ಹಿಂದೆ ಒಂಟಿಯಾಗಿ ಹೋದ ಮೆಸ್ಯ ರೇನೋ(M Renaud) ಎಂಬ ಫ್ರೆಂಚನಿಗೆ ಅಚೀನ್ ದೊರೆ ಮೋಸಮಾಡಿದ ವಿಚಾರ ನನಗೆ ಗೊತ್ತಿತ್ತು. ಆದರೂ ಧೈರ್ಯಮಾಡಿ ರಾಜನನ್ನು ನೋಡಲು ಹೋದೆ. ಹೋಗುವಾಗ ಹನ್ನೆರಡು ಹದಿಮೂರು ಸಾವಿರ ರೂಪಾಯಿ ಬೆಲೆಯ ಆಭರಣಗಳನ್ನು ತೆಗೆದುಕೊಂಡು ಹೋದೆ. ಈ ಒಡವೆಗಳಲ್ಲಿ ವಜ್ರದ ಉಂಗುರಗಳೇ ಹೆಚ್ಚಾಗಿದ್ದುವು. ವಜ್ರಗಳನ್ನು ಗುಲಾಬಿ ಹೂವಿನ ಆಕಾರದಲ್ಲಿ ಬಿಗಿಯಲಾಗಿತ್ತು. ರಾಜ ಮೂರು ಜನ ಸರದಾರರು ಮತ್ತು ನನ್ನ ಸಹೋದರನೊಡನೆ ಪೂರ್ವದೇಶದ ಜನ ಕುಳಿತುಕೊಳ್ಳುವ ರೀತಿಯಲ್ಲಿ ಕತ್ತರಿಕಾಲು ಹಾಕಿಕೊಂಡು ಕುಳಿತಿದ್ದ. ಅವನ ಮುಂದೆ ಐದು ದೊಡ್ಡ ತಟ್ಟೆಗಳಲ್ಲಿ ಬಣ್ಣಬಣ್ಣದ ಅನ್ನ ತುಂಬಿ ಇಟ್ಟಿದ್ದರು. ಕುಡಿಯಲು ಸ್ಪಾನಿಷ್ ವೈನು ಮತ್ತು ಬ್ರಾಂದಿಗಳನ್ನೂ ಶರಬತ್ತುಗಳನ್ನೂ ಒದಗಿಸಿದ್ದರು. ನಾನು ರಾಜನಿಗೆ ಒಂದು ವಜ್ರದ ಉಂಗುರವನ್ನೂ ವಜ್ರದ ಚಿಕ್ಕ ಬಳೆಯನ್ನೂ ಒಪ್ಪಿಸಿದೆ. ಅನಂತರ ಆತ ನನ್ನನ್ನು ಕುಳಿತುಕೊಳ್ಳುವಂತೆ ತಿಳಿಸಿ, ಕುಡಿಯಲು ಒಂದು ಲೋಟ ಬ್ರಾಂದಿ ಕೊಡುವಂತೆ ಹೇಳಿದ. ನಾನು ಬ್ರಾಂದಿ ಕುಡಿಯುವುದಿಲ್ಲವೆಂದು ಹೇಳಿದಾಗ ಆತ ಸ್ಪಾನಿಷ್ ವೈನು ಕೊಡಿಸಿದ.

ನಾನು ತಂದಿದ್ದ ಒಡವೆಗಳನ್ನು ನೋಡುವ ಕುತೂಹಲದಿಂದಲೊ ಏನೊ ರಾಜ ಭೋಜನವನ್ನು ಜಾಗ್ರತೆ ಮುಗಿಸಿ, ಒಂದು ತರಹ ಆರಾಮದ ಕುರ್ಚಿಯಲ್ಲಿ ಕುಳಿತುಕೊಂಡ. ಕೈಕಾಲುಗಳಿಗೆ ಏನನ್ನೂ ಹಾಕಿಕೊಂಡಿರಲಿಲ್ಲ. ಸೊಂಟದಿಂದ ಕೆಳಕ್ಕೆ ಒಂದು ಬಟ್ಟೆ ಸುತ್ತಿಕೊಂಡಿದ್ದ. ಹೆಗಲ ಮೇಲೆ ಒಂದು ವಸ್ತ್ರ ಎಸೆದುಕೊಂಡಿದ್ದ. ತಲೆಗೆ ಮೂರು ಮೂಲೆಯ ಚೌಕವನ್ನು ಕಟ್ಟಿಕೊಂಡಿದ್ದ. ಇಷ್ಟೇ ಅವನ ಉಡುಪು. ಅವನು ತನ್ನ ಉದ್ದನೆಯ ಕೂದಲನ್ನು ತಲೆಯ ಮೇಲೆ ಗಂಟುಹಾಕಿಕೊಂಡಿದ್ದ. ಕಾಲಿಗೆ ಹಾಕಿಕೊಳ್ಳಲು ಚಿನ್ನ ಮತ್ತು ಸಣ್ಣ ಮುತ್ತುಗಳಿಂದ ಅಲಂಕರಿಸಲ್ಪಟ್ಟ ಚರ್ಮದ ಪಟ್ಟಿಯ ಮೆಟ್ಟುಗಳನ್ನು ಆರಾಮುಕುರ್ಚಿಯ ಒಂದು ಪಕ್ಕದಲ್ಲಿ ಇಟ್ಟಿದ್ದರು. ಸೇವಕರಿಬ್ಬರು ಅವನ ಹಿಂದೆ ನಿಂತು ಐದಾರು ಅಡಿ ಉದ್ದದ ಹಿಡಿಯುಳ್ಳ ನವಿಲುಗರಿಯ ದೊಡ್ಡ ಬೀಸಣಿಗೆಗಳನ್ನು ಬೀಸುತ್ತಿದ್ದರು. ರಾಜನ ಬಲಗಡೆ ಕರಿಯ ಮುದುಕಿಯೊಬ್ಬಳು ಚಿನ್ನದ ಒರಳು ಮತ್ತು ಕುಟ್ಟಣಗಳನ್ನು ಕೈಯಲ್ಲಿ ಹಿಡಿದುಕೊಂಡು ಅದರಲ್ಲಿ ವೀಳೆಯದೆಲೆ, ಅಡಕೆ ಮತ್ತು ಮುತ್ತಿನ ಸುಣ್ಣ—ಇವುಗಳನ್ನೆಲ್ಲಾ ಸೇರಿಸಿ ಕುಟ್ಟಿ, ಅದನ್ನು ರಾಜನ ಬಾಯಲ್ಲಿ ಇಡುತ್ತಿದ್ದಳು, ಎಳೆಯ ಮಕ್ಕಳಿಗೆ ಬಾಯಲ್ಲಿ ತುತ್ತು ಇಡುವಂತೆ. ಆ ಮಕ್ಕಳು ತುತ್ತಿಗೆ ಬಾಯಿ ತೆರೆಯುವಂತೆ ರಾಜ ತನ್ನ ಬಾಯನ್ನು ತೆರೆಯುತ್ತಿದ್ದ. ಆತನ ಬಾಯಿ ಹಲ್ಲಿಲ್ಲದ ಬಚ್ಚಬಾಯಿ. ಎಲೆ ಅಡಿಕೆ ಹಾಕಿ, ತಂಬಾಕು ಸೇದಿ, ಆತನ ಹಲ್ಲುಗಳೆಲ್ಲ ಉದುರಿಹೋಗಿದ್ದುವು.

ರಾಜನ ಅರಮನೆ ಸಾಧಾರಣ ಕಟ್ಟಡ. ನಲವತ್ತು ಅಡಿ ಅಂತರದಲ್ಲಿ ನಿಲ್ಲಿಸಿದ ಬಣ್ಣ ಬಣ್ಣದ ಕಂಬಗಳು. ಮೇಲ್ಚಾವಣಿಗೆ ತೆಂಗಿನ ಗರಿ. ನೆಲಕ್ಕೆ ಯಾವುದೋ ಮರದ ತೊಗಟೆಯಿಂದ ಹೆಣೆದ ಚಾಪೆ. ಹತ್ತಿರದಲ್ಲಿ ನಾಲ್ಕು ಭಾರಿ ಕಂಬಗಳ ಮೇಲೆ ಹಾಕಿದ ಚಪ್ಪರವಿತ್ತು. ಅದರ ಕೆಳಗೆ ಹದಿನಾರು ಆನೆಗಳಿದ್ದುವು. ಇವು ರಾಜನ ಆನೆಗಳಲ್ಲಿ ಬಹಳ ಬಲಶಾಲಿಯಾದ ಆನೆಗಳು. ಆತನ ಅಂಗರಕ್ಷಣೆಯ ೨೦೦೦ ಜನರು ಅಲ್ಲಲ್ಲಿ ತಂಡತಂಡವಾಗಿ ಮರಗಳ ನೆರಳಿನಲ್ಲಿ ಕುಳಿತಿದ್ದರು. ಸಾವಿಗೆ ಹೆದರದೆ ಮತ್ತು ಸಮುದ್ರ ಹಾಗೂ ಭೂಮಿಯ ಮೇಲೆ ಅಂಜದೆ ಯುದ್ಧಮಾಡಬಲ್ಲ ಒಳ್ಳೆಯ ಸಿಪಾಯಿಗಳು ಇವರು.

ರಾಜನ ಅಂತಃಪುರ ಸಣ್ಣದಿರಬೇಕೆಂದು ಅನ್ನಿಸಿತು ನನಗೆ. ನಾನು ಕೊಟ್ಟ ಆಭರಣಗಳನ್ನು ನೋಡಿದ ಮೇಲೆ ರಾಜ ಅವನ್ನು ಅಂತಃಪುರದವರಿಗೆ ತೋರಿಸಿಕೊಂಡು ಬರಲು ಇಬ್ಬರು ಕರಿಯ ಮುದುಕಿಯರಿಗೆ ಕೊಟ್ಟ. ಆ ಮುದುಕಿಯರು ಬಹು ಸಾಧಾರಣವಾದ ಬಾಗಿಲಿನ ಮೂಲಕ ಹಸುವಿನ ಸಗಣಿ ಮತ್ತು ಮಣ್ಣು ಇವುಗಳನ್ನು ಬೆರಸಿ ಕಟ್ಟಿದ್ದ ತಟ್ಟಿಗೋಡೆಯ ಹಿಂದೆ ಇದ್ದ ಅಂತಃಪುರವನ್ನು ಪ್ರವೇಶಿಸಿದರು. ಆಭರಣಗಳನ್ನು ತೋರಿಸಿದ ಮೇಲೆ ಆ ಮುದುಕಿಯರು ಯಾವನ್ನೂ ಹಿಂದಿರುಗಿ ತರಲಿಲ್ಲ. ಆಗ ನಾನು ಮೊದಲು ಹೇಳಿದ ಬೆಲೆಯನ್ನೇ ಕೇಳಬೇಕೆಂದು ಮನಸ್ಸುಮಾಡಿದೆ. ಅದೇ ಬೆಲೆಯನ್ನು ರಾಜ ಕೊಟ್ಟ. ನನಗೆ ಸಾಕಷ್ಟು ಲಾಭ ಸಿಕ್ಕಿತು. ಷರಬತ್ತು ಕುಡಿದು ನಾನೂ ನನ್ನ ಸಹೋದರನೂ ನಮ್ಮ ಬಿಡಾರಕ್ಕೆ ಹಿಂದಿರುಗಿದೆವು.

ಮೂರನೇ ದಿನ ಸಂಜೆ ಮತ್ತೆ ಬರಬೇಕೆಂದು ರಾಜ ಹೇಳಿದ. ಅದರಂತೆ ಹೋದೆವು. ಆತನ ಬಳಿ ತುರ್ಕಿ ಮಾದರಿಯ ಒಂದು ಈಟಿ ಇತ್ತು. ಅದರ ಹಿಡಿಗೆ ಒಪ್ಪುವಂತಹ ವಜ್ರಗಳು ನಮ್ಮ ಬಳಿ ಇರಲಿಲ್ಲ. ನಮ್ಮೊಡನೆಯೇ ಆ ಈಟಿಯನ್ನು ತೆಗೆದುಕೊಂಡುಹೋಗಿ ಅದಕ್ಕೆ ತಕ್ಕ ವಜ್ರಗಳನ್ನು ಬಿಗಿಸಿ ವಾಪಸು ತಂದುಕೊಡ ಬೇಕೆಂದು ಹೇಳಿದ. ನಾವು ಈಟಿಯನ್ನು ತೆಗೆದುಕೊಂಡು ಬಟೇವಿಯಾಕ್ಕೆ ಹಿಂದಿರುಗಿದೆವು.

ಬಟೇವಿಯಾದಲ್ಲಿ ಇಪ್ಪತ್ತು ದಿವಸಗಳು ತಂಗಿದ್ದೆ. ಇಲ್ಲಿ ಜೂಜಾಟವಲ್ಲದೆ ಬೇರೆ ಹವ್ಯಾಸವಿಲ್ಲ. ಜೂಜಾಟದಲ್ಲಿ ಸಂಪಾದಿಸಿದ್ದನ್ನೆಲ್ಲಾ ಕುಡಿತಕ್ಕೆ ಹಾಕುತ್ತಾರೆ. ಆದರೆ ನನಗೆ ಇದು ಹಿಡಿಸಲಿಲ್ಲ. ಗಾಳಿಸೇವನೆಮಾಡಿಕೊಂಡು ಹೊರಗೆ ಅಡ್ಡಾಡಿಬರೋಣ ವೆಂದರೆ ಆ ಬಿಸಿಲಿನಲ್ಲಿ ತಲೆಹಾಕಲು ಸಾಧ್ಯವಿರಲಿಲ್ಲ. ಹೊರಗೆ ಸಂಜೆಹೊತ್ತು ಮಾತ್ರ ಹೋಗಲು ಸಾಧ್ಯ. ಅದೂ ಹೆಚ್ಚು ಹೊತ್ತು ಹೊರಗೆ ಹೋಗುವಂತಿಲ್ಲ. ಏಕೆಂದರೆ, ಸೂರ್ಯ ಮುಳುಗಿದ ಕೂಡಲೇ ಊರಿನ ಹೆಬ್ಬಾಗಿಲುಗಳನ್ನು ಹಾಕಿಬಿಡುತ್ತಾರೆ.

ಬಂಟಾಂ ರಾಜನು ಕೊಟ್ಟಿದ್ದ ಈಟಿಯ ಹಿಡಿಗೆ ತಕ್ಕ ವಜ್ರಗಳಿಗಾಗಿ ನಾನು ಬಟೇವಿಯಾದಲ್ಲಿ ಹುಡುಕಿದೆ. ಅವು ಸಿಕ್ಕಲಿಲ್ಲ. ನನ್ನ ಸಹೋದರನೊಡಗೂಡಿ ನಾನು

ಮತ್ತೆ ಬಂಟಾಂಗೆ ಹೋದೆ. ನಾವು ಇದ್ದಲ್ಲಿಗೆ ರಾಜ ಕಲ್ಲಂಗಡಿ, ಮಾವು ಮುಂತಾದ ಹಣ್ಣುಗಳನ್ನು ಕಳುಹಿಸಿದ. ಅವನ್ನು ತಿಂದಮೇಲೆ ನಾವು ರಾಜನನ್ನು ನೋಡಲು ಅರಮನೆಗೆ ಹೋದೆವು. ಅರಮನೆಯಲ್ಲಿ ಆತನನ್ನು ಕಂಡು ಆತನ ಊಟೆಯನ್ನು ಹಿಂದಿರು ಗಿಸಿದೆವು. ನಾನು ನನ್ನ ಬಳಿ ಇದ್ದ ಕೆಲವು ಆಭರಣಗಳನ್ನು ತೋರಿಸಿದೆ. ರಾಜ ಅವು ಗಳಿಗೆ ಆಸೆಪಟ್ಟು ಕೊಂಡುಕೊಂಡ. ಮೊದಲ ಸಲದಂತೆ ಈಗಲೂ ಕೈತುಂಬ ಲಾಭ ಸಿಕ್ಕಿತು.

ನಮ್ಮ ಬಿಡಾರಕ್ಕೆ ಹಿಂದಿರುಗಿದೆವೋ ಇಲ್ಲವೋ, ಇಂಗ್ಲಿಷ್ ಪ್ರೆಸಿಡೆಂಟನ ಕಡೆಯ ಮನುಷ್ಯ ಬಂದು ನಮ್ಮನ್ನು ಭೋಜನಕ್ಕೆ ಕರೆದ. ಆಗ ತಾನೆ ಇಂಗ್ಲೆಂಡಿನಿಂದ ಕಂಪೆನಿ ಲೆಕ್ಕದಲ್ಲಿ ಬಂದಿದ್ದ ಹೊಸ ಮದ್ಯಗಳನ್ನು ತನ್ನೊಡನೆ ಸೇವಿಸಲು ಬರಬೇಕೆಂದು ಅಧ್ಯಕ್ಷನು ಆಹ್ವಾನ ಕಳುಹಿಸಿದ್ದ. ನಾವು ಹೋಗಿ ಮಧ್ಯರಾತ್ರಿಯವರೆಗೆ ಅಧ್ಯಕ್ಷನೊಡನಿದ್ದು, ಕುಡಿದು ತಿಂದು ನಮ್ಮ ಬಿಡಾರಕ್ಕೆ ಹಿಂದಿರುಗಿದೆವು.

ಬಂಟಾಂನಲ್ಲಿ ನನ್ನ ಕೆಲಸ ಮುಗಿಸಿಕೊಂಡು ಬಟೇವಿಯಾಕ್ಕೆ ಹಿಂದಿರುಗಿದೆ. ಹೊರಡು ವಾಗ ಬಂಟಾಮಿನ ಇಂಗ್ಲಿಷ್ ಅಧ್ಯಕ್ಷ ಒಂದು ಪಿಪಾಯಿ ಬೀರನ್ನು ಕೊಟ್ಟುಕಳುಹಿಸಿದ. ಅದರೊಡನೆ ಬಟೇವಿಯಾಕ್ಕೆ ಹಿಂದಿರುಗಿದ ನಾನು ಅಲ್ಲಿಂದ ನನ್ನ ಸ್ವದೇಶಕ್ಕೆ ಹೊರಡುವ ಹಡಗಿಗಾಗಿ ತಿಂಗಳುಗಟ್ಲೆ ಕಾಯಬೇಕಾಯಿತು. ಈ ವೇಳೆಯನ್ನು ಹೇಗೆ ಕಳೆಯುವು ದೆಂದು ಆಲೋಚಿಸಿದ ನಾನು ಜಾವಾ ರಾಜನನ್ನು ನೋಡಲು ಅಲ್ಲಿಗೆ ಹೋಗುವ ಮನಸ್ಸು ಮಾಡಿದೆ. ಜಾವಾ ರಾಜ ಬಟೇವಿಯಾದಿಂದ ಮೂವತ್ತು ಹರಿದಾರಿ ದೂರ ದಲ್ಲಿರುವ ಒಂದು ಊರಿನಲ್ಲಿ ಇದ್ದ. ಸಮುದ್ರವನ್ನು ದಾಟಿ ಅಲ್ಲಿಗೆ ಹೋಗಬೇಕು. ಆದರೆ ಅಲ್ಲಿಗೆ ಹೋಗಕೂಡದೆಂದು ಇಂಡಿಯಾದ ಕೌನ್ಸಿಲರುಗಳ ಪೈಕಿ ಒಬ್ಬನು ಹೇಳಿದ. ಡಚ್ಚರಿಗೂ ಆ ರಾಜನಿಗೂ ಇದ್ದ ವೈಷಮ್ಯವೇ ಇದಕ್ಕೆ ಕಾರಣವಾಗಿತ್ತು.

ಜಾವಾ ರಾಜನನ್ನು ನೋಡಲು ಅವಕಾಶ ಸಿಕ್ಕದ ಕಾರಣ ನಾನು ಸುಮಾತ್ರಾಕ್ಕೆ ಹೋಗಬೇಕೆಂದು ನಿರ್ಧರಿಸಿದೆ. ಇನ್ನೇನು ಹೊರಡಬೇಕು, ಆಗ ಬಂಟಾಂನಿಂದ ಒಂದು ಸಣ್ಣ ಹಡಗು ಬಂದಿತು. ಅದರಲ್ಲಿ ಹಿಂದೆ ಉಳಿದಿದ್ದ ನನ್ನ ಸಹೋದರ ಬಂದ. ಆತನಿಗೆ ರಕ್ತಭೇದಿ. ಬಂಟಾಂ ರಾಜನೊಡನೆ ಕುಡಿದು ತಿಂದ ಕಾರಣವಾಗಿ ಇದು ಕಾಣಿಸಿ ಕೊಂಡಿತ್ತು. ಅವನ ಸ್ಥಿತಿಯನ್ನು ನೋಡಿದ ನಾನು ಸುಮಾತ್ರಾಕ್ಕೆ ಹೋಗುವುದನ್ನು ನಿಲ್ಲಿಸಿದೆ. ಏನೆಲ್ಲಾ ಔಷಧೋಪಚಾರಗಳನ್ನು ನಡೆಸಿದರೂ ನನ್ನ ಸಹೋದರ ಮೂವತ್ತು ದಿನಗಳಲ್ಲಿ ಕಾಲವಾಗಿಬಿಟ್ಟ. ಸತ್ತವರನ್ನು ಹೂಳುವುದಕ್ಕೆ ಹೆಜ್ಜೆ ಹೆಜ್ಜೆಗೂ ಈ ದೇಶದಲ್ಲಿ ಹಣ ಕೊಡಬೇಕು. ಸತ್ತವರ ವಾರಸುದಾರರು ಅವರ ಹಣವನ್ನು ವೆಚ್ಚಮಾಡಲೆಂದು ಡಚ್ಚರು ಮಾಡಿರುವ ಉಪಾಯ ಇದು. ಶವಸಂಸ್ಕಾರ ಮಾಡಿ ಮುಗಿಸುವ ಹೊತ್ತಿಗೆ ೧೨೩೩ ಲೀವ್ರ್‌ಗಳಷ್ಟು ಹಣ (ಆಗಿನ ಸುಮಾರು ೯೨ ಪೌಂಡುಗಳು) ಖರ್ಚಾಯಿತು. ಇಷ್ಟು ಹಣ ಖರ್ಚುಮಾಡಿದ ಮೇಲೆ ನನಗನ್ನಿಸಿತು, ಸತ್ತರೂ ಇಂಥ ದೇಶದಲ್ಲಿ ಸಾಯ

ಬಾರದು ಎಂದು. ಸಧ್ಯ, ನಾನು ಅನ್ನಪಾನಗಳ ಬಗ್ಗೆ ವಹಿಸಿದ್ದ ಎಚ್ಚರಿಕೆಯಿಂದಾಗಿ ನನಗೆ ಯಾವ ಕಾಯಿಲೆ–ಕಸಾಲೆಗಳೂ ಬರಲಿಲ್ಲ. ಏನೇ ಕಷ್ಟ–ನಷ್ಟಗಳು ಒದಗಿದರೂ ನಾನು ಸ್ಥಿತಪ್ರಜ್ಞನಾಗಿದ್ದುದೇ ನನ್ನ ಆರೋಗ್ಯಕ್ಕೆ ಮುಖ್ಯ ಕಾರಣ. ನನ್ನ ವ್ಯಾಪಾರ ದಲ್ಲಿ ಅನೇಕ ಸಲ ಭಾರಿ ಲಾಭವೂ, ಅನೇಕ ಸಲ ಭಾರಿ ನಷ್ಟವೂ ಆಗುತ್ತಿದ್ದುವು. ಆದರೆ ಇವೆಲ್ಲ ದೇವರ ಇಚ್ಛೆ ಎಂದುಕೊಂಡು ಸಮಾಧಾನ ತಂದುಕೊಂಡೆ. ಒಳ್ಳೆಯದಾಗಲಿ, ಕೆಟ್ಟುದಾಗಲಿ, ಆದದ್ದೆಲ್ಲಾ ದೇವರ ಕೃಪೆಯೇ ಎಂದು ಸಮಾಧಾನ ತಂದುಕೊಳ್ಳಬೇಕು.

ನಾನು ಜಾವಾ ಮತ್ತು ಸುಮಾತ್ರಾಗಳಿಗೆ ಹೋದೆ. ಅಲ್ಲಿ ನನ್ನ ರತ್ನಪಡಿ ವ್ಯಾಪಾರ ಮಾಡಬೇಕೆಂದು ಹಾಕಿಕೊಂಡ ಯೋಜನೆ ಕೈಗೂಡದೆಹೋದ್ದರಿಂದ ನನ್ನ ಸರಕುಗಳ ನ್ನೆಲ್ಲಾ ಸಿಕ್ಕಿದಷ್ಟು ಲಾಭಕ್ಕೆ ಮಾರಿಬಿಟ್ಟೆ. ಈ ಹಣದಲ್ಲಿ ಸ್ವಲ್ಪ ಭಾಗವನ್ನು 'ರೆಕೆನಿಂಗ್' ಗಳನ್ನು ಕೊಂಡುಕೊಳ್ಳುವುದರಲ್ಲಿ ವಿನಿಯೋಗಿಸಿದೆ. ಡಚ್ ಕಂಪೆನಿ ತನ್ನ ನೌಕರರುಗಳಿಗೆ ಅವರ ಸಂಬಳದ ಪೂರ್ತಾ ಹಣವನ್ನು ಕೊಡುವುದಿಲ್ಲ. ಸ್ವಲ್ಪ ಭಾಗವನ್ನು ಹಿಡಿದು ಕೊಂಡು ಅದನ್ನು ಹಾಲೆಂಡಿಗೆ ಹಿಂದಿರುಗುವಾಗ ಕೊಡುತ್ತಾರೆ. ಹೀಗೆ ಹಿಡಿದುಕೊಂಡ ಹಣಕ್ಕೆ 'ರೆಕೆನಿಂಗ್' ಎಂಬ ಲೆಕ್ಕದಪಟ್ಟಿಗಳನ್ನು ಕೊಡುತ್ತಾರೆ. ಈ ಲೆಕ್ಕದಪಟ್ಟಿ ಗಳನ್ನು ಕಂಪೆನಿಯ ನೌಕರರು ಬಟೇವಿಯಾದಲ್ಲಿಯೇ ಕಡಿಮೆ ಬೆಲೆಗೆ ಮಾರಿ ಅಲ್ಲಿಯೇ ಹಣಪಡೆಯುತ್ತಾರೆ. ಕೆಲವರು ಈ ಲೆಕ್ಕದಪಟ್ಟಿಗಳನ್ನು ಶೇಕಡ ಇಪ್ಪತ್ತು ಮೂವತ್ತು, ಕೆಲವು ವೇಳೆ ಐವತ್ತು ರಿಯಾಯಿತಿ ದರದಲ್ಲಿ ಕೊಂಡುಕೊಂಡು ಇಟ್ಟುಕೊಂಡಿದ್ದು, ಆಮೇಲೆ ಹಾಲೆಂಡಿಗೆ ಹಿಂದಿರುಗಿದಾಗ ಡಚ್ ಕಂಪೆನಿಗೆ ಕೊಟ್ಟು, ಪೂರ್ತಾ ಹಣ ಪಡೆ ಯುತ್ತಾರೆ. ನಾನೂ ಈ ವ್ಯಾಪಾರ ಮಾಡಿದೆ. ೧೭,೫೦೦ 'ಗಿಲ್ಡರ್'ಗಳಷ್ಟು[1] ಬೆಲೆಯ ಲೆಕ್ಕದಪಟ್ಟಿಗಳನ್ನು ಕೊಂಡುಕೊಂಡೆ. ಇನ್ನೂ ಹೆಚ್ಚು ಮೊತ್ತದ ಪಟ್ಟಿಗಳನ್ನು ಕೊಂಡುಕೊಳ್ಳುವುದಕ್ಕೆ ಡಚ್ ಕಂಪೆನಿಯ ಕೌನ್ಸಿಲರುಗಳು ಅವಕಾಶ ಕೊಡಲಿಲ್ಲ.

ಇಷ್ಟು ಮಾಡಿ, ಡಚ್ ಕಂಪೆನಿಯ ಕಡೆಯಿಂದ ಹೊರಟ ನೌಕಾಪಡೆಯಲ್ಲಿ ನಾನು ಹಾಲೆಂಡಿಗೆ ಹೊರಟೆ. ಹಾಲೆಂಡಿಗೆ ಹಡಗುಗಳು ಹೊರಡುವ ಮುನ್ನ ಕಂಪೆನಿಯ ಜನರಲ್ ಒಂದು ಸಂತೋಷಕೂಟವನ್ನು ಏರ್ಪಡಿಸಿ ಸುಖಪ್ರಯಾಣ ಕೋರುವುದು ಇಲ್ಲಿಯ ಪದ್ಧತಿ. ಅದರಂತೆ ಹಡಗಿನ ಮುಖ್ಯ ಅಧಿಕಾರಿಗಳ ಜೊತೆಗೆ ನನ್ನನ್ನೂ ಸಂತೋಷಕೂಟಕ್ಕೆ ಆಹ್ವಾನಿಸಿದ್ದರು. ಮಧ್ಯಾಹ್ನ ಎರಡು ಗಂಟೆಗೆ ಆರಂಭವಾದ ಸಂತೋಷಕೂಟ ಏಳೆಂಟು ಗಂಟೆಗಳ ಕಾಲ ಸಾಗಿತು. ಸುಮಾರು ಅರವತ್ತು ಜನ ಹೆಂಗಸರೂ ಗಂಡಸರೂ ಇದ್ದರು. ಜನರಲ್ ನನ್ನ ಹೆಸರು ಹೇಳಿ ಸುಖಪ್ರಯಾಣ ಕೋರಿದ.

ಮಾರನೆಯ ದಿನ ನಾನು ನೌಕಾಪಡೆಯ ವೈಸ್ ಅಡ್ಮಿರಲ್ ಹೊರಟ ಹಡಗಿನಲ್ಲಿ

---

[1]ಆಗ ಒಂದು ಗಿಲ್ಡರಿಗೆ ೧ ಷಿಲ್ಲಿಂಗ್ ೯ ೧/೨ ಪೆನ್ನಿ ಬೆಲೆ.

ನನ್ನ ಮೊಟ್ಟಮೊದಲ ಸಮುದ್ರಯಾನ ಆರಂಭಿಸಿದೆ. ಹಡಗು ಹೊರಡುವುದಕ್ಕೆ ಮುನ್ನ ಮೇಲೆ ಹೇಳಿದ ಜನರಲನ ಕಡೆಯ ಮನುಷ್ಯನೊಬ್ಬ ಬಂದು, ಜನರಲನ ಹೆಂಡತಿ ಕಳುಹಿಸಿದಳೆಂದು ಹೇಳಿ ಒಂದು ಪಿಪಾಯಿ ರ್ಹೈನ್ ವೈನನ್ನೂ, ಕೆಡದಂತೆ ಮಾಡಿದ್ದ ಸೌತೇಕಾಯಿ, ಮಾವಿನಹಣ್ಣು, ನಿಂಬೆ, ಎರಳೆ ಮುಂತಾದ ಹಣ್ಣುಗಳನ್ನೂ, ಉಪ್ಪಿನ ಕಾಯಿಗಳ ಜಾಡಿಗಳನ್ನೂ ತಂದುಕೊಟ್ಟ. ಕುಸುಮಿದ ಮೊಟ್ಟೆಗಳನ್ನೂ ಸಿಪ್ಪೆಸಮೇತ ತಂದಿದ್ದ. ಸಿಪ್ಪೆ ತೆಗೆದರೆ ಕುಸುಮಿದ ಮೊಟ್ಟೆಗಳು ಸಮುದ್ರಯಾನದ ವೇಳೆ ಉಪ್ಪುಪ್ಪಾಗಿ ಬಿಡುತ್ತವೆ. ಜನರಲನ ಹೆಂಡತಿ ಇಷ್ಟೆಲ್ಲಾ ಮಾಡುವುದಕ್ಕೆ, ನಾನು ಆಕೆಯ ಮಗಳಿಗೆ ಕೆಲವು ದಿನಗಳ ಹಿಂದೆ ಕೊಟ್ಟಿದ್ದ ಒಂದು ಬಹುಮಾನವೇ ಕಾರಣವಾಗಿತ್ತು.

ಸಮುದ್ರಯಾನ ಆರಂಭವಾಯಿತು. ನಲವತ್ತೈದು ದಿನಗಳ ಪ್ರಯಾಣ ನಮ್ಮನ್ನು ಕೇಪ್-ಆಪ್-ಗುಡ್‌ಹೋಪ್ ಭೂಶಿರಕ್ಕೆ ಕರೆದುತಂದಿತು. ಇಲ್ಲಿ ಲಂಗರುಹಾಕಿದ್ದ ವೇಳೆ 'ಕಾಫೆರ್' ಅಥವಾ 'ಹಾಟ್ಟೆಂಟಾಟ್ಸ್' ಎಂದು ಕರೆಯಲ್ಪಡುವ ಅತಿ ಕುರೂಪಿ ಗಳಾದ ಇಲ್ಲಿಯ ನಿವಾಸಿಗಳನ್ನು[1] ನೋಡುವ ಮತ್ತು ಅವರೊಡನೆ ವ್ಯವಹರಿಸುವ ಅವಕಾಶ ಸಿಕ್ಕಿತು.

ಇಲ್ಲಿಂದ ಹೊರಟ ಹಡಗು ಸೆಂಟ್ ಹೆಲಿನಾ ದ್ವೀಪಕ್ಕೆ ಹೋಯಿತು. ಅಲ್ಲಿ ಹಡಗು ಲಂಗರು ಹಾಕಿದ ಕೂಡಲೇ ಹಡಗಿನ ವೈಸ್ ಆಡ್ಮಿರಲ್ ಹೇಳಿದ "ನಾವಿಲ್ಲಿ ೨೨ ದಿನಗಳು ತಂಗುತ್ತೇವೆ. ಇಷ್ಟವಿದ್ದವರು ಹಡಗಿನಿಂದ ಇಳಿದು ೧೧ ದಿನಗಳ ಕಾಲ ನಿಮ್ಮ ಮನ ಬಂದಂತೆ ಇದ್ದು, ಹಡಗಿಗೆ ಹಿಂದಿರುಗಬಹುದು" ಎಂದು. ಹೀಗೆ ಹೊರಟ ಹಡಗಿನವರು ಭೂಮಿಯ ಮೇಲೆ ಬೆಟ್ಟಗುಡ್ಡಗಳಲ್ಲಿ ಅಲೆದಾಡುವುದು, ಬೇಟೆ ಆಡುವುದು ಮುಂತಾದ ಹವ್ಯಾಸಗಳಲ್ಲಿ ಕಾಲಕಳೆದರು.

ಇಪ್ಪತ್ತೊಂದು ದಿವಸಗಳು ಸೆಂಟ್ ಹೆಲಿನಾದಲ್ಲಿ ತಂಗಿ, ಹಾಲೆಂಡಿಗೆ ನಮ್ಮ ಯಾನ ವನ್ನು ಮುಂದುವರಿಸಿದೆವು. ಅನೇಕ ದಿನಗಳ ಪ್ರಯಾಣದ ಅನಂತರ ನಮ್ಮ ನೌಕಾಪಡೆ ಹಾಲೆಂಡ್ ಮುಟ್ಟಿತು. ನಮ್ಮ ಪಡೆಯಲ್ಲಿ ಹನ್ನೊಂದು ಹಡಗುಗಳಿದ್ದುವು, ಅಷ್ಟೆ. ತೀರದ ಕಡೆಯಿಂದ ಹಡಗುಗಳು ಬಂದು, ನಮ್ಮನ್ನು ಎದುರುಗೊಂಡು ಕುಶಲವನ್ನು ವಿಚಾರಿಸಿಕೊಂಡವು. ನಮ್ಮನ್ನು ಎದುರುಗೊಳ್ಳಲು ಬಂದ ಪ್ರತಿಯೊಂದು ಹಡಗೂ ನಾವಿದ್ದ ಪ್ರತಿ ಹಡಗಿಗೂ ಬೀರಿನ ಪಿಪಾಯಿ, ಸುಟ್ಟಮಾಂಸ, ಬೆಣ್ಣೆ ಕೆನೆ, ಬಿಳಿಯ ಬಣ್ಣದ ಒಳ್ಳೆಯ ಬಿಸ್ಕತ್ತುಗಳು, ರ್ಹೈನ್, ಫ್ರೆಂಚ್ ಮತ್ತು ಸ್ಪಾನಿಷ್ ವೈನು—ಇವುಗಳನ್ನು ಕಳುಹಿಸಿಕೊಟ್ಟಿತು. ನಮ್ಮ ಹಡಗಿಗೆ ಇವೆಲ್ಲಾ ಬಂದಕೂಡಲೇ ಹಡಗಿನಲ್ಲಿದ್ದ ಸಿಪಾಯಿ ಗಳೂ ನಾವಿಕರೂ ಬೀರಿನ ನಾಲ್ಕಾರು ಪಿಪಾಯಿಗಳನ್ನು ಮುಖ್ಯ ಧ್ವಜಸ್ತಂಭದ ಬಳಿ ಇಟ್ಟು, ಗುಂಡೇಟಿನಿಂದ ಅವನ್ನು ತೂತುಮಾಡಿ, ಇಷ್ಟಬಂದಷ್ಟು ಕುಡಿಯಲಾರಂಭಿಸಿ

---

[1] ಆಫ್ರಿಕದ ಕೇಪ್ ಪ್ರಾಂತದ ನೀಗ್ರೋ ಜನ.

ದರು. ಹಾಗೆಯೇ ತಿನ್ನುವುದಕ್ಕೂ ಯಾವ ಅಡ್ಡಿ ಆತಂಕಗಳಿರಲಿಲ್ಲ. ಇಡೀ ದಿನವೆಲ್ಲ ಕುಡಿದು ತಿಂದು ಮಜಾಮಾಡಿದರು.

ಮಾರನೆಯ ದಿನ ನೌಕಾಪಡೆಯ ಅಡ್ಮಿರಲ್ ಮೂರು ಗುಂಡು ಹಾರಿಸಿ, ಹಡಗಿನ ಅಧಿಕಾರಿಗಳೆಲ್ಲ ಸಮಾಲೋಚನಾಸಭೆಗೆ ಬರಬೇಕೆಂದು ಸೂಚನೆಮಾಡಿದ. ಸಮುದ್ರ ಯಾನದ ವೇಳೆ ಆದ ದುರ್ವರ್ತನೆ ಹಾಗೂ ತಪ್ಪು-ನೆಪ್ಪುಗಳ ವರದಿಗಳನ್ನೆಲ್ಲಾ ಈ ಆಲೋಚನಾಸಭೆ ಪರಿಶೀಲಿಸುವುದು. ಹಾಗೆ ಪರಿಶೀಲಿಸಿ ಶಿಕ್ಷೆ ವಿಧಿಸುವುದು. ಹಿಂದೆ ಶಿಕ್ಷೆಗೊಳಪಟ್ಟವರನ್ನು ಹಾಲೆಂಡಿಗೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿಗೆ ಹೋದವರನ್ನು ಅವರ ಸ್ನೇಹಿತರು ಜಾಮಿನಿನ ಮೇಲೆ ಬಿಡಿಸಿಕೊಂಡು ಹೇಗೋ ಶಿಕ್ಷೆ ಯನ್ನು ತಪ್ಪಿಸುತ್ತಿದ್ದರು. ಆದರೆ ಈಗ ಕ್ಷಮೆಃಯೆಂಬುದೇ ಇಲ್ಲ. ಈ ಕಾರಣ ಈ ಹಡಗಿನಲ್ಲಿ ಹಿಂದೆ ಇದ್ದಂತಹ ದಂಗೆ ಹಾಗೂ ದುಂಡಾವರ್ತನೆಗಳಿರಲಿಲ್ಲ. ನಾನು ಬಂದ ಹಡಗಿನಲ್ಲಿ ಅಧಿಕಾರಿಗಳನ್ನು ತಿವಿದರೆಂಬ ಕಾರಣದ ಮೇಲೆ ಇಬ್ಬರನ್ನು ನೇಣುಹಾಕ ಲಾಯಿತು. ಇನ್ನೂ ಅನೇಕರನ್ನು ಕೊರಡಿನ ಶಿಕ್ಷೆಗೂ ಛಡೀ ಏಟಿನ ಶಿಕ್ಷೆಗೂ ಗುರಿಪಡಿ ಸಲಾಯಿತು ; ಮತ್ತೆ ಕೆಲವರ ಸಂಬಳ-ಸಾರಿಗೆಗಳನ್ನು ಮುಟ್ಟುಗೋಲು ಹಾಕ ಲಾಯಿತು.

ಹಾಲೆಂಡ್ ತೀರವನ್ನು ಕಂಡಕೂಡಲೇ ನಮ್ಮ ಹಡಗಿನ ಮತ್ತು ಇತರ ಐದಾರು ಹಡಗಿನ ಸಿಪಾಯಿಗಳಿಗೆಲ್ಲಾ ಮತ್ತೆ ತಮ್ಮ ತಾಯ್ನಾಡನ್ನು ಕಂಡು ಅಪಾರ ಸಂತೋಷ ವುಂಟಾಯಿತು. ಆ ಸಂತೋಷಕ್ಕಾಗಿ ಅವರೆಲ್ಲಾ ದೊಡ್ಡ ದೊಡ್ಡ ಮೋಂಬತ್ತಿಗಳನ್ನು ಹಚ್ಚಿ ಹಡಗಿನ ಮೂತಿಯ ಮೇಲೂ ಹಿಂಭಾಗದ ಮೇಲೂ ಇಟ್ಟರು. ಗಾಳಿ ಬೀಸಿದರೂ ಆ ಮೋಂಬತ್ತಿಗಳು ಆರುತ್ತಿರಲಿಲ್ಲ. ಅಷ್ಟೊಂದು ದೀಪಗಳ ಬೆಳಕು ರಾತ್ರಿಯನ್ನು ಹಗಲಿನಂತೆ ಮಾಡಿದಾಗ ನೋಡಿದವರೆಲ್ಲ ಹಡಗಿಗೆ ಏನಾದರೂ ಅನಾಹುತ ಆಯಿತೋ ಎಂದು ಗಾಬರಿಗೊಂಡರು. ನಮ್ಮ ಹಡಗೊಂದರಲ್ಲೆ ೧೭೦೦ಕ್ಕೂ ಹೆಚ್ಚು ಮೋಂಬತ್ತಿಗಳನ್ನು ಹಚ್ಚಿಸಿದ್ದರೆಂದರೆ ಆ ಬೆಳಕು ಎಷ್ಟು ಎಂಬುದನ್ನು ಊಹಿಸಿಕೊಳ್ಳಿ.

ನಾವು ಹಾಲೆಂಡ್ ತೀರವನ್ನು ಕಂಡರೂ ಆ ಕೂಡಲೇ ಹಡಗಿನಿಂದ ಇಳಿಯಲು ಸಾಧ್ಯವಾಗಲಿಲ್ಲ. ಸಮುದ್ರಕ್ಕೆ ಬಂದು ಬೀಳುತ್ತಿದ್ದ ಮರಳು ಆಗಾಗ್ಗೆ ಸ್ಥಾನ ಬದಲಾಯಿಸುತ್ತಿತ್ತು. ಈ ಕಾರಣ ಲಂಗರುಹಾಕುವುದು ಕಷ್ಟವಾಗುತ್ತಿತ್ತು. ಏಳು ದಿನಗಳನ್ನು ಲಂಗರುಹಾಕುವ ಸನ್ನಾಹದಲ್ಲಿಯೇ ಕಳೆದೆವು. ಕೊನೆಗೆ ಲಂಗರು ಹಾಕಿದಾಗ ತೀರದಿಂದ ಐವತ್ತಕ್ಕೂ ಹೆಚ್ಚು ಹಡಗುಗಳು ನಮ್ಮ ಹಡಗುಗಳನ್ನು ಸಮೀಪಿಸಿದುವು. ಅವುಗಳಲ್ಲಿದ್ದವರು ಬಂದವರ ನೆಂಟರಿಷ್ಟರಿಗೂ ಸ್ನೇಹಿತರಿಗೂ ತಿಳಿಸಲು ಹಡಗಿನಲ್ಲಿ ಯಾರಾರು ಬಂದಿದ್ದಾರೆ ಎಂದು ಕೂಗಿ ಕೇಳಿ ತಿಳಿದುಕೊಂಡರು.

ಲಂಗರು ಹಾಕಿದ ಮಾರನೆಯ ದಿನ ಕಂಪೆನಿಯ ಇಬ್ಬರು ಸದಸ್ಯರು ನಮ್ಮ ಹಡಗುಗಳಿಗೆ ಬಂದು ಸ್ವಾಗತ ಕೋರಿ, ನಾವು ನಮ್ಮ ಸಾಮಾನುಗಳನ್ನೆಲ್ಲ ಕಟ್ಟಿ,

ಪೆಟ್ಟಿಗೆಗಳಿಗೆಲ್ಲ ಬೀಗಹಾಕಿ, ನಮ್ಮ ನಮ್ಮ ಬೀಗಮುದ್ರೆಗಳನ್ನು ಹಾಕಬೇಕೆಂದು ಹೇಳಿದರು. ಹೀಗೆ ಬೀಗಮುದ್ರೆಗಳಾದ ಸಾಮಾನುಗಳನ್ನು ಇಂಡಿಯಾ ಹೌಸಿನ ಹಜಾರಕ್ಕೆ ಸಾಗಿಸಿದರು. ಯಾವ ದಿವಸ ಬಂದು ನಮ್ಮ ಸಾಮಾನುಗಳನ್ನು ಗುರುತಿಸಿ ಪಡೆಯಬಹುದೆಂಬುದನ್ನೂ ಹೇಳಿದರು. ಸಾಮಾನುಗಳನ್ನು ಹಿಂದಿರುಗಿಸುವ ಮುನ್ನ ಅವುಗಳನ್ನು ಬಿಚ್ಚಿ ನೋಡುತ್ತಾರೆ, ಯಾವುದಾದರೂ ನಿಷೇಧ ವಸ್ತುಗಳು ಇವೆಯೇ ಎಂದು ತಿಳಿದುಕೊಳ್ಳಲು.

ಮೇಲೆ ಹೇಳಿದ ಇಬ್ಬರು ಸದಸ್ಯರು ಹಡಗಿನ ಅಟ್ಟದಲ್ಲಿ ಸಿಬ್ಬಂದಿಯವರನ್ನೆಲ್ಲಾ ಸೇರಿಸಿದರು. ತಮ್ಮ ಬಳಿ ಹಡಗಿನ ಕ್ಯಾಪ್ಟನನ್ನು ನಿಲ್ಲಿಸಿಕೊಂಡು ಎಲ್ಲರನ್ನೂ ಸಂಬೋಧಿಸಿ, "ನಾವು ನಮ್ಮ ಎಲ್ಲಾ ಡೈರೆಕ್ಟರುಗಳ ಪರವಾಗಿ ನಿಮ್ಮನ್ನು ಕೇಳುತ್ತೇವೆ, ಹಡಗಿನ ಕ್ಯಾಪ್ಟನರು ನಿಮ್ಮ ಬಗ್ಗೆ ಏನಾದರೂ ದುರ್ವರ್ತನೆಯಿಂದ ನಡೆದುಕೊಂಡಿರುವರೇ ಹೇಗೆ ತಿಳಿಸಿ" ಎಂಬುದಾಗಿ ಕೇಳಿದರು. ಹಡಗಿನ ಸಿಬ್ಬಂದಿಯವರಿಗೆ ದಡದಲ್ಲಿ ಕಾಣುತ್ತಿದ್ದ ತಂದೆತಾಯಿಗಳನ್ನೋ, ಅಣ್ಣತಮ್ಮಂದಿರನ್ನೋ, ಸ್ನೇಹಿತರನ್ನೋ ನೋಡಬೇಕೆಂಬ ಕುತೂಹಲ. ಅವರೆಲ್ಲ ಒಕ್ಕೊರಳಿನಲ್ಲಿ, "ಕ್ಯಾಪ್ಟನ್ ಒಳ್ಳೆಯವರು ; ಕಂಪೆನಿ ಹಾಗೂ ಅವರ ಸ್ವಂತ ಹಿತಗಳನ್ನು ನೋಡಿಕೊಳ್ಳುವುದರಲ್ಲಿ ನಿಸ್ಸೀಮರು ; ಅವರಿಂದ ನಮ್ಮ ಯಾನ ಇನ್ನಷ್ಟು ಸುಖಕರವಾಯಿತು" ಎಂದು ಕೂಗಿದರು. ಹೀಗೆ ಕೂಗಿ, ಇನ್ನೊಂದು ಮಾತಿಗೆ ಅವಕಾಶ ಕೊಡದೆ ಎಲ್ಲರೂ ದೋಣಿಗಳಿಗೆ ಹಾರಿ ತೀರದ ಕಡೆ ಓಡಿದರು. ತೀರದಲ್ಲಿ, ಮುತ್ತಿಡುವುದೇನು! ಅಪ್ಪಿಕೊಳುವುದೇನು!

ಎಲ್ಲರೂ ಉಟೋಪಚಾರಗಳನ್ನು ಒದಗಿಸುವ ಸಾರ್ವಜನಿಕ ಮಂದಿರಕ್ಕೆ ನುಗ್ಗಿದರು. ಬಹುತೇಕ ಸಿಪಾಯಿಗಳೂ ನಾವಿಕರೂ ಅಲ್ಲಿ ಸೇರಿ ಕುಡಿದು ತಿಂದು ಮೈಮರೆಯುತ್ತಾರೆ. ತಮಗೆ ಸಲ್ಲಬೇಕಾದ ಸಂಬಳ ಸಾರಿಗೆ ತೆಗೆದುಕೊಳ್ಳಲೋ ಅಥವಾ ತಮ್ಮ ಸಾಮಾನುಗಳನ್ನು ಪಡೆಯಲೋ ಬೇಕಾದ ಸಮಯ ಬಿಟ್ಟರೆ ಒಂದೆರಡು ತಿಂಗಳ ಕಾಲ ಆ ಮಂದಿರವನ್ನು ಬಿಟ್ಟು ಅಲ್ಲಾಡುವುದಿಲ್ಲ. ಈ ಧೀರ್ಘಕಾಲದ ವಿಷಯಲಂಪಟತನದಲ್ಲಿ ಕೆಲವರು ಹದಿನೈದು ಇಪ್ಪತ್ತು ವರ್ಷಗಳ ದುಡಿಮೆಯಿಂದ ಸಂಪಾದಿಸಿದ ಸಾವಿರಾರು ಏಕರ್ಸ್‌ಗಳನ್ನು ಪೋಲುಮಾಡಿಬಿಡುತ್ತಾರೆ. ನನಗೆ ಗೊತ್ತಿದ್ದ ಒಬ್ಬ ನಾವಿಕ ಗೆಳೆಯರೊಡನೆ ಕುಡಿಯುವಾಗ ೩೫೦ ಲೀವ್ರ್‌ಗಳಷ್ಟು ಬೆಲೆಬಾಳುವ ಗಾಜಿನ ಲೋಟವನ್ನು ಒಡೆದುಹಾಕಿದ. ಮಂದಿರಗಳ ಮಾಲೀಕರಿಗೇ ಈ ಹಣವೆಲ್ಲ ಹೋಗುತ್ತೆ ಎಂದು ಭಾವಿಸಬೇಡಿ. ಏಕೆಂದರೆ, ವಾರಾಂಗನೆಯರಿಗೂ ಇದರಲ್ಲಿ ಪಾಲುಂಟು.

ಈ ಹಿಂದೆ ಹೇಳಿದ ಕಂಪನಿಯ ಡೈರಕ್ಟರುಗಳು ನನ್ನನ್ನು ಕೇಳಿದರು, "ಹಡಗಿನ ಅಧಿಕಾರಿಗಳ ಬಗ್ಗೆ ಏನಾದರೂ ದೂರು ಹೇಳುವುದಿದೆಯೆ?" ಎಂದು. ನಾನು "ದೂರು ಯಾವುದೂ ಇಲ್ಲ ! ಅದರ ಬದಲು ಅವರು ನನ್ನನ್ನು ನೋಡಿಕೊಂಡ ಬಗ್ಗೆ ನನ್ನ ಕೃತಜ್ಞತೆಗಳನ್ನು ಹೇಳಬಯಸುತ್ತೇನೆ" ಎಂದು ತಿಳಿಸಿದೆ. ನನ್ನ ಪೆಟ್ಟಿಗೆಗಳ ಮೇಲೆ ನನ್ನ

ಮುದ್ರೆ ಒತ್ತಿ ಕಂಪನಿಯ ವಶಕ್ಕೆ ಕೊಟ್ಟು, ನಾಲ್ಕು ದಿನಗಳ ಅನಂತರ ಮಿಡೆಲ್‌ಬರ್ಗ್ ಎಂಬಲ್ಲಿರುವ ಕಂಪೆನಿಯ ಮನೆಯಲ್ಲಿ ಅವನ್ನು ಪಡೆಯಬಹುದೆಂದು ಅವರು ತಿಳಿಸಿದರು. ನಾನು ಹಾಗೆ ಮಾಡಿ ಭೂಮಾರ್ಗವಾಗಿ ಮಿಡೆಲ್‌ಬರ್ಗ್‌ಗೆ ಹೋದೆ. ಆ ವರ್ಷ ಕಂಪೆನಿಯ ವಾರ್ಷಿಕ ಸಭೆ ಅಲ್ಲಿ ಸೇರಲಿತ್ತು. ಡಚ್ ಕಂಪೆನಿಯ ಬಂಡವಾಳದಲ್ಲಿ ಅರ್ಧ ಅಮ್‌ಸ್ಟರ್‌ಡಾಮಿಗೂ, ಕಾಲು ಭಾಗ ಮಿಡೆಲ್‌ಬರ್ಗಿಗೂ, ಇನ್ನು ಕಾಲುಭಾಗ ರಾಟೆರ್‌ಡ್ಯಾಂ ಮುಂತಾದ ನಾಲ್ಕು ಊರುಗಳಿಗೂ ಸೇರುತ್ತದೆ. ಈ ಕಾರಣ ಕಂಪನಿಯ ಹದಿನಾರು ಡೈರೆಕ್ಟರುಗಳಲ್ಲಿ ಎಂಟು ಜನ ಅಮ್‌ಸ್ಟರ್‌ಡಾಮಿನಿಂದಲೂ, ನಾಲ್ಕು ಜನ ಮಿಡೆಲ್‌ಬರ್ಗ್‌ನಿಂದಲೂ, ಉಳಿದ ನಾಲ್ಕು ಜನ ಬೇರೆ ನಾಲ್ಕು ಊರುಗಳಿಂದಲೂ ಬರುತ್ತಾರೆ.

ನಾನು ಮಿಡೆಲ್‌ಬರ್ಗಿಗೆ ಹೋದ ನಾಲ್ಕನೆಯ ದಿನ ಇಂಡಿಯಾ ಹೌಸಿಗೆ ಹೋದೆ. ಮೇಲೆ ಹೇಳಿದ ಇಬ್ಬರು ಡೈರೆಕ್ಟರುಗಳು ಪ್ರಯಾಣಿಕರ ಸಾಮಾನು ಸರಂಜಾಮುಗಳನ್ನು ಅವರವರಿಗೆ ಕೊಡುವ ಕೆಲಸದಲ್ಲಿ ತೊಡಗಿದ್ದರು. ನನ್ನನ್ನು ಕಂಡ ಕೂಡಲೇ ಅವರು ನನ್ನ ಸಾಮಾನುಗಳು ಯಾವುವೆಂದು ಕೇಳಿದರು. ನನ್ನ ಸಾಮಾನುಗಳನ್ನು ಗುರುತಿಸಿದೆ. ಅವುಗಳ ಬೀಗ ತೆಗೆದು, ಒಳಗೆ ಯಾವುದಾದರೂ ನಿಷೇಧಿತ ವಸ್ತುಗಳು ಇವೆಯೇ ಎಂಬುದನ್ನು ನೋಡಿಕೊಳ್ಳಬಹುದೆಂದು ತಿಳಿಸಿದೆ. ನನ್ನ ಮಾತನ್ನು ನಂಬಿದ ಅವರು ಯಾವ ಶೋಧನೆಯನ್ನೂ ಮಾಡದೆ ನನ್ನ ಸಾಮಾನುಗಳನ್ನು ತೆಗೆದುಕೊಂಡುಹೋಗಬಹುದೆಂದು ಹೇಳಿದರು. ಆ ಇಬ್ಬರು ಡೈರೆಕ್ಟರುಗಳಲ್ಲಿ ಉತ್ತರ ಹಾಲೆಂಡಿನವನೊಬ್ಬ ಮತ್ತು ಜೀಲ್ಯಾಂಡಿನವನೊಬ್ಬ ಇದ್ದರು. ಎರಡನೆಯವ ಮೊದಲನೆಯವನಿಗಿಂತ ನಡೆನುಡಿಯಲ್ಲಿ ಗೌರವದಿಂದ ವರ್ತಿಸುತ್ತಿದ್ದ. ಇದರಿಂದ ನನಗೆ ಅನ್ನಿಸುತ್ತದೆ, ಉತ್ತರ ದಿಕ್ಕಿಗೆ ಹೋದಂತೆ ಜನರಲ್ಲಿ ಸೌಮ್ಯವರ್ತನೆ ಹಾಗೂ ನಂಬಿಕೆತನ ಕಡಿಮೆಯಾಗುತ್ತಾ ಹೋಗುತ್ತವೆ ಎಂದು. ಕಾರಣ, ಕಠಿಣ ಹವೆ ಜನರ ನಡೆನುಡಿಗಳನ್ನೂ ಕಠಿಣವಾಗಿ ಮಾಡುತ್ತವೆ ಎಂದು.

ನಾನು ಸಾಮಾನುಗಳನ್ನು ಪಡೆದ ಮಾರನೆಯ ದಿನ ಡೈರೆಕ್ಟರುಗಳು ಒಂದು ಭೋಜನಕೂಟ ಏರ್ಪಡಿಸಿದ್ದರು. ನನ್ನನ್ನೂ ಕರೆದಿದ್ದರು. ಈ ವೇಳೆಯಲ್ಲಿ ಕಂಪೆನಿಯ ಪ್ರತಿನಿಧಿಗಳು ಇಂಡಿಯಾದಲ್ಲಿ ಗುಟ್ಟಾಗಿ ನಡೆಸುವ ಸ್ವಂತ ವ್ಯಾಪಾರಗಳ ಮಾಹಿತಿಯನ್ನು ನನ್ನಿಂದ ವಿಚಾರಿಸಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನಪಟ್ಟರು. ಸ್ವಂತ ವ್ಯಾಪಾರ–ಸಾಪಾರ ನಡೆಸುವುದು ಸುಳ್ಳೇನಲ್ಲ. ಹಾಲೆಂಡಿನಿಂದ ಬರಿಗೈಯಲ್ಲಿ ಹೋದವರು ಹಿಂದಿರುಗುವಾಗ ಕೈತುಂಬ ದುಡ್ಡುಮಾಡಿಕೊಂಡು ಬರುತ್ತಾರೆ. ಒಂದು ಒಂದೂವರೆ ಲಕ್ಷ ಫ್ಲೋರಿನ್‌ಗಳು ಅವರಿಗೆ ಲೆಕ್ಕವೇ ಇಲ್ಲ. ಆರೇಳು ಲಕ್ಷ ಫ್ಲೋರಿನ್‌ಗಳಷ್ಟು ಹಣ ಸಂಪಾದಿಸುವ ಅನೇಕರನ್ನು ನಾನು ಕಂಡಿದ್ದೇನೆ. ಭೋಜನಕೂಟದ ವೇಳೆ ಕಂಪೆನಿಯ ಡೈರೆಕ್ಟರುಗಳೂ, ಸದಸ್ಯರುಗಳೂ, ಕಂಪೆನಿಯ ಪ್ರತಿನಿಧಿಗಳೂ ಪರ್ಷಿಯಾ ಮತ್ತು ಇಂಡಿಯಾದಲ್ಲಿ ಹೇಗೆ ನಡೆದುಕೊಳ್ಳುತ್ತಾರೆ ಎಂಬ ವಿಚಾರಗಳನ್ನು ನನ್ನಿಂದ ಕೇಳಿ

ತಿಳಿದುಕೊಂಡರು. ಅಲ್ಲದೆ, ನನ್ನ ಪ್ರವಾಸಗಳನ್ನು ಕುರಿತಾಗಿಯೂ ಹೇಳಬೇಕೆಂದು ಕೇಳಿದರು. ನಾನು ಹೆಚ್ಚಾಗಿ ನನ್ನ ಪ್ರವಾಸಗಳ ವಿಚಾರಗಳನ್ನು ಹೇಳಿ, ವ್ಯಾಪಾರಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ತೇಲಿಸಿಬಿಟ್ಟೆ.

ಇಷ್ಟೇ ನಾನು ೧೬೬೯ರಲ್ಲಿ ಇಂಡಿಯಾದಿಂದ ಮೊಟ್ಟಮೊದಲನೆಯ ಸಲ ಹಡಗಿನಲ್ಲಿ ಹಿಂದಿರುಗಿದ ವಿಚಾರವಾಗಿ ಹೇಳಬೇಕಾಗಿರುವುದು.

ನಾನು ನನ್ನ ಏಷ್ಯಾ ಪ್ರವಾಸಕ್ಕಾಗಿ ಹೋಗುವಾಗ ಅಥವಾ ಬರುವಾಗ ಯಾವಾಗಲೂ ಭೂಮಾರ್ಗವಾಗಿಯೇ ಪ್ರಯಾಣಮಾಡುತ್ತಿದ್ದುದು. ಭೂಮಾರ್ಗವಾಗಿ ಹೋಗಿ ಮೆಡಿಟರೇನಿರ್ಯ ಸಮುದ್ರದ ಮೇಲೆ ಮಾತ್ರ ಕೊಂಚ ದೂರ ಸಮುದ್ರ ಯಾನ ಮಾಡುತ್ತಿದ್ದೆ. ಮೊದಲ ಪ್ರವಾಸದಲ್ಲಿ ನಾನು ಪ್ಯಾರಿಸ್ಸಿನಿಂದ ಹೊರಟು, ಜರ್ಮನಿ, ಹಂಗೇರಿಗಳ ಮುಖಾಂತರ ಕಾನ್‌ಸ್ಟಾಂಟಿನೋಪಲಿಗೆ ಹೋದೆ. ನನ್ನ ೧೬೬೮ರ ಕೊನೆಯ ಪ್ರವಾಸದಲ್ಲಿಯೂ ಕಾನ್‌ಸ್ಟಾಂಟಿನೋಪಲ್ ಮೂಲಕವೇ ಹಿಂದಿರುಗಿದೆ. ಅಲ್ಲಿಂದ ಸ್ಮರ್ನಕ್ಕೆ ಬಂದು, ಲೆಗ್‌ಹಾರನ್ನಿಗೆ ಸಮುದ್ರಯಾನ ಮಾಡಿ, ಮತ್ತೆ ಭೂಮಾರ್ಗವಾಗಿ ಜಿನೋವಾಕ್ಕೆ ಬಂದು, ಟೂರಿನ್ ಮುಖಾಂತರ ಪ್ಯಾರಿಸ್ ನಗರವನ್ನು ತಲುಪಿದೆ. ಅಲ್ಲಿ ರಾಜನಿಗೆ ಬಹು ಚೆಂದದ ವಜ್ರಗಳನ್ನು ಒಪ್ಪಿಸಿದೆ. ನನ್ನ ವಜ್ರಗಳನ್ನು ನೋಡಿ ರಾಜ ಬಹಳ ಸಂತೋಷ ಪಟ್ಟ. ಫ್ರಾನ್ ರಾಜ ಏಷ್ಯಾದ ರಾಜರುಗಳನೆಲ್ಲಾ ಮೀರಿ ಸುತ್ತಾನೆಂದು ನಾನು ಸಾರಿ ಸಾರಿ ಹೇಳಿ, ಅವನಿಗೆ ಅಪಾರ ಸಂತೋಷವನ್ನುಂಟು ಮಾಡಿದೆ.

ನನ್ನ ಆರನೇ ಪ್ರವಾಸ ಮುಗಿಸಿ ಪ್ಯಾರಿಸಿಗೆ ಹಿಂದಿರುಗಿದ ತರುವಾಯ ನಲವತ್ತು ವರ್ಷಗಳ ದೀರ್ಘಕಾಲದ ಹಾಗೂ ದೂರ ದೇಶಗಳ ಪ್ರವಾಸದಲ್ಲಿ ಭೂಮಿಯ ಮೇಲೂ ಸಮುದ್ರದ ಮೇಲೂ ಏನೆಲ್ಲ ಕಷ್ಟಕಾರ್ಪಣ್ಯಗಳು ಒದಗಿದರು ಸಹ, ನನ್ನನ್ನು ಸುಖವಾಗಿ ಸಲಹಿದ ಆ ಪರಮಾತ್ಮನಿಗೆ ನನ್ನ ಅನಂತ ಪ್ರಣಾಮಗಳನ್ನು ಅರ್ಪಿಸಿದ್ದು ನಾನು ಮಾಡಿದ ಮೊಟ್ಟಮೊದಲನೆಯ ಕೆಲಸ.



# ಪದಸೂಚಿ

---

# ಗ್ರಂಥಋಣ

ಫ್ರಾನ್‌ಸ್ವಾಸ್ ಬೆರ್ನ್ಯೇ :

1. *Travels in the Moghul Empire (A.D. 1656–1668) By FRANCOIS Bernier*—Edited by Archibald Constable 1891 and 1968
2. *Bernier's Travels*—Edited by V.A. Smith

ಬಪ್‌ತೀಸ್ಟ್ ಟಾವೆರ್ನ್ಯೇ :

1. *Travels in India by Baptiste Tavernier*—Edited by V. Ball in Two Volumes.
2. *Jean Baptiste Tavernier*—A Collection of Several Relations etc—London, 1684.
3. *The Six Voyages of John Baptista Tavernier*—Through Turkey, Persia and the East Indies in a space of Forty years —Made into English by J. P.
4. *Travels in India* : Translated by V. Ball—New Edition by W. Crooke, London, 1925.

